# ಶ್ರೀ ತ್ಯಾಗರಾಜರ ಕೃತಿಗಳಲ್ಲಿ ಸಂಗೀತ ಮತ್ತು ಭಕ್ತಿ

## ಒಂದು ಅಧ್ಯಯನ



ಡಾ ॥ ಟಿ. ಎನ್. ಪದ್ಮ

# ಶ್ರೀ ತ್ಯಾಗರಾಜರ ಕೃತಿಗಳಲ್ಲಿ ಸಂಗೀತ ಮತ್ತು ಭಕ್ತಿ

## ಒಂದು ಅಧ್ಯಯನ

**ಡಾ || ಟಿ. ಎನ್. ಪದ್ಮ**
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು
ಗಾಯನ ವಿಭಾಗ
ಲಲಿತಕಲೆಗಳ ಮಹಿಳಾ ಕಾಲೇಜು
ಮಾನಸಗಂಗೋತ್ರಿ, ಮೈಸೂರು ೫೭೦ ೦೦೬

**ಮುನ್ನುಡಿ**
ಸಂಗೀತ ಕಲಾರತ್ನ, ಕಲಾ ವಿಮರ್ಶಕ
**ಶ್ರೀ ಬಿ. ವಿ. ಕೆ. ಶಾಸ್ತ್ರಿ**

**ಸುವಿದ್ಯಾ ಪ್ರಕಾಶನ**
**೩, ಒಂದನೆ ಅಡ್ಡರಸ್ತೆ, ರಾಮಕೃಷ್ಣ ಬಡಾವಣೆ**
**ಕೆಂಪೇಗೌಡನಗರ, ಬೆಂಗಳೂರು ೫೬೦ ೦೧೯**

*Sri Tyagarajara Kruthigalalli Sangeetha Mattu Bhakti—Ondu Adhyayana* (Musical and Devotional aspects of Sri Tyagaraja's Compositions) by Dr. T. N. Padma being her Doctoral Thesis presented to the University of Mysore, Mysore 570 006 ; Published by Suvidya Prakashana, 3, First Cross, Ramakrishna Layout, Kempegowdanagar, Bangalore 560 019 ; First Published 1998 ; 1000 copies ; Pages xvi+472 ; 4 pages Art plates ; Price Rs.200.



ಪ್ರಥಮ ಮುದ್ರಣ ೧೯೯೮





This book is published with the financial assistance of Tirumala Tirupati Devasthanams, under their Scheme of Aid to Publish Religious Books.

ಇನ್ನೂರು ರೂಪಾಯಿ

ಮುಖಚಿತ್ರ
ಶ್ರೀ ರಘೂತ್ತಮರಾವ್ ಪುಟ್ಟಿ, ಮೈಸೂರು

ಮುದ್ರಣ
ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್, ಜಯನಗರ, ಮೈಸೂರು ೫೭೦ ೦೧೪

# ಅರ್ಪಣೆ

**ಸದ್ಯೋಜಾತಾದಿ ಪಂಚವಕ್ತ್ರಜ**
**ಸರಿಗಮಪದನಿ ವರಸಪ್ತಸ್ವರ**
**ವಿದ್ಯಾಲೋಲಂ ವಿದಳಿತ ಕಾಲಂ**
**ವಿಮಲಹೃದಯ ತ್ಯಾಗರಾಜಪಾಲಂ**
**ನಾದತನುಮನಿಶಂ ಶಂಕರಂ**
**ನಮಾಮಿ ಮೇ ಮನಸಾ ಶಿರಸಾ**

ಸದ್ಯೋಜಾತಾದಿ ಪಂಚವಕ್ತ್ರಗಳಿಂದ ಜನಿಸಿದ ಸಪ್ತಸ್ವರ ವಿದ್ಯೆಯಿಂದ ಆನಂದಿಸುವ, ಕಾಲನನ್ನು ತನ್ನ ಹಿಡಿತದಲ್ಲಿರಿಸಿಕೊಳ್ಳುವ, ನಿರ್ಮಲಹೃದಯನಾದ ತ್ಯಾಗರಾಜನನ್ನು ರಕ್ಷಿಸುವ ನಾದತನುವಾದ ಭಗವಾನ್ ಶಂಕರನನ್ನು ಮನಸಾ ಶಿರಸಾ ನಮಸ್ಕರಿಸುತ್ತೇನೆ.

# ಮುನ್ನುಡಿ

ಭಾರತೀಯ ಸಂಗೀತದಲ್ಲಿ ತಾನ್‌ಸೇನ್ ಮತ್ತು ತ್ಯಾಗರಾಜ ಇಬ್ಬರೂ ಉತ್ತರ ದಕ್ಷಿಣ ಧ್ರುವತಾರೆಗಳಿದ್ದಂತೆ. ಇಬ್ಬರೂ ಸಂಗೀತಕ್ಕೆ ಒಂದು ಹೊಸ ವರ್ಚಸ್ಸು ಮತ್ತು ಹೊಸ ತಿರುವು ಕೊಟ್ಟವರೆಂದು ಖ್ಯಾತರಾಗಿದ್ದಾರೆ. ತಾನ್‌ಸೇನ್ ಧ್ರುಪದ ಗಾಯನ ವನ್ನು ಪರಿಷ್ಕರಿಸಿ ಹೊಸ ಕಳೆಯಿಂದ ಪ್ರಚಾರಕ್ಕೆ ತಂದವನೆಂದೂ ಅಲ್ಲದೆ ಅನೇಕ ಹೊಸ ರಾಗಗಳನ್ನು ಸೃಜಿಸಿದವನೆಂದೂ ಮಾನಿತನಾಗಿದ್ದಾನೆ. ತ್ಯಾಗರಾಜರೂ ಹಾಗೆಯೇ, ಅಂದು ಉಪಯೋಗದಲ್ಲಿದ್ದ ಗೇಯ ಪ್ರಕಾರಕ್ಕೆ ಇನ್ನೂ ಹೆಚ್ಚಿನ ಜೀವಕಳೆ ತುಂಬಿ, ಪ್ರಚಾರಕ್ಕೆ ತಂದುದೇ ಅಲ್ಲದೆ ಹೊಸ ರಾಗಗಳಿಂದ ಕರ್ನಾಟಕ ಸಂಗೀತವನ್ನು ಶ್ರೀಮಂತಗೊಳಿಸಿದ ಖ್ಯಾತಿ ಅವರದು. ಇಬ್ಬರೂ ಎರಡು ಶತಮಾನಗಳ ಅಂತರದಲ್ಲಿ ಜೀವಿಸಿದ್ದವರು. ತಾನ್‌ಸೇನ್ ೧೬ನೇ ಶತಮಾನದಲ್ಲಿ, ತ್ಯಾಗರಾಜರು ೧೮ನೇ ಶತ ಮಾನದಲ್ಲಿ. ಇಬ್ಬರಲ್ಲಿಯೂ ಇಷ್ಟು ಸಮಾನಾಂಶಗಳಿದ್ದರೂ ಪರಸ್ಪರ ವಿರುದ್ಧವಾದ ಅಂಶಗಳೂ ಇವೆ. ತಾನ್‌ಸೇನ್ ರಾಜಾಶ್ರಯದಲ್ಲಿದ್ದವನು. ಅವನದು ಒಂದು ರೀತಿಯ ದರ್ಬಾರಿ ಸಂಗೀತ. ಅವನ ಕೃತಿಗಳಲ್ಲಿ ಭಗವತ್ ಸ್ತುತಿಪರವಾದವು ಇದ್ದುದು ನಿಜ. ಆದರೆ ತನ್ನ ಪೋಷಕ ಅಕಬರ್ ಚಕ್ರವರ್ತಿ ಸ್ತುತಿರೂಪದಲ್ಲಿದ್ದವೂ ಅಷ್ಟೇ ಸಂಖ್ಯೆಯಲ್ಲಿ ಇದ್ದುವು. ತ್ಯಾಗರಾಜರದು ಇದಕ್ಕೆ ವಿರುದ್ಧ. ಅವರ ಸಂಗೀತ ಧಾರ್ಮಿಕ ಅಂದರೆ ದೇವಾಲಯ ಪೂಜಾಗೃಹಗಳ ಪರಿಸರದಲ್ಲಿ ಹುಟ್ಟಿ ಬೆಳೆದುದು. ಅವರ ಗೇಯ ಪ್ರಕಾರಗಳು ಯಾವುದೇ ನರಸ್ತುತಿ ರೂಪವಾದವುಗಳಲ್ಲ. ಭಗವತ್ ಸ್ತುತಿ, ಭಗವಂತನಲ್ಲಿ ಮೊರೆ ಮುಂತಾದ ರೀತಿಯವು. ಧಾರ್ಮಿಕ ಹಾಗೂ ಅಧ್ಯಾತ್ಮಿಕ ಭಾವನಾಪೂರಿತವಾದವು. ಪ್ರತಿ ವರುಷವೂ ಇಬ್ಬರ ಬಗೆಗೂ ಸಂಸ್ಮರಣ ದಿನಾಚರಣೆ ಗಳು ನಡೆಯುತ್ತಿವೆ. ಆದರೆ ಇದರಲ್ಲಿಯೂ ಒಂದು ವ್ಯತ್ಯಾಸವಿದೆ. ತಾನ್‌ಸೇನರ ಉತ್ಸವ ಅಥವಾ ಸಮಾರೋಹ ಮಧ್ಯಪ್ರದೇಶ ಸರಕಾರದಿಂದ ನಡೆಸಲ್ಪಡುತ್ತಿದ್ದು, ಅದರಲ್ಲಿ ಆಹ್ವಾನಿತ ಕಲಾವಿದರು ಪಾಲುಗೊಳ್ಳುವಂತಹುದು. ತ್ಯಾಗರಾಜರ ಸ್ಮರಣ ದಿನಾಚರಣೆ ಅಥವಾ ಆರಾಧನೆ ಒಂದು ರೀತಿಯ ಜನತಾ ಉತ್ಸವ. ಸಾರ್ವಜನಿಕರೂ ಸಂಗೀತಗಾರರೂ, ಸ್ವಂತ ಇಚ್ಛೆಯಿಂದ ಭಕ್ತಿ ಭಾವದಿಂದ ಕಲೆತು ನಡೆಸುವಂತಹ ಉತ್ಸವ. ತಾನ್‌ಸೇನ್ ಸಮಾರೋಹವು ಗ್ವಾಲಿಯರ್‌ನಲ್ಲಿರುವ ಆತನ ಸಮಾಧಿಯ ಮುಂದೆ ನಡೆದು ಅಂದಿಗೇ ಮುಕ್ತಾಯ. ಪುನಃ ಮುಂದಿನ ವರುಷವೇ. ಆದರೆ ತ್ಯಾಗರಾಜರ ಆರಾಧನೆಗೆ ತಿರುವೈಯಾರಿನಲ್ಲಿರುವ ಅವರ ಸಮಾಧಿಯು ಕೇಂದ್ರ ವಾದರೂ, ಅದರ ವ್ಯಾಪ್ತಿ ಇಡೀ ಕರ್ನಾಟಕ ಸಂಗೀತ ಕ್ಷೇತ್ರಕ್ಕೆ ಹರಡಿಕೊಂಡಿದೆ. ಆರಾಧನೆಯ ದಿನವೇ ಅಲ್ಲದೆ ಅಲ್ಲಿಂದ ಮುಂದೆ ಬಹುಕಾಲ ನಾನಾ ಸ್ಥಳಗಳಲ್ಲಿ, ಸಾರ್ವಜನಿಕವಾಗಿ ನಡೆಸಲಾಗುತ್ತದೆ. ಎರಡು ಉತ್ಸವಗಳ ಈ ವ್ಯತ್ಯಾಸಕ್ಕೆ ಒಂದು

ಮುಖ್ಯ ಕಾರಣವೆಂದರೆ ತಾನ್‌ಸೇನ್ ಮತ್ತು ಅವನ ಸಂಗೀತ, ರಾಜ ಹಾಗೂ ಅರಮನೆಯ ಪರಿಮಿತಿಯ ಒಳಗೆ ವಿಕಾಸಗೊಂಡದ್ದು. ತ್ಯಾಗರಾಜರದು ಸಾರ್ವಜನಿಕರ ಮಧ್ಯೆ ಮೊಳೆತು ಸಮೃದ್ಧವಾಗಿ ಬೆಳೆದುದು. ಸಾರ್ವಜನಿಕ ಜೀವನದಲ್ಲಿ ಹಾಸುಹೊಕ್ಕಾಗಿರುವಂತಹುದು. ಆದುದರಿಂದ ಒಂದು ಶಾಶ್ವತ ಗುಣವಿರುವಂತಹುದು. ಇಂದು ಯಾವ ಕರ್ನಾಟಕ ಸಂಗೀತ ಕಚೇರಿಯಾಗಲಿ, ತ್ಯಾಗರಾಜ ಕೃತಿ ಅಥವಾ ಕೃತಿಗಳು ಇರುತ್ತವೆ. ಅಷ್ಟೇಕೆ, ಇದ್ದೇ ಇರಬೇಕು. ಅವುಗಳು ಇಲ್ಲದಿದ್ದಲ್ಲಿ ಅದು ಕಚೇರಿಯಾಗಲಾರದು ಎಂಬ ಭಾವನೆ ಬೆಳೆದು ಬಂದಿದೆ. ತ್ಯಾಗರಾಜರಿಗೂ ಕರ್ನಾಟಕ ಸಂಗೀತಕ್ಕೂ ಅಂತಹ ಅನ್ಯೋನ್ಯ ಸಂಬಂಧ. ಇಂತಹ ಸಂಬಂಧವುಳ್ಳ ಮಹಾನ್ ವ್ಯಕ್ತಿಯ ಬಗೆಗೆ ಆತನ ಜೀವನ ಸಾಧನೆಗಳ ಬಗೆಗೆ ತಿಳಿವಳಿಕೆ ಕೊಡುವ ಗ್ರಂಥಗಳು ಅನೇಕವು ಇಂಗ್ಲಿಷ್ ಅಲ್ಲದೆ ದೇಶೀಯ ಭಾಷೆಗಳಲ್ಲಿಯೂ ರಚಿತವಾಗಿದೆ. ಕನ್ನಡದಲ್ಲಿಯೂ ರಚಿತವಾಗಿದೆ. ಈ ಸಾಲಿಗೆ ಸೇರಬೇಕಾದುದು ಡಾ || ಟಿ. ಎನ್. ಪದ್ಮರವರ—ಶ್ರೀ ತ್ಯಾಗರಾಜರ ಕೃತಿಗಳಲ್ಲಿ ಸಂಗೀತ ಮತ್ತು ಭಕ್ತಿ, ಒಂದು ಅಧ್ಯಯನ—ಎಂಬ ಶೀರ್ಷಿಕೆಯ ಮಹಾ ಪ್ರಬಂಧ.

ಸುಮಾರು ೫೦೦ ಪುಟಗಳ ಈ ಮಹಾಪ್ರಬಂಧದಲ್ಲಿ ತ್ಯಾಗರಾಜರ ಜೀವನ, ಸಾಧನೆ, ಆದರ್ಶ ಮತ್ತು ಧ್ಯೇಯಗಳ ಒಂದು ಸಮಗ್ರ ಚಿತ್ರವನ್ನು ನೀಡಿದ್ದಾರೆ. ಮತ್ತು ಇದನ್ನು ೧೭ ಹಂತಗಳಲ್ಲಿ ಅಥವಾ ಅಧ್ಯಾಯಗಳ ಮೂಲಕ ನಿರೂಪಿಸಲಾಗಿದೆ. ಇದರಲ್ಲಿ ಸುಮಾರು ೭೦ ಪುಟಗಳಷ್ಟು ಅವರ ಜೀವನಕ್ಕೆ ಸಂಬಂಧಿಸಿದುದು. ಅವರ ಸಂಗೀತ ಹಾಗೂ ಕೃತಿಗಳು ಸುಮಾರು ೨೪೦ ಪುಟಗಳಲ್ಲಿ, ಅವರ ಆದರ್ಶ ಮತ್ತು ಧ್ಯೇಯಗಳು ಸುಮಾರು ೧೭೦ ಪುಟಗಳಲ್ಲಿ ವಿವರಿತವಾಗಿದೆ. ತ್ಯಾಗರಾಜರು ಮಹಾನ್ ವಾಗ್ಗೇಯಕಾರರು. ಅಂತೆಯೇ ಮಹಾಭಕ್ತರೂ ಸಹ ಎಂದು ಮಾನಿತರಾಗಿದ್ದಾರೆ. ಆದುದರಿಂದ ತ್ಯಾಗರಾಜರಿಗೆ ಸಂಬಂಧಿಸಿದ ಯಾವ ಕಾರ್ಯಕ್ರಮವಾಗಲಿ ಉತ್ಸವ ವಾಗಲೀ, ಪ್ರಕಟನೆಯಾಗಲೀ ಅವರ ವ್ಯಕ್ತಿತ್ವದ ಈ ಎರಡೂ ಭಾಗಗಳಿಗೂ ಪ್ರಾಧಾನ್ಯತೆ ಕೊಡದಿರಲು ಸಾಧ್ಯವಿಲ್ಲ. ಅವು ನಾಣ್ಯದ ಎರಡು ಮುಖಗಳಿದ್ದಂತೆ ಅವರ ಜೀವನದಲ್ಲಿ ವ್ಯಾಪಕವಾಗಿದೆ. ಆದರೆ ಅವು ಯಾವ ಯಾವ ಪ್ರಮಾಣದಲ್ಲಿ ಇದ್ದರೆ ಉಚಿತ ಎಂಬುದು ನಿರ್ಧರಿಸುವುದು ಕಷ್ಟ. ಏಕೆಂದರೆ ಒಂದಕ್ಕೆ ಇನ್ನೊಂದು ಪೂರಕ ವಾಗಿದೆ. ಒಂದನ್ನು ಬಿಟ್ಟು ಇನ್ನೊಂದಿಲ್ಲ, ಅವರ ಜೀವನದಲ್ಲಿ.

ನಮ್ಮಲ್ಲಿ ಜೀವನ ಚರಿತ್ರೆಯನ್ನು ಬರೆವ ಕೆಲಸ ಕಠಿನವಾದುದು. ಏಕೆಂದರೆ ಭಾರತೀಯರಿಗೆ ಇತಿಹಾಸ ಪ್ರಜ್ಞೆಯ ಕೊರತೆ ಅಂದರೆ ಇತಿಹಾಸ ಪ್ರಜ್ಞೆ ಎಂಬ ನಿಜ ಅರ್ಥದಲ್ಲಿ. ಪುರಾಣಕ್ಕೂ ಇತಿಹಾಸಕ್ಕೂ ಭಾರತೀಯ ಮನಸ್ಸು ಅಂತಹ ವ್ಯತ್ಯಾಸವನ್ನು ಕಾಣದು. ನಾವು ಯಾವ ಊರಿಗೆ ಹೋದರೂ ಸ್ಥಳಪುರಾಣ ದೊರೆಯುತ್ತದೆ ನಿಜ. ಇತಿಹಾಸ ಮಾಹಿತಿ ದೊರೆವುದು ಕಷ್ಟ. ಜೀವನ ಚರಿತ್ರೆಗಳನ್ನು ಅದರಲ್ಲಿಯೂ ಧಾರ್ಮಿಕ ಪ್ರಾಕಾರಕ್ಕೆ ಸೇರಿದ ವ್ಯಕ್ತಿಗಳ ಜೀವನ ಚರಿತ್ರೆ ಬರೆಯುವಾಗ ದೊರೆವ

ಮಾಹಿತಿ, ಅತ್ಯಲ್ಪ, ಅಸ್ಪಷ್ಟ, ಅನಿಶ್ಚಿತ. ಆದುದರಿಂದ ಅನೇಕ ಬಾರಿ ಊಹಾ ಆಧಾರ ವನ್ನೇ ಅವಲಂಬಿಸಬೇಕಾಗುತ್ತದೆ. ತ್ಯಾಗರಾಜರ ಜೀವನ ಚರಿತ್ರೆ ಇದಕ್ಕೆ ಹೊರತೇ ನಲ್ಲ. ನಮ್ಮ ಕಾಲಕ್ಕೆ ಸಾಕಷ್ಟು ಸಮೀಪದಲ್ಲಿಯೇ ಜೀವಿಸಿದ್ದವರು ತ್ಯಾಗರಾಜರು. ಅಂತಹವರ ಜೀವನದ ಬಗೆಯಲ್ಲಿ ದೊರೆವ ಅನೇಕ ಮಾಹಿತಿಗಳು ಅಸ್ಪಷ್ಟ. ಅಲ್ಲದೆ ಅವರು ಭಕ್ತಶಿರೋಮಣಿ ಎಂದು ಮಾನಿತರಾದುದರಿಂದ ದೊರೆವ ಆಧಾರ ಸಾಮಗ್ರಿ, ಪವಾಡ ಹಾಗೂ ಕಲ್ಪಿತ ಕತೆಗಳಿಂದ ತುಂಬಿರುವುದು ಅಸಂಭಾವ್ಯವೇನಲ್ಲ. ಈ ಭಾಗವನ್ನು ಡಾ || ಪದ್ಮರವರು ಹಗ್ಗದ ಮೇಲೆ ನಡೆವಂತೆ ಬಹು ಜಾಣ್ಮೆಯಿಂದ ನಿರ್ವಹಿಸಿದ್ದಾರೆ. ದೊರೆತ ಆಧಾರ ಸಾಮಗ್ರಿಯನ್ನು ಬಳಸಿ ಅದರ ಬಗೆಗೆ ಮೂಡಿಬಂದ ಸಂದೇಹಗಳನ್ನು ಸೂಚಿಸಿದ್ದಾರೆ. ಅಲ್ಲದೆ ತ್ಯಾಗರಾಜರ ಜೀವನದ ಬಗೆಗೆ ಅವರ ಕೃತಿಗಳಿಂದಲೇ ಅಂಶಗಳನ್ನು ವಿಸ್ತಾರವಾಗಿ ಉದ್ಧರಿಸಿಕೊಂಡಿರುವುದು ಉಚಿತ ಮತ್ತು ಮೌಲ್ಯಪೂರಿತ. ಇಲ್ಲಿಯೂ ನೇರ ಮತ್ತು ಶ್ಲೇಷೆಗಳಿಂದ ಕೂಡಿದ ಮಾಹಿತಿಯನ್ನು ಜಾಣ್ಮೆಯಿಂದ ಬಳಸಿಕೊಂಡಿದ್ದಾರೆ.

ಅವರು ಎಂತಹ ಭಕ್ತಾಗ್ರೇಸರರೆಂದು ಖ್ಯಾತರಾದರೂ, ಸಾಂಸ್ಕೃತಿಕ ಕ್ಷೇತ್ರದಲ್ಲಿ ತ್ಯಾಗರಾಜರಿಗೆ ಬಂದಿರುವ ಹಿರಿಮೆ ಶ್ರೇಷ್ಠ ವಾಗ್ಗೇಯಕಾರರೆಂದು, ಕರ್ನಾಟಕ ಸಂಗೀತಕ್ಕೆ ಹೊಸ ಚೈತನ್ಯ ಮತ್ತು ವರ್ಚಸ್ಸು ತುಂಬಿ ಹೊಸ ದಿಕ್ಕು ತೋರಿದವರೆಂದು. ಅವರ ಈ ಸಂಗೀತ ಪ್ರತಿಭೆ, ಮೊಳೆತು, ಚಿಗುರಿ, ಅಗಾಧವಾಗಿ ಫಲಭರಿತವಾಗಲು ಕಾರಣವಾದ, ಅವರ ಕಲ್ಪನಾಸ್ಫೂರ್ತಿಗೆ ಪ್ರೇರಕವಾದ ಮನೆತನ, ಅಲ್ಲಿಯ ವಾತಾ ವರಣ, ಅವರು ಹುಟ್ಟಿ ಬೆಳೆದ ಪರಿಸರ, ಅವರ ಅಂತಸ್ಸತ್ವ ಮುಂತಾದುವುಗಳನ್ನು ಈ ಪ್ರಬಂಧದಲ್ಲಿ ವಿವರಿಸಲಾಗಿದೆ. ತ್ಯಾಗರಾಜರ ಸಂಗೀತದಲ್ಲಿ ಮೊದಲು ಅನುಭವ ವಾಗುವ ಅಂಶವೆಂದರೆ ಧಾತು ಮಾತುಗಳ ಸುಂದರ ಸಮನ್ವಯ. ಮಾತು ಕಾವ್ಯದ ಕಟ್ಟಳೆಗಳನ್ನು ಅನುಸರಿಸಿದ್ದರೂ ಅತೀ ಶಬ್ದಾಡಂಬರವಾಗಲಿ ಚಮತ್ಕಾರ ಹಾಗೂ ಪಾಂಡಿತ್ಯ ಪ್ರದರ್ಶನದಂತಾಗಲೀ ಕಂಡು ಬರುವುದಿಲ್ಲ. ಸರಳವಾಗಿದ್ದು ಸ್ವಾಭಾವಿಕ ವಾಗಿ ಹೊಮ್ಮಿಬಂದಂತೆ ಕಾಣಬರುತ್ತದೆ. ಇನ್ನೂ ಹೇಳಬಹುದಾದರೆ, ತ್ಯಾಗರಾಜರೇ ಸಂಗೀತ ರೂಪದಲ್ಲಿ ಮಾತನಾಡಿದಂತೆ ಅಂತರ್ಗತ ಭಾವನೆಗಳನ್ನು ರಾಗ ರೂಪದಲ್ಲಿ ಅಭಿವ್ಯಕ್ತಪಡಿಸಿದಂತೆ ಅನುಭವವಾಗುತ್ತದೆ. ರಾಗಹಂದರವೂ ಭಾವೋತ್ಕರ್ಷಕ್ಕೆ ಪೂರಕವಾಗಿದ್ದಂತೆ ಕಂಡು ಬರುತ್ತದೆ. ಆ ಸಂದರ್ಭದಲ್ಲಿ ಅವರ ಆರಾಧ್ಯದೈವವಾದ ಶ್ರೀರಾಮನನ್ನು ತ್ಯಾಗರಾಜರು ರಾಗರೂಪದಲ್ಲಿ ಮಾತನಾಡಿಸುವಂತೆಯೋ, ತನ್ನ ಭಾವನೆಗಳನ್ನು ಶ್ರೀರಾಮನಲ್ಲಿ ತೋಡಿಕೊಳ್ಳುವಂತೆಯೋ ಭಾಸವಾಗುತ್ತದೆ.

ಇನ್ನು ಕರ್ನಾಟಕ ಸಂಗೀತಕ್ಕೆ ತ್ಯಾಗರಾಜರ ನೇರವಾದ ಕೊಡುಗೆ. ಅದು ಒಂದು ರೀತಿಯ ಕ್ರಾಂತಿಕಾರಕವಾದ ಕೊಡುಗೆ ಎನ್ನಬಹುದು. ಇದನ್ನು ಅರ್ಥಮಾಡಿಕೊಳ್ಳ ಬೇಕಾದರೆ ಕೆಲವು ಶತಮಾನಗಳ ಹಿಂದಕ್ಕೆ ಹೊರಳಿ, ಭಾರತೀಯ ಸಂಗೀತದ ಅದರಲ್ಲಿಯೂ ರಾಗ ವಿಕಾಸದ ಪಥವನ್ನು ಪರಿಶೀಲಿಸಬೇಕಾಗುತ್ತದೆ. ಭಾರತೀಯ

ಸಂಗೀತದ ಜೀವಾಳ—ರಾಗ. ಇದರ ವಿಕಾಸವು ನಾನಾ ಹಂತಗಳಲ್ಲಿ ಆಗಿದೆ. ಮೂಲ ಗ್ರಾಮಗಳಿಂದ, ನಾನಾ ಹಂತಗಳನ್ನು ದಾಟಿ, ಮೇಳಪದ್ಧತಿಗೆ ಬಂದಿತು. ಮುಂದೆ ವೇಂಕಟಮಖಿಯವರಿಂದ ತರ್ಕಬದ್ಧವಾದ ೭೨ ಜನಕ ಮೇಳಗಳ ಪದ್ಧತಿಯ ಕಲ್ಪನೆಯಲ್ಲಿ ನಿಂತಿತು. ರಾಗಗಳ ಸ್ವರಶ್ರೇಣಿಗಳು ನಿರ್ಧಾರಿತವಾದರೂ, ಅವು ನಿಜ ಅರ್ಥದಲ್ಲಿ ರಾಗಗಳಾಗುವುದಿಲ್ಲ. ಕೇವಲ ಅಸ್ಥಿಪಂಜರಗಳು ಮಾತ್ರ. ಅವಕ್ಕೆ ಇತರ ಅಂಶಗಳನ್ನು ತುಂಬಿ, ನಿರ್ದಿಷ್ಟ ರೂಪವನ್ನು ಕೊಡಬಲ್ಲವನು ವಾಗ್ಗೇಯಕಾರ. ಆತ ಇವನ್ನು ರಾಗ ಸ್ವರೂಪವನ್ನು ವಿಶದಪಡಿಸುವ ಮತ್ತು ಅದರಿಂದ ತುಂಬಿದ ಕೃತಿಗಳ ಮೂಲಕ ಸಾಧಿಸುತ್ತಾನೆ. ಹೀಗೆ ವೇಂಕಟಮಖಿಯ ೭೨ ಮೇಳಗಳಿಗೆ ಖಚಿತವಾದ ನಾದರೂಪ ಒದಗಿಬಂದುದು ೧೮ನೆಯ ಶತಮಾನದಲ್ಲಿ ತ್ಯಾಗರಾಜ ಮತ್ತು ಮುದ್ದುಸ್ವಾಮಿ ದೀಕ್ಷಿತರಿಂದ. ಈ ೭೨ ಮೇಳಗಳ ಕಲ್ಪನೆಗೆ ಕಾರಣನಾದ ವೇಂಕಟಮಖಿ ಅವಕ್ಕೆ ಹೆಸರುಗಳೇನೂ ಕೊಟ್ಟಿರಲಿಲ್ಲ. ಮುಂದೆ ಅವುಗಳಿಗೆ ಹೆಸರುಗಳನ್ನಿತ್ತು ಪ್ರಚಾರಕ್ಕೆ ಬಂದಾಗ ಅದರಲ್ಲಿ ಎರಡು ಪಂಥಗಳಿದ್ದವು. ಅದರಲ್ಲಿ ಕನಕಾಂಬರಿಯಿಂದ ಪ್ರಾರಂಭವಾಗುವ ಮೊದಲನೆಯದನ್ನು ದೀಕ್ಷಿತರು ಅನುಸರಿಸಿದರು. ಅದು ಪ್ರತಿಪಾದಿತವಾದ ಗ್ರಂಥ ಮುದ್ದು ವೆಂಕಟಮಖಿಯ ರಾಗಲಕ್ಷಣ. ತ್ಯಾಗರಾಜರು ಎರಡನೆಯ ಮತ್ತು ಇಂದು ಬಹು ಪ್ರಚಾರದಲ್ಲಿರುವ ಕನಕಾಂಗಿ ಮುಂತಾದ ಹೆಸರಿನ ಪದ್ಧತಿಯನ್ನು ಅನುಸರಿಸಿದರು. ಇದು ಪ್ರತಿಪಾದಿತವಾದ ಗ್ರಂಥ ಗೋವಿಂದನ ಸಂಗ್ರಹಚೂಡಾಮಣಿ. ಈ ಮೇಳಗಳಿಂದಲೂ ಅವುಗಳ ಅಡಿಯಲ್ಲಿ ಬಂದ ಹಳೆಯ ರಾಗಗಳು ಅಲ್ಲದೆ ಹೊಸದಾಗಿ ನಿರ್ಮಿತವಾಗುತ್ತಿದ್ದ ರಾಗಗಳಿಂದ ಕರ್ನಾಟಕ ಸಂಗೀತ ಕ್ಷೇತ್ರವು ತುಂಬಿಕೊಳ್ಳುತ್ತಿತ್ತು. ಈ ರಾಗಗಳಿಗೆ ನಾದಮಯ ರೂಪವನ್ನಿತ್ತ ಜಾಣ್ಮೆ ಈ ಇಬ್ಬರೂ ವಾಗ್ಗೇಯಕಾರರದು. ಅದರಲ್ಲಿ ವೈವಿಧ್ಯತೆ ಮತ್ತು ಸಂಖ್ಯಾಪ್ರಮಾಣ ದೃಷ್ಟಿಯಿಂದ ತ್ಯಾಗರಾಜರದು ಹೆಚ್ಚು ಕೊಡುಗೆ ಎನ್ನಬೇಕು. ಗೋವಿಂದನ ಸಂಗ್ರಹ ಚೂಡಾಮಣಿಯಲ್ಲಿ ವಿವರಿತವಾದ ಮೇಳ ಹಾಗೂ ಜನ್ಯರಾಗ ಪದ್ಧತಿಯನ್ನು ಅನುಸರಿಸಿ, ಆ ರಾಗಗಳಿಗೆ ಕೃತಿಗಳ ಮೂಲಕ ನಾದಮಯ ರೂಪುಗೊಟ್ಟು, ಕರ್ನಾಟಕ ಸಂಗೀತದ ರಾಗಸಂಪತ್ತನ್ನು ವೃದ್ಧಿಗೊಳಿಸಿದರು. ತ್ಯಾಗರಾಜರು ಸಂಗ್ರಹ ಚೂಡಾಮಣಿಯಲ್ಲಿ ಇಲ್ಲದಿದ್ದ ಅನೇಕ ರಾಗಗಳಿಗೂ ಈ ರೀತಿ ರೂಪಗೊಟ್ಟು, ಪ್ರಚಾರಕ್ಕೆ ತಂದರು. ವಿಜಯಶ್ರೀ, ಸಾರಮತಿ, ಹಂಸನಾದ, ಮಂಜರಿ, ಚಂದ್ರಜ್ಯೋತಿ, ಜಿಂಗ್ಲಾ, ನವರಸಕನ್ನಡ, ಉಮಾಭರಣ, ಕಳಾನಿಧಿ, ಬಹುದಾರಿ, ರಂಜನಿ, ಕಾಪಿನಾರಾಯಣಿ, ಹೀಗೆ ಸುಮಾರು ೭೦-೮೦ ರಾಗಗಳು, ಲಕ್ಷ್ಯ ಅಂದರೆ ಕೃತಿಸಹಿತ ತ್ಯಾಗರಾಜರಿಂದ ಕರ್ನಾಟಕ ಸಂಗೀತಕ್ಕೆ ಸೇರ್ಪಡೆಯಾಗಿದೆ. ಇದಲ್ಲದೆ ವಿವಾದ ದೋಷವಿರುವ ಮೇಳ ರಾಗಗಳಲ್ಲಿಯೂ ಕೃತಿ ರಚನೆ ಮಾಡಿದ್ದಾರೆ. ಹಾಗೆಯೇ ಆ ದೋಷವು ಎದ್ದು ಕಾಣದಂತೆ ಜಾಣ್ಮೆಯಿಂದ ನಿರ್ವಹಿಸಿದ್ದಾರೆ.

ಹೊಸರಾಗಗಳೇ ಅಲ್ಲದೆ ಪರಂಪರೆಯಿಂದ ಬಂದ ರಾಗಗಳಲ್ಲಿ ಗಣನೀಯ

ಪ್ರಮಾಣದಲ್ಲಿ ಕೃತಿರಚನೆ ಮಾಡಿ ಆಯಾ ರಾಗಸೌಂದರ್ಯವನ್ನು ವಿಸ್ತರಿಸಿದ್ದಾರೆ. ನಿದರ್ಶನವಾಗಿ ಭೈರವಿ, ಮಧ್ಯಮಾವತಿ, ದೇವಗಾಂಧಾರಿ, ಆರಭಿ, ಕೇದಾರಗೌಳ, ತೋಡಿ, ಶಂಕರಾಭರಣ, ಕಲ್ಯಾಣಿ ಮುಂತಾದ ರಾಗಗಳಲ್ಲಿ ಬಹುಸಂಖ್ಯೆಯಲ್ಲಿ ಕೃತಿ ರಚನೆ ಮಾಡಿ ಸಾಧ್ಯಾಸಾಧ್ಯತೆಗಳ ಪ್ರಯೋಗದಿಂದ ಆ ರಾಗಗಳ ಒಂದು ವಿಶ್ವರೂಪ ದರ್ಶನ ಮಾಡಿಸಿದ್ದಾರೆ.

ತ್ಯಾಗರಾಜರ ಈ ಅಪೂರ್ವಸಾಧನೆಗೆ ಒಂದು ನಿದರ್ಶನ ಹೇಳಬಹುದು. ಅವರ ಮುಂದಿನ ತಲೆಮಾರಿನ ಸಂಗೀತ ದಿಗ್ಗಜಗಳಲ್ಲಿ ಮಹಾವೈದ್ಯನಾಥಯ್ಯರ್ ಪ್ರಸಿದ್ಧರು. ಬಾಲ್ಯ ಪ್ರತಿಭಾವಂತ. ಶಾಸ್ತ್ರ ಹಾಗೂ ಪ್ರಯೋಗ ಎರಡರಲ್ಲಿಯೂ ಗಾಢವಾದ ಪಾಂಡಿತ್ಯ. ಹತ್ತನೆಯ ವಯಸ್ಸಿನಲ್ಲಿಯೇ ಪ್ರತಿಭಾ ಪ್ರದರ್ಶನ ಸಂಚಾರವನ್ನು ಪ್ರಾರಂಭಿಸಿದರು. ಮೊದಲು ಪುದುಕೋಟಾ ಸಂಸ್ಥಾನಕ್ಕೆ ಬಂದು ಅಲ್ಲಿನ ತೊಂಡ ಮಾನ್ ರಾಜರ ಆಸ್ಥಾನದಲ್ಲಿ ಕಚೇರಿ ಮಾಡಿದರು. ಅಂದು ಆ ಆಸ್ಥಾನದ ಸಂಗೀತ ಮಹಾವಿದ್ವಾಂಸರೆನಿಸಿದ್ದ ಪೆರಿಯವೈತಿ, ಚಿನ್ನವೈತಿ, ವೀಣಾಸುಬ್ಬುಕುಟ್ಟಿಅಯ್ಯ ಮುಂತಾದವರೆಲ್ಲಾ ಸಭೆಯಲ್ಲಿದ್ದರು. ಹಾಡುತ್ತಾ ಮಹಾವೈದ್ಯರು ಒಂದು ರಾಗವನ್ನು ವಿಸ್ತಾರವಾಗಿ ಆಲಾಪಿಸಿ ಒಂದು ತ್ಯಾಗರಾಜ ಕೀರ್ತನೆ ಹಾಡಿದರು. ವಿದ್ವಾಂಸರೆಲ್ಲಾ ಇವರ ಪ್ರತಿಭೆಗೆ ತಲೆದೂಗಿದರು. ಆದರೆ ಹಾಡಿದ ರಾಗವಾವುದೆಂದು ತಿಳಿಯದಾದರು. ಕೊನೆಗೆ ರಾಜನೇ ಈ ಬಾಲಕನನ್ನು ರಾಗವಾವುದೆಂದು ಕೇಳಿದರು. ಅದಕ್ಕೆ ಉತ್ತರವಾಗಿ ಮಹಾವೈದ್ಯರು ಚಕ್ರವಾಕ ಎಂದು ಹೇಳಿದರು. ಆ ವಿದ್ವಾಂಸರಾರೂ ಆ ರಾಗವನ್ನಾಗಲೀ, ಅದರ ಹೆಸರನ್ನಾಗಲೀ ಕೇಳಿರಲಿಲ್ಲ. ಅಂದಿಗೆ ತ್ಯಾಗರಾಜರು ಸಮಾಧಿಸ್ಥರಾಗಿ ಏಳು ವರುಷಗಳಾಗಿದ್ದುವು. ತ್ಯಾಗರಾಜರೇ ಚಕ್ರವಾಕ ರಾಗದಲ್ಲಿ ಮೊದಲು ಕೃತಿರಚನೆ ಮಾಡಿದವರು. ಆದುದರಿಂದ ಈ ರಾಗವು ಇನ್ನೂ ಪ್ರಚಾರಕ್ಕೆ ಬಂದಿರಲಿಲ್ಲ. ಮಹಾವೈದ್ಯರು, ತ್ಯಾಗರಾಜರ ನೇರ ಶಿಷ್ಯ ಮಾನಂಬೂಚ್ಚಾವಡಿ ವೆಂಕಟಸುಬ್ಬಯ್ಯನವರ ಬಳಿ ಸಂಗೀತ ಶಿಕ್ಷಣ ಪಡೆದವರು. ಆದುದರಿಂದ ಈ ರಾಗ ಮತ್ತು ಕೃತಿ ಅವರಿಗೆ ಪಾಠವಾಗಿತ್ತು. ಹೀಗೆಯೇ ತ್ಯಾಗರಾಜರಿಂದ ರೂಪುಗೊಂಡು ಜನಪ್ರಿಯವಾದ ಮೇಳರಾಗಗಳಲ್ಲಿ ಖರಹರಪ್ರಿಯ, ಹರಿಕಾಂಭೋಜಿ ಮುಂತಾದುವನ್ನು ನೆನೆಯಬಹುದು. ಇವುಗಳನ್ನು ಉದಾಹರಣಾ ಸಹಿತವಾಗಿ ಡಾ॥ ಪದ್ಮ ವಿವರಿಸಿದ್ದಾರೆ.

ತ್ಯಾಗರಾಜರ ರಚನೆಗಳಲ್ಲಿ ರಾಗಸೌರಭದಂತೆಯೇ, ವಿಧವಿಧ ಅಭಿರುಚಿಗೆ ಒದಗಿ ಬರುವಂತಹ ಕೃತಿಗಳಿವೆ. ಬಹು ಪ್ರೌಢವಾದ ಸಂಗೀತ ಶಿಲ್ಪಗಳಿಂದ ಹಿಡಿದು, ಜನಸಾಮಾನ್ಯರಿಗೂ ಎಟಕುವಂತಹ, ಸುಲಭವಾಗಿ ಹಾಡಲು ಸಾಧ್ಯವಾದ ಸಾಮೂಹಿಕ ಗಾಯನಕ್ಕೆ ಅನುಕೂಲಿಸುವಂತಹ ದಿವ್ಯನಾಮ ಸಂಕೀರ್ತನೆಗಳಂತಹ ರಚನೆಗಳೂ ಇವೆ. ಅಲ್ಲದೆ ಮನೆಮನೆಗಳಲ್ಲಿ ಹಿಂದೆ ಹಾಡುತ್ತಿದ್ದ ಕಥಾ ಪ್ರಸಂಗಗಳ ಗೇಯರೂಪ-ಯಕ್ಷಗಾನ ರೀತಿಯ ನೌಕಾಚರಿತ ಮುಂತಾದ ರೀತಿಯವೂ ಇವೆ. ಅಂತಹ ರಸಭಾವ ಪೂರಿತ ವೈವಿಧ್ಯಮಯ ಸಂಗೀತ ಅವರದು. ಇಂತಹ ವ್ಯಾಪಕ ಗುಣವಿರುವುದ

ರಿಂದಲೇ ತ್ಯಾಗರಾಜರ ಕೃತಿಗಳಿಗೆ ಒಂದು ಶಾಶ್ವತತೆ ಇರುವುದು, ಅವರ ಅನಂತರ ಹುಟ್ಟಿ ಬಂದ ನೂರಾರು ವಾಗ್ಗೇಯಕಾರರಿಗೆ ಮಾದರಿಯಾಗಿರುವುದು, ಆದರ್ಶ ವಾಗಿರುವುದು. ಸ್ವತಂತ್ರ ಕಲ್ಪನೆಯಿಂದ ಕೂಡಿದವೆಂಬ ಹೆಗ್ಗಳಿಕೆಗೆ ಪಾತ್ರವಾದ ರಚನೆಗಳನ್ನು ನಿಧಾನವಾಗಿ ಪರಿಶೀಲಿಸಿದಲ್ಲಿ, ಈ ತ್ಯಾಗರಾಜರ ಸ್ವಲ್ಪ ಛಾಪು ಅವು ಗಳಲ್ಲಿ ಕಾಣಬಹುದು.

ತ್ಯಾಗರಾಜರದು ಬಹುಮುಖ ಪ್ರತಿಭೆ. ಅದರಲ್ಲಿ ಸಂಗೀತವೂ ಒಂದು ಮುಖ್ಯ ವಾದುದು. ಅವರ ಇತರ ಮುಖಗಳು ಅಂದರೆ ನಾದಯೋಗಿಯಾಗಿ, ಅನುಭಾವಿ ಯಾಗಿ, ಸಮಾಜಕ್ಕೆ ಮಾರ್ಗದರ್ಶಕನಾಗಿ, ಹೀಗೆ ಒಂದೊಂದೇ ಮುಖವನ್ನೇ ವಿಶೇಷ ಅಧ್ಯಯನ ಮಾಡಲು ಸಾಧ್ಯವಿದೆ. ಹಾಗೆ ಮಾಡುವಾಗ ಡಾ || ಪದ್ಮಾರವರು ಹೇಳಿದಂತೆ ಹೊಸಹೊಸ ಅನುಭವ ಆಯಾಮಗಳು ಹೊಮ್ಮಿ ಬರುತ್ತಲೇ ಇರುತ್ತವೆ. ಆದರೆ ಅಧ್ಯಯನ ಮಾಡಿದಷ್ಟರಲ್ಲೇ ಅನುಭವವಾಗುವುದು—ಅವರ ಕಲಾತ್ಮಕತೆ , ಅದರ ಬಗೆಗೆ ನಿಷ್ಠೆ, ನೈತಿಕಮೌಲ್ಯ, ಹಾಗೂ ಭಕ್ತಿಭಾವ. ಇವುಗಳಲ್ಲಿ ಒಂದನ್ನಾದರೂ ಅರಿತು ಕೈಗೂಡಿಸಿಕೊಂಡಲ್ಲಿ ನಮ್ಮ ಜೀವನ ಸಾರ್ಥಕವಾಗಬಲ್ಲದು. ಡಾ || ಪದ್ಮಾರವರ ಈ ಮಹಾಪ್ರಬಂಧವು ಇದಕ್ಕೆ ದಾರಿತೋರುವಂತಿದೆ. ಒಂದೊಂದು ಭಾಗವನ್ನೂ, ವಿಸ್ತಾರ ವಾಗಿ ವಿಶ್ಲೇಷಿಸಿದ್ದಾರೆ. ಇದರಲ್ಲಿ ಬಹುತೇಕ ತ್ಯಾಗರಾಜರ ಕೃತಿಗಳಿಂದಲೇ ಉದ್ಧರಿ ಸಿರುವುದರಿಂದ ಅಧ್ಯಯನದ ಮೌಲ್ಯವು ಡಾ || ಪದ್ಮರವರ ಶ್ರದ್ಧೆ, ತಾಳ್ಮೆ, ತೀಕ್ಷ್ಣ ದೃಷ್ಟಿಯ ಪ್ರತೀಕದಂತಿದೆ. ಕನ್ನಡದಲ್ಲಿ ತ್ಯಾಗರಾಜರ ಜೀವನ, ಕಲೆ, ಸಾಧನೆಗಳ ಬಗೆಗೆ ಇಷ್ಟು ವಿಸ್ತಾರವಾದ ಅಧ್ಯಯನ ಇದುವರೆಗೆ ಆಗಿಲ್ಲವೆಂದರೆ ಅತಿಶಯೋಕ್ತಿಯೆನಿಸ ಲಾರದು.

**ಬಿ. ವಿ. ಕೆ. ಶಾಸ್ತ್ರಿ**

# ನಿವೇದನೆ

ನಾನು ಸಂಗೀತ ಕಲಿಯಲಾರಂಭಿಸಿದುದು ಪ್ರಾಥಮಿಕ ಶಾಲೆಯ ಹಂತದಲ್ಲಿದ್ದಾಗ. ಮೊದಲ ಗುರುಗಳು ಮೈಸೂರಿನ ದೇವೀರಮ್ಮಣ್ಣಿ ಅಗ್ರಹಾರದಲ್ಲಿ ವಾಸವಾಗಿರುವ ಶ್ರೀಮತಿ ಸುಶೀಲಮ್ಮನವರು. ಇವರಲ್ಲಿ ಪಾಠ ಕಲಿಯುತ್ತಿದ್ದ ಅವಧಿಯಲ್ಲೇ ನನ್ನ ತಂದೆಯವರ ಸ್ನೇಹಿತರಾಗಿದ್ದ ಮೃದಂಗ ವಿದ್ವಾನ್ ಶ್ರೀ ಪುಟ್ಟಸ್ವಾಮಯ್ಯನವರು (ಮೂಗಯ್ಯನವರು) ಗಾಯನ ವಿದ್ವಾಂಸರಾಗಿದ್ದ ಸುಬ್ಬಕೃಷ್ಣಯ್ಯನವರು ಆಗಾಗ್ಗೆ ನಮ್ಮ ಮನೆಗೆ ಬಂದು ಹೋಗುತ್ತಿದ್ದರು. ಆಗ ಅವರು, ನಾನು ಹೊಸದಾಗಿ ಕಲಿತಿದ್ದ ಕೀರ್ತನೆಗಳನ್ನು ನನ್ನಿಂದ ಹಾಡಿಸಿ ಪ್ರೋತ್ಸಾಹಿಸುತ್ತಿದ್ದರು. ಅವರ ಮೆಚ್ಚುಗೆಯ ಮಾತುಗಳಿಂದ ಉತ್ತೇಜಿತರಾದ ನನ್ನ ತಂದೆಯವರು, ಮುಂದೆಯೂ ಸಂಗೀತಕ್ಷೇತ್ರ ದಲ್ಲೇ ನನ್ನ ವ್ಯಾಸಂಗ ಮುಂದುವರೆಸಬೇಕೆಂಬ ಅಭಿಲಾಷೆ ಹೊಂದಿದರು. ಅಂತೆಯೇ ಪ್ರೌಢಶಾಲೆಯಲ್ಲೂ, ಕಾಲೇಜಿನ ಹಂತದಲ್ಲೂ ಸಂಗೀತವನ್ನೇ ಐಚ್ಛಿಕವಾಗಿ ಪಡೆದು ವ್ಯಾಸಂಗ ಮಾಡಿದೆ. ಕಾಲೇಜಿನ ಹಂತದಲ್ಲಿ ಪ್ರೊ. ವಿ. ರಾಮರತ್ನಂ, ಪ್ರೊ. ಗೌರಿಕುಪ್ಪು ಸ್ವಾಮಿ, ಪ್ರೊ. ಬಿ. ಎಸ್. ವಿಜಯರಾಘವನ್‌ರವರು ಬೋಧಿಸುವಾಗ ಅದರಲ್ಲೂ ಶ್ರೀತ್ಯಾಗರಾಜರ ರಚನೆಗಳನ್ನು ಪಾಠ ಹೇಳುವಾಗ ಅಲ್ಲಿ ಅಳವಟ್ಟ ಸಂಗೀತ ಸಾಹಿತ್ಯ ಗಳ ಬಗೆಗೆ ಮೆಚ್ಚಿ ನುಡಿಯುತ್ತಿದ್ದರು. ಇದೇ ಅವಧಿಯಲ್ಲೇ ನನ್ನ ಗುರುಗಳು ಆಗಿದ್ದ ಪ್ರೊ. ಎಂ. ವಿ. ರತ್ನರವರ ನಿಕಟ ಒಡನಾಟ ಲಭ್ಯವಾಗಿ ಅವರಿಂದ ಇನ್ನೂ ಹೆಚ್ಚಿನ ಕೃತಿಗಳ ಪರಿಚಯವಾಯಿತು. ನನ್ನ ಮಾತೃಭಾಷೆಯೂ ತೆಲುಗಾದ್ದರಿಂದ ಸಹಜ ವಾಗಿಯೇ ನನ್ನ ಗಮನ ಈ ರಚನೆಗಳೆಡೆಗೆ ವಿಶೇಷವಾಗಿ ಹರಿಯಿತು. ಈ ಗುರುವೃಂದ ದಿಂದ ಕಲಿತ ರಚನೆಗಳನ್ನು ಹಾಡುವಾಗ ಅನೇಕ ವೇಳೆ ನನ್ನ ಗಮನವೆಲ್ಲ ಸಾಹಿತ್ಯ ದೆಡೆಗೇ ಇರುತ್ತಿತ್ತು. ಮುಂದೆ ಒಮ್ಮೆ ಹೀಗೆಯೇ ಮಾತನಾಡುತ್ತಿರುವಾಗ ಪ್ರೊ ಬಿ.ಎಸ್. ವಿಜಯರಾಘವನ್‌ರವರು 'ನೀವೇಕೆ ಶ್ರೀತ್ಯಾಗರಾಜರ ಕೃತಿಗಳನ್ನಾಧರಿಸಿ ಪಿಎಚ್.ಡಿ. ಪದವಿಗಾಗಿ ಮಹಾಪ್ರಬಂಧವನ್ನು ರಚಿಸಬಾರದು' ಎಂದು ಪ್ರಶ್ನಿಸಿದರು. ಯೋಗಾಯೋಗವೆಂಬಂತೆ ಅದೇ ಸಮಯದಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ವಿಭಾಗದಲ್ಲಿ ತತ್ತ್ವಶಾಸ್ತ್ರ ಅಧ್ಯಾಪಕರಾಗಿರುವ ಡಾ || ಎಚ್. ಎಲ್. ಚಂದ್ರಶೇಖರ್‌ರವರು ತ್ಯಾಗರಾಜರ ರಚನೆಗಳಲ್ಲಿ ಅಡಗಿರುವ ವೇದಾಂತದ ವಿಷಯ ಗಳನ್ನು ತಾವು ಬೋಧಿಸುವುದಾಗಿ ಮುಂದಾದರು. ಇವರೆಲ್ಲರ ಪ್ರೇರಣೆ ಮತ್ತು ಸಹಕಾರಗಳ ಫಲವೇ ಈ ಕೃತಿ ರಚನೆ. ಮುಂದೆ ೧೯೯೫ರಲ್ಲಿ ಇದನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಡಾಕ್ಟರೇಟ್ ಪದವಿಗಾಗಿ ಅರ್ಪಿಸಿದೆ. ಪದವಿಯೂ ಪ್ರಾಪ್ತ ವಾಯಿತು. ಅಂತೆಯೇ ಮಹಾಪ್ರಬಂಧ ಪ್ರಕಟಣೆಗೆ ಅನುಮತಿಯೂ ದೊರೆಯಿತು. ಇದಕ್ಕಾಗಿ ಅಂದಿನ ಕುಲಪತಿಗಳಾದ ಸನ್ಮಾನ್ಯ ಪ್ರೊ. ಎಂ. ಮಾದಯ್ಯನವರಿಗೂ ಮತ್ತು

ವಿಶ್ವವಿದ್ಯಾನಿಲಯದ ಇತರ ಅಧಿಕಾರಿ ವರ್ಗಕ್ಕೂ ಹೃತ್ಪೂರ್ವಕವಾಗಿ ವಂದಿಸುತ್ತೇನೆ.

ಕರ್ನಾಟಕ ಸಂಗೀತ ಚರಿತ್ರೆಯ ಪರ್ವಕಾಲದಲ್ಲಿ ಬದುಕಿ ಬಾಳಿದ ಮಹಾನ್ ಚೇತನಗಳಲ್ಲಿ ಸಂತ ತ್ಯಾಗರಾಜರು ಅಗ್ರಮಾನ್ಯರು. ವಾಸ್ತವವಾಗಿ ತ್ಯಾಗರಾಜರು ಮೂಲತಃ ಆಂಧ್ರದವರು. ವಾಸ ತಮಿಳುನಾಡಿನಲ್ಲಿ. ಕನ್ನಡಿಗರಾದ ಪುರಂದರದಾಸ ರಿಂದಲೂ ಪ್ರಭಾವಿತರಾಗಿದ್ದವರು. ಶ್ರೀ ತ್ಯಾಗರಾಜರು ತೆಲುಗು, ತಮಿಳು ಹಾಗೂ ಕನ್ನಡನಾಡುಗಳ ಭಾವೈಕ್ಯತೆಯ ಪ್ರತೀಕವೆಂದರೆ ಅತಿಶಯೋಕ್ತಿಯಲ್ಲ. ಹೀಗಾಗಿ ಇಂತಹವರ ಅಧ್ಯಯನ ಅಂದಿಗೂ ಇಂದಿಗೂ ಎಂದೆಂದಿಗೂ ಸಂಗತವೆಂದೇ ಹೇಳ ಬಹುದು. ಪ್ರಸ್ತುತ ಪುಸ್ತಕದಲ್ಲಿ ತ್ಯಾಗರಾಜರ ರಚನೆಗಳನ್ನು ಪೂರ್ಣವಾಗಿ ಉಲ್ಲೇಖಿ ಸುವುದು ಉದ್ದೇಶವಲ್ಲ. ಆದರೆ ಸಮಯೋಚಿತವಾಗಿ ಅಗತ್ಯ ಭಾಗಗಳನ್ನು ಆಯ್ದು ಕೊಂಡು ಬೇರೆ ಬೇರೆ ಅಧ್ಯಾಯಗಳಲ್ಲಿ ಪ್ರಸ್ತುತ ಪಡಿಸುವ ಉದ್ದೇಶವಿಲ್ಲಿದೆ.

ಇನ್ನು ಈ ಪ್ರಬಂಧ ರಚನೆಗೆ ಮಾರ್ಗದರ್ಶಕರಾದ ಪ್ರೊ. ಬಿ. ಎಸ್. ವಿಜಯ ರಾಘವನ್, ಪ್ರಾಂಶುಪಾಲರು (ವಿಶ್ರಾಂತ) ಲಲಿತಕಲೆಗಳ ಮಹಿಳಾ ಕಾಲೇಜು, ಮೈಸೂರು ಇವರಿಗೆ ಅನಂತ ನಮಸ್ಕಾರಗಳು. ಅಂತೆಯೇ ಡಾ ॥ ಎಚ್. ಎಲ್. ಚಂದ್ರ ಶೇಖರರಿಗೆ ನಾನು ಚಿರಋಣಿ. ಪುಸ್ತಕಕ್ಕೆ ಮುನ್ನುಡಿಯನ್ನು ಬರೆದು ಕೆಲವು ಅಮೂಲ್ಯ ವಾದ ಛಾಯಾಚಿತ್ರಗಳನ್ನು ನೀಡಿರುವ ಸಂಗೀತ ಕಲಾರತ್ನ ಶ್ರೀ ಬಿ. ವಿ. ಕೆ. ಶಾಸ್ತ್ರಿ ಯವರಿಗೆ ನಾನು ಆಭಾರಿ. ನನ್ನ ಗುರುವೃಂದಕ್ಕೆ ಗೌರವಪೂರ್ವಕ ಪ್ರಣಾಮಗಳು.

ಈ ಪುಸ್ತಕ ಪ್ರಕಟಣೆಗೆ ಆರ್ಥಿಕ ನೆರವಿತ್ತಿರುವ ತಿರುಮಲೆ ತಿರುಪತಿ ದೇವಸ್ಥಾನಗಳ ಮುಖ್ಯ ನಿರ್ವಹಣಾಧಿಕಾರಿಗಳು ಮತ್ತು ಇತರ ಅಧಿಕಾರಿಗಳಿಗೆ ನಾನು ಅತ್ಯಂತ ಕೃತಜ್ಞಳು.

ನನ್ನ ಮಾತಾಪಿತೃಗಳಾದ ಶ್ರೀಮತಿ ಸುಬ್ಬಲಕ್ಷ್ಮಮ್ಮ ಮತ್ತು ಶ್ರೀ ಟಿ. ನರಸಿಂಹ ಶಾಸ್ತ್ರಿ, ಅತ್ತೆಯವರಾದ ಶ್ರೀಮತಿ ಲಕ್ಷ್ಮಿದೇವಮ್ಮ ಹಾಗೂ ಶ್ರೀಮತಿ ಮತ್ತು ಶ್ರೀ ನಂಜುಂಡಶಾಸ್ತ್ರಿ, ಶ್ರೀಮತಿ ಮತ್ತು ಶ್ರೀ ರಾಮಾಶಾಸ್ತ್ರಿ, ಶ್ರೀಮತಿ ಮತ್ತು ಶ್ರೀ ಲ. ನ. ಶಾಸ್ತ್ರಿ, ಶ್ರೀ ಟಿ. ಎನ್. ರಾಮನಾಥ್—ಇವರೆಲ್ಲರಿಗೂ ಹೃತ್ಪೂರ್ವಕ ನಮನಗಳು.

ಅಂತೆಯೇ ಹಿತೈಷಿಗಳಾದ ಶ್ರೀ ನಾಗರಾಜ್, ಡಾ ॥ ಸಿ. ಎಚ್. ಶ್ರೀನಿವಾಸಮೂರ್ತಿ ಶ್ರೀಮತಿ ಗೌರಮ್ಮ ನಾಗರಾಜ್, ಶ್ರೀಮತಿ ಎಸ್. ಶಾರದಮ್ಮ, ಡಾ ॥ ಎಚ್. ಎ. ಸಂಧ್ಯಾ ಇವರನ್ನು ನಾನು ಸ್ಮರಿಸಲೇಬೇಕು. ಪುಸ್ತಕವನ್ನು ತಮ್ಮ ಪ್ರಕಾಶನದಡಿಯಲ್ಲಿ ಪ್ರಕಟಿಸುತ್ತಿರುವ ಶ್ರೀಮತಿ ಲಲಿತ ಮತ್ತು ಶ್ರೀ ಜಿ. ವಿ. ಸತ್ಯನಾರಾಯಣರವರಿಗೆ ನನ್ನ ಕೃತಜ್ಞತೆಗಳು.

ಅತ್ಯಂತ ಶ್ರದ್ಧೆಯಿಂದ ಅಂದವಾಗಿ ಮುದ್ರಿಸಿಕೊಟ್ಟ ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್ ಮಾಲೀಕರಾದ ಶ್ರೀ ಆರ್. ವಿ. ಶ್ರೀನಿವಾಸಮೂರ್ತಿ ಮತ್ತು ಅವರ ಪುತ್ರ ಶ್ರೀ ಮೋಹನಮೂರ್ತಿಯವರಿಗೂ, ಮುಖಪುಟವನ್ನು ರಚಿಸಿಕೊಟ್ಟ ಶ್ರೀ ರಘೂತ್ತಮ ರಾವ್ ಪುಟ್ಟಿಯವರಿಗೂ ನನ್ನ ನಮನಗಳು. ಅಲ್ಲದೆ ಈ ನಿಟ್ಟಿನಲ್ಲಿ ನನಗೆ ಪ್ರತ್ಯಕ್ಷವಾಗಿ

ಪರೋಕ್ಷವಾಗಿ ಸಹಾಯ ನೀಡಿದ ಇನ್ನೂ ಹಲವಾರು ಬಂಧುಮಿತ್ರರಿದ್ದಾರೆ. ಅವರೆಲ್ಲ ರಿಗೂ ನನ್ನ ಅನಂತ ಧನ್ಯವಾದಗಳು. ಕಲಾಭಿಮಾನಿಗಳೂ ಶ್ರೀ ತ್ಯಾಗರಾಜ ಭಕ್ತರೂ ಈ ಕೃತಿಯನ್ನು ಸ್ವಾಗತಿಸುವರೆಂದು ನಂಬುತ್ತೇನೆ.

**ಟಿ. ಎಸ್. ಪದ್ಮ**

# ಪ್ರಕಾಶಕರ ಮಾತು

ನಮ್ಮ ಪ್ರಕಾಶನ ಸಂಸ್ಥೆಯು ಕಳೆದ ಹತ್ತು ವರ್ಷಗಳ ಅವಧಿಯಲ್ಲಿ ಮೂವತ್ತಕ್ಕೂ ಹೆಚ್ಚಿನ ಹಿರಿಯ-ಕಿರಿಯ ಲೇಖಕರ, ನಲವತ್ತಕ್ಕೂ ಮೇಲ್ಪಟ್ಟು ಪುಸ್ತಕಗಳನ್ನು ಪ್ರಕಟಿಸಿದೆ. ಹಲವು ಕೃತಿಗಳು ರಾಜ್ಯ ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿಗಳ ಪ್ರಶಸ್ತಿಗಳನ್ನೂ ಗಳಿಸಿದವು. ಇಷ್ಟಾದರೂ ನಮ್ಮ ಲೇಖಕರ ಬಳಗದಲ್ಲಿ ಒಬ್ಬ ಮಹಿಳಾ ಲೇಖಕಿ ಇದುವರೆಗೂ ಇಲ್ಲದಿರುವುದು ಒಂದು ಕೊರತೆಯಾಗಿತ್ತು. ಇದೀಗ ನಮ್ಮ ನಲವತ್ತಮೂರನೆಯ ಪ್ರಕಟಣೆಯಾಗಿ ಡಾ || ಟಿ. ಎನ್. ಪದ್ಮರವರ ಈ ಕೃತಿಯನ್ನು ಓದುಗರಿಗೆ ನೀಡುವುದರ ಮೂಲಕ ನಮ್ಮ ಇಚ್ಛೆ ನೆರವೇರಿದಂತಾಗಿದೆ.

ಡಾ || ಪದ್ಮ ಅವರು ನಮ್ಮ ಸರ್ವತೋಮುಖ ಅಭಿವೃದ್ಧಿಯನ್ನು ಮೂವತ್ತೈದು ವರ್ಷಗಳಿಂದಲೂ ಕಂಡು ಸಂತೋಷ-ಸಂಭ್ರಮಪಟ್ಟಿದ್ದಾರೆ. ನಮ್ಮ ಬಗ್ಗೆ ಅವರಿ ಗಿರುವ ಪ್ರೀತಿ-ಅಭಿಮಾನಗಳು ಇಮ್ಮಡಿಗೊಳಿಸಲು ಈ ಉತ್ತಮ ಕೃತಿಯನ್ನು ನಮ್ಮ ಪ್ರಕಾಶನದಡಿಯಲ್ಲಿ ಪ್ರಕಟಿಸಲು ಯೋಜಿಸಿದ್ದಕ್ಕಾಗಿ ಅವರಿಗೆ ಚಿರಋಣಿಗಳಾಗಿ ದ್ದೇವೆ. ಅವರ ಲೇಖನಿಯಿಂದ ಇನ್ನೂ ಹಲವಾರು ಕೃತಿಗಳು ಮೂಡಿಬರಲೆಂದು ಹೃದಯಪೂರ್ವಕವಾಗಿ ಹಾರೈಸುತ್ತೇವೆ.

ಈ ಗ್ರಂಥವು ಪ್ರಕಟಗೊಳ್ಳಲು ಕೆಲ ನಿಷ್ಕಾಮ ವ್ಯಕ್ತಿಗಳು ತೆರೆಯ ಹಿಂದೆ ನಿಂತು ಕೆಲಸ ಮಾಡಿದ್ದಾರೆ. ಅವರೆಲ್ಲರಿಗೂ ಅದರಲ್ಲೂ ಮುಖ್ಯವಾಗಿ ಶ್ರೀ ಟಿ. ಎನ್. ರಾಮನಾಥ್ ಅವರಿಗೆ ನಾವು ಆಭಾರಿಗಳಾಗಿದ್ದೇವೆ.

**ಲಲಿತ ಸತ್ಯನಾರಾಯಣ**

# ವಿಷಯಸೂಚಿಕೆ



ತಿರುವಯ್ಯಾರಿನ ಮನೆಯಲ್ಲಿ ಶ್ರೀ ತ್ಯಾಗರಾಜರ ಮೂರ್ತಿ



ಸಮಾಧಿಯ ಎದುರಿಗೆ ಸ್ಥಾಪಿಸಿರುವ ಬೆಂಗಳೂರು ನಾಗರತ್ನಮ್ಮನವರ ಶಿಲ್ಪ

೧

# ಪೀಠಿಕೆ

ಕರ್ನಾಟಕ ಸಂಗೀತ 'ಇತಿಹಾಸದಲ್ಲಿ ಶ್ರೀ ತ್ಯಾಗರಾಜರದು ವಿಶಿಷ್ಟವೂ, ಅದ್ಭುತವೂ ಆದ ಸ್ಥಾನ, ಏಕೆಂದರೆ ಬಹುಮುಖ ಪ್ರತಿಭಾವಂತರಲ್ಲಿ ಅವರು ಒಬ್ಬರು. ಅದರಲ್ಲೂ ಭಕ್ತಿ ಮತ್ತು ನಾದಯೋಗ ಮಾರ್ಗಗಳ ಮೂಲಕ ಅಧ್ಯಾತ್ಮ ಸಾಧಿಸಿದ ಮಹಾಸಿದ್ಧರು.

ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂವೇತ್ತಿ ತತ್ತ್ವತಃ ॥

(ಶ್ರೀಮದ್ಭಗವದ್ಗೀತಾ, ೭-೩)

'ಸಾವಿರ ಮನುಷ್ಯರಲ್ಲಿ ಯಾರೋ ಒಬ್ಬರು ಸಿದ್ಧಿಗಾಗಿ ಪ್ರಯತ್ನಿಸುತ್ತಾರೆ. ಯತ್ನ ಮಾಡುವ ಸಿದ್ಧರಲ್ಲಿಯೂ ಕೂಡ ಯಾರೋ ಒಬ್ಬರು ನನ್ನನ್ನು ಯಥಾರ್ಥವಾಗಿ ತಿಳಿಯುತ್ತಾರೆ' ಎಂಬುದು ಭಗವದ್‌ವಾಕ್ಯ. ಈ ಮಾತು ದಿಟವಾಗಿ ತ್ಯಾಗರಾಜರಿಗೆ ಅನ್ವಯವಾಗುತ್ತದೆ. ನಾದಯೋಗ ಮತ್ತು ಭಕ್ತಿಮಾರ್ಗಗಳ ಮೂಲಕ ಸ್ವತಃ ಸಿದ್ಧಿ ಪಡೆದು ಪರಬ್ರಹ್ಮಸ್ವರೂಪನಾದ ಶ್ರೀ ಸೀತಾರಾಮನನ್ನು ಅರಿತು, ತಮ್ಮ ಅನುಭವಕ್ಕೆ ಅವರು ವಾಗಭಿವ್ಯಕ್ತಿಯನ್ನು ನೀಡಿದ್ದಾರೆ. ಅವರ ಅನುಭವವೆಂಬ ಅಗಾಧ ಪರ್ವತಕ್ಕೆ ಹಿಡಿದ ಕಿರುಗನ್ನಡಿಯೇ ಈ ಪ್ರಬಂಧ. ವಾಸ್ತವವಾಗಿ ತ್ಯಾಗರಾಜರ ಸಂಗೀತ ಸಾಹಿತ್ಯಗಳ ಅಧ್ಯಯನವು ಜೀವಿತದ ಅವಧಿಯೊಂದಕ್ಕೆ ನಿಲುಕುವಂಥದ್ದಲ್ಲ. ಏಕೆಂದರೆ ಪ್ರತಿ ಅಧ್ಯಯನದಲ್ಲೂ ತ್ಯಾಗರಾಜರು ತಮ್ಮ ನಿಗೂಢಗರ್ಭದಿಂದ ಹೊಸಹೊಸ ಆಯಾಮಗಳನ್ನು ಹೊರಹೊಮ್ಮಿಸುತ್ತಲೇ ಇರುತ್ತಾರೆ. ಅವರನ್ನು ಕುರಿತ ಯಾವುದೇ ಅಧ್ಯಯನವೂ ಅವರ ಸಮಗ್ರ ಅಧ್ಯಯನ ಎನ್ನಲಾಗದು. ಈ ಕಾರಣದಿಂದಲೇ ಮಹಾಪ್ರಬಂಧದ ಪ್ರಸ್ತುತ ಅಧ್ಯಯನಕ್ಕೆ 'ತ್ಯಾಗರಾಜರ ಕೃತಿಗಳಲ್ಲಿ ಸಂಗೀತ ಮತ್ತು ಭಕ್ತಿ' ಎಂಬ ವಿಷಯವನ್ನು ಮಾತ್ರ ಆಯ್ದುಕೊಂಡಿರುವುದು. ಹಾಗೆಂದ ಮಾತ್ರಕ್ಕೆ ಇದೂ ಕೂಡ ತ್ಯಾಗರಾಜರ ಸಂಗೀತ ಮತ್ತು ಭಕ್ತಿಗಳ ಸಮಗ್ರ ಅಧ್ಯಯನವಲ್ಲ. ಆದಷ್ಟು ಮಟ್ಟಿಗೆ ವಿಶದವಾಗಿ ನಡೆಸಿರುವ ಅಧ್ಯಯನವಷ್ಟೆ.

ವಾಸ್ತವವಾಗಿ ಈ ಪ್ರಬಂಧ ರಚನೆಯ ವೇಳೆಗೆ ತ್ಯಾಗರಾಜರ ಬಗೆಗೆ ಬಹಳಷ್ಟು ಬರವಣಿಗೆಗಳು ಹೊರಬಂದಿವೆ, ಇನ್ನೂ ಹೊರಬರುತ್ತಲೂ ಇವೆ. ಆದರೆ ಅವರ ಸಂಗೀತ ಮತ್ತು ಭಕ್ತಿ ಸ್ವರೂಪಗಳನ್ನು ಪ್ರಧಾನವಾಗಿಸಿಕೊಂಡು, ಕನ್ನಡ ಭಾಷೆಯಲ್ಲಿ ರಚಿತವಾದ ಗ್ರಂಥಗಳ ಸಂಖ್ಯೆ ಕಡಿಮೆ. ಅಂತಹ ನಮ್ಮ ಪ್ರಯತ್ನಗಳಲ್ಲಿ ಇದೂ ಒಂದು.

ತ್ಯಾಗರಾಜರ ಜೀವಿತದ ಪ್ರಧಾನ ಮುಖಗಳು ಸಂಗೀತ ಅಥವಾ ನಾದೋಪಾಸನೆ ಮತ್ತು ಭಕ್ತಿ ಎಂದರೆ ತಪ್ಪಿಲ್ಲ. ಇವೆರಡೂ ಒಂದು ಮತ್ತೊಂದಕ್ಕೆ ಪೂರಕವೂ ಮತ್ತು

ಪೋಷಕವೂ ಆದುದು. ಇವುಗಳಲ್ಲಿ ಒಂದರ ಅಧ್ಯಯನವೆಂದರೆ ಅದು ಅವರ ಏಕಮುಖಿ ಅಧ್ಯಯನವಾಗುತ್ತದೆ. ಈ ಕಾರಣದಿಂದ ಅವರ ಸಂಗೀತ ಮತ್ತು ಭಕ್ತಿಗಳನ್ನೊಳಗೊಂಡಂತೆ ಪ್ರಬಂಧಕ್ಕೆ ವಸ್ತುವನ್ನು ಆಯ್ದುಕೊಳ್ಳಲಾಗಿದೆ.

ಸಂಗೀತದ ಮುಖ್ಯೋದ್ದೇಶಗಳು ಎರಡು. ಇವು ಲೋಕರಂಜನೆ ಮತ್ತು ಭವ ಭಂಜನೆ. ಇವುಗಳಲ್ಲಿ ಒಂದನ್ನು ಮಾತ್ರ ಗುರಿಯಾಗಿಟ್ಟುಕೊಂಡ ಸಂಗೀತವು ಅರ್ಥ ಪೂರ್ಣವಲ್ಲವೆಂಬ ಅಭಿಪ್ರಾಯವು ಈಗಾಗಲೇ ಹಲವು ಹಿರಿಯರಿಂದ ವ್ಯಕ್ತ ಗೊಂಡಿದೆ. ಇದೇ ನಿಲುವಿನಿಂದಲೇ ರೂಪುಗೊಂಡ ತ್ಯಾಗರಾಜರ ಸಂಗೀತವನ್ನು ಪ್ರಬಂಧದ ಪೂರ್ವಭಾಗದಲ್ಲಿ ಸ್ಥೂಲವಾಗಿ ಪ್ರಸ್ತುತಪಡಿಸಲಾಗಿದೆ. ಸಂಗೀತವು ಪ್ರಾಯೋಗಿಕ ಕಲೆಯಾಗಿದ್ದು ಅದನ್ನು ಪ್ರಾಯೋಗಿಕವಾಗಿ ಅಭಿವ್ಯಕ್ತಿಸಿದಾಗಲೇ ಅದರ ನಿಜರೂಪದ ಅರಿವಾಗುವುದು. ಹೀಗೆ ಅಭಿವ್ಯಕ್ತಿಸುವಾಗ ಹೊಸಹೊಸ ಪ್ರಯೋಗ ಗಳನ್ನು ಸಂಗೀತಜ್ಞರು ನಡೆಸುತ್ತಲೇ ಬಂದಿದ್ದಾರೆ. ಇಂತಹ ಪ್ರಯೋಗ ತ್ಯಾಗರಾಜರ ಸಂಗೀತದ ಮೇಲೂ ನಡೆದಿದೆ. ಆದರೆ ಅನೇಕ ವೇಳೆ ಹೀಗೆ ನಡೆದ ಪ್ರಯೋಗ ಗಳೆಲ್ಲವೂ ಸಮರ್ಥವಾಗಿವೆಯೆಂದು ಹೇಳಲು ಬಾರದು. ಈ ಪ್ರಯೋಗಗಳಿಂದ ಮೂಲರೂಪದಲ್ಲೇ (ರಾಗ-ತಾಳಗಳಲ್ಲೇ, ವರ್ಣಮೆಟ್ಟಿನಲ್ಲೇ ಅಥವಾ ಕೆಲವೊಮ್ಮೆ ಕರ್ತೃತ್ವದಲ್ಲೇ) ವ್ಯತ್ಯಾಸಗಳೂ ಆಗಿರಬಹುದು. ಇವುಗಳನ್ನೂ ಗಮನದಲ್ಲಿರಿಸಿ ಕೊಂಡು ತ್ಯಾಗರಾಜರ ಸಂಗೀತದ ವಿಹಂಗಮ ನೋಟವನ್ನು ಮಾತ್ರ ಪ್ರಬಂಧದ ಪೂರ್ವಾರ್ಧದಲ್ಲಿ ಚಿತ್ರಿಸಲಾಗಿದೆ.

ಪ್ರಬಂಧದ ಉತ್ತರಭಾಗದಲ್ಲಿ ನಾದೋಪಾಸನೆಯ ಮುಖ್ಯಗುರಿಗಳಲ್ಲಿ ಎರಡ ನೆಯದಾದ ಭವಭಂಜನದ ದೃಷ್ಟಿಯಿಂದ ಭಕ್ತಿಯನ್ನು ಸಾಕಷ್ಟು ವಿವರವಾಗಿ ಅಧ್ಯ ಯನ ಮಾಡಲಾಗಿದೆ. ಕಲೆಗಳೆಲ್ಲದರ ಪರಮಗುರಿ ಭಗವದನುಭವವೇ. ಈ ಅನುಭವ ಪಡೆಯುವಲ್ಲಿ ಇರುವ ವಿವಿಧ ಮಾರ್ಗಗಳನ್ನೂ, ವಿಶೇಷವಾಗಿ ಭಕ್ತಿಮಾರ್ಗವನ್ನೂ ಪ್ರಸ್ತುತಪಡಿಸಿ ಮಹಾಪ್ರಬಂಧದ ಶಿರೋನಾಮೆಗೆ ಅನುಗುಣವಾಗಿ ತ್ಯಾಗರಾಜರ ರಚನೆಗಳಲ್ಲಿ ಕಾಣಬರುವ ಭಕ್ತಿಯನ್ನು ವಿವಿಧ ಆಯಾಮಗಳೊಂದಿಗೆ ಅಧ್ಯಯನ ಮಾಡಲಾಗಿದೆ. ತ್ಯಾಗರಾಜರು ಯಾವುದೇ ಅಂಶಗಳನ್ನು ಪ್ರಸ್ತಾಪಿಸಿದರೂ, ಅದು ಭಜನೆ, ಕೀರ್ತನೆ, ಭಕ್ತಿಗಳಲ್ಲೇ ಅಂತ್ಯಗೊಳ್ಳುವುದು ಇಲ್ಲಿ ಗಮನಾರ್ಹ.

ತ್ಯಾಗರಾಜರ ಸಂಗೀತವನ್ನು ಯಥಾವತ್ತಾಗಿ ಉಳಿಸಿಕೊಳ್ಳುವಲ್ಲಿ ಪ್ರಯತ್ನಿಸಿದ ಕಲಾಪ್ರಿಯರು ನೂರಾರು ಮಂದಿ. ಅಂತಹವರ ಸಹಕಾರದಿಂದ ಬಹುಮಟ್ಟಿಗೆ ತ್ಯಾಗ ರಾಜರ ಸಂಗೀತವು ಮೂಲರೂಪದಲ್ಲೇ ಉಳಿದು ಇಂದಿಗೂ ನಮ್ಮ ಕೈಸೇರಲು ಸಾಧ್ಯವಾಗಿದೆ. ಇದು ನಮ್ಮ ಅದೃಷ್ಟ. ಆದರೆ ಅದೇಮಟ್ಟದ ಶ್ರದ್ಧೆ ಅವರ ಸಾಹಿತ್ಯ ವೆಲ್ಲವನ್ನೂ ಮೂಲರೂಪದಲ್ಲೇ ಉಳಿಸುವ ಕಾರ್ಯ ಎಷ್ಟರಮಟ್ಟಿಗೆ ನಡೆದಿದೆ ಎಂಬುದು ಪ್ರಶ್ನಾರ್ಹವೆನಿಸುತ್ತದೆ. ಏಕೆಂದರೆ ತ್ಯಾಗರಾಜರ ಬಹುತೇಕ ರಚನೆಗಳು ಹಲವು ಚರಣಗಳನ್ನು ಹೊಂದಿವೆಯಾದರೂ ಲಕ್ಷ್ಯಕ್ಷೇತ್ರದಲ್ಲಿ ಈ ಎಲ್ಲ ಚರಣ

ಗಳನ್ನೂ ಹಾಡುವುದನ್ನು ಅಥವಾ ನುಡಿಸುವುದನ್ನು ನಾವು ಕೇಳುವುದು ವಿರಳವಾಗಿಯಷ್ಟೆ. ರಚನೆಗಳ ಪಲ್ಲವಿ, ಅನುಪಲ್ಲವಿಗಳೊಂದಿಗೆ ಮುದ್ರಾಚರಣವೊಂದನ್ನು ಪ್ರಯೋಗಿಸಿ ನಿಲ್ಲಿಸುವುದೇ ಹೆಚ್ಚು. ಹೀಗಾಗಿ ಎಷ್ಟೋವೇಳೆ ಅಂತಹ ಕೆಲವು ರಚನೆಗಳಲ್ಲಿ ಇನ್ನೂ ಕೆಲವು ಚರಣಗಳಿವೆ ಎಂಬ ಅರಿವೂ ಕೂಡ ಇಲ್ಲದಿರಲೂಬಹುದು. ವಾಸ್ತವವಾಗಿ ತ್ಯಾಗರಾಜರ ಭಕ್ತಿತೀವ್ರತೆಯನ್ನೂ, ಭಾವವೈವಿಧ್ಯವನ್ನೂ ತಿಳಿಯಬೇಕಾದರೆ ಅವರ ರಚನೆಗಳಲ್ಲಿನ ಸಾಹಿತ್ಯಭಾಗವೆಲ್ಲವನ್ನೂ ವಿಶದವಾಗಿ ಅವಲೋಕಿಸಿದಾಗ ಮಾತ್ರ ಸಾಧ್ಯವಾಗುವುದು. ತ್ಯಾಗರಾಜರಲ್ಲಿದ್ದ ಭಕ್ತಿಯೆಂಬ ಅಂತರ್‌ಪ್ರವಾಹವು ಅವರನ್ನು ಒಂದು ನಿಮಿಷವೂ ಮೌನವಾಗಿರಿಸದೆ ಹಾಡುವಂತೆ ಮಾಡಿದೆ. ಭಾವಾತ್ಮಕವಾಗಿ ಮೂಡಿಬಂದ ಅವರ ಒಂದೊಂದು ಮಾತೂ ಭಕ್ತಿಕಾವ್ಯವಾಗಿ ಪರಿಣಮಿಸಿದೆ. ಹೀಗೆಂದೇ ಈ ಅಧ್ಯಯನದಲ್ಲಿ ತ್ಯಾಗರಾಜರ ರಚನೆಗಳಲ್ಲಿ ಕಾಣಬರುವ 'ಭಕ್ತಿ'ಗೆ ಹೆಚ್ಚು ಒತ್ತು ನೀಡಿರುವುದು. ರಸತನ್ಮಯೀ ಭಾವದಲ್ಲಿ ಅವರು ಹಾಡುವಾಗ ಹಲವು ರಚನೆಗಳ ಭಾವ ಏಕರೀತಿಯದೂ ಆಗಿದೆ. ಅವರ ಸಾಹಿತ್ಯದಲ್ಲಿ ಕಾಣಬರುವ ಭಾವಗಳನ್ನು ಕರಾರುವಾಕ್ಕಾಗಿ ವಿಭಜಿಸುವುದು ಸ್ವಲ್ಪ ಕಷ್ಟವೇ. ಒಂದು ಮತ್ತೊಂದರೊಡನೆ ಮಿಳಿತವಾಗಿಯೇ ಇರುವ ಕಾರಣದಿಂದ ಈ ಪ್ರಬಂಧದಲ್ಲಿ ಅನಿವಾರ್ಯವಾಗಿ ಕೆಲವೆಡೆ ಪುನರುಕ್ತಿಗಳಾಗಿವೆ.

ಪ್ರಸ್ತುತ ಅಧ್ಯಯನಕ್ಕೆ ಉಪಲಬ್ಧವಿರುವ ಸುಮಾರು ಏಳುನೂರು ರಚನೆಗಳನ್ನು ಪರಾಮರ್ಶಿಸಲಾಗಿದೆ. ಇವುಗಳ ವರ್ಣನಾತ್ಮಕ, ವಿಶ್ಲೇಷಣಾತ್ಮಕ ಹಾಗೂ ತೌಲನಿಕ ದೃಷ್ಟಿ ಇಲ್ಲಿದೆ. ವಾಸ್ತವವಾಗಿ ತ್ಯಾಗರಾಜರನ್ನು ವಚನಕಾರರು ಮತ್ತು ಇತರ ಭಕ್ತರೊಂದಿಗೆ ಹೋಲಿಸುವ ಒಂದು ಪ್ರತ್ಯೇಕ ಅಧ್ಯಾಯವೇ ಪ್ರಬಂಧದಲ್ಲಿದೆ.

ಇನ್ನು, ನಿಘಂಟಿನ ಪ್ರಕಾರ 'ಕೃತಿ' ಎಂಬ ಪದಕ್ಕೆ ವಿವಿಧ ಅರ್ಥಗಳುಂಟು. ಪ್ರಕೃತ ಪ್ರಬಂಧದಲ್ಲಿ ಈ ಪದವನ್ನು ಸಂಗೀತದ ಪಾರಿಭಾಷಿಕ ಶಬ್ದವಾಗಿಯೂ, ಗ್ರಂಥ, ಕಾವ್ಯ, ರಚನೆ ಎಂಬ ಅರ್ಥದಲ್ಲೂ ಸಂದರ್ಭೋಚಿತವಾಗಿ ಬಳಸಲಾಗಿದೆ. ಆದ್ದರಿಂದ ಅವರ ಗೀತನಾಟಕಗಳನ್ನೂ ಒಳಗೊಂಡಂತೆ ಉಪಲಬ್ಧ ರಚನೆಗಳೆಲ್ಲವೂ ಈ ಅಧ್ಯಯನದ ವ್ಯಾಪ್ತಿಯಲ್ಲಿ ಸೇರಿವೆ. ಒಟ್ಟಾರೆ ಪ್ರಬಂಧದಲ್ಲಿ ಪೀಠಿಕಾ ಪ್ರಕರಣವೂ ಸೇರಿದಂತೆ ಹದಿನೆಂಟು ಅಧ್ಯಾಯಗಳಿವೆ. ಪ್ರಬಂಧಕ್ಕೆ ಮೂಲ ಆಕರ ಗ್ರಂಥಗಳೆಂದರೆ:

೧. ತ್ಯಾಗರಾಜಕೀರ್ತನಲು–ವಿಶೇಷ ವಿವರಣಮು—ಶ್ರೀ ಕಲ್ಲೂರಿ ವೀರಭದ್ರ ಶಾಸ್ತ್ರಿ (ಎರಡು ಸಂಪುಟಗಳು)

೨.ತ್ಯಾಗರಾಜಕೀರ್ತನಲು—ಸ್ವರಸಂಕಲನ ಕಳಾಪ್ರವೀಣ ಮಂಚಾಳ ಜಗನ್ನಾಥ ರಾವು (ಸಂ.), ವಾಡ್ರೇವು ಪುರುಷೋತ್ತಂ (ಆರು ಸಂಪುಟಗಳು)

೩.*The Spiritual Heritage of Tyagaraja*—C. Ramanujachari and Dr. V. Raghavan

೪. ತ್ಯಾಗರಾಜಸ್ವಾಮಿ ಕೀರ್ತನಲು—ಕೆ. ವಿ. ಶ್ರೀನಿವಾಸ ಅಯ್ಯಂಗಾರ್

೫. *Rare and unpublished Kirtanams of Tyagaraja*—T. V. Subbarao.

೬. *Great Composers-II–Tyagaraja*—P. Sambamurthy

ಇವಲ್ಲದೆ ಇನ್ನೂ ಹಲವಾರು ಗ್ರಂಥಗಳು, ಸಂಚಿಕೆಗಳು ಹಾಗೂ ಲೇಖನಗಳ ಸಹಾಯದೊಂದಿಗೆ ಈ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

"ಉತ್ತಮರು ನುಡಿಯುತ್ತಾರೆ, ಇತರರು ಅರ್ಥೈಸುತ್ತಾರೆ" ಎಂಬ ಭವಭೂತಿಯ ಹೇಳಿಕೆಯಂತೆ ತ್ಯಾಗರಾಜರ ನುಡಿಮುತ್ತುಗಳನ್ನು ಆಧರಿಸಿ ರಚಿತವಾಗಿರುವ ವಿನಯ ಪೂರ್ವಕ ಬರಹಗಳಲ್ಲಿ ಇದೂ ಒಂದು.

೨

# ತ್ಯಾಗರಾಜರ ಜೀವನ ಚರಿತ್ರೆ

ಅಮರನೆನಿಸುವ ವಾಗ್ಗೇಯಕಾರ ಈ ಲೋಕದಿಂದ ಮರೆಯಾದ ನಂತರವೂ ಜನಮನದಲ್ಲಿ ಚಿರಸ್ಥಾಯಿಯಾಗಿ ಉಳಿಯುತ್ತಾನೆ. ಇಂತಹ ಮಹಾನುಭಾವನ ರಚನೆಗಳು ಶತಶತಮಾನಗಳವರೆಗೆ ಜನತೆಯ ಬದುಕಿಗೆ ಬೆಳಕಾಗಿ, ಜೀವಸತ್ವವಾಗಿ, ಕಾಮಧೇನುವಾಗಿ ಉಳಿಯುತ್ತದೆ. ಇವು ಮಾನವನಿಗೆ ಉದಾತ್ತ ಧ್ಯೇಯಗಳನ್ನು ಒದಗಿಸುತ್ತದೆ. ಇಂತಹ ವಾಗ್ಗೇಯಕಾರ ಭಾವೋದ್ದೀಪ್ತವಾದ, ಭಕ್ತಿಯಿಂದೊಡಗೂಡಿದ ತನ್ನ ಉದಾತ್ತ ಆದರ್ಶಗಳಿಂದ ಸಮಾಜದ ಮೇಲೆ ಪ್ರಭಾವ ಬೀರುತ್ತಾನೆ. ಈ ಮೂಲಕ ಜನತೆ ಸನ್ಮಾರ್ಗದ ಒಲವು, ಸೃಜನಶೀಲತೆ, ನೀತಿ, ಔದಾರ್ಯಗಳನ್ನು ಬೆಳೆಸಿಕೊಳ್ಳಲು ಉಪಕರಿಸುತ್ತಾನೆ. ಹೀಗೆ ರೂಪುಗೊಂಡ ಉತ್ತಮನ ರೀತಿನೀತಿಗಳನ್ನೇ ಪ್ರಮಾಣವೆಂದೂ, ಮಾರ್ಗದರ್ಶನವೆಂದೂ ಇತರರು ಪರಿಗಣಿಸುತ್ತಾರೆ. ಇದನ್ನೇ ಭಗವದ್ಗೀತೆಯ ಮೂರನೇ ಅಧ್ಯಾಯವು 'ಲೋಕ ಸಂಗ್ರಹ' ಎಂದು ಹೇಳುತ್ತದೆ.

ನೈತಿಕ ಅಧಃಪತನದ ಕಾಲದಲ್ಲಿ ಈ ಭೂಮಿಯಲ್ಲಿ ಅವತರಿಸುವ ಮಹಾನುಭಾವರ ಬಗ್ಗೆ ನಮ್ಮ ಶಾಸ್ತ್ರಗಳಲ್ಲಿ ಎರಡು ಅಭಿಪ್ರಾಯಗಳುಂಟು. ಲೋಕೋದ್ಧಾರಕ್ಕಾಗಿ ದೇವರೇ ಸ್ವತಃ ಅವತರಿಸುವನೆಂಬುದು ಮೊದಲ ಅಭಿಪ್ರಾಯ. ಇದು ಭಗವದ್ಗೀತೆಯಲ್ಲಿ ವ್ಯಕ್ತವಾಗಿದೆ.[೧] ದೇವರೇ ಅಲ್ಲದಿದ್ದರೂ, ಮುಕ್ತರಾದ ಜೀವರು ಮಹೋದ್ದೇಶವನ್ನು ಪೂರ್ಣಗೊಳಿಸಲು ಸ್ವಇಚ್ಛೆಯಿಂದ ಪುನಃ ಭೂಲೋಕಕ್ಕೆ ಬರುವರೆಂಬುದು ಎರಡನೆಯ ಅಭಿಪ್ರಾಯ. ಇದು ವೇದಾಂತ ಸೂತ್ರದಲ್ಲಿದ್ದು, ಅಂತಹ ಮಹಾಪುರುಷರನ್ನು 'ಆಧಿಕಾರಿಕ ಪುರುಷ'ರೆನ್ನಲಾಗುತ್ತದೆ.[೨] ಅವರು ತಮ್ಮ ಜೀವಿತದ ಅವಧಿಯಲ್ಲಿ ಸಾಧಾರಣ ಮನುಷ್ಯನ ಊಹೆಗೂ ನಿಲುಕದ ಅಸಾಧಾರಣ ಸಾಧನೆ ಮಾಡುತ್ತಾರೆ. ಅವರು ಅವತಾರ ಪುರುಷರೇ ಆಗಿರಲಿ ಅಥವಾ ಆಧಿಕಾರಿಕ ಪುರುಷರೇ ಆಗಿರಲಿ, ಅತಿಮಾನುಷರೆಂಬ ವಿವರಣೆಯ ಸಹಾಯವಿಲ್ಲದೆ, ಅವರ ಈ ಸಾಧನೆಯನ್ನು ನಾವು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಇಂತಹ ಬಹುತೇಕ ಸಂತರ, ಭಕ್ತರ, ಕವಿಗಳ, ವಾಗ್ಗೇಯಕಾರರ ಜೀವಿತದ ಬಗೆಗೆ ವಿವರಗಳು ಧೃಡವಾಗಿ ತಿಳಿಯದೆ ಪವಾಡ, ದಂತಕಥೆಗಳ ಮೂಲಕ ಅವರ ಜೀವಿತವನ್ನು ರೂಪಿಸುವಂತಾಗಿರುವುದು ಪ್ರಾಚೀನ ಕಾಲದಿಂದಲೂ ನಡೆಯುತ್ತಲೇ ಬಂದಿದೆ. ಪರ್ಶಿಯಾ ದೇಶದ ದಾರ್ಶನಿಕ ಕವಿಯೊಬ್ಬ "ಈ ವಿಶ್ವ ಮೊದಲ ಹಾಗೂ ಕಡೆಯ ಪುಟಗಳನ್ನು ಕಳೆದುಕೊಂಡ ಪುಸ್ತಕ. ಇದರ ಆರಂಭ ಅಂತ್ಯಗಳು ತಿಳಿದೇ ಇಲ್ಲ. ಮಾನವ ತನಗೆ ಬುದ್ಧಿ ಬಂದಾಗಿನಿಂದಲೂ ಕಳೆದುಹೋದ ಈ ಪುಟಗಳನ್ನು ಹುಡುಕುತ್ತಲೇ ಬಂದಿದ್ದಾನೆ" ಎನ್ನುತ್ತಾನೆ.[೩] ತ್ಯಾಗರಾಜರ ಜೀವನ ಚರಿತ್ರೆಗೂ ಈ ಮಾತು ಅನ್ವಯವಾಗುತ್ತದೆ. ಏಕೆಂದರೆ ತ್ಯಾಗರಾಜರ ಜನನ, ವಿವಾಹ,

ಅವರ ಜೀವಿತದಲ್ಲಿ ನಡೆದ ಪ್ರಸಂಗಗಳು ಮುಂತಾದ ವಿಷಯಗಳ ಬಗೆಗೆ ವಿದ್ವಾಂಸರಲ್ಲಿ ಖಚಿತವಾದ ನಿರ್ಣಯಗಳಿದ್ದಂತೆ ಕಾಣಬರದು. ಅಲ್ಲದೆ ಅವರ ಜೀವನ ಚರಿತ್ರೆ ಕೆಲವು ಪವಾಡಾದಿಗಳನ್ನು ಒಳಗೊಂಡಂತೆಯೇ ಪ್ರಚಲಿತವಾಗಿದೆ. ಇವುಗಳ ಸತ್ಯಾಸತ್ಯ ಪರೀಕ್ಷೆ ಈ ಅಧ್ಯಯನದ ಗುರಿಯಲ್ಲ. ತ್ಯಾಗರಾಜರಂತಹ ಇನ್ನೂ ಅನೇಕ ಮಹಾನುಭಾವರ ಬಗೆಗೆ ವಿಷಯಗಳು ನಿಖರವಾಗಿ, ಆದ್ಯಂತವಾಗಿ ಹೇಳುವುದು ಕಷ್ಟಸಾಧ್ಯವೆಂಬುದು ದುರದೃಷ್ಟದ ಸಂಗತಿ. ಇಂತಹ ಅಸ್ಪಷ್ಟತೆಗೆ ಮುಖ್ಯ ಕಾರಣಗಳನ್ನು ಹೀಗೆ ಊಹಿಸಬಹುದು.

೧ ಇವರು ಸ್ವವಿಷಯ ಅಭಿವ್ಯಕ್ತಿಯಲ್ಲಿ ಉದಾಸೀನರಾಗಿದ್ದುದು.

೨ ಸ್ವಂತ ವಿಷಯ ಹೇಳುವುದಕ್ಕಿಂತ ಹೆಚ್ಚಾಗಿ ತಮ್ಮ ಭಕ್ತಿಭಾವಕ್ಕೆ ಅಭಿವ್ಯಕ್ತಿ ನೀಡುವ ಉದ್ದೇಶ ಹೊಂದಿದ್ದುದು.

ಇಂತಹ ಕಾರಣಗಳು ಇವರ ಜೀವನ ಚರಿತ್ರೆಯನ್ನು ರೂಪಿಸುವಲ್ಲಿ ಮುಂದಿನವರ ಊಹಾಪೋಹಗಳಿಗೆ ಎಡೆಮಾಡಿಕೊಡುವಂತಾಗಿದೆ. ಇದು ಇತಿಹಾಸದ ದೃಷ್ಟಿಯಿಂದ ಲೋಪವಿರಬಹುದು. ಆದರೂ ಇಂತಹವರು ತಮ್ಮ ಜೀವಿತರೀತಿ ಮತ್ತು ಸಾಹಿತ್ಯಸಿದ್ಧಿಗಳಿಂದ ಚಿರಂತನರಾಗುತ್ತಾರೆ. ಇವರ ಸಾಹಿತ್ಯದಿಂದ ಜನತೆ ಕಾರ್ಯ ಪ್ರಚೋದನೆ, ಬೋಧನೆ, ಸ್ಫೂರ್ತಿಯ ನೆಲೆಯನ್ನು ಕಾಣಲು ಸಾಧ್ಯವಾಗುತ್ತದೆ. ಹೀಗೆ ಮಹಾಪುರುಷರನ್ನು ಲೋಕಕ್ಕೆ ಪರಿಚಯಿಸುವಾಗ ಪವಾಡಗಳೊಂದಿಗೆ ಹೇಳುವುದು ಅಧ್ಯಾತ್ಮ ದೃಷ್ಟಿಯಿಂದ ಅಪಾಯಕಾರಿ ಎಂದರೂ, ಜನತೆ ನೀತಿ, ಔದಾರ್ಯಗಳನ್ನು ಬೆಳೆಸಿಕೊಳ್ಳುವಲ್ಲಿ ಉಪಕಾರಿ ಎಂಬ ಅಂಶವನ್ನು ನಾವು ಮರೆಯುವಂತಿಲ್ಲ.

ಪ್ರಸ್ತುತ ತ್ಯಾಗರಾಜರನ್ನು ಅವತಾರಪುರುಷರೆಂದರೂ, ಆಧಿಕಾರಿಕಪುರುಷರೆಂದರೂ ಒಪ್ಪುತ್ತದೆ. ಇವರ ಔನ್ನತ್ಯದ ಹಿರಿಮೆಯಿಂದಲೇ ಇವರನ್ನು ನಾರದಾಂಶ ಸಂಭೂತರೆಂದೂ ಕೆಲವರು ಅಭಿಪ್ರಾಯಪಟ್ಟಿದ್ದಾರೆ. ಒಟ್ಟಾರೆ ತ್ಯಾಗರಾಜರ ಜೀವನ ಚರಿತ್ರೆಯನ್ನು ಕೆಳಗಿನ ಅಂಶಗಳ ಆಧಾರದ ಮೇಲೆ ಸಂಗ್ರಹವಾಗಿ ಇಲ್ಲಿ ಸಿದ್ಧಪಡಿಸಲಾಗಿದೆ.

೧. ತ್ಯಾಗರಾಜರು, ತಮ್ಮ ಶಿಷ್ಯರು ಮತ್ತು ಅನುಯಾಯಿಗಳಿಂದ ಭಕ್ತಾಗ್ರೇಸರನೆಂದೂ, ಉತ್ತಮ ವಾಗ್ಗೇಯಕಾರನೆಂದೂ ಆದರಿಸಲ್ಪಟ್ಟಿದ್ದಾರೆ. ಈ ಸಾಲಿನಲ್ಲಿ ಸೌರಾಷ್ಟ್ರ ಪೀಳಿಗೆಯ ವೆಂಕಟರಮಣ ಭಾಗವತರು ಮತ್ತು ಕೃಷ್ಣಸ್ವಾಮಿ ಭಾಗವತರು ಪ್ರಮುಖರು. ತ್ಯಾಗರಾಜರ ಜೀವಿತವನ್ನು ಕುರಿತಂತೆ ಇವರು ನೀಡುವ ಮಾಹಿತಿಗಳು ಅತಿ ಪ್ರಾಚೀನವಾದ ದಾಖಲೆಗಳಾಗಿವೆ.

೨. ವಾಗ್ಗೇಯಕಾರರ ಜೀವನ ಚರಿತ್ರೆಯನ್ನು ಗ್ರಂಥಗಳಲ್ಲಿ ಪೂರ್ವ ಪೀಠಿಕೆಯಾಗಿ ನೀಡುವುದೊಂದು ಸಂಪ್ರದಾಯ. ಹೀಗೆ ಬೇರೆಬೇರೆ ಗ್ರಂಥಗಳಲ್ಲಿ ತ್ಯಾಗರಾಜರಿಗೆ ಸಂಬಂಧಿಸಿದ ಪೀಠಿಕಾಂಶಗಳು.

೩. ಎಲ್ಲಕ್ಕಿಂತ ಮುಖ್ಯವಾಗಿ ತ್ಯಾಗರಾಜರ ರಚನೆಗಳ ಸಾಹಿತ್ಯದಲ್ಲೇ ಕಂಡು ಬರುವ ಕೆಲವು ಆಧಾರಗಳು.

ತ್ಯಾಗರಾಜರು ಪ್ರಮುಖ ಸಂಪ್ರದಾಯದ ಪ್ರಕಾರ ಸರ್ವಜಿತು ಸಂವತ್ಸರದ, ಎಂದರೆ, ಕ್ರಿ. ಶ. ೧೭೬೭ನೇ ಮೇ ತಿಂಗಳ ನಾಲ್ಕರಂದು ಜನಿಸಿದರು.[೪] ಇವರ ಹುಟ್ಟೂರು ತಿರುವಾರೂರು. ಇದು ಸಂಗೀತ ಪರಂಪರೆ, ಸಾಂಸ್ಕೃತಿಕ ಚಟುವಟಿಕೆಗಳ ಒಂದು ದೊಡ್ಡ ನೆಲೆಯೂ, ಧರ್ಮದ ಬೀಡೂ ಆಗಿದ್ದಿತು.[೫] ಈ ಊರಿನಲ್ಲಿದ್ದ ಕಾಕರ್ಲ ವಂಶ, ಭರದ್ವಾಜ ಗೋತ್ರ, ಆಪಸ್ತಂಭ ಸೂತ್ರ ಮುಲಕನಾಡು ತ್ರೈಲಿಂಗ ಬ್ರಾಹ್ಮಣರಾದ ರಾಮಬ್ರಹ್ಮರು ತ್ಯಾಗರಾಜರ ತಂದೆ, ತಾಯಿ ಸೀತಮ್ಮ.* ತ್ಯಾಗರಾಜರು ತಮ್ಮ ತಾಯಿ, ತಂದೆ ಹಾಗೂ ವಂಶದ ವಿವರಗಳನ್ನು ಕೆಳಗಿನಂತೆ ಉಲ್ಲೇಖಿಸುತ್ತಾರೆ.

**ಶ್ರೀ ರಾಮಬ್ರಹ್ಮ ಸ್ವರೂಪುಡನದಗು ರಾಮಬ್ರಹ್ಮಾರ್ಯ ಸುತುಡು**

(ಶ್ರೀ ರಾಮಬ್ರಹ್ಮ ಸ್ವರೂಪನಾದ ರಾಮಬ್ರಹ್ಮಾರ್ಯನ ಮಗ)

**—ಪ್ರಹ್ಲಾದ ಭಕ್ತಿವಿಜಯದ ಪ್ರಥಮಾಂಕದಲ್ಲಿನ ಕಂದಪದ್ಯ**

**ಸುಗುಣ ರಾಮಬ್ರಹ್ಮ ಸುತುಡೈನ ತ್ಯಾಗರಾಜು**

(ಸದ್ಗುಣಿ ರಾಮಬ್ರಹ್ಮನ ಮಗನಾದ ತ್ಯಾಗರಾಜ)

**—ಪ್ರಹ್ಲಾದ ಭಕ್ತಿವಿಜಯದ ಆದಿದ್ವಿಪದಿ**

**ಶ್ರೀ ರಾಮಬ್ರಹ್ಮ ತನಯ**

(ಶ್ರೀ ರಾಮಬ್ರಹ್ಮರ ಪುತ್ರ)

**—ಪ್ರಹ್ಲಾದ ಭಕ್ತಿವಿಜಯದ ಫಲಶ್ರುತಿ**

**ರಾಮಬ್ರಹ್ಮ ತನಯುಡೌ ತ್ಯಾಗರಾಜು**

(ರಾಮಬ್ರಹ್ಮ ತನಯನಾದ ತ್ಯಾಗರಾಜ)

**—ದೊರಕುನಾ ಇಟುವಂಟಿಸೇವ - ಬಿಲಹರಿ - ಆದಿತಾಳ**

**ಸೀತಮ್ಮ ಮಾಯಮ್ಮ ಶ್ರೀರಾಮುಡು ಮಾಕುತಂಡ್ರಿ**

(ಸೀತಮ್ಮ ನಮ್ಮ ತಾಯಿ ಶ್ರೀರಾಮನು ನಮ್ಮ ತಂದೆ)

**—ಸೀತಮ್ಮ ಮಾಯಮ್ಮ - ವಸಂತ - ರೂಪಕತಾಳ**

**ಕಾಕರ್ಲಾಂಬುಧಿ ಚಂದ್ರುಡು ಶ್ರೀಕರುಡಗು ತ್ಯಾಗರಾಜ ಚಿತ್ತನಿವೇಶಾ**

(ಕಾಕರ್ಲ ವಂಶ ಚಂದ್ರನಾದ, ಮಂಗಳಕರನಾದ ತ್ಯಾಗರಾಜನ ಚಿತ್ತವಾಸಿ)

**—ನೌಕಾಚರಿತ್ರೆಯ ಆರಂಭದ ಕಂದಪದ್ಯ**

---

* ಈಕೆಯ ವಿವಾಹದ ಮುಂಚಿನ ಹೆಸರು ಶಾಂತಮ್ಮ ಅಥವಾ ಶಾಂತಾಮಣಿ. ವಿವಾಹ ಸಮಯದಲ್ಲಿ ಹೊಸದಾಗಿ ಹೆಸರಿಡುವ ಸಂಪ್ರದಾಯದಂತೆ ಈಕೆ ಸೀತಮ್ಮ ಆದರೆಂಬ ಅಭಿಪ್ರಾಯ ವುಂಟು.

ರಾಮಬ್ರಹ್ಮರಿಗೆ ಪಂಚಾಪಕೇಶ (ಜಪೇಶ ಅಥವಾ ಜಲ್ಪೇಶ), ರಾಮನಾಥ ಮತ್ತು ತ್ಯಾಗರಾಜರೆಂಬ ಮೂವರು ಗಂಡುಮಕ್ಕಳು.[1] ಇವರಲ್ಲಿ ಮೊದಲಿನ ಇಬ್ಬರು ಸಾಮಾನ್ಯವಾದ ಲೌಕಿಕ ಜೀವನ ನಡೆಸುತ್ತಿದ್ದವರು. ಮೂರನೆಯ ಮಗನ ಜನನಕ್ಕೆ ಮುಂಚೆ ರಾಮಬ್ರಹ್ಮರ ಕನಸಿನಲ್ಲಿ ದೇವರೇ ಕಾಣಿಸಿಕೊಂಡು, ಅವರಿಗೊಬ್ಬ ಪುತ್ರ ಜನಿಸಲಿರುವನೆಂದೂ, ಆತ ದೈವಾಂಶಸಂಭೂತನೆಂದೂ, ಅವನಿಗೆ ತ್ಯಾಗರಾಜನೆಂದೇ ನಾಮಕರಣ ಮಾಡಬೇಕೆಂದೂ ಆದೇಶ ನೀಡಿದನು. ರಾಮಬ್ರಹ್ಮರು ಪುತ್ರರೊಂದಿಗೆ ಕಾಶೀಯಾತ್ರೆ ಕೈಗೊಂಡಾಗ, ತಿರುವಾರೂರಿಗೆ ಹತ್ತಿರವಿರುವ ತಿರುವೈಯಾರಿನಲ್ಲಿ ನೆಲೆಸುವಂತೆ ಭಗವದಾಜ್ಞೆಯಾಯಿತು. ಈ ವಿಷಯವನ್ನು ಅಂದು ರಾಜನಾಗಿದ್ದ ಎರಡನೇ ತುಳಜನಿಗೆ ರಾಮಬ್ರಹ್ಮರು ತಿಳಿಸಲು, ಇದರ ಮರ್ಮವರಿತ ರಾಜ ತುಳಜ, ರಾಮಬ್ರಹ್ಮರ ಜೀವಿತಕ್ಕನುಕೂಲವಾಗುವಂತೆ ತಿರುವೈಯಾರಿನಲ್ಲಿ ಮನೆಯೊಂದನ್ನೂ, ಪಶುಪತಿ ಕೋವಿಲ್ ಎಂಬಲ್ಲಿ ಸ್ವಲ್ಪ ಭೂಮಿಯನ್ನೂ ನೀಡಿದನು. ಹೀಗಾಗಿ ತ್ಯಾಗರಾಜರ ಜನ್ಮಸ್ಥಳ ತಿರುವಾರೂರಾದರೂ ಜೀವಿಸಿದ ಸ್ಥಳ ತಿರುವೈಯಾರ್ ಆಯಿತು. ಇಲ್ಲಿ ಪವಿತ್ರವಾದ ಪಂಚ ನದಿಗಳು ಹರಿಯುವುದರಿಂದಲೇ ಇದಕ್ಕೆ ತಿರುವೈಯಾರು ಎನ್ನುತ್ತಾರೆ.[2]

ರಾಮಬ್ರಹ್ಮರು ತೆಲುಗು, ಸಂಸ್ಕೃತ ಭಾಷೆಗಳಲ್ಲಿ ಪಂಡಿತರು. ರಾಮಾಯಣ ಪ್ರವಚನ ನಿಷ್ಣಾತರು. ರಾಜಾಸ್ಥಾನದಲ್ಲಿ ರಾಮಾಯಣ ಪ್ರವಚನ ಮಾಡುತ್ತಿದ್ದವರು. ಪ್ರವಚನಕ್ಕೆ ಹೋಗುವಾಗ ಬಾಲಕ ತ್ಯಾಗರಾಜರನ್ನೂ ಜೊತೆಗೊಯ್ಯುತ್ತಿದ್ದರು. ತಾಯಿ ಸೀತಮ್ಮ ಪರಮ ಭಕ್ತೆಯೂ, ಸುಶ್ರಾವ್ಯ ಕಂಠವುಳ್ಳವರೂ ಆಗಿ, ಕ್ಷೇತ್ರಯ್ಯ, ಪುರಂದರ ಜಯದೇವಾದಿಗಳ ಭಕ್ತಿಪೂರ್ಣ ರಚನೆಗಳನ್ನು ಮನೆಯಲ್ಲಿ ಹಾಡುತ್ತಿದ್ದರು. ಇವುಗಳ ಕೇಳ್ಮೆ ತ್ಯಾಗರಾಜರಿಗೆ ಬಾಲ್ಯದಲ್ಲೇ ಚೆನ್ನಾಗಿದ್ದಿತು. ತಂದೆಯ ತಂದೆ ಗಿರಿರಾಜ ಬ್ರಹ್ಮರು ಪಂಡಿತರೂ, ತಾಯಿಯ ತಂದೆ ಕಾಳಹಸ್ತೀಶ ಅಯ್ಯರ್ ವೀಣಾ ವಿದ್ವಾಂಸರೂ ಆಗಿದ್ದರು. ಹೀಗಾಗಿ ಹುಟ್ಟಿನಿಂದಲೇ ತ್ಯಾಗರಾಜರಿಗೆ ಭಕ್ತಿ, ಸಂಗೀತ ಮತ್ತು ಭಾಷೆಗಳ ಜ್ಞಾನವಾಹಿನಿ ಉಂಟಾಗಿದ್ದಿತು. ಮುಂದೆ ತಂದೆಯಿಂದಲೇ ಸಂಸ್ಕೃತಾಂಧ್ರ ಭಾಷೆಗಳನ್ನು ಕಲಿತು ತಿರುವೈಯಾರಿನ ಸಂಸ್ಕೃತ ಪಾಠಶಾಲೆಯಲ್ಲಿ ಅಧ್ಯಯನ ಮುಂದುವರೆಸಿದರು. ತಾಯಿ ಹಾಡುತ್ತಿದ್ದ ಹಾಡುಗಳಿಂದಲೂ, ತಂದೆ ನಡೆಸುತ್ತಿದ್ದ ಉದ್ಗ್ರಂಥಗಳ ಪ್ರವಚನದಿಂದಲೂ ಪ್ರಭಾವಿತರಾಗಿ, ತ್ಯಾಗರಾಜರು ಬಾಲ್ಯದಲ್ಲೆ ಭಾಷಾ ಪ್ರಾವೀಣ್ಯವನ್ನೂ, ಭಕ್ತಿಯನ್ನೂ ಹೊಂದಿದರು. ಅಲ್ಲದೆ ರಾಮತಾರಕ ಹಾಗೂ ಶಿವಪಂಚಾಕ್ಷರೀ ಮಂತ್ರೋಪದೇಶಗಳೂ ತ್ಯಾಗರಾಜರಿಗೆ ಲಭ್ಯವಾಯಿತು.

ರಾಮಬ್ರಹ್ಮರು ಮಗನಲ್ಲಿದ್ದ ಸಂಗೀತಾಸಕ್ತಿಯನ್ನು ಗುರುತಿಸಿ ತಂಜಾವೂರಿನ ಆಸ್ಥಾನವಿದ್ವಾಂಸರಾಗಿದ್ದ ಸೊಂಟಿ ವೆಂಕಟರಮಣಯ್ಯನವರಲ್ಲಿ (ಸೊಂಟಿ ವೆಂಕಟದಾಸ) ಸಂಗೀತ ಶಿಕ್ಷಣಕ್ಕಾಗಿ ಏರ್ಪಡಿಸಿದರು. ಕೆಲವೇ ಸಮಯದಲ್ಲಿ ವೀಣಾವಾದನದಲ್ಲೂ, ಗಾಯನದಲ್ಲೂ ಪ್ರಾವೀಣ್ಯ ಪಡೆದ ತ್ಯಾಗರಾಜರು ತಾತನ ಬಳಿಯಿದ್ದ

ಸಂಗೀತಶಾಸ್ತ್ರ ಗ್ರಂಥಗಳನ್ನು ಅಧ್ಯಯನಮಾಡಿದರು. ಆಗ ತಮಗೆ ಮೂಡಿದ ಸಂಶಯ ಗಳನ್ನು ನಿವಾರಿಸುವಂತೆ ಕಾಂಚೀಪುರದಿಂದ ಪಂಚನದ ಕ್ಷೇತ್ರಕ್ಕೆ ಬಂದಿದ್ದ ರಾಮಕೃಷ್ಣ ಯತೀಂದ್ರರೆಂಬ ಭಾಗವತೋತ್ತಮರಲ್ಲಿ ಪ್ರಾರ್ಥಿಸಿದರು. ರಾಮಕೃಷ್ಣರು, "ಗುರು ನಾರದರಲ್ಲಿ ಭಕ್ತಿಯನ್ನು ಬೆಳೆಸಿಕೋ, ನಾರದರು ನಿನ್ನಲ್ಲಿನ ಸಂದೇಹಗಳನ್ನು ನಿವಾರಿಸು ತ್ತಾರೆ" ಎಂದು ದಾರಿ ತೋರಿದರು. ಇದರಿಂದ ಕೃತಾರ್ಥರಾದ ತ್ಯಾಗರಾಜರು ಮಾರ್ಗದರ್ಶಿಗಳಾದ ನಾರದಗುರು ಮತ್ತು ರಾಮಕೃಷ್ಣರಿಗೆ ಹೀಗೆ ನಮಸ್ಕರಿಸುತ್ತಾರೆ.

**ಮ್ರೊಕ್ಕೆದ ದೇಶಿಕ ವರುನಕು, ಮ್ರೊಕ್ಕೆದ ರಾಮಕೃಷ್ಣ ಮೋದಾಖ್ಯುನಕುನ್**

(ದೇಶಿಕ ಮುನಿಗೂ ರಾಮಕೃಷ್ಣ ಮೋದಾಖ್ಯನಿಗೂ ನಮಸ್ಕರಿಸುತ್ತೇನೆ)

**—ನೌಕಾಚರಿತ್ರೆಯ ಆರಂಭದಲ್ಲಿ ಮೂರನೇ ಕಂದಪದ್ಯ**

ರಾಮಕೃಷ್ಣರ ಉಪದೇಶದಂತೆ ತ್ಯಾಗರಾಜರು ಗುರುವರ ನಾರದರಲ್ಲಿ ವಿಶೇಷ ಭಕ್ತಿ ಬೆಳೆಸಿಕೊಂಡರು. ಒಮ್ಮೆ ನಾರದರು ಸನ್ಯಾಸಿ ವೇಷದಲ್ಲಿ ಬಂದು 'ನಾರದೀಯ' ಮತ್ತು 'ಸ್ವರಾರ್ಣವ' ಎಂಬ ಸಂಗೀತ ಗ್ರಂಥಗಳನ್ನು ನೀಡಿ ಅವುಗಳನ್ನು ಅಧ್ಯಯನ ಮಾಡು ವಂತೆ ಆದೇಶಿಸಿದರೆಂದು ಪ್ರತೀತಿ. ಸ್ವರಾರ್ಣವ ಗ್ರಂಥದ ಉಲ್ಲೇಖ ಅವರ ರಚನೆ ಯಲ್ಲಿ ಕಾಣಬರುವುದಾದರೂ ನಾರದೀಯದ ಪ್ರಸ್ತಾಪ ಕಾಣಬರುವುದಿಲ್ಲ.

**ಸ್ವರಾರ್ಣವ ಮರ್ಮಮುಲು ವಿಜಯಮುಗಲ ತ್ಯಾಗರಾಜುಡೆರಿಗೆ**

**(ಸ್ವರರಾಗ ಸುಧಾರಸಯುತ - ಶಂಕರಾಭರಣ - ಆದಿತಾಳ)**

ಸ್ವರಾರ್ಣವ ಮರ್ಮಗಳನ್ನು ತ್ಯಾಗರಾಜರು ಅರಿತ ಮೇಲಿನ ಈ ಸಾಲಿನಲ್ಲಿ, ಸ್ವರಾ ರ್ಣವವು ನಾರದರಿಂದ ಕೊಡಲ್ಪಟ್ಟುದರ ಬಗೆಗೆ ಸ್ಪಷ್ಟತೆಯಿಲ್ಲ. ಆದರೆ ಈ ಗ್ರಂಥದ ಮರ್ಮವನ್ನಂತೂ ತ್ಯಾಗರಾಜರು ತಿಳಿದಿದ್ದಾರೆ. ಹೀಗೆ ತ್ಯಾಗರಾಜರು ಆರ್ಷೇಯ, ಪೌರುಷೇಯಗಳನ್ನೂ, ಭಕ್ತಿ ಸಂಗೀತಗಳನ್ನೂ ಪೂರ್ಣವಾಗಿ ಅರಿತರು. ಇಂತಹ ಸುಸಂಸ್ಕೃತ ಹಿನ್ನೆಲೆಯಲ್ಲಿ ತ್ಯಾಗರಾಜರ ಬಾಲ್ಯ ವಿಕಸಿತವಾಯಿತು. ಆದ್ದರಿಂದಲೇ ತ್ಯಾಗರಾಜರು ಬಾಲ್ಯದಿಂದಲೂ ಸಾಮಾನ್ಯ ಮಗುವಿನಂತಲ್ಲದೆ, ರಾಮಸ್ವಪ್ನವನ್ನೇ ಕಂಡು **ತ್ಯಾಗ-ರಾಜರೇ** ಆದರು. ಲೌಕಿಕವಾದ ಯಾವ ಆಸೆಯೂ ಇಲ್ಲದ ಅವರು ವೈರಾಗ್ಯನಿಧಿಯೇ ಆಗಿದ್ದರು.

ಮಕ್ಕಳ ವ್ಯಕ್ತಿತ್ವ ರೂಪುಗೊಳ್ಳುವಲ್ಲಿ ಹಿರಿಯರ ಸ್ಥಾನ ಮಹತ್ವದ್ದು. ಅದರಲ್ಲೂ ಬಾಲ್ಯದ ದಿನಗಳು ಅವರ ಮುಂದಿನ ಜೀವಿತದ ಮೇಲೆ ಅಗಾಧ ಪರಿಣಾಮ ಬೀರು ತ್ತದೆ. ಆ ದಿನಗಳಲ್ಲಿ ಮಗು ಕಂಡುಂಡ ಅನುಭವಗಳು ಮನಃಪಟಲದಲ್ಲಿ ಅಚ್ಚೊತ್ತಿ ಉಳಿಯುತ್ತದೆ. ಇಂತಹ ಮಗು ಮುಂದೆ ಕವಿಯೋ, ಸಾಹಿತಿಯೋ, ಕಲೆಗಾರನೋ ಆದರೆ ತನ್ನ ಅನುಭವಗಳನ್ನು ತನ್ನ ಕಲೆಯ ಮೂಲಕ ಸಮರ್ಥವಾಗಿ ಚಿತ್ರಿಸುತ್ತಾನೆ. ಅದರಂತೆಯೇ ತ್ಯಾಗರಾಜರು ತಾವು ವೇದಶಾಸ್ತ್ರ·ಉಪನಿಷತ್ತುಗಳಲ್ಲಿ ಪರಿಣತರಾದು ದನ್ನೂ, ಭಕ್ತಿಜೀವನ ಹಿರಿಯರಿಂದ ತಮಗೆ ಉಪಲಬ್ಧವಾದುದನ್ನೂ, ತಾವು ಸ್ವಜನ

ಹಾಗೂ ಇತರರಿಂದ ಹಲವು ರೀತಿಯ ಉಪಟಳಕ್ಕೆ ಒಳಗಾದುದನ್ನೂ ತಮ್ಮ ಹಾಡಿನ ಮೂಲಕ ಅಭಿವ್ಯಕ್ತಿಸಿದರು.

**ಅವನಿಲೋನ ಆರ್ಷೇಯ ಪೌರುಷೇಯಮಂದಿ**
(ಇಹದಲ್ಲಿ ಆರ್ಷೇಯ ಪೌರುಷೇಯಗಳನ್ನು ಅರಿತು)
**(ಎವರಿಮಾಟ - ಕಾಂಬೋಜಿ - ಆದಿತಾಳ)**

**ವೇದಶಾಸ್ತ್ರೋಪನಿಷತ್ ವಿಧುಡೈನ**
(ವೇದಶಾಸ್ತ್ರ ಉಪನಿಷತ್‌ಗಳಲ್ಲಿ ವಿದ್ವಾಂಸನಾದ)
**(ಆಟುಕಾರಾದನಿ - ಮನೋರಂಜನಿ - ಆದಿತಾಳ)**

**ತಲ್ಲಿ ತಂಡ್ರಿ ಭಕ್ತಿನೊಸಂಗಿ ರಕ್ಷಿಂಚಿರಿ**
(ತಾಯಿ ತಂದೆಯರು, ಭಕ್ತಿಯನ್ನಿತ್ತು ರಕ್ಷಿಸಿದರು.)
**(ಪಲುಕವೇಮಿ-ಪೂರ್ಣಚಂದ್ರಿಕಾ - ಆದಿತಾಳ)**

ಶಾಸ್ತ್ರಪ್ರಕಾರ ತ್ಯಾಗರಾಜರಿಗೆ ಉಪನಯನ, ವಿವಾಹಗಳು ಸೂಕ್ತ ವಯಸ್ಸಿನಲ್ಲಿ ನಡೆದವು. ಈ ಮಧ್ಯೆ ಅವರಿಗೆ ಮೊದಲು ಪಿತೃವಿಯೋಗವೂ ಅನಂತರ ಮಾತೃ ವಿಯೋಗವೂ ಉಂಟಾದವು. ಪಾರ್ವತಿಯನ್ನು ವಿವಾಹವಾದ ಕೆಲವೇ ವರ್ಷಗಳಲ್ಲಿ ಆಕೆ ಸ್ವರ್ಗಸ್ಥಳಾದ ಕಾರಣ ಅವರು ಕಮಲಾಂಬಳನ್ನು[೮] ವಿವಾಹವಾದರು. ಇವರಿಗೆ ಸೀತಾ ಲಕ್ಷ್ಮಿಯೆಂಬ ಪುತ್ರಿ ಜನನವಾಯಿತು. ಇದು ಅವರಿಗಿದ್ದ ಏಕೈಕ ಸಂತತಿ. ಗಂಡು ಸಂತತಿ ತ್ಯಾಗರಾಜರಿಗೆ ಇರಲಿಲ್ಲ.

ತ್ಯಾಗರಾಜರು ಚಿಕ್ಕಂದಿನಿಂದಲೂ ಪ್ರತಿದಿನ ತಂದೆ ನಡೆಸುತ್ತಿದ್ದ ಪೂಜಾದಿಗಳಲ್ಲಿ ಪಾಲ್ಗೊಳ್ಳುವುದು, ತ್ರಿಕಾಲಗಳಲ್ಲಿ ಭಗವತ್ಸೇವೆ ಮಾಡುವುದು ರೂಢಿಯಾಗಿದ್ದಿತು. ಅನಂತರ ಅವರು ಬೆಳಗಿನ ಝಾವವೇ ಎದ್ದು ತಂಬೂರಿ ಹಿಡಿದು ಹರಿಗುಣಗಾನ ಮಾಡುತ್ತಿದ್ದರು. ದೇವರಿಗೆ ಪನ್ನೀರ ಸ್ನಾನ, ಹಾಲು ಮತ್ತು ದಿವ್ಯಭೋಜನಗಳ ನೈವೇದ್ಯ ಹಾಗೂ ವೀಳ್ಯ ನೀಡುತ್ತಿದ್ದರು. ಭಾಗವತರೊಂದಿಗೆ ದೀಪಾರಾಧನೆ ಮಾಡು ತ್ತಿದ್ದರು. (ಕೊಲುವ ಮರೆಗದಾ - ತೋಡಿ) ಪೂಜೆಯ ಒಂದು ಭಾಗವೋ ಎಂಬಂತೆ ಅವರು ಹಾಡುಗಳನ್ನು ರಚಿಸಲಾರಂಭಿಸಿದರು. ಇವರು ರಚಿಸಿದ ಮೊದಲ ರಚನೆ ಯಾವುದು ಎಂಬ ಬಗೆಗೆ ವಿದ್ವಾಂಸರಲ್ಲಿ ಅಭಿಪ್ರಾಯ ಭೇದವುಂಟು.[೯] ಆದರೆ 'ನಮೋನಮೋ ರಾಘವಾಯ' ಎಂಬ ಸರಳವಾದ ರಾಮಸ್ತುತಿಯಿಂದ ಅವರು ತಮ್ಮ ಕವಿಜೀವನವನ್ನು ಆರಂಭಿಸಿದರೆನ್ನಲು ಅಭ್ಯಂತರವಿಲ್ಲ.

ತಂದೆ ರಾಮಬ್ರಹ್ಮರು ಜೀವಿಸಿದ್ದ ಕಾಲದಲ್ಲೇ ತ್ಯಾಗರಾಜರು ಕೃತಿರಚನೆ ಮಾಡಿ ದ್ದರು. ಅವರ ಮೊದಲಿನ ರಚನೆಗಳನ್ನು ರಾಮಬ್ರಹ್ಮರು, ವಿದ್ವಾಂಸರಲ್ಲಿ ತೋರಿಸಿ ದಾಗ, ಅವು ವಿದ್ವಾಂಸರ ಪೂರ್ಣ ಮೆಚ್ಚುಗೆಯನ್ನು ಪಡೆದುವು. ಇದರಿಂದ ಪ್ರೋತ್ಸಾ ಹಿತರಾದ ರಾಮಬ್ರಹ್ಮರು ಮಗನನ್ನು ಕೃತಿರಚನೆಗಾಗಿ ಉತ್ತೇಜಿಸಿದರು. ಕಾಲಕ್ರಮ

ದಲ್ಲಿ ತ್ಯಾಗರಾಜರು ನೂರಾರು ರಚನೆಗಳನ್ನು ರಚಿಸಿ ಹಾಡಿದರು. ಭಕ್ತಿಪೂರಿತವಾಗಿ, ಸತ್ವಯುತವಾಗಿ ಮೂಡಿಬಂದ ಇವರ ಆಶುಕವಿತೆಗಳು ಕೇಳುಗರ ಮನಸ್ಸನ್ನು ನೇರ ವಾಗಿ ಮುಟ್ಟಿ ಇವರ ಖ್ಯಾತಿ ಎಲ್ಲೆಡೆ ಪಸರಿಸಿತು.

ತ್ಯಾಗರಾಜರ ಜೀವಿತದ ಮಹೋದ್ದೇಶ ಶ್ರೀರಾಮಸ್ತುತಿಯಷ್ಟೆ. ಈಗಾಗಲೇ ವಾಲ್ಮೀಕಿ ಮುಂತಾದ ಮುನಿಗಳೂ ಇತರ ಭಕ್ತರೂ ಶ್ರೀರಾಮನನ್ನು ವರ್ಣಿಸಿರ ಬಹುದು. ಆದರೆ ಅಷ್ಟರಿಂದಲೇ ತ್ಯಾಗರಾಜರಿಗೆ ತೃಪ್ತಿಯಿಲ್ಲ. ಅವರು ಸ್ವತಃ ರಾಮ ವರ್ಣನೆಯಲ್ಲಿ ತೊಡಗಬೇಕೆಂದೇ ಹುಟ್ಟಿದವರು. ಇದನ್ನು ಅವರು ಕೆಳಗಿನ ಸಾಲಿನಲ್ಲಿ ನಿರೂಪಿಸುತ್ತಾರೆ.

**ಏಪನಿಕೋ ಜನ್ಮಿಂಚಿತಿನನಿ ನೀವೆಂಚವಲದು**
**ವಾಲ್ಮೀಕಾದಿ ಮುನುಲು, ನರುಲು ನಿನ್ನು ವರ್ಣಿಂಚಿನ**
**ನಾಯಾಸ ದೀರುನಾ ?**

**(ಏಪನಿಕೋ - ಅಸಾವೇರಿ - ಆದಿತಾಳ)**

ಹೀಗೆ ಅವರು ಬೇರಾವ ಉದ್ದೇಶದಿಂದಲೂ ಜನಿಸಿರಲಿಲ್ಲ. ಅವರ ಜೀವಿತದ ಪರಮೋದ್ದೇಶ ರಾಮಸ್ತುತಿಯಷ್ಟೆ.

ಹೀಗಾಗಿ ತ್ಯಾಗರಾಜರು ಕೀರ್ತನ ಸುಶತಕವನ್ನೂ ರಚಿಸಿದ್ದಾರೆ.

**ಕೀರ್ತನ ಸುಶತಕ ಮೊನರ್ಚುಕೊನ್ನ ತ್ಯಾಗರಾಜ**
(ಕೀರ್ತನ ಸುಶತಕವನ್ನು ರಚಿಸಿದ ತ್ಯಾಗರಾಜ)

**(ಅಪರಾಧಮುಲನೋರ್ವ - ರಸಾಳಿ - ಆದಿತಾಳ)**

ಭವಸಾಗರದಿಂದ ಮುಕ್ತರಾಗಲು ಅವರು ರಚಿಸಿದ ಶತರಾಗರತ್ನ ಮಾಲಿಕೆಯನ್ನು ಧರಿಸಿ ಶ್ರೀಹರಿಯು ರಂಜಿಸಿದ್ದಾನೆ.

**ತ್ಯಾಗರಾಜು ಕಡತೇರ ತಾರಕಮನಿ ಜೇಸಿನ ಶತ**
**ರಾಗರತ್ನ ಮಾಲಿಕಚೇ ರಂಜಿಲ್ಲುನಟ ಹರಿ**

**(ರಾಗರತ್ನ ಮಾಲಿಕಚೇ - ರೀತಿಗೌಳ - ರೂಪಕತಾಳ)**

ವೈರಾಗ್ಯ ಮೂರ್ತಿಯಾದ ತ್ಯಾಗರಾಜರಿಗೆ ಖ್ಯಾತಿ, ಪ್ರತಿಷ್ಠೆಗಳ ಅಭಿಲಾಷೆಯಿರ ಲಿಲ್ಲ. ಅದರಿಂದ ಅವರು ತಾನಾಗಿ ಒದಗಿದ ರಾಜಾಹ್ವಾನಗಳನ್ನೂ ನಿರಾಕರಿಸಿದರು. ಶರಭೋಜ ಮಹಾರಾಜನಿಂದ ಬಂದ ಆಹ್ವಾನವನ್ನು ಒಪ್ಪುವಂತೆ ಸಹೋದರ ಜಪೇಶ ಒತ್ತಾಯಪಡಿಸಿದನು. ಅಣ್ಣನ ಮಾತನ್ನು ತ್ಯಾಗರಾಜರು ಒಪ್ಪಲಿಲ್ಲವಾಗಿ ಸಹೋದರ ರಲ್ಲಿ ಭಿನ್ನಾಭಿಪ್ರಾಯ ಮೂಡಿತು. ಇದು ತೀವ್ರಗೊಂಡು ಆಸ್ತಿ ವಿಭಾಗಕ್ಕೆ ದಾರಿಮಾಡಿ ಕೊಟ್ಟಿತು. ಪ್ರಾಪಂಚಿಕವಾಗಿ ಸುಖವಾಗಿರಬಹುದಾದ ಮಾರ್ಗವು ತಾನಾಗಿ ಒದಗಿ ಬಂದರೂ ಅವುಗಳೆಡೆ ತಿರಸ್ಕಾರ ಭಾವದಿಂದ ನೋಡಿದ ತ್ಯಾಗರಾಜರ ಮೇಲೆ ಜಪೇಶನಿಗೆ ಸಿಟ್ಟಾಯಿತು. ಈ ಸಿಟ್ಟಿನಿಂದ ಆತ ತ್ಯಾಗರಾಜರನ್ನು ನೇರವಾಗಿ ಶಿಕ್ಷಿಸ ಲಾಗದೆ ಅವರ ಪ್ರಿಯವಾದ ಆರಾಧನಾ ವಿಗ್ರಹಗಳನ್ನು ಅವರಿಂದ ದೂರಮಾಡಿದ.

ವಿಗ್ರಹಗಳನ್ನು ಬಾವಿಯಲ್ಲಿ ಅಥವಾ ಕಾವೇರಿ ನದಿಯಲ್ಲಿ ಎಸೆದನೆಂಬ ಹೇಳಿಕೆ ಗಳುಂಟು. ಆದರೆ ಇಲ್ಲೊಂದು ಮಾತು. ಪ್ರಾಪಂಚಿಕ ಆಸೆಗಳು ವ್ಯಕ್ತಿಯನ್ನು (ಆತ ಅಧ್ಯಾತ್ಮಿಕವಾಗಿ ಎಷ್ಟೇ ಉನ್ನತಿಯನ್ನು ಪಡೆದಿದ್ದರೂ) ಕೆಳಮಟ್ಟಕ್ಕೆ ಸೆಳೆಯುತ್ತವೆ. ಜಪೇಶನು ತೋರಿರಬಹುದಾದ ಈ ನಡವಳಿಕೆಯೂ ತಾತ್ಕಾಲಿಕವಾದದ್ದು. ರಾಮ ಬ್ರಹ್ಮರ ಮಗನಾಗಿ, ತ್ಯಾಗರಾಜರ ಸಹೋದರನಾಗಿ, ಭಕ್ತಿ ವಾತಾವರಣದಲ್ಲೇ ಬೆಳೆದ ಈತ ದೇವರ ವಿಗ್ರಹಗಳನ್ನು ಬಾವಿಗೆ ಅಥವಾ ಕಾವೇರಿ ನದಿಗೆ ಎಸೆಯುವಷ್ಟು ನೀಚತನಕ್ಕೆ ಇಳಿದಿರಲಾರ. ಅಲ್ಲದೆ ಈತ ಆನಂತರದ ಜೀವನದಲ್ಲಿ ಮಾರ್ಪಾಟು ಹೊಂದಿದ ವ್ಯಕ್ತಿ. ಸಾತ್ವಿಕ ಬೀಜ ಪೂರ್ವದಲ್ಲಿಲ್ಲದೆ ಒಬ್ಬನು ಒಮ್ಮೆಲೇ ಸಾತ್ವಿಕನಾಗು ವುದು ಅಸಂಗತ. ಅಭಾವದಿಂದ ಅಸ್ತಿತ್ವವೆಂದಿಗೂ ಸಾಧ್ಯವಿಲ್ಲ. ಹೀಗಾಗಿ ತ್ಯಾಗರಾಜರ ಈ ಸಹೋದರರನ್ನು ಹೀನವಾಗಿ ಕಾಣುವುದು ತಪ್ಪಾದೀತು.

ಶರಭೋಜಿಯಿಂದ ಬಂದ ಆಹ್ವಾನದಂತೆಯೇ ಸ್ವಾತಿತಿರುನಾಳ್ ಮಹಾರಾಜ ರಿಂದಲೂ ತ್ಯಾಗರಾಜರಿಗೆ ಆಹ್ವಾನ ಬಂದಿತು. ಸ್ವಾತಿತಿರುನಾಳರಿಗೆ ತ್ಯಾಗರಾಜರನ್ನು ಕಾಣುವ ಅಭಿಲಾಷೆಯಿದ್ದಿತು. ಇದಕ್ಕಾಗಿ ಅವರು ವಡಿವೇಲುವನ್ನು ರಾಯಭಾರಿಯಾಗಿ ಕಳುಹಿದರು. ವಡಿವೇಲು ತಿರುವ್ಯೆಯಾರಿಗೆ ಬಂದ ಕೆಲವು ಕಾಲದನಂತರ, ಸೂಕ್ತ ಸಮಯದಲ್ಲಿ ತಮ್ಮ ದೊರೆಯ ಅಪೇಕ್ಷೆಯನ್ನು ತ್ಯಾಗರಾಜರ ಮುಂದಿಟ್ಟರು. ಆದರೆ ಇದಕ್ಕೆ ತ್ಯಾಗರಾಜರ ಉತ್ತರ ಹೀಗಿದ್ದಿತು. 'ನಿಮ್ಮ ದೊರೆಯನ್ನು ಖಂಡಿತಾ ನೋಡು ತ್ತೇನೆ. ಆದರೆ ಈ ಲೋಕದಲ್ಲಲ್ಲ.' ತ್ಯಾಗರಾಜರು ತಮ್ಮ ಮಾತಿನಂತೆಯೇ ಈ ಲೋಕದಲ್ಲಿ ಸ್ವಾತಿತಿರುನಾಳರನ್ನು ಭೇಟಿಯಾಗಲೇ ಇಲ್ಲ.

ಹೀಗೆ ತ್ಯಾಗರಾಜರು ವೈರಾಗ್ಯದಿಂದಿದ್ದರೇ ಹೊರತು ಪ್ರಾಪಂಚಿಕರಂತೆ ಭವಸಾಗರ ದಲ್ಲಿ ಮುಳುಗಲಿಲ್ಲ. ಧನಿಕರನ್ನು ಯಾಚಿಸಲಿಲ್ಲ, ನರಸ್ತುತಿ ಮಾಡಲಿಲ್ಲ. ಈ ಲೋಕ ದಲ್ಲಿನ ಸಂಪತ್ತುಗಳೆಲ್ಲವೂ ಅಶಾಶ್ವತವೆಂದು ತಿಳಿದು ಪದೇಪದೇ ನುಡಿದರು, ನುಡಿ ದಂತೆ ನಡೆದರು. ಪತ್ನೀಪುತ್ರರನ್ನು ಸಲಹುವ ಸಲುವಾಗಿಯೂ ದುರ್ಮಾರ್ಗವನ್ನು ಅನುಸರಿಸಲಿಲ್ಲ. ರಾಮ ಸನ್ನಿಧಿಯನ್ನು ಪಡೆಯುವುದೇ ಹಿರಿದಾದ ನಿಧಿ ಎಂದು ಮತ್ತೆಮತ್ತೆ ಸ್ಪಷ್ಟಪಡಿಸಿದರು. ಇವರ ಈ ಅಭಿಪ್ರಾಯಗಳು ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಕೆಳಗಿನ ಸಾಲುಗಳಲ್ಲಿ ಮೂಡಿವೆ.

> ಎಲ್ಲವಾರಿವಲೆ ಭವಸಾಗರಮುನು ಈದ ಮನಸುರಾದು
> (ಎಲ್ಲರಂತೆ ಭವಸಾಗರದಲ್ಲಿ ಈಜುವ ಮನಸ್ಸಿಲ್ಲ)
>
> (ಸಿಗ್ಗುಮಾಲಿ - ಕೇದಾರಗೌಳ - ಆದಿತಾಳ)
>
> **ಧನಮದಮುನನುಂಡು ಜನುಲನು ನೇನು ಯಾ**
> **ಚನ ಸೇಯಗಲೇನುರಾ**
> (ಧನಮದದಲ್ಲಿರುವ ಜನರಲ್ಲಿ ನಾನು ಯಾಚಿಸಲಾರೆ)
>
> **(ಕರುಣಾಜಲಧೆ - ಕೇದಾರಗೌಳ - ಛಾಪು ತಾಳ)**

**ಕೊಂಚೆಪು ನರುಲ ನುಚಿಯಿಂಚನು ನಾವಲ್ಲನುಗಾದು**

(ಅಲ್ಪರಾದ ನರರನ್ನು ಸ್ತುತಿಸಲಾರೆ, ಅದು ನನ್ನಿಂದಾಗದು)

(ನಿನ್ನೇ ನೆರನಮ್ಮಿನಾನು - ಆರಭಿ - ಛಾಪು ತಾಳ)

**ಕೋಟೀಶುಲಗನಿ ಸಾಟಿಲೇನಿ ಪಲ್ಕುಬೋಟಿನಿ ನೊಸಗಿ**
**ಮುಮ್ಮಾಟಿಕಿ ವೇಡನು**

(ಕೋಟೀಶ್ವರರನ್ನು ಅಮಿತವಾಗಿ ಹೊಗಳುತ್ತಾ ಪುನಃಪುನಃ ಬೇಡಲಾರೆ)

(ನಾರಾಯಣ ಹರಿ - ಯಮುನಕಲ್ಯಾಣಿ - ಆದಿತಾಳ)

**ನೀರಜಲೋಚನ, ಮಾಕು ವಾಜಿ ಕರಿ ಧನಮುಲು ವರಮುಗಾದುರಾ**

(ನೀರಜಲೋಚನನೆ, ನಮಗೆ ಆನೆ, ಕುದುರೆ ಧನಾದಿಗಳು ಸಂಪತ್ತಲ್ಲ)

(ರಾಮ ನೀವಾದುಕೊಂದುವೋ - ಕಲ್ಯಾಣಿ - ಆದಿತಾಳ)

**ಧರಣೀಶುಲ ಚೆಲಿಮಿ ಒಕ ಪದವಾ ?**

(ಮಹಾರಾಜರ ಸ್ನೇಹವೇ ಒಂದು ಉತ್ತಮ ಪದವಿಯೇ ?)

(ಪದವಿ ನೀಸದ್ಭಕ್ತಿಯು ಗಲ್ಗುಟೇ - ಸಾಳಗಭೈರವಿ - ಆದಿತಾಳ)

**ಕಲಿಲೋ ಮಾಟಲು ನೇರ್ಚುಕೊನಿ**
**ಕಾಂತಲನು ತನಯುಲ ಬ್ರೋಚುಟಕೈ**
**ಶಿಲಾತ್ಮುಡೈ ಪಲುಕನೇರನುರ**

(ಈ ಲೋಕದಲ್ಲಿ ಮಾತು ಕಲಿತು, ಸತಿಸುತರನ್ನು ಕಾಪಾಡುವ ಸಲುವಾಗಿ
ಕಠೋರವಾಗಿ ಕಪಟ ಮಾತುಗಳನ್ನಾಡಲಾರೆ)

(ನೆನರುಂಚಿನಾನು - ಮಾಳವಿ - ದೇಶಾದಿತಾಳ)

**ಸಾರೆಕು ಮಾಯಾಸಾಗರಮಂದು ಮುನಿಗೇ ನೇಮಮುಲೇದು**

(ಮತ್ತೆ ಮತ್ತೆ ಭವಬಂಧನದಲ್ಲಿ ಮುಳುಗುವ ಅಪೇಕ್ಷೆಯಿಲ್ಲ)

(ವಾರಿಜನಯನ - ಕೇದಾರಗೌಳ - ಆದಿತಾಳ)

**ನಿಧಿ ಚಾಲ ಸುಖಮಾ ? ರಾಮುನಿ ಸನ್ನಿಧಿ ಸೇವ ಸುಖಮಾ ?**
**ನಿಜಮುಗ ಬಲ್ಕು ಮನಸಾ**

(ಪ್ರಾಪಂಚಿಕ ನಿಧಿ ಸೌಖ್ಯವೋ ಅಥವಾ ರಾಮ ಸನ್ನಿಧಿಯ ಸೇವೆ
ಸೌಖ್ಯವೋ? ಎಲೈ ಮನಸ್ಸೇ ನಿಜವಾಗಿ ಹೇಳು?)

(ನಿಧಿಚಾಲಸುಖಮಾ - ಕಲ್ಯಾಣಿ - ಛಾಪುತಾಳ)

ಹೀಗೆ ಲೌಕಿಕರು ಮುಖ್ಯವೆಂದು ಪರಿಗಣಿಸುವುದೆಲ್ಲವನ್ನೂ ಕ್ಷುಲ್ಲಕವಾಗಿ ಎಣಿಸಿದ ತ್ಯಾಗರಾಜರು, ಜೀವನ ನಿರ್ವಹಣೆಗಾಗಿ ಅನುಸರಿಸಿದ ಮಾರ್ಗ ಉಂಛವೃತ್ತಿ. ಭಾಗವತ ಧರ್ಮದಲ್ಲಿದು ಪವಿತ್ರವಾದುದು. ಲೋಭನಾಶ ಇದರ ಉದ್ದೇಶ. ಲೋಭವು

ಮನುಷ್ಯನನ್ನು ದೈವ ವಿಮುಖನನ್ನಾಗಿಸುವುದು. ಆದ್ದರಿಂದ ತ್ಯಾಗರಾಜರು ಇಂತಹ ಲೋಭಕ್ಕೆ ಒಳಗಾಗದೆ ಬೀದಿಬೀದಿಗಳಲ್ಲೂ ಭಗವನ್ನಾಮ ಸಂಕೀರ್ತನೆ ಮಾಡುತ್ತಾ ಭಕ್ತರು ನೀಡುತ್ತಿದ್ದ ಪದಾರ್ಥಗಳನ್ನು ತತ್ಕಾಲಕ್ಕಷ್ಟೇ ಸಂಗ್ರಹಿಸಿ ತನ್ನವರೆಲ್ಲರನ್ನೂ ನೋಡಿಕೊಳ್ಳುತ್ತಿದ್ದರು. ಇದರಿಂದಲೇ ಶ್ರೀರಾಮನ ಪೂಜೆಯೂ ನಡೆಯುತ್ತಿದ್ದಿತು. ಉಂಭವೃತ್ತಿಯ ಉಲ್ಲೇಖ ಅವರ ಈ ಕೆಳಗಿನ ಸಾಲಿನಲ್ಲಿದೆ.

**ಉಪ್ಪು ಕರ್ಪೂರಮುವರಕು ಉಂಭವೃತ್ತಿಚೇ ನಾರ್ಜಿಂಚಿ**

(ಉಪ್ಪಿನಿಂದ ಕರ್ಪೂರದವರೆಗೆ ಉಂಭವೃತ್ತಿಯಿಂದ ಆರ್ಜಿಸುತ್ತಾ)

**(ಎನ್ನಾಳ್ಳು ತಿರಿಗೇದಿ - ಮಾಳವಶ್ರೀ - ಆದಿತಾಳ)**

ಪ್ರಾಪಂಚಿಕರ ದೃಷ್ಟಿಗೆ ವಿಚಿತ್ರವಾಗಿ ತೋರುವ ತ್ಯಾಗರಾಜರ ಜೀವನ ರೀತಿಯನ್ನು ಕಂಡ ಸುತ್ತಮುತ್ತಲಿನ ಜನ ಇವರನ್ನು ಅಪಹಾಸ್ಯ ಮಾಡಿದರು, ನಿಂದಿಸಿದರು, ತಿರಸ್ಕಾರ ಭಾವದಿಂದ ನೋಡಿದರು. ಇದರಿಂದ ತ್ಯಾಗರಾಜರು ತಮಗುಂಟಾದ ಮಾನಸಿಕ ಉಪಟಳವನ್ನು ಹತ್ತುಹಲವು ಹಾಡುಗಳಲ್ಲಿ ವ್ಯಕ್ತಪಡಿಸುತ್ತಾರೆ.

**ಭವಮು ವೇರುಜೇಸಿತಿ ನನುಚು ನಾದುಪ್ಪೈ ಬಲಿಕೇರು ನರುಲು**

(ಈ ಲೋಕದಲ್ಲಿ, ಸಾಮಾನ್ಯರಂತಿಲ್ಲದೆ ಜೀವಿತವನ್ನು ಬೇರೆ ರೀತಿಯಾಗಿ ನಡೆಸಿದೆನೆಂದು ನನ್ನ ಬಗೆಗೆ ಜನರು ಮಾತನಾಡುತ್ತಾರೆ)

**(ನಾದುಪ್ಪೈ - ಮಧ್ಯಮಾವತಿ - ಛಾಪುತಾಳ)**

**ಸುಮುಖುಲೈನ ಈ ಲೋಕುಲು ನನ್ನಸೂಯಲಚೇ ಜೂಚೆದರು**
**ವಿಮುಖುಲೈ ಯೆಂತಟಿವಾಡನಿ ಬಹುವಿಧಮುಲ ದೂರೆದರು**
**ಸಮುಖಮುನಕು ಯೋಗ್ಯುಡುಗಾಡನಿ ಮರಿ ಜೂಡಗನೆಂಚೆದರು**

(ಮಿತ್ರರಾದ ಈ ಲೋಕದ ಜನರು ನನ್ನನ್ನು ಅಸೂಯೆಯಿಂದ ಕಾಣುತ್ತಾರೆ. ಶತ್ರುಗಳಂತೆ ಪರಿಪರಿಯಾಗಿ ದೂರುತ್ತಾರೆ. ಸಂಗಕ್ಕೆ ಯೋಗ್ಯನಲ್ಲವೆಂಬಂತೆ ಕಾಣುತ್ತಾರೆ)

**(ಎಂದುಕೋ ನೀಮನಸು - ಕಲ್ಯಾಣಿ - ಆದಿತಾಳ)**

**ಉಪಕಾರಿ ನೇನೈತೆ ಅಪಕಾರುಲೈಯೇರು**

. . . . . . . . . . . . . . . .

**ಚಪಲಚಿತ್ತುಲು ಭಕ್ತವೇಷುಲೈ ನನುಜೂಚಿ**
**ಶತ್ರುಲಯ್ಯೇರು . . . . . . .**

(ಉಪಕಾರಿ ನಾನಾದರೆ ಇತರರು ಅಪಕಾರಿಗಳೇ ಆಗಿದ್ದಾರೆ. ಭಕ್ತ ವೇಷಧಾರಿಗಳಾದ ಚಪಲಚಿತ್ತರು ನನ್ನೆಡೆಗೆ ಶತ್ರುಗಳಾಗಿದ್ದಾರೆ)

**(ಪ್ರಾರಬ್ಧಮಿಟ್ಲುಂಡಗಾ - ಸ್ವರಾವಳಿ - ಝುಂಪೆತಾಳ)**

**ನನು ಜೂಚಿ ಯೌವ್ವನ ಗರ್ವಮು ಮಿಂಚಿನ ನರುಲು ನವ್ವಗಾನು**

(ಯೌವ್ವನ ಮದದಲ್ಲಿರುವ ನರರು ನನ್ನನ್ನು ಕಂಡು ಅಪಹಾಸ್ಯ ಮಾಡಲು)

**(ಭವಸನ್ನುತ - ವರಾಳಿ - ಆದಿತಾಳ)**

**ನಾದು ಸಮೀಪ ಜನುಲಚೇತ ನಾಪದಲನು ನೇನೇಪ್ರೊದ್ದುನು ಪರಿತಾಪಮಂದಿ**

(ನನ್ನ ಸಮೀಪವರ್ತಿಗಳಿಂದ ನಾನು ಕಷ್ಟಕ್ಕೆ ಒಳಗಾಗಿ ಸದಾಕಾಲ
ಪರಿತಾಪ ಹೊಂದಿ)

**(ಇಂದುಕಾ ಪುಟ್ಟಿಂಚಿತಿವಿ - ಭೈರವಿ - ಆದಿತಾಳ)**

**ಪರಲೋಕಭಯ ವಿರಹಿತುಲ್ಯೆನ ನರುಲು ನಾದುಪೈ ಮರಿ**
**ಅಸೂಯಲ ಬರಚಿನ ಬಾಧಲು**

(ಪರಲೋಕ ಭಯವಿಲ್ಲದ ಜನರು ಅಸೂಯೆಯಿಂದ
ನನಗೆ ನೀಡಿದ ಬಾಧೆಗಳು)

**(ಈವರಕು - ಶಂಕರಾಭರಣ - ಆದಿತಾಳ)**

ಈ ರೀತಿಯ ಉಪಟಳವನ್ನು ಪರಿಹರಿಸಿ ಈ ಲೋಕದಲ್ಲಿ ತಮ್ಮ ಸರಿಸಮಾನರಲ್ಲಿ ಕರುಣೆ ತೋರೆಂದು ದೇವರಲ್ಲಿ ಪ್ರಾರ್ಥಿಸಿದರು.

**ಧರಲೋನ ನಾ ಸರಿವಾರಲಲೋ ದಯಜೂಡವಯ್ಯ**

**(ನೀಚಿತ್ತಮು - ವಿಜಯವಸಂತ - ಆದಿತಾಳ)**

ದೇವರಿಗೆ ಅವರ ಮೊರೆ ಕೇಳಿಸಿತು. ಹಿಂಸಿಸುತ್ತಿದ್ದ ಲೋಕದ ಜನರೇ ಕಾಲಕ್ರಮೇಣ ಇವರನ್ನು ಭಕ್ತರೆಂದು ಆದರಿಸಿದರು. ತ್ಯಾಗರಾಜರಿಗೆ ಇದರಿಂದ ಕೆಲಮಟ್ಟಿಗೆ ನೆಮ್ಮದಿಯಾಯಿತು.

**ನೀವಾಡನು ನೇನನಿ ಲೋಕುಲು ಬಲ್ಕೇರುಗಾ ಧನ್ಯುಡನೈತಿ**

(ಲೋಕದ ಜನ ನಾನು ನಿನ್ನವನೆಂದು ಹೇಳಿದರಲ್ಲವೇ ನಾನು ಧನ್ಯನಾದೆ)

**(ಸೀತಾಮನೋಹರ - ರಾಮಮನೋಹರಿ - ಆದಿತಾಳ)**

ತ್ಯಾಗರಾಜರು ತಮ್ಮ ಪೂಜಾವಿಗ್ರಹಗಳು ಕಣ್ಮರೆಯಾದ ಅವಧಿಯಲ್ಲಿ ತೀವ್ರ ವಿರಹ ವೇದನೆಯನ್ನು ಅನುಭವಿಸಿದರು. ಇದು ಕಾರ್ಲೈಲ್ ಹೇಳುವಂತೆ Centre of indifference ಎಂಬ ಅವಸ್ಥೆ. ಇದನ್ನೇ ಸಂತ ಜಾನನು Dark night of the soul ಎನ್ನುತ್ತಾನೆ.[೧೦] ಈ ಅವಧಿಯಲ್ಲಿ ತ್ಯಾಗರಾಜರು ಹಾಡಿದ ಹಾಡುಗಳು ನೂರಾರು. ನಿಶ್ಚಲ ಭಕ್ತಿಯಿಂದ ಪರಿಪರಿಯಾಗಿ ಶ್ರೀರಾಮನಲ್ಲಿ ಪ್ರಾರ್ಥಿಸಿದಾಗ ಆತ ತ್ಯಾಗರಾಜರಿಗೆ ದರ್ಶನವಿತ್ತ. ಅಲ್ಲದೆ ಅವರ ಪೂಜಾವಿಗ್ರಹಗಳು ಇದ್ದ ಸ್ಥಳವನ್ನು ತಿಳಿಸಿದ. ಅನಂತರ ವಿಗ್ರಹಗಳು ಲಭ್ಯವಾದ ಸಂತೋಷದಲ್ಲಿ ಅವರು 'ಕನುಗೊಂಟಿನಿ' (ನೋಡಿದೆ) ಎಂದು ಆನಂದಾಶ್ರುಪೂರಿತರಾಗಿ ಹಾಡಿದರು. ಶ್ರೀರಾಮನ ವಿಯೋಗ ಮತ್ತು ಸಂಯೋಗಗಳ ಈ ಘಟ್ಟದಲ್ಲಿ ಅವರ ಭಕ್ತಿ ಪುಟವಿಟ್ಟ ಚಿನ್ನದಂತಾಯಿತು. ಈ ಅವಧಿಯಲ್ಲಿ ತಮ್ಮೆಲ್ಲ ಭಾವಗಳನ್ನೂ ಹೃದಯದುಂಬಿ ಹಾಡುತ್ತಾ ತಮ್ಮ ಆರಾಧ್ಯದೈವದ ಗುಣ, ರೂಪ, ವರ್ಣನೆಗಳನ್ನೂ, ಮಹಿಮೆಯನ್ನೂ ಬಹುವಾಗಿ ಕೊಂಡಾಡಿದರು. ಇವುಗಳನ್ನು ಮುಂದಿನ ಅಧ್ಯಾಯಗಳಲ್ಲಿ ಪ್ರಸ್ತಾಪಿಸಲಾಗಿದೆ.

ಸಂಗೀತನಿಧಿ ಹಾಗೂ ಭಕ್ತಿ ಸಾಕಾರರಾಗಿದ್ದ ತ್ಯಾಗರಾಜರನ್ನು ನಾಡಿನ ಮೂಲೆ ಮೂಲೆಗಳಿಂದಲೂ ಬಂದು ಭೇಟಿಮಾಡಿದ ಮಹಾನುಭಾವರೆಷ್ಟೋ ಮಂದಿ ! ಅವರಲ್ಲಿ ಗೋಪೀನಾಥ ಭಟ್ಟಾಚಾರ್ಯ,[೧೧] ಷಟ್ಕಾಲ ಗೋವಿಂದದಾಸ, ಗೋಪಾಲಕೃಷ್ಣ ಭಾರತಿ, ಸ್ವಾಮಿನಾಥ ಅಯ್ಯರ್, ಕಮಲಂ, ತೂಮು ನರಸಿಂಹದಾಸ ಮೊದಲಾದವರು ಪ್ರಮುಖರು. ಇವರ ಭೇಟಿಗೆ ಸಂಬಂಧಿಸಿದಂತೆ ಒಂದೊಂದು ಪ್ರತ್ಯೇಕ ಘಟನೆಗಳೇ ಪ್ರಚಲಿತವಾಗಿದ್ದು, ಈ ಪ್ರಸಂಗಗಳ ಮೂಲಕ ತ್ಯಾಗರಾಜರ ಸಂಗೀತ, ಭಕ್ತಿ ಹಾಗೂ ಅವರ ಹೃದಯ ವೈಶಾಲ್ಯದ ಅರಿವಾಗುತ್ತದೆ.

೧. ಗೋಪೀನಾಥ ಭಟ್ಟಾಚಾರ್ಯರು ಉತ್ತರ ಭಾರತದ (ಕಾಶಿಯ) ಗಾಯಕ ಶಿರೋಮಣಿ. ಇವರು ದೇಶಭಾಷೆಯಲ್ಲಿ ಅನೇಕ ಕೃತಿಗಳನ್ನು ರಚಿಸಿ ಪ್ರಖ್ಯಾತರಾಗಿದ್ದರೂ ಮನಃಶಾಂತಿಯಿಲ್ಲದೆ ಕೊರಗುತ್ತಿದ್ದರು. ಇದಕ್ಕೆ ಕಾರಣ ಭಕ್ತಿಯ ಕೊರತೆಯೆನ್ನುತ್ತಾರೆ. ಹೀಗಿರುವಾಗ ದೇವರೊಮ್ಮೆ ಇವರ ಕನಸಿನಲ್ಲಿ ಕಾಣಿಸಿಕೊಂಡು 'ತಿರುವೈಯಾರಿನಲ್ಲಿರುವ ತ್ಯಾಗರಾಜನನ್ನು ಒಮ್ಮೆ ದರ್ಶಿಸಿ ಬಾ' ಎಂದು ಆದೇಶಿಸಿದಂತೆ ಪ್ರತೀತಿ. ಅದರಂತೆ ಗೋಪೀನಾಥರು, ತ್ಯಾಗರಾಜರಲ್ಲಿಗೆ ಬಂದು, ಅವರನ್ನು ಕಂಡು ಸಂತೋಷಿಸಿ, ತಮ್ಮ ಕನಸಿನ ಸುದ್ದಿಯನ್ನು ಅವರಲ್ಲಿ ತಿಳಿಸಿದರು. ತ್ಯಾಗರಾಜರು ಇಂತಹ ಉತ್ತಮ ಕವಿಯೊಬ್ಬನನ್ನು ಕಂಡುದರಿಂದ ಹಾಗೂ ತಮ್ಮ ಖ್ಯಾತಿ ಆತನಿದ್ದ ದೂರದೇಶದವರೆಗೂ ಹರಡುವಂತೆ ಮಾಡಿದ ಶ್ರೀರಾಮನನ್ನು ಕೃತಜ್ಞತಾಪೂರ್ವಕವಾಗಿ ಹೀಗೆ ಹಾಡಿದರು.

**ದೂರದೇಶಮುಲನು**
**ಪ್ರಕಾಶಿಂಪ ಜೇಸಿನ ರಸಿಕ ಶಿರೋಮಣಿ**
**ದಾಶರಥೀ ನೀ ಋಣಮುದೀರ್ಪ ನಾತರಮಾ ?**

(ದೂರದೇಶದಲ್ಲೂ ಪ್ರಕಾಶಿಸುವಂತೆ ಮಾಡಿದ ರಸಿಕಶಿರೋಮಣಿ
ದಾಶರಥಿಯೇ ನಿನ್ನ ಋಣವನ್ನು ತೀರಿಸಲು ನನ್ನಿಂದ ಸಾಧ್ಯವೇ ?)

**(ದಾಶರಥೇ - ತೋಡಿ - ಆದಿತಾಳ)**

೨. ಷಟ್ಕಾಲ ಗೋವಿಂದ ಮಾರಾರ್ ಅಥವಾ ಷಟ್ಕಾಲ ಗೋವಿಂದದಾಸ ಎಂಬ ಕೇರಳದ ವಿದ್ವಾಂಸರೊಬ್ಬರು ತ್ಯಾಗರಾಜರಲ್ಲಿಗೆ ಬಂದು ಜಯದೇವನ ಅಷ್ಟಪದಿಯೊಂದನ್ನು ಷಟ್ಕಾಲಗಳಲ್ಲಿ ಹಾಡಿದರು. ಇದನ್ನು ಕೇಳಿ ಗೋವಿಂದದಾಸರ ಪಾಂಡಿತ್ಯದ ಬಗೆಗೆ ಸಂತೋಷಿಸಿದ ತ್ಯಾಗರಾಜರು, ತಮ್ಮ ಶಿಷ್ಯರೊಡಗೂಡಿ ಪಂಚರತ್ನ ಕೃತಿಗಳಲ್ಲೊಂದಾದ 'ಎಂದರೋ ಮಹಾನುಭಾವುಲು ಅಂದರಿಕಿ ವಂದನಮು' (ಮಹಾನುಭಾವರೆಷ್ಟೋ ಮಂದಿ ! ಅವರೆಲ್ಲರಿಗೂ ವಂದನೆಗಳು) ಎಂದು ಶ್ರೀರಾಗದಲ್ಲಿ ಹಾಡಿದರು. ಈ ಕೃತಿ ಈ ಪ್ರಸಂಗಕ್ಕೆ ಮುಂಚೆಯೇ ರಚಿತವಾಗಿದ್ದುದು.

೩. ಗೋಪಾಲಕೃಷ್ಣ ಭಾರತಿಯವರು ತ್ಯಾಗರಾಜರ ಆಶೀರ್ವಾದವನ್ನು ಬಯಸಿ ಅವರಲ್ಲಿಗೆ ಬಂದರು. ಆ ಸಮಯದಲ್ಲಿ ತ್ಯಾಗರಾಜರು ತಮ್ಮ ಶಿಷ್ಯರೊಡ ಗೂಡಿ ಅಭೋಗಿ ರಾಗದ ಕೃತಿಯೊಂದನ್ನು ಹಾಡುತ್ತಿದ್ದರು. ಹಾಡು ಮುಗಿ ಯುತ್ತಿದ್ದಂತೆ ತ್ಯಾಗರಾಜರು ಭಾರತಿಯವರನ್ನು 'ಅಭೋಗಿ ರಾಗದಲ್ಲಿ ನೀವು ಕೃತಿ ರಚನೆ ಮಾಡಿದ್ದೀರಾ?' ಎಂದು ಪ್ರಶ್ನಿಸಿದರು. ಈ ಘಟನೆಯ ನಂತರವೇ ಭಾರತಿಯವರು 'ಸಭಾಪತಿಕ್ಕಿ ವೇರುದ್ಯೆವಂ' ಎಂಬ ಅಭೋಗಿ ಕೃತಿಯನ್ನು ರಚಿಸಿದುದು. ಹೀಗಾಗಿ ಭಾರತಿಯವರ ಈ ಕೃತಿ ರಚನೆಗೆ ಮೂಲಸ್ಫೂರ್ತಿ ತ್ಯಾಗರಾಜರೇ ಆದರು.

೪. ಪ್ರಾಚೀನವಾದ ಆನಂದಭೈರವಿ ರಾಗದಲ್ಲಿ ತ್ಯಾಗರಾಜರು ಮೂರು ರಚನೆ ಗಳನ್ನು ಮಾತ್ರ ರಚಿಸಿದ್ದಾರೆ. ಇದಕ್ಕೆ ಹಿನ್ನೆಲೆಯೊಂದುಂಟು. ಒಮ್ಮೆ ಉತ್ತಮ ನಟರೂ, ಗಾಯಕರೂ ಆಗಿದ್ದ ಸ್ವಾಮಿನಾಥ ಅಯ್ಯರ್, ಬೊಂಬೆ ಯಾಟದ ತಂಡದೊಂದಿಗೆ ತಿರುವೈಯಾರಿಗೆ ಬಂದರು. ಬೊಂಬೆಯಾಟ ಕಾರ್ಯಕ್ರಮಪ್ರದರ್ಶನ ತಿರುವೈಯಾರಿನಲ್ಲಿ ನಡೆಯಿತು. ತ್ಯಾಗರಾಜರೂ ಈ ಕಾರ್ಯಕ್ರಮವನ್ನು ನೋಡಲು ಹೋಗಿದ್ದರು. ಪ್ರದರ್ಶನದ ನಡುವೆ ಸ್ವಾಮಿ ನಾಥ ಅಯ್ಯರ್‌ರವರು ಹಾಡಿದ ಆನಂದಭೈರವಿ ರಾಗದ ವಿನ್ಯಾಸವನ್ನು ಕೇಳಿ ತ್ಯಾಗರಾಜರು ಬಹಳ ಸಂತೋಷಿಸಿದರು. ಕಾರ್ಯಕ್ರಮ ಪೂರ್ಣಗೊಂಡ ನಂತರ ತ್ಯಾಗರಾಜರು ಅಯ್ಯರ್ ಅವರ ಗಾಯನವನ್ನು ಪ್ರಶಂಸಿಸಿದರು. ತ್ಯಾಗರಾಜರಂಥ ಉದ್ದಾಮ ಪಂಡಿತರು ತಮ್ಮ ಗಾಯನವನ್ನು ಮೆಚ್ಚಿದ್ದ ರಿಂದ ಸಂತೋಷಿಸಿದ ಅಯ್ಯರ್, ಚರಿತ್ರೆಯಲ್ಲಿ ತಮ್ಮ ಹೆಸರು ಸ್ಥಿರವಾಗಿ ನಿಲ್ಲಬೇಕೆಂಬ ಅಪೇಕ್ಷೆಯಿಂದ, ತ್ಯಾಗರಾಜರಲ್ಲಿ ವರವೊಂದನ್ನು ಕೋರಿ ದರು. ಈ ಮೊದಲೇ ರಚಿಸಿರುವ ಕೃತಿಗಳನ್ನು ಬಿಟ್ಟು ಇನ್ನು ಮುಂದೆ ಆನಂದ ಭೈರವಿ ರಾಗದಲ್ಲಿ ತ್ಯಾಗರಾಜರು ಕೃತಿರಚನೆ ಮಾಡಬಾರದೆಂಬುದೇ ಅವರ ಕೋರಿಕೆಯಾಗಿದ್ದಿತು. ಅಯ್ಯರ್ ಅವರ ಧಾರ್ಷ್ಟ್ಯದ ಈ ಕೋರಿಕೆಯಿಂದ ತ್ಯಾಗರಾಜರು ಸ್ವಲ್ಪವೂ ವಿಚಲಿತರಾಗದೆ 'ಇನ್ನು ಮುಂದೆ ಆನಂದಭೈರವಿ ರಾಗದಲ್ಲಿ ನಾನು ಕೃತಿ ರಚಿಸುವುದಿಲ್ಲ' ಎಂದು ಭಾಷೆಯಿತ್ತರು. ಅಂತೆಯೇ ಅವರು ಮುಂದೆ ಈ ರಾಗದಲ್ಲಿ ಕೃತಿಗಳನ್ನು ರಚಿಸಲಿಲ್ಲ. ಹೀಗಾಗಿ ಆ ಮೊದಲೇ ರಚಿತವಾಗಿದ್ದ ಮೂರು ರಚನೆಗಳು ಮಾತ್ರ ಆನಂದಭೈರವಿ ರಾಗ ದಲ್ಲಿವೆ.

೫. ಪದರಚನಕಾರರಲ್ಲಿ ಮುವ್ವಲೂರು ಸಭಾಪತಿ ಅಯ್ಯರ್ ಅವರದೊಂದು ವಿಶಿಷ್ಟ ಸ್ಥಾನ. ಇವರು ತಮ್ಮ ಶಿಷ್ಯೆ 'ಕಮಲಂ' ಎಂಬಾಕೆಗೆ ತ್ಯಾಗರಾಜರ ಆಶೀರ್ವಾದ ಪಡೆಯುವಂತೆ ಆದೇಶಿಸಿದ್ದರು. ಅದರಂತೆ ಆಕೆ ತ್ಯಾಗರಾಜ ರಲ್ಲಿಗೆ ಬಂದು 'ಎಂದುದಾಗಿನಾಡೋ' ಎಂಬ ತ್ಯಾಗರಾಜರ ಕೃತಿಗೆ ಅಭಿ

ನಯಿಸಿದಳು. ಆಕೆಯ ಅಭಿನಯ ಪ್ರಾಜ್ಞತೆಯನ್ನು ಕಂಡು ಸಂತೋಷಿಸಿದ ತ್ಯಾಗರಾಜರು ಕ್ಷೇತ್ರಜ್ಞನ ಪದವೊಂದಕ್ಕೂ ಅಭಿನಯಿಸುವಂತೆ ಆಕೆಗೆ ಹೇಳಿದರು. ಅದರಂತೆ ಆಕೆ ನಾಟ್ಯಮಾಡಿದಳು. ನರ್ತನ ಮುಗಿದ ನಂತರ ಆಕೆಯ ಅಭಿನಯ, ಭಾವಸಂಪ್ರದಾಯದ ಉತ್ಕೃಷ್ಟತೆಯನ್ನು ಮುಕ್ತಕಂಠದಿಂದ ಪ್ರಶಂಸಿಸಿ, ಆಕೆಯನ್ನು ಹೃತ್ಪೂರ್ವಕವಾಗಿ ತ್ಯಾಗರಾಜರು ಆಶೀರ್ವದಿಸಿದರು.

ತ್ಯಾಗರಾಜರ ಜೀವಿತಕ್ಕೆ ಸಂಬಂಧಿಸಿದಂತೆ ಇನ್ನೂ ಕೆಲವು ಪ್ರಸಂಗಗಳನ್ನು ಹೇಳುವುದುಂಟು. 'ನಾ ಜೀವಾಧಾರ' ಕೃತಿಗೆ ಸಂಬಂಧಿಸಿದಂತೆ ಮೃತನಾಗಿದ್ದವನನ್ನು ಬದುಕಿಸಿದುದು, 'ಮುಂದು ವೆನಕ' ಕೃತಿಗೆ ಸಂಬಂಧಿಸಿದಂತೆ ಕಳ್ಳರು ರಾಮಲಕ್ಷ್ಮಣರನ್ನು ದರ್ಶಿಸಿ ಸನ್ಮಾರ್ಗ ಪ್ರವರ್ತಕರಾಗಿದ್ದು ಮುಂತಾದವು.

ಮೇಲಿನ ಈ ಅಂಶಗಳು ತ್ಯಾಗರಾಜರ ಉದಾತ್ತ ವ್ಯಕ್ತಿತ್ವ, ಭಕ್ತಿಯ ಹಿರಿಮೆ, ಪಾಂಡಿತ್ಯಗಳನ್ನು ಸ್ಪಷ್ಟಪಡಿಸುತ್ತವೆ. ಆದರೆ ತಮ್ಮ ಹಿರಿಮೆಯ ಬಗೆಗೆ ಅವರಲ್ಲಿ ಎಳ್ಳಷ್ಟೂ ಅಹಂಕಾರವಿರಲಿಲ್ಲ. ಇತರ ಪಂಡಿತರನ್ನು ಗೌರವಿಸುತ್ತಿದ್ದ ಅವರ ವಿನಯಶೀಲ ಸ್ವಭಾವ, ಕಿರಿಯರಲ್ಲಿ ತೋರುತ್ತಿದ್ದ ಪ್ರೀತ್ಯಾದರಗಳು ಇತರರಿಗೆ ಮಾರ್ಗ ದರ್ಶಿಯೇ ಹೌದು.

ಕಂಚಿಯಲ್ಲಿದ್ದ, ಉಪನಿಷತ್‌ಬ್ರಹ್ಮರು[೨] ರಾಮಬ್ರಹ್ಮರ ಸಹಪಾಠಿಯಾಗಿದ್ದವರು, ತ್ಯಾಗರಾಜರನ್ನು ಕಾಣಬೇಕೆಂಬ ಅಪೇಕ್ಷೆಯಿದ್ದವರು. ಇವರು ತ್ಯಾಗರಾಜರಿಗೆ ಶ್ರೀಮುಖವೊಂದನ್ನು ಕಳುಹಿಸಿ, ಅದರಲ್ಲಿ ವೃದ್ಧಾಪ್ಯದ ಸಹಜ ಅಶಕ್ತಿಯಿಂದಾಗಿ ತಾವೇ ತ್ಯಾಗರಾಜರಲ್ಲಿಗೆ ಬರಲು ಸಾಧ್ಯವಿಲ್ಲವೆಂದೂ, ತ್ಯಾಗರಾಜರೇ ಅವರಲ್ಲಿಗೆ ಬರಬೇಕೆಂದೂ ತಿಳಿಸಿದ್ದರು. ಈ ವಿಷಯವನ್ನು ಶಿಷ್ಯರಲ್ಲಿ ತಿಳಿಸಿದಾಗ, ಶಿಷ್ಯರು ಕಂಚಿಯ ಹತ್ತಿರದಲ್ಲೇ ಇರುವ ಇತರ ಕ್ಷೇತ್ರಗಳನ್ನೂ ಸಂದರ್ಶಿಸಬೇಕೆಂದು ವಿನಯ ಪೂರ್ವಕವಾಗಿ ಗುರುಗಳಲ್ಲಿ ಬಿನ್ನವಿಸಿದರು. ಹೀಗೆ ತ್ಯಾಗರಾಜರಿಗೆ ತೀರ್ಥಯಾತ್ರೆಯ ಸಂದರ್ಭವನ್ನು ಒದಗಿಸಿದುದು ಉಪನಿಷದ್‌ಬ್ರಹ್ಮರೇ. ಈ ಕಾರಣದಿಂದ ತ್ಯಾಗರಾಜರು ಕ್ಷೇತ್ರಯಾತ್ರೆ ಕೈಗೊಳ್ಳುವಂತಾಯಿತು. ಪ್ರಯಾಣದ ಸಂದರ್ಭದಲ್ಲಿ ವೆಂಕಟ ರಮಣ ಭಾಗವತರು, ತಂಜಾವೂರು ರಾಮರಾವ್, ತಿಲ್ಲೈಸ್ಥಾನಂ ರಾಮಅಯ್ಯಂಗಾರ್, ಸೋಜರಿ ಸೀತಾರಾಮಯ್ಯ ಮೊದಲಾದವರು ತ್ಯಾಗರಾಜರ ಜೊತೆಯಲ್ಲಿದ್ದರು.

ತ್ಯಾಗರಾಜರ ಕ್ಷೇತ್ರಯಾತ್ರೆ ಯಾವ ಕ್ರಮದಲ್ಲಾಯಿತೆಂದು ಹೇಳುವುದು ಕಷ್ಟವಾದರೂ ಅವರು ಕಂಚಿ, ವಾಲಾಜಪೇಟೆ, ತಿರುಪತಿ, ಪುತ್ತೂರು, ಶೋಲಿಂಘರ್, ಮದರಾಸು, ತಿರುವಟ್ಟಿಯೂರು, ಶ್ರೀರಂಗ, ಕೋವೂರು, ಲಾಲ್‌ಗುಡಿ, ಶೀರ್ಗಾಳಿ ಕ್ಷೇತ್ರಗಳನ್ನು ಸಂದರ್ಶಿಸಿದ್ದರೆಂಬುದು ನಿಜ. ಇಲ್ಲಿನ ಕ್ಷೇತ್ರದೇವತೆಗಳನ್ನು ಕುರಿತು ತ್ಯಾಗರಾಜರು ಬಿಡಿ ಕೃತಿಗಳನ್ನೂ, ಕೃತಿಗುಚ್ಛಗಳನ್ನೂ ರಚಿಸಿದ್ದಾರೆ. ಬಹುತೇಕ ಈ

ರಚನೆಗಳಲ್ಲಿ ಕ್ಷೇತ್ರಮುದ್ರೆ ಕಾಣಬರುತ್ತವೆ (ಈ ಬಗ್ಗೆ ಮುಂದೆ ವಿವರಿಸಲಾಗುತ್ತದೆ).

ತ್ಯಾಗರಾಜರಿಗೆ ತಮ್ಮ ಶಿಷ್ಯರ ಬಗ್ಗೆ ಬಹಳ ಕಾಳಜಿ. ಅವರ ಶಿಷ್ಯರಲ್ಲಿ ವಾಲಾಜ ಪೇಟೆ ವೆಂಕಟರಮಣ ಭಾಗವತರು ಕಲಿಕೆಯ ಮೊದಲ ಹಂತಗಳಲ್ಲಿ ನಿರೀಕ್ಷಿಸಿದ ಮುನ್ನಡೆ ಸಾಧಿಸಲಾಗಿರಲಿಲ್ಲ. ಇದಕ್ಕಾಗಿ ವ್ಯಸನಗೊಂಡ ತ್ಯಾಗರಾಜರು ತಮ್ಮ ಶಿಷ್ಯನಿಗೆ ಸಂಗೀತ ಜ್ಞಾನವನ್ನು ದಯಪಾಲಿಸಬೇಕೆಂದು ದೇವರಲ್ಲಿ ಮೊರೆಯಿಟ್ಟರು. ಮನಃಪೂರ್ವಕವಾದ ಈ ಪ್ರಾರ್ಥನೆಗೆ ದೇವರು ಓಗೊಟ್ಟನೋ ಎಂಬಂತೆ ಮಾರನೇ ದಿನದ ತರುವಾಯ ವೆಂಕಟರಮಣ ಭಾಗವತರು ವಿಸ್ಮಯಕರ ಮುನ್ನಡೆಯನ್ನು ತೋರಿದರು. ಕಡೆಗೆ ತ್ಯಾಗರಾಜರ ಸಂಗೀತ ಪರಂಪರೆಯ ನೇರ ವಾಹಕರಾದರು.

ತ್ಯಾಗರಾಜರು ಭಗವದಾಜ್ಞೆಯಂತೆ, ಗುರೋಪದೇಶದಂತೆ ೯೬ ಕೋಟಿ ರಾಮ ನಾಮ ಜಪಿಸಿ ತೃಪ್ತರಾದರು. ದೇವರು ಇವರಿಗೆ ಹಲವು ಬಾರಿ ದರ್ಶನವಿತ್ತಿದ್ದ, ಸಂತೈಸಿದ್ದ, ಕೆಲಕಾಲದ ನಂತರ[೧೩] ರಕ್ಷಿಸುತ್ತೇನೆಂದು ಭಾಷೆಯಿತ್ತಿದ್ದ. ಅಂತೆಯೇ ಕೊನೆಯಲ್ಲಿ ದೈವ ಸಾಕ್ಷಾತ್ಕಾರದಿಂದ ಅವರ ದುಃಖಗಳೆಲ್ಲ ನಾಶವಾಯಿತು. ಅವರ ಜನ್ಮ ಸಾಫಲ್ಯ ಹೊಂದಿತು.

ನೀ ಸಾಕ್ಷಾತ್ಕಾರಮುನ ವೇಸಟಲೆಲ್ಲ ತೊಲಿಗೆ
ನೇಡೇ ಜನ್ಮಮು ಸಾಫಲ್ಯಮು

(ಈಶಪಾಹಿಮಾಂ - ಕಲ್ಯಾಣಿ - ರೂಪಕತಾಳ)

ತ್ಯಾಗರಾಜರು ತಮ್ಮ ವೃದ್ಧಾಪ್ಯದಲ್ಲಿ, ಅಧ್ಯಾತ್ಮದ ಪೂರ್ಣತೆಯನ್ನು ಪಡೆಯಬೇಕೆಂಬ ಅಪೇಕ್ಷೆಯಿಂದ ಸನ್ಯಾಸ ಸ್ವೀಕಾರ ಮಾಡಿದರು. ಏಕೆಂದರೆ ಸಾಧಕನಿಗೆ ಸನ್ಯಾಸದಿಂದ ಮಾತ್ರ ಮೋಕ್ಷ ಎಂಬುದು ಬ್ರಹ್ಮಸೂತ್ರದ ಬಾದರಾಯಣರ ಅಭಿಮತ. ಸನ್ಯಾಸಿಗಳಾದ ನಂತರ ತಮ್ಮ ಜೀವನದ ಕಡೇ ಘಳಿಗೆಯನ್ನು ಅರಿತಿದ್ದ ತ್ಯಾಗರಾಜರು ಅದನ್ನು ಸೂಕ್ಷ್ಮವಾಗಿ ತಮ್ಮ ಶಿಷ್ಯರಿಗೂ ಇತರ ಭಕ್ತವೃಂದಕ್ಕೂ ತಿಳಿಸಿದರು. ಪರಾಭವ ಸಂವತ್ಸರ ಪುಷ್ಯಬಹುಳ ಪಂಚಮಿ ಎಂದರೆ ೧೮೪೭ರ ಜನವರಿ ಆರರಂದು ಉಷಃ ಕಾಲದಲ್ಲಿ ಕಡೆಯ ಬಾರಿಗೆ 'ಪರಿತಾಪಮುಗನಿಯಾಡಿನ' (ಮನೋಹರಿ), 'ಶ್ಯಾಮ ಸುಂದರಾಂಗ' (ಧನ್ಯಾಸಿ) ಮತ್ತು 'ಪರಮಾತ್ಮುಡು ವೆಲಿಗೆ' (ವಾಗಧೀಶ್ವರಿ) ಕೃತಿಗಳನ್ನು ಶಿಷ್ಯರೊಂದಿಗೆ ಹಾಡುತ್ತಾ ಭಗವದ್ ಸಾಯುಜ್ಯವನ್ನು ಪಡೆದರು.[೧೪]

ತ್ಯಾಗರಾಜರ ಭೌತಶರೀರವನ್ನು ಅವರ ಬಲು ನೆಚ್ಚಿನ ಕಾವೇರೀ ನದೀ ತೀರದಲ್ಲಿ ಸಮಾಧಿ ಮಾಡಲಾಯಿತು. ಇದೇ ಶತಮಾನದ ಆರಂಭದಲ್ಲಿ ತ್ಯಾಗರಾಜರ ಪರಮ ಭಕ್ತೆ ಬೆಂಗಳೂರು ನಾಗರತ್ನಮ್ಮ ತ್ಯಾಗರಾಜರ ಸಮಾಧಿಯ ಮೇಲೆ ಸ್ಥಿರ ಕಟ್ಟಡವೊಂದನ್ನು ಸ್ಥಾಪಿಸಿದರು. ಈ ಸ್ಥಳದಲ್ಲಿ ಪ್ರತಿ ವರ್ಷ ಜನವರಿ ತಿಂಗಳಿನಲ್ಲಿ ಸಮಾಧಿ ಪೂಜೆ, ಆರಾಧನೆ ಮೊದಲಾದ ಧಾರ್ಮಿಕ ವಿಧಿಗಳು ಸಾಂಪ್ರದಾಯಿಕವಾಗಿ ನಡೆಯುತ್ತವೆ. ಇಲ್ಲೇ ಅಲ್ಲದೆ ತ್ಯಾಗರಾಜರ ಆರಾಧನಾ ಮಹೋತ್ಸವವನ್ನು ದಕ್ಷಿಣ ಭಾರತದಾದ್ಯಂತ ನಡೆಸಲಾಗುತ್ತದೆ. ಇದರಲ್ಲಿ ಪಾಲ್ಗೊಂಡು, ಈ ಮೂಲಕ ತ್ಯಾಗರಾಜರಿಗೆ

ಸೇವೆ ಸಲ್ಲಿಸುವುದು ಮಹಾ ಪುಣ್ಯಕಾರ್ಯವೆಂಬ ಸದ್ಭಾವನೆ ಕಲಾವಿದರಲ್ಲೂ, ಕಲಾಪ್ರಿಯರಲ್ಲೂ, ಭಕ್ತರಲ್ಲೂ ಮನೆಮಾಡಿದೆ. ಈ ಮೂಲಕ ಜನತೆ ನಾರದಾಂಶ ಸಂಭೂತರೆನ್ನಲಾದ ತ್ಯಾಗರಾಜರ ಕೃಪೆಯನ್ನು ಕೋರುತ್ತಾರೆ.

ಕಡೆಯದಾಗಿ ಒಂದು ವಿಷಯ. ಈ ಅಧ್ಯಾಯದಲ್ಲಿ ತ್ಯಾಗರಾಜರ ಜೀವಿತಕಾಲದಲ್ಲಿ ಸಂಭವಿಸಿತೆನ್ನಲಾದ ಕೆಲವು ಪವಾಡಾತ್ಮಕ ಸಂಗತಿಗಳನ್ನೂ ಪ್ರಸ್ತಾಪ ಮಾಡಲಾಗಿದೆ. ಇಲ್ಲಿ ಪವಾಡಗಳು ನಿಜವೇ ಎಂಬುದಕ್ಕಿಂತ, ಅವು ನಮ್ಮ ಜೀವನದ ಗುರಿಗೆ ಎಷ್ಟು ಪ್ರಸ್ತುತ ಎಂಬುದು ಮುಖ್ಯ. ಈ ಅಂಶವನ್ನು ತಿಳಿಸಿಕೊಡಲೆಂದೇ ಅವರು, ಸಾಮಾನ್ಯರ ದೃಷ್ಟಿಯಿಂದ ಪವಾಡಗಳೆಂದು ತೋರುವ ಕೆಲವು ಕಾರ್ಯಗಳನ್ನು ನಡೆಸಿದ್ದಾರೆ. ವಾಸ್ತವವಾಗಿ ತ್ಯಾಗರಾಜರ ಭಕ್ತಿ ಮತ್ತು ತ್ಯಾಗಮಯ ಜೀವನವೇ ಒಂದು ದೊಡ್ಡ ಪವಾಡ. ಅವರ ಸಾತ್ವಿಕ ವೈರಾಗ್ಯ ವ್ಯಕ್ತಿತ್ವ, ಭಕ್ತಿಸಾಕಾರತೆ, ಕೃತಿರಚನಾ ಕೌಶಲ, ಸಂಗೀತ ಕ್ಷೇತ್ರಕ್ಕೆ ಅವರ ಕೊಡುಗೆಗಳನ್ನು ಪವಾಡಗಳೆಂದು ಕರೆಯದೆ ಬೇರೆ ವಿಧಿಯಿಲ್ಲ.

## ಟಿಪ್ಪಣಿಗಳು

೧ ಅಧ್ಯಾಯ ೪, ಶ್ಲೋಕ ೭-೮.

೨ ವೇದಾಂತ ಸೂತ್ರ, ೩-೩-೩೨.

೩ ಕನಕ ಸಾಹಿತ್ಯ ದರ್ಶನ, ಸಂಪುಟ ೧, ಸಂ. ದೇ. ಜವರೇಗೌಡ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೦; ಸಾ. ಶಿ. ಮರುಳಯ್ಯ ಅವರ ಲೇಖನದಲ್ಲಿ ಉಲ್ಲೇಖ, ಪು. ೩.

೪ ತ್ಯಾಗರಾಜರ ಜನನ ಸಂವತ್ಸರದ ಬಗೆಗಿರುವ ಅಭಿಪ್ರಾಯಗಳು ಹೀಗಿವೆ.

(i) ೧೭೫೩ ಸರ್ವಜಿತು ಸಂವತ್ಸರ, ತ್ಯಾಗರಾಜ ಕೀರ್ತನಲು, ವಿಶೇಷ ವಿವರಮು, ಸಂಪುಟ ೧, ಕಲ್ಲೂರಿ ವೀರಭದ್ರ ಶಾಸ್ತ್ರಿ, ಸ್ವಧರ್ಮ ಸ್ವಾರಾಜ್ಯ ಸಂಘ, ಮದರಾಸು, ೧೯೭೫, ಪುಟ xiv.

(ii) ೧೭೬೭ ಎಂಬ ವಿರಳ ಅಭಿಪ್ರಾಯವೂ ಉಂಟು. *The Spiritual Heritage of Tyagaraja*, C. Ramanujachari & V. Rahgavan, Sri Ramakrishna Math, Madras, 1966, ಪುಟ ೧೧. ಹಾಗೂ *Tyagaraja, Saint and Singer,* S.Y. Krishnaswamy, Orient Longmans, New Delhi, 1968, P. 4.

(iii) ೧೭೬೪ ಶ್ರೀ ತ್ಯಾಗರಾಜ ಹೃದಯಮು, ಸಂ. ೧, ಕೆ. ವಿ. ಶ್ರೀನಿವಾಸ ಅಯ್ಯಂಗಾರ್, ಎಮ್. ಆದಿ ಅಂಡ್ ಕಂಪೆನಿ, ಪು. ೭.

೫ ನೋಡಿ, ಪೆರಿಯ ಪುರಾಣ, ಅನುವಾದ - ಎಲ್. ಗುಂಡಪ್ಪ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು, ೧೯೭೪, ಪುಟ ೪೩ ರಿಂದ ೬೭.

೬ ಸದ್ಗುರು ತ್ಯಾಗರುಜಸ್ವಾಮಿ ಕೀರ್ತನಲುದಲ್ಲಿ ನರಸಿಂಹ ಭಾಗವತರು ಹೇಳುವಂತೆ ರಾಮ ಬ್ರಹ್ಮರಿಗೆ ಇಬ್ಬರೇ ಗಂಡುಮಕ್ಕಳು. ಉಲ್ಲೇಖ, *Tyagaraja—Life and Lyrics,* William J. Jockson, Oxford University Press, 1991, P.8.

೭ ನೋಡಿ, ಕ್ಷೇತ್ರ ಕೃತಿಗಳು ಮತ್ತು ಸಮುದಾಯ ಕೃತಿಗಳ ಅಧ್ಯಾಯ.

೮ ಈಕೆಯ ಹೆಸರು ಕನಕಾಂಬಾಳ್, ಧರ್ಮಾಂಬ ಎಂದೂ ಹೇಳುವುದುಂಟು. ನೋಡಿ, *The Spiritual Heritage of Tyagaraja*, P. 13.

೯ ಅಠಾಣಾ ರಾಗದ 'ಏಲಾನೀದಯರಾದು' ತ್ಯಾಗರಾಜರ ಮೊದಲ ಕೃತಿರಚನೆ ಎನ್ನುವ ಅಭಿಪ್ರಾಯವೂ ಉಂಟು. ನೋಡಿ, ಸಂಪ್ರದಾಯ ಪ್ರದರ್ಶಿನಿ (ಸಂ.) ಆಚಾರ್ಯ ನೋರಿ ನಾಗಭೂಷಣಂ, ಆಂಧ್ರ ಪ್ರದೇಶ ಸಂಗೀತ ನಾಟಕ ಅಕಾಡೆಮಿ, ೧೯೭೩, ಪುಟ ೨೧; ಶ್ರೀ ತ್ಯಾಗರಾಜಸ್ವಾಮಿ ಕೀರ್ತನಲು, ಕೆ. ವಿ. ಶ್ರೀನಿವಾಸ ಅಯ್ಯಂಗಾರ್, ಪುಟ ೧೩; ಶ್ರೀ ತ್ಯಾಗರಾಜ ಹೃದಯಮು, 'ಏಲಾ ನೀದಯರಾದು' (ಅಠಾಣ), 'ತವದಾಸೋಹಂ' (ಪುನ್ನಾಗವರಾಳಿ), 'ಗಿರಿರಾಜಸುತಾತನಯ' (ಬಂಗಾಳ) ರಚನೆಗಳು ಮೊದಲ, 'ನಿನ್ನೇ ಭಜನ' (ನಾಟ) ಎರಡನೆಯ ಹಾಗೂ 'ರಾಗರತ್ನ ಮಾಲಿಕಚೇ' (ರೀತಿಗೌಳ) ೧೧೧ನೆಯ ರಚನೆಯೆಂದು ಹೇಳುವ ಗ್ರಂಥಗಳೂ ಉಂಟು.

೧೦ *Pathway to God in Kannada Literature*, R.D. Ranade, Karnataka University, Dharwar and Bharatiya Vidya Bhavan, Bombay, 1960, P. 24-25.

೧೧ ಗೋಪಿನಾಥ ಭಟ್ಟಾಚಾರ್ಯ, ಗಣೇಶ ಭುವಾ, ರಾಮದಾಸ ಎಂಬುದಾಗಿ ಬೇರೆ ಬೇರೆ ಹೆಸರುಗಳನ್ನು, ಗ್ರಂಥಗಳು ಹೆಸರಿಸಿವೆ. ಒಬ್ಬರಿಗೇ ಈ ಮೂರು ಹೆಸರುಗಳೂ ಹೇಳಲ್ಪಟ್ಟಿದೆಯೋ ಅಥವಾ ಈ ಮೂವರೂ ಬೇರೆಯೋ ಎಂಬ ಅನುಮಾನ ಬರುತ್ತದೆ. ಉತ್ತರದೇಶದ ಗಾಯಕರೆಂಬ ಅಂಶ ಮಾತ್ರ ನಿರ್ದಿಷ್ಟವಾಗಿ ಹೇಳಲ್ಪಟ್ಟಿದೆ. ಇದೇನೇ ಇದ್ದರೂ ತ್ಯಾಗರಾಜರ ಕಾಲದಲ್ಲೇ ಅವರ ಕೀರ್ತಿ ಉತ್ತರದವರೆಗೆ ಹರಡಿತ್ತೆಂಬುದಂತೂ ಇದರಿಂದ ಸ್ಪಷ್ಟವಾಗುತ್ತದೆ.

೧೨ ಇವರ ನಿಜವಾದ ಹೆಸರು 'ಶಿವರಾಮ' ಎಂದು. ಇವರು ೧೦೮ ಉಪನಿಷತ್ತುಗಳಿಗೆ ವ್ಯಾಖ್ಯಾನ ಬರೆದಂತೆ ಹೇಳುತ್ತಾರೆ.
ಈ ನೂರೆಂಟು ಉಪನಿಷತ್ತುಗಳು ಯಾವುವೆಂಬುದು ತಿಳಿಯದು. ಏಕೆಂದರೆ ಉಪನಿಷತ್ತುಗಳ ಒಟ್ಟು ಸಂಖ್ಯೆ ಎಷ್ಟೆಂಬ ಬಗೆಗೆ ಭಿನ್ನಾಭಿಪ್ರಾಯಗಳು ಕಾಣಬರುತ್ತವೆ. ೧೦೮, ೧೪೯, ೧೫೪, ೧೭೦, ೧೭೯, ೨೨೩, ೧೦೦೮, ೧೧೮೦ ಎಂದು ಹೇಳುವುದುಂಟು. ನೋಡಿ, ಸಂಖ್ಯೆಗಳಿಂದ ಸ್ಫೂರ್ತಿ, ಎಸ್. ಜಿ. ನರಸಿಂಹಯ್ಯ, ಸ್ಟ್ಯಾಂಡರ್ಡ್ ಬುಕ್ ಡಿಪೋ, ಬೆಂಗಳೂರು ೧೯೮೩, ಪುಟ ೧೭೦.

೧೩ ಇಲ್ಲಿ ಕೆಲವು ಕಾಲ ಎಂಬುದನ್ನು ತ್ಯಾಗರಾಜರು 'ಪದಿಪೂಟಲಪ್ಪೆ' ಎಂದೇ ಸ್ಪಷ್ಟವಾಗಿ ಹೇಳಿದ್ದಾರೆ. ಆದರೆ ಈ ಅವಧಿಯನ್ನು ೧೦ ಹೊತ್ತು ಎಂದರೆ ಐದು ದಿನ, ೧೦ ತಿಂಗಳು ಮುಂತಾಗಿ ವ್ಯಾಖ್ಯಾನಿಸಿರುವುದುಂಟು.

೧೪ ತ್ಯಾಗರಾಜರ ಜನನ ಸಂವತ್ಸರದಲ್ಲಿ ಪರಿಣತರ ಪ್ರಕಾರ ಅಭಿಪ್ರಾಯಭೇದವಿರುವಂತೆಯೇ, ಅವರು ಸಾಯುಜ್ಯ ಪಡೆದ ಕಾಲಕ್ಕೆ ಅವರಿಗೆ ೭೭, ೮೨, ೮೦ ಅಥವಾ ೮೮ ವರ್ಷ ವಯಸ್ಸಾಗಿತ್ತೆಂದು ಹೇಳುವುದುಂಟು. ವೀರಭದ್ರಶಾಸ್ತ್ರಿಗಳ ಪ್ರಕಾರ ೭೪ ವರ್ಷವಾಗುತ್ತದೆ. ಅವರು ೮೮ ವರ್ಷಕಾಲ ಜೀವಿಸಿದ್ದಿದ್ದರೆ ಅವರಿಗೆ ಶತಾಭಿಷೇಕ ನಡೆದ ಬಗೆಗೆ ಪ್ರಸ್ತಾಪವಿರಬೇಕಿದ್ದಿತು. ಈ ಅಂಶ ಮುಂದಿನ ಗ್ರಂಥಕರ್ತರಾರಿಂದಲೂ ಹೇಳಲ್ಪಟ್ಟಿಲ್ಲ. ಹೀಗಾಗಿ ಶತಾಭಿಷೇಕ ನಡೆಯಬೇಕಿದ್ದ ಮೊದಲೇ ಅವರು ಸಿದ್ಧಿಹೊಂದಿದರೆಂಬುದು ಸಮಂಜಸವಾಗುತ್ತದೆ. ಇದೇನೇ ಇದ್ದರೂ ಒಟ್ಟಾರೆ ಅವರು ತುಂಬುಜೀವನ ನಡೆಸಿರುವುದಂತೂ ನಿಜ.

೩

# ತ್ಯಾಗರಾಜರು—ನಾದಯೋಗ

'ಯೋಗ' ಶಬ್ದಕ್ಕೆ ನಾನಾ ಅರ್ಥಗಳುಂಟು. ಅದು ಅದ್ವೈತವು ಹೇಳುವಂತೆ ಜೀವಾತ್ಮ, ಪರಮಾತ್ಮರ ಐಕ್ಯತೆಯನ್ನು ಸೂಚಿಸಬಹುದು. ಕಪಿಲರು ಹೇಳುವಂತೆ ಪ್ರಕೃತಿ-ಪುರುಷರ ವಿವೇಕ ಎಂಬ ಅರ್ಥವನ್ನೂ ಸೂಚಿಸಬಹುದು. ಪತಂಜಲಿಗಳು ಹೇಳುವಂತೆ ಧ್ಯಾನ, ಸಮಾಧಿ ಅಥವಾ ಚಿತ್ತವೃತ್ತಿನಿರೋಧವೆಂಬ ಅರ್ಥವನ್ನೂ ನೀಡಬಹುದು. ಸಾಮಾನ್ಯ ಅರ್ಥದಲ್ಲಿ ಅದು ನಿರತನಾಗುವಿಕೆ ಅಥವಾ ತೊಡಗುವಿಕೆ ಎಂದಾಗುತ್ತದೆ. ಪ್ರಾಚೀನರು ನಾಲ್ಕು ಯೋಗಗಳನ್ನು ಸತ್ಯಸಾಕ್ಷಾತ್ಕಾರಕ್ಕೆ ಸಾಧನವಾಗಿ ಹೇಳಿದ್ದಾರೆ. ಅವೇ ಕರ್ಮಯೋಗ, ಭಕ್ತಿಯೋಗ, ಜ್ಞಾನಯೋಗ ಮತ್ತು ರಾಜಯೋಗ ಗಳು.[೧] ಇವುಗಳಿಗಿಂತ ವಿಭಿನ್ನವಾದ ಮತ್ತೊಂದು ಮಾಧ್ಯಮವುಂಟು. ಅದೇ 'ನಾದ ಯೋಗ'. ತ್ಯಾಗರಾಜರು ಅಳವಡಿಸಿಕೊಂಡ ಅದ್ವಿತೀಯ ಮಾಧ್ಯಮ. ಒಂದೆಡೆ ಅವರು ಸುಸ್ವರಪೂರಿತ ನಾದಯೋಗ ಫಲದಿಂದ ದೈವಸಾಕ್ಷಾತ್ಕಾರ ತಮಗಾಯಿತೇ ಎಂದು ಆಶ್ಚರ್ಯಪಡುತ್ತಾರೆ. ನಾದಯೋಗ ಸಂಬಂಧವಾದ ರಚನೆಗಳಲ್ಲಿ ಅವರು ಸಂಗೀತಾಂಶಗಳ ವ್ಯಾಖ್ಯಾನವನ್ನೂ, ಸಂಗೀತಾಭ್ಯಾಸದ ವಿಧಿವಿಧಾನಗಳನ್ನೂ ಪ್ರಸ್ತಾಪಿಸಿದ್ದಾರೆ. ಇವೆಲ್ಲಕ್ಕಿಂತ ಮಿಗಿಲಾಗಿ ಸಂಗೀತವು ಅರ್ಥಾತ್ ನಾದಯೋಗವು ಅಧ್ಯಾತ್ಮ ಸಾಧನೆಗೆ ಸಾಧನವೂ, ಸಾಧ್ಯವೂ ಹೌದು ಎಂಬ ಅಂಶವನ್ನು ಅವರು ಮನದಟ್ಟು ಮಾಡುತ್ತಾರೆ.

ಹಿಂದೂ ಶಾಸ್ತ್ರಗಳ ಪ್ರಕಾರ ಕಲೆಯೊಂದರ ಕಲಾತ್ಮಕ ಮೌಲ್ಯವು ಯಾವಾಗಲೂ ಆ ಕಲೆಯಲ್ಲೇ ಅಂತಸ್ಥವಲ್ಲ. ಅಂತಹ ಸುಂದರ ವಸ್ತುವು ವಾಸ್ತವವಾಗಿ ತನ್ನಲ್ಲಿ ಅಂತಸ್ಥನಾಗಿದ್ದೂ ಅತೀತನಾಗಿರುವ ದೇವರ ಅಸ್ತಿತ್ವವನ್ನು ಸೂಚಿಸುತ್ತದೆ. ವಿಷ್ಣು ಪುರಾಣದಲ್ಲಿನ ಶ್ಲೋಕವೊಂದು ಹೀಗಿದೆ :

**ಕಾವ್ಯಾಲಾಪಶ್ಚ ಯೇ ಕೇಚಿದ್ ಗೀತಕಾನ್ಯಖಿಲಾನಿ ಚ ।**
**ಶಬ್ದಮೂರ್ತಿಧರಸ್ಯೈತೇ ವಿಷ್ಣೋರಂಶಾ ಮಹಾತ್ಮನಃ ॥[೨]**

ಈ ಪ್ರಕಾರ ಸಮಸ್ತ ಕಾವ್ಯಗಳೂ, ಗೀತೆಗಳೂ ಶಬ್ದದ ಸಾಕಾರನೂ ಮತ್ತು ಮಹಾತ್ಮನೂ ಆದ ವಿಷ್ಣುವಿನ ಅಂಶವಾಗಿದೆ. ವೇದಾಂತದಲ್ಲಿ 'ಅಪರ್ಯವಸಾನ ವೃತ್ತಿ' ಎಂಬ ಪರಿಕಲ್ಪನೆಯೊಂದುಂಟು. ಈ ಪ್ರಕಾರ ಪ್ರತಿಯೊಂದು ಶಬ್ದಕ್ಕೂ ಪಾರ ಮಾರ್ಥಿಕ ಔಚಿತ್ಯವುಂಟು.[೩] ಈ ಸಿದ್ಧಾಂತಗಳ ಬೆಳಕಿನಲ್ಲೇ ಭಗವಂತನು 'ಬಹುಶಬ್ದ ಮಯ'ನೆಂಬ ವಾದವನ್ನು ನಾವು ಅರ್ಥಮಾಡಿಕೊಳ್ಳಬೇಕು.

ತ್ಯಾಗರಾಜರ ಪ್ರಕಾರವಾದರೋ ದೇವರು ನಾದಾತ್ಮ, ನಾದಸ್ವರೂಪಿ, ನಾದಲೋಲ,

ನಾದಶರೀರಿ ಹಾಗೂ ನಾದಮಯಪ್ರಾಣ. ಇದು, ತ್ಯಾಗರಾಜರ ಭಕ್ತಿಗೆ ಕೇಂದ್ರಬಿಂದು ವಾಗಿರುವ ವಾಲ್ಮೀಕಿ ರಾಮಾಯಣದಲ್ಲೇ ಉಕ್ತವಾಗಿದೆ.[೪] ಅಲ್ಲದೆ ದೇವರು ಸಂಗೀತಾ ನಂದ. ದೇವರ ಅನಂತ ಗುಣಗಳಲ್ಲಿ ಆತ ಸಂಗೀತಪ್ರಿಯನೆಂಬುದೂ ಒಂದು. ತ್ಯಾಗ ರಾಜರು ರಾಮನನ್ನು ಸಂಗೀತಲೋಲನೆಂದೂ (ಏಟಿಜನ್ಮಮಿದಿ - ವರಾಳಿ; ಶ್ರೀರಘು ವರಾಪ್ರಮೇಯ - ಕಾಂಬೋಜಿ), ಗಾನಲೋಲನೆಂದೂ (ಜಾನಕೀರಮಣ - ಶುದ್ಧ ಸೀಮಂತಿನಿ), ಗೀತಪ್ರಿಯನೆಂದೂ (ವರಲೀಲಾಗಾನ ಲೋಲ - ಶಂಕರಾಭರಣ), ಸಾಮಗಾನಲೋಲನೆಂದೂ (ಎಂದರೋ ಮಹಾನುಭಾವುಲು-ಶ್ರೀರಾಗ), ಸಂಬೋ ಧಿಸುತ್ತಾರೆ. 'ರಾಗರಸಿಕ'ನಾದ ದೇವರಿಗೆ ಸಂಗೀತೋಪಾಸನೆಯು ಪ್ರಿಯವೆನ್ನುತ್ತಾರೆ.

ಪರಬ್ರಹ್ಮನಾದ ದೇವರು ಶಿವನೂ, ಮಾಧವನೂ, ಕೇಶವನೂ, ರಾಮನೂ ಆಗಿ ದ್ದಾನೆ. ಈತ ಓಂಕಾರ ಸದನ, ಓಂಕಾರಧಾಮ, ಓಂಕಾರವೆಂಬ ಪಂಜರದಲ್ಲಿನ ಗಿಳಿ.

**ಓಂಕಾರ ಪಂಜರಕೀರ ಪುರಹರ**
**ಸರೋಜಭವ ಕೇಶವಾದಿರೂಪ**

(ಜಗದಾನಂದಕಾರಕ - ನಾಟ)

ಅಷ್ಟೇ ಅಲ್ಲ, ಈತ ನಾದಶರೀರಿ. ಇಂತಹ ನಾದಸುಧೆಯೇ ಭೂಮಿಯಲ್ಲಿ ನರಾಕೃತಿ ಯಾಗಿ ಮೂಡಿದೆ. ಮಾನವಾಕೃತಿಯಲ್ಲಿ ಅವತರಿಸಿದ ಶ್ರೀರಾಮನ ಕೋದಂಡಕ್ಕೆ ಕಟ್ಟಿದ ಏಳು ಗಂಟೆಗಳು ಏಳು ಸ್ವರಗಳು, ಬಿಲ್ಲಿಗೆ ಕಟ್ಟಿರುವ ಮೂರು ಹುರಿಗಳು ಘನ, ನಯ, ದೇಶ್ಯವೆಂಬ ರಾಗದ ಮೂರು ಪ್ರಭೇದಗಳು.

**ನಾದತನುಮನಿಶಂ ಶಂಕರಂ**

(ನಾದತನುಮನಿಶಂ - ಚಿತ್ತರಂಜಿನಿ)

**ನಾದಸುಧಾರಸಂಬಿಲನು ನರಾಕೃತಿಯಾಯೆ ಪ್ರಣವ**
**ಸ್ವರಮುಲಾರುನ್ನೊಕ ಗಂಟಲು**
**ವರರಾಗಮು ಕೋದಂಡಮು**
**ದುರ ನಯ ದೇಶ್ಯಮು ತ್ರಿಗುಣಮು**

(ನಾದಸುಧಾರಸಂಬಿಲನು - ಆರಭಿ)

ಹೀಗೆ ದೇವರು ನಾದಸುಧಾರಸನಾಗಿ, ಸಮಸ್ತ ಕಾವ್ಯಗಳಲ್ಲಿ ಹಾಗೂ ಗೀತೆಗಳಲ್ಲಿ ಅಡಗಿರುವುದರಿಂದ ನಾದವು ಸಾಧನವೂ, ಸಾಧ್ಯವೂ ಆಗಿದೆ. ಸಂಗೀತಕಲೆಯ ಮೂಲಕ ದೇವರನ್ನು ಆರಾಧಿಸುವುದರಿಂದ ಅದು ಉಪಾಯವೂ, ಉಪೇಯವೂ ಹೌದು, ಕರುವಿಗೆ ಹುಲ್ಲಿನ ಜೊಂಡು ಗುರಿಯೂ, ಸಾಧನವೂ ಆಗಿರುವಂತೆ.

ನಾದಯೋಗಕ್ಕೆ ಸಂಬಂಧಿಸಿದಂತೆ ತ್ಯಾಗರಾಜರ ರಚನೆಗಳನ್ನು ಮೂರು ದೃಷ್ಟಿ ಕೋನಗಳಿಂದ ಅಧ್ಯಯನ ಮಾಡಬಹುದು.

(ಅ) ನಾದಸಂಬಂಧವಾದವು ; (ಆ) ಭಕ್ತಿಸಂಬಂಧವಾದವು ; (ಇ) ನೀತಿಸಂಬಂಧ ವಾದವು.

ಇವೆಲ್ಲವೂ ಒಂದಕ್ಕೊಂದು ಪೂರಕವಾಗಿ, ಒಂದರೊಡನೆ ಇನ್ನೊಂದು ಬೆರೆತಂತೆಯೇ ಇವೆ. ಪ್ರಾಣಾಯಾಮ, ಪ್ರಣವನಾದ, ನಾದೋತ್ಪತ್ತಿ, ಸಾಮವೇದ ಸಂಬಂಧ, ಸಪ್ತಸ್ವರಗಳು, ಅವು ಮಾನವ ದೇಹದಲ್ಲಿ ಮೂಡಿ ಅಭಿವೃದ್ಧಿಗೊಳ್ಳುವುದು, ಗಾಯನ, ವಾದನ, ನರ್ತನಗಳಿಂದೊಡಗೂಡಿದ ಸಂಗೀತ, ಸಂಗೀತದಲ್ಲಿನ ವಸ್ತು, ನಾದೋಪಾಸಕರು, ನಾದೋಪಾಸನೆಯ ನಿಯಮಗಳು, ದೈವಕೃಪೆ ಈ ಅಂಶಗಳೆಲ್ಲವೂ ಇದರಲ್ಲಿ ಅಡಕಗೊಳ್ಳುತ್ತವೆ.

ಪ್ರಪ್ರಥಮವಾಗಿ ಪ್ರಾಣಾಯಾಮ. ಚಿತ್ತದ ವಿಕ್ಷೇಪಗಳನ್ನು ನಿಯಂತ್ರಿಸಲು ಪತಂಜಲಿಗಳು ವಿಧಿಸಿರುವ ಎಂಟು[೫] ಮಾರ್ಗಗಳಲ್ಲಿ ಪ್ರಾಣಾಯಾಮವೂ ಒಂದು. ಪ್ರಾಣಾಯಾಮದಲ್ಲಿ ನಾನಾ ವಿಧಗಳುಂಟು. ಈ ಬಗ್ಗೆ ಯೋಗಸೂತ್ರ, ಸ್ವಾತ್ಮಾರಾಮ ಯೋಗೀಂದ್ರರ ಹಠಯೋಗ ಪ್ರದೀಪಿಕಾ ಮತ್ತು ಘೇರಂಡ ಸಂಹಿತ ಇತ್ಯಾದಿ ಗ್ರಂಥಗಳು ಮಾಹಿತಿ ನೀಡುತ್ತವೆ. ಒಟ್ಟಾರೆ ಪ್ರಾಣಾಯಾಮ ಎಂದರೆ ಉಸಿರಿನ ನಿಗದಿತ ನಿಯಂತ್ರಣ. ತ್ಯಾಗರಾಜರು ಪ್ರಾಣಾಯಾಮದ ಕುಂಭಕ, ರೇಚಕಗಳನ್ನು ಹೀಗೆ ಪ್ರಸ್ತಾಪಿಸಿದ್ದಾರೆ.

ಕುಂಭಕ ರೇಚಕ ವಿದುಲನು ಕೋರಿ ಬ್ರೋಚಿನಾವು

(ವಲ್ಲಗಾದನಕ - ಶಂಕರಾಭರಣ)

ಎಲ್ಲಾ ಗ್ರಂಥಗಳಲ್ಲೂ ಪ್ರಾಣಾಯಾಮವನ್ನು ಮೂರು ವಿಧವಾಗಿ ವಿಭಾಗಿಸಿರುವರು. ಅವು ರೇಚಕ, ಪೂರಕ ಮತ್ತು ಕುಂಭಕ. ರೇಚಕವೆಂದರೆ ನಿಯಂತ್ರಿತವಾಗಿ ಉಸಿರನ್ನು ಬಿಡುವುದು. ಕುಂಭಕವೆಂದರೆ ಉಸಿರನ್ನು ನಿಲ್ಲಿಸುವುದು. ಪೂರಕವೆಂದರೆ ಉಸಿರನ್ನು ಸೆಳೆದುಕೊಳ್ಳುವುದು.[೬]

ಮೇಲಿನ ಸಾಲಿನಲ್ಲಿ ತ್ಯಾಗರಾಜರು ಕುಂಭಕ, ರೇಚಕಗಳನ್ನು ಪ್ರಸ್ತಾಪಿಸಿರುವುದು ಗಮನಾರ್ಹ. ಪ್ರಾಣಾಯಾಮವು ಸಂಗೀತ ಸಾಧನೆಗೆ ಅತಿ ಮುಖ್ಯವೆಂಬ ಕಾರಣದಿಂದಲೇ ತ್ಯಾಗರಾಜರು ಈ ಅಂಶದ ಪ್ರಸ್ತಾಪ ಮಾಡಿದ್ದಾರೆ.

ಸತ್ಯಾನ್ವೇಷಣೆಗಾಗಿ ಉಪನಿಷತ್ತಿನಲ್ಲಿ ಹೇಳಿರುವ ನಿಗೂಢ ವಿದ್ಯೆಗಳಲ್ಲಿ ಉದ್ಗೀಥ ವಿದ್ಯೆ ಎಂದರೆ ಪ್ರಣವ ಅಥವಾ ಓಂಕಾರದ ಆರಾಧನೆಯೂ ಒಂದು.[೭] ಓಂ ಎಂಬ ಈ ಅಕ್ಷರವನ್ನು ಉಪಾಸಿಸಬೇಕು.[೮] ಓಂ ಎಂಬ ಈ ಅಕ್ಷರವು ಋಕ್ ಮತ್ತು ಸಾಮಗಳಿಗೆ ಕಾರಣವಾದ ವಾಕ್ಕು ಮತ್ತು ಪ್ರಾಣ. ಯಾವನು ಈ ಉದ್ಗೀಥವೆಂಬ ಅಕ್ಷರವನ್ನು ಅರಿತುಕೊಂಡು ಉಪಾಸಿಸುವನೋ ಅವನಿಗೆ ಫಲಪ್ರಾಪ್ತಿಯಾಗುವುದು.[೯] ಅಲ್ಲದೆ ದೇವತೆಗಳೇ ಉದ್ಗೀಥವನ್ನು ವಾಗ್ದೇವತೆಯೆಂದು ಉಪಾಸಿಸಿದರು.[೧೦] ಯಾವನು ಸಾಮವನ್ನು ಸಾಧುವೆಂದು ಉಪಾಸಿಸುವನೋ ಅವನಿಗೆ ಸಾಧು ಧರ್ಮಗಳು ಎಂದರೆ ಶ್ರುತಿ ಸ್ಮೃತಿಗಳಿಗೆ ವಿರುದ್ಧವಲ್ಲದ ಧರ್ಮಗಳು ಶೀಘ್ರವಾಗಿ ಬಳಿಸಾರುವುವು[೧೧] ಎನ್ನುತ್ತದೆ ಛಾಂದೋಗ್ಯೋಪನಿಷತ್ತು. ಓಂ ಅಕ್ಷರದಲ್ಲಿ ಸ್ವರ, ವ್ಯಂಜನ, ವಾಙ್ಮಯ ಹಾಗೂ ವೇದಗಳು ಅಡಗಿವೆ. ಇದು ಪರಮೇಶ್ವರನ ವಾಙ್ಮಯ ಮೂರ್ತಿ. ಈ ಶಬ್ದದ

ಜಪಧ್ಯಾನಾದಿಗಳಿಂದ ಅದರ ಸೀಮಾತೀತವಾದ ದಿವ್ಯ ಮಹಿಮೆಯ ಅರಿವು ಉಂಟಾಗು ವುದು. ಹಿಂದೂ ಧರ್ಮಗ್ರಂಥಗಳಲ್ಲೆಲ್ಲಾ ಈ ಶಬ್ದದ ವಿಚಾರವಾಗಿ ವಿಶೇಷ ವಿವರ ಗಳು ಲಭ್ಯವಾಗುತ್ತವೆ. ಪತಂಜಲಿಯ ಯೋಗಸೂತ್ರದಲ್ಲೂ, ಉಪನಿಷತ್ತು, ಭಗವ ದ್ಗೀತೆಗಳಲ್ಲೂ ಓಂಕಾರದ ವಿವರ, ಧ್ಯಾನ, ಅದರ ಫಲಗಳ ವಿಚಾರವಾಗಿ ಪ್ರಾಯೋ ಗಿಕವಾದ ವಿವರಣೆಗಳಿವೆ. ಒಟ್ಟಾರೆ ಹಿಂದೂಧರ್ಮದ ಸಂಕೇತಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠ ಹಾಗೂ ಮಹತ್ವಪೂರ್ಣವಾದುದು 'ಓಂ' ಶಬ್ದ.

ಸಾಂಪ್ರದಾಯಿಕವಾಗಿ ನಾದವು ಪ್ರಾಣ ಮತ್ತು ಅನಲಗಳ ಸಂಯೋಗದಿಂದ ಉಂಟಾಗುತ್ತದೆ. ವೈಜ್ಞಾನಿಕವಾಗಿ ನಾದೋತ್ಪತ್ತಿ ವಿವರಣೆ ಹೀಗೆ. ವಸ್ತುವೊಂದು ಕಂಪಿಸಿದಾಗ ಅದರ ಕಂಪನವು ವಾಯುಮಂಡಲದಲ್ಲಿ ಸೇರಿ ಅದೇ ರೀತಿಯ ಸ್ಪಂದನ ಗಳು ಉಂಟಾಗುತ್ತವೆ. ನಮ್ಮ ಕಿವಿಯೊಳಗಿರುವ ಗಾಳಿಯಲ್ಲೂ ಅದೇ ಸ್ಪಂದನಗಳು ಉಂಟಾದಾಗ ಕಿವಿತಮಟೆಯು ಅದಕ್ಕನುಗುಣವಾಗಿ ಕಂಪಿಸಿ, ಮೆದುಳಿಗೆ ತಲುಪಿ ನಾದಾನುಭವವಾಗುತ್ತದೆ. ಇಂತಹ ನಾದದಿಂದ ಅಕ್ಷರಗಳೂ, ಅಕ್ಷರಗಳಿಂದ ಶಬ್ದ ಗಳೂ, ಶಬ್ದಗಳಿಂದ ವ್ಯವಹಾರವೂ ಉಂಟಾಗುತ್ತದೆ. ಆದ್ದರಿಂದ ಲೋಕವೆಲ್ಲ ನಾದಾಧೀನವೇ. ಇದರ ಪ್ರಸ್ತಾಪ ಸಂಗೀತ ರತ್ನಾಕರ ಗ್ರಂಥದಲ್ಲಿ ಹೀಗಿದೆ.

**ನಾದೇನ ವ್ಯಜ್ಯತೇ ವರ್ಣಃ ಪದಂ ವರ್ಣಾತ್ಪದಾದ್ವಚಃ ।**
**ವಚಸೋ ವ್ಯವಹಾರೋಽಯಂ ನಾದಾಧೀನ ಮತೋಽಜಗತ್ ॥**[೨]

ಪ್ರಾಣಾನಲಗಳ ಸಂಯೋಗದಿಂದ ಉಂಟಾದ ನಾದವು ಸಪ್ತಸ್ವರಗಳಾಗಿ ರೂಪು ಗೊಳ್ಳುವುದು ಮತ್ತು ಇವು ಶ್ರೇಷ್ಠ ಸ್ವರಗಳೆಂಬುದನ್ನು ತ್ಯಾಗರಾಜರು ಹೀಗೆ ನುಡಿ ಯುತ್ತಾರೆ.

ಪ್ರಾಣಾನಲ ಸಂಯೋಗಮುವಲ್ಲ
ಪ್ರಣವ ನಾದಮು ಸಪ್ತ ಸ್ವರಮುಲೈ ಬರಗ

(ಮೋಕ್ಷಮುಗಲದಾ - ಸಾರಮತಿ)

ಮಾನವ ದೇಹದಲ್ಲಿನ ಷಟ್ ಚಕ್ರಗಳಲ್ಲಿ,[೩] ಮೂಲಾಧಾರ ಜನಿತವಾದ ಈ ನಾದ ಗಳು ಪ್ರಣವಾಕಾರವೇ. ಇದನ್ನು ಅರಿಯುವುದೇ ಆನಂದಮಯವಾದ ಮೋಕ್ಷ ವೆಂಬುದು ತ್ಯಾಗರಾಜರ ನುಡಿ.

ದೇಹೋದ್ಭವಂಬಗು ನಾದಮುಲ್
ದಿವ್ಯಮೌ ಪ್ರಣವಾಕಾರಮನೆ

(ವರರಾಗಲಯಜ್ಞುಲು - ಚೆಂಚುಕಾಂಬೋಜಿ)

**ಮೂಲಾಧಾರಜ ನಾದಮೆರುಗುಟೇ ಮುದಮಗು ಮೋಕ್ಷಮುರಾ**

(ಸ್ವರರಾಗ ಸುಧಾರಸ - ಶಂಕರಾಭರಣ)

ಸಪ್ತಸ್ವರಗಳು ಸಂಗೀತದ ಜೀವನಾಡಿಗಳು. ಇವು ನಾದರೂಪಿಯಾದ ಪರಬ್ರಹ್ಮನ ಸದ್ಯೋಜಾತಾದಿ ಪಂಚಮುಖಗಳಿಂದ ಹೊರಹೊಮ್ಮಿವೆ. ಆದ್ದರಿಂದ ಇವು ಸುಂದರ

ವಾದವು. ದೇಹದ ನಾಭಿ, ಹೃದಯ, ಕಂಠ, ರಸನ ಮತ್ತು ನಾಸಗಳೆಂಬ ಅವಯವಗಳ ಮೂಲಕ ಇವು ಪ್ರವಹಿಸುತ್ತವೆ.

**ಸದ್ಯೋಜಾತಾದಿ ಪಂಚವಕ್ತ್ರ ಜ**
**ಸರಿಗಮಪದನಿ ವರಸಪ್ತಸ್ವರ**

**(ನಾದತನುಮನಿಶಂ - ಚಿತ್ತರಂಜನಿ)**

**ನಾಭಿ ಹೃತ್ಕಂಠ ರಸನ ನಾಸಾದುಲಯಂದು**
**ಶೋಭಿಲ್ಲು ಸಪ್ತಸ್ವರ**

**(ಶೋಭಿಲ್ಲು ಸಪ್ತಸ್ವರ - ಜಗನ್ಮೋಹಿನಿ)**

ಋಕ್‌ಸಾಮಾದಿ ವೇದಗಳಲ್ಲೂ, ಗಾಯತ್ರೀ ಮಂತ್ರದಲ್ಲೂ ಇವು ಅಡಕವಾಗಿವೆ. ದೇವಬ್ರಾಹ್ಮಣರ ಮನದಲ್ಲೂ ಮನೆಮಾಡಿಕೊಂಡಿರುವ ಸಪ್ತಸ್ವರಗಳೆಂಬ ಸುಂದರರನ್ನು ಸಂಗೀತೋಪಾಸಕರು ಆಹತನಾದದ ಮೂಲಕ ಉಪಾಸಿಸುತ್ತಾರೆ.

**ಧರ ಋಕ್ಸಾಮಾದುಲಲೋ**
**ವರಗಾಯತ್ರಿ ಹೃದಯಮುನ**
**ಸುರಭೂಸುರ ಮಾನಸಮುನ**

**(ಶೋಭಿಲ್ಲು ಸಪ್ತಸ್ವರ - ಜಗನ್ಮೋಹಿನಿ)**

ಸಪ್ತಸ್ವರಗಳು ಸುಂದರವಾಗಿರಲು ಕಾರಣ ದೇವರು ಸಪ್ತಸ್ವರಚಾರಿಯಾಗಿರುವುದು. ಇವನ್ನು ಪ್ರಯೋಗಿಸುವಾಗ ವಿರೂಪಗೊಳಿಸಬಾರದು. ಇದು ದೇವರಿಗೆಸಗಿದ ಅಪಚಾರವಾದೀತು ಎಂದೇ ತ್ಯಾಗರಾಜರು ಸ್ವರಶುದ್ಧಿಯನ್ನು ಅಥವಾ ಸುಸ್ವರವನ್ನು ಮತ್ತೆಮತ್ತೆ ನುಡಿಯುತ್ತಾರೆ.

**ಸುಸ್ವರಮುತೋನು**

**(ಕದ್ದನುವಾರಿಕಿ - ತೋಡಿ)**

**ಸುಸ್ವರಪು ನಾದಫಲಮೋ**

**(ಎಟ್ಲಾದೊರಕಿತಿವೋ - ವಸಂತ)**

**ನಿತ್ಯಮೈನ ಸುಸ್ವರ ಗಾನಮುತೋ**

**(ಸುಖಿಎವ್ವರೋ - ಕಾನಡ)**

**ಸುಸ್ವರಲೀಲುಡೌ**

**(ಸೀತಾವರ ಸಂಗೀತಜ್ಞಾನಮು - ದೇವಗಾಂಧಾರಿ)**

**ಸುಸ್ವರಮಯ ಭೂಷ**

**(ನೀದಯಚೇರಾಮ - ಯದುಕುಲಕಾಂಬೋಜಿ)**

ಸಂಗೀತವು ಸಾಮನಿಗಮದಿಂದ ಜನಿಸಿದ ಸುಧಾಮಯಗಾನ.

**ಸಾಮನಿಗಮ ಜ ಸುಧಾಮಯಗಾನ**

**(ಸಾಮಜವರಗಮನ - ಹಿಂದೋಳ)**

ರಾವಣನು ಸಾಮಗಾನದಿಂದ ಶಿವನನ್ನು ಒಲಿಸಿಕೊಂಡಂತೆ ಹೇಳುವುದುಂಟು. ವೇದಗಳಲ್ಲಿ ತಾನು ಸಾಮವೇದವೇ ಆಗಿರುವೆನೆಂಬುದು ಭಗವದ್‌ವಾಕ್ಯ. ಆದ್ದರಿಂದ ಸೂಕ್ತ ರೀತಿಯಲ್ಲಿ ನಿಯತವಾಗಿ ಮಾಡಿದ ಸಾಮಗಾನ ಅಭ್ಯಾಸದಿಂದ ಒಬ್ಬನು ದೈವತ್ವವನ್ನು ಪಡೆಯಬಹುದೆನ್ನುತ್ತದೆ, ಯಾಜ್ಞವಲ್ಕ್ಯ ಸ್ಮೃತಿ.[೧೪] ಆದ್ದರಿಂದ ತ್ಯಾಗರಾಜರೂ ದೇವರನ್ನು ಸಾಮಗಾನಲೋಲನಾಗಿಯೂ ಗುರುತಿಸುತ್ತಾರೆ (ಎಂದರೋ ಮಹಾನುಭಾವುಲು - ಶ್ರೀರಾಗ).

ಸಂಗೀತವೆಂಬುದು ಬರಿಯ ಗಾಯನವಷ್ಟೇ ಅಲ್ಲ. ಗೀತ, ವಾದ್ಯ ಮತ್ತು ನೃತ್ಯ—ಈ ಮೂರೂ ಸೇರಿ ಸಂಗೀತವೆನಿಸುತ್ತದೆ. ಈ ಅಭಿಪ್ರಾಯವು ಸಾರಂಗದೇವನ 'ಸಂಗೀತ ರತ್ನಾಕರ', ಅಹೋಬಲನ 'ಸಂಗೀತ ಪಾರಿಜಾತ', ಚತುರ ದಾಮೋದರ ಪಂಡಿತನ 'ಸಂಗೀತ ದರ್ಪಣ' ಮುಂತಾದ ಗ್ರಂಥಗಳಲ್ಲಿ ಸ್ಪಷ್ಟವಾಗಿದೆ.[೧೫] ಆದರೆ ಗೀತ ವಾದ್ಯಗಳ ಮೇಳೈಕೆಯಷ್ಟೇ ಸಂಗೀತ ಎಂಬ ಉಲ್ಲೇಖವೂ ಉಂಟು.[೧೬] ತ್ಯಾಗರಾಜರು ಗೀತ, ವಾದ್ಯ, ನರ್ತನಗಳೆಲ್ಲವನ್ನೂ ಸೇರಿದಂತೆ ನಾದಯೋಗ ರಚನೆಗಳನ್ನು ವಿಶದಪಡಿಸುತ್ತಾರೆ. ಭಗವನ್ನಾಮ ಸಂಕೀರ್ತನೆಯು ಈ ಮೂರನ್ನೂ ಒಳಗೊಂಡಿರಬೇಕೆಂಬ ತ್ಯಾಗರಾಜರ ನಿಲುವು, ಹಲವು ರಚನೆಗಳ ಮೂಲಕ ಸ್ಪಷ್ಟಪಡುತ್ತದೆ. ಧ್ಯಾನಯೋಗಯುತರಾಗಿ ಹರಿಯ ನಾಮಗಳನ್ನು ನುಡಿಯುವಾಗ, ವೀಣಾಗಾನದೊಂದಿಗೆ ಆಗಮಚರನನ್ನು ಮಂಗಳರಾಗಗಳಲ್ಲಿ (ಶ್ರೀ) ಹಾಡುವವರು ಸಂಸಾರಿಗಳಾಗಿದ್ದರೂ ಮುಕ್ತಿಗೆ ಅರ್ಹರೇ ಎಂಬ ಅವರ ಅಭಿಪ್ರಾಯ ಇಲ್ಲಿದೆ.

**ಧ್ಯಾನಯೋಗಯುತುಲೈ ನೀ ನಾಮಮು ಬಲ್ಕುಚು . . . .**

**ವೀಣಾಗಾನಮುತೋ ಆಗಮಚರುನಿ ಶ್ರೀರಾಗಮುನಪಾಡುಚು**

**(ಸಂಸಾರುಲೈತೇನೇಮಯ್ಯ - ಸಾವೇರಿ)**

ನಾಮಸಂಕೀರ್ತನೆ ಮಾಡುತ್ತಾ ಹೊರಟ ಹರಿದಾಸರ ಲಕ್ಷಣವನ್ನು ತಿಳಿಸುವ ರಚನೆಯೊಂದರಲ್ಲಿ ತ್ಯಾಗರಾಜರು, ದಿಟ್ಟವಾದ ಹೆಜ್ಜೆಗಳನ್ನಿಡುತ್ತಾ, ತಾಳಕ್ಕೆ ತಕ್ಕಂತೆ ಕಾಲ್ಗೆಜ್ಜೆಗಳನ್ನು ಘಲ್‌ಘಲ್ ಶಬ್ದಮಾಡುತ್ತಾ ಇರಲು ಹರಿದಾಸರು ಹೊರಟ ರೀತಿಯನ್ನು ಚಿತ್ರಿಸುತ್ತಾರೆ. ಇಲ್ಲಿ ನಾಮಸಂಕೀರ್ತನೆಯು ರಾಗಯುತವಾಗಿ, ವೀಣೆ ಹಾಗೂ ಮೃದಂಗ ಘೋಷದೊಡನೆ ಕೂಡಿದ್ದಿತೆಂಬ ಅಂಶವು ಮುಖ್ಯವಾಗುತ್ತದೆ.

**ಸಂಗತಿಗಾನು ಮೃದಂಗ ಘೋಷಮುಲಚೇ . . . .**

**ದಿಟ್ಟಮುಗಾ ನಡುಕಟ್ಟುತೋ ಅಡುಗುಲು ಪೆಟ್ಟುಚು**

**ತಾಳಮುಪಟ್ಟಿ ಘಲ್ ಘಲ್ ಅನಗ . . . .**

**(ಹರಿದಾಸುಲು ವೆಡಲೆ - ಯಮುನಾಕಲ್ಯಾಣಿ)**

ಹೀಗೆ ನುಡಿಸಲ್ಪಡುವ ಲಯವಾದ್ಯವು, ತಾಳಗತಿಗಳನ್ನು ಅರಿತು ನುಡಿಸುವಂತಹುದಾಗಿರಬೇಕು. ಇಲ್ಲದಿದ್ದಲ್ಲಿ ಅದರಿಂದ (ಮಾನವರಿಗಾಗಲೀ, ದೇವತೆಗಳಿಗಾಗಲೀ) ಸುಖವಿಲ್ಲ.

**ಮದ್ದಳ ತಾಳಗತುಲ ತೆಲಿಯಕನೇ**
**ಮರ್ದಿಂಚುಟ ಸುಖಮಾ ?**

**(ಸ್ವರರಾಗ ಸುಧಾರಸಯುತ - ಶಂಕರಾಭರಣ)**

ಹೀಗೆಂದೇ ತ್ಯಾಗರಾಜರು ಸೊಗಸಾದ ಮೃದಂಗ ಮತ್ತು ಸ್ವರಶುದ್ಧಿಯಿಂದ ಕೂಡಿದ ಸಂಗೀತದಿಂದ ದೇವರನ್ನು ಸೊಕ್ಕುವಂತೆ ಮಾಡುವ ಸಮರ್ಥರನ್ನು 'ಧೀರ' ರೆಂದೇ ಸಂಬೋಧಿಸುತ್ತಾರೆ. ಅಂತಹ ಧೀರನಾರು ಎಂಬುದು ಅವರ ಪ್ರಶ್ನೆ.

**ಸೊಗಸುಗಾ ಮೃದಂಗ ತಾಳಮು ಜತಗೂರ್ಚಿ**
**ನಿನ್ನು ಸೊಕ್ಕಜೇಯು ಧೀರುಡೆವ್ವಡೋ ?**
**ನಿಗಮ ಶಿರೋರ್ಥಮು ಗಲ್ಗಿನ**
**ನಿಜವಾಕ್ಕುಲತೋ ಸ್ವರ ಶುದ್ಧಮುತೋ**

**(ಸೊಗಸುಗಾ - ಶ್ರೀರಂಜನಿ)**

'ನಿಗಮ ಶಿರೋರ್ಥಮು ಗಲ್ಗಿನ ನಿಜವಾಕ್ಕುಲತೋ' ಎಂದು ತ್ಯಾಗರಾಜರಿಲ್ಲಿ ಸಂಗೀತದ ವಸ್ತು ಏನಾಗಿರಬೇಕೆಂಬುದನ್ನು ಶ್ರುತಪಡಿಸುತ್ತಾರೆ. ಎಂದರೆ ಸಂಗೀತದ ವಸ್ತು ಅದರ ಕೌಶಲದಷ್ಟೇ ಮಹತ್ವದ್ದಾಗಿರಬೇಕು. ಕಲೆಯಲ್ಲಿ 'ಹೇಗೆ' ಎಂಬುದು ಎಷ್ಟು ಮುಖ್ಯವೋ ಅದರಲ್ಲಿ 'ಏನು' ಎಂಬುದೂ ಅಷ್ಟೇ ಮುಖ್ಯ. ಎಂದಾಗ ಕಲೆ ಯೊಂದರಲ್ಲಿ ವಿಧಾನವಷ್ಟೇ ಅಲ್ಲ, ಅದರ ವಸ್ತುವೂ ಅಷ್ಟೇ ಮುಖ್ಯವಾಗಿರಬೇಕು. ಅದು ಗಹನವಾಗಿದ್ದು ನಮ್ಮನ್ನು ಅಧ್ಯಾತ್ಮಿಕ ತುತ್ತುತುದಿಗೇರಿಸಿ ಮುಕ್ತಿಗೆ ಕೊಂಡೊಯ್ಯುವಂತಿರಬೇಕು. ಈ ಸಂದರ್ಭದಲ್ಲಿ ಕಲೆಯಲ್ಲಿ ಕೇವಲ ಆಕಾರವಷ್ಟೇ ಮುಖ್ಯ ಎಂಬ ವಾದವು ಸ್ವೀಕಾರಾರ್ಹವಲ್ಲ. ಸಂಗೀತವನ್ನೇ ಉದಾಹರಣೆಯಾಗಿ ತೆಗೆದುಕೊಂಡರೆ, ಅದು ಶಬ್ದಗಳ ವ್ಯವಸ್ಥಿತ ಜೋಡಣೆಯಷ್ಟೆ ಅಲ್ಲ, ಅದು ದೈವಿಕ ವಾದುದು, ದೇವರನ್ನೇ ವಸ್ತುವಾಗಿ ಉಳ್ಳದ್ದು, ದೈವಾಂಶವಾದದ್ದು. ಆದ್ದರಿಂದ ಅದು ಮನುಷ್ಯನ ಮುಕ್ತಿಗೆ ಅತ್ಯುತ್ತಮವಾದ ಒಂದು ಸಾಧನವಾಗಬಲ್ಲುದು. ಉಳಿದೆಲ್ಲ ಕಲೆ ಗಳಿಗಿಂತ ಸುಲಭವಾಗಿ, ಕ್ಷಣಾರ್ಧದಲ್ಲೇ ಅಂತರಾಳವನ್ನು ಮಿಡಿಸಬಲ್ಲ ಶಕ್ತಿ ಇರುವ ಕಲೆಯದು. ಈ ಅಂಶವು ಅತ್ಯಂತ ಪ್ರಾಚೀನ ಕಾಲದಲ್ಲೇ ತಿಳಿದದ್ದರಿಂದ ಪಠಿಸಲ್ಪಡು ತ್ತಿದ್ದ 'ಋಕ್'ಗಳು ಗಾನರೂಪದ 'ಸಾಮ'ಗಳಾದವು. ಇಂತಹ ಗಾನದ ವಸ್ತು ಶ್ರೇಷ್ಠ ವಾಗಿದ್ದಿತು. ಇದೇ ದೃಷ್ಟಿಯಿಂದ ತ್ಯಾಗರಾಜರು ಮೇಲಿನ ಮಾತುಗಳನ್ನು ನುಡಿಯು ವುದು. ಇದೇ ಅಭಿಪ್ರಾಯವನ್ನು ಅವರು ಬೇರೆ ರಚನೆಗಳಲ್ಲೂ ಒತ್ತಿ ನುಡಿಯುತ್ತಾರೆ. ರಾಮಸ್ತುತಿಯಲ್ಲದ ಹಾಡನ್ನು ಹಾಡಿದರೇನು ಅಥವಾ ಹಾಡದಿದ್ದರೇನು? ರಾಮವಸ್ತು ವನ್ನುಳ್ಳ ಹಾಡೇ ನಿಜವಾದ ಹಾಡು ಎಂದವರು ಪ್ರತಿಪಾದಿಸುತ್ತಾರೆ.*

---

* ಈ ಸಂದರ್ಭದಲ್ಲಿ ವ್ಯಾಸರಾಯರ 'ಕಮಲನಾಭನ ಪಾಡಿಪೊಗಳದ ಸಂಗೀತ ಗಾರ್ದಭ ರೋದನವು' ಹಾಗೂ ಪುರಂದರರ 'ದಾನವಾರಿಯ ದಿವ್ಯನಾಮ ರಹಿತವಾದ ಹೀನ ಸಂಗೀತ ಸಾಹಿತ್ಯ' ಎಂಬ ಸಾಲುಗಳನ್ನು ಸ್ಮರಿಸಬಹುದು.

**ಪದಮು ತ್ಯಾಗರಾಜನುತುನಿಷ್ಟೆ ಗಾನಿದಿ**
**ಪಾಡಿಯೇಮಿ ? ಪಾಡಕುಂಡಿನಯೇಮಿ ?***

**(ಸಮಯಮುದೆಲಿಸಿ - ಅಸಾವೇರಿ)**

**ರಾಮಾ ನೀ ಪಾಟೇ ಪಾಟ**

**(ರಾಮಕೋದಂಡರಾಮ - ಭೈರವಿ)**

ತ್ಯಾಗರಾಜರ ಕಾಲಕ್ಕಿಂತ ಬಹಳ ಮುಂಚಿತವಾಗಿಯೇ ಸಂಗೀತವು ಧಾರ್ಮಿಕ ಗೊಂಡಿದ್ದು, ಭಕ್ತಿಪಂಥದ ಗ್ರಂಥಗಳು, ದೈವಾರಾಧನೆಯೆಂಬ ನಿತ್ಯಕರ್ಮವು ಗೀತ ಮತ್ತು ನೃತ್ಯಗಳೊಂದಿಗೆ ಇರಬೇಕು ಎನ್ನುತ್ತವೆ. ತ್ಯಾಗರಾಜರ ಕಾಲಕ್ಕಾಗಲೇ ನರಸ್ತುತಿಯನ್ನೊಳಗೊಂಡ ಸಂಗೀತ ರಚನೆಗಳು ಅಲ್ಲಲ್ಲಿ ಸೃಷ್ಟಿಗೊಂಡಿದ್ದವು. ವಾಗ್ಗೇಯಕಾರರು ಇಂತಹ ರಚನೆಗಳಲ್ಲಿ ಆಶ್ರಯದಾತರಾಗಿದ್ದ ರಾಜರನ್ನು ಸ್ತುತಿಸಿದ್ದರು. ಆದರೆ ರಾಜಸಂತತಿಗಳು ವ್ಯತ್ಯಾಸಗೊಂಡಂತೆ ಅಥವಾ ನಿರ್ದಿಷ್ಟ ರಾಜನ ಕಾಲಾನಂತರ ಆತನ ಸ್ತುತಿಯಾಗಿದ್ದ ರಚನೆಗಳು ಬಹುತೇಕ ರೂಢಿ ತಪ್ಪಿದ್ದವು. ಪ್ರಾಚೀನ ಕಾಲದಿಂದಲೂ ಏಕಪ್ರಕಾರವಾಗಿ ಮಾನ್ಯತೆ ಪಡೆದಿದ್ದ ಗೀತೆಗಳೆಂದರೆ ಭಗವದ್ವಸ್ತುವನ್ನು ವಿಷಯವಾಗಿ ಹೊಂದಿದ ರಚನೆಗಳು ಮಾತ್ರ. ಇಂತಹ ಸತ್‌ಸಂಪ್ರದಾಯವನ್ನೇ ತ್ಯಾಗರಾಜರೂ ಅನುಸರಿಸಿದರು, ಅನುಮೋದಿಸಿದರು. ರಾಮತಾರಕವನ್ನು ವಸ್ತುವಾಗಿಸಿ ಸುಸ್ವರಗಳೊಂದಿಗೆ ಗಾನ ಮಾಡಿ ಸುಖಿಸುವ ಸುಖಿಯಾರೆಂದು ಅಚ್ಚರಿಪಟ್ಟರು.

**ಸುಖಿಯೆವ್ವರೋ . . . .**
**ನಿತ್ಯಮೈನ ಸುಸ್ವರಗಾನಮುತೋ ನಿರಂತರಮು**

**(ಸುಖಿಯೆವ್ವರೋ - ಕಾನಡ)**

ಹೀಗೆ ತ್ಯಾಗರಾಜರ ದೃಷ್ಟಿಯಲ್ಲಿ ಸಂಗೀತ ಮತ್ತು ಭಕ್ತಿಗಳು ನಾಣ್ಯವೊಂದರ ಎರಡು ಮುಖಗಳಂತೆ. 'ಭಕ್ತಿಯೊಡಗೂಡಿದ ಗಾನವು ಯೋಗವಾಗುತ್ತದೆ. ಆ ಯೋಗದಿಂದ ಜೀವಿಯು ಅದ್ವೈತಸ್ಥಿತಿಯನ್ನು ತಲುಪುವನೆಂದು ಸೂತ ಸಂಹಿತೆಯ ಉಕ್ತಿ.'[೧೭] ದಿವ್ಯವಾದ ಈ ಎರಡು ಮಾರ್ಗಗಳೆಡೆಗೆ ತ್ಯಾಗರಾಜರ ವಿಶೇಷ ಒಲವು. ಸಂಗೀತಜ್ಞರಾಗಿದ್ದೂ ಭಕ್ತಿಹೀನರಾದ ಮಂದಿಯ ಸಂಗೀತವನ್ನು ಅವರು ಖಂಡಿಸುತ್ತಾರೆ. 'ಉದರಶಯನರಾದ ಇಂತಹ ಸಂಗೀತಜ್ಞರು ಬಕಭೇಕಗಳಂತೆ. ಇವರು ಬ್ರಹ್ಮಾನಂದ ಕಮಲದಲ್ಲಿನ ಭೃಂಗಗಳಾಗಿ ಪರಮಾನಂದವನ್ನು ಸವಿಯಲಾರದವರು' ಎನ್ನುತ್ತಾರೆ.

**ಪರಮಾನಂದಮನು ಕಮಲಮುಪ್ಪೆ**
**ಬಕಭೇಕಮು ಚೆಲಗಿಯೇಮಿ ?**

**(ಸ್ವರರಾಗ ಸುಧಾರಸ - ಶಂಕರಾಭರಣ)**

ಇವರು ತಾವೇ ಶ್ರೇಷ್ಠ ಸಂಗೀತಕೋವಿದರೆಂದು ವದರುತ್ತಾರಷ್ಟೆ.

---

* ಪಾಡಿಯೇಮಿ ಯೇಢ್ಚಿತೇನೇಮಿ ಎಂಬ ಪಾಠಾಂತರವೂ ಇದೆ. ನೋಡಿ 'ತ್ಯಾಗರಾಜ ಕೀರ್ತನಲು', ಕಲ್ಲೂರಿ ವೀರಭದ್ರಶಾಸ್ತ್ರಿ, ಸಂ.೨, ಪು. ೨೦೯

**ವರರಾಗಲಯಜ್ಞುಲು ತಾಮನುಚು**
**ವದರೇರಯ್ಯ**

(ವರರಾಗಲಯಜ್ಞುಲು - ಚೆಂಚುಕಾಂಬೋಜಿ)

ತ್ಯಾಗರಾಜರ ಖಂಡನೆಯ ಉದ್ದೇಶವಾದರೂ ಸಂಗೀತದೊಂದಿಗೆ ಭಕ್ತಿಯನ್ನೂ ಮೇಳೈಸಿದ ಭಾಗವತರಿವರಾಗಬೇಕೆಂಬುದಷ್ಟೆ. ಈ ಮಾರ್ಪಾಟಿನಿಂದ ಮಾತ್ರ ಒಬ್ಬನಿಗೆ ಮುಕ್ತಿ ಸಾಧ್ಯ ಎಂಬುದನ್ನು ಅವರು ಒತ್ತಿ ನುಡಿಯುತ್ತಾರೆ.

**ಸಹಜಭಕ್ತಿತೋ ರಾಗಜ್ಞಾನ ಸಹಿತುಡು ಮುಕ್ತುಡುರಾ**

(ಸ್ವರರಾಗಸುಧಾರಸ -ಶಂಕರಾಭರಣ)

ತ್ಯಾಗರಾಜರ ಹೇಳಿಕೆಯಂತೆ ಸದ್ಭಕ್ತಿ ಮತ್ತು ಸಂಗೀತಜ್ಞಾನವುಳ್ಳವರಿಗೆ ಮೋಕ್ಷ ವಿದೆ. ಮೂಲಾಧಾರ ಜನಿತವಾದ ನಾದವನ್ನು ಅರಿಯುವುದೇ ಬ್ರಹ್ಮಾನಂದವೆಂಬ ಅವರ ಭಾವಕ್ಕೆ ಪ್ರಾಚೀನ ಗ್ರಂಥಗಳು ಆಧಾರ. 'ಸಂಗೀತದರ್ಪಣ'ದಲ್ಲಿ ಮಾನವ ಶರೀರದಲ್ಲಿನ ಮೂಲಾಧಾರಾದಿ ಷಟ್‌ಚಕ್ರಗಳನ್ನು ತಿಳಿಸಿ, ನಾದವು ಮೂಲಾಧಾರ ದಿಂದ ಹೊರಟು ಕ್ರಮೇಣ ಗಾನವಾಗುವುದನ್ನು ಹೇಳಲಾಗಿದೆ.

ಸಂಗೀತಜ್ಞಾನ ಲಭ್ಯವಾಗುವುದು ಭಕ್ತಿಯಿಂದೊಡಗೂಡಿದಾಗ ಮಾತ್ರ. ಭಕ್ತಿಹೀನ ನಿಗೆ ಸಂಗೀತಜ್ಞಾನವಷ್ಟೇ ಅಲ್ಲ, ಸನ್ಮಾರ್ಗವಾಗಲೀ, ಮುಕ್ತಿಯಾಗಲೀ ಇಲ್ಲ. ಮೂಲ ಭೂತವಾಗಿ ಭಕ್ತಿಯಿಲ್ಲದೆ ಬಾಹ್ಯ ಪ್ರಕಾರದಲ್ಲಿ ಒಬ್ಬನು ಎಷ್ಟೇ ಅಚ್ಚುಕಟ್ಟಾಗಿದ್ದರೂ, ಸಂಗೀತಜ್ಞನೆನಿಸಿದ್ದರೂ ಅದು ಶುಷ್ಕವೇ ಸರಿ. ಆತನಿಗೆ ದೈವ ಸಾಕ್ಷಾತ್ಕಾರ ಸಾಧ್ಯವಿಲ್ಲ.

**ಸಂಗೀತಜ್ಞಾನಮು ಭಕ್ತಿವಿನಾ**
**ಸನ್ಮಾರ್ಗಮು ಗಲದೆ**

(ಸಂಗೀತಜ್ಞಾನಮು - ಧನ್ಯಾಸಿ)

**ಸಾಕ್ಷಾತ್ಕಾರ ನೀ ಸದ್ಭಕ್ತಿ ಸಂಗೀತಜ್ಞಾನ ವಿಹೀನುಲಕು**

(ಮೋಕ್ಷಮುಗಲದಾ - ಸಾರಮತಿ)

ಮಾನವ ಜನ್ಮ ಸಾರ್ಥಕಗೊಳ್ಳುವುದು ಭಕ್ತಿಸುಧೆಯಲ್ಲಿ ಮಿಂದಾಗ ಮಾತ್ರ. ಹಾಗೆಯೇ ಸಂಗೀತಜ್ಞಾನವೆಂಬ ಬ್ರಹ್ಮಾನಂದ ಸಾಗರದಲ್ಲಿ ಮೀಯದ ದೇಹ ಭೂ ಭಾರವಷ್ಟೆ.

**ನೀ ಭಕ್ತಿ ಭಾಗ್ಯಸುಧಾನಿಧಿ ನೀದೇದೇ ಜನ್ಮಮು**

(ನೀಭಕ್ತಿ - ಜಯಮನೋಹರಿ)

**ಸಂಗೀತಜ್ಞಾನಮನು ಬ್ರಹ್ಮಾನಂದಸಾಗರಮೀದನಿದೇಹಮು**
**ಭೂಮಿಭಾರಮು***

(ಆನಂದಸಾಗರಮೀದನಿ - ಗರುಡಧ್ವನಿ)

---

* ಭೂಭಾರಮು ಎಂಬ ಪಾಠಾಂತರವೂ ಇದೆ.

ಸಂಗೀತ ಮತ್ತು ಭಕ್ತಿಯೆಂಬ ಯುಗಳ ಮಾರ್ಗಗಳನ್ನು ಒಂದಾಗಿಸಿ ಮಾಡುವ ಅರ್ಚನೆಯಿಂದ ಸ್ವರ್ಗ ಅಪವರ್ಗಗಳು ಉಂಟಾಗುತ್ತವೆ. ನಾದಸ್ವರಗಳೆಂಬ ನವರತ್ನ ಖಚಿತ ವೇದಿಕೆಯಲ್ಲಿ ಸಕಲಲೀಲಾ ವಿನೋದನಾದ ಪರಮಾತ್ಮನನ್ನು ಸ್ಥಾಪಿಸಿ, ಆತನ ವಿವಿಧ ನಾಮಗಳೆಂಬ ಹೂಗಳಿಂದ ಮಾಡುವ ಪೂಜೆಯನ್ನು ತ್ಯಾಗರಾಜರು ಸಮರ್ಥಿಸುತ್ತಾರೆ.

**ನಾಮ ಕುಸುಮಮುಲಚೇ ಪೂಜಿಂಚೇ**
**ನರಜನ್ಮಮೇ ಜನ್ಮಮು . . . .**
**ಶ್ರೀಮನ್ಮಾನಸ ಕನಕ ಪೀಠಮುನ**
**ಚೆಲಗ ಜೇಸಿಕೊನಿ ವರಶಿವರಾಮ**
**ನಾದಸ್ವರಮನು ವರ ನವರತ್ನಪು**
**ವೇದಿಕಪ್ಯೆ, ಸಕಲ ಲೀಲಾ ವಿ**
**ನೋದುನಿ, ಪರಮಾತ್ಮುನಿ, ಶ್ರೀರಾಮುನಿ**
**ಪಾದಮುಲನು, ತ್ಯಾಗರಾಜ ಹೃದ್ಭೂಷಣುನಿ**

**(ನಾಮಕುಸುಮಮುಲಚೇ - ಶ್ರೀರಾಗ)**

ಸೃಷ್ಟಿ, ಸ್ಥಿತಿ, ಲಯಕರ್ತರಾದ ಬ್ರಹ್ಮ, ವಿಷ್ಣು, ಮಹೇಶ್ವರರು ನಾದರೂಪರಾಗಿ, ನಾದಾತ್ಮಕರಾಗಿ ಸರ್ವಾಂತರ್ಯಾಮಿಗಳಾಗಿದ್ದಾರೆ. ನಾದೋಪಾಸನೆಯ ಫಲವಾಗಿಯೇ ಇವರಿಗೆ ತಮ್ಮ ಸ್ಥಾನಗಳೂ ಲಭ್ಯವಾದುದು. ಈ ರಹಸ್ಯವನ್ನು ಅರಿತು ತ್ಯಾಗರಾಜರು ಸ್ವರ, ಲಯ, ರಾಗ ವಿನ್ಯಾಸಗಳಿಂದ ರಂಜಿಸುವಂತೆ ಮಾಡುವ ಶಕ್ತಿ ನಾದೋಪಾಸಕರಿಗೆ ಇದೆ ಎಂಬ ಅಂಶವನ್ನು ಈ ಕೆಳಗಿನ ರಚನೆಯಲ್ಲಿ ಅಳವಡಿಸುತ್ತಾರೆ.

**ನಾದೋಪಾಸನ ಚೇಸೇ* ಶಂಕರ ನಾರಾಯಣ**
**ವಿಧುಲು ವೆಲಸಿರಿ ಓ ಮನಸಾ ||**
**ವೇದೋದ್ಧರುಲು ವೇದಾತೀತುಲು**
**ವಿಶ್ವಮೆಲ್ಲನಿಂಡಿಯುಂಡೆಡಿವಾರಲು ||**
**. . . . . . . . . . . .**
**. . . . . . . . . . . .**
**ತಂತ್ರೀ ಲಯ ಸ್ವರರಾಗ ವಿಲೋಲುರು**
**ತ್ಯಾಗರಾಜ ವಂದ್ಯುಲು . . . . . ||**

**(ನಾದೋಪಾಸನ - ಬೇಗಡೆ)**

ಮುಂದುವರೆದಂತೆ ಅವರು ಸ್ವಸಂಬೋಧಿತವಾಗಿ ನಾದಲೋಲನಾಗಿ ಬ್ರಹ್ಮಾನಂದ ಹೊಂದು, ಶ್ರೀಪತಿಗೆ ಪ್ರಿಯವಾದ ಸಂಗೀತೋಪಾಸನೆ ಮಾಡು ಎನ್ನುತ್ತಾರೆ.

---

* ನಾದೋಪಾಸನ ಚೇ ಶಂಕರನಾರಾಯಣ ಎಂಬ ಪಾಠಾಂತರವೂ ಕಾಣಬರುತ್ತದೆ.

**ನಾದಲೋಲುಡೈ ಬ್ರಹ್ಮಾನಂದಮಂದವೇ ಮನಸಾ**

(ನಾದಲೋಲುಡೈ - ಕಲ್ಯಾಣವಸಂತ)

**ಶ್ರೀಪಪ್ರಿಯ ಸಂಗೀತೋಪಾಸನ ಚೇಯವೇ**

(ಶ್ರೀಪಪ್ರಿಯ - ಅಠಾಣ)

ಇದು ಬ್ರಹ್ಮ, ಇಂದ್ರ, ಸುಬ್ರಹ್ಮಣ್ಯ, ಗಣೇಶಾದಿ ದೇವತೆಗಳೂ, ಮಹಾಮುನಿಗಳೂ ಉಪಾಸಿಸಿದ ಕಲೆಯಾಗಿದೆ.

**ಹರಿಹರಾತ್ಮ ಭೂಸುರಪತಿ ಶರಜನ್ಮಗಣೇಶಾದಿ**
**ವರಮೌನುಲುಪಾಸಿಂಚರೇ . . . . . .**

(ನಾದಲೋಲುಡೈ - ಕಲ್ಯಾಣವಸಂತ)

ಇಷ್ಟಲ್ಲದೇ ಪಾರ್ವತಿ, ಚಂಡಿಕೇಶ್ವರ, ನಂದಿ, ಮಾರ್ಕಂಡೇಯ, ಸೋಮೇಶ್ವರ, ಲಕ್ಷ್ಮಿ, ಸರಸ್ವತಿ, ತುಂಬುರು, ನಾರದ, ಭೃಂಗಿ, ಭರತ, ಅಗಸ್ತ್ಯ, ಮತಂಗ, ಕಶ್ಯಪ, ಸಾರಂಗದೇವರು ಸಪ್ತಸ್ವರ ಕೋವಿದರಷ್ಟೇ ಅಲ್ಲ, ನಾದಾತ್ಮರೂ ಹೌದು. ಇಂತಹ ಪೂರ್ವಾಚಾರ್ಯರನ್ನೂ, ನಾದವಿದ್ಯಾ ಪಾರಂಗತರನ್ನೂ, ತ್ಯಾಗರಾಜರು ವಿನಯಪೂರ್ವಕ ವಾಗಿ ವಂದಿಸುತ್ತಾರೆ.

**ಭೃಂಗಿ ನಟೇಶ ಸಮೀರಜ ಘಟಜ**
**ಮತಂಗ ನಾರದಾದುಲುಪಾಸಿಂಚೆ**

(ಸಂಗೀತಜ್ಞಾನಮು - ಧನ್ಯಾಸಿ)

**ವಿದುಲಕು ಮ್ರೊಕ್ಕೆದ ಸಂಗೀತ ಕೋ । ವಿದುಲಕು**
**ಮುದಮುನ ಶಂಕರಕೃತ ಸಾಮನಿಗಮ**
**ವಿದುಲಕು ನಾದಾತ್ಮಕ ಸಪ್ತಸ್ವರ ॥**
**ಕಮಲಾಗೌರಿ ವಾಗೀಶ್ವರೀ ವಿಧಿ ಗರುಡಧ್ವಜ ಶಿವ ನಾರದುಲು**
**ಅಮರೇಶ ಭರತ ಕಾಶ್ಯಪ ಚಂಡೀಶಾಂಜನೇಯ ಗುಹ ಗಜಮುಖುಲು**
**ಸುಮೃಕಂಡುಜ ಕುಂಭಜ ತುಂಬುರುವರ ಸೋಮೇಶ್ವರ ಶಾರ್ಙ್ಗದೇವ ನಂದೀ**
**ಪ್ರಮುಖುಲಗು ತ್ಯಾಗರಾಜ ವಂದ್ಯುಲಕು ಬ್ರಹ್ಮಾನಂದ ಸುಖಾಂಬುಧಿಮರ್ಮ॥**

(ವಿದುಲಕುಮ್ರೊಕ್ಕೆದ - ಮಾಯಾಮಾಳವ ಗೌಳ)

ಈ ನಾದೋಪಾಸಕರು ಸ್ವರಲಯಾದಿ ರಾಗಗಳನ್ನು ಅರಿತು ನಿಜಮಾರ್ಗದಲ್ಲಿ ಹಾಡುತ್ತಾ ಮಹಾನುಭಾವರೆನಿಸಿದ್ದಾರೆ. ಚಿರಾಯುಗಳಾಗಿ, ಸುಖಾತ್ಮರಾಗಿರುವ ಇವ ರೆಲ್ಲ ತ್ಯಾಗರಾಜಾಪ್ತರು.

**ನಿಜಮಾರ್ಗಮುತೋನು ಬಾಡುಚುನು ಸಲ್ಲಾಪಮುತೋ**
**ಸ್ವರಲಯಾದಿ ರಾಗಮುಲ ದೆಲಿಯುವಾ । ರೆಂದರೋ**
**ಭಾವ ರಾಗ ಲಯಾದಿ ಸೌಖ್ಯ**

ಮುಚೇ ಚಿರಾಯುವುಲ್ ಗಲಿಗಿ ನಿರವಧಿ ಸುಖಾತ್ಮುಲೈನ ವಾ । ರೆಂದರೋ
ತ್ಯಾಗರಾಜಾಪ್ತುಲೈನ ವಾ । ರೆಂದರೋ ಮಹಾನುಭಾವುಲು

(ಎಂದರೋ ಮಹಾನುಭಾವುಲು - ಶ್ರೀರಾಗ)

ಈ ಮಹಾನುಭಾವರ ಪಟ್ಟಿಯಲ್ಲಿ ಆಂಜನೇಯನದೊಂದು ವಿಶಿಷ್ಟ ಸ್ಥಾನ. ಸಂಗೀತ ಮತ್ತು ಭಕ್ತಿಗಳೆರಡು ದೃಷ್ಟಿಯಿಂದಲೂ ಈತ ತ್ಯಾಗರಾಜರಿಗೆ ಆದರ್ಶ. ಇವರಂತೆಯೇ 'ಗಾನರುಚಿ ಅರಿತ ಕುಶಲವ ಜನಕನೇ, ತಮ್ಮಂತಹ ಸ್ವಜನರ ಮೇಲೆ ಅಭಿಮಾನವಿಲ್ಲವೇ' ಎಂದು ಶ್ರೀರಾಮನನ್ನು ತ್ಯಾಗರಾಜರು ಪ್ರಶ್ನಿಸುವಲ್ಲಿ ಔಚಿತ್ಯ ವೊಂದುಂಟು. ತ್ಯಾಗರಾಜರ ಭಾವನೆಯಲ್ಲಿ ಶ್ರೀರಾಮನಿಗೆ ಕುಶಲವರ ಮೇಲೆ ಎರಡು ಕಾರಣಗಳಿಗಾಗಿ ವಿಶೇಷ ಅಭಿಮಾನ. ಮೊದಲನೆಯದು ಅವರು ತನ್ನ ಮಕ್ಕಳೆಂಬುದು. ಎರಡನೆಯದು ಅವರು ನಾದೋಪಾಸಕರೆಂಬುದು. ಈ ಅರ್ಹತೆಗಳು ತಮಗೂ ಇರು ವುದರಿಂದ ತಮ್ಮನ್ನೂ ರಕ್ಷಿಸಲೇಬೇಕೆಂಬಂತೆ ಅವರು ಹಕ್ಕು ಚಲಾವಣೆ ಮಾಡಿರುವು ದನ್ನೂ ಕಾಣುತ್ತೇವೆ. ಏಕೆಂದರೆ ಶ್ರೀರಾಮನು 'ರಾಗಸ್ವರಯುತ ಪ್ರೇಮ ಭಕ್ತಿಜನ ರಕ್ಷಕ' ನೆಂಬ ಬಿರುದಾಂಕ(ನಾ ಮೊರಲನು - ಆರಭಿ)ನೂ ಹೌದು.

ತ್ಯಾಗರಾಜರ ಪ್ರಕಾರ ಸಂಗೀತವು ಭಕ್ತಿಯ ಒಂದು ಅಂಗವಷ್ಟೆ ಅಲ್ಲ. ಅದು ಐಹಿಕ ಮತ್ತು ಆಮುಷ್ಮಿಕ ಫಲಗಳನ್ನು ನೀಡುತ್ತವೆ.

ಯಾಗಯೋಗ ತ್ಯಾಗ ಭೋಗ ಫಲಮೊಸಂಗೇ ರಾಗಸುಧಾರಸ

(ರಾಗಸುಧಾರಸ - ಆಂದೋಳಿಕ)

ಪ್ರೇಮಭಕ್ತಿ ಸುಜನ ವಾತ್ಸಲ್ಯಮು
ಶ್ರೀಮದ್ ರಮಾವರ ಕಟಾಕ್ಷಮು
ನೇಮನಿಷ್ಠ ಯಶೋಧನ ಮೊಸಂಗುನೇ

(ಸಂಗೀತಶಾಸ್ತ್ರಜ್ಞಾನಮು - ರಾಗವ್ಯತ್ಯಾಸವಿದೆ)*

ಅಂತೆಯೇ ಸಂಗೀತದಿಂದ ಕೂಡಿದ ಭಕ್ತಿಯು ಸ್ವರ್ಗ, ಅಪವರ್ಗಗಳೇ ಸರಿ. ಐಹಿಕವಾಗಿ ಸಂಗೀತವು ಯಶಸ್ಸು, ಸಂಪತ್ತು, ಸುಜನ ವಾತ್ಸಲ್ಯಗಳನ್ನೂ, ಅಧ್ಯಾತ್ಮಿಕ ವಾಗಿ ಸ್ವರ್ಗ, ಅಪವರ್ಗಗಳ ಫಲವನ್ನೂ ನೀಡುವ ಹಿರಿಮೆಯುಳ್ಳದ್ದು. ಮನುಷ್ಯನಿಗೆ ಇಹ-ಪರಗಳೆರಡೂ ಮುಖ್ಯವೇ. ಇಹದಲ್ಲಿ ಮಾನವಸಹಜ ಆಸೆಗಳಾದ ಸಂಪತ್ತು, ಸಜ್ಜನಸ್ನೇಹ ಹಾಗೂ ಯಶಸ್ಸನ್ನು ಉಂಟುಮಾಡುವ ನಾದಯೋಗವು ಸ್ವರ್ಗಸುಖ ವನ್ನೂ ನೀಡುತ್ತದೆ. ಭಗವದ್ಗೀತೆಯ ಪ್ರಕಾರ ಪುಣ್ಯಫಲದಿಂದ ಲಭ್ಯವಾಗುವ ಸ್ವರ್ಗ ಪ್ರಾಪ್ತಿಯು, ಪುಣ್ಯದ ಫಲವು ಕ್ಷೀಣಿಸುತ್ತಿದ್ದಂತೆ ಪುನಃ ಮರ್ತ್ಯಲೋಕದಲ್ಲಿ ಹುಟ್ಟು ವಂತೆ ಮಾಡುತ್ತದೆ.

ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ[೧೮]

---

* ಸಾಳಗಭೈರವಿ ಮತ್ತು ಮುಖಾರಿ

ಆದ್ದರಿಂದ ಸ್ವರ್ಗಕ್ಕಿಂತಲೂ ಮಿಗಿಲಾದ ಅಪವರ್ಗವನ್ನು ಅರ್ಥಾತ್ ಮೋಕ್ಷವನ್ನು ಅದು ನೀಡುತ್ತದೆ. ಜೀವಿಗೆ ಸರ್ವೋನ್ನತವಾದುದು ಮೋಕ್ಷವಲ್ಲದೆ ಬೇರಲ್ಲ. ಈ ದೃಷ್ಟಿಕೋನಗಳಿಂದ ನೋಡಿದಾಗ ಸಂಗೀತ ಮತ್ತು ಭಕ್ತಿಗಳು ಒಂದರೊಡನೆ ಇನ್ನೊಂದು ಬೆರೆತು ಲೌಕಿಕ ಸುಖವನ್ನೂ, ಸ್ವರ್ಗಸುಖವನ್ನೂ ಅದಕ್ಕಿಂತ ಮಿಗಿಲಾಗಿ ಮೋಕ್ಷವನ್ನೂ ನೀಡುವುದೆಂಬ ತ್ಯಾಗರಾಜರ ಅಭಿಪ್ರಾಯದ ಹಿರಿಮೆ-ಗರಿಮೆಗಳು ಮನದಟ್ಟಾಗುತ್ತದೆ.

ತ್ಯಾಗರಾಜರು ಸಂಗೀತವನ್ನು ಮುಕ್ತಿಸಾಧನವೆಂದು ನಿರೂಪಿಸಿದ ತರುವಾಯ ಸಾರೂಪ್ಯಸೌಖ್ಯ, ಜೀವನ್ಮುಕ್ತಿಗಳೆರಡನ್ನೂ ಪ್ರಸ್ತಾಪಿಸುತ್ತಾರೆ.

**ಸಂಗೀತಶಾಸ್ತ್ರಜ್ಞಾನಮು ಸಾರೂಪ್ಯ ಸೌಖ್ಯದಮೇ**

**(ಸಂಗೀತಶಾಸ್ತ್ರಜ್ಞಾನಮು)**

**ನಾದೋಂಕಾರ ಸ್ವರವಿದುಲು ಜೀವನ್ಮುಕ್ತುಲನಿ**

**(ರಾಗಸುಧಾರಸ - ಆಂದೋಳಿಕ)**

ಮೂಲತಃ ತ್ಯಾಗರಾಜರು ಅದ್ವೈತಿಗಳಾಗಿದ್ದರೂ ವಿಶಿಷ್ಟಾದ್ವೈತದ ಕೆಲವು ಅಂಶ ಗಳನ್ನೂ ಪ್ರತಿಪಾದಿಸುವುದುಂಟು. ಅದ್ವೈತಾಚಾರ್ಯರಾದ ಶಂಕರರು ಜೀವನ್ಮುಕ್ತಿಯನ್ನು ಅನುಮೋದಿಸುತ್ತಾರೆ. ಈ ಸಿದ್ಧಾಂತದಂತೆ ಒಬ್ಬನಿಗೆ ಮುಕ್ತಿ ಸಾಧ್ಯವಾಗುವುದು ಇದೇ ಜನ್ಮದಲ್ಲೇ. 'ಅಹಂ ಬ್ರಹ್ಮಾಸ್ಮಿ' ಎಂಬ ಅತ್ಯುನ್ನತ ಸ್ಥಿತಿಯೇ ಜೀವನ್ಮುಕ್ತಿ. ಆದರೆ ವಿಶಿಷ್ಟಾದ್ವೈತಿಗಳು ಈ ಸಿದ್ಧಾಂತವನ್ನು ಒಪ್ಪುವುದಿಲ್ಲ. ಅವರ ಅಭಿಪ್ರಾಯದಂತೆ ಮುಕ್ತಿ ಪಡೆದ ಜೀವನು 'ಅಹಂ ಬ್ರಹ್ಮಾಸ್ಮಿ' ಪದವಿಗೆ ಏರುವುದಿಲ್ಲ. ದಿವ್ಯಜ್ಞಾನದಿಂದ ಕೂಡಿ ನಿತ್ಯಸಾಕ್ಷಾತ್ಕಾರದ ಆನಂದವನ್ನು ಅನುಭವಿಸುತ್ತಿರುತ್ತಾನೆ. ಜೀವನ್ಮುಕ್ತಿಯನ್ನು ಈ ಮತವು ಸ್ವೀಕರಿಸುವುದಿಲ್ಲ. ತ್ಯಾಗರಾಜರು ಮೇಲೆ ಉಲ್ಲೇಖಿಸುವ ಸಾಲುಗಳ ಪ್ರಕಾರ ಅದ್ವೈತ, ವಿಶಿಷ್ಟಾದ್ವೈತಗಳೆರಡನ್ನೂ ಒಪ್ಪುವಂತೆ ತೋರುತ್ತದೆ. ಈ ವಾದ ವಿವಾದಗಳೇನೇ ಇದ್ದರೂ ಮೋಕ್ಷ ಎಂಬುದನ್ನಂತೂ ಎರಡೂ ಮತಗಳೂ ಒಪ್ಪುತ್ತವೆ. ಇದನ್ನೇ ತ್ಯಾಗರಾಜರು ಒಂದೆಡೆ 'ಸಾರೂಪ್ಯ ಸೌಖ್ಯದಮೇ' ಎಂದೂ ಮತ್ತೊಂದೆಡೆ 'ಜೀವನ್ಮುಕ್ತಿಯೆಂದೂ' ಪ್ರಸ್ತಾಪಿಸಿರುವುದು.

ಹೀಗೆ ಮಹೋನ್ನತ ಫಲ ನೀಡುವ ನಾದಯೋಗದ ಸಾಧನೆಯು ಬಹಳ ಸುಲಭ ವೇನಲ್ಲ. ಅದರ ಅಭ್ಯಾಸಕ್ಕೆಂದೇ ಕೆಲವು ನಿಯಮಗಳುಂಟು. ಅದರ ಸಾಧನೆಗಾಗಿ ಸಾಧಕ ಕೆಲವು ತ್ಯಾಗಗಳನ್ನೂ ಮಾಡಬೇಕಾಗುತ್ತದೆ. ಸಂಪ್ರದಾಯಕನಾದ ದೇವರು ಸಾಂಪ್ರದಾಯಿಕವಾಗಿ ಅಭ್ಯಸಿಸಿದ ಭಕ್ತರ ಪಾಲನೆ ಮಾಡುತ್ತಾನೆ ಎಂಬ ಭರವಸೆ ತ್ಯಾಗರಾಜರಿಗೆ ಇದೆ. ಆದ್ದರಿಂದ ಅವರು ಧರ್ಮಾಧರ್ಮಗಳನ್ನು ತಿಳಿದಿದ್ದಾರೆ. ಜಗತ್ತು ಅಸ್ಥಿರವೆಂಬ ಅರಿವು ಅವರಿಗಿದೆ. ಅರಿಷಡ್ವರ್ಗಗಳನ್ನು ಜಯಿಸುವ ಮಾರ್ಗ ತಮಗೆ ತಿಳಿದಿದೆ ಎಂಬುದು ತ್ಯಾಗರಾಜರ ಉಕ್ತಿ. ಹೀಗೆ ಅವರು ಒಮ್ಮೆ ಸಾಮಾನ್ಯವಾಗಿ (general) ಮತ್ತೊಮ್ಮೆ ತಮ್ಮ ಆದರ್ಶದ ಮೂಲಕವೇ ನಾದಯೋಗ ಸಾಧನೆಯಲ್ಲಿ

ಅನುಸರಿಸಬೇಕಾದ ನಿಯಮವನ್ನು ಸ್ಪಷ್ಟಪಡಿಸುತ್ತಾರೆ. ಈ ನಿಯಮಗಳ ಪಾಲನೆ ನೈತಿಕ ತಳಹದಿಯುಳ್ಳದ್ದೇ ಆಗಿದೆ.

**ತ್ಯಾಗರಾಜರ ಪ್ರಕಾರ ನಾದಯೋಗಕ್ಕೆ ನಿಯಮಗಳು**

(ಅ) ನಿದ್ದುರ ನಿರಾಕರಿಂಚಿ (ಕದ್ದನುವಾರಿಕಿ)—ಆತ ನಿದ್ರೆಯನ್ನು ವರ್ಜಿಸಬೇಕು

(ಆ) ವೇಕುವ ಜಾಮುನ ವೆಲಯುಚು (ಕೊಲುವಮರಗದ)—ಬೆಳಗಿನ ಜಾವದಲ್ಲಿ ಮುದದಿಂದ

(ಇ) ಶುದ್ಧಮ್ಮೈನ ಮನಸುಚೇ (ಕದ್ದನುವಾರಿಕಿ)— ಶುದ್ಧ ಮನಸ್ಕನಾಗಿ

(ಈ) ಮುದ್ದುಗ ತಂಬೂರಬಟ್ಟಿ (ಕದ್ದನುವಾರಿಕಿ)—ತಂಬೂರಿ ಹಿಡಿದು

(ಉ) ತಂಬೂರ ಚೇಕೊನಿ (ಕೊಲುವಮರಗದ)—ತಂಬೂರಿಯೊಂದಿಗೆ

(ಊ) ಪದ್ದು ತಪ್ಪಕ (ಕದ್ದನುವಾರಿಕಿ)—ನೈರಂತರ್ಯದಿಂದ

(ಋ) ಸುಸ್ವರಮುತೋ (ಕದ್ದನವಾರಿಕಿ)—ಸ್ವರಶುದ್ಧಿಯಿಂದ ಅಭ್ಯಸಿಸಬೇಕು

ಸಂಗೀತವೆಂಬ ಯೋಗಾಭ್ಯಾಸಕ್ಕೆ ನೈರಂತರ್ಯ ಮತ್ತು ದೃಢತೆಗಳು ಅತಿ ಮುಖ್ಯ. ಇದನ್ನು ತ್ಯಾಗರಾಜರು 'ಪದ್ದುತಪ್ಪಕ', ಎಂಬ ಪದ ಸಮುಚ್ಚಯದಲ್ಲಿ ಅಳವಡಿಸಿದ್ದಾರೆ. ಬೆಳಗಿನ ಝಾವ ಮನಸ್ಸು ಸತ್ವಪ್ರಧಾನವಾಗಿರುವ ಸಮಯ. ಈ ವೇಳೆಯಲ್ಲಿ ಒಬ್ಬನು ಮಾಡುವ ಸತ್‌ಸಾಧನೆಯು ಆತನಲ್ಲಿ ಆಳವಾಗಿ ಬೇರೂರುತ್ತದೆ. ಮನೋವೈಜ್ಞಾನಿಕವಾಗಿಯೂ ಹಲವು ಗಂಟೆಗಳ ವಿಶ್ರಾಂತಿಯ ನಂತರದ ಬೆಳಗಿನ ಸಮಯ ಉಲ್ಲಾಸಕರವಾದುದು. ಅದರಿಂದಲೇ ತ್ಯಾಗರಾಜರು ಅಭ್ಯಾಸಕ್ಕೆ ಬೆಳಗಿನ ಜಾವವನ್ನೇ ನಿಗದಿಪಡಿಸುವುದು. ನಿರಂತರ ಅಭ್ಯಾಸದಿಂದ ಕಲೆಯು ಸಾಧಕನಲ್ಲಿ ಸ್ಥಿರಗೊಳ್ಳುತ್ತದೆ. ಇಂತಹ ಅಭ್ಯಾಸದಿಂದ ಗಾಯಕರಿಗೆ ಶಾರೀರ ಸಂಸ್ಕರಣೆಯೂ ಉಂಟಾಗುತ್ತದೆ. ಸುಶಾರೀರದ ಅಗತ್ಯವನ್ನು ಪ್ರಾಚೀನ ಲಕ್ಷಣಗ್ರಂಥಗಳು ಒತ್ತಿ ನುಡಿಯುತ್ತವೆ. ಸಂಗೀತದ ಧ್ಯೇಯಗಳಲ್ಲಿ ಮನರಂಜನೆಯೂ ಒಂದು. ಇದು ಸುಶಾರೀರದಿಂದ ಸುಸ್ವರದಿಂದ ಪ್ರಯೋಗಗೊಂಡಾಗ ಸುಲಭ ಸಾಧ್ಯವಾಗುತ್ತದೆ. ಇದು ದೇವರಿಗೂ ಪ್ರಿಯವಾಗುತ್ತದೆ. ಈ ಹಿನ್ನಲೆಯಲ್ಲೇ ತ್ಯಾಗರಾಜರು ಇನ್ನೊಂದು ಕೃತಿಯಲ್ಲಿ, ತಮ್ಮ ಮೊರೆಯನ್ನು ಕೇಳುವುದಿಲ್ಲವೆ ? ತಮ್ಮದು ಸುಶಾರೀರವಲ್ಲವೇ ? ಎಂದು ಶ್ರೀರಾಮನನ್ನು ಪ್ರಶ್ನಿಸುತ್ತಾರೆ. ಸುಶಾರೀರವೂ ದೈವಕೃಪೆಯ ಪ್ರಾಪ್ತಿಗೆ ಒಂದು ಅರ್ಹತೆಯೆಂಬ ಭಾವ ಇಲ್ಲಿದೆ.

**ನಾಮೊರಾಲಗಿಂಪವೇಮಿ**

. . . . . . . . . .

**ತನಕು ಸುಗ್ರೀವಮು ಕಾದಾ ?**

**(ನಾಮೊರಾಲಗಿಂಪವೇಮಿ - ದೇವಗಾಂಧಾರಿ)**

ಇನ್ನು ತ್ಯಾಗರಾಜರು ಹೇಳುವ ನೈತಿಕವಾದ ನಿಯಮಗಳೆಂದರೆ, ನಾದಯೋಗಿಯು

ಆತ್ಮನಿಗ್ರಹಿಯಾಗಿರಬೇಕು. ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನು ಆತ ಜಯಿಸುವಲ್ಲಿ ಸಮರ್ಥನಿರಬೇಕು. ಧರ್ಮಾಧರ್ಮ ವಿವೇಚನೆ ಇರಬೇಕು. ಈ ಅಂಶಗಳು ತ್ಯಾಗರಾಜರಿಗೆ ತಿಳಿದಿದೆ. ಹೀಗೆಂದೇ ಅವರು ಪೂರ್ಣ ವಿಶ್ವಾಸದಿಂದಿದ್ದಾರೆ.

**ನ್ಯಾಯಾನ್ಯಾಯಮು ತೆಲುಸುನು ಜಗಮುಲು**
**ಮಾಯಾಮಾಯಮನಿ ತೆಲುಸುನು ದುರ್ಗುಣ**
**ಕಾಯಜಾದಿ ಷಡ್ರಿಪುಲ ಜಯಿಂಚೇ**
**ಕಾರ್ಯಮು ತೆಲುಸುನು ತ್ಯಾಗರಾಜುನಿಕೇ**

**(ಸಂಗೀತಜ್ಞಾನಮು - ಧನ್ಯಾಸಿ)**

ಮುಂದಿನ ಘಟ್ಟದಲ್ಲಿ, ನಿರಂತರವಾಗಿ ಮಾಡಿದ ಮನುಷ್ಯ ಪ್ರಯತ್ನದೊಂದಿಗೆ ಬ್ರಹ್ಮಸಂಕಲ್ಪ ಇದ್ದಾಗ ಮಾತ್ರ ಸಂಗೀತಜ್ಞಾನ ಮತ್ತು ಜೀವನ್ಮುಕ್ತಿಗಳು ಸಾಧ್ಯವೆಂದು ತ್ಯಾಗರಾಜರು ತೀರ್ಮಾನಿಸುತ್ತಾರೆ.

**ಸೀತಾವರ ಸಂಗೀತಜ್ಞಾನಮು ಧಾತವ್ರಾಯವಲೆರಾ ರಾಮ ।**
**ಗೀತಾದ್ಯಖಿಲೋಪನಿಷತ್ಸಾರಭೂತ ಜೀವನ್ಮುಕ್ತುಡಗುಟಕು ॥**

ಮುಂದುವರೆದಂತೆ ರಮಾವರನ ಕಟಾಕ್ಷ ತಾನಾಗಿ ಒದಗಿಬರುವುದಿಲ್ಲ. ಸ್ವಪ್ರಯತ್ನವಿಲ್ಲದೆ ಸುಮ್ಮನೆ ಕುಳಿತರೆ ಅಥವಾ ಸ್ವಪ್ರಯತ್ನದಿಂದಲೇ ಎಲ್ಲ ಸಾಧನೆಗಳೂ ಫಲ ನೀಡುವುದೆಂಬ ಅಹಂಭಾವವಿದ್ದರೆ ಇವು ಲಭ್ಯವಾಗದೆಂಬ ಅವರ ಅಭಿಪ್ರಾಯ ಗಮನಾರ್ಹ. ತ್ಯಾಗರಾಜರು ಪರಮ ತಾತ್ವಿಕರಾಗಿಯೂ ಒಂದು ಘಟ್ಟದಲ್ಲಿ ಈ ರೀತಿಯ ಮಾನಸಿಕ ಗೊಂದಲಕ್ಕೆ ಸಿಲುಕಿದ್ದಾರೆ. ಅವರು ತಮ್ಮ ಈ ಸಮಸ್ಯೆಯ ಪರಿಹಾರಕ್ಕಾಗಿ ದೇವರನ್ನೇ ಪ್ರಾರ್ಥಿಸಿದ್ದಾರೆ. ಆದರೆ ಬಹುತೇಕ ಅವರ ರಚನೆಗಳು ದೈವಸಂಕಲ್ಪವೇ ಮನುಷ್ಯ ಸಂಕಲ್ಪಕ್ಕಿಂತ ಪ್ರಬಲವೆಂಬುದನ್ನು ಉದಾಹರಣೆಗಳೊಂದಿಗೆ ಸ್ಪಷ್ಟಪಡಿಸುತ್ತವೆ. ಈ ಭಾವನೆಯಿಂದಲೇ ಅವರು ಸಂಗೀತಕಲೆಯನ್ನು ಭಕ್ತಿಯೊಂದಿಗೆ ಸಂಯೋಜಿಸಿ, ಇವೆರಡನ್ನೂ ಅನುಗ್ರಹಿಸುವಂತೆ ದೇವರಲ್ಲೇ ಪ್ರಾರ್ಥಿಸುವುದು.

ಒಟ್ಟಾರೆ ತ್ಯಾಗರಾಜರು ಸ್ವಾನುಭವದಿಂದ ನಾದಯೋಗದ ಹಿರಿಮೆಯನ್ನು ಪ್ರಥಮ ಹಂತದಲ್ಲೂ, ಅದರ ಸಾಧನೆಯ ಕ್ರಮವನ್ನು ದ್ವಿತೀಯ ಹಂತದಲ್ಲೂ, ನಾದಯೋಗ ಸಾಧನೆಯನ್ನು ಭಕ್ತಿಯೊಂದಿಗೆ ಮೇಳೈಸಿರಬೇಕು ಹಾಗೂ ನಾದೋಪಾಸಕರಾಗಲು ದೈವಕೃಪೆ ಅತ್ಯಗತ್ಯವೆಂಬುದನ್ನು ಮೂರನೆಯ ಹಂತದಲ್ಲೂ ಮನೋಜ್ಞವಾಗಿ ನಮ್ಮ ಮುಂದಿಡುತ್ತಾರೆ.

## ಟಿಪ್ಪಣಿಗಳು

೧ ಹಿಂದೂ ಧರ್ಮದ ಪರಿಚಯ, ಎದುರ್ಕಳ ಕೆ. ಶಂಕರನಾರಾಯಣಭಟ್, ಶ್ರೀರಾಮಕೃಷ್ಣ ಪ್ರಕಾಶನ, ಕೊಡಗು ಜಿಲ್ಲೆ (ಮೈಸೂರು ರಾಜ್ಯ), ೧೯೬೮, ಪು. ೨೧೩-೨೧೪.

೨ ಪ್ರಥಮಾಂಶ. ಅಧ್ಯಾಯ ೨೨, ಶ್ಲೋಕ ೮೫, ಮತ್ತು ಸಂಗೀತ ಸಂಪ್ರದಾಯ ಪ್ರದರ್ಶಿನಿ, ಸಂಪುಟ ೧, ಸುಬ್ಬರಾಮ ದೀಕ್ಷಿತರು (ಸಂ.) ಆಚಾರ್ಯ ನೋರಿ ನಾಗಭೂಷಣಂ, ಆಂಧ್ರ ಪ್ರದೇಶ ಸಂಗೀತ ನಾಟಕ ಅಕಾಡಮಿ, ೧೯೭೩, ಪು. ೫೪ರಲ್ಲಿ ಉಲ್ಲೇಖ.

೩ *Shri Annamacharya—A Philosophical Study*, Dr. H.L. Chandrasekhara, Vidyashankara Prakashana, Mysore, 1990, p.27.

೪ ಗಾಂಧರ್ವೇಚ ಭುವಿಶ್ರೇಷ್ಠೋ - ಅಯೋಧ್ಯಾಕಾಂಡ ಸರ್ಗ ೨, ಶ್ಲೋಕ ೩೫.

೫ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಮತ್ತು ಸಮಾಧಿ — ಇವು ಅಷ್ಟಾಂಗಯೋಗಗಳೆನಿಸಿವೆ. ರಾಜಯೋಗ - ಸ್ವಾಮಿ ವಿವೇಕಾನಂದ, ಸ್ವಾಮಿ ಶಾಂಭವಾನಂದ, ಮೈಸೂರು, ಶ್ರೀ ರಾಮಕೃಷ್ಣ ಆಶ್ರಮ, ೧೯೫೫, ಪು. ೧೬೩.

೬ ಅದೇ, ಪು. ೮೦.

೭ *The Spiritual Heritage of Tyagaraja*, English transalation by C. Ramanujachari & *An Introductory Thesis* by V. Raghavan, Sri Ramakrishna Math, Madras, 1966, p.52.

೮ ಛಾಂದೋಗ್ಯೋಪನಿಷತ್, ಸ್ವಾಮಿ ಆದಿದೇವಾನಂದ, ಶ್ರೀ ರಾಮಕೃಷ್ಣಾಶ್ರಮ, ಮೈಸೂರು, ೧೯೬೧, ಪು. ೩.

೯ ಅದೇ ,೧-೧-೫ ಮತ್ತು ೧-೧-೭ ಪು. ೬ ಮತ್ತು ೭.

೧೦ ಅದೇ, ೧-೨-೩ ಪು. ೧೨.

೧೧ ಅದೇ, ೨-೧-೧ ಪು. ೬೯ ಮತ್ತು ೨-೧-೪ ಪು. ೭೧.

೧೨ ಗಾನಭಾಸ್ಕರಮು, ಕಂದಾಡ ವ. ಶ್ರೀನಿವಾಸಯ್ಯಂಗಾರ್, ಎಮ್ ಆದಿ ಅಂಡ್ ಕಂಪೆನಿ, ಮದರಾಸು, ೧೯೩೪, ಪು. ೬ರಲ್ಲಿನ ಉಲ್ಲೇಖ.

೧೩ ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ ಮತ್ತು ಆಜ್ಞಾ ಎಂಬುವು ಶರೀರದಲ್ಲಿರುವ ಆರು ಯೋಗ ಚಕ್ರಗಳು. ಹೆಚ್ಚಿನ ವಿವರಗಳಿಗೆ ನೋಡಿ, ಹಿಂದೂಧರ್ಮದ ಪರಿಚಯ, ಎದುರ್ಕಳ ಕೆ. ಶಂಕರನಾರಾಯಣ ಭಟ್, ಪು. ೨೧೧.

೧೪ *The Spiritual Heritage of Tyagaraja*—C. Ramanujachari & Dr. V. Raghavan, ಪು. ೫೪ರಲ್ಲಿನ ಉಲ್ಲೇಖ.

೧೫ ಗೀತಂ ವಾದ್ಯಂ ತಥಾನೃತ್ಯಂ ತ್ರಯಂ ಸಂಗೀತಮುಚ್ಯತೇ (೧೩ನೇ ಶತಮಾನ).
ಗೀತಂ ವಾದ್ಯಂ ನರ್ತನಂಚ ತ್ರಯಂ ಸಂಗೀತಮುಚ್ಯತೇ (೧೬ನೇ ಶತಮಾನ).
ಗೀತ ವಾದಿತ್ರ ನೃತ್ಯಾನಾಂ ತ್ರಯಂ ಸಂಗೀತಮುಚ್ಯತೇ (ಸು. ೧೭ನೇ ಶತಮಾನ).

೧೬ ಗೀತ ವಾದ್ಯೋಭಯಂ ಯತ್ರ ಸಂಗೀತ ಮಿತಿ ಕೇಚನ - ಉಲ್ಲೇಖ, ಗಾನಭಾಸ್ಕರಮು, ಕಂದಾಡ ವ. ಶ್ರೀನಿವಾಸಯ್ಯಂಗಾರ್, ಪು. ೪.

೧೭ ಅದೇ, ಪು. ೧.

೧೮ ೯-೨೧.

೪

# ತ್ಯಾಗರಾಜರ ಕೃತಿ—ಕೀರ್ತನೆಗಳ ವಿಹಂಗಮನೋಟ

'ನಾನೃಷಿಃ ಕುರುತೇ ಕಾವ್ಯಂ'[1] ಎಂಬುದು ಉಕ್ತಿ. ಋಷಿಯಲ್ಲದವನು ಕಾವ್ಯಸೃಷ್ಟಿ ಮಾಡಲಾರ. ವಾಲ್ಮೀಕಿಯು ರಾಮನಾಮ ಜಪದ ಫಲವಾಗಿ ರಾಮಾಯಣದಂಥ ಉತ್ಕೃಷ್ಟ ಕಾವ್ಯ ರಚನೆ ಮಾಡಿದರೆ ತ್ಯಾಗರಾಜರು ತೊಂಬತ್ತಾರು ಕೋಟಿ ರಾಮನಾಮ ಜಪಿಸಿ ರಾಮಾಯಣದಷ್ಟೇ ಮಹತ್ತರವಾದ ರಚನೆಗಳನ್ನು ನೀಡಿದ್ದಾರೆ. ಅವರು ಆಡಿದ ಮಾತೆಲ್ಲ, ಹಾಡಿದ ಹಾಡೆಲ್ಲ ರಾಮಮಯವಾಗಿ ವಾಲ್ಮೀಕಿ ರಾಮಾಯಣದಷ್ಟೇ ಪವಿತ್ರವಾಗಿವೆ. ಇವುಗಳಲ್ಲಿ ಭಗವದ್ ಸ್ವರೂಪವಷ್ಟೇ ಅಲ್ಲದೆ ಅಧ್ಯಾತ್ಮ ಸಾಧನೆಗೆ ವ್ಯಕ್ತಿಯಲ್ಲಿರಬೇಕಾದ ಧರ್ಮನಿಷ್ಠೆ, ಪುರಾಣಾದಿ ಉದ್ಗ್ರಂಥಗಳ ಕಥಾವಸ್ತು, ಆ ಮೂಲಕ ಭಕ್ತಿ ಪ್ರಚಾರ, ನೈಚ್ಯಾನುಸಂಧಾನಗಳೆಲ್ಲವೂ ಅಳವಟ್ಟು ಸಾರ್ವತ್ರಿಕವಾಗಿ ಪ್ರಸಾರವಾಗಬಲ್ಲ ಎಲ್ಲ ಗುಣಗಳೂ ಇವೆ. ಅರ್ಥಾತ್ ಧರ್ಮದ ದಿಟವಾದ ನೆಲೆ, ಅಧ್ಯಾತ್ಮ ಸ್ವಾರಸ್ಯಗಳ ಉಲ್ಲೇಖ, ಉದಾತ್ತ ಆದರ್ಶ, ಲೋಕದ ರೀತಿನೀತಿ, ಪುರಾಣ ಪ್ರಸ್ತಾಪಗಳೂ ಅಲ್ಲದೆ ಪ್ರಾಸಾನುಪ್ರಾಸಗಳು, ಯಮಕ, ಸಂಗತಿ, ಗಾದೆಗಳ ಬಳಕೆ ಮೊದಲಾದ ಅಲಂಕಾರಗಳೂ ಅವುಗಳಲ್ಲಿವೆ.

ತ್ಯಾಗರಾಜರು ನಾದವಿದ್ಯಾ ಮರ್ಮಗಳನ್ನು ಗಮನಿಸಿದಷ್ಟು ಎಚ್ಚರಿಕೆಯಿಂದ ಶಬ್ದರಚನಾ ರಹಸ್ಯಗಳನ್ನು ಗಮನಿಸಿಲ್ಲವೆಂಬ ಅಪವಾದವೊಂದುಂಟು.[2] ಆದರೆ ಪ್ರಬಂಧೋಪಯೋಗಿ ಭಾಷೆಗೂ, ಪದಕವಿತೆಯ ಭಾಷೆಗೂ ವ್ಯತ್ಯಾಸ ಉಂಟು. ಅದರಲ್ಲೂ ಸಂಗೀತಪ್ರಧಾನ ಪದಗಳಲ್ಲಿ ಭಾವಗ್ರಹಣಕ್ಕೆ ವಿಶೇಷ ಗಮನವಿದ್ದು ಪಾಮರರೂ ಲಲಿತಪದಗಳ ಈ ಗುಚ್ಛದಿಂದ ಭಾವವರಿಯಲು ಸಾಧ್ಯವಾಗುವಂತಿರುತ್ತದೆ. ಆದ್ದರಿಂದಲೇ ಪದಕವಿಗಳನೇಕರು ವ್ಯಾವಹಾರಿಕ ಭಾಷೆಗೇ ಪ್ರಾಧಾನ್ಯ ನೀಡಿದ್ದಾರೆ. ತ್ಯಾಗರಾಜರಂತೂ ಪದ್ಯಗದ್ಯ ಸಾಹಿತ್ಯವನ್ನೇ ಬಳಸಿದ್ದಾರೆ. ಬಹುತೇಕ ಅವರ ರಚನೆಗಳು ಮಧ್ಯಲಯದಲ್ಲಿವೆ. ಜನಸಾಮಾನ್ಯರ ಬದುಕಿನ ಎಲ್ಲ ಸ್ತರಗಳನ್ನೂ ಅವು ಸ್ಪಂದಿಸುವ ಅದ್ಭುತ ಸಾಮರ್ಥ್ಯ ಹೊಂದಿವೆ. ಜನತೆಯ ಹೃದಯಕ್ಕೆ ಸಮೀಪವಾಗುವ ದೇಸಿಭಾಷೆಯಲ್ಲಿ ಅಭಿವ್ಯಕ್ತಗೊಂಡ ಈ ಸಾಹಿತ್ಯ ಕೆಲವೊಮ್ಮೆ ದುಗುಡದಿಂದ ಮೈತಾಳಿದ್ದರೆ ಮತ್ತೆ ಕೆಲವೊಮ್ಮೆ ಘುಮ್ಮಸ್ಸಿನಿಂದ ಮೂಡಿವೆ.

ತ್ಯಾಗರಾಜರ ಈ ರಚನಭಂಡಾರದಲ್ಲಿ ಕೃತಿಗಳೂ, ಕೀರ್ತನೆಗಳೂ ಉಂಟು. ಸಾಮಾನ್ಯವಾಗಿ ಧಾತು (ವರ್ಣಮೆಟ್ಟು) ಪ್ರಧಾನವಾದ ರಚನೆಗಳನ್ನು ಕೃತಿಗಳೆಂದೂ, ಮಾತು (ಸಾಹಿತ್ಯ) ಪ್ರಧಾನವಾದ ರಚನೆಗಳನ್ನು ಕೀರ್ತನೆಗಳೆಂದೂ ವರ್ಗೀಕರಿಸುವುದು ರೂಢಿ. ಆದರೆ ಇಂತಹ ವರ್ಗೀಕರಣದ ಬಗೆಗೆ ತ್ಯಾಗರಾಜರು ಏನನ್ನೂ ಹೇಳುವುದಿಲ್ಲ.

ಅವರು 'ಸೊಗಸುಗಾ ಮೃದಂಗ ತಾಳಮು' (ಶ್ರೀರಂಜಿನಿ) ಎಂಬ ರಚನೆಯಲ್ಲಿ 'ಕೃತಿ' ಎಂಬ ಪದವನ್ನೂ ಹಾಗೂ 'ಅಪರಾಧಮುಲನೋರ್ವ' (ರಸಾಳಿ ಅಥವಾ ವನಾವಳಿ) ಎಂಬ ರಚನೆಯಲ್ಲಿ 'ಕೀರ್ತನ' ಎಂಬ ಪದವನ್ನೂ ಪ್ರಯೋಗ ಮಾಡಿದ್ದಾರೆ. ಆದರೆ ಇವೆರಡು ರಚನೆಗಳೂ ಧಾತು ಪ್ರಧಾನವಾದುವೇ. ಇನ್ನಿತರ ರಚನೆಗಳಲ್ಲೂ ಅವರು ಕೃತಿ-ಕೀರ್ತನ ಎಂಬ ಹೆಸರಿನಿಂದ ಈ ಗೇಯಪ್ರಕಾರವನ್ನು ಬೇರ್ಪಡಿಸಿದಂತೆ ಕಾಣ ಬರದು. ಹೀಗಾಗಿ ಸ್ತುತಿ ಗೀತೆಗಳೆಲ್ಲವನ್ನೂ ಇವೆರಡೂ ಹೆಸರುಗಳಿಂದ ಗುರುತಿಸಿದರೆ ತಪ್ಪಿಲ್ಲ. ಪುರಂದರದಾಸರೂ ತಮ್ಮ ರಚನೆಗಳಲ್ಲಿ 'ಕೃತಿ'ಎಂದು ಬಳಸಿರುವುದನ್ನು ಗಮನಿಸಬಹುದು.* ಒಟ್ಟಾರೆ ಇವು ಧಾತು ಮಾತುಗಳಲ್ಲಿ ವಿಶಿಷ್ಟವಾಗಿರುವ ಶಿಷ್ಟ ಸಂಗೀತದ ಗೇಯರಚನಾಪ್ರಕಾರಗಳು.

ಕೃತಿ-ಕೀರ್ತನೆ ಎಂಬ ಗೇಯರಚನಾಪ್ರಕಾರವನ್ನು ಪುರಂದರರೇ ಅಲ್ಲದೇ ಅನ್ನ ಮಯ್ಯ, ಮಾರ್ಗದರ್ಶಿ ಶೇಷ ಅಯ್ಯಂಗಾರ್, ತ್ಯಾಗರಾಜರ ಪಿತಾಮಹ ಗಿರಿರಾಜಕವಿ ಮುಂತಾದವರೂ ಸೃಷ್ಟಿಸಿದ್ದಂತೆ ತಿಳಿದುಬರುತ್ತದೆ. ಅವು ತ್ಯಾಗರಾಜರ ಕಾಲಕ್ಕೆ ಅಧಿಕ ಸಂಖ್ಯೆಯಿಂದ ಹೆಚ್ಚು ಪ್ರಚಾರಗೊಂಡಿವೆ ಎಂಬುದರಲ್ಲಿ ಸಂದೇಹವಿಲ್ಲ.

ತ್ಯಾಗರಾಜರ ಕೃತಿ-ಕೀರ್ತನೆಯಲ್ಲಿ ಸಾಮಾನ್ಯವಾಗಿ ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳೆಂಬ ಮೂರು ವಿಭಾಗಗಳಿರುವುದು. ಪಲ್ಲವಿ-ಚರಣಗಳನ್ನು ಮಾತ್ರ ಉಳ್ಳ ರಚನೆಗಳೂ ಉಂಟು. ಈ ವಿಭಾಗಗಳ ಅಳತೆ ಇಷ್ಟೇ ಇರುವುದೆಂಬ ಬಗೆಗೆ ನಿಖರತೆ ಯಿಲ್ಲ. ಪಲ್ಲವಿ, ಅನುಪಲ್ಲವಿ, ಚರಣಗಳನ್ನು ಹೊಂದಿದ ರಚನೆಗಳಲ್ಲಿ ಮೊದಲ ಎರಡು ಭಾಗಗಳು ಮತ್ತು ಚರಣದ ಪೂರ್ವಾರ್ಧವೂ ಬೇರೆಬೇರೆ ಧಾತುಭಾಗ ಹೊಂದಿ, ಚರಣದ ಉತ್ತರಾರ್ಧವು ಅನುಪಲ್ಲವಿಯ ಧಾತುವಿಗೇ ಹಾಡುವಂಥ ರಚನೆಗಳುಂಟು. ಉದಾಹರಣೆಗೆ, ನೀದಯರಾದ (ವಸಂತಭೈರವಿ), ಎಂತವೇಡುಕೊಂದೋ ರಾಘವ (ಸರಸ್ವತಿ ಮನೋಹರಿ) ರೀತಿಯವು ಅಥವಾ ಮೂರು ಅಂಗಗಳೂ ಪ್ರತ್ಯೇಕ ಧಾತು ವನ್ನೇ ಹೊಂದಿರುವುದುಂಟು. ಉದಾಗೆ, ಎವರಿಮಾಟ (ಕಾಂಬೋಜಿ), ಈ ವಸುಧಾ (ಶಹನ)ದಂಥವು. ಅಲ್ಲದೆ ಪಲ್ಲವಿ, ಅನುಪಲ್ಲವಿ ಮತ್ತು ಹಲವು ಚರಣಗಳಿದ್ದು ಚರಣ ಗಳೆಲ್ಲವೂ ಪ್ರತ್ಯೇಕ ಧಾತುವಿಗೆ ಹಾಡುವಂಥ (ಎಂದುಕುನಿರ್ದಯ) ರಚನೆಗಳೂ ಉಂಟು. ಇನ್ನು ಪಲ್ಲವಿ ಮತ್ತು ಚರಣಗಳನ್ನು ಮಾತ್ರ ಹೊಂದಿದ ರಚನೆಗಳಲ್ಲಿ ಇವೆಲ್ಲವೂ ಒಂದೇ ಧಾತುವಿಗೆ ಹಾಡುವಂಥ (ನಗುಮೋಮುಗಲವಾನಿ-ಮಧ್ಯಮಾ ವತಿ) ಮತ್ತು ಪಲ್ಲವಿ ಮತ್ತು ಚರಣಗಳನ್ನು ಬೇರೆಬೇರೆ ಧಾತುವಿಗೆ ಹಾಡುವಂಥ

---

* ಲಕ್ಷದಿಪ್ಪತ್ತೈದು ಸಾವಿರ ಕೃತಿಯ ವೇದಶಾಸ್ತ್ರಪುರಾಣ ಸಮ್ಮತಿಯಿಂದ
ವಾಸುದೇವನ ನಾಮಾವಳಿಯ ಕ್ಲುಪ್ತಿಯನು ವ್ಯಾಸರಾಯರ ದಯದಿಂದ ಬಣ್ಣಿಪೆನು
(ವಾಸುದೇವ ನಾಮಾವಳಿಯ)

ನಮ್ಮ ಪುರಂದರವಿಠಲನು ಸತತ ಇವರಲಿ ನಿಂತು ಕೃತಿಯ ನಡೆಸುವನು
(ಸತತಗಣನಾಥ)

(ಕರುಣಾಜಲಧೇ-ನಾದನಾಮಕ್ರಿಯ) ರಚನೆಗಳೂ ಉಂಟು.

ಸಂಗೀತ, ಸಾಹಿತ್ಯ ಮತ್ತು ಭಕ್ತಿಭಾವಗಳ ತ್ರಿವೇಣಿ ಸಂಗಮದಂತಿರುವ ತ್ಯಾಗರಾಜರ ರಚನೆಗಳನ್ನು ಹತ್ತಾರು ವಿಧದಲ್ಲಿ ವಿಂಗಡಿಸಬಹುದಾದರೂ ಅವುಗಳಲ್ಲಿ ಕೆಲವನ್ನು ಮಾತ್ರ, ಸುಲಭ ಅಧ್ಯಯನದ ದೃಷ್ಟಿಯಿಂದ ಈ ಮುಂದೆ ಪ್ರಸ್ತಾಪಿಸಲಾಗಿದೆ.

**೧. ಸಂಗೀತದ ದೃಷ್ಟಿಯಿಂದ ಮಾಡಬಹುದಾದ ವರ್ಗೀಕರಣ**

(ಅ) ಅತಿ ಸರಳವಾದವು—ಉದಾಹರಣೆಗೆ, ವರಲೀಲಾಗಾನಲೋಲ (ಶಂಕರಾಭರಣ), ಸೀತಾನಾಯಕ (ರೀತಿಗೌಳ)

ಸರಳವಾದವು—ದಿನಮಣಿವಂಶ (ಹರಿಕಾಂಬೋಜಿ), ರೇಮಾನಸ ಚಿಂತಯಾ (ತೋಡಿ)

ಮಧ್ಯಮವಾದವು—ಬ್ರೋವಭಾರಮಾ (ಬಹುದಾರಿ), ಸುಜನಜೀವನ (ಕಮಾಚ್)

ಕ್ಲಿಷ್ಟವಾದವು—ಕಲಿಗಿಯುಂಟೆ (ಕೀರವಾಣಿ), ನಾದೋಪಾಸನ (ಬೇಗಡೆ)

ಅತಿಕ್ಲಿಷ್ಟವಾದವು—ಓ ರಂಗಶಾಯಿ (ಕಾಂಬೋಜಿ), ದರಿನಿ ತೆಲುಸುಕೊಂಟಿ (ಶುದ್ಧಸಾವೇರಿ)

(ಆ) ರಚನೆಗಳ ಚರಣಗಳ ಸಂಖ್ಯೆಯಲ್ಲಿ ನಿಗದಿಯಿಲ್ಲ. ಹೀಗಾಗಿ ಇವುಗಳನ್ನು ಒಂದು ಚರಣ ಉಳ್ಳ ರಚನೆ—ಗಿರಿಪೈ (ಸಹನ), ವಾಚಾಮಗೋಚರಮೇ (ಕೈಕವಶಿ) ಎರಡು ಚರಣ ಉಳ್ಳ ರಚನೆ—ನೀವಲ್ಲ

ಗುಣದೋಷಮೇಮಿ (ಕಾಪಿ), ನಾಮೊರಲನುವಿನಿ (ಆರಭಿ) ೩, ೪, ೫, ಕಡೆಗೆ ೨೩ ಚರಣಗಳನ್ನುಹೊಂದಿದ ರಚನೆಗಳು ಎಂದು ವಿಭಾಗಿಸಬಹುದು. ಅಂದಾಜಿನಲ್ಲಿ ಒಂದು ಚರಣ ಉಳ್ಳ ಸುಮಾರು ೩೨೬, ಎರಡು ಚರಣಗಳುಳ್ಳ ೯, ಮೂರಿರುವ ೧೮೪, ನಾಲ್ಕಿರುವ ೨೮, ಐದು ಚರಣಗಳಿರುವ ೧೮ ರಚನೆಗಳು ಕಾಣಬರುತ್ತವೆ. ೨೩ ಚರಣಗಳನ್ನು ಹೊಂದಿದ ಏಕೈಕ ರಚನೆ (ಜಯ ಜಯ ಶ್ರೀರಘುರಾಮ)ಯೂ ಇದೆ.

(ಇ) ಒಂದಕ್ಕಿಂತ ಹೆಚ್ಚು ಚರಣಗಳಿದ್ದು ಅವೆಲ್ಲವೂ ಒಂದೇ ಧಾತುವಿಗೆ ಹಾಡಲ್ಪಡುವುದುಂಟು. ಉದಾಹರಣೆಗೆ, ಕಾಲಹರಣಮೇಲರಾ (ಶುದ್ಧಸಾವೇರಿ), ತೆರತೀಯಗರಾದಾ (ಗೌಳಿಪಂತು)

(ಈ) ಹಲವು ಚರಣಗಳಿದ್ದು ಅವೆಲ್ಲವೂ ಬೇರೆಬೇರೆ ಧಾತುವಿಗೆ ಹಾಡಲ್ಪಡುವುದೂ ಉಂಟು. ಈ ವಿಭಾಗಕ್ಕೆ ಘನರಾಗ ಪಂಚರತ್ನಗಳೂ ಸೇರುತ್ತವೆ. ಈ ಗುಚ್ಛವಲ್ಲದೆ ಇನ್ನಿತರ ಕೆಲವು ರಚನೆಗಳೆಂದರೆ,

| | |
|---|---|
| ನಿನ್ನುವಿನಾ ಸುಖಮುಗಾನ | (ತೋಡಿ) |
| ಬ್ರೋಚೇವಾರೆವರೇ | (ಶ್ರೀರಂಜಿನಿ) |
| ಎಂದುಕು ನಿರ್ದಯ | (ಹರಿಕಾಂಬೋಜಿ) |
| ಶ್ರೀರಘುವರಾಪ್ರಮೇಯ | (ಕಾಂಬೋಜಿ) |
| ನಾಮೊರಲನುವಿನಿ | (ಆರಭಿ) |
| ನೀ ಪದಪಂಕಜಮುಲ | (ಬೇಗಡೆ) |
| ಮರವಕುರಾ | (ದೇವಗಾಂಧಾರಿ) |

(ಉ) ಚಿಟ್ಟೆಸ್ವರ ಪ್ರಯೋಗವುಳ್ಳ ರಚನೆಗಳು—ವಾಸ್ತವವಾಗಿ ತ್ಯಾಗರಾಜರಿಗೆ ತಮ್ಮ ರಚನೆಗಳಲ್ಲಿ ಚಿಟ್ಟೆಸ್ವರ ಅಳವಡಿಸುವ ಆಸಕ್ತಿ ಇರಲಿಲ್ಲ ವೆಂಬುದು[೬] ವಿಬುಧರ ಹೇಳಿಕೆ. ಕೆಲವು ರಚನೆಗಳಿಗೆ ಅವರ ನೇರ ಶಿಷ್ಯರಾದ ವೆಂಕಟರಮಣ ಭಾಗವತರು ಗುರುಗಳ ಸಮ್ಮತಿಯ ಮೇರೆಗೆ ಚಿಟ್ಟೆಸ್ವರ ಅಳವಡಿಸಿದಂತೆ ಹೇಳುವುದುಂಟು.[೭] ಹೀಗೆಯೇ ಎಂದುದಾಗಿನಾಡೋ (ತೋಡಿ) ರಚನೆಗೆ ತಿಲ್ಲೈಸ್ಥಾನಂ ರಾಮಅಯ್ಯಂಗಾರ್ ಚಿಟ್ಟೆಸ್ವರ ಜೋಡಿಸಿದ್ದಾರೆ.[೮] ಇನ್ನೂ ಅನೇಕ ರಚನೆಗಳಿಗೆ ಚಿಟ್ಟೆಸ್ವರವನ್ನು ಅನೇಕ ಸಂಗೀತಗಾರರು ಜೋಡಿಸಿ ಹಾಡಿರುವುದೂ ಉಂಟು. ಆದರೆ ಇವು ಯಾರಿಂದ, ಯಾವಾಗ ಅಳವಟ್ಟಿತೆಂಬ ಬಗೆಗೆ ನಿಶ್ಚಯವಾಗಿ ಹೇಳಲಾಗದು.
ಈ ವಸುಧಾ ನೀವಂಟಿದೈವಮು (ಶಹನ), ಎಂದುಕೋ(ಮೋಹನ), ಅಪರಾಧ ಮುಲನೋರ್ವ ಸಮಯಮು (ರಸಾಳಿ ಅಥವಾ ವನಾವಳಿ) ಕರುಣ ಜೂಡವಯ್ಯ (ಸಾರಂಗ), ನಿನ್ನೇ ಭಜನ (ನಾಟ), ಕಾರುವೇಲ್ಪುಲು (ಕಲ್ಯಾಣಿ)—ಇವು ಚಿಟ್ಟೆಸ್ವರವಿರುವ ಕೆಲವು ರಚನೆಗಳು.

(ಊ) ರಾಗ ನಾಮಾಂಕಿತಗಳಲ್ಲಿ ವ್ಯತ್ಯಾಸ ಕಾಣಬರುವಂಥವು—ತ್ಯಾಗರಾಜರ ಕಾಲಕ್ಕೆ ಮುದ್ರಣ ಕಲೆ ರೂಢಿಯಲ್ಲಿ ಇರಲಿಲ್ಲ. ಬಾಯ್ದೆರೆಯ (oral)ಮೂಲಕವೇ ಸಂಗೀತ ಕಲೆ ಪ್ರಚಾರವಾಗುತ್ತಿದ್ದ ಕಾಲವದು. ಅಲ್ಲದೆ ತ್ಯಾಗರಾಜರು ತಮ್ಮ ಶಿಷ್ಯರಿಗೆ ರಚನೆಗಳನ್ನು ಬೋಧಿಸುವ ಮುನ್ನವೇ ರಾಗಗಳ ಹೆಸರನ್ನು ಪ್ರಕಟಿಸುತ್ತಿರಲಿಲ್ಲ.[೯] ಆ ನಂತರ ಶಿಷ್ಯರು ರಾಗಕೋಶಗಳಲ್ಲಿ (ಕಟಕ) ಸಾಮ್ಯನೋಡಿ ರಾಗದ ಹೆಸರನ್ನು ಬರೆಯುತ್ತಿದ್ದರೆಂಬ ಅಭಿಪ್ರಾಯವೊಂದಿದೆ. ಬೇರೆಬೇರೆ ಕಟಕಗಳಲ್ಲಿ ರಾಗನಾಮಗಳು ಬೇರೆಬೇರೆಯಾಗಿದ್ದುದು ರಾಗನಾಮಾಂಕಿತದಲ್ಲಿ ಕಾಣಬರುವ ವ್ಯತ್ಯಾಸಕ್ಕೆ ಮುಖ್ಯ

ಕಾರಣವೆನ್ನುತ್ತಾರೆ.[೭] ಅಷ್ಟಲ್ಲದೆ ತ್ಯಾಗರಾಜರೇನೋ ಸಮಯ ಸ್ಫೂರ್ತಿಯಿಂದ ಅನೇಕ ರಾಗಗಳನ್ನು ಸೃಷ್ಟಿಸಿದರೂ ಅವುಗಳ ಹೆಸರನ್ನು ರಹಸ್ಯವಾಗಿಯೇ ಇಟ್ಟಿದ್ದರು. ಪ್ರಸಿದ್ಧ ರಾಗಗಳ ವಿನಾ ಉಳಿದವು ಪೆದ್ದಸಿಂಗರಾಚಾರ್ಯರಿಂದ ಹೆಸರಿಸಲ್ಪಟ್ಟುವೆಂಬ ಹೇಳಿಕೆಯೂ ಒಂದುಂಟು.[೮] ಇವೇನೇ ಇರಲಿ, ಗ್ರಂಥಗಳಲ್ಲಿ ಹಾಗೂ ಪ್ರಯೋಗದಲ್ಲಿ ರಾಗವ್ಯತ್ಯಾಸ ಕಾಣಬರುವ ಕೆಲವು ರಚನೆಗಳೆಂದರೆ :

ಚೇತುಲಾರ—ಖರಹರಪ್ರಿಯ*—ಭೈರವಿ
ಪಾಹಿರಾಮದೂತ—ವಸಂತವರಾಳಿ—ಷಡ್ವಿಧಮಾರ್ಗಿಣಿ
ನೀವಲ್ಲ ಗುಣದೋಷಮೇಮಿ—ಕರ್ನಾಟಕ ಕಾಪಿ—ಹಿಂದೂಸ್ತಾನಿ ಕಾಪಿ
ಶ್ರೀರಾಮರಾಮ ರಾಮ ಶ್ರೀಮಾನಸಾಬ್ಧಿಸೋಮ—ಗೋಪಿಕಾ ವಸಂತ—ನೀಲಾಂಬರಿ
ವಲ್ಲಗಾದನಕ—ಹರಿಕಾಂಬೋಜಿ—ಶಂಕರಾಭರಣ
ಲಾವಣ್ಯರಾಮ—ರುದ್ರಪ್ರಿಯ—ಪೂರ್ಣಶಡ್ಜ
ಎಂದುಂಡಿವೆಡಲಿ—ಧನ್ಯಾಸಿ—ದರ್ಬಾರು
ನೇಪೊಗಡಕುಂಟೆ—ಶುಭಪಂತುವರಾಳಿ—ವರಾಳಿ
ದೇಹಿ ತವ ಪದಭಕ್ತಿಂ—ಮಧ್ಯಮಾವತಿ—ಶಹನ
ಏಲಾವತಾರ—ಸಾಲಗಭೈರವಿ—ಮುಖಾರಿ
ಜ್ಞಾನಮೊಸಗರಾದಾ—ಷಡ್ವಿಧಮಾರ್ಗಿಣಿ—ಪೂರ್ವಿಕಲ್ಯಾಣಿ
ಎವರನಿ—ದೇವಾಮೃತವರ್ಷಿಣಿ—ನಾದಚಿಂತಾಮಣಿ (ಒಂದೇ ರಾಗದ ಎರಡು ಹೆಸರುಗಳೆನ್ನುವುದುಂಟು)
ಏದಾರಿ ಸಂಚರಿಂತುರಾ—ಕಾಂತಾಮಣಿ—ಶ್ರುತಿರಂಜನಿ
ರಾಗಸುಧಾರಸ—ಮಯೂರಧ್ವನಿ—ಆಂದೋಳಿಕಾ
ನನ್ನುಗನ್ನತಲ್ಲಿ—ಕೇಸರಿ—ಸಿಂಧುಕನ್ನಡ
ನೇಮೊರಬೆಟ್ಟಿತೇ—ರೂಪವತೀ—ತೋಡಿ
ನೀದಾಸಾನುದಾಸುಡನಿನ—ಕಲ್ಯಾಣಿ—ಹಮೀರ್‌ಕಲ್ಯಾಣಿ
ಸೀತಮ್ಮ ಮಾಯಮ್ಮ—ಲಲಿತ—ವಸಂತ್[೯]

---

* ಈ ಕೃತಿಯನ್ನು ಖರಹರಪ್ರಿಯದಲ್ಲಿ ಹಾಡುವುದೇ ಸೂಕ್ತವೆಂದು *Oriental Music in Staff Notation* ಪುಸ್ತಕದ ಅಡಿಟಿಪ್ಪಣಿಯಲ್ಲಿ ಹೇಳಲಾಗಿದೆ.

ಇವೇ ಅಲ್ಲದೆ ಶುಭಪಂತುವರಾಳಿ ಎಂಬುದು ಪಂತುವರಾಳಿಯೆಂದೂ, ದೇಶ್ಯ ತೋಡಿಯೆಂಬುದು ತೋಡಿಯೆಂದೂ ಹೇಳಲ್ಪಟ್ಟು ಪ್ರಯೋಗಗೊಂಡಿರುವುದುಂಟು. ಹೀಗೆಯೇ ಅನೇಕ ರಚನೆಗಳು ಇಂದು ಪ್ರಯೋಗದಲ್ಲಿರುವ ವರ್ಣಮೆಟ್ಟಿಗಿಂತಲೂ ವಿಭಿನ್ನ ರೀತಿಯಲ್ಲಿದ್ದಂತೆ ತೋರುತ್ತದೆ. ಅದಕ್ಕೆ ಒಂದು ಉದಾಹರಣೆ, ನಮೋನಮೋ ರಾಘವಾಯ.* ಹೀಗೆಯೇ ಸುಂದರಿ ನೀ ದಿವ್ಯ ರೂಪಮು (ಕಲ್ಯಾಣಿ), ವಾಸುದೇವ ಯನಿ (ಕಲ್ಯಾಣಿ), ಸಂಗೀತಜ್ಞಾನಮು (ಧನ್ಯಾಸಿ) ರಚನೆಗಳೂ ಭಾಗಶಃ ಮಾರ್ಪಟ್ಟಿವೆ.[೧೦]

(ಖ) ಕೃತಿಗಳೇ ಆಗಿದ್ದರೂ ಲಕ್ಷ್ಯದಲ್ಲಿ ವಿಭಿನ್ನವಾಗಿ ಕಾಣುವಂಥವು ಎಂದರೆ ಬೇರೆಬೇರೆ ರಚನೆಗಳ ಸ್ವರೂಪವುಳ್ಳದ್ದು. ಉದಾ.ಗೆ—ನೀಕೆವರಿಬೋಧನ (ಶುದ್ಧಸಾವೇರಿ), ಎಂದುದಾಗಿನಾಡೋ (ತೋಡಿ)ಗಳು ಪದದ ಮಾದರಿಯಲ್ಲಿವೆ. ಸಾಮಿಕಿಸರಿ (ಬೇಗಡೆ), ಮಾಟಾಡವೇಮಿ (ನೀಲಾಂಬರಿ) ನೃತ್ಯ ರಚನೆಗಳಂತಿವೆ. ಕೊಲುವೈಯುನ್ನಾಡೆ (ಭೈರವಿ) ತಾನದ ಮಾದರಿಯಲ್ಲಿದೆ. ಓರಂಗಶಾಯಿ (ಕಾಂಬೋಜಿ), ಕೊಲುವೈಯುನ್ನಾಡೆ (ಭೈರವಿ) ರಚನೆಗಳು ಆಯಾ ನಿರ್ದಿಷ್ಟ ರಾಗಗಳ ಆಲಾಪನೆಗೆ ಈ ಅಕ್ಷರಗಳನ್ನು ಸಾಹಿತ್ಯವಾಗಿ ಜೋಡಿಸಿದಂತಿದೆ. ಕೆಲವೇ ಸಾಹಿತ್ಯಾಕ್ಷರಗಳಿಗೆ ಅಧಿಕ ಸಂಗೀತವನ್ನು ಅಳವಡಿಸುವ ಕಲೆ ಇಲ್ಲಿ ಕಾಣಬರುತ್ತದೆ. ಇವುಗಳಲ್ಲಿ ಅಳವಟ್ಟ ವರ್ಣಮೆಟ್ಟಿನ ವೈವಿಧ್ಯತೆಯಿಂದಾಗಿ ಇವು ಸಂಗೀತ ಕಚೇರಿಗಳಲ್ಲಿ ಪ್ರಧಾನ ಪಾತ್ರ ವಹಿಸುತ್ತವೆ. ಇವು ಸಂಗೀತವನ್ನೇ ಗಮನದಲ್ಲಿಟ್ಟುಕೊಂಡು ರಚಿತವಾದವು. ಇವುಗಳಲ್ಲಿ ರಾಗದ ಪ್ರೌಢಿಮೆ ಅದ್ಭುತವಾಗಿವೆ. ತ್ಯಾಗರಾಜರ ಕಾಲಕ್ಕೆ ಮುನ್ನ ಕಚೇರಿಗಳಲ್ಲಿ ವರ್ಣ, ದರು, ಸ್ವರಜತಿ ಮುಂತಾದವು ಅಳವಟ್ಟಿದ್ದಿರಬಹುದು.[೧೧] ತ್ಯಾಗರಾಜರ ಕಾಲಾನಂತರ ಕಚೇರಿಗಳಲ್ಲಿ ಈ ಕೃತಿಗಳ ಪ್ರಯೋಗವೇ ಅಧಿಕಗೊಂಡಿದೆ.

ತ್ಯಾಗರಾಜರ ರಚನೆಗಳಲ್ಲಿ ಅತ್ಯುತ್ತಮ ವಿಶ್ರಾಂತಿ ಸ್ಥಾನಗಳು ಅಳವಟ್ಟಿವೆ. ಶ್ರುತಿ ಶುದ್ಧವಾಗಿ ಈ ಸ್ಥಾನಗಳಲ್ಲಿ ಕೆಲವು ನಿಮಿಷಗಳ ಕಾಲ ನಿಲ್ಲಿಸಿದರೆ ಶ್ರಾವಕನಿಗೆ ವಿಶೇಷ ಆನಂದ ಲಭ್ಯವಾಗುತ್ತದೆ. ರಾಗದಲ್ಲಿ ಪ್ರಯೋಗವಾಗಬೇಕಾದ ದೀರ್ಘಸ್ವರ, ಅಂಶ ಸ್ವರ, ಅಲ್ಪಸ್ವರಗಳನ್ನು ಗಮನದಲ್ಲಿಟ್ಟುಕೊಂಡೇ ಅವರು ರಚನೆಗಳಲ್ಲಿ ಧಾತುರೂಪವನ್ನು ಅಳವಡಿಸಿದ್ದಾರೆ. ಉದಾಹರಣೆಗೆ,

ಮೇರುಸಮಾನ (ಮಾಯಾಮಾಳವಗೌಳ)

; ನೀ  ,ಸಾರಿ  ಗಾ,,  ,,ಮಗರಿಸ

ಮೇ  ರುಸ  ಮಾ  .....ನ ......

ಇಲ್ಲಿ ಗಾಂಧಾರ, ನಿಷಾದಗಳು ಪರಸ್ಪರ ವಾದಿಸಂವಾದಿಗಳೂ, ರಾಗಚ್ಛಾಯಾ

---

* ಅಧ್ಯಾಯ ಐದರಲ್ಲಿ ಲಿಪಿಸಂಕೇತಗಳ ಮೂಲಕ ನೀಡಲಾಗಿದೆ.

ಸ್ವರಗಳೂ ಹೌದು. ಅವುಗಳ ಜೋಡಣೆ ಗಮನಾರ್ಹ. ಇದರಂತೆಯೇ ಏ ಪಾಪಮು ಜೇಸಿತಿರಾ (ಅಠಾಣ) ಕೃತಿಯು ಪಂಚಮ ಸ್ವರದಲ್ಲೇ ಆರಂಭವಾಗಿ ಅದೇ ಸ್ವರದಲ್ಲೇ ವಿಶ್ರಾಂತಿ ಪಡೆಯುತ್ತದೆ. ಈ ಭಾಗವನ್ನು ಕೆಲಕಾಲ ನಿಲ್ಲಿಸುವುದರಿಂದ ಕರುಣರಸ ಫಲಪ್ರದವಾಗಿ ಮೂಡಲು ಸಾಧ್ಯವಾದೀತು.

| ; ;ಪಾ | ಪಪಮಗ | ಗಮಪಾ | |
|---|---|---|---|
| ಏ | ಪಾ .... | | |

| ;ಪಾಮಾ | ಪಾ ; ; ; | ನೀಈಪಾ | ದನೀಪ ಪಾ |
|---|---|---|---|
| ಪಮು | ಜೇ | ಸಿತಿ | ರಾ ....... |

ಹೀಗೆಯೇ ರಾಗ-ಸಂಚಾರಗಳ ಅಳವಡಿಕೆಯಲ್ಲೂ ತ್ಯಾಗರಾಜರ ಕೌಶಲ ಅದ್ಭುತ ವಾಗಿದೆ. ಕ್ಷೀಣಮೈ ತಿರುಗಜನ್ಮಿಂಚು (ಮುಖಾರಿ) ಕೃತಿಯಲ್ಲಿ ಅಳವಟ್ಟ ಏರುಪೇರಿನ ಸಂಚಾರಗಳು, ಸಂಸ್ಕೃತ. ಸಾಹಿತ್ಯ, ನಾಟಕಾಲಂಕಾರ, ಪುರಾಣಾದಿ ಶಾಸ್ತ್ರ, ಜಪತಪ ಗಳೆಲ್ಲದರ ಫಲವೂ ಕ್ರಮೇಣ ಕ್ಷೀಣಿಸುತ್ತಾ ಹುಟ್ಟುಸಾವುಗಳನ್ನು ಮತ್ತೆಮತ್ತೆ ಉಂಟು ಮಾಡುತ್ತದೆಂಬ ಭಾವವನ್ನು ಪುಷ್ಟೀಕರಿಸುವಂತಿದೆ. ಅಂತೆಯೇ ಆಡಮೋಡಿ ಕೃತಿ ಯಲ್ಲಿ ಉತ್ತರಾದಿಯಿಂದ ಬಂದ ಶ್ರೀರಾಮನಿಗೆ ದಕ್ಷಿಣಾದಿಯ ಭಾಗವಾದ ಕಿಷ್ಕಿಂಧ ಪ್ರಾಂತ್ಯದಲ್ಲಿನ ವಾನರರ ಮೈತ್ರಿ ಸೂಚನೆಗೆ ಚಾರುಕೇಶಿ ರಾಗಸಂಚಾರಗಳ ಅಳವಡಿಕೆ ಸಮುಚಿತವಾಗಿ ತೋರುತ್ತದೆ.

ಅಂತೆಯೇ ಸಾಹಿತ್ಯಭಾವಕ್ಕೆ ಅನುಗುಣವಾಗಿ ರಾಗನಾಮವಿರುವ ರಚನೆಗಳೂ ಉಂಟು. ಉದಾಹರಣೆಗೆ, ದೇವಕ್ರಿಯ, ಗರುಡಧ್ವನಿ, ವೀರವಸಂತ, ಚಂದ್ರಜ್ಯೋತಿ.*

**೨. ಸಾಹಿತ್ಯದ ದೃಷ್ಟಿಯಿಂದ ಮಾಡಬಹುದಾದ ವರ್ಗೀಕರಣ**

ಅನೇಕ ರಚನೆಗಳಲ್ಲಿ ವಿಭಿನ್ನ ವಿಚಾರಗಳ ಮಿಶ್ರಣವಿರುವುದರಿಂದ ವರ್ಗೀಕರಣ ಸುಲಭವಲ್ಲ. ಆದರೂ ಅವುಗಳನ್ನು ಸ್ಥೂಲವಾಗಿ ಹೀಗೆ ವಿಭಾಗಿಸಬಹುದು.

(ಅ) **ಸ್ತುತಿಗೀತೆಗಳು** : ಇವು ಭಗವಂತನ ಗುಣವಿಶೇಷಣಗಳನ್ನೇ ವಿಶೇಷವಾಗಿ ಹೊಂದಿರುತ್ತವೆ. ಉದಾ : ಸುಜನಜೀವನ (ಕಮಾಚ್), ನಗುಮೋಮು (ಮಧ್ಯಮಾವತಿ), ಮಾಮವ ಸತತಂ (ಜಗನ್ಮೋಹಿನಿ), ರಘುಪತೇ ರಾಕ್ಷಸಭೀಮ (ಶಹನ).

(ಆ) **ಸಂಗೀತಾಂಶಗಳನ್ನು ಕುರಿತ ರಚನೆಗಳು**† : ಸಂಗೀತಜ್ಞಾನಮು (ಧನ್ಯಾಸಿ) ಸಂಗೀತಶಾಸ್ತ್ರಜ್ಞಾನಮು (ಮುಖಾರಿ) ಶೋಭಿಲ್ಲು ಸಪ್ತಸ್ವರ (ಜಗನ್ಮೋ

* ಇವುಗಳನ್ನು ಆರನೇ ಅಧ್ಯಾಯದಲ್ಲಿ ವಿವರಿಸಲಾಗಿದೆ.

† ಇವುಗಳನ್ನು ಕುರಿತಂತೆ ಈಗಾಗಲೇ ವಿವರವಾಗಿ ಪ್ರಸ್ತಾಪಿಸಲಾಗಿದೆ.

ಹಿನಿ) ನಾದಸುಧಾರಸಂಬಿಲನು (ಆರಭಿ) ನಾದೋಪಾಸನಚೇ (ಬೇಗಡೆ) ನಾದತನುಮನಿಶಂ (ಚಿತ್ತರಂಜನಿ) ಆನಂದಸಾಗರ ಮೀದನಿ (ಗರುಡಧ್ವನಿ) ಮೋಕ್ಷಮುಗಲದಾ (ಸಾರಮತಿ) ನಾದಲೋಲುಡೈ (ಕಲ್ಯಾಣವಸಂತ) ಸೊಗಸುಗಾ (ಶ್ರೀರಂಜಿನಿ) ಮುಂತಾದವು.

ಈ ರಚನೆಗಳು ಪೂರ್ಣವಾಗಿ ಸಂಗೀತ ಶಾಸ್ತ್ರ ವಿಷಯ, ಅದರ ಹಿರಿಮೆ, ಸಂಗೀತಜ್ಞರ ಪಟ್ಟಿ ಮೊದಲಾದ ವಿಷಯಗಳನ್ನು ಒಳಗೊಂಡಿವೆ. ಇನ್ನು ಕೆಲವು ರಚನೆಗಳಲ್ಲಿ ಹಾಡಿನ ಪ್ರಧಾನ ಉದ್ದೇಶ ಬೇರೆಯದೇ ಆಗಿದ್ದರೂ, ಅವುಗಳಲ್ಲಿ ಪ್ರಾಸಂಗಿಕವಾಗಿ ಸಂಗೀತಾಂಶಗಳ ಉಲ್ಲೇಖವುಂಟು. ಇವು ತ್ಯಾಗರಾಜರಿಗೆ ಲಕ್ಷಣ ಸಂಗೀತದ ಬಗೆಗಿದ್ದ ತಿಳಿವನ್ನೂ ಪ್ರಸಿದ್ಧೋಕ್ತಿಗಳ ಭಾವವನ್ನೂ ಪ್ರತಿಬಿಂಬಿಸುತ್ತವೆ. ಉದಾಹರಣೆಗೆ,

ಸುಖಿಎವ್ವರೋ (ಕಾನಡ) **ನಿತ್ಯಮೈನ ಸುಸ್ವರಗಾನಮುತೋ**

ಅತಡೇ ಧನ್ಯುಡು (ಕಾಪಿ) **ತುಂಬುರುವಲೆ ತನ ತಂಬೂರಿಪಟ್ಟಿ . . .**
**. . . . ನಟಿಯಿಂಚು**

ಕದ್ದನುವಾರಿಕಿ (ತೋಡಿ) **ಮುದ್ದುಗ ತಂಬೂರಬಟ್ಟಿ . . . . .**
**. . . . ಸುಸ್ವರಮುತೋನು**

ಸಂಸಾರುಲೈತೇ (ಸಾವೇರಿ) **ವೀಣಾಗಾನಮುತೋ . . . .**
**. . . . . ಶ್ರೀರಾಗಮುನಪಾಡುಚು**

ವರರಾಗಲಯಜ್ಞುಲು (ಚೆಂಚುಕಾಂಬೋಜಿ) **ಸ್ವರ ಜಾತಿ ಮೂರ್ಛನ ಭೇದಮುಲ್**
**ತೆಲಿಯಕ . . . . ದೇಹೋದ್ಭವಂಬಗು ನಾದಮುಲ್**
**ದಿವ್ಯಮೌ ಪ್ರಣವಾಕಾರಮನೇ . . . .**

ಮುಚ್ಚಟಬ್ರಹ್ಮಾದುಲಕು (ಮಧ್ಯಮಾವತಿ) **ಸುಸ್ವರಮುಲತೋ ಏಂತ ರಾಗ**
**ಮುಲನು ಆಲಾಪಮುಚೇಯು**

ಮಿತ್ರಿಭಾಗ್ಯಮೇ ಭಾಗ್ಯಮು (ಖರಹರಪ್ರಿಯ) **ಬಾಗುಗ ಏಂತರಾಗಮುಲ**
**ನಾಲಾಪಮು ಸೇಯಗ**
**ಮೇನು ಪುಲಕರಿಂಚಗ**

ಕೊಲುವ ಮರೆಗದ (ತೋಡಿ) **ತಂಬೂರ ಜೇಕೊನಿ . . . ಬಾಡುಚು . .**
**ಘನನಯ ರಾಗಮುಲಚೇ ದೀಪಾರಾಧನ**
**ಮೊನರಿಂಚಿ**

ವಲ್ಲಗಾದನಕ (ರಾಗ ವ್ಯತ್ಯಾಸವಿದೆ) **ಕುಂಭಕ ರೇಚಕ ಏದುಲನು ಕೋರಿ**
**ಬ್ರೋಚಿನಾವು**

ಎಂದರೋ ಮಹಾನುಭಾವುಲು (ಶ್ರೀ) **ಬಾಡುಚುನು . . . . ಸ್ವರಲಯಾದಿ**
**ರಾಗಮುಲ**
**ದೆಲಿಯುವಾರು** (ಚರಣ ೪, ಪತಿತಪಾವನುಡನೇ)

**ಭಾವರಾಗಲಯಾದಿ ಸೌಖ್ಯಮುಚೇ ಚಿರಾಯುವುಲ್**
**ಗಲಿಗಿ** (ಚರಣ ೯, ಭಾಗವತರಾಮಾಯಣ)

ದುಡುಕುಗಲ (ಗೌಳ) **ಸ್ವರಲಯಂಬುಲೆರುಂಗಕನೆ ಶಿಲಾತ್ಮುಲೈ . . .**
(ಚರಣ ೬ ತೆಲಿಯನಿ ನಟವಿಟ)

ಶ್ರೀನಾರದ (ಕಾನಡ) **ವೇದಜನಿತ ವರ ವೀಣಾವಾದನ ತತ್ವಜ್ಞ. . .**

ಗಾನವೆಂಬುದು ಸುಸ್ವರದಿಂದ ಕೂಡಿರಬೇಕು. (ಶೃತಿಗಾಗಿ) ತಂಬೂರಿ ಹಿಡಿದು ಹಾಡುತ್ತ,* ನಟಿಸಬಹುದು. ಶ್ರೀರಾಗದಂತಹ ಮಂಗಳಕರ ರಾಗಗಳ ಗಾಯನದಲ್ಲಿ ವೀಣೆಯಂತಹ ವಾದ್ಯಗಳೂ ಜೊತೆಗೂಡಿರಬಹುದು ಎನ್ನುವಲ್ಲಿ 'ಸುಗೀತಂ ಸಂಗೀತಂ' ; 'ಗೀತಂ ವಾದ್ಯಂ ತಥಾ ನೃತ್ಯ ತ್ರಯಂ ಸಂಗೀತಮುಚ್ಯತೇ' ಎಂಬ ಪ್ರಾಚೀನ ಲಾಕ್ಷಣಿಕರ ಉಲ್ಲೇಖಗಳು ಪ್ರತಿಧ್ವನಿಸಿವೆ. ಪ್ರಾಣಾಯಾಮದ ಅಭ್ಯಾಸ ದಿಂದ ಸಂಗೀತ ಸಾಧನೆ ಮಾಡಿದ ಸಿದ್ಧರನ್ನು ಭಗವಂತನು ಚಿರಂಜೀವಿಗಳಾಗುವಂತೆ ಅನುಗ್ರಹಿಸಿದ್ದಾನೆ. (ಅಂತಹವರ ಗಾಯನದಿಂದ) ಸ್ವರಲಯಾದಿ ಸೌಖ್ಯಗಳನ್ನು ತಿಳಿದು ಮಾಡುವ ಅಪೂರ್ವ ರಾಗಗಳ ಆಲಾಪದಿಂದ ರೋಮಾಂಚನವುಂಟಾಗುತ್ತದೆ ಎನ್ನು ವಲ್ಲಿ ಭಾಗಶಃ 'ನಾದೋಪಾಸನ ಯಾ ದೇವಾ ಬ್ರಹ್ಮ ವಿಷ್ಣು ಮಹೇಶ್ವರಾಃ । ಭವನ್ತ್ಯು ಪಾಸಿತಾ ನೂನಂ ಯಸ್ಮಾದೇತೇ ತದಾತ್ಮತಾಃ ॥; ವೀಣಾವಾದನ ತತ್ವಜ್ಞಃ ಶ್ರುತಿ ಜಾತಿ ವಿಶಾರದಃ ತಾಳಜ್ಞಶ್ಚಾಪ್ರಯಾಸೇನ ಮೋಕ್ಷಮಾರ್ಗಂ ಸ ಗಚ್ಛತಿ ॥, ಎಂಬ ಸಾಲುಗಳ ಭಾವವಿದೆ.

ರಾಗಗಳ ಘನ, ನಯ ಮತ್ತು ದೇಶ್ಯವೆಂಬ ವರ್ಗೀಕರಣವನ್ನೂ ವೆಂಕಟಮಖಿಯು (೧೭ನೇ ಶತಮಾನ) ಪ್ರಸ್ತಾಪಿಸುತ್ತಾನೆ. ತ್ಯಾಗರಾಜರ ಕಾಲಕ್ಕೆ ಘನರಾಗಗಳು ಪ್ರಸಿದ್ಧ ವಾಗಿದ್ದವು. ನಯವೆಂಬುವು ರಕ್ತಿರಾಗಗಳು. ತ್ಯಾಗರಾಜರದೇಕೋ ಪ್ರಸ್ತುತ ಸಾಲಿನಲ್ಲಿ (ಕೊಲುವಮರೆಗದ) ಘನ, ನಯ ರಾಗಗಳನ್ನು ಮಾತ್ರ ಪ್ರಸ್ತಾಪಿಸಿದ್ದಾರೆ. ದೇಶೀ ರಾಗಗಳ ಪ್ರಸ್ತಾಪವಿಲ್ಲ.

ನಕಲಿ ಸಂಗೀತಗಾರರನ್ನು ಟೀಕಿಸುವಂತಹ (ವರರಾಗಲಯಜ್ಞುಲು) ರಚನೆಯಲ್ಲಿ ಸ್ವರಜಾತಿ ಮತ್ತು ಮೂರ್ಛನಗಳನ್ನು ತ್ಯಾಗರಾಜರು ಪ್ರಸ್ತಾಪಿಸುತ್ತಾರೆ. ಸ್ವರಜಾತಿ ಎಂದರೆ ಸ್ವರದ ವರ್ಗ ಹಾಗೂ ಸ್ವಭಾವ. ಮೂರ್ಛನೆ ಎಂದರೆ ಸಪ್ತಸ್ವರಗಳ ಕ್ರಮ ಬದ್ಧ ಆರೋಹ ಮತ್ತು ಅವರೋಹಗಳು ; (ಸರಿಗಮಪದನಿ ನಿದಪಮಗರಿಸ, ರಿಗಮ ಪದನಿಸ ಸನಿದಪಮಗರಿ ಮುಂತಾಗಿ ಷಡ್ಜದಿಂದಾರಂಭಿಸುವುದೇ ಅಲ್ಲದೆ ಇತರ ಸ್ವರಗ ಳಿಂದಲೂ ಆರಂಭಿಸಿ ಸ್ವರಶ್ರೇಣಿಗಳನ್ನು ಕಲ್ಪಿಸುವುದು). ಇದನ್ನೇ ವೆಂಕಟಮಖಿಯೂ ಹೇಳುತ್ತಾನೆ.

---

* ಆಧಾರ ಶ್ರುತಿಗಾಗಿ ತಂಬೂರಿ ಹಿಡಿದು ಹಾಡುವ ರೂಢಿಗೆ ಮುನ್ನ ಕೊಳಲು ವಾದ್ಯವು ಆಧಾರ ಶ್ರುತಿಯನ್ನು ಸೂಚಿಸುತ್ತಿದ್ದಿತೆಂಬುದು ಗಮನಾರ್ಹ.

ಪ್ರಾಚೀನರು ಸಂಗೀತ ಸಾಹಿತ್ಯಗಳ ಅರಿವಿಲ್ಲದಾತನನ್ನು ಕೊಂಬು ಬಾಲಗಳಿಲ್ಲದ ಪಶುವಿಗೆ ಹೋಲಿಸುವುದುಂಟು. ತ್ಯಾಗರಾಜರು ಸಾಹಿತ್ಯವೆಂಬ ಅಂಶವನ್ನು ಪ್ರಸ್ತಾಪ ಮಾಡದಿದ್ದರೂ ಸಂಗೀತವರಿಯದವನನ್ನು ಅರ್ಥಾತ್ ರಾಗಲಯಗಳನ್ನು ಅರಿಯದವ ನನ್ನು ಶಿಲಾತ್ಮನೆನ್ನುತ್ತಾರೆ. ಅಷ್ಟಲ್ಲದೆ ಭಾವರಾಗಲಯಗಳ ಸೌಖ್ಯವರಿತವರು ಚಿರಾಯುಗಳಾದ ಮಹಾನುಭಾವರೆಂದು ಪರಿಗಣಿಸುತ್ತಾರೆ. ಈ ಮೂಲಕ ಸಂಗೀತವು ಮುಕ್ತಿಗೆ ಒಂದು ಸಾಧನವೆಂಬುದನ್ನು ಮನದಟ್ಟುಮಾಡುತ್ತಾರೆ.

(ಇ) **ವಂದನ ಗೀತೆಗಳು** : ಪ್ರಾಚೀನ ಆಚಾರ್ಯರನ್ನೂ ಮಹಾನುಭಾವರನ್ನೂ ಗೌರವಪೂರ್ವಕವಾಗಿ ಸ್ಮರಿಸುವ ರಚನೆಗಳು. ಉದಾಹರಣೆಗೆ, ವಿದುಲಕು ಮ್ರೊಕ್ಕೆದ (ಮಾಯಾಮಾಳವಗೌಳ), ಎಂದರೋ ಮಹಾನುಭಾವುಲು (ಶ್ರೀ), ಸಂಗೀತಜ್ಞಾನಮು (ಧನ್ಯಾಸಿ).

(ಈ) **ಬೋಧನಾತ್ಮಕವಾದವು** : ಇದರಲ್ಲಿ ಸ್ವಸಂಬೋಧನೆ ಮತ್ತು ಇತರ ಸಂಬೋಧನೆಗಳನ್ನು ಕುರಿತಂಥ ರಚನೆಗಳುಂಟು. ಆದರೆ ಬಹುಮಟ್ಟಿಗೆ ತ್ಯಾಗರಾಜರು ತಮ್ಮ ಮನಸ್ಸಂಬೋಧನೆ ಮಾಡಿಕೊಳ್ಳುವಂತೆಯೇ ಹೆಚ್ಚು ರಚನೆಗಳನ್ನು ಹಾಡಿರು ವುದು. ಉದಾಹರಣೆಗೆ, ವಿನವೇ ಓಮನಸಾ (ವಿವರ್ಧಿನಿ), ಉಂಡೇದಿ ರಾಮುಡೊಕಡು (ಹರಿಕಾಂಬೋಜಿ), ಇಕ ಕಾವಲಸಿನದೇಮಿ (ಬಲಹಂಸ), ಮನಸಾ ಶ್ರೀ ರಾಮ ಚಂದ್ರುನಿ ಮರವಕೆ (ಈಶಮನೋಹರಿ).

(ಉ) ನೈಚ್ಯಾನುಸಂಧಾನ, ಡಂಭಾಚಾರ, ಶೃಂಗಾರ, ರೋಷ, ಶೋಕ, ಪೌರಾಣಿಕ ಪ್ರಸಂಗಗಳು ಮೊದಲಾದವನ್ನು ವಸ್ತುವಾಗಿ ಹೊಂದಿದ (ಭಾಗಶಃ ಅಥವಾ ಪೂರ್ಣ ವಾದ) ರಚನೆಗಳೂ ಕಾಣಬರುತ್ತವೆ. ಇವುಗಳನ್ನು ಭಕ್ತಿ ವಿಭಾಗದಲ್ಲಿ ವಿಶದವಾಗಿ ಅಧ್ಯಯನ ಮಾಡಿರುವುದರಿಂದ ಇಲ್ಲಿ ಕೈಬಿಡಲಾಗಿದೆ.

(ಊ) **ಸ್ವರೂಪ ಮತ್ತು ವಸ್ತು** : ತ್ಯಾಗರಾಜರು ಮಧ್ಯಮಕಾಲ ಮತ್ತು ವಿಳಂಬ ಕಾಲಗಳೆರಡರಲ್ಲೂ ರಚನೆಗಳನ್ನು ರಚಿಸಿದ್ದಾರೆ. ವಿಳಂಬಕಾಲದ ಅವರ ರಚನೆಗಳು ಗಾಂಭೀರ್ಯದಿಂದ ಕೂಡಿ ಸಂಗೀತ ಮೌಲ್ಯದ ದೃಷ್ಟಿಯಿಂದ ಅತ್ಯುತ್ಕೃಷ್ಟವಾಗಿವೆ. ಕೆಲವೇ ಸಾಹಿತ್ಯಾಕ್ಷರಗಳು ರಾಗ ಸಂಚಾರಗಳಿಗೆ ಅಳವಟ್ಟಿರುವುದರಿಂದ ರಾಗದ ವಿವಿಧ ವಿನ್ಯಾಸಗಳು ಅದ್ಭುತವಾಗಿ ಕಾಣಬರುತ್ತವೆ. ಕೈಗೆತ್ತಿಕೊಂಡ ಸಾಹಿತ್ಯದ ತುಣುಕೊಂ ದನ್ನು ಬೆಳೆಸಿ, ಬಳಸಿ—ಹತ್ತಾರು ಬಗೆಯಲ್ಲಿ ಹಾಡಿ ನಿಲ್ಲಿಸುವ 'ಸಂಗತಿ' ಎಂಬ ಅಲಂಕಾರದ ಮೂಲಕ ಕೆಲವೊಮ್ಮೆ ಕೃತಿಯ ಭಾವಸೌಂದರ್ಯ ಇಮ್ಮಡಿಯಾದರೆ, ಕೆಲವೊಮ್ಮೆ ಸಾಹಿತ್ಯಾಕ್ಷರಗಳೆಲ್ಲ ಎಲ್ಲೋ ಮಾಯವಾಗಿ ಸಂಗೀತವೇ ಅಲ್ಲಿ ವಿಜೃಂಭಿ ಸುತ್ತದೆ. ಈ ಸಂಗತಿಗಳ ಅಳವಡಿಕೆಗೆ ಮತ್ತೊಂದು ಕಾರಣ, ಸಂಗೀತ ಸಾಹಿತ್ಯ ವಿಸ್ತರಣೆಯನ್ನು ಚಿಕ್ಕಂದಿನಿಂದಲೂ ಕಲಿಯಬೇಕೆಂಬುದಿರಬಹುದು.

ಇನ್ನು ಮಧ್ಯಮ ಕಾಲದ ರಚನೆಗಳ ವಿಷಯವನ್ನು ಈಗಾಗಲೇ ನಿರೂಪಿಸಲಾಗಿದೆ. ಪ್ರವಾಹದೋಪಾದಿಯಲ್ಲಿ ಬರುವ ಭಾವನೆಗಳಿಗೆ ಅಭಿವ್ಯಕ್ತಿ ನೀಡುವಲ್ಲಿ ಮಧ್ಯಮ

ಕಾಲವೇ ಸೂಕ್ತವೆನಿಸಿ ಅವರು ಈ ಕಾಲದಲ್ಲೇ ಅಧಿಕ ರಚನೆಗಳನ್ನು ರಚಿಸಿರಬಹುದು. ಆದರೆ ಈ ರಚನೆಗಳಲ್ಲೂ ರಾಗಭಾವ ಸಮೃದ್ಧವಾಗಿ ಅಳವಟ್ಟಿವೆ.

ರಚನೆಗಳನ್ನು ಮಧ್ಯಮ, ವಿಳಂಬ ಎಂಬುದಾಗಿ ವಿಭಾಗಿಸಿದರೂ ಇಂದು ಮಧ್ಯಮ ಕಾಲದಲ್ಲಿ ಹಾಡುವಂತಹ ಅನೇಕ ರಚನೆಗಳನ್ನು ದ್ರುತಗತಿಯಲ್ಲಿ ಹಾಡುವುದುಂಟು. ಇಲ್ಲಿ ಕಲಾವಿದರು ತಮ್ಮ ಶಾರೀರದಲ್ಲಿ ನುಡಿಯುವಿಕೆಯ ಸಾಮರ್ಥ್ಯವನ್ನು ಮೆರೆಯುವುದಕ್ಕೋ ಅಥವಾ ವಾದಕರು ತಮ್ಮ ಕೈಚಳಕವನ್ನು ತೋರಲೆಂದೋ ಅತಿ ದ್ರುತಗತಿಯಲ್ಲಿ ರಚನೆಗಳನ್ನು ಹಾಡುವ ಅಥವಾ ನುಡಿಸುವ ಪರಿಪಾಠವಿಂದು ಕಾಣಬರುತ್ತಿದೆ.

ತ್ಯಾಗರಾಜರ ರಚನೆಗಳಲ್ಲಿ ಮೊದಲನೆಯದಾದ ಪಲ್ಲವಿ ಭಾಗವು ಸೂತ್ರ ಖಂಡದಂತೆ. ಇಲ್ಲಿ ಮುಖ್ಯ ಹೇಳಿಕೆಯೊಂದಿದ್ದು ವೃತ್ತಿಯಂತಿರುವ ಅನುಪಲ್ಲವಿ ಮತ್ತು ಭಾಷ್ಯದಂತಿರುವ ಚರಣದಲ್ಲಿ ಪಲ್ಲವಿಯ ಹೇಳಿಕೆಯನ್ನು ವಿಸ್ತರಿಸಲಾಗಿರುತ್ತದೆ. ಇದು ಸಾಮಾನ್ಯವಾಗಿ ಕಾಣುವ ಲಕ್ಷಣವಾದರೂ ವಿರಳವಾಗಿ ಕೆಲವು ರಚನೆಗಳು ಹೀಗಿಲ್ಲದೆ ಅರ್ಥಾತ್ ಪಲ್ಲವಿಯ ಭಾವವನ್ನು ಪುಷ್ಟೀಕರಿಸುವಂತಿಲ್ಲದೆ ಪ್ರತ್ಯೇಕವಾದ ಮತ್ತಾವುದೋ ಭಾವವನ್ನೂ ಹೇಳುವುದುಂಟು. ಉದಾಹರಣೆಗೆ, ರಾಮ ರಾಮ ರಾಮ ನಾಪೈ ನೀದಯ (ಕಲ್ಯಾಣಿ). ತ್ಯಾಗರಾಜರು ಭಕ್ತಿಭಾವದ ಸಂದರ್ಭದಲ್ಲಿ ಇಲ್ಲಿ ತಮ್ಮ ಮನದಲ್ಲಿ ಮೂಡಿದ ಎಲ್ಲ ಅನಿಸಿಕೆಗಳಿಗೂ ಅಭಿವ್ಯಕ್ತಿ ನೀಡಿದಂತೆ ಕಾಣುತ್ತದೆ.

(ಖ) **ಭಾಷೆ** : ಬಹುತೇಕ ರಚನೆಗಳು ಪೂರ್ಣ ತೆಲುಗು ಭಾಷೆಯವು. ಮಾತೃಭಾಷೆ, ಪೋತನಾದಿ ಮಹಾನುಭಾವರ ಗ್ರಂಥಗಳಿಂದ ಪ್ರಭಾವಿತರಾಗಿದ್ದ ತ್ಯಾಗರಾಜರು ನೂರಾರು ರಚನೆಗಳನ್ನು ಮಧುರವಾದ ತೆಲುಗು ಭಾಷೆಯಲ್ಲೇ ರಚಿಸಿದ್ದಾರೆ. ಉದಾಹರಣೆಗೆ, ವರಾಲಂದುಕೊಮ್ಮನಿ (ಗುರ್ಜರಿ) ವದ್ದನೇವಾರು ಲೇರು (ಷಣ್ಮುಖಪ್ರಿಯ) ಶಾಂತಮುಲೇಕ (ಸಾಮ) ಪರಿತಾಪಮು ಗನಿಯಾಡಿನ (ಮನೋಹರಿ).

ಇದರಂತೆಯೇ ಅವರು ಪೂರ್ಣವಾಗಿ ಸಂಸ್ಕೃತ ಭಾಷೆಯಲ್ಲೇ ಇರುವ ರಚನೆಗಳನ್ನೂ ರಚಿಸಿರುವುದುಂಟು. ಉದಾಹರಣೆಗೆ, ನಾದತನುಮನಿಶಂ (ಚಿತ್ತರಂಜನಿ) ಸಾಮಜ ವರಗಮನ (ಹಿಂದೋಳ) ವರದಾ ನವನೀತಾಶ (ರಾಗ ಪಂಜರ) ಪರಿಪಾಲಯಮಾಂ (ದರ್ಬಾರ್) ಜನಕಜಾ ಸಮೇತ (ಅಸಾವೇರಿ).

ತೆಲುಗು-ಸಂಸ್ಕೃತ ಭಾಷೆಗಳೆರಡರ ಮಿಶ್ರಣವುಳ್ಳ ರಚನೆಗಳಿಗೂ ತ್ಯಾಗರಾಜರ ಸಾಹಿತ್ಯದಲ್ಲಿ ಕೊರತೆಯಿಲ್ಲ. ಇವುಗಳಲ್ಲಿ ಕೆಲವು ತೆಲುಗು ಭಾಷೆಯಿಂದ ಆರಂಭವಾಗಿ ಕ್ರಮೇಣ ಸಂಸ್ಕೃತ ಭಾಷೆಗೆ ಜಾರಿದರೆ, ಮತ್ತೆ ಕೆಲವು ಸಂಸ್ಕೃತ ಭಾಷೆಯಿಂದ ಆರಂಭವಾಗಿಯೂ ಮಧ್ಯೆಮಧ್ಯೆ ತೆಲುಗುಭಾಷೆ ಅಳವಟ್ಟಿದೆ. ಉದಾಹರಣೆಗೆ,

**ಏಲಾ ನೀದಯರಾದು? ಪರಾಕು ಜೇಸೇವೇಲ ? ಸಮಯಮುಗಾದು ||** (ತೆಲುಗು)

**ಬಾಲ ಕನಕಮಯಚೇಲ ಸುಜನಪರಿಪಾಲ ಶ್ರೀರಮಾಲೋಲ ವಿಧೃತಶರ**
**ಜಾಲ ಶುಭದ ಕರುಣಾಲವಾಲ ಘನನೀಲನವ್ಯ ವನಮಾಲಿಕಾಭರಣ** (ಸಂಸ್ಕೃತ)

**ರಾರಾ ದೇವಾದಿದೇವ ರಾರಾ ಮಹಾನುಭಾವ ರಾರಾ ರಾಜೀವನೇತ್ರ ರಘುವರ ಪುತ್ರ (ತೆಲುಗು)**

ಈ ರಚನೆ ಮುಂದೆ ಸಂಸ್ಕೃತದಲ್ಲಿದೆ.

'ಪಾಹಿ ಪರಮಾತ್ಮ'(ವರಾಳಿ) ರಚನೆಯಲ್ಲಿ ಸಂಸ್ಕೃತಾರಂಭವಿದ್ದು ನಡುವೆ ತೆಲುಗು ಸೇರ್ಪಡೆಯಾಗಿದೆ.

**ಪಾಹಿಪರಮಾತ್ಮಾ ಸತತಂ ಮಾಂ**
**ರಾಮ ಸಕಲರಿಪುಭೀಮ ಮುನಿಮನೋಧಾಮ ತ್ರಿಜಗದಭಿರಾಮ**
**ಭಾಗ್ಯದಾಯಕಾರೋಗ್ಯಕರ ಸುವೈರಾಗ್ಯ ಭಕ್ತಜನಯೋಗ್ಯ (ಸಂಸ್ಕೃತ)**
**ರಾಮಚಂದ್ರ ನೀ ನಾಮಮಂದು ನಿಜಪ್ರೇಮಲೇನಿ ಬ್ರತುಕೇಮಿ ?**
**ಸತತಂಬು ತನ ಯಂತರಂಗಂಬುನ ನೀ ಚಿಂತಲೇನಿ ವಾಡೆಂತ ... (ತೆಲುಗು)**

ಭಾರತೀಯ ಭಾಷೆಗಳೆಲ್ಲದರಲ್ಲೂ ಸಂಸ್ಕೃತವು ಅವಿಭಾಜ್ಯವೆಂಬಂತೆ ಮಧ್ಯಮಧ್ಯೆ ಪ್ರಯೋಗಿಸಲ್ಪಡುವುದಾದರೂ ತ್ಯಾಗರಾಜರು ಇವೆರಡೂ ಭಾಷೆಗಳಲ್ಲಿ ಪರಿಣತ ರಾಗಿದ್ದು ಪ್ರತ್ಯೇಕ ರಚನೆಗಳನ್ನೂ, ಮಿಶ್ರರಚನೆಗಳನ್ನೂ ರಚಿಸಿರುವುದು ಇಲ್ಲಿ ಗಮ ನಾರ್ಹ.

### (ಋ) ರಚನೆಗಳಲ್ಲಿ ಕಾಣಬರುವ ಮೆರುಗಿನ ಅಂಶಗಳು

ಕೃತಿ-ಕೀರ್ತನೆಗಳೇ ಅಲ್ಲದೆ ವಿವಿಧ ಛಂದಸ್ಸಿನ ಪದ್ಯಗಳನ್ನೂ ತ್ಯಾಗರಾಜರು ರಚಿಸಿ ರುವರು. ಈ ರಚನೆಗಳಲ್ಲಿ ಪ್ರಾಸಾನುಪ್ರಾಸಗಳು, ಲೋಕೋಕ್ತಿಗಳು, ಯಮಕ, ಸಂಗತಿ, ಉಪಮೆ, ಶ್ಲೇಷ ಮುಂತಾದ ಅಲಂಕಾರಿಕ ಅಂಶಗಳು ವಿಶಿಷ್ಟ ರೀತಿಯಲ್ಲಿ ಬಳಕೆಗೊಂಡಿವೆ. ಸ್ವಾಭಾವಿಕವಾಗಿಯೇ ಸುಂದರವಾಗಿರುವ ಅವರ ಸಂಗೀತ ರಚನೆ ಗಳು ಈ ಅಲಂಕಾರಿಕ ಅಂಶಗಳಿಂದ ಮತ್ತಷ್ಟು ಸುಂದರವಾಗುತ್ತವೆ. ತ್ಯಾಗರಾಜರ ರಚನೆಗಳಲ್ಲಿ ಲಭ್ಯವಾಗುವ ಈ ಅಲಂಕಾರಿಕ ಭಾಗಗಳ ಮತ್ತು ಇನ್ನು ಕೆಲವು ವಿಶಿಷ್ಟ ಅಂಶಗಳ ಮಾದರಿಗಳು ಹೀಗಿವೆ.

**ಸಂಗತಿ** : ನಿರ್ದಿಷ್ಟ ಧಾತುಭಾಗವಾಗಲೀ ಅಥವಾ ಮಾತುಭಾಗವಾಗಲೀ ಕ್ರಮೇಣ ವಿನ್ಯಾಸಗೊಳ್ಳುವುದು ಸಂಗತಿ. ಉದಾಹರಣೆಗೆ, ನಾಮೊರಾಲಗಿಂಪವೇಮಿ (ದೇವ ಗಾಂಧಾರಿ). ಈ ರಚನೆಯಲ್ಲಿ ವಾಗ್ಗೇಯಕಾರನ ವ್ಯಥೆಯು ಕ್ರಮೇಣ ಅಧಿಕಗೊಳ್ಳುವು ದನ್ನು ಬಿಂಬಿಸುವಂತೆ 'ಆಲಗಿಂಪವೇಮಿ' ಎಂಬೀ ಸಾಹಿತ್ಯಭಾಗವನ್ನು ಹಲವು ಬಾರಿ ಹಾಡಲಾಗುತ್ತದೆ. ಸಂಗತಿಗಳನ್ನು ವಿಶೇಷವಾಗಿ ರಚನೆಗಳಲ್ಲಿ ಅಳವಡಿಸಿದ ಕೀರ್ತಿ ತ್ಯಾಗರಾಜರದು. ಸಂಗತಿಗಳಲ್ಲಿ ರಾಗಭಾವಸಂಗತಿ ಹಾಗೂ ಸಾಹಿತ್ಯಭಾವ ಸಂಗತಿ ಗಳೆಂದು ಎರಡು ಬಗೆ. ಸಾಹಿತ್ಯಾಕ್ಷರಗಳು ಕೆಲವೇ ಇದ್ದರೂ ಅಷ್ಟೇ ಅಕ್ಷರಗಳೊಂದಿಗೆ ರಾಗವನ್ನು ವಿಸ್ತೃತಗೊಳಿಸುವುದು ರಾಗಭಾವಸಂಗತಿ. ಇದಕ್ಕೆ ಉದಾಹರಣೆ, ಓ ರಂಗಶಾಯಿ (ಕಾಂಬೋಜಿ), ಕೊಲುವೈಯುನ್ನಾಡೆ (ಭೈರವಿ) ಮುಂತಾದವು. ಸಮಾನ

ಮೆವರು (ಖರಹರಪ್ರಿಯ) ಸಾಹಿತ್ಯ ಭಾವಸಂಗತಿಗೆ ಅತ್ಯುತ್ತಮ ಉದಾಹರಣೆ. ಇಲ್ಲಿ ಸಾಹಿತ್ಯಭಾವ ಕ್ರಮೇಣ ನಿರ್ದಿಷ್ಟವಾಗಿ ವ್ಯಕ್ತಗೊಳ್ಳುತ್ತದೆ. ಸಮಾನಮೆವರು (ಸಮನಾರು), ನೀ ಸಮಾನಮೆವರು (ನಿನ್ನ ಸಮನಾರು), ರಾಮ ನೀ ಸಮಾನಮೆವರು (ರಾಮಾ ನಿನ್ನ ಸಮನಾರು).

ಧಾತು ಅಥವಾ ಮಾತುಭಾಗದಲ್ಲಿ ಅಳವಟ್ಟ ಈ ವಿನ್ಯಾಸವು ರಚನೆಯ ಆದಿ ಭಾಗದಲ್ಲಿರಬಹುದು. ಉದಾಹರಣೆಗೆ ರಾಮಭಕ್ತಿ ಸಾಮ್ರಾಜ್ಯಂ (ಶುದ್ಧಬಂಗಾಳ), ನಗುಮೋಮು (ಅಭೇರಿ). ಇಲ್ಲವೇ ಪಾದದ ಅಂತ್ಯಭಾಗದಲ್ಲಿರಬಹುದು. ಉದಾಹರಣೆಗೆ, ಕನ್ನತಂಡ್ರಿನಾಪೈ ಕರುಣಮಾನಕೆ (ದೇವಮನೋಹರಿ), ನೇನೆಂದು ವೆದಕುದುರಾ (ಕರ್ನಾಟಕ ಬೇಹಾಗ್) ಅಥವಾ ಪಾದದ ಮಧ್ಯದಲ್ಲೇ ಅಳವಟ್ಟಿರಬಹುದು. ಉದಾಹರಣೆಗೆ, ಯೋಚನ ಕಮಲಾಲೋಚನ (ದರ್ಬಾರ್).

ತ್ಯಾಗರಾಜಾಂಕಿತವಿರುವ ಎಲ್ಲ ರಚನೆಗಳೂ ಅವರ ಕಾಲದಲ್ಲಿ ಪ್ರಯೋಗದಲ್ಲಿದ್ದಂತೆಯೇ ಇಂದಿಗೂ ಉಳಿದು ಬಂದಿವೆಯೆಂದು ಹೇಳಲಾಗದು. ಅವುಗಳನ್ನು ಹಾಡುತ್ತ ಬಂದವರಾದರೂ ತಮ್ಮ ತಮ್ಮ ಸಾಮರ್ಥ್ಯಕ್ಕೆ ಅನುಗುಣವಾಗಿ ಆ ರಚನೆಗಳನ್ನು ಬದಲಿಸುತ್ತಾ ಬಂದಿರುವುದೂ ಅಸಂಭವವಲ್ಲ. ಹೀಗಾಗಿಯೇ ರಚನೆಗಳ ಮೂಲದಲ್ಲಿ ಇದ್ದ ಸಂಗತಿಗಳು ಲೋಪವಾಗಿರಬಹುದು ಅಥವಾ ನೂತನ ಸಂಗತಿಗಳು ಜೋಡಣೆಯಾಗಿರಬಹುದು. ಹೊಸ ಸಂಗತಿಗಳ, ಚಿಟ್ಟೆಸ್ವರಗಳ ಅಳವಡಿಕೆಯಂತೂ ಇಂದಿಗೂ ನಡೆಯುತ್ತಲೇ ಬಂದಿರುವುದು ಮುಖ್ಯವಾಗಿ ಗಮನಿಸಬೇಕಾದ ಅಂಶ. ಕೆಲವರ ಪ್ರಕಾರ ಇಂತಹ ನೂತನ ಪ್ರಯೋಗ ಸರಿಯಲ್ಲ. ಆದರೆ ಮತ್ತೆ ಕೆಲವರು ಇಂತಹ ಮಾರ್ಪಾಟನ್ನು ಮಾಡುತ್ತಲೇ ಬಂದಿದ್ದಾರೆ. ಮೂಲರೂಪದ ರಕ್ಷಣೆಯ ದೃಷ್ಟಿಯಲ್ಲಿ ಈ ನೂತನ ಪ್ರಯೋಗ ತಪ್ಪೆನಿಸಿದರೆ ಲೋಕರಂಜನೆಯ ದೃಷ್ಟಿಯಿಂದ ಇವು ಸರಿಯೆನಿಸುತ್ತವೆ.

**ಸ್ವರಾಕ್ಷರ** : ಧಾತು-ಮಾತುಗಳಲ್ಲಿ ಧಾತು ಅಕ್ಷರವೂ ಮಾತು ಅಕ್ಷರವೂ ಏಕರೀತಿಯಾಗಿ ಬಳಕೆಯಾಗಿರುವುದು.

| | | | | |
|---|---|---|---|---|
| ಮಾ | ಗ | ರಿಗ | ಮಾ | |
| ಮಾ | ರು | ಬ | ಲ್ಕ | (ಶ್ರೀರಂಜನಿ) |

| | | |
|---|---|---|
| ನೀ | ನಿದದಾಮಾ | |
| ನೀ | ಭ . . . . ಕ್ತಿ | (ಜಯಮನೋಹರಿ) |

| | | |
|---|---|---|
| ನೀದಮ | ಪಾದಮಾ | |
| ಶ್ರೀರಾಮ | ಪಾದಮಾ | (ಅಮೃತವಾಹಿನಿ) |

ಇವು ಸ್ವರಾಕ್ಷರವೆಂಬ ಅಲಂಕಾರಕ್ಕೆ ಒಂದೆರಡು ಉದಾಹರಣೆಗಳು.

**ಪ್ರಾಸಾನುಪ್ರಾಸಗಳು** : ಸಾಹಿತ್ಯಾರ್ಥಕ್ಕೆ ಲೋಪಬಾರದಂತೆ ಅಕ್ಷರಗಳ ಮಧುರ ಜೋಡಣೆಗೆ ತ್ಯಾಗರಾಜರ ರಚನೆಗಳಲ್ಲಿ ಕೊರತೆಯೇ ಇಲ್ಲ. ಪಾದದ ಆದಿಯಲ್ಲೂ, ಅಂತ್ಯದಲ್ಲೂ ಇಂತಹ ಪ್ರಾಸಗಳು ಕಾಣಬರುತ್ತವೆ. ಕೆಲವು ರಚನೆಗಳಲ್ಲಂತೂ ಭಾವಕ್ಕಿಂತಲೂ ಪ್ರಾಸಕ್ಕೇ ಹೆಚ್ಚು ಪ್ರಾಧಾನ್ಯವೋ ಎಂಬಂತೆಯೂ ಪ್ರಾಸ ಅಳವಟ್ಟಿದೆ. ಉದಾಹರಣೆಗೆ,

**ಏಂಟಿನಿ** ನಮ್ಮ**ಕೊಂಟಿನಿ** ಶರಣಂ**ಟಿನಿ** ರಮ್ಮಂ**ಟಿನಿ** (**ವಂದನಮು-ಶಹನ**)

**ವ**ರಮ್ಮದು **ಭಾಷ ವಿರಹಿತದೋಷ**
**ನ**ರವರ **ವೇಷ** ದಾಶರಥೇ (**ತವದಾಸೋಹಂ-ಪುನ್ನಾಗವರಾಳಿ**)

**ಪರಾ**ಶಕ್ತಿ ಮನುಪರಾದ ನಾಪೈ
**ಪರಾ**ಕೇಲನಮ್ಮ (**ಪರಾಶಕ್ತಿ-ಸಾವೇರಿ**)

ನಾರದಗಾನ**ಲೋಲ**
ನತಜನಪರಿ**ಪಾಲ**
ನೀರದಸಮ**ನೀಲ**
ನಿರುಪಮಗುಣ**ಶೀಲ** (**ನಾರದಗಾನಲೋಲ-ಅಠಾಣ**)

**ಧೀರಂ** ಸುರಪರಿ**ವಾರಂ** ಭುವನಾ
**ಧಾರಂ** ಸುಗುಣಾ**ಕಾರಂ** ಸುಮಲಂ
**ಕಾರಂ** ದುರ್ಜನ**ದೂರಂ** ಶ್ರೀರಘು
**ವೀರಂ** ಮೇಹೃದಿ **ವಾರಂವಾರಂ** (**ರಾಮಂ ಭಜೇಹಂಸದಾ-ಸಾವೇರಿ**)

ನಶ್ವರಮ್ಮೈನ ಧನಾಶ್ವಮುಲನು ನೇ ವಿಶ್ವಸಿಂಚ ಭೂಜೇಶ್ವರ ಹರಿಹರಿ
(**ನಾರಾಯಣಹರಿ-ಯಮುನಕಲ್ಯಾಣಿ**)

ಹೀಗೆ ವಿವಿಧ ರೀತಿಯ ಪ್ರಾಸಗಳು ತ್ಯಾಗರಾಜರ ಕೃತಿಗಳಲ್ಲಿ ಕಾಣಬರುತ್ತವೆ.

ಹೀಗೆಯೇ, ಪತಿಕಿಹಾರತೀರೇ (ಸುರುಟಿ), ಮನಸಾ ಶ್ರೀರಾಮಚಂದ್ರುನಿ (ಈಶ ಮನೋಹರಿ), ದಶರಥನಂದನ (ಅಸಾವೇರಿ), ಎವರುರಾ (ಮೋಹನ), ನೀದಯರಾ ವಲೆಗಾಕ (ತೋಡಿ), ನಾರದಗಾನಲೋಲ (ಅಠಾಣ), ರಾಮಚಂದ್ರನೀದಯ (ಸುರುಟಿ), ಎದುಟ ನಿಲಚಿತೆ (ಶಂಕರಾಭರಣ) ಮೊದಲಾದ ಹಲವು ರಚನೆಗಳಲ್ಲಿ ಆದಿಪ್ರಾಸ, ಅಂತ್ಯಪ್ರಾಸ ಹಾಗೂ ಅನುಪ್ರಾಸಗಳನ್ನು ಕಾಣಬಹುದು.

**ಯಮಕ** : ಶಬ್ದಾಲಂಕಾರಗಳಲ್ಲಿ ವಿಶಿಷ್ಟವಾದ ಯಮಕವು ತ್ಯಾಗರಾಜರ ಕೀರ್ತನೆಗಳಲ್ಲಿ ಹೀಗೆ ಅಳವಟ್ಟಿದೆ.

**ಮನಸಾ ಮನಸಾ**ಮರ್ಥ್ಯಮೇಮಿ ?
(ಮನಸ್ಸೇ ನಮ್ಮ ಸಾಮರ್ಥ್ಯವೇನು?) (**ವಿವರ್ಧಿನಿ**)

**ಜನಕಜಾ** ಮಾತ **ಜನಕಜಾ**-ಮಾತ
(ಜನಕನ ಅಳಿಯ, ಸೀತೆಯ ತಾಯಿ) (**ಅನುಪಮ ಗುಣಾಂಬುಧಿ-ಅಠಾಣ**)

**ಜಲಜಾಪ್ತ** - ಸೂರ್ಯ
**ಜಲಜಹರ** - ಸೂರ್ಯಕುಲವೆಂಬ ಸಮುದ್ರಕ್ಕೆ ಚಂದ್ರ
**ಜಲಜಾ**ರುಣ ಚರಣ - ಪದ್ಮದಂತೆ ಕೆಂಪು ಪಾದಗಳುಳ್ಳವನು.
ಅಸುರ**ಜಲದಾ**ಶುಗ - ಅಸುರರೆಂಬ ಮೇಘಕ್ಕೆ ಗಾಳಿಯಂತಿರುವವನು.
(**ಜನಕಜಾಸಮೇತ-ಅಸಾವೇರಿ**)

**ಶಂಕರ** - ಸುಖಪ್ರದ
**ಅನಿಶಂ ಕರ**ಧೃತಶರ - ಸದಾಕಾಲ ಶರಗಳನ್ನು ಧರಿಸಿದವನು
ಭಕ್ತವ**ಶಂಕರ** - ಭಕ್ತರ ವಶನಾದವನು
ನಿಶ್ಶಂ**ಕರ**ಸಿಕ - ಶಂಕೆಯಿಲ್ಲದೆ ರಸಜ್ಞನಾದವನು (**ದೇವರಾಮರಾಮ-ಸೌರಾಷ್ಟ್ರ**)

**ಉಪಮೆ** : ಒಂದರೊಂದಿಗೆ ಮತ್ತೊಂದನ್ನು ಹೋಲಿಸಿ ಹೇಳುವ ರೀತಿಯಾದರೋ ತ್ಯಾಗರಾಜರಲ್ಲಿ ಚಮತ್ಕಾರಿಕವಾಗಿದೆ. ಅಧ್ಯಾತ್ಮಿಕ ವಸ್ತುವನ್ನು ಲೌಕಿಕ ವಸ್ತುವಿನೊಂದಿಗೆ ಬೆರೆಸಿ ಹೇಳುವ ತ್ಯಾಗರಾಜರ ನಾಜೂಕುತನ ಬಲು ಆಕರ್ಷಕ.

ಪಲುಕು ಕಂಡಚಕ್ಕರಮಗೇರುನೇ
(ಮಾತು ಕಲ್ಲುಸಕ್ಕರೆಯನ್ನು ಹೋಲುತ್ತದೆ)
(**ಪಲುಕುಕಂಡಚಕ್ಕರ-ನವರಸಕನ್ನಡ**)

ಮೇರು ಸಮಾನಧೀರ (**ಮಾಯಾಮಾಳವಗೌಳ**)
ಮೇರುಧೀರ (**ಚೇರರಾವದೇಮಿರಾ-ರೀತಿಗೌಳ**)
ಕನಕಾಚಲಧೀರ (**ಮಾಮವಸತತಂ-ಜಗನ್ಮೋಹಿನಿ**)
ಭೀಮ ಪರಾಕ್ರಮ (**ನಿರವಧಿ ಸುಖದಾ-ರವಿಚಂದ್ರಿಕೆ**)

ಮೇಲಿನ ಉಪಮೆಗಳಲ್ಲಿ ಶ್ರೀರಾಮನ ಮಾತು, ಪರಾಕ್ರಮ ಹಾಗೂ ಧೀರತನವನ್ನು ಹೋಲಿಕೆಯೊಂದಿಗೆ ಮೆಚ್ಚಿ ಹೇಳಲಾಗಿದೆ. ಇದರಂತೆಯೇ ಇತರ ಕೆಲವು ಉಪಮೆಗಳನ್ನು ಕಲಿನರುಲಕು (ಕುಂತಲವರಾಳಿ), ಮನಸುವಿಷಯ (ನಾಟಕುರಂಜಿ), ಸ್ವರರಾಗ ಸುಧಾರಸ (ಶಂಕರಾಭರಣ), ಭಕ್ತಿಬಿಚ್ಚ (ಶಂಕರಾಭರಣ), ಕಾರುವೇಲ್ಪುಲು (ಕಲ್ಯಾಣಿ), ತೆರತೀಯಗರಾದಾ(ಗೌಳಿಪಂತು)ಗಳಲ್ಲಿ ನೋಡಬಹುದು.

**ಅತಿಶಯೋಕ್ತಿ** : ಒಂದು ವಸ್ತು ಅಥವಾ ವಿಷಯವನ್ನು ಅಸಾಧಾರಣ ಅಳತೆಯಲ್ಲಿ, ಎಂದರೆ ಉತ್ಪ್ರೇಕ್ಷೆಯಾಗಿ ಹೇಳುವುದನ್ನು ತ್ಯಾಗರಾಜರ ಕೆಲವು ರಚನೆಗಳಲ್ಲಿ ಕಾಣಲು ಸಾಧ್ಯ. ಉದಾಹರಣೆಗೆ,

ವೇಣುಗಾನಲೋಲುನಿ ಗನ ವೇಯಿಕನ್ನುಲು ಗಾವಲೆನೆ (**ಕೇದಾರಗೌಳ**)

ವೇಣುಗಾನಲೋಲನನ್ನು ನೋಡಲು ಸಾವಿರ ಕಣ್ಣುಗಳು ಅಗತ್ಯ. ಇಲ್ಲಿ ವೇಣುಗಾನ ಲೋಲನ ಸೌಂದರ್ಯ ಅಷ್ಟು ಅದ್ಭುತವಾಗಿರಬಹುದಾದರೂ ನೋಡುವವನಿಗೆ ಸಾವಿರ ಕಣ್ಣುಗಳಿರುವುದಂತೂ ಅಶಕ್ಯ. ಇದರಂತೆಯೇ ಪ್ರಹ್ಲಾದ ಭಕ್ತಿವಿಜಯದಲ್ಲಿ ಪ್ರಹ್ಲಾದ ನಿಂದ ತ್ಯಾಗರಾಜರು ಹೀಗೆ ಹಾಡಿಸುತ್ತಾರೆ.

ಕನವಲೆನನು ವೇಳ ಲೇಕುಂಟೆ ಕನ್ನೀರು ಕಾಲುವಗಾಪಾರುನೇ

**(ಅಂದುಂಡಗನೇ-ಪಂತುವರಾಳಿ)**

(ಹರಿಯನ್ನು) ಕಾಣಬೇಕೆನಿಸಿದ ಘಳಿಗೆಯಲ್ಲಿ ದೇವರು ಸಮೀಪವಿಲ್ಲದಿದ್ದರೆ ಕಣ್ಣೀರು ಕಾಲುವೆಯಾಗಿ ಹರಿಯುತ್ತದಂತೆ. ಈ ಮಾತು ದುಃಖದ ತೀವ್ರತೆಯನ್ನು ಬಿಂಬಿಸುತ್ತದಾಗಲೀ,. ನಿಜವಾಗಿಯೂ ಭಕ್ತನ ಕಣ್ಣೀರು ಕಾಲುವೆಯಾಗಿ ಹರಿಯಲು ಸಾಧ್ಯವಿಲ್ಲ. ಇದೇ ರೀತಿಯ ಅತಿಶಯೋಕ್ತಿಯು ಸುಂದರಿ ನಿನ್ನು ವರ್ಣಿಂಪ (ಆರಭಿ) ರಚನೆಯಲ್ಲೂ ಕಾಣಬಹುದು.

**ಶ್ಲೇಷೆ** : ಪದವೊಂದು ಎರಡು ಅರ್ಥಗಳು ಉಳ್ಳಂತೆ ಇರುವುದಕ್ಕೆ ಉದಾಹರಣೆ,

ಸಚ್ಚಿದಾನಂದ ಘನಮಾ - ಸತ್‌ಚಿತ್ ಮತ್ತು ಆನಂದದ ಅಖಂಡವೇ

ಬ್ರೋಚುಟ ಘನಮಾ - ರಕ್ಷಿಸುವುದು ಕಷ್ಟವೇ ?

**(ಜಯಜಯ ಸೀತಾರಾಂ-ಸಾವೇರಿ)**

ಶರಹುಲ್ಲು, ಬಾಣ, ನೀರು (ಪಾಹಿ ಪಾಹಿ ದೀನಬಂಧೋ-ಸೌರಾಷ್ಟ್ರ)

ರಾಗರಸಿಕ-ಸಂಗೀತಪ್ರಿಯ, ರಾಗರಹಿತ-ಸೀಮಿತಮೋಹವುಳ್ಳ

**(ನಿನ್ನುವಿನಾಸುಖಮುಗಾನ-ತೋಡಿ)**

ಮೋಹನ–ಮನಸೆಳೆಯುವ, ರಾಗವೊಂದರ ಹೆಸರು ಮೋಹನರಾಮ—ಇಲ್ಲಿ ರಾಗ ಮುದ್ರೆ ಇದೆ. ತ್ಯಾಗರಾಜರಲ್ಲಿ ರಾಗಮುದ್ರೆ ಇರುವ ರಚನೆಗಳು ಅತಿವಿರಳವೆಂಬುದು ಗಮನಾರ್ಹ. ಆದರೆ ತ್ಯಾಗರಾಜಾಂಕಿತವಿರುವ ಸರಸೀರುಹನಯನೇ (ಅಮೃತವರ್ಷಿಣಿ) ಹಾಗೂ ದಿನಮೇ (ಲತಾಂಗಿ) ರಚನೆಗಳಲ್ಲೂ ರಾಗಮುದ್ರೆ ಕಾಣಬರುತ್ತವೆ.

**ವಿಶಿಷ್ಟ ಪದಪ್ರಯೋಗ** : ಸಮಕಾಲೀನ ಪರಿಸರದ, ಭಾಷೆಯ ಪ್ರಭಾವ ಯಾವುದೇ ಕವಿಯ ಮೇಲೂ ಉಂಟಾಗದಿರದು. ಇದಕ್ಕೊಂದು ಅತ್ಯುತ್ತಮ ಉದಾಹರಣೆ, ತ್ಯಾಗರಾಜರು ಬಳಸಿರುವ 'ಧೀಯೆನು ಗಂಗಾಸಾಗರ ಮೇಲೆ ?' ಎಂಬ ಮಾತು. ಇದರ ಅರ್ಥ ತುಚ್ಛೀಕರಿಸಲ್ಪಡುವ ಗಂಗಾಸಾಗರವೇಕೆ ? ಎಂದು. ಗಂಗೆಯನ್ನು ಅತಿ ಪವಿತ್ರವೆಂದು ಮಾನ್ಯಮಾಡುವ ಈ ದೇಶದಲ್ಲಿ ಜನಿಸಿದ ತ್ಯಾಗರಾಜರು ಯಾವುದೇ ಕಾರಣಕ್ಕೂ ಗಂಗೆಯನ್ನು ತುಚ್ಛೀಕರಿಸುವವರಲ್ಲ. ಅವರು ಧ್ಯಾನವನ್ನು ಶ್ರೇಷ್ಠವಾದ ಗಂಗಾಸ್ನಾನವೆಂದೇ ಇನ್ನೊಂದು ರಚನೆಯಲ್ಲಿ ಹೇಳುತ್ತಾರೆ (ಧ್ಯಾನಮೇ-ಧನ್ಯಾಸಿ). ಆದರೆ ಈ ಕೃತಿಯಲ್ಲಿ 'ಧೀ ಎಂಬ ಗಂಗಾಸಾಗರ' ಎಂದಿರುವುದಕ್ಕೆ ಹಿನ್ನಲೆಯೊಂ ದುಂಟು. ತಂಜಾವೂರು ಮತ್ತು ಸುತ್ತಮುತ್ತಲ ಪ್ರದೇಶಗಳಲ್ಲಿ ಸಾರಾಯಿಗೆ ವ್ಯಂಗ್ಯ

ವಾಗಿ ಗಂಗಾಜಲವೆಂದು ಹೇಳುವ ವಾಡಿಕೆಯಿದ್ದಂತೆ ತಿಳಿದುಬರುತ್ತದೆ.[೧೨] ರೂಢಿಯಲ್ಲಿದ್ದ ಅದೇ ಪದವನ್ನು ಭಕ್ತಿ ಹಿರಿಮೆಯನ್ನು ಮನದಟ್ಟು ಮಾಡುವಾಗ ತ್ಯಾಗರಾಜರು ಇಲ್ಲಿ ಬಳಸಿದ್ದಾರೆ.

ಇನ್ನಿತರ ಕೆಲವು ವಿಶಿಷ್ಟ ಪದಬಳಕೆಯೆಂದರೆ, ಅನಾಪಜನಕ (ಅನಾಪ–ನೀರಿಗೆ ವಿರುದ್ಧವಾದುದು ಬೆಂಕಿ, ಅದರ ತಂದೆ ಎಂಬ ಅರ್ಥ—ಈಶಪಾಹಿಮಾಂ-ಕಲ್ಯಾಣಿ), ಪಂಕ್ತಿರಥ (ದಶರಥ–ರಾಮ ನಿನ್ನೇ ನಮ್ಮಿನಾನು-ಹುಸೇನಿ), ಕುಸುಮದಿನರಾಜ (ಸೂರ್ಯ–ರಾಮನಿನ್ನೇ ನಮ್ಮಿನಾನು-ಹುಸೇನಿ), ಶುಕ್ರವಾಸರ, ಕವಿವಾಸರ (ಶುಕ್ರವಾರದ –ಸುಂದರಿ ನೀದಿವ್ಯರೂಪಮು-ಕಲ್ಯಾಣಿ), ಗಿರಿಜಾಬಾಹುನಿ (ಕಬ್ಬಿಣದಂಥ ತೋಳ್ಗಳುಳ್ಳವನ–ರಾಮುನಿಮರವಕವೇ-ಕೇದಾರಗೌಳ), ಸದಾಗತಿಜ (ವಾಯುಪುತ್ರ ಹನುಮಂತ –ಇದೇ ಭಾಗ್ಯಮು ಕಾಕೇಮಿ-ಕನ್ನಡ), ಸೀತಾಪ* (ರಾಮ–ಭಜನಸೇಯು-ನಾರಾಯಣಿ), ಬಿಲೇಶಯ ಭೂಷಣ (ಶಿವ–ಈಶ ಪಾಹಿಮಾಂ-ಕಲ್ಯಾಣಿ), ಕಮಲವೈರಿ ಕಲಾಧರ (ಶಿವ–ಚಂದ್ರಕಲಾಧರ –ಕರುಣಜೂಡವಮ್ಮ-ತೋಡಿ) ಮುಂತಾದವು.

ತ್ಯಾಗರಾಜರು ಪರಮಾತ್ಮನ ಕಣ್ಣುಗಳನ್ನು ಕುಮುದದಳಕ್ಕೆ ಹೋಲಿಸುವಲ್ಲಿ ಅವರ ವಾಕ್ಪಟುತ್ವ ಪ್ರಮಾದವಾದುದು ಎನಿಸುತ್ತದೆ. ಸಂಸ್ಕೃತ ನಿಘಂಟಿನಲ್ಲಿ ಕಮಲವೆಂಬ ಶಬ್ದಕ್ಕೆ ಇರುವ, ಹೆಚ್ಚೂಕಡಿಮೆ ಎಲ್ಲ ಪರ್ಯಾಯಗಳನ್ನೂ ಅವರು ಇಲ್ಲಿ ಬಳಸಿದ್ದಾರೆ.

ಅರುಂದಾಕ್ಷ (ಜಯಮಂಗಳಂ - ನಾದನಾಮಕ್ರಿಯ)
ಪಂಕಜನಯನ (ರಾಮ ನಿನ್ನು ನಮ್ಮಿನ - ಮೋಹನ)
ಸರಸಿಜನೇತ್ರ (ಚಲ್ಲಗನಾತೋ - ವೇಗವಾಹಿನಿ)
ರಾಜೀವನೇತ್ರ (ಏಲಾ ನೀದಯರಾದು - ಅಠಾಣ)
ರಾಜೀವನಯನ (ಓರಾಮ ಓರಾಮ - ಆರಭಿ)
ವನಜಲೋಚನ (ಕರುಣಾಜಲಧಿ - ಕೇದಾರಗೌಳ; ಕಮಲಾಪ್ತಕುಲ-ಬೃಂದಾವನ ಸಾರಂಗ)
ಕುವಲಯದಳ ನಯನ (ಕುವಲಯ - ನಾಟಕುರಂಜಿ)
ಸರಸೀರುಹ ದಳಾಕ್ಷ (ಸಾಧಿಂಚೆನೆ - ಆರಭಿ)
ಪಯೋಜಾಕ್ಷ (ನಾದುಪೈ - ಮಧ್ಯಮಾವತಿ)

---

* ಈ ಸಂದರ್ಭದಲ್ಲಿ ರಘುವಂಶದ ಪ್ರಥಮ ಶ್ಲೋಕದಲ್ಲಿನ 'ಪಾರ್ವತಿ ಪರಮೇಶ್ವರೌ' ಎಂಬ ಮಾತನ್ನು ಸ್ಮರಿಸಬಹುದು. ಇದನ್ನು ಎರಡು ರೀತಿ ವಿಂಗಡಿಸಲಾಗಿದೆ. (೧) ಪಾರ್ವತೀಪರಮೇಶ್ವರೌ-ಇದರ ಅರ್ಥ ಪಾರ್ವತೀ ಪರಮೇಶ್ವರರಿಗೆ ಎಂಬುದು ; (೨) ಪಾರ್ವತೀಪ ರಮೇಶ್ವರೌ ಎಂಬುದು ಮತ್ತೊಂದು ಪದಚ್ಛೇದ. ಪಾರ್ವತೀಪ ಎಂಬುದು ಪಾರ್ವತಿ ಮತ್ತು ಆಕೆಯ ಪತಿಯಾದ ಪರಮೇಶ್ವರ ಎಂಬುದನ್ನು ಸೂಚಿಸಿದರೆ, ರಮೇಶ್ವರೌ ಎಂಬುದು ಲಕ್ಷ್ಮಿ ಮತ್ತು ಆಕೆಯ ಪತಿ ನಾರಾಯಣರನ್ನು ಸೂಚಿಸುತ್ತದೆ. 'ಸೀತಾಪ' ಎಂದು ತ್ಯಾಗರಾಜರು ಸಂಬೋಧಿಸುವ ಹಿನ್ನೆಲೆಯಲ್ಲಿ ಈ ಎರಡನೇ ವಿಂಗಡನೆಯನ್ನು ನಾವು ಪರಿಗಣಿಸಬಹುದು.

ಪದ್ಮನೇತ್ರುಡಟ (ಶ್ರೀರಾಮ ಶ್ರೀರಾಮ ಶ್ರೀಮನೋಹರಮಾ - ಶಹನ)

ಇಷ್ಟಲ್ಲದೆ ರೂಢಿಯಲ್ಲಿದ್ದಿರಬಹುದಾದ ಅನ್ಯಭಾಷಾ ಪದಪ್ರಯೋಗಗಳೂ ಅವರಲ್ಲಿ ಸಹಜವಾಗಿಯೇ ಮೂಡಿವೆ. ಕೆಲವು ಉದಾಹರಣೆಗಳೆಂದರೆ—ಎವರುದಾಬ್ರೋತುರು, ಪೇರುವಾಸಿ ಮುಂತಾದವುಗಳಲ್ಲಿ ತಮಿಳು ; ಕಾರುಬಾರು, ಹರಾಮಿತನ, ಪರವಲೇಕ ಮುಂತಾದವುಗಳಲ್ಲಿ ಹಿಂದಿ ; ಲಾಂದರು ಪದದಲ್ಲಿ ಇಂಗ್ಲೀಷ್ ಭಾಷಾ ಛಾಯೆ ಸೇರಿವೆ.

ದೇವರ ಶಯ್ಯೆಯನ್ನು ತ್ಯಾಗರಾಜರು ಒಂದೆಡೆ ವಾಸುಕಿಯೆಂದೂ (ನಮೋನಮೋ ರಾಘವಾಯ), ಇನ್ನೊಂದೆಡೆ ಹಂಸತೂಲಿಕಾತಲ್ಪವೆಂದೂ (ಲಾಲಿಲಾಲಯ್ಯ), ಮತ್ತೊಂದೆಡೆ ಮಲ್ಲಿಕಾತಲ್ಪವೆಂದೂ (ಶ್ರೀ ರಾಮರಾಮರಾಮ ಶ್ರೀಮಾನಸಾಬ್ಧಿ ಸೋಮ) ವರ್ಣಿಸುತ್ತಾರೆ.

ತ್ಯಭಾವಕ್ಕಾಗಲೀ, ಛಂದಸ್ಸಿಗಾಗಲೀ, ಲೋಪವಾಗದಂತೆ ಲೆಕ್ಕ ಹೇಳುವ ತ್ಯಾಗರಾಜರ ಕೌಶಲ ಬಲು ಸೊಗಸು. ಇದಕ್ಕೆ ಒಂದೆರಡು ಉದಾಹರಣೆಗಳೆಂದರೆ, 'ಮೂಡುರೆಂಡು ನದಿ ನಾಥುನಿ' (೩.೨ ನದಿಗಳ ಒಡೆಯ ಅರ್ಥಾತ್ ಪಂಚನದೀಶ - ಸಾರಿವೆಡಲಿನ - ಅಸಾವೇರಿ), 'ತೊಮ್ಮಿದಿಗುರಿಕಿ ದಿವ್ಯದೃಷ್ಟಿಚ್ಚಿನ' (ಒಂಬತ್ತು ಜನರಿಗೆ ದಿವ್ಯದೃಷ್ಟಿ ನೀಡಿದ ಎಂದು ಒಂಬತ್ತು ಮಂದಿಯ ಹೆಸರನ್ನು ಇಲ್ಲಿ ಅಳವಡಿಸಿದ್ದಾರೆ-ರಾಮ ರಘುಕುಲ ಜಲನಿಧಿಸೋಮ - ಕಾಪಿ).

**ಲೋಕೋಕ್ತಿಗಳು** : ಮನೋಗತ ಭಾವನೆಗಳನ್ನು ಇತರರಿಗೆ ಖಚಿತವಾಗಿ ತಿಳಿಸುವಲ್ಲಿ ತ್ಯಾಗರಾಜರು ನಿತ್ಯವ್ಯವಹಾರದಲ್ಲಿದ್ದ ಹಲವು ಲೋಕೋಕ್ತಿಗಳನ್ನು ಬಳಸಿದ್ದಾರೆ. ಅವುಗಳ ಕೆಲವು ಮಾದರಿಗಳೆಂದರೆ,

**ಗಣನಾಥುಚಯ್ಯಪೋರ ಕಡುವಾನರುಡ್ಡೆ ತೀರಗ**

(ಗಣಪತಿಯನ್ನು ಮಾಡಹೋಗಿ ಮಂಗನನ್ನು ಮಾಡಿದಂತೆ)

**(ಎವರಿತೋ ನೇ ದೆಲ್ಪುದು - ಮಾನವತಿ)**

**ವರುಲು ಜೂತುರು ಭಾಂಡಮುನಕೊಕ್ಕ ಮೆತುಕು**

(ತಪ್ಪಲೆಯಲ್ಲಿನ ಅಗುಳೊಂದರಿಂದ ಶ್ರೇಷ್ಠರು ಅನ್ನವನ್ನು ನಿರ್ಧರಿಸುತ್ತಾರೆ)

**(ಮಾಟಿಮಾಟಿಕಿದೆಲ್ಪವಲೆನಾ - ಮೋಹನ)**

**ಮಾಟಿಮಾಟಿಕಿ ನೂನೆ ರೋಟಿ ಯೆದ್ದುಲು ತಿರುಗುಧಾಟಿರಾ**

(ಮಾತುಮಾತಿಗೂ ಗಾಣ ಸುತ್ತುವ ಎತ್ತಿನಂತೆ)

**(ಶ್ರೀರಾಮರಾಮ ಶ್ರಿತುಲಕುಗಾಮಾ - ಸಾವೇರಿ)**

**ಗಜ್ಜಮುಂಡ್ಲ ಮೀದ ದಗುಲುಕೊನ್ನಬಟ್ಟ ಗ್ರಕ್ಕುನದೀಯವಶಮಾ ?**

(ಮುಳ್ಳಿನ ಪೊದೆಗೆ ಸಿಕ್ಕಿಕೊಂಡಿರುವ ಬಟ್ಟೆಯನ್ನು ಒಮ್ಮೆಲೇ ತೆಗೆಯಲಾದೀತೆ?)

**(ಶ್ರೀರಾಮ ಜಯರಾಮ - ವರಾಳಿ)**

**ಪ್ರಾಣಮುಲೇನಿವಾನಿಕಿ ಬಂಗಾರುಪಾಗಚುಟ್ಟಿ**
**ಆಣಿ ವಜ್ರಭೂಷಣ ಮುರಮಂದು ಪೆಟ್ಟುರೀತಿ**
(ನಿರ್ಜೀವ ಶವಕ್ಕೆ ಬಂಗಾರದ ಪೇಟವಿಟ್ಟು, ಆಭರಣಗಳಿಂದ ಅಲಂಕರಿಸಿದಂತೆ)
(ಭಕ್ತಿಬಿಚ್ಚಮೀಯವೇ - ಶಂಕರಾಭರಣ)

ಚರಣದಲ್ಲಿ ಸಾಹಿತ್ಯಾಕ್ಷರಗಳು ನಿಬಿಡವಾಗಿ ಬಹುಮಟ್ಟಿಗೆ ಯಥಾಕ್ಷರ ಸಾಹಿತ್ಯ ದಂತಿರುವ ರಚನೆಗಳು—ರಾಮ ನಿನ್ನು ನಮ್ಮಿನವಾರಮು (ಮೋಹನ), ಸಾರಮೇಗಾನಿ (ಪಂತುವರಾಳಿ), ನೀಕು ಸರಿ ಎವರುರಾ (ಮಣಿರಂಗು), ಸುಂದರಿ ನಿನ್ನು ವರ್ಣಿಂಪ ಬ್ರಹ್ಮಾದಿ ಸುರುಲಕೈನ (ಆರಭಿ), ಕರುಣಜೂಡವಮ್ಮ (ತೋಡಿ) ಮುಂತಾದವು.

ತ್ಯಾಗರಾಜರು ಸ್ವನಾಮ ಮುದ್ರಕಾರರಾಗಿ ಹತ್ತಾರು ರೀತಿಯಲ್ಲಿ ತಮ್ಮ ಹೆಸರಿನ ಅಂಕಿತವನ್ನೇ ಬಳಸಿರುವುದು ದಿಟವಾದರೂ, ರಚನೆಯೊಂದರಲ್ಲಿ ಅದನ್ನು ಪಂಚ ವದನನಾದ ಶಿವನಿಗೆ ಅನ್ವಯಿಸಿರುವುದೊಂದು ವಿಶೇಷ (ಪಂಚವದನ ತ್ಯಾಗರಾಜ ಪಾಲ - ಜಾನಕೀರಮಣ - ಶುದ್ಧ ಸೀಮಂತಿನಿ).

ಕೆಲವೇ ಸಾಲಿನ ಪುಟ್ಟ ರಚನೆಗಳಲ್ಲಿ ಗಹನ ವಿಷಯಗಳುಳ್ಳ ರಚನೆಗಳೂ ಕೆಲ ವುಂಟು. ಅವು ಜ್ಞಾನಮೊಸಗರಾದಾ (ಪೂರ್ವಿಕಲ್ಯಾಣಿ), ಸರಸಸಾಮದಾನ (ಕಾಪಿ ನಾರಾಯಣಿ), ದ್ವೈತಮು ಸುಖಮಾ (ರೀತಿಗೌಳ), ಕಾರುಬಾರು (ಮುಖಾರಿ) ಮುಂತಾ ದವು. ಮೇಲೆ ಉದಾಹರಿಸಿರುವ ನಾಲ್ಕು ರಚನೆಗಳಲ್ಲಿ ಕ್ರಮವಾಗಿ ಅದ್ವೈತ,* ರಾವಣನೊಂದಿಗೆ ರಾಮ ಮಾಡಿದ ಚತುರೋಪಾಯಗಳು, ದ್ವೈತಾದ್ವೈತಗಳ ವಿಚಾರ, ರಾಮರಾಜ್ಯಾಡಳಿತಗಳು ಸುಂದರವಾಗಿ ಮೂಡಿವೆ.

**ಯತಿ** : ಸಮ ವಿಷಮಾದಿ ಆರು ರೀತಿಯ ಯತಿಗಳು ಲಕ್ಷಣದಲ್ಲಿ ಹೇಳಲ್ಪಟ್ಟಿವೆ ಯಾದರೂ ತ್ಯಾಗರಾಜರ ರಚನೆಯಲ್ಲಿ ಸ್ರೋತೋವಹ ಮತ್ತು ಸಮಯತಿಗಳು ಮಾತ್ರ ಅಳವಟ್ಟಂತೆ ಕಾಣಬರುತ್ತವೆ. ಉದಾಹರಣೆಗೆ,

ಹರಿಗುಣ, ಮಣಿಮಯ, ಸರಮುಲು, ಗಳಮುನ (ಎಂದರೋ - ಶ್ರೀ)ಸಮಯತಿ
ನಿಧಿ, ಸನ್ನಿಧಿ (ನಿಧಿಚಾಲ - ಕಲ್ಯಾಣಿ) ಸ್ರೋತೋವಹ
ಖಲ, ಶೃಂಖಲ, ಉಲೂಖಲ (ಕಡತೇರರಾದಾ - ತೋಡಿ) ಸ್ರೋತೋವಹ
ವಿದುಲಕು, ಕೋವಿದುಲಕು (ವಿದುಲಕು - ಮಾಯಾಮಾಳವಗೌಳ) ಸ್ರೋತೋವಹ
ಮಾನಮು, ಅಭಿಮಾನಮು (ಮಾನಮುಲೇದಾ - ಯಮುನ ಕಲ್ಯಾಣಿ)
ಸ್ರೋತೋವಹ

ಸಂಗೀತ ತ್ರಿಮೂರ್ತಿಗಳಲ್ಲಿ ತ್ಯಾಗರಾಜರ ಶೈಲಿ ಬಹುಮಟ್ಟಿಗೆ ಸರಳವೇನೋ ದಿಟ. ಆದರೆ ಅವುಗಳಲ್ಲೂ ಅನ್ವಯ ಕ್ಲಿಷ್ಟತೆಹೊಂದಿ ಇದಮಿತ್ಥಂ ಎಂದು ಹೇಳಲಾಗದೆ

---

* ತ್ಯಾಗರಾಜರು ಅದ್ವೈತಿಗಳಲ್ಲ, ವಿಶಿಷ್ಟಾದ್ವೈತಿಗಳೆಂಬ ಅಭಿಪ್ರಾಯವೊಂದಿದೆ. ನೋಡಿ, ತ್ಯಾಗ ರಾಜಸ್ವಾಮಿ ಕೀರ್ತನಲು, ಕೆ. ವಿ. ಶ್ರೀನಿವಾಸ ಅಯ್ಯಂಗಾರ್, ಪೀಠಿಕೆ, ಪು. ೬-೭.

ವಿವಿಧ ಅಭಿಪ್ರಾಯಗಳಿಗೆ ದಾರಿಕೊಡುವ ಸಾಹಿತ್ಯ ಭಾಗಗಳೂ ಅಪರೂಪವಾಗಿ ಕಾಣ ಬರುತ್ತವೆ.

ವಾಸ್ತವವಾಗಿ ಸಂಸ್ಕೃತ ಸಾಹಿತ್ಯ ವಿಮರ್ಶೆಯಲ್ಲಿ ನಾರಿಕೇಳ ಮತ್ತು ದ್ರಾಕ್ಷಾ ಪಾಕವೆಂಬ ಎರಡು ಶೈಲಿಗಳು ಗುರುತಿಸಲ್ಪಡುತ್ತವೆ.[೯] ನಾರಿಕೇಳದಲ್ಲಿ ಅಂತರಾಳಕ್ಕೆ ಇಳಿಯುವವರೆಗೆ ರಸಾಸ್ವಾದನೆ ಸಾಧ್ಯವಿಲ್ಲವಾದರೆ ದ್ರಾಕ್ಷಾರಸದಲ್ಲಿ ಒಳಹೊರಗಿನ ದ್ರವವೆಲ್ಲವೂ ರಸಮಯವೇ ಆಗಿ ಆದ್ಯಂತವನ್ನೂ ಸವಿಯಲು ಸಾಧ್ಯವಾದೀತು. ಆದ್ದರಿಂದ ಕೃತಿಗುಣತ್ರಯಗಳಿಂದ ಕೂಡಿದ ತ್ಯಾಗರಾಜರ ರಚನೆಗಳ ಸಮೂಹವನ್ನು "ದ್ರಾಕ್ಷಾಪಾಕವೆಂದೂ", ಉಪನಿಷದ್ ವಾಕ್ಯಗಳ ಅಧಿಕ ಪ್ರಯೋಗವಿರುವುದರಿಂದ "ತ್ಯಾಗೋಪನಿಷತ್" ಎಂದೂ ಗುರುತಿಸಿರುವುದು ಅತ್ಯಂತ ಸಾಧುವೂ ಸಮಂಜಸವೂ ಆಗಿದೆ.

## ಟಿಪ್ಪಣಿಗಳು

೧ *The Journal of the Music Academy,* Vol. XXXIX, 1968, Tyagaraja Bi-centenary Volume. ನೋಡಿ, ನಾಗಭೂಷಣಂ ಪಂತುಲು ಅವರ ಲೇಖನದಲ್ಲಿ ಉಲ್ಲೇಖ ಪು. ೭೮.

೨ ಗಾನಕಲೆ, ರಾಳ್ಳಪಲ್ಲಿ ಅನಂತಕೃಷ್ಣಶರ್ಮ, ಕಾವ್ಯಾಲಯ, ಮೈಸೂರು, ೧೯೭೩, ಪು. ೧೭೮.

೩ *Great Composers–II, Tyagaraja,* P. Sambamurthy, ೧೯೭೦, ಪು. ೨೮೦-೨೮೧.

೪ *The Journal of the Music Academy* ೧೯೬೮, ಡಾ. ಎಸ್. ರಾಮಕೃಷ್ಣನ್ ಅವರ ಲೇಖನದಲ್ಲಿ ಉಲ್ಲೇಖ, ಪು. ೪೬.

೫ *Great Composers–II, Tyagaraja,* P. Sambamurthy, ೧೯೭೦, ಪು. ೨೮೦.

೬ *The Journal of the Music Academy* ೧೯೬೮, ಡಾ. ಎಸ್. ರಾಮಕೃಷ್ಣನ್ ಅವರ ಲೇಖನದಲ್ಲಿ ಉಲ್ಲೇಖ, ಪು. ೪೬.

೭ *Great Composers–II, Tyagaraja,* P. Sambamurthy, ೧೯೭೦, ಪು. ೫೩-೫೪.

೮ *The Journal of the Music Academy* ೧೯೬೮, ಡಾ. ಎಸ್. ರಾಮಕೃಷ್ಣನ್ ಅವರ ಲೇಖನದಲ್ಲಿ ಉಲ್ಲೇಖ, ಪು. ೪೬.

*೯ ಈ ಪಟ್ಟಿಯಲ್ಲಿರುವ ರಚನೆಗಳಲ್ಲಿ ಲಾವಣ್ಯರಾಮ–ಪೂರ್ಣಷಡ್ಜ, ಎಂದುಂಡಿವೆಡಲಿ–ದರ್ಬಾರು, ನೇ ಪೊಗಡಕುಂಟೆ–ವರಾಳಿ, ಏಲಾವತಾರ–ಮುಖಾರಿ, ಜ್ಞಾನಮೊಸಗರಾದ–ಪೂರ್ವಿಕಲ್ಯಾಣಿ–ಈ ರಾಗಗಳಲ್ಲಿ ಪ್ರಚಲಿತವಿದೆ. ಕಡೆಯ ಎರಡು ಕೃತಿಗಳ ರಾಗವನ್ನು ಕ್ರಮವಾಗಿ ಹಮೀರ್ ಕಲ್ಯಾಣಿ, ವಸಂತಗಳಲ್ಲಿ ಪ್ರಯೋಗವಿರುವುದೆಂದು ವಿದ್ವಾಂಸರ ಸಭೆ ತೀರ್ಮಾನಿಸಿದೆ. ನೋಡಿ, *The Journal of the Music Academy,* Vol. XXX, ಪು. ೩೯-೪೦. ಸೀತಮ್ಮ ಮಾಯಮ್ಮ ಕೃತಿಯು ಇತ್ತೀಚಿನ ೩೦-೪೦ ವರ್ಷಗಳಿಂದಷ್ಟೇ ವಸಂತ ದಲ್ಲಿ ಹಾಡಲ್ಪಡುತ್ತಿದೆ. ಈ ಮುನ್ನ ಅದು ಲಲಿತ ರಾಗದಲ್ಲೇ ಪ್ರಯೋಗವಿತ್ತೆಂದು ಹೇಳುತ್ತಾರೆ.

೧೦ *Great Composers–II, Tyagaraja*, P. Sambamurthy, ೧೯೭೦, ಪು. ೨೬೧.

೧೧ *Tanjore as a Seat of Music*—Dr. S. Seetha, University of Madras, 1981, ಪು. ೨೧೩.

೧೨ ಸದ್ಗುರು ತ್ಯಾಗರಾಜರು, ಡಾ. ವಿ.ಎಸ್. ಸಂಪತ್ಕುಮಾರಾಚಾರ್ಯ, ಗೀತಾ ಬುಕ್ ಹೌಸ್, ಮೈಸೂರು, ೧೯೮೭, ಪು. ೧೯೫.

೧೩ *The Spiritual Heritage of Tyagaraja, Introductory Thesis,* Dr. V. Raghavan, Ramakrishna Math, Madras, ೧೯೬೬, ಪು. ೪೪.

## ೫

# ದಿವ್ಯನಾಮ, ಉತ್ಸವ ಸಂಪ್ರದಾಯ ಮತ್ತು ಪ್ರಕ್ಷಿಪ್ತ ರಚನೆಗಳು

**ದಿವ್ಯನಾಮ ಕೀರ್ತನೆಗಳು**

ಭಗವದ್ಭಕ್ತಿಯ ಚೌಕಟ್ಟಿನಲ್ಲಿ ಮೂಡಿಬಂದ ಸಂಗೀತವೇ ನಿಜವಾದ ಸಂಗೀತ. ಸಂಗೀತ ಮಾಧ್ಯಮದಿಂದೊಡಗೂಡಿದ ಭಕ್ತಿಯನ್ನು ಭಕ್ತಿಪಂಥ ಹಾಗೂ ಭಾಗವತ ಸಂಪ್ರದಾಯಗಳು ಜನಪ್ರಿಯಗೊಳಿಸಿದವು. ಈ ಪಂಥದ ಗ್ರಂಥಗಳು ಸಂಗೀತ ಮತ್ತು ನೃತ್ಯಗಳಿಂದೊಡಗೂಡಿದ ದೈವಾರಾಧನೆಯನ್ನು ಎತ್ತಿಹಿಡಿದವು. ಇದೇ ಪ್ರಕಾರ ತ್ಯಾಗ ರಾಜರೂ ಭಕ್ತಿ ಮತ್ತು ಸಂಗೀತಗಳ ಸಾಮರಸ್ಯವನ್ನು ಕೆಲವು ರಚನೆಗಳಲ್ಲಿ ವಿಶೇಷ ವಾಗಿ ಸ್ಪಷ್ಟಪಡಿಸಿದರು. ನಾದ ಮತ್ತು ಸ್ವರಗಳೆಂಬ ಶ್ರೇಷ್ಠ ನವರತ್ನದ ವೇದಿಕೆಯ ಮೇಲೆ ಪರಮಾತ್ಮನ ಪಾದಗಳನ್ನಿರಿಸಿ, ಆತನ ನಾಮಗಳೆಂಬ ಪುಷ್ಪಗಳಿಂದ ಪೂಜಿಸು ವುದು ಸಾರ್ಥಕವೆಂದು ನುಡಿದರು.[1] ಇದನ್ನು ಸ್ವತಃ ಪ್ರಾಯೋಗಿಕವಾಗಿ ಆಚರಿಸಿ ಜನಸಾಮಾನ್ಯರೂ ಈ ಹಾದಿಯಲ್ಲಿ ನಡೆಯಲು ಅನುವಾಗುವಂತೆ ಸುಲಭ ಸರಳವಾದ ರಚನೆಗಳನ್ನು ರಚಿಸಿದರು. ಇವೇ ದಿವ್ಯನಾಮ ಕೀರ್ತನೆಗಳು. ಅವರು ಮೊದಲಿಗೆ ದಿವ್ಯನಾಮ ರಚನೆಗಳ ಮೂಲಕ ತಮ್ಮ ಸೃಜನಾತ್ಮಕತೆಯನ್ನು ಅಭಿವ್ಯಕ್ತಿಸಿದರೆನ್ನ ಬಹುದು.

ತ್ಯಾಗರಾಜರ ದಿವ್ಯನಾಮ ಕೀರ್ತನೆಗಳಲ್ಲಿ ಭಗವಂತನ ದಿವ್ಯನಾಮಗಳಷ್ಟೆ ಸಾಹಿತ್ಯ ವಸ್ತುವಾಗಿಲ್ಲ. ಇವುಗಳಲ್ಲಿ ಭಗವಂತನ ವಿಶೇಷಣಗಳೊಂದಿಗೆ (ಭಜ ರಾಮಂ ಸತತಂ-ಹುಸೇನಿ), ದೈನ್ಯ (ರಾಮರಾಮರಾಮ ಸೀತಾರಮಣ-ಹುಸೇನಿ), ಆಂತರಿಕ ಪೂಜಾ ವಿಧಾನದ ವಿವರ (ಪರಿಪಾಲಯ-ರೀತಿಗೌಳ), ಭಗವದ್ದಾಸರ ಲಕ್ಷಣ (ಹರಿ ಯನುವಾನಿಕಿ-ತೋಡಿ), ಭಕ್ತಿಹೀನ ಆಚರಣೆಗಳ ಪ್ರಸ್ತಾಪ (ಬಲಮುಕುಲಮು-ಸಾವೇರಿ), ಭಜನೆಯ ಕ್ರಮ (ರಾಮರಾಮ ಕೃಷ್ಣಾ ಎನರೇ-ಗೌಳೀಪಂತು), ಭಗವ ನ್ನಾಮದ ವೈಶಿಷ್ಟ್ಯ (ಮೇಲುಮೇಲು ರಾಮನಾಮಸುಖಿ-ಸೌರಾಷ್ಟ್ರ), ಭಗವದವತಾರ ಗಳ ವಿವರ (ದೀನ ಜನಾವನ ಶ್ರೀರಾಮ-ಭೂಪಾಲ—ಇದರ ರಾಗವನ್ನು ಬೌಳಿ ಎಂದಿರುವುದೂ ಉಂಟು) ಮುಂತಾದವೂ ಕಾಣಬರುತ್ತವೆ. ಭಗವದವತಾರವನ್ನು ತಿಳಿಸುವ ದೀನಜನಾವನ ರಚನೆಯಲ್ಲಿ ರಾಮನ ಇತರ ಅವತಾರಗಳೊಂದಿಗೆ ಬುದ್ಧಾ ವತಾರವನ್ನೂ ಪರಿಗಣಿಸಲಾಗಿರುವುದು ಗಮನಾರ್ಹ.

ಪೂರ್ವದಲ್ಲಿ ದೇವಸ್ಥಾನಗಳು ಸಾಮೂಹಿಕ ದೇವತಾರಾಧನೆಯ ಸ್ಥಳಗಳಾಗಿದ್ದವು. ಅಲ್ಲಿ ವಿಶೇಷವಾಗಿ ಗಿರಿಜಾಕಲ್ಯಾಣ, ಸೀತಾಕಲ್ಯಾಣಗಳಂತಹ ಸಾಂಸ್ಕೃತಿಕ ಕಾರ್ಯಕ್ರಮ

ಗಳು ಆಗಾಗ್ಗೆ ಜರುಗುತ್ತಿದ್ದವು. ಸಾಮಾನ್ಯರೂ ಈ ಸತ್ಕಾರ್ಯಗಳಲ್ಲಿ ಭಾಗವಹಿಸಿ ಭಕ್ತಿಸಾಧನೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾ ದೇವರನ್ನು ಸ್ತುತಿಸಲು ಉತ್ಸುಕರಾಗಿರುತ್ತಿದ್ದರು. ಅಧ್ಯಾತ್ಮ ದೃಷ್ಟಿಯಿಂದ, ಆತ್ಮವಿಕಾಸಕ್ಕಾಗಿ ರೂಪುಗೊಂಡ ಈ ಕಾರ್ಯಚಟುವಟಿಕೆಗಳಲ್ಲಿ ಗೋಷ್ಠಿಗಾನ ಅಥವಾ ಭಜನೆಯು ಮಹತ್ವದ ಸ್ಥಾನ ಪಡೆದಿದ್ದಿತು. ತಾಳ್ಳಪಾಕಂ ಚಿನ್ನಯ್ಯ (೧೫ನೇ ಶತಮಾನ) ನವರ ಕಾಲದಿಂದ ಭಜನ ಪದ್ಧತಿಯು ಆಳವಾಗಿ ಬೇರೂರಿದ್ದಿತು. ಪ್ರತಿ ದೇವಸ್ಥಾನವೂ ಭಜನ ಸಮೂಹವನ್ನು ಹೊಂದಿದ್ದು ಏಕಾದಶಿ ಮುಂತಾದ ವಿಶೇಷ ದಿನಗಳಲ್ಲಿ ಭಜನ ಕಾರ್ಯಕ್ರಮವನ್ನು ನಡೆಸುತ್ತಿದ್ದಿತು.

ಸಂಪ್ರದಾಯದಂತೆ ತ್ಯಾಗರಾಜರು ನಡೆಸುತ್ತಿದ್ದ ಭಜನ ಪದ್ಧತಿಯಲ್ಲೂ ಪೂರ್ವ ಮತ್ತು ಉತ್ತರ ಭಾಗಗಳಿದ್ದುವು. ಇದರಲ್ಲಿ ದಿವ್ಯನಾಮ ಮತ್ತು ಉತ್ಸವಸಂಪ್ರದಾಯ ಕೀರ್ತನೆಗಳನ್ನು ಹಾಡಲಾಗುತ್ತಿತ್ತು. ಭಜನೆಯ ಪೂರ್ವಭಾಗದಲ್ಲಿ ತ್ಯಾಗರಾಜರ ಶಾಸ್ತ್ರೀಯ ಕೃತಿಗಳು ಯಥಾವತ್ತಾಗಿ ಹಾಡಲ್ಪಡುತ್ತಿದ್ದವು. ಉಳಿದವು ಉತ್ತರಭಾಗದಲ್ಲಿ ಪ್ರಯೋಗಗೊಳ್ಳುತ್ತಿದ್ದವು.

ತ್ಯಾಗರಾಜರ ಭಜನ ರೀತಿಯು ವಿಶಿಷ್ಟ ಮಾದರಿಯದು. ಅದು ಕಲಾತ್ಮಕ ಹಾಗೂ ಅಧ್ಯಾತ್ಮಿಕ ಮೌಲ್ಯಗಳೆರಡನ್ನೂ ಹೊಂದಿದ್ದಿತು. ಭಜನೆಯ ಪೂರ್ವಭಾಗದಲ್ಲಿ ಹಾಡಲಾಗುತ್ತಿದ್ದ ಕೃತಿಗಳಿಂದ ಸಂಗೀತ ವಿದ್ವಾಂಸರು ರೋಮಾಂಚಿತರಾಗುತ್ತಿದ್ದರು. ಸಾಮಾನ್ಯರಾದರೋ ಅದರಲ್ಲಿನ ಅಧ್ಯಾತ್ಮಿಕ ಅಂಶಗಳಿಂದ ಆಕರ್ಷಿತರಾಗುತ್ತಿದ್ದರು. ತಿರುವೈಯಾರಿನ ಸಪ್ತಸ್ಥಾನ ಸಮಾರಂಭ (ಹಬ್ಬ)ದಲ್ಲೂ ಹಾಗೂ ತಮ್ಮ ಉಂಭಾವೃತ್ತಿಯ ಕಾಲದಲ್ಲೂ ತ್ಯಾಗರಾಜರು ಭಜನೆಯನ್ನು ನಡೆಸುತ್ತಿದ್ದರು [ಚಿಂತಿಸ್ತುನ್ನಾಡೆಯಮುಡು (ಮುಖಾರಿ) ರಚನೆಯನ್ನು ಸಪ್ತಸ್ಥಾನ ಸಮಾರಂಭದಲ್ಲೇ ಹಾಡಿದುದೆಂಬ ಪ್ರತೀತಿಯಿದೆ]. ನಾಮಸಂಕೀರ್ತನೆಯಷ್ಟೇ (ಜಪ) ಪರಮಗತಿಯನ್ನು ಒದಗಿಸಬಲ್ಲುದೆಂಬ ಭಾಗವತ ಸಂಪ್ರದಾಯದಲ್ಲಿ ತ್ಯಾಗರಾಜರು ಮತ್ತೊಂದು ಹೆಜ್ಜೆ ಮುಂದುವರಿದು ಸಂಕೀರ್ತನೆಯು ಶ್ರುತಿ, ಲಯ, ಸ್ವರಶುದ್ಧಿಗಳೊಂದಿಗೆ ಮಾಡುವುದು ಆಹ್ಲಾದಕಾರಿಯೂ ಹೌದು ಎಂಬುದನ್ನು ಮನದಟ್ಟು ಮಾಡುವ ಮೂಲಕ ಭಜನ ಪದ್ಧತಿಗೆ ವಿಶಿಷ್ಟ ರೂಪವೊಂದನ್ನು ಕೊಟ್ಟರು.

ಪ್ರಸ್ತುತ ತ್ಯಾಗರಾಜರ ದಿವ್ಯನಾಮ ರಚನೆಗಳು ಎರಡು ದೃಷ್ಟಿಯಿಂದ ಉಪಯುಕ್ತವಾದುವು. (ಅ) ಅವು ಅವರ ವ್ಯಕ್ತಿಗತವಾದ ದೈನಂದಿನ ಪೂಜೆಗಾಗಿ, (ಆ) ಆಲಯಾರ್ಚನ ಸಂದರ್ಭದಲ್ಲಿ ಸಾಮೂಹಿಕವಾಗಿ ಬಳಸಲು. ಈ ರಚನೆಗಳಲ್ಲಿ ಸಂಗೀತ-ಸಾಹಿತ್ಯಗಳ ದೃಷ್ಟಿಯಿಂದ ಕೆಳಗಿನ ಲಕ್ಷಣಗಳನ್ನು ಗುರುತಿಸಬಹುದು.

(೧) ಇವು ಸರಳ ವರ್ಣಮೆಟ್ಟನ್ನು ಹೊಂದಿವೆ. ಹೀಗಾಗಿ ಹಾಡುವವರಿಗೆ ವಿಶೇಷ ಪರಿಣತಿಯ ಅಗತ್ಯವಿಲ್ಲ.

(೨) ರಾಗಸಂಚಾರ ಪರಿಮಿತ ವ್ಯಾಪ್ತಿಯುಳ್ಳದ್ದು. ಹೀಗಾಗಿ ವಯಸ್ಸಿನ ತಾರತಮ್ಯವಿಲ್ಲದೆ ಎಲ್ಲರೂ ಹಾಡಬಹುದು. ಎಂದರೆ ವೃದ್ಧರಿಗೆ ಇಳಿವಯಸ್ಸಿ

ನಲ್ಲಿ ಶಾರೀರಸ್ಥಿರತೆ ಇರುವುದಿಲ್ಲ. ಕಿರಿಯರಿಗೆ ಸಂಗೀತದಲ್ಲಿ ಪರಿಶ್ರಮ ಇರುವುದಿಲ್ಲ. ಇಂಥವರೂ ಈ ಕೀರ್ತನೆಗಳನ್ನು ಹಾಡಬಹುದೆಂಬುದು ಇಲ್ಲಿನ ಅರ್ಥ. ಜನಸಾಮಾನ್ಯನನ್ನು ತಲುಪುವ ತ್ಯಾಗರಾಜರ ಅದ್ಭುತ ಪ್ರತಿಭೆಯು ಇಲ್ಲಿದೆ.

(೩) ಸಾಹಿತ್ಯವೇ ಪ್ರಧಾನವಾಗಿದ್ದು ಯಥಾಕ್ಷರ ಸಾಹಿತ್ಯವಿರುತ್ತದೆ. ಸಂಗೀತವು ಸಾಹಿತ್ಯ ಭಾವವನ್ನು ವಿಶದಪಡಿಸುವ ಮಾಧ್ಯಮವಷ್ಟೆ.

(೪) ಕ್ಲಿಷ್ಟ ಸಂಗತಿಗಳು ಕಾಣಬರದು.

(೫) ಪಲ್ಲವಿಯೊಂದಿಗೆ ಹಲವು ಚರಣಗಳಿರುತ್ತವೆ. ಪಲ್ಲವಿ ಮತ್ತು ಚರಣಗಳನ್ನು ಒಂದೇ ಧಾತುವಿಗೆ ಹಾಡುವಂತಹ ಅಥವಾ ಪಲ್ಲವಿಯನ್ನು ಪ್ರತ್ಯೇಕ ಧಾತುವಿಗೂ ಚರಣಗಳನ್ನು ಮತ್ತೊಂದು ಧಾತುವಿಗೂ ಹಾಡುವಂತಹ ರಚನೆಗಳೂ ಇವೆ. ಉದಾಹರಣೆಗೆ, ಸೀತಾನಾಯಕ-ರೀತಿಗೌಳ-ಛಾಪುತಾಳ

; ಸನಿ ಸಾಃಮ ಗರಿ || ಗಾಃ ಮಾಮಾ || ;ಗಮ ನೀ ನಿದದಾ ||<br>
ಸೀ ತಾ || ನಾ ಯಕ || ಶ್ರಿತ ಜ ನ ... ||

ನಿದನಿಸಾನಿ ಸಾ ಸಾ || ; ಮಗ ಮದನಿಸ || ನಿದಾ ನಿಸನಿದಮಾ ; ||<br>
ಪೋ ... ಷ ಕ || ಶ್ರೀ ರ . ಘು || ಕುಲ ತಿ . . . . ಲ ||

ಗರೀ ಗಮಗರಿ ಸಾ || ನಿ ಧಾ ನೀ ಸಾ ||<br>
ಕ . . . ರಾ . . ಮಾ . || . . ||

ಉಳಿದ ಚರಣಗಳನ್ನೂ ಇದೇ ಧಾತುವಿಗೇ ಹಾಡಬೇಕು. ಪ್ರತಿ ಚರಣದ ನಂತರ ಪಲ್ಲವಿ ಭಾಗವನ್ನು ಪುನರಾವರ್ತಿಸಲಾಗುವುದಿಲ್ಲ. ಇವು ಏಕಧಾತು ರಚನೆಗಳು.

ಗತಮೋಹಾಶ್ರಿತ - ಶಂಕರಾಭರಣ - ರೂಪಕತಾಳ.

ಪ| ಸರಿ ಸಾ ನೀ || ಸರಿ ಗಾ ರೀ || ಪಮ ಗಾರೀ || ಸನಿ ಸಾಃ ||<br>
ಗತ ಮೋಹಾ || ಶ್ರಿತ ಪಾಲಾ || ದ್ಭುತ ಸೀತಾ || ರಮ ಣ ||

ಚ| ಪಪ ಪಾದಪ || ಮಗ ಮಾಪಮ || ಗರಿ ಗಾಮಪ || ಮಗರೀ ಸರಿಗಮ ||<br>
ಶತ ಕೋಟಿಚ || ರಿತ ಮಾ ನವ || ಮತ ಭೇ ದಕ || ದಮನ . . . . . ||

– ಅದೇ – ಮಗ ರೀ ಮಗಗರಿ ||<br>
ದಮ ನ . . . . . ||

ಇಂತಹ ರಚನೆಗಳಲ್ಲಿ ಪ್ರತಿ ಚರಣ ಹಾಡಿದ ನಂತರವೂ ಪಲ್ಲವಿ ಭಾಗವನ್ನು ಪುನರಾವರ್ತಿಸಲಾಗುತ್ತದೆ. ಇವು ದ್ವಿಧಾತು ರಚನೆಗಳು. ಈ ಮಾದರಿಯ ರಚನೆಗಳಲ್ಲಿ

ಪಲ್ಲವಿ ಭಾಗವನ್ನು ಸಾಮೂಹಿಕವಾಗಿಯೂ, ಚರಣವನ್ನು ಮುಖ್ಯಗಾಯಕನೂ ಹಾಡಿ ಮತ್ತೆ ಒಟ್ಟಾಗಿ ಪಲ್ಲವಿಯನ್ನು ಪುನರಾವರ್ತಿಸುವುದೂ ಉಂಟು.

(೬) ತ್ಯಾಗರಾಜರಿಗಿದ್ದ ಪುರಾಣೇತಿಹಾಸಗಳ ಅರಿವು ಮತ್ತು ಭಾಷಾಪಾಂಡಿತ್ಯ ಈ ರಚನೆಗಳಲ್ಲಿ ಮತ್ತೊಮ್ಮೆ ಸ್ಪಷ್ಟಗೊಂಡಿವೆ.

(೭) ಸ್ವಾಭಾವಿಕವಾಗಿ ಮೂಡಿ ಬಂದಿರುವ ಪ್ರಾಸ, ಯಮಕ, ಶ್ಲೇಷೆಗಳು ಆಕರ್ಷಕವಾಗಿವೆ. ರಚನೆಗಳನ್ನು ಗದ್ಯರೂಪದಲ್ಲೆ ಪಾರಾಯಣ ಮಾಡಿದರೂ ಅಲ್ಲಿನ ಲಯ ನಮ್ಮ ಗಮನ ಸೆಳೆಯುತ್ತದೆ.

**ಗತಿಲೇದನಿ ಪತಿನೀವನಿ ಮತಿನೇ ಶರಣಂಟಿ**
**ಮುಲ್ಲೋಕಮು ಲಲ್ಲಾಡಿನ ಇಲ್ಲೇ ಗತಿಗಾನಿ**

(ರಘುನಂದನ-ಕೇದಾರಗೌಳ)

ಇಲ್ಲಿನ ಲಯ ಗಮನಾರ್ಹ. ಮೊದಲ ಸಾಲಿನಲ್ಲಿ ಐದೈದು, ಎರಡನೇ ಸಾಲಿನಲ್ಲಿ ನಾಲ್ಕರ ಜೋಡಣೆ ಆಕರ್ಷಕವಾಗಿದೆ.

ತಾರಾಧೀಶವದನ-ತಾರಾಧೀಶದಮನ (ಪಾಲಯ ಶ್ರೀರಘುವೀರ-ದೇವಗಾಂಧಾರಿ) ಎಂಬಲ್ಲಿ ತಾರಾಧೀಶ ಪದವು ಎರಡು ಅರ್ಥಗಳನ್ನು ಹೊಂದಿವೆ. ಮೊದಲನೆಯದು ಚಂದ್ರನನ್ನೂ, ಎರಡನೆಯದು ವಾಲಿಯನ್ನೂ ಸೂಚಿಸುತ್ತದೆ.

(೮) ಜಾತಿ ಮತ ಭೇದವಿಲ್ಲದೆ ಎಲ್ಲರೂ ಸೇರಿ ನಾಮ ಸಂಕೀರ್ತನೆ ಮಾಡಿ ಅದರ ಫಲವನ್ನು ಅರಿಯಬಹುದೆಂಬ ಸಲಹೆ ಸೂಚ್ಯವಾಗಿ ತ್ಯಾಗರಾಜರ ಮಾತುಗಳಲ್ಲೇ ಅಡಗಿದೆ.

**ಜಾತಿಕೊಕರು ಕೂಡಿನಾರಮು ಪ್ರೀತಿ**
**ಚೇತ ದೆಲುಸುಕೊಂಟಿಮಿ ನಾಮಸಾರಮು**

(ಶ್ರೀರಾಮದಾಸ ದಾಸೋಹಂ-ಧನ್ಯಾಸಿ)

ತ್ಯಾಗರಾಜ ವಿರಚಿತ ದಿವ್ಯನಾಮ ರಚನೆಗಳ ಸಂಖ್ಯೆಯನ್ನು ನಿಖರವಾಗಿ ಹೇಳಲು ಬರುವುದಿಲ್ಲ. ಈ ರಚನೆಗಳನ್ನು ಪ್ರಸ್ತುತಪಡಿಸಿರುವ ವಿವಿಧ ಗ್ರಂಥಗಳು ವಿವಿಧ ಸಂಖ್ಯೆಯನ್ನು ನಮೂದಿಸುತ್ತವೆ.[೨] ಅಲ್ಲದೆ ಅವರ ಗೀತನಾಟಕಗಳಲ್ಲಿ ಕಾಣಬರುವ ರಚನೆಗಳೂ ಈ ಪಟ್ಟಿಯಲ್ಲಿ ಕಾಣಬರುತ್ತವೆ. ಸ್ವರಲಿಪಿ ಕ್ರಮದಲ್ಲೂ (Notation) ವ್ಯತ್ಯಾಸ ಕಾಣಬರುವುದು ಗಮನಾರ್ಹ. ಉದಾಹರಣೆಗೆ, ನಮೋನಮೋ ರಾಘವಾಯ. ಈ ರಚನೆಯು ರೂಪಕತಾಳದಲ್ಲೇ ಆದರೂ, ವಿವಿಧ ಸ್ವರಮಟ್ಟುಗಳು ಪ್ರಯೋಗವಿರುವಂತೆ ತಿಳಿದುಬರುತ್ತದೆ. ಪುನ್ನಾಗವರಾಳಿ :

| | ಚ | ಚ | | | ಚ | | |
|---|---|---|---|---|---|---|---|
| ಪ। | ಗರಿಗಾ | ಗರಿಗಾ | ;; | ‖ | ಗಾರೀ | ಗಾಗಮ | ಪಾದಾ ‖ |
| | ನ ಮೋ | ನ ಮೋ | | ‖ | ರಾ | | ಘ ವಾ ‖ |

| ಪಾ‌ee | ದಾಪಾ | ಮಾee ‖ | ಮಗಪಮ | ಗಾಗರಿ | ರೀಸಾ ‖ |
|---|---|---|---|---|---|
| ಯ | ಅನಿ | ಶಂ ‖ | ಹ ರೇ | ರಾ | ಮ ‖ |

| ಚ ಗರಿಗಾ | ಚ ;ಗರಿ | ಗಾee ‖ | ಗಮಪನಿ | ದಪಪಪ | ಮಾಮಗ ‖ |
|---|---|---|---|---|---|
| ನಮೋ | ನ | ಮೋ ‖ | ರಾ | ಘ ವಾ | ‖ |

| ಗರಿರೀ | ಸಾee | eeee ‖ | ಸದಪಮ | eeಗರಿರೀ | ಸಾ ‖ |
|---|---|---|---|---|---|
| ಯ | | ‖ | ಹ ರೇ | ರಾ | ಮ ‖ |

(ಉಳಿದ ಚರಣಗಳನ್ನೂ ಇದೇ ಧಾತುವಿಗೆ ಹಾಡಬೇಕು)[೩]

ದೇಶಿಕತೋಡಿ - ಹನುಮತೋಡಿಯಲ್ಲಿ ಜನ್ಯ

| | | | | |
|---|---|---|---|---|
| ಪ । | ರಿಗಾರಿಸಾ ‖ | ಸಾ ರಿರಿರಿನ್ಯಿ ‖ | ಸರಿ | ಮಾee ‖ |
| | ನಮೋನಮೋ ‖ | ರಾಘವಾಯ ‖ | ಅನಿ | ಶಂ ‖ |
| | ಪದಾಮಗಾ ‖ | ರಿಗಾರಿಸಾ ‖ | ಸರೀನ್ಸಿಸಾ ‖ | |
| | ನಮೋನಮೋ ‖ | ನಮೋನಮೋ ‖ | ನಮೋನಮೋ ‖ | |
| ಚ । | ಗಪದಸಾಸ ‖ | ಸಾರಿಗಾರಿ ‖ | ಸಾ ee ee ‖ | |
| | ಶುಕನುತಾಯ ‖ | ದೀನಬಾಂಧ ‖ | ವೇ ‖ | |
| | ಸರಿ ನಿನಿದಮ ‖ | ಗರಿ ಗರೀನ್ಸಿ ‖ | ಸಾ ee ee[೪] ‖ | |
| | ಸಕ ಲಲೋ ಕ ‖ | ದಯಾ ಸಿಂಧ ‖ | ವೇ ‖ | |

ದೇಶಿಕತೋಡಿ (ಈ ಕೆಳಗಿನ ಪ್ರಯೋಗದಲ್ಲಿ ರಾಗವು ಬಹುಮಟ್ಟಿಗೆ ಸಿಂಧುಭೈರವಿ ಎಂಬಂತೆನಿಸುತ್ತದೆ. ರಾಗವು ಇಲ್ಲಿ ಸ್ವಲ್ಪ ವಿಸ್ತೃತವಾಗಿದೆ).

| | | | |
|---|---|---|---|
| ಪ। ಸಗಾಮಪಾ ‖ | ಮಪನಿ ದಪಪ ‖ | ಸದಾಮಪಾ ‖ | ಗಮ ದದಪಮ ಗರಿಸಾ ‖ |
| ನಮೋನಮೋ ‖ | ರಾ ಘ ವಾ ಯ ‖ | ನಮೋನಮೋ ‖ | ಅನಿ ಶಂ ‖ |
| - ಅದೇ - ‖ | ಮಪಸನಿ ರಿಸದಾ ಪಪ ‖ | - ಅದೇ - ‖ | ಗಮದನಿ ಸನಿದಮ ಗರಿಸಾ ‖ |
| ‖ | ರಾ ಘ ವಾ ಯ ‖ | ‖ | ಅ ನಿ ಶಂ ‖ |

ಚ। ದದದ ದಮದಾನೀ || ಸಾ ಸ ದನಿಸಗರಿಸ ||
ಶುಕನು ತಾ ಯ || ದೀನ ಬಂ ಧವೆ ||

- ಅದೇ - || ಸಾ ಸ ಗಮಗಗ ಽಸಾರೀಸಾ ||
|| ದೀನ ಬಂ ಧವೆ ||

ನಿನಿನಿ ಸಾಸ || ನಿಸಾ ನಿರಿಸದಾಪ ||
ಸಕಲಲೋಕ || ದಯಾ ಸಿಂ ಧವೇ ||

ಸಾಸಾ ರಿಸದಾ ಪಪ || ಗ ಮಾದದದಾಪಾ ಗದಮರೀಸ ||
ಸಕ ಲ ಲೋ ಕ || ದ ಯಾ ಸಿಂ ಧ ವೇ ||

- ಅದೇ - || ಗಮದನಿ ಸನಿದಮ ಗರಿಸಾ[೯] ||
|| ದ ಯಾ ಸಿಂ ಧ ವೇ ||

ಇದರಂತೆಯೇ ರಚನೆಯ ರಾಗದಲ್ಲೂ (ವಿರಳವಾಗಿ) ಅಭಿಪ್ರಾಯ ವ್ಯತ್ಯಾಸ ಕಾಣಬರುತ್ತದೆ. ಉದಾಹರಣೆಗೆ, ಜಯಜಯ ಶ್ರೀರಘುರಾಮ ಎಂಬ ರಚನೆಗೆ 'ಮಂಗಳಕೈಶಿಕಿ' ಮತ್ತು 'ಗೌರಿ' ಎಂಬೆರಡು ರಾಗಗಳನ್ನೂ ಹೇಳಲಾಗಿದೆ.[೬] ತ್ಯಾಗ ರಾಜರ ಅಧಿಕ ರಚನೆಗಳು ಸ್ತುತಿಗೀತೆಗಳೇ ಆದ್ದರಿಂದ ಎಲ್ಲವನ್ನೂ ಕೀರ್ತನೆಗಳೆಂದೇ ಕರೆಯಬಹುದೆಂಬ ಅಭಿಪ್ರಾಯವೂ ಉಂಟು.[೭] ಒಟ್ಟಾರೆ ಭಜನಗೋಷ್ಠಿಗೆ ಸುಲಭ ವಾಗಿ ಒದಗುವ ಸಾಹಿತ್ಯ ಪ್ರಧಾನವಾದ ಸರಳ ರಾಗ ಲಯಗಳನ್ನುಳ್ಳ ಭಕ್ತಿಪೂರ್ಣ ರಚನೆಗಳು ದಿವ್ಯನಾಮ ಕೀರ್ತನೆಗಳೆನಿಸುತ್ತವೆ.

**ಉತ್ಸವ ಸಂಪ್ರದಾಯ ಕೀರ್ತನೆಗಳು**

ಮನುಷ್ಯ ತಾನು ಏನೇನನ್ನು ಬಯಸುತ್ತಾನೋ, ತನ್ನ ಭಾವಕ್ಕೆ ಅನುಗುಣವಾಗಿ ಯಾವ್ಯಾವುದು ಉತ್ಕೃಷ್ಟವೋ, ಸುಂದರವೋ, ಶಕ್ತಿಯುತವೋ, ಹಿತವೋ ಅವೆಲ್ಲ ವನ್ನೂ ದೇವರಿಗೂ ಅನ್ವಯಿಸಿ, ಆರೋಪಿಸಿ, ಸಮರ್ಪಿಸಿ ಉಪಚಾರ ನಡೆಸುತ್ತಾನೆ. ಅವನ ಈ ಮನೋಭಾವವು ಅವನ ದೈನಂದಿನ ಆರಾಧನೆಯಲ್ಲೂ, ವಿಶೇಷ ಉತ್ಸವ ಗಳ ಸಂದರ್ಭದಲ್ಲೂ ವ್ಯಕ್ತವಾಗುತ್ತದೆ. ಹೀಗೆ ತನ್ನ ಮನೋಭಾವಕ್ಕೆ ತಕ್ಕಂತೆ ಅವನು ದೇವರಲ್ಲಿ ಮಾಡುವ ಈ ಭಾವನೆ ಅಥವಾ ಆರೋಪಣೆಗೆ 'ಮನುಷ್ಯತ್ವಾರೋಪಣೆ' ಎನ್ನಲಾಗುತ್ತದೆ (Anthropomorphism). ಇಂತಹ ಚಟುವಟಿಕೆಯು ಇತ್ತೀಚಿನದಲ್ಲ. ವೇದಕಾಲದಿಂದಲೂ ಪ್ರಚಲಿತವಿದೆ. ಉದಾಹರಣೆಗೆ ದೇವತೆಗಳಲ್ಲಿ ಇಂದ್ರನನ್ನು ಮಹಾಗರ್ವಿಯೆಂದೂ, ಸೋಮರಸಪ್ರಿಯನೆಂದೂ ವರ್ಣಿಸಲಾಗಿದೆ. ಆರ್ಯರು ತಮ್ಮ ಲ್ಲಿದ್ದ ಈ ಗುಣಗಳನ್ನು ಸದ್ಗುಣಗಳ ಮಟ್ಟಕ್ಕೇರಿಸಿ ಅವುಗಳನ್ನು ಇಂದ್ರನ ಮೇಲೆ

ಆರೋಪಿಸಿ ದೈವೀಕರಿಸಿದ್ದರು. ಆದ್ದರಿಂದಲೇ ಈ ದೇವತೆಗಳನ್ನು ದೈವೀಕರಿಸಲ್ಪಟ್ಟ ಮನುಷ್ಯರು (Glorified Human Beings) ಎಂದು ಕರೆಯುತ್ತಾರೆ.[೮] ಹೀಗೆ ಮನುಷ್ಯತ್ವಾರೋಪಣೆ ಮಾಡಿ ಕಾರ್ಯ ಚಟುವಟಿಕೆಗಳಲ್ಲಿ ತೊಡಗಿದ ಇತರ ಭಕ್ತರು ಮಂತ್ರೋಕ್ತವಾಗಿ ಭಗವಂತನನ್ನು ಉಪಚರಿಸಿದರೆ ಕವಿಗಳೂ, ಸಂತರೂ, ಜನಸಾಮಾನ್ಯರೂ ದೇವರನ್ನು ಉಪಚರಿಸಲು ಅನುವಾಗುವಂತೆ ವಿವಿಧ ಭಾಷೆಗಳಲ್ಲಿ ಸರಳ ರಚನೆಗಳನ್ನೇ ರಚಿಸಿದರು. ಹೀಗೆ ರಚಿತವಾದ ಹಾಡುಗಳಲ್ಲಿ ಕೆಲವು ರಚನಾಕಾರರಿಂದಲೇ ಸಂಗೀತಕ್ಕೆ ಅಳವಡಿಸಲ್ಪಟ್ಟರೆ ಮತ್ತೆ ಕೆಲವನ್ನು ಭಕ್ತರೇ ಅವರಿಗೆ ರಂಜಕವೆನಿಸಿದ ರಾಗ ಸಂಯೋಜನೆ ಮಾಡಿ ಹಾಡುವ ಪರಿಪಾಠ ಮೊದಲಿಟ್ಟಿತು. ಒಟ್ಟಾರೆ ಇಂತಹ ರಚನೆಗಳಿಂದ ಸಾಮಾನ್ಯರೂ ಆಕರ್ಷಿತರಾದರು. ಇದಕ್ಕೆ ಈ ರಚನೆಗಳು ಭಗವತ್ಸಂಬಂಧವಾಗಿದ್ದುದು ಒಂದು ಕಾರಣವಾದರೆ, ಅವು ಹಾಡಲ್ಪಡುತ್ತಿದ್ದುದು ಮತ್ತೊಂದು ಕಾರಣವಾಯಿತು. ಈ ರಚನೆಗಳ ಮೂಲಕ ಆರಾಧನೆಯಿಂದ ದೇವರು ಅತೀತನಾಗಿ ಉಳಿಯದೆ ಮಾನಸಿಕವಾಗಿ ಸಮೀಪನೂ, ಸುಲಭನೂ ಆಗುವನೆಂಬ ಭಾವ ಮೂಡಿತು. ಹವ್ಯಾಸೀ ಕಲಾಪ್ರಿಯರೂ ಕೂಡ ತಮ್ಮನ್ನು ಪರೋಕ್ಷವಾಗಿ ದೈವಾರಾಧನೆಯಲ್ಲಿ ತೊಡಗಿಸಿಕೊಳ್ಳಲು ಇದು ಅನುಕೂಲ ಮಾಡಿತು.

ಪೂಜೆಗೆ ಪ್ರತಿಮೆಗಳನ್ನು ಮಾಡಿಟ್ಟುಕೊಂಡು ಮನಸ್ಸನ್ನು ಅದರಲ್ಲಿ ನಿಲ್ಲಿಸುವುದು ಜಗತ್ತಿನ ಹೆಚ್ಚುಕಡಿಮೆ ಎಲ್ಲ ಸಂಪ್ರದಾಯಗಳಲ್ಲಿಯೂ ಇದೆ. ಪ್ರತಿಮೆಗಳನ್ನು ಮನುಷ್ಯಾಕಾರದಲ್ಲಿಯೇ ಮಾಡಿ ಆರಾಧಿಸುವುದರಿಂದ ಮನಸ್ಸು ತಕ್ಷಣವೇ ಅದನ್ನು ಗ್ರಹಿಸಲು ಸಾಧ್ಯವಾಗುತ್ತದೆ. ವೈಷ್ಣವಾಗಮಗಳ ಪ್ರಕಾರ ಭಗವಂತನ ಐದು ಅಭಿವ್ಯಕ್ತಿಗಳಲ್ಲಿ ಅರ್ಚಾಮೂರ್ತಿಯೂ ಒಂದು[೯] (ವಿಗ್ರಹಾರಾಧನೆ). ಆತನು ದೃಗ್ಗೋಚರ ರೂಪದಲ್ಲೇ ಆರಾಧಿಸಲ್ಪಡಬೇಕೆಂಬುದು ಒಂದು ಅಭಿಪ್ರಾಯ.[೧೦] ವಾಸ್ತವವಾಗಿ ಪುರಾಣಯುಗದಲ್ಲಿ ವಿಗ್ರಹಾರಾಧನೆಯು ಮಹೋನ್ನತ ಸ್ಥಿತಿಗೇರಿತು. ಭಾಗವತದ ಚತುರ್ಥ ಸ್ಕಂಧದಲ್ಲೂ, ಏಕಾದಶ ಸ್ಕಂಧದಲ್ಲೂ ಈ ಬಗೆಯ ಪ್ರಸ್ತಾಪವಿದೆ.

ಪ್ರಾಚೀನ ಸಂಪ್ರದಾಯ ಸಿದ್ಧವಾಗಿದ್ದ ವಿಗ್ರಹಾರಾಧನೆಯಲ್ಲಿ ಉಪಚಾರಗಳನ್ನು ಗಾಯನದೊಂದಿಗೆ ಸಮರ್ಪಿಸುವ ವಿಧಾನವು ಸುಮಾರು ತಾಳ್ಳಪಾಕಂ ರಚನಕಾರರು ಅಳವಡಿಸಿರಬಹುದೆಂಬ ಅಭಿಪ್ರಾಯವುಂಟು. ತಾಳ್ಳಪಾಕಂ ಅನ್ನಮಯ್ಯನವರ ಕೃತಿ ಭಂಡಾರದಲ್ಲಿ ಕಲ್ಯಾಣೋತ್ಸವಕ್ಕೆ ಸಂಬಂಧಿಸಿದಂತೆ ಕಾಣುವ ರಚನೆಯೊಂದನ್ನು ಇಲ್ಲಿ ಸ್ಮರಿಸಬಹುದು.[೧೧] ಇದೇ ಅವಧಿಯಲ್ಲೇ ಸೃಷ್ಟಿಗೊಂಡ ದಾಸಸಾಹಿತ್ಯದಲ್ಲೂ ಜೋಗುಳ, ರಕ್ಷೆ, ನೈವೇದ್ಯ, ಸುಪ್ರಭಾತ, ಲಾಲಿ ಮುಂತಾದ ಸಾಹಿತ್ಯಪ್ರಸ್ತಾಪವುಳ್ಳ ರಚನೆಗಳೂ ಕಾಣಬರುತ್ತವೆ. ಇದೇ ಹಾದಿಯಲ್ಲೇ ಮುಂದೆ ತ್ಯಾಗರಾಜರೂ ರಚನೆಗಳನ್ನು ಸೃಷ್ಟಿಸಿ ಹಾಡಿದ್ದಾರೆ. ಅವರ ಪಾಲಿಗೆ ಶ್ರೀರಾಮ ಆಧ್ಯಾತ್ಮಿಕ ಕಲ್ಪನೆಯಷ್ಟೇ ಅಲ್ಲ, ಸಜೀವ ಮೂರ್ತಿಯಾಗಿದ್ದಾನೆ. ಆತನನ್ನು ವಿಧವಿಧವಾಗಿ ಕಂಡಂತೆಲ್ಲಾ, ಭಾವಗಳನ್ನು ಹೃದಯತುಂಬಿ ಹಾಡಿದ್ದಾರೆ. ಇವೇ ಉತ್ಸವ ಸಂಪ್ರದಾಯ ಕೀರ್ತನೆ

ಗಳು. ಇದರಲ್ಲಿ ನಮ್ಮ ಸಂಸ್ಕೃತಿ, ಪರಂಪರೆಗಳು ಅಡಕಗೊಂಡಿವೆ.

ದೇವರಿಗೆ ಸಲ್ಲಿಸುವ ಉಪಚಾರಗಳಲ್ಲಿ ಅಷ್ಟೋತ್ತರ ಶತೋಪಚಾರಗಳು (೧೦೮), ಚತುಷ್ಷಷ್ಟಿ ಉಪಚಾರಗಳು (೬೪), ದ್ವಾತ್ರಿಂಶ ಉಪಚಾರಗಳು (೩೨), ಷೋಡಶೋಪ ಚಾರಗಳು (೧೬) ಎಂಬ ವಿಧಗಳುಂಟು. ಇವುಗಳಲ್ಲಿ ವಿಶೇಷವಾಗಿ ಬಳಕೆಯಲ್ಲಿ ರುವುದು ಷೋಡಶೋಪಚಾರ ಮಾತ್ರ. ಇಂತಹ ಉಪಚಾರಗಳಲ್ಲಿನ ಕೆಲವು ಮಾದರಿ ಗಳನ್ನು ತ್ಯಾಗರಾಜರ ಕೃತಿಗಳಲ್ಲಿ ನಾವು ಹೀಗೆ ಕಾಣಬಹುದು.

**ಸುಪ್ರಭಾತ** : ತ್ಯಾಗರಾಜರು ಮೊದಲಿಗೆ, ದೇವರಿಗೆ ಸುಪ್ರಭಾತವನ್ನು ಹಾಡುತ್ತಾರೆ. (ಮೇಲುಕೋ ದಯಾನಿಧೇ - ಸೌರಾಷ್ಟ್ರ; ಮೇಲುಕೋವಯ್ಯ - ಬೌಳಿ). ಇಂತಹ ಉತ್ಸಾಹಭರಿತ ರಾಗಗಳಲ್ಲಿ ಸುಪ್ರಭಾತವು ಹಿಂದಿನಿಂದಲೂ ಅಳವಟ್ಟಿರುವುದು ಕಾಣ ಬರುತ್ತದೆ. ಸೂರ್ಯೋದಯವಾಗುತ್ತಿದೆಯೆಂದು ತಿಳಿಸಿ, ಎಚ್ಚರಗೊಳ್ಳುವಂತೆ ತ್ಯಾಗ ರಾಜರು ಶ್ರೀರಾಮನಿಗೆ ಹೇಳುತ್ತಾರೆ. ಶ್ರೀರಾಮನು ತಿಳಿಗಣ್ಣುಗಳಿಂದ ತಮ್ಮೆಡೆಗೆ ನೋಡುವಂತೆ ಪ್ರಾರ್ಥಿಸುತ್ತಾರೆ. ತೀವ್ರ ತೇಜೋಮಯವಾದ ಆತನ ನೋಟದಿಂದ ಜಗತ್ತೆಲ್ಲಿ ಸುಟ್ಟುಹೋಗುವುದೋ ಎಂಬ ಭಯವಿದೆ, ತ್ಯಾಗರಾಜರಿಗೆ. ಆದ್ದರಿಂದ ತಿಳಿಗಣ್ಣಿಳಿಂದ ನೋಡಬೇಕೆಂಬುದು ಅವರ ಪ್ರಾರ್ಥನೆ. ಬಟ್ಟಲಲ್ಲಿ ನವನೀತ ಕ್ಷೀರ ವನ್ನು ಹಿಡಿದು ತಾವು ಕಾದಿರುವುದಾಗಿ ಅವರು ಬಿನ್ನವಿಸುತ್ತಾರೆ. ಯಾರು ಕಣ್ತೆರೆಯದಿ ದ್ದರೆ ಪ್ರಪಂಚವೇ ಸ್ತಬ್ಧಗೊಳ್ಳುತ್ತದೋ ಅಂತಹ ದಯಾನಿಧಿಗೆ ತ್ಯಾಗರಾಜರು ಸುಪ್ರಭಾತವನ್ನು ಹಾಡುತ್ತಾರೆ.

**ಸ್ವಾಗತ** : ಎಚ್ಚರಗೊಂಡ ಶ್ರೀರಾಮನನ್ನು ತಮ್ಮ ಪೂಜೆ ಸ್ವೀಕರಿಸಲು ಆಹ್ವಾನಿಸು ತ್ತಾರೆ (ಹೆಚ್ಚರಿಕಗಾ ರಾರಾ ಹೇ ರಾಮಚಂದ್ರ - ಯದುಕುಲ ಕಾಂಬೋಜಿ). ಮಾಣಿಕ್ಯ ಸೋಪಾನಗಳ ಮೇಲೆ ಮೆಲ್ಲನೆ, ಜೋಪಾನವಾಗಿ ಹೆಜ್ಜೆಯೂರುತ್ತಾ ನೂಪುರ ಶಬ್ದ ದೊಂದಿಗೆ ಬರುವಂತೆ ಆಹ್ವಾನಿಸುತ್ತಾರೆ.

**ಉರುಟಣೆ** (ನಲುಗು) : ಶ್ರೀರಾಮನ ಪಾದಗಳನ್ನು ಬೇಡಿ 'ನಳಿನಲೋಚನ ನೀಕು ನಲುಗು ಪೆಟ್ಟೇರಾ' (ನಾ ಪಾಲಿ ಶ್ರೀರಾಮ - ಶಂಕರಾಭರಣ) ಎಂದು ತ್ಯಾಗರಾಜರು ಹಾಡುತ್ತಾರೆ. ಅರಿಸಿನ ಮತ್ತು ಸುಗಂಧತೈಲಗಳನ್ನು ನವಿರಾಗಿ ಹಚ್ಚುವುದು ನಲುಗು ಎನಿಸುತ್ತದೆ. ಇದಲ್ಲದೆ ವಧೂವರರ ಪಾದಗಳಿಗೆ ಸುಣ್ಣ ಅರಿಶಿನ ಬೆರೆಸಿ ಕೆಂಪು ಹಚ್ಚುವುದನ್ನೂ ನಲುಗು ಎಂದೇ ಕರೆಯುವ ಸಂಪ್ರದಾಯವಿದೆ. ತ್ಯಾಗರಾಜರು ನಲುಗು ಹಚ್ಚುವ ಸಲುವಾಗಿಯೇ ರಾಮನ ಪಾದಗಳನ್ನು ನೀಡುವಂತೆ ಪ್ರಾರ್ಥಿಸು ತ್ತಾರೆ. ನಲುಗು ಹಚ್ಚುವಾಗ ಅವರ ಆನಂದ ಅವರ್ಣನೀಯವೆನಿಸಿದೆ. ದರಿದ್ರನಿಗೆ ಸಿಕ್ಕಿದ ನಿಧಿಯಂತೆ ರಾಮನೀಗ ಅವರ ನಲುಗು ಸೇವೆಗೆ ಲಭ್ಯವಾಗಿದ್ದಾನೆ. ನಲುಗಿನ ಸಂಪ್ರದಾಯ ಇಂದೂ ನಮ್ಮಲ್ಲಿ ಆಚರಣೆಯಲ್ಲಿರುವುದನ್ನು ಸ್ಮರಿಸಬಹುದು.

**ಆಸನ** : ಅನಂತರ ಭಗವಂತನು ನಂಬಿದವರಿಗೆ ವರ ನೀಡುವ ಸಲುವಾಗಿ ಓಲಗದಲ್ಲಿ ಕುಳಿತಿದ್ದಾನೆ. ಸೀತಾ ಭರತಾದಿಗಳೊಂದಿಗೆ ನೈವೇದ್ಯವನ್ನು ಸೇವಿಸಿ,

ದೇವತಾಸ್ತ್ರೀಯರ ನಾಟ್ಯಸೇವೆಯನ್ನೂ, ಭಕ್ತರ ಸ್ತುತಿಯನ್ನೂ ಸ್ವೀಕರಿಸುತ್ತಾ ಕೋದಂಡಪಾಣಿ ಆಸ್ಥಾನದಲ್ಲಿ ವಿರಾಜಿಸಿದ್ದಾನೆ (ಕೊಲುವೈಯುನ್ನಾಡೇ - ದೇವ ಗಾಂಧಾರಿ).

**ನೈವೇದ್ಯ** : ರಘುವೀರನಿಗೆ ಹಾಲ್ಬೆಣ್ಣೆಗಳೊಂದಿಗೆ ದಿವ್ಯಾನ್ನವನ್ನೂ ಷಡ್ರಸಯುತ ಭಕ್ಷ್ಯಣಗಳನ್ನೂ ತ್ಯಾಗರಾಜರು ನಿವೇದಿಸುತ್ತಾರೆ. ಅವರು ನೀಡಿರುವ ಈ ಆಹಾರ ವಸ್ತುಗಳನ್ನು ತನ್ನ ಅಮೃತಹಸ್ತದಿಂದ ಸ್ಪರ್ಶಿಸಿ ಜನಕಜೆ (ಸೀತಾ ಮಾತೆ) ಉಣಬಡಿಸ ಬೇಕೆಂಬ ಸಂಸ್ಕೃತಿಯ ಧ್ವನಿ ಇಲ್ಲಿದೆ. ಅಂತೆಯೇ ಶ್ರೀರಾಮನು ಸೀತೆ ನೀಡಿದ ಆಹಾರವನ್ನು ಏಕಾಂಗಿಯಾಗಿ ಕುಳಿತು ಉಣ್ಣದೆ ತನ್ನ ಸೋದರರೊಂದಿಗೆ ಕೂಡಿ ಭುಜಿಸಬೇಕೆಂದು ಅವರು ಪ್ರಾರ್ಥಿಸುತ್ತಾರೆ. ಇಲ್ಲಿ ಭೋಜನವು, ಕುಟುಂಬದ ಎಲ್ಲ ಮಂದಿಯೊಂದಿಗೆ ಕುಳಿತು ಸಾಮೂಹಿಕವಾಗಿ ಮಾಡುವ ಕಾರ್ಯ ಎಂಬ ಸೂಚನೆಯೂ, ಇದರಿಂದಲೇ ಮನುಷ್ಯನಿಗೆ ಸಂತೋಷವೆಂಬ ಮನೋವೈಜ್ಞಾನಿಕ ಹಿನ್ನೆಲೆಯೂ ಅಡ ಗಿದೆ. ಅದರೊಂದಿಗೆ ಆದರ್ಶ ಪತ್ನಿ(ಸ್ತ್ರೀ)ಯೊಬ್ಬಳು ತನ್ನ ಪತಿ ಹಾಗೂ ಕುಟುಂಬದ ಇತರರಿಗೆ ಉಣಬಡಿಸಿ ಅನಂತರವೇ ತಾನು ಆಹಾರ ಸೇವಿಸುತ್ತಿದ್ದ ಸಾಮಾಜಿಕ ಅಭ್ಯಾಸದ ಪ್ರತಿರೂಪ ಇಲ್ಲಿದೆ (ಆರಗಿಂಪವೇ ಪಾಲು—ತೋಡಿ).

ಭೋಜನಕ್ಕೆ ಬಳಸುವ ಆಹಾರ ಪಾನೀಯಗಳು ಸಾಮಾನ್ಯವಾಗಿ ಪ್ರಾದೇಶಿಕವಾಗಿ ಮತ್ತು ಮನುಷ್ಯನ ಸ್ವಭಾವಕ್ಕೆ ಅನುಗುಣವಾಗಿ ವ್ಯತ್ಯಾಸಗೊಳ್ಳುವುದಾದರೂ ತ್ಯಾಗ ರಾಜರು ಪ್ರಸ್ತಾಪಿಸುವ ಆಹಾರ ವಸ್ತುಗಳು ಸಾತ್ವಿಕವಾದುವೆಂಬುದನ್ನು ನಾವು ಇಲ್ಲಿ ಗಮನಿಸಬಹುದು. ಪುರಂದರರ ರಚನೆಗಳಲ್ಲಂತೂ ದೋಸೆ, ಕಜ್ಜಾಯ, ಕಬ್ಬಿನರಸ ಮುಂತಾದ ನೈವೇದ್ಯದಲ್ಲಿ ಅಪರೂಪವಾಗಿ ಇಡುವ ವಸ್ತುಗಳ ಹೆಸರನ್ನೂ ಕಾಣ ಬಹುದು.

**ರಕ್ಷೆಹಚ್ಚುವುದು** : ಸೀತೆಯ ಕರಹಿಡಿದು ಮೆರೆದಿರುವ ಸೀತಾಪತಿಗೆ ರಕ್ಷೆ ಇಡಿರೆಂದು ತ್ಯಾಗರಾಜರು ಹೇಳುತ್ತಾ ಪ್ರಾಚೀನ ಸಂಪ್ರದಾಯವನ್ನು ಮತ್ತೊಮ್ಮೆ ಜ್ಞಾಪಿಸುತ್ತಾರೆ. ಜಗನ್ಮೋಹನರೂಪಿಯಾದ ಶ್ರೀರಾಮ ಈಗಾಗಲೇ ತನ್ನ ಶೌರ್ಯದಿಂದ ಶಿವಧನುಸ್ಸನ್ನು ಮುರಿದಿದ್ದಾನೆ. ಅವನ ವಿಜಯೋತ್ಸಾಹದ ಚಿಹ್ನೆಯಾಗಿ, ದೃಷ್ಟಿ ಪರಿಹಾರಕ್ಕಾಗಿ ಇದೀಗ ರಕ್ಷೆಯಿಡಬೇಕಾಗಿದೆ. (ರಕ್ಷಬೆಟ್ಟರೇ ದೊರಕು - ಭೈರವಿ*).

**ಕಲ್ಯಾಣೋತ್ಸವ** : ಉತ್ಸವ ಸಂಪ್ರದಾಯದಲ್ಲಿ ಸೀತಾಕಲ್ಯಾಣಕ್ಕೆ ವಿಶಿಷ್ಟ ಸ್ಥಾನ ವುಂಟು. ತ್ಯಾಗರಾಜರು 'ಸೀತಾಕಲ್ಯಾಣ ವೈಭೋಗಮೇ' ಎಂದು ಹಾಡುತ್ತಾರೆ. ಶ್ರೀರಾಮನ ವಿಶೇಷಣಗಳನ್ನು ಸ್ತುತಿಸುತ್ತಾ ಮತ್ತೆಮತ್ತೆ ಆತನನ್ನು ತಾವು ಆರಾಧಿಸು

---

* ಸಾಹಿತ್ಯದ ಆಧಾರದ ಮೇಲೆ ಈ ಕೀರ್ತನೆಯನ್ನು ಉತ್ಸವ ಸಂಪ್ರದಾಯ ರಚನೆ ಎನ್ನಬಹುದು. ಇದೇ ಅಭಿಪ್ರಾಯವನ್ನು ಕಲ್ಲೂರಿ ವೀರಭದ್ರಶಾಸ್ತ್ರಿಗಳೂ ಹೇಳುತ್ತಾರೆ. ಆದರೆ ಕೆ. ವಿ. ಶ್ರೀನಿವಾಸ ಅಯ್ಯಂಗಾರ್ಯರು ಹಾಗೂ ಓಲೇಟಿ ವೆಂಕಟೇಶ್ವರುಲು ಈ ರಚನೆಯನ್ನು ಉತ್ಸವ ಸಂಪ್ರದಾಯ ರಚನೆಗಳ ಪಟ್ಟಿಯಲ್ಲಿ ಸೇರಿಸುವುದಿಲ್ಲ.

ವಂತೆ ತಿಳಿಸುತ್ತಾರೆ. ಮಂದಸ್ಮಿತನೂ ಮನೋಹರನೂ, ಜಗತ್ತನ್ನೇ ತನ್ನ ಸೂತ್ರದಿಂದ ಆಳಬಲ್ಲ ಸೀತಾವರನನ್ನೂ ಕ್ಷೀರಸಾಗರ ವಿಹಾರನಾದ ರಾಜಾಧಿರಾಜನನ್ನೂ ಅವರು ಪೂಜಿಸುತ್ತಾರೆ.

**ಪಲುಮಾರು ಪೂಜಿಂಚಿ ನೇನಾರಾಧಿಂತು**

**(ನಗುಮೋಮು - ಮಧ್ಯಮಾವತಿ)**

**ಕ್ಷೀರಸಾಗರ ವಿಹಾರ**

**(ಕ್ಷೀರಸಾಗರ ವಿಹಾರ - ಆನಂದ ಭೈರವಿ)**

**ಆರತಿ** : ಮಂಗಳಪ್ರದನಾದ ಸೀತಾರಾಮನಿಗೆ ನೀರಾಜನ ಸೇವೆಯ ಪ್ರಸ್ತಾಪ 'ಪತಿಕಿ ಮಂಗಳ ಹಾರತೀರೇ' (ಆರಭಿ) ಮತ್ತು ಪತಿಕಿ ಹಾರತೀರೆ (ಸುರುಟಿ) ಯಲ್ಲಿವೆ. ಇಲ್ಲಿ ನೀರಾಜನವು ರಾಮನಿಗಷ್ಟೇ ಅಲ್ಲ, ಸೀತಾಮಾತೆಗೂ ಹೌದು.

**ಸದ್ಗುಣವತಿಕಿ ಮಾನವತಿಕಿ**

ದೇವರ ವಿವಿಧ ವಿಶೇಷಣಗಳನ್ನೂ ಅವಯವಗಳನ್ನೂ ಸ್ತುತಿಸಿ ಅವೆಲ್ಲಕ್ಕೂ ತ್ಯಾಗರಾಜರು ಮಂಗಳ ಹಾಡುತ್ತಾರೆ (ಮಾ ರಾಮಚಂದ್ರುನಿಕಿ ಜಯಮಂಗಳಂ - ಕೇದಾರಗೌಳ; ಜಯಮಂಗಳಂ ನಿತ್ಯ ಶುಭಮಂಗಳಂ - ನಾದನಾಮಕ್ರಿಯ ; ಜಾನಕಿ ನಾಯಕ ನೀಕು ಜಯಮಂಗಳಂ - ಧನ್ಯಾಸಿ).

**ಶೋಭಾನೆ** : ಸೀತಾರಾಮರನ್ನು ಒಂದೆಡೆ ಕುಳ್ಳಿರಿಸಿ ಅವರ ದಿವ್ಯಸೌಂದರ್ಯವನ್ನು, ವೀರ್ಯಶೌರ್ಯವನ್ನು, ಲೋಕಾನುಗ್ರಹದೃಷ್ಟಿ ಮೊದಲಾದ ಶೋಭೆಗಳನ್ನು ಕೀರ್ತಿಸುವುದೇ 'ಶೋಭಾನೆ' ಪದಗಳು. ತ್ಯಾಗರಾಜರು ಚಂದ್ರನ ಕಾಂತಿಯನ್ನು ಮೀರಿದ ಕಾಂತಿ ಯುತನಾದ, ಮದಿಸಿದ ಮಾನವ ಸಮೂಹಕ್ಕೆ ಭೀಮನೋಪಾದಿಯಲ್ಲಿರುವ ಶ್ರೀರಾಮ ತಮ್ಮನ್ನು ರಕ್ಷಿಸಬೇಕೆಂದು ಕೇಳಿಕೊಳ್ಳುತ್ತಾ ಶೋಭಾನೆ ಪದ ಹಾಡುತ್ತಾರೆ.

**ಶೋಭಾನೆ ಶೋಭಾನೆ**
**ವದನದ್ಯುತಿ ಜಿತಸೋಮ ವಸುಧಾಮಾನಸಕಾಮ**
**ಮದಮಾನವ ಗಣಭೀಮ ಮಾಂ ಪಾಹಿ ಶ್ರೀರಾಮ**

**(ಶೋಭಾನೆ - ಪಂತುವರಾಳಿ)**

**ಶಯನೋತ್ಸವ** : ಅರಣ್ಯವಾಸ, ರಾವಣಸಂಹಾರ, ವಿಭೀಷಣನ ಪಟ್ಟಾಭಿಷೇಕ ಮೊದಲಾದ ಘನ ಕಾರ್ಯಗಳಿಂದ ಬಳಲಿದ ಶ್ರೀರಾಮನಿಗೆ ಆಯಾಸ ಪರಿಹಾರವಾಗಲು ಶಯನಿಸುವಂತೆ ತ್ಯಾಗರಾಜರು ಪ್ರಾರ್ಥಿಸುತ್ತಾರೆ.

**ಬಡಲಿಕದೀರ ಪವ್ವಳಿಂಚವೇ**

**(ಬಡಲಿಕದೀರ - ರೀತಿಗೌಳ)**

**ಶ್ರೀರಾಮರಾಮರಾಮ ಶ್ರೀಮಾನಸಾಬ್ಧಿಸೋಮ**
**ನಾರಾಯಣಾಪ್ತಕಾಮ ನಳಿನಾಕ್ಷ ಪವ್ವಳಿಂಚು**

ರಾಮನ ಶಯನದ ವೇಳೆಯಲ್ಲಿ ಜಾನಕಿಯು ಬಂಗಾರದ ಬೀಸಣಿಗೆ ಹಿಡಿದು ಗಾಳಿಬೀಸಲು ಸಿದ್ಧಳಾಗಿದ್ದಾಳೆಂದೂ ಪೂರ್ಣ ಭಕ್ತಿಯಿಂದ ಪೂಜಿಸುವಳೆಂಬುದೂ ತ್ಯಾಗರಾಜರ ಭಾವನೆ.

**ಜಾನಕಿ ಚೆಟ್ಟಬಟ್ಟೆ ಕನಕಮೌ ಸುರುಟಬಟ್ಟೆ ಗಾಚಿನದಿ**

(ಶ್ರೀರಾಮರಾಮ)*

ತ್ಯಾಗರಾಜರು ಇನ್ನೊಂದು ರಚನೆಯಲ್ಲಿ ರಾಮನ ಘನಕಾರ್ಯಗಳ ಪ್ರಸ್ತಾಪ ಮಾಡದೆ, ನೈವೇದ್ಯಗಳನ್ನು ಸ್ವೀಕರಿಸಿ ತಾಂಬೂಲಸೇವನೆ ಮಾಡಿ ಸುಗಂಧ ಪೂಸಿ ಕೊಂಡು ಪವಡಿಸುವಂತೆ ಹೇಳುತ್ತಾರೆ.

**ಪೂಲಪಾನ್ಪುಮೀದ ಬಾಗ ಪೂರ್ಣಪವ್ವಳಿಂಚು**

(ಪೂಲಪಾನ್ಪು - ಆಹಿರಿ)

ಇಲ್ಲಿ ದೇವರಿಗೆ ಮಲ್ಲೆ ಹೂವಿನ ಶಯ್ಯೆಯನ್ನು ಸಿದ್ಧಪಡಿಸಿ ಬೇರೊಂದು ರಚನೆ ಯಲ್ಲಿ ಶೇಷಶಯ್ಯೆಯನ್ನು ಸಿದ್ಧಪಡಿಸುತ್ತಾರೆ.

**ಉಯ್ಯಾಲೋತ್ಸವ** : ದಾಸಭಕ್ತಿ ಸಂಪ್ರದಾಯದಲ್ಲಿ ಉಯ್ಯಾಲೋತ್ಸವವು ಬಹಳ ರಮ್ಯವಾದುದು. ತ್ಯಾಗರಾಜರು ವರ್ಣಿಸುವ ಉಯ್ಯಾಲೋತ್ಸವದಲ್ಲಿ ಬ್ರಹ್ಮಾದಿ ದೇವತೆಗಳೂ, ಮುನಿಗಳೂ, ನಾರದಾದಿ ಪರಮಭಾಗವತರೂ ದೇವರನ್ನು ಸಂಕೀರ್ತನೆ ಮಾಡುತ್ತಿದ್ದಾರೆ. ಇಂತಹ ದಿವ್ಯಸನ್ನಿವೇಶದಲ್ಲಿ ಉಯ್ಯಾಲೆಯಾಡುತ್ತಾ ತಮ್ಮ ಆರಾಧ್ಯದೈವದ ರೂಪ ಹೊಂದಿದ ದೇವರು (ಶ್ರೀರಾಮ) ಉಯ್ಯಾಲೆಯಾಡಬೇಕೆಂದು ಪ್ರಾರ್ಥಿಸುತ್ತಾರೆ (ಉಯ್ಯಾಲಲೂಗವಯ್ಯ - ನೀಲಾಂಬರಿ).

**ಲಾಲಿ ಮತ್ತು ಜೋಜೋ** : ಲಾಲಿಯೂಗವೇ (ನೀಲಾಂಬರಿ), ರಾಮಶ್ರೀರಾಮ ಲಾಲಿ (ಶಂಕರಾಭರಣ), ಲಾಲಿ ಲಾಲಿಯನಿ ಊಚೇರಾ (ಹರಿಕಾಂಬೋಜಿ), ಲಾಲಿ ಲಾಲಯ್ಯ ಲಾಲಿ (ಕೇದಾರಗೌಳ) ಇವು ತ್ಯಾಗರಾಜವಿರಚಿತ ಲಾಲಿ ಹಾಡುಗಳು. ಜೋಜೋ ರಾಮ (ರೀತಿಗೌಳ) ಜೋಲಿ ಹಾಡು. ಶಯನ ಸೇವೆಯಲ್ಲಿ ಉಯ್ಯಾಲೆ ಯನ್ನು ತೂಗುತ್ತಾ ಹಾಡುವುದು ಲಾಲಿಹಾಡು ಎಂದೂ, ತಟ್ಟುತ್ತಾ ಹಾಡುವುದು ಜೋಲಿಹಾಡು ಎಂದೂ ಹೇಳುವುದುಂಟು. ಜೋಲಿ ಹಾಡಿನಲ್ಲಿ ಕೇವಲ ವಿಶೇಷಣಗಳೇ ಇರುವುದು ಸಾಮಾನ್ಯ ಸಂಪ್ರದಾಯ. ತ್ಯಾಗರಾಜರು ದೇವರನ್ನು ದೇವದೇವನೆಂದು ಕರೆಯುತ್ತಾ, ರಾಜರಾಜನೆಂದು ಹೊಗಳುತ್ತಾ ರಾಮರಾಮನೆಂದು ಸ್ತುತಿಸುತ್ತಾ ಪ್ರೀತಿ ಯಿಂದ ಲಾಲಿ ಹಾಡುತ್ತಾರೆ (ಲಾಲಿಲಾಲಿಯನಿಯೂಚೇರಾ). ಭಾಗವತರ ಸೇವೆಯಲ್ಲಿ

---

* ಈ ರಚನೆಗೆ ರಾಗವ್ಯತ್ಯಾಸ ಕಾಣಬರುತ್ತದೆ. ನೀಲಾಂಬರಿಯೆಂದು ಕೆಲವೆಡೆ, ಗೋಪಿಕಾ ವಸಂತವೆಂದು ಕೆಲವೆಡೆ ಹೇಳಲಾಗಿದೆ. ನೋಡಿ, ತ್ಯಾಗರಾಜ ದಿವ್ಯನಾಮ ಸಂಕೀರ್ತನಲು, ಉತ್ಸವ ಸಂಪ್ರದಾಯ ಕೀರ್ತನಲು–ಸ್ವರಕಲ್ಪನೆ–ವೋಲೇಟಿ ವೆಂಕಟೇಶ್ವರುಲು. ಆಂಧ್ರ ಪ್ರದೇಶ ಸಂಗೀತ ನಾಟಕ ಅಕಾಡೆಮಿ, ೧೯೭೬, ಪು. ೧೬೦, ಮತ್ತು ಶ್ರೀ ತ್ಯಾಗರಾಜಸ್ವಾಮಿ ಕೀರ್ತನಲು, ಶ್ರೀ ಕೆ. ವಿ. ಶ್ರೀನಿವಾಸ ಅಯ್ಯಂಗಾರ್.

ಬಳಲಿದ ದೇವರಿಗೆ ಅಪರಂಜಿಯಿಂದ ಅಲಂಕರಿಸಲ್ಪಟ್ಟ ಮಂಚವಿರಿಸಿ ಅದರ ಮೇಲೆ ಜಾಜಿ ಹೂಗಳನ್ನು ಹರಡಿದ್ದಾರೆ (ಲಾಲಿ ಲಾಲಯ್ಯ). ತಮ್ಮ ಪಾಲಿನ ದೇವರಾದ ವನಮಾಲಿಯನ್ನು ಶಯನಿಸುವಂತೆ ಪ್ರಾರ್ಥಿಸುತ್ತಾರೆ (ಲಾಲಿಯೂಗವೇ). ದಶರಥ ಬಾಲ, ರಘುಕುಲತಿಲಕ, ನಿರ್ಗುಣರೂಪ, ಸುಗುಣಕಲಾಪ, ರವಿಶಶಿನಯನ, ಫಣಿವರ ಶಯನ, ಮೃದುತರಭಾಷ, ಮಂಜುಲವೇಷ ಮುಂತಾಗಿ ಸ್ತುತಿಸಿ ಆತನಿಗೆ ಜೋಜೋ ಹಾಡುತ್ತಾರೆ (ಜೋಜೋ ರಾಮ).

**ಮಂಗಳ** : ಅದ್ಭುತ ಕಾರ್ಯಗಳನ್ನೆಸಗಿದ ಸುಂದರ ಶರೀರಿಯಾದ ರಾಮನಿಗೆ ಆತನ ವಿವಿಧ ಅಂಗಗಳು, ಅಲಂಕಾರ ಹಾಗೂ ಆಭರಣಗಳಿಗೆ ತ್ಯಾಗರಾಜರು ಮಂಗಳ ಹಾಡುತ್ತಾರೆ. ಇವು ಮೋಹನ, ಸುರುಟಿ, ಘಂಟಾ, ಧನ್ಯಾಸಿ, ಪಂತುವರಾಳಿ, ಮಧ್ಯಮಾವತಿ, ಕೇದಾರಗೌಳ, ನಾದನಾಮಕ್ರಿಯ ಮುಂತಾದ ರಾಗಗಳಲ್ಲಿವೆ.

ದೇವರ ದಿವ್ಯಫಾಲ ಕಪೋಲಗಳಿಗೆ, ಮಂದಹಾಸಕ್ಕೆ, ಯೌವ್ವನಕ್ಕೆ, ಮೃದು ವಚನಕ್ಕೆ, ಜಾಣತನಕ್ಕೆ, ಕಣ್ಗಳಿಗೆ, ಕಿರೀಟ-ಉಂಗುರಗಳಿಗೆ ಒಟ್ಟಾರೆ ದೈವಸಂಬಂಧಿತ ಸಕಲವೂ ಮಂಗಳಕರವೆಂಬ ದೃಷ್ಟಿಯಿಂದ ತ್ಯಾಗರಾಜರು ಮಂಗಳ ಹಾಡುತ್ತಾರೆ.

ದಿವ್ಯನಾಮ ಕೀರ್ತನೆಗಳಿಗಿಂತ ಉತ್ಸವ ಸಂಪ್ರದಾಯ ಕೀರ್ತನೆಗಳನ್ನು ಸುಲಭವಾಗಿ ಗುರುತಿಸಬಹುದು. ಈ ರಚನೆಗಳಲ್ಲಿ ದೇವರಿಗೆ ಅರ್ಪಿಸುವ ವಿವಿಧ ಉಪಚಾರಗಳ ಪ್ರಸ್ತಾಪ ಬಹುತೇಕ ನೇರವಾಗಿರುವುದು ಇದಕ್ಕೆ ಕಾರಣ. ಈ ಗುಂಪಿನ ರಚನೆಗಳಲ್ಲಿ ಧಾತುವು ಸಾಮಾನ್ಯವಾಗಿ ಸರಳವಾಗಿರುವುದಾದರೂ ವಿಶೇಷ ಗಮಕಯುಕ್ತವಾಗಿ ಪ್ರಯೋಗಿಸಬೇಕಾದ ನೀಲಾಂಬರಿ, ಯದುಕುಲಕಾಂಬೋಜಿಯಂತಹ ಪ್ರಶಾಂತ ರಾಗಗಳೂ ಅಳವಟ್ಟಿರುವುದನ್ನು ಗಮನಿಸಬಹುದು. ಈ ಗುಚ್ಛದ ರಚನೆಗಳು ಬಹುತೇಕ ಶಾಂತರಸ ಪ್ರಧಾನ ರಾಗಗಳಲ್ಲಿವೆ. ಪಲ್ಲವಿ ಮತ್ತು ಚರಣಗಳನ್ನು ಮಾತ್ರ ಹೊಂದಿದ ರಚನೆಗಳೂ (ಕ್ಷೀರಸಾಗರವಿಹಾರ - ಆನಂದಭೈರವಿ; ನಗುಮೋಮು - ಮಧ್ಯಮಾವತಿ), ಪಲ್ಲವಿ, ಅನುಪಲ್ಲವಿ ಹಾಗೂ ಚರಣಗಳನ್ನುಳ್ಳ ರಚನೆಗಳೂ ಈ ಗುಂಪಿನಲ್ಲಿವೆ (ಶೋಭಾನೆ - ಪಂತುವರಾಳಿ; ಪತಿಕಿ ಹಾರತಿರೇ - ಸುರುಟಿ). ಒಂದೇ ಧಾತುವಿಗೆ ಪಲ್ಲವಿ ಮತ್ತು ಚರಣಗಳನ್ನು ಹಾಡುವಂತಹ (ಜಾನಕಿನಾಯಕ- ಧನ್ಯಾಸಿ; ನಾಪಾಲಿ ಶ್ರೀರಾಮ - ಶಂಕರಾಭರಣ) ಹಾಗೂ ಬೇರೆಬೇರೆ ಧಾತುಗಳಿಗೆ ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳನ್ನು ಹಾಡುವಂತಹ ರಚನೆಗಳೂ ಈ ಗುಚ್ಛದಲ್ಲಿ ಕಾಣಬರುತ್ತವೆ. (ಲಾಲಿಯಾಗವೇ-ನೀಲಾಂಬರಿ)

ಮಂಗಳ ಕೀರ್ತನೆಗಳು ಇಂದು ಪ್ರಯೋಗದಲ್ಲಿರುವಂತೆ ಸುರುಟಿ, ಸೌರಾಷ್ಟ್ರ, ಮಧ್ಯಮಾವತಿಯಂತಹ ರಾಗಗಳಲ್ಲೇ ಅಲ್ಲದೆ ನಾದನಾಮಕ್ರಿಯ, ಕೇದಾರಗೌಳದಂಥ ರಾಗಗಳಲ್ಲೂ ಅಳವಟ್ಟಿವೆ. ಇದು ಅಂತಹ ಸಂಪ್ರದಾಯ ಅಂದು ರೂಢಿಯಲ್ಲಿದ್ದುದರ ಕುರುಹಾಗಿದೆ. ದಿವ್ಯನಾಮ ಅಥವಾ ಉತ್ಸವ ಸಂಪ್ರದಾಯ ರಚನೆಗಳಲ್ಲಿ ಶೃಂಗಾರ ಭಾವ ಕಾಣಬರುವುದು ಅಪರೂಪ. ಆದಿ, ರೂಪಕ ಹಾಗೂ ಛಾಪುತಾಳಗಳು

ಈ ರಚನೆಗಳಿಗೆ ಅಧಿಕವಾಗಿ ಅಳವಟ್ಟಿವೆ. ಈ ರಚನೆಗಳಲ್ಲಿ ಸಾಹಿತ್ಯವೇ ಮುಖ್ಯವಾದ್ದರಿಂದ ಅದಕ್ಕೆ ಅಗತ್ಯವಿದ್ದಷ್ಟು ಮಾತ್ರ ರಾಗ ಮತ್ತು ಲಯಗಳು ಅಳವಟ್ಟಿವೆ. ಒಂದಕ್ಕಿಂತ ಹೆಚ್ಚಿನ ಚರಣಗಳಿರುವುದಾದರೂ ಅವುಗಳ ಸಂಖ್ಯೆ ನಿಗದಿತವಿಲ್ಲ. ಒಂದು ಚರಣದಿಂದ ೧೫ ಚರಣಗಳುಳ್ಳ, ಕಡೆಗೆ ೨೩ ಚರಣಗಳುಳ್ಳ ರಚನೆಗಳೂ ಉಂಟು. (ಪತಿಕಿಹಾರತೀರೇ - ಆರಭಿ; ರಾಮ ರಾಮ ರಾಮ ಲಾಲಿ - ಶಹನ).

ಒಟ್ಟಾರೆ ಉಪನಿಷತ್ತುಗಳ ಮತ್ತು ಬ್ರಹ್ಮಸೂತ್ರಗಳ ಇಂಗಿತವನ್ನು ಅರಿಯಲು ಅಸಾಧ್ಯವಾಗಿ, ಯಜ್ಞಯಾಗಾದಿಗಳು ದುಸ್ತರವೆನಿಸಿದಾಗ ಪುರಾಣಗಳು ಸುಲಭಹಾದಿಯನ್ನು ತೋರಿದವು. ಯಜ್ಞಯಾಗಾದಿಗಳು ಯಾವ ಫಲವನ್ನು ನೀಡುವುದೋ ಅದೇ ಫಲವನ್ನು ಅಥವಾ ಅದಕ್ಕಿಂತ ಮಿಗಿಲಾದ ಫಲವನ್ನು ನಾಮಸಂಕೀರ್ತನೆ, ಭಜನೆಗಳಿಂದಲೂ ಪಡೆಯಬಹುದೆಂಬ ನಂಬುಗೆ ಮೊದಲಾಯಿತು. ಪುರಾಣಯುಗದಲ್ಲೇ ವಿಗ್ರಹಾರಾಧನೆಯೂ ಮಹೋನ್ನತ ಸ್ಥಿತಿಗೇರಿತು. ಕ್ಲಿಷ್ಟ ಛಂದಸ್ಸಿನ ಮಂತ್ರೋಚ್ಚಾರದೊಂದಿಗೆ ಪೂಜಿಸುವುದಕ್ಕಿಂತ, ಅದೇ ಅರ್ಥ ನೀಡುವ ಪ್ರಾಂತೀಯಭಾಷಾರಚನೆಗಳೂ ಸೃಷ್ಟಿಗೊಂಡವು. ಇವುಗಳ ಮಾದರಿಯನ್ನೇ ನಾವು ತ್ಯಾಗರಾಜರ ಉತ್ಸವ ಸಂಪ್ರದಾಯ ರಚನೆಗಳಲ್ಲಿ ಕಾಣುವುದು.

**ಪ್ರಕ್ಷಿಪ್ತ ರಚನೆಗಳು**

ನೀದುಚರಣಮುಲೆ (ಸಿಮ್ಹೇಂದ್ರಮಧ್ಯಮ), ನತಜನ ಪರಿಪಾಲ(ಸಿಮ್ಹೇಂದ್ರ ಮಧ್ಯಮ), ಪರಾಮುಖಮೇಲರಾ (ಸುರುಟಿ), ಅಭಿಮಾನಮೆನ್ನಡು (ವಿವರ್ಧಿನಿ) ಮುಂತಾದ ಕೆಲವು ರಚನೆಗಳು ತ್ಯಾಗರಾಜಾಂಕಿತವಾಗಿರುವ, ಆದರೆ ತ್ಯಾಗರಾಜ ವಿರಚಿತವಲ್ಲದ ರಚನೆಗಳೆಂಬ ಅಭಿಪ್ರಾಯ ಒಂದುಂಟು. ಇವುಗಳನ್ನು ಆನಂತರದ ವಾಗ್ಗೇಯಕಾರರು ರಚಿಸಿ, ತ್ಯಾಗರಾಜರ ರಚನೆಗಳೆಂದು ಪ್ರಚಾರಕ್ಕೆ ತಂದಿರುವರೆಂಬ ಸಂದೇಹವುಂಟು.[೧೨] ಇಂತಹ ಸಾಹಿತ್ಯವನ್ನೇ 'ಪ್ರಕ್ಷಿಪ್ತ' ಸಾಹಿತ್ಯ ಎನ್ನುವುದು. ವಾಸ್ತವವಾಗಿ ಪ್ರಕ್ಷಿಪ್ತ ಎಂಬುದಕ್ಕೆ 'ಹೊಸದಾಗಿ ಸೇರಿಸಲ್ಪಟ್ಟ' ಎಂಬುದು ಅರ್ಥ.[೧೩] ಪ್ರಕ್ಷಿಪ್ತ ರಚನೆಗಳ ಹಿನ್ನೆಲೆಯಲ್ಲಿ ಸದುದ್ದೇಶವೇ ಇರಲಿ ಅಥವಾ ದುರುದ್ದೇಶವೇ ಇರಲಿ, ಪರಿಣಾಮವಂತೂ ಗೊಂದಲವಷ್ಟೆ. ಏಕೆಂದರೆ ಇಲ್ಲಿ ವಾಸ್ತವಾಂಶಕ್ಕೆ ಧಕ್ಕೆಬರುತ್ತದೆ. ಹೀಗಾಗಿ ತ್ಯಾಗರಾಜಕೃತ ರಚನೆ ಯಾವುದು ಅಥವಾ ತ್ಯಾಗರಾಜಾಂಕಿತವಾದ ಇತರರ ಕೃತಿ ಯಾವುದೆಂಬುದು ಖಚಿತವಾಗಿ ಹೇಳುವುದು ಕಷ್ಟವೆನಿಸುತ್ತದೆ. ತ್ಯಾಗರಾಜರ ಶೈಲಿಯೇನೋ ಸರಳವಾಗಿದ್ದು ಭಕ್ತಿಭಾವ ತೀವ್ರತೆಯಿಂದ ಕೂಡಿ ಆತ್ಮೀಯವೆನಿಸುವ ಅನುಭವ ನೀಡುವುದು ನಿಜವೇ. ಇಂತಹ ರಚನೆಗಳನ್ನು ಹೆಚ್ಚುಹೆಚ್ಚು ಪ್ರಯೋಗಿಸುತ್ತಾ ಬಂದ ಸಂಗೀತಜ್ಞರು, ಇದರಿಂದ ಸ್ಫೂರ್ತಿಗೊಂಡು ತ್ಯಾಗರಾಜರ ಶೈಲಿಯನ್ನು ಅನುಸರಿಸಿ ತಾವೂ ರಚನೆಗಳನ್ನು ಸೃಷ್ಟಿಸಿದ್ದರೂ ಆಶ್ಚರ್ಯವೇನಿಲ್ಲ. ಆದರೆ ಇಂತಹ ಸೇರ್ಪಡೆಯು ಗೊಂದಲವನ್ನಂತೂ ಉಂಟುಮಾಡಿರುವುದು ನಿಜ.

ಪ್ರಕ್ಷಿಪ್ತ ರಚನೆಗಳ ಹಿನ್ನಲೆಯಲ್ಲಿ ನಾವು ಎರಡು ಅಂಶಗಳನ್ನು ಊಹಿಸಬಹುದು.

ಒಂದು, ರಚನಕಾರನಿಗೆ ತ್ಯಾಗರಾಜರಲ್ಲಿದ್ದ ಭಕ್ತಿನಮ್ರತೆಗಳು. ಎರಡು, ಸ್ವಾರ್ಥ. ಮೊದಲನೆಯದಾಗಿ, ತ್ಯಾಗರಾಜರ ಅನುಚರರೇ ತ್ಯಾಗರಾಜರೆಡೆಗೆ ತಮ್ಮ ಭಕ್ತಿಯನ್ನು ತೋರುವ ಸಲುವಾಗಿ, ಭಾವುಕತೆಯಿಂದ ಮೂಡಿಬಂದ ತಮ್ಮ ರಚನೆಗಳಿಗೂ ತ್ಯಾಗ ರಾಜಾಂಕಿತವನ್ನೇ ನೀಡಿ, ತ್ಯಾಗರಾಜರ ಕೃತಿಭಂಡಾರಕ್ಕೆ ಮತ್ತಷ್ಟು ರಚನೆಗಳನ್ನು ಸೇರಿಸಿ ತಾವು ಕೃತಕೃತ್ಯರಾದೇವೆಂಬ ಭಾವಹೊಂದಿರಬಹುದು. ಎರಡನೆಯದಾಗಿ, ತಮ್ಮ ರಚನೆಯನ್ನು ತಾವು ಮಾತ್ರ ಪ್ರಯೋಗಿಸುವಂತಾಗದೆ. ಇತರರೂ ಅವು ತ್ಯಾಗರಾಜರ ರಚನೆಗಳೆಂದೇ ತಿಳಿದು ಹೆಚ್ಚುಹೆಚ್ಚು ಪ್ರಯೋಗಿಸಲಿ ಎಂಬ ದುರಾಸೆಯಿಂದ ಅಂಕಿತ ವ್ಯತ್ಯಾಸಗೊಳಿಸಿ, ತ್ಯಾಗರಾಜರಿಗೇ ಅವನ್ನೂ ಆರೋಪಿಸಿರಬಹುದು.

ಆದರೆ ಹೀಗೆ ಕರ್ತೃತ್ವ ಆರೋಪ ಮಾಡುವುದರಿಂದ ಉಂಟಾಗುವ ಲಾಭವಾದರೂ ಏನು ಎಂಬುದು ಮುಂದಿನ ಪ್ರಶ್ನೆ. ಇತರರ ರಚನೆಗಳು ಸಂಗೀತ ದೃಷ್ಟಿಯಿಂದಾಗಲೀ, ಸಾಹಿತ್ಯದ ದೃಷ್ಟಿಯಿಂದಾಗಲೀ ಎಷ್ಟೇ ಅದ್ಭುತವಾಗಿದ್ದು ತ್ಯಾಗರಾಜರ ಶೈಲಿಯನ್ನೇ ಅನುಸರಿಸಿ ರಚಿತವಾಗಿರಬಹುದು. ಆದರೆ ಇಂತಹ ರಚನೆಗಳನ್ನೂ ತ್ಯಾಗರಾಜರ ಕೃತಿಸಮೂಹಕ್ಕೆ ಸೇರಿಸುವುದರಿಂದ ತ್ಯಾಗರಾಜರ ಹಿರಿಮೆಯನ್ನೇನೂ ಇದರಿಂದ ಅಳೆಯಬೇಕಾಗಿಲ್ಲ. ಹಾಗೆಯೇ ಅಂತಹ ಅದ್ಭುತ ರಚನೆಗಳನ್ನು ಸ್ವರಚಿತವೆಂದು ದಿಟ್ಟತನದಿಂದ ಕೃತಿಕರ್ತ ಇತರರೆದುರು ಪ್ರಕಟಪಡಿಸಲೂ ಆಗುವುದಿಲ್ಲ. ಆದರೆ ಮುಂದಿನವರು ತ್ಯಾಗರಾಜಾಂಕಿತವಿರುವುದರಿಂದ ಇದೂ ತ್ಯಾಗರಾಜರ ರಚನೆಗಳಲ್ಲಿ ಒಂದಿರಬಹುದೆಂದು ತಿಳಿಯಬಹುದು ಅಥವಾ ಶೈಲಿಧೋರಣೆ, ಭಾವವೈವಿಧ್ಯದಿಂದಾಗಿ ತ್ಯಾಗರಾಜರದಲ್ಲ ಎಂದೂ ವಾದಿಸಬಹುದು. ಇದೇನೇ ಆದರೂ ಇಂತಹ ಪ್ರಕ್ಷಿಪ್ತ ರಚನೆಗಳು ಸಂದೇಹಕ್ಕೆ ಎಡೆಮಾಡುವುದಂತೂ ನಿಜ. ಇವುಗಳ ಪರಿಹಾರ ಅಷ್ಟು ಸುಲಭಸಾಧ್ಯವಲ್ಲ. ಆದರೂ ಕೆಲವು ಗ್ರಂಥಗಳು ತ್ಯಾಗರಾಜಾಂಕಿತವುಳ್ಳ ಕೆಲವು ಸಂದೇಹಾಸ್ಪದ ರಚನೆಗಳಿಗೆ ಕರ್ತೃಗಳಾರೆಂದು ತಿಳಿಸುತ್ತವೆ. ಮತ್ತೆ ಕೆಲವು ಪರಿಹಾರ ಕಾಣದೆ ಸಂಶಯದಲ್ಲೇ ನಿಂತಿವೆ. ಇಂತಹ ಕೆಲವು ಪ್ರಕ್ಷಿಪ್ತ ರಚನೆಗಳ ಪಟ್ಟಿಯನ್ನು ಈ ಮುಂದೆ ನೀಡಲಾಗಿದೆ.

೧. ವಿನತಾಸುತವಾಹನುಡೈ - ಹರಿಕಾಂಬೋಜಿ

೨. ನೀದು ಚರಣಮುಲೆ - ಸಿಮ್ಹೇಂದ್ರ ಮಧ್ಯಮ

೩. ನತಜನಪರಿಪಾಲ - ಸಿಮ್ಹೇಂದ್ರ ಮಧ್ಯಮ

ಮೇಲಿನವು ಕೆ. ವಿ. ಶ್ರೀನಿವಾಸ ಅಯ್ಯಂಗಾರ್ಯರಿಂದ ರಚಿತವಾಗಿವೆ. ಆದರೆ ತ್ಯಾಗರಾಜಾಂಕಿತವಿದೆ.

೪. ಪರಾಮುಖಮೇಲರಾ - ಸುರುಟಿ

೫. ಅಭಿಮಾನಮೆನ್ನಡು—ವಿವರ್ಧಿನಿ

ಮೇಲಿನವು ಮನ್ನಾರ್‌ಗುಡಿ ರಾಜಗೋಪಾಲ ಅಯ್ಯರ್ ವಿರಚಿತವಾದವು.

೬. ದಿನಮೇ ಸುದಿನಮು - ಲತಾಂಗಿ

ಇದು ಗಿರೀಶ ಅಯ್ಯರ್ ರಚನೆ ಎಂಬ ಊಹೆಯಿದೆ.[೧೪]

೭. ವೆಡಲೆನು ಕೋದಂಡಪಾಣಿ - ತೋಡಿ - ತಂಜಾವೂರು ಕೃಷ್ಣ ಭಾಗವತರು
೮. ಸದಾಭಜಿಂಪವೇ - ತೋಡಿ
೯. ರಕ್ಷಿಂಪವೇ ಶ್ರೀರಜತಗಿರಿನಿಲಯ - ಮಾಯಾಮಾಳವಗೌಳ
೧೦. ಆಪದ್ಬಾಂದವುಡು - ಸಾವೇರಿ
೧೧. ಶ್ರೀ ಗಣನಾಥಂ ಭಜಾಮ್ಯಹಂ - ಕನಕಾಂಗಿ
೧೨. ಪುಷ್ಪಪುರನಿವಾಸ - ವಸಂತ
೧೩. ವಿಧಿಯೇಮಿ ಸೇಯುದುರಾ - ಪಂತುವರಾಳಿ
೧೪. ವೇದಪುರೀಶ ಶೋಧನ ಚೇಯಕು - ಪೂರ್ವಿಕಲ್ಯಾಣಿ
೧೫. ನೀ ಪರಾಕ್ರಮಮು - ಷಣ್ಮುಖಪ್ರಿಯ
೧೬. ಪರಿಪೂರ್ಣಕಾಮ ಸರಿಲೇನಿವಾಡ - ಹಂಸಭ್ರಮರಿ
೧೭. ತರಮಾ ನೀ ಮಹಿಮಪೊಗಡ - ಕಲ್ಯಾಣಿ
೧೮. ಸುಂದರಿ ನೀ ದಿವ್ಯರೂಪಮು - ಕಲ್ಯಾಣಿ (ಭಾಗಶಃ ಪ್ರಕ್ಷಿಪ್ತವೆಂಬ ಅಭಿಪ್ರಾಯವಿದೆ. ಇದರಂತೆಯೇ ವಾಸುದೇವಯನಿ - ಕಲ್ಯಾಣಿ ರಚನೆಯೂ ಭಾಗಶಃ ಪ್ರಕ್ಷಿಪ್ತವೆನ್ನುವುದುಂಟು).[೧೫]
೧೯. ಬ್ರಹ್ಮಶಿರಖಂಡನಮು - ಕಲ್ಯಾಣಿ
೨೦. ದರ್ಶಿಂಚುಟ ತೆಲಿಸೆನುರಾ - ಮೋಹನ
೨೧. ಮಾರವೈರಿ ರಮಣಿ - ನಾಸಿಕಾಭೂಷಣಿ. (ಇದು ತ್ಯಾಗರಾಜಾಂಕಿತವಿಲ್ಲದಿರುವ, ಆದರೆ ತ್ಯಾಗರಾಜರದೆಂದೇ ಪ್ರಚಲಿತವಾದ ಕೃತಿ[೧೬] ಅಂಕಿತ ಉಳ್ಳ ಚರಣ ರೂಢಿತಪ್ಪಿರಲೂಬಹುದು).
೨೨. ಸರಸೀರುಹನಯನೇ ಸರಸಿಜಾಸನೇ - ಅಮೃತವರ್ಷಿಣಿ (ಸಾಮಾನ್ಯವಾಗಿ ತ್ಯಾಗರಾಜರ ರಚನೆಗಳಲ್ಲಿ ರಾಗಮುದ್ರೆ ಇರುವುದಿಲ್ಲ. ಆದರೆ ಈ ರಚನೆಯಲ್ಲಿ ರಾಗಮುದ್ರೆ ಕಾಣಬರುತ್ತದೆ).[೧೭]
೨೩. ಓ ಧವಳೇಶ್ವರ ಪರಾತ್ಪರ ಶಂಕರ - ನಾಟಕುರಂಜಿ
೨೪. ಭಿಕ್ಷಾಟನ ವೇಷಮು ನೀಕೇಲನಯ್ಯಾ - ಸುರುಟಿ
೨೫. ಶಿವಾಪರಾಧಮು ಸೇಯರಾದು - ಸಾಮ
೨೬. ಸಾರಸನೇತ್ರಾಪಾರಗುಣ - ಶಂಕರಾಭರಣ
೨೭. ನೇಚೇಯು ವಿಚಿತ್ರಮುಲು - ನೀಲಾಂಬರಿ

ಇವಲ್ಲದೇ ಇನ್ನೂ ಕೆಲವನ್ನು ಪ್ರಕ್ಷಿಪ್ತವಿರಬಹುದೆಂದು ಊಹಿಸಲಾಗಿದೆ. 'ವಿಧಿಯೇಮಿ ಚೇಯುದುರಾ', 'ನೀ ಪರಾಕ್ರಮಮು', 'ದರ್ಶಿಂಚುಟ', 'ಶಿವಾಪರಾಧಮು' ಈ ರಚನೆಗಳಲ್ಲಿ ಶೈಲಿಯು ತ್ಯಾಗರಾಜರ ಶೈಲಿಗಿಂತ ಭಿನ್ನವಾಗಿದೆ. 'ವಿಧಿಯೇಮಿ ಚೇಯುದುರಾ' ಕೃತಿಯ ಚರಣದ ಪಾದಗಳು ಅಸಮನಾಗಿವೆ.[೧೮] 'ನೀ ಪರಾಕ್ರಮಮು',

'ಶಿವಾಪರಾಧಮು' ಕೃತಿಗಳಲ್ಲಿ ರಾಗಭಾವ ಮತ್ತು ಭಕ್ತಿಧೋರಣೆಗಳಿದ್ದರೂ ಯತಿ ಪ್ರಾಸಾದಿ ಸಾಹಿತ್ಯ ಶೈಲಿಯಲ್ಲಿ ಹೋಲಿಕೆಯಿಲ್ಲ.[೯]

ಆದರೆ ಪ್ರಕ್ಷಿಪ್ತವೆಂದಿದ್ದರೂ 'ವೆಡಲೆನು ಕೋದಂಡಪಾಣಿ' ಕೃತಿಯಲ್ಲಿರುವಂತಹ ಮಧುರ ದೃಶ್ಯಚಿತ್ರಣ ಹಾಗೂ ರಾಗಭಾವಗಳ ಅಭಿವ್ಯಕ್ತಿ ತ್ಯಾಗರಾಜರಂತಹ ಅನುಭಾವಿಗಳಿಗಲ್ಲದೆ ಇತರರಿಗೆ ಸಾಧ್ಯವೇ ಎಂಬ ಅನುಮಾನ ಮೂಡಿ ಆಶ್ಚರ್ಯವಾಗುತ್ತದೆ. ವಿಶ್ವಾಮಿತ್ರನ ಯಾಗಸಂರಕ್ಷಣೆ ಕಾರ್ಯ ಮುಗಿಸಿ, ದುಷ್ಟಶಿಕ್ಷೆ ಮಾಡಿ, ವಸುಧೆಯ ಭಾರವನ್ನು ಕಡಿಮೆ ಮಾಡಿ ಬರುತ್ತಿರುವ ರಾಮನ ಚಿತ್ರಣ ಇಲ್ಲಿದೆ. ರಾಮನನ್ನು ನೋಡಿದ ಪುರಜನರು ಸಂತೋಷದಿಂದ ಹಿಗ್ಗಿ ಆತನನ್ನು ಸ್ತುತಿಸುತ್ತಿದ್ದಾರೆ. ಆತನೊಂದಿಗೆ ಸೌಮಿತ್ರಿಯೂ ಇದ್ದಾನೆ ಎಂಬ ಸುಂದರ ಚಿತ್ರಣ ಈ ರಚನೆಯಲ್ಲಿದೆ. ಈ ದೃಶ್ಯವನ್ನು ಅಭಿವ್ಯಕ್ತಿಸಿರುವ ಶೈಲಿಯಂತೂ ಸರಳಸುಂದರವಾಗಿದ್ದು ತ್ಯಾಗರಾಜರ ಶೈಲಿಯನ್ನೇ ಪೂರ್ಣವಾಗಿ ಹೋಲುತ್ತದೆ. ಭಾವಕ್ಕೂ, ಶಬ್ದ ಪ್ರಯೋಗಕ್ಕೂ ಅಚ್ಚುಕಟ್ಟಾದ ಸಾಮಂಜಸ್ಯ ಎದ್ದುಕಾಣುತ್ತದೆ. ಈ ರಚನೆ ತ್ಯಾಗರಾಜವಿರಚಿತವಲ್ಲ ಎನ್ನಲು ಸ್ವಲ್ಪ ಯೋಚಿಸಬೇಕಾಗುತ್ತದೆ. ಹೀಗೆ ಕೆಲವು ಸಂದಿಗ್ಧತೆಯ ಕಾರಣಗಳಿಂದ ಪ್ರಕ್ಷಿಪ್ತ ಕೃತಿಗಳು ಯಾವುವೆಂಬುದನ್ನು ನಿಖರವಾಗಿ ಹೇಳುವುದು ಕಷ್ಟವಾಗುತ್ತದೆ.

## ಟಿಪ್ಪಣಿಗಳು

೧. ಸಂಗೀತಜ್ಞಾನಮು (ಧನ್ಯಾಸಿ), ಸಮಯಮುದೆಲಿಸಿ (ಅಸಾವೇರಿ), ರಾಮಕೋದಂಡರಾಮ (ಭೈರವಿ) ಮತ್ತು ನಾಮಕುಸುಮಮುಲಚೇ (ಶ್ರೀ) ರಚನೆಗಳನ್ನೂ ನೋಡಿ.

೨. (ಅ) ತ್ಯಾಗರಾಜಸ್ವಾಮಿ ಕೀರ್ತನಲು, ಕೆ.ವಿ. ಶ್ರೀನಿವಾಸ ಅಯ್ಯಂಗಾರ್, ಇಲ್ಲಿ ೭೭ ರಚನೆಗಳನ್ನು ದಿವ್ಯನಾಮ ಕೀರ್ತನೆಗಳೆಂಬ ಶೀರ್ಷಿಕೆಯಲ್ಲಿ ನೀಡಲಾಗಿದೆ.
(ಆ)ತ್ಯಾಗರಾಜ ಕೀರ್ತನಲು - ವಿಶೇಷ ವಿವರಣಮು, ಕಲ್ಲೂರಿ ವೀರಭದ್ರಶಾಸ್ತ್ರಿ, ಸಂ. ೧, ಸ್ವಧರ್ಮ ಸ್ವರಾಜ್ಯ ಸಂಘ, ಮದರಾಸು, ೧೯೭೫. ಇಲ್ಲಿ ೮೩ ರಚನೆಗಳನ್ನು ನೀಡಲಾಗಿದೆ.
(ಇ) ತ್ಯಾಗರಾಜ ದಿವ್ಯನಾಮ ಸಂಕೀರ್ತನಲು, ಉತ್ಸವ ಸಂಪ್ರದಾಯ ಕೀರ್ತನಲು - ವೋಲೇಟಿ ವೆಂಕಟೇಶ್ವರ್ಲು, ಆಂಧ್ರಪ್ರದೇಶ್ ಸಂಗೀತ ನಾಟಕ ಅಕಾಡೆಮಿ, ಹೈದರಾಬಾದು, ೧೯೭೯. ಇಲ್ಲಿ ೫೯ ಕೀರ್ತನೆಗಳನ್ನು ಪಟ್ಟಿಯಲ್ಲಿ ನೀಡಲಾಗಿದೆ.

೩. ಅದೇ, ಪು. ೩೦.

೪. ತ್ಯಾಗರಾಜ ಕೀರ್ತನಲು, ಭಾಗ ೧, ಸ್ವರ ಸಂಕಲನ ಕಲಾಪ್ರವೀಣ ಮಂಚಾಳ ಜಗನ್ನಾಥರಾವು, (ಸಂ.) ವಾಡ್ರೇವು ಪುರುಷೋತ್ತಂ, ತಿರುಮಲ ತಿರುಪತಿ ದೇವಸ್ಥಾನ, ಪು. ೧೪೨.

೫. ಡಾ. ಎಂ.ಎಲ್. ವಸಂತಕುಮಾರಿ ಯವರು ಹೀಗೆ ಹಾಡಿದ್ದಾರೆ. ತ್ರಿವೇಣಿ, ಎಚ್.ಎಂ.ವಿ. ಕ್ಯಾಸೆಟ್, ನಂಬರು ೮೧೪೭, ಬಿ. ಸೈಡು.

೬. ನೋಡಿ, (೧) ತ್ಯಾಗರಾಜ ದಿವ್ಯನಾಮ ಸಂಕೀರ್ತನಲು, ಉತ್ಸವ ಸಂಪ್ರದಾಯ ಕೀರ್ತನಲು, ವೋಲೇಟಿ ವೆಂಕಟೇಶ್ವರುಲು, ಪು. ೧೭; (೨) ತ್ಯಾಗರಾಜಸ್ವಾಮಿ ಕೀರ್ತನಲು, ಕೆ.ವಿ. ಶ್ರೀನಿವಾಸ ಅಯ್ಯಂಗಾರ್, ಪು. ೩೪೩; (೩) ತ್ಯಾಗರಾಜ ಕೀರ್ತನಲು, ಭಾಗ ೧, (ಸಂ.) ವಾಡ್ರೇವು ಪುರುಷೋತ್ತಂ, ಪು. ೩೮೨.

೭. *Thyagaraja, Saint and Singer,* S.Y. Krishnaswamy, Orient Longmans, New Delhi, 1968, ಪು. ೧೬೮.

೮. *Outlines of Indian Philosophy,* M. Hiriyanna, George Allen and Unwin Private Limited, ೧೯೭೬, ಪು. ೩೧.

೯. ಉಳಿದ ನಾಲ್ಕು ಪರ, ವ್ಯೂಹ, ವಿಭವ ಮತ್ತು ಅಂತರ್ಯಾಮಿಗಳು.

೧೦. *The Philosophy of Pancharatra*, Dr. S. R. Bhatt, Ganesh & Co., Madras, ೧೯೬೮. ಪು . ೧೦೨- ೧೦೩.

೧೧. ಪಸಿಡಿ ಯಕ್ಷಂತ ಲಿವೆ ಪಟ್ಟರೋ ವೇಗಮೆ ರಾರೋ
ದೆಸಲಬೇರಂಟಾಂಡ್ಲು ದೇವುನಿ ಪೆಂಡ್ಲಿಕಿನಿ ||
–ಶ್ರೀತಾಳ್ಳಪಾಕ ಅನ್ನಮಾಚಾರ್ಯುಲ ಅಧ್ಯಾತ್ಮ ಸಂಕೀರ್ತನಲು, ಸಂ. ೮, ಆರ್. ಅನಂತಕೃಷ್ಣ ಶರ್ಮ ಮತ್ತು ಯು. ಶ್ರೀನಿವಾಸಾಚಾರ್ಯ, ತಿರುಮಲ ತಿರುಪತಿ ದೇವಸ್ಥಾನ, ತಿರುಪತಿ, ೧೯೫೧, ಕೀರ್ತನ ಸಂಖ್ಯೆ ೧೯೪.

೧೨. *Great Composers–II - Tyagaraja*, P. Sambamurthy, ೧೯೭೦, ಪು. ೨೬೦.

೧೩. ಕನ್ನಡ ರತ್ನಕೋಶ, (ಪ್ರ.ಸಂ.) ಡಾ. ಹಾ. ಮಾ. ನಾಯಕ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೪, ಪು. ೧೫೭.

೧೪. *Great Composers-II - Tyagaraja*, P. Sambamurthy, 1970, ಪು. ೨೬೦.

೧೫. ಅದೇ, ಪು. ೨೬೧.

೧೬. ಮಾರವೈರಿ ರಮಣಿ ಮಂಜುಭಾಷಿಣಿ || ಪ ||
ಕ್ರೂರದಾನ ವೈಭವಾರಣಾರಿ ಗೌರಿ || ಅಪ ||
ಕರ್ಮ ಬಂಧವಾರಣ ನಿಷ್ಕಾಮಚಿತ್ತವರದೇ
ಧರ್ಮವರ್ಧಿನೀ ಸದಾವದನಹಾಸೇ ಶುಭಫಲದೇ || ಚ ||
ನೋಡಿ, *Rare and Unpublished Kirtanams of Thyagaraja*, Edited by Sangita Kalanidhi T. V. Subba Rao, Andhra Ganakala Parishat, ೧೯೫೧, ಪು. ೧೪೨.

೧೭. ಸ್ವರರಾಗಲಯ ಶ್ರುತಿ ಮರ್ಮಂಬುಲು | ನಾರದಾದಿ ಮುನುಲಕುಪದೇಶಿಂಚೇ
ವರದಾಯಕಿ ಅಮೃತವರ್ಷಿಣಿ | ಮರವಕು ಲಲಿತೇ ತ್ಯಾಗರಾಜನುತೇ ||

೧೮. ಚರಣ || ಶೃತಿ ಬೋಧಗ ಸುಖಭೋಗಮು |
ಶೃತಿ ಚೇಸಿನ ಪತಿ ನೀಕು | ಪ್ರತಿ ಜೇಯಕ ಬ್ರೋವರ ಪ್ರಣತಾರ್ಥಿಹರ |
ಅತಿ ಪ್ರೇಮತೋನು ಶ್ರೀತ್ಯಾಗರಾಜ ಭಕ್ತುಲನು ||ವಿಧಿಯೇಮಿ.

೧೯. ನೀ ಪರಾಕ್ರಮಮು ಎವರಿಕುನ್ನದಯ್ಯಾ || ಪ ||
ನಾಪೈ ದಯಚೇಯವೇ ನಾಥ ಜಗದೀಶ್ವರಾ || ಅಪ || (ನೀ ಪರಾಕ್ರಮಮು)
ಭವಾಬ್ಧಿ ತಾರಣ ಬಾಧಲು ತೀರ್ಪಗ | ಪಾಮರುಲನೆವರು ಪಾಲಿಂತುರು || (ಶಿವಾಪರಾಧಮು)

೬

# ತ್ಯಾಗರಾಜರ ರಚನೆಗ್ಗಳಲ್ಲಿ ರಾಗ ಮತ್ತು ತಾಳಗಳು

ಹಿಂದೆಂದೂ ಏಕೈಕ ರಚನಕಾರನಿಂದ ಬಳಸಲಾಗದಿದ್ದಷ್ಟು ಸಂಖ್ಯೆಯಲ್ಲಿ ರಾಗಗಳನ್ನು ತ್ಯಾಗರಾಜರು ಬಳಸಿದ್ದಾರೆ. ದೀರ್ಘ ಇತಿಹಾಸವುಳ್ಳ ಸಂಗೀತ ಚರಿತ್ರೆಯಲ್ಲಿ ಅವರ ಕಾಲಕ್ಕೆ ಶಾಸ್ತ್ರವು ನಿಶ್ಚಿತವಾದ ಘಟ್ಟವೊಂದನ್ನು ತಲುಪಿದ್ದಿತು. ಮುಖ್ಯವಾಗಿ ರಾಗ ಗಳಲ್ಲಿ ಜನಕ-ಜನ್ಯಗಳೆಂಬ ತಾರ್ಕಿಕ ವಿಂಗಡಣೆಯಾಗಿದ್ದಿತು. ಈ ಪ್ರಕಾರ ಜನಕರಾಗ ಗಳು ಸಪ್ತಸ್ವರಗಳನ್ನೂ ಕ್ರಮವಾಗಿ ಹೊಂದಿ, ಆರೋಹಣಾವರೋಹಣಗಳೆರಡರಲ್ಲೂ ಏಕರೀತಿಯ ರಿಷಭ, ಗಾಂಧಾರ, ಮಧ್ಯಮ, ದೈವತ ಮತ್ತು ನಿಷಾದಗಳನ್ನು ಹೊಂದಿ ದ್ದಿತು. ಇಂತಹ ಎಪ್ಪತ್ತೆರಡು ಮೇಳಗಳ ಯೋಜನೆ ಸಿದ್ಧವಿದ್ದಿತು. ಈ ಮುನ್ನವೂ ಮೇಳವೆಂಬುದು ಪ್ರಯೋಗದಲ್ಲಿದ್ದರೂ, ತ್ಯಾಗರಾಜರ ಕಾಲದಲ್ಲಿ ಮೇಳಕ್ಕೆ ಇದ್ದ ಕರಾರುವಾಕ್ಕಾದ ಲಕ್ಷಣಗಳು ಅಂದು ಹೇಳಲ್ಪಟ್ಟಿರಲಿಲ್ಲ. ಸ್ವರ ಲೋಪವಿದ್ದಂಥ ರಾಗಗಳೂ ಮೇಳಗಳೆಂದೇ ಗುರುತಿಸಲ್ಪಟ್ಟಿದ್ದವು (ಉದಾಹರಣೆಗೆ, ಶ್ರೀರಾಗ). ಆದರೆ ತರ್ಕಬದ್ಧ ಮೇಳಗಳ ರಚನೆ ವೈಜ್ಞಾನಿಕರೀತಿಯಲ್ಲಿ ಅರ್ಥಾತ್ ೧೬ ಸ್ವರವಿಭೇದಗಳ ವಿವಿಧ ರೀತಿಯ ಸಂಯೋಜನೆಗಳಿಂದ ರೂಪುಗೊಂಡ ನಂತರ ಮೇಳ ರಾಗವೆಂಬುದರ ಲಕ್ಷಣವೂ ನಿರ್ದಿಷ್ಟವಾಯಿತು. ಅಂತೆಯೇ ಇಂತಹ ಮೇಳರಾಗಗಳಲ್ಲಿ ಜನಿಸಿದ ರಾಗ ಗಳು ಜನ್ಯವೆನಿಸಿತು. ತ್ಯಾಗರಾಜಾಂಕಿತದಲ್ಲಿ ಈವರೆಗೆ ಉಪಲಬ್ಧವಿರುವ ರಚನೆಗಳಲ್ಲಿ, ಸುಮಾರು ೪೦ಕ್ಕೂ ಅಧಿಕ ಮೇಳಗಳನ್ನೂ ೧೭೦ ಕ್ಕೂ ಅಧಿಕ ಜನ್ಯರಾಗಗಳನ್ನೂ ಕಾಣಬಹುದು. ಆದರೆ ಅವೆಲ್ಲವೂ ಅಧಿಕ ಬಳಕೆಯಲ್ಲಿವೆಯೆಂದು ಹೇಳಲುಬಾರದು.

೧೭ನೇ ಶತಮಾನದ ವೆಂಕಟಮಖಿಯ ಮೇಳಕರ್ತ ಯೋಜನೆ ಸಂಗೀತದ ಇತಿಹಾಸ ದಲ್ಲಿ ಮಹತ್ತರವಾದುದು. ಈ ಯೋಜನೆಯೇ ತ್ಯಾಗರಾಜರ ಕಾಲದಲ್ಲಿ ಬಳಕೆಯಲ್ಲಿ ಇದ್ದದ್ದು. ಇದು ಸಂಗೀತ ಕ್ಷೇತ್ರದಲ್ಲಿ ವಿಸ್ತಾರವೂ, ಶಾಶ್ವತವೂ ಆದ ನೆಲೆ ಪಡೆದುದು ಮುಖ್ಯವಾಗಿ ತ್ಯಾಗರಾಜರು ಮತ್ತು ಮುತ್ತುಸ್ವಾಮಿ ದೀಕ್ಷಿತರಿಂದಲೇ ಎಂದರೆ ತಪ್ಪಿಲ್ಲ. ಆದರೆ ಜನರಲ್ಲಿ ಮುತ್ತುಸ್ವಾಮಿ ದೀಕ್ಷಿತರ ಪಂಥವೇ ಬೇರೆ, ತ್ಯಾಗರಾಜರ ಪಂಥವೇ ಬೇರೆ ಎಂಬ ನಂಬುಗೆಯೊಂದು ಬೇರೂರಿದೆ. ವಾಸ್ತವವಾಗಿ ಇವರಿಬ್ಬರೂ ವೆಂಕಟಮಖಿ ಯೋಜನೆಯ ಪ್ರಭಾವದ ನೆರಳಿನಲ್ಲಿಯೇ ನಡೆದಿರುವುದು. ಹಾಗಾದರೆ ಈ ಅಭಿಪ್ರಾಯಭೇದಗಳು ತಲೆದೋರಿದ ಬಗೆಯಾದರೂ ಹೇಗೆ ಎಂಬ ಸಹಜ ಅನುಮಾನ ಉಂಟಾಗುತ್ತದೆ. ಇದಕ್ಕೆ ಪರಿಣತರು ಹೀಗೆ ಉತ್ತರಿಸುತ್ತಾರೆ.

೧೮ನೇ ಶತಮಾನದ ಪೂರ್ವಾರ್ಧದಲ್ಲಿ ತಂಜಾವೂರನ್ನಾಳಿದ ತುಳಜಾಜಿಯು ಸಂಗೀತ ಸಾರಾಮೃತವೆಂಬ ಲಕ್ಷಣಗ್ರಂಥವನ್ನು ಬರೆದಿದ್ದಾನೆ. ಸಂಗೀತ ಚರಿತ್ರೆಯ

ಆಧುನಿಕ ಯುಗದಲ್ಲಿ ರಚಿತವಾದ ಗ್ರಂಥಗಳಲ್ಲಿ ಇದು ಪ್ರಧಾನವಾದುದು. ಈ ಗ್ರಂಥದಲ್ಲಿ ಕರ್ತೃವು ಸಮಕಾಲೀನವಾಗಿ ರಾಗಗಳು ಹೇಗೆ ಪ್ರಚಾರದಲ್ಲಿದ್ದವೋ ಹಾಗೆಯೇ ಎಂದರೆ ರಾಗಗಳ ಹೆಸರುಗಳನ್ನೂ, ಸಂಚಾರಗಳನ್ನೂ ನಿರೂಪಿಸಿರುವುದಾಗಿ ಹೇಳುತ್ತಾನೆ. ೭೨ ಮೇಳಗಳನ್ನು ವಿವರಿಸುವ ಈತ ಅಂದು ಜನಪ್ರಿಯವಾಗಿದ್ದ ೧೯ ಮೇಳಗಳನ್ನೂ ಸವಿಸ್ತಾರವಾಗಿ ತಿಳಿಸುತ್ತಾನೆ.

ತ್ಯಾಗರಾಜರು ೧೮ನೇ ಶತಮಾನದ ಉತ್ತರಾರ್ಧದಲ್ಲೇ ಇದ್ದವರು. ಇವರು ಶಾಸ್ತ್ರೀಯವೆಂದು ಮಾನ್ಯವಾದ ವೆಂಕಟಮಖಿ ಸಂಪ್ರದಾಯವನ್ನು ಉಲ್ಲಂಘಿಸಿರಲಾರರು. ಆದರೆ ದೀಕ್ಷಿತರ ಮತ್ತು ತ್ಯಾಗರಾಜರ ರಾಗನಾಮಗಳಲ್ಲಿ ವ್ಯತ್ಯಾಸ ಕಂಡುಬರಲು ಕಾರಣವೆಂದರೆ, ತಚ್ಚೂರು ಸಿಂಗ್ರಾಚಾರ್ಯ್ಲು ಸಹೋದರರು, ಹಸ್ತಪ್ರತಿಗಳಲ್ಲಿದ್ದ ಸಂಗೀತ ರಚನೆಗಳನ್ನು ಮುದ್ರಿಸಿ ಪ್ರಕಟಿಸುವ ಕಾರ್ಯ ಕೈಗೊಂಡಾಗ ರಾಗತಾಳಗಳೆಡೆಗಾಗಲೀ, ವೆಂಕಟಮಖಿಯ ಮೇಳ ಪದ್ಧತಿಗಾಗಲೀ ಮನ್ನಣೆ ನೀಡಲಿಲ್ಲ. ಯಾವ ರಾಗವನ್ನು ಗುರುತಿಸುವುದು ಕಷ್ಟವೆನಿಸಿತೋ ಅವೆಲ್ಲವನ್ನೂ ಅಪೂರ್ವರಾಗಗಳೆಂದು ಕರೆದರು. ಅಲ್ಲದೆ ರಾಗಗಳಿಗೆ ನೂತನವಾಗಿ ನಾಮಕರಣ ಮಾಡಲಾರಂಭಿಸಿದರು. ರಾಗಗಳಿಗೆ ಈ ಸೋದರರು ಕೊಟ್ಟ ಹೆಸರಿನೊಂದಿಗೇ ತ್ಯಾಗರಾಜರ ರಚನೆಗಳು ತೆಲುಗು, ತಮಿಳು ಭಾಷೆಗಳಲ್ಲಿ ಮುದ್ರಣ, ಪುನರ್ಮುದ್ರಣಗಳನ್ನು ಕಂಡವು. ಹೀಗೆ ಹೆಚ್ಚು ಪ್ರಚಾರಗೊಂಡ ಈ ರಾಗಗಳ ಹೆಸರನ್ನು ಕಂಡ ಜನರು ದೀಕ್ಷಿತರ ಪಂಥಕ್ಕಿಂತ ಬೇರೆಯಾದ ತ್ಯಾಗರಾಜರ ಪಂಥವೊಂದಿದೆಯೆಂದು ನಂಬಿದರು.[೧]

ತ್ಯಾಗರಾಜರು ಸಮಯಸ್ಫೂರ್ತಿಯಿಂದ ಅನೇಕ ರಾಗಗಳಲ್ಲಿ ಹಾಡಿದ ತರುವಾಯ ಶಿಷ್ಯರು ಕಟಕಗಳಲ್ಲಿ (ರಾಗಕೋಶ) ಸಾಮ್ಯ ನೋಡಿ ರಾಗದ ಹೆಸರನ್ನು ನಿರ್ಧರಿಸುತ್ತಿದ್ದರು. ಪ್ರಾಚೀನ ಗ್ರಂಥಗಳಲ್ಲಿ ಉಕ್ತವಾಗಿರದ ಈ ರಾಗಗಳನ್ನು ಅವರೇ ಸೃಷ್ಟಿಸಿರಬಹುದು ಅಥವಾ ನಾರದರಿಂದ ಲಭ್ಯವಾದ ಸ್ವರಾರ್ಣವದ ಸಹಾಯದಿಂದ ಅಥವಾ ರಾಗಕೋಶವಾದ ವ್ಯಾಸಕಟಕ ಮೊದಲಾದವುಗಳಿಂದ ಪಡೆದಿರಬಹುದು.[೨]

ತ್ಯಾಗರಾಜರು ತಮ್ಮ ರಚನೆಗಳಿಗೆಂದೂ ರಾಗಗಳ ನಾಮಕರಣ ಮಾಡಲೇ ಇಲ್ಲ. ಶಿಷ್ಯರೊಂದಿಗೆ ರಾಗಗಳನ್ನೂ ತಿಳಿಸದೆ ರಹಸ್ಯವಾಗಿಟ್ಟಿರಬೇಕೆಂಬಂತೆ ಅವರು ಅಭಿಪ್ರಾಯಪಟ್ಟುದಾಗಿಯೂ, ಈ ಅಂಶವನ್ನು ಸುಬ್ಬರಾಮ ದೀಕ್ಷಿತರು ತಮ್ಮ ಹಿರಿಯರಿಂದ ಕೇಳಿದ್ದಂತೆಯೂ ಹೇಳುತ್ತಾರೆ. ಪ್ರಸಿದ್ಧ ರಾಗಗಳ ವಿನಾ ಉಳಿದವು ಪೆದ್ದ ಸಿಂಗರಾಚಾರ್ಯರಿಂದ ಹೆಸರಿಸಲ್ಪಟ್ಟಿದೆ.[೩]

ಮೇಲಿನ ಈ ಮಾತುಗಳಿಂದ ರಾಗನಾಮಗಳಲ್ಲಿ ವ್ಯತ್ಯಾಸ ಕಂಡುಬಂದಿರಬಹುದೆಂದು ನಾವು ಊಹಿಸಬಹುದು. ಆದರೆ ತ್ಯಾಗರಾಜರೂ ದೀಕ್ಷಿತರಂತೆಯೇ ವೆಂಕಟಮಖಿ ಸಂಪ್ರದಾಯವನ್ನೇ ಅನುಸರಿಸಿ ಅದರ ಜಾಡಿನಲ್ಲೇ ನಡೆದರೆಂಬುದನ್ನು ಈ ಕೆಳಗಿನ ಮಾತುಗಳು ಮತ್ತೊಮ್ಮೆ ಸಮರ್ಥಿಸುತ್ತವೆ.

ತ್ಯಾಗರಾಜರೂ ಮತ್ತು ಅವರ ಗುರುಗಳಾದ ಶುಂಠಿ ವೆಂಕಟರಮಣಯ್ಯನವರೂ

ವೆಂಕಟಮಖಿ ಯೋಜನೆಯ ಪ್ರಭಾವಕ್ಕೆ ಒಳಗಾದವರು. ಸ್ವತಃ ವಾಗ್ಗೇಯಕಾರರಾಗಿದ್ದ ಇವರು ವೆಂಕಟಮಖಿ ಯೋಜನೆಯ ಆಂಧ್ರಶಾಖೆಯನ್ನು ಅನುಸರಿಸಿದವರು. ತ್ಯಾಗ ರಾಜರು ತಮ್ಮ ರಚನೆಗಳಿಗೆ ಬಳಸಿಕೊಂಡಿರುವ ರಾಗಲಕ್ಷಣಗಳು ಸಂಗ್ರಹಚೂಡಾ ಮಣಿ, ಸಂಗೀತಸಾರಸಂಗ್ರಹ ಹಾಗೂ ಅಜ್ಞಾತ ಕರ್ತೃವಿನಲ್ಲಿದ್ದ ರಾಗಲಕ್ಷಣಗಳ ಪ್ರಭಾವನ್ನು ಪ್ರತಿಬಿಂಬಿಸುತ್ತವೆ. ಇವು ವೆಂಕಟಮಖಿ ಯೋಜನೆಯ ಆಂಧ್ರ ಶಾಖೆಯ ಪ್ರತೀಕಗಳು*. (*ತೆಲುಗು ಭಾಷೆಯವು)

ಈ ವಾದ ವಿವಾದಗಳೇನೇ ಇದ್ದರೂ ತ್ಯಾಗರಾಜರಂತಹ ನಾದಋಷಿ ಶಾಸ್ತ್ರೀಯತೆ ಯನ್ನು ಗೌರವಿಸುವಂಥವರೇ ಹೊರತು ಅದನ್ನು ಪೂರ್ಣವಾಗಿ ತಿರಸ್ಕರಿಸುವಂಥವ ರಲ್ಲ. ಆದರೆ ಅವರಲ್ಲಿದ್ದ ಸಂಪ್ರದಾಯಶರಣತೆ ಸಂಗೀತದ ವ್ಯಾಪ್ತಿಯನ್ನು ವೃದ್ಧಿಪಡಿ ಸುವಲ್ಲಿ ಅಡ್ಡಿ ಬರಲಿಲ್ಲ. ಅವರು ಪೂರ್ವ ನಿಯೋಜಿತ ನಿಯಮಗಳ ಆಧಾರದ ಮೇಲೆ ನೂತನವಾದ ಹಲವು ರಾಗಗಳನ್ನು ಸೃಷ್ಟಿಸಿದ್ದಾರೆ. ಅಂತೆಯೇ ಆ ಮುಂಚೆಯೇ ಇದ್ದ ಹಲವು ರಾಗಗಳ ಪುನರುದ್ಧಾರವನ್ನೂ ಮಾಡಿದ್ದಾರೆ. ಅವರಿಗೆ ಗುರುವಿನಲ್ಲಿ ಹಾಗೂ ಶಾಸ್ತ್ರಪರಂಪರೆಯಲ್ಲಿ ಇದ್ದ ಪೂಜ್ಯಭಾವವನ್ನು ಅವರ ರಚನೆಗಳೇ ಬಿಂಬಿಸಿವೆ.

ಪ್ರಕೃತ, ತ್ಯಾಗರಾಜರ ರಚನೆಗಳಲ್ಲಿನ ರಾಗಗಳನ್ನು ಮುಖ್ಯವಾಗಿ ನಾಲ್ಕು ವಿಭಾಗ ಗಳಲ್ಲಿ ಅಧ್ಯಯನ ಮಾಡಬಹುದು. ಅವು ಯಾವುದೆಂದರೆ—

೧. ಜನಕ ರಾಗಗಳು
೨. ಜನ್ಯರಾಗಗಳು
೩. ಪುನರುದ್ಧರಿತ ರಾಗಗಳು
೪. ಸ್ವಸೃಷ್ಟಿಯ ರಾಗಗಳು

ತ್ಯಾಗರಾಜರ ರಚನೆಗಳಿಗೆ ಅಳವಡಿಸಿರುವ ಈ ರಾಗಗಳ ಅಂಕಿಸಂಖ್ಯೆಗಳನ್ನು ಹೇಳುವ ಮುನ್ನ ಒಂದೆರಡು ವಿಷಯಗಳನ್ನು ನಾವಿಲ್ಲಿ ಗಮನಿಸಬೇಕಾಗುತ್ತದೆ. ಅವೆಂದರೆ, ಶುಭಪಂತುವರಾಳಿ ಮೇಳದಲ್ಲಿದ್ದಿತೆನ್ನಲಾದ ರಚನೆಗಳು ನಂತರದ ಗ್ರಂಥ ಗಳಲ್ಲಿ ಪಂತುವರಾಳಿ ಎಂದೂ, ದೇಶ್ಯತೋಡಿ ರಾಗದಲ್ಲಿದ್ದ ರಚನೆಗಳು ತೋಡಿ ಎಂದೂ ವ್ಯತ್ಯಾಸಗೊಂಡಿವೆ. ಈ ಪ್ರಕಾರ ಮೇಳಗಳ ಸಂಖ್ಯೆ ಮತ್ತು ಹೆಸರನ್ನು ನಮೂದಿಸಿದರೆ ವ್ಯತ್ಯಾಸ ಕಾಣಬರುತ್ತದೆ. ಅಂತೆಯೇ 'ಏಲಾವತಾರ' ರಚನೆಯು ಸಾಲಗಭೈರವಿ ಮತ್ತು ಮುಖಾರಿ ರಾಗಗಳೆರಡರಲ್ಲೂ ಹೇಳಲ್ಪಟ್ಟಿವೆ.[೫] ಹೀಗೆಯೇ 'ಮನಸುಲೋನಿ ಮರ್ಮಮು' ಹಾಗೂ 'ಸೀತಮ್ಮ ಮಾಯಮ್ಮ' ರಚನೆಗಳ ಪ್ರಯೋಗದಲ್ಲೂ ಅಪರೂಪವಾಗಿ ಅಭಿಪ್ರಾಯ ಭೇದ ಕಾಣಬರುತ್ತದೆ. ಹೀಗೆ ಹಲವು

---

* 'ಸಂಗ್ರಹಚೂಡಾಮಣಿ'ಯ ತೆಲುಗು ಅನುವಾದವೊಂದು ೧೯ನೆಯ ಶತಮಾನದಲ್ಲೇ ಸಿದ್ಧವಾ ಗಿದ್ದಿತು. 'ಸಂಗೀತಸಾರ ಸಂಗ್ರಹಮು' ತೆಲುಗಿನಲ್ಲೇ ಬರೆದ ಲಕ್ಷಣಗ್ರಂಥ. ಇನ್ನು ತ್ಯಾಗರಾಜರು ಸ್ವಂತ ಉಪಯೋಗಕ್ಕೆಂದು ಇಟ್ಟುಕೊಂಡಿದ್ದ ಹಸ್ತಪ್ರತಿಗಳಲ್ಲಿರುವ ಲಕ್ಷಣಗಳು ವೆಂಕಟಮಖಿಯ ಪ್ರಭಾವವನ್ನೇ ಸ್ಪಷ್ಟವಾಗಿ ತೋರಿಸುತ್ತವೆ. (ನೋಡಿ, ಕರ್ನಾಟಕ ಸಂಗೀತವಾಹಿನಿ, ಪು. ೩.೨೬)

ವ್ಯತ್ಯಾಸಗಳು ಕಾಣಬರುವುದರಿಂದ ತ್ಯಾಗರಾಜರು ಬಳಸಿರುವ ಮೇಳ ಸಂಖ್ಯೆಯ ನ್ನಾಗಲೀ, ಜನ್ಯರಾಗಗಳ ಸಂಖ್ಯೆಯನ್ನೇ ಆಗಲೀ ನಿಖರವಾಗಿ ಹೇಳಲಾಗದು. ಆದರೂ ಹೆಚ್ಚೂಕಡಿಮೆ ಅವುಗಳನ್ನು ಹೀಗೆ ಅಂದಾಜು ಮಾಡಬಹುದು.

೧. **ಜನಕ ರಾಗಗಳು** : ತ್ಯಾಗರಾಜಾಂಕಿತ ರಚನೆಗಳು ಸುಮಾರು ಈ ಕೆಳಕಂಡ ಮೇಳಗಳಲ್ಲಿ ಕಾಣಬರುತ್ತವೆ. ಹನುಮತೋಡಿ ; ಚಕ್ರವಾಕ ; ಮಾಯಾಮಾಳವಗೌಳ; ವಕುಳಾಭರಣ ; ಕನಕಾಂಗಿ; ಗಾನಮೂರ್ತಿ ; ಧೇನುಕ ; ಕೀರವಾಣಿ ; ಖರಹರಪ್ರಿಯ*; ಗೌರಿಮನೋಹರಿ ; ಹರಿಕಾಂಬೋಜಿ ; ಶಂಕರಾಭರಣ ; ಪಂತುವರಾಳಿ ; ಶುಭ ಪಂತುವರಾಳಿ ; ಕಲ್ಯಾಣಿ ; ಷಣ್ಮುಖಪ್ರಿಯ ; ಸಿಮ್ಹೇಂದ್ರಮಧ್ಯಮ ; ರಾಮಪ್ರಿಯ; ಲತಾಂಗಿ ; ವಾಚಸ್ಪತಿ ಮುಂತಾದವು. ಇದರಲ್ಲೂ ಕೆಲವು ಮೇಳಗಳು ತ್ಯಾಗರಾಜ ರಿಂದ ವಿಶೇಷವಾಗಿ ಪರಿಗಣಿಸಲ್ಪಟ್ಟಿವೆ. ತೋಡಿಯಲ್ಲಿ ಅವರು ೩೦ ಕ್ಕಿಂತಲೂ ಅಧಿಕ ರಚನೆಗಳನ್ನು ರಚಿಸಿದ್ದಾರೆ. ಅಂತೆಯೇ ಖರಹರಪ್ರಿಯ (೧೩) ಶಂಕರಾಭರಣ (೩೦) ಕಲ್ಯಾಣಿ (೨೧) ಮುಂತಾದ ಕೆಲವು ಮೇಳಗಳಲ್ಲಿ ಅವರ ಹೆಚ್ಚಿನ ಸಂಖ್ಯೆಯ ರಚನೆ ಗಳಿವೆ. ಈ ಮೇಳಗಳಲ್ಲಿ ಒಂದಕ್ಕಿಂತ ಹೆಚ್ಚಿನ ಸ್ವರಗಳು ಜೀವಸ್ವರಗಳೇ ಆಗಿರು ವುದರಿಂದ, ಈ ಎಲ್ಲ ಸ್ವರಗಳಿಂದಲೂ ಆರಂಭವಾಗುವಂತೆ ಪ್ರತ್ಯೇಕ ರಚನೆಗಳನ್ನು ಅವರು ರಚಿಸಿದ್ದಾರೆ. ಒಂದೇ ರಾಗದಲ್ಲಿರುವ ಬೇರೆಬೇರೆ ರಚನೆಗಳಲ್ಲಿ, ಬೇರೆಬೇರೆ ಭಾವಗಳು ಮೂಡುವಂತಿರುವುದು ಇಲ್ಲಿ ಗಮನಿಸಬೇಕಾದ ಅಂಶ. ಉದಾಹರಣೆಗೆ– ಶಂಕರಾಭರಣದ 'ಏಮಿನೇರಮೊ' ರಚನೆಯಲ್ಲಿ ದೈನ್ಯತೀವ್ರತೆ ಇದ್ದರೆ, 'ಎಂದುಕು ಪೆದ್ದಲವಲೆ'ನಲ್ಲಿ ಆತ್ಮವಿಮರ್ಶೆ ಇದೆ. 'ಎದುಟನಿಲಚಿತೆ' ನಿಂದಾಸ್ತುತಿಯಾದರೆ 'ಬುದ್ಧಿರಾದು' ಹಿರಿಯರೆಡೆಗೆ ವಿಧೇಯತೆ ಇದೆ. ಹೀಗೆ ಒಂದೇ ಮೇಳದಲ್ಲಿ ಹಲವು ರಚನೆಗಳನ್ನು ರಚಿಸಿರುವುದಕ್ಕೆ ಈ ಮೇಳಗಳಿಗಿದ್ದ ರಾಗವ್ಯಾಪ್ತಿ ಒಂದು ಕಾರಣ ವೆಂದಾಗ್ಯೂ ಇವುಗಳೆಡೆಗೆ ತ್ಯಾಗರಾಜರಿಗೆ ವಿಶೇಷ ಒಲವಿದ್ದಿತೆಂದೂ ನಾವು ಊಹಿಸ ಬಹುದು. ಆದರೆ ಮತ್ತೆ ಕೆಲವು ಮೇಳಗಳಲ್ಲಿ ಅವರ ಕೆಲವೇ ಒಮ್ಮೊಮ್ಮೆ ಏಕೈಕ ರಚನೆಯಿರುವುದೂ ಉಂಟು. ಮಿತವ್ಯಾಪ್ತಿಯುಳ್ಳ ಇಂತಹ ಮೇಳಗಳಲ್ಲಿಯೂ ತ್ಯಾಗ ರಾಜರು ತಮ್ಮ ಪ್ರೌಢಿಮೆಯನ್ನು ಮೆರೆದಿದ್ದಾರೆ.

ಪೂರ್ವದ ವಾಗ್ಗೇಯಕಾರರ ರಚನೆಗಳು ೨೮ನೇ ಹರಿಕಾಂಬೋಜಿ, ೨೨ನೇ ಖರಹರ ಪ್ರಿಯ ರಾಗಗಳಲ್ಲಿ ಕಾಣಬರದು. ಅಲ್ಲದೆ ಅಸಂಪೂರ್ಣಮೇಳ ಸಂಪ್ರದಾಯದಲ್ಲಿ ೨೮ನೇ ಮೇಳ ಹರಿಕೇದಾರಗೌಳವೆಂದೂ, ೨೨ನೇ ಮೇಳ ಶ್ರೀರಾಗವೆಂದೂ ಹೇಳಲ್ಪ

---

* ಖರಹರಪ್ರಿಯದಲ್ಲಿ ತ್ಯಾಗರಾಜರ ಸಮಕಾಲೀನರಾಗಿದ್ದ ಶ್ರೀ ಶ್ಯಾಮಾಶಾಸ್ತ್ರಿಗಳ ಹಾಗೂ ಶ್ರೀ ಮುತ್ತುಸ್ವಾಮಿ ದೀಕ್ಷಿತರ ಕೃತಿರಚನೆಗಳು ಲಭ್ಯವಿದ್ದಂತಿಲ್ಲ. ಈ ಮೂವರನ್ನೂ ಸೇರಿಸಿ ತ್ರಿಮೂರ್ತಿ ಗಳೆಂದು ಕರೆಯುವ ವಾಡಿಕೆ ಇದ್ದರೂ ತ್ಯಾಗರಾಜರು, ಮುತ್ತುಸ್ವಾಮಿ ದೀಕ್ಷಿತರು ಮತ್ತು ಕ್ಷೇತ್ರಯ್ಯ ನವರನ್ನು ತ್ರಿಮೂರ್ತಿಗಳೆನ್ನಬಹುದೇನೋ ಎಂಬ ಅಭಿಪ್ರಾಯವೂ ಒಂದುಂಟು. ನೋಡಿ, ತ್ಯಾಗರಾಜ ಕೀರ್ತನಲು, ಸಂ. ೬ (ಸಂ.) ವಾಡ್ರೇವು ಪುರುಷೋತ್ತಂ, ಪು. ೩೫೭

ಟ್ಟಿವೆ. ಆದರೆ ತ್ಯಾಗರಾಜರು ಇವುಗಳನ್ನು ಹರಿಕಾಂಬೋಜಿ, ಖರಹರಪ್ರಿಯಗಳೆಂದೇ ಕರೆದಿರುವರು. ಅವರು ಕ್ರಮಸಂಪೂರ್ಣವಾದ ಈ ರಾಗಗಳಲ್ಲಿ ಹಲವು ರಚನೆಗಳನ್ನೇ ಹಾಡಿದ್ದಾರೆ. ಅಲ್ಲದೆ ಇವೆರಡೂ ಮೇಳಗಳಲ್ಲಿ ಅಧಿಕ ಸಂಖ್ಯೆಯ ಜನ್ಯರಾಗಗಳನ್ನು ಹೇಳುತ್ತಾರೆ. ಇವುಗಳ ಜನಪ್ರಿಯತೆಯನ್ನು ಹೆಚ್ಚಿಸುವಲ್ಲಿ ತ್ಯಾಗರಾಜರು ಮುಖ್ಯ ಪಾತ್ರ ವಹಿಸಿದ್ದಾರೆಂಬುದು ನಿಸ್ಸಂದೇಹ. ಇನ್ನು, ಕಲ್ಯಾಣಿ ಮತ್ತು ಪಂತುವರಾಳಿ ರಾಗಗಳೆರಡೂ ವೆಂಕಟಮಖಿಯ ಕಾಲದಲ್ಲಿ, ತಂಜಾವೂರಿನಲ್ಲಿ ಆಗತಾನೇ ಪ್ರವೇಶಿಸುತ್ತಿದ್ದಂತೆ ಕಾಣುತ್ತದೆ. ವೆಂಕಟಮಖಿಯು ಕಲ್ಯಾಣಿ ಮೊದಲಾದವು ದೇಶೀಯ ರಾಗಗಳೆನ್ನುತ್ತಾನೆ. ಇವು ತುರುಷ್ಕರಿಗೆ ಅತಿಪ್ರಿಯವೆಂದು ವಿಶೇಷಿಸಿ ಸಮರ್ಥಿಸಿದ್ದಾನೆ. ಅವನ ಕಾಲದಲ್ಲಿ ಕಲ್ಯಾಣಿಯು ಹೊಸದಾಗಿದ್ದರೂ ತುಂಬ ಜನಪ್ರಿಯವಾಗಿದ್ದಿರಬೇಕು. ಹೀಗೆಂದೇ ಅದಕ್ಕೆ ಒಂದು ಸ್ವತಂತ್ರ ಮೇಳತ್ವವನ್ನೇ ಕಲ್ಪಿಸಿದ್ದಾನೆ.

ಆದರೆ ಕಟ್ಟಾ ಸಂಪ್ರದಾಯವಾದಿಗಳು ಇದನ್ನಿನ್ನೂ ಪೂರ್ಣವಾಗಿ ಒಪ್ಪಿಕೊಂಡಿರಲಿಲ್ಲವೆಂದು ತೋರುತ್ತದೆ. ಅಲ್ಲದೆ ಪಂತುವರಾಳಿಯು ಅಂದಿಗೆ ಪಾಮರ ಪ್ರಿಯವಾಗಿದ್ದಿತಂತೆ.[೬] ಆದರೆ ಈ ರಾಗಗಳಲ್ಲಿ ತ್ಯಾಗರಾಜರ ಹಲವು ರಚನೆಗಳು ಕಾಣಬರುತ್ತವೆ. ಭವಪ್ರಿಯ (ಶ್ರೀಕಾಂತನೀಯೆಡ), ಧೇನುಕ (ತೆಲಿಯಲೇರುರಾಮ), ಗೌರೀಮನೋಹರಿ (ಗುರುಲೇಕ), ಕೀರವಾಣಿ (ಕಲಿಗಿಯುಂಟೇ), ಚಾರುಕೇಶಿ (ಆಡಮೋಡಿಗಲದ), ವಾಗಧೀಶ್ವರಿ (ಪರಮಾತ್ಮುಡು ವೆಲಿಗೆ ಮುಚ್ಚಟ) ಮುಂತಾದ ಮೇಳಗಳಲ್ಲಿ ಅವರ ಒಂದೊಂದೇ ರಚನೆಗಳು ಲಭ್ಯವಾಗಿವೆ.

ಸಂಪೂರ್ಣ ಮೇಳ ಪದ್ಧತಿಯ (ರಾಗಗಳ) ಪ್ರಕಾರ ೫೨ನೇ ಮೇಳ ರಾಮಪ್ರಿಯವೆಂದಿದ್ದರೆ ಅಸಂಪೂರ್ಣ ಮೇಳಪದ್ಧತಿಯಲ್ಲಿ ಈ ಮೇಳಕ್ಕೆ 'ರಮಾಮನೋಹರಿ' ಎಂದು ಹೆಸರು. ತ್ಯಾಗರಾಜರು ರಾಮಪ್ರಿಯದಲ್ಲಿ 'ಸಂದೇಹಮು' ಕೃತಿ ರಚಿಸಿ ರಾಮಮನೋಹರಿ ರಾಗವನ್ನು ರಾಮಪ್ರಿಯದಲ್ಲಿ ಜನ್ಯವೆನ್ನುತ್ತಾ, (ಆರೋಹಾವರೋಹಗಳು ಸಗಮಪನಿಸ / ಸನಿದಪಮಗಸ) 'ಸೀತಾಮನೋಹರ' ಎಂಬ ರಚನೆಯನ್ನೂ ಹೇಳುತ್ತಾರೆ.[೭] ಇಲ್ಲಿ ರಮಾಮನೋಹರಿ, ರಾಮಮನೋಹರಿ ಎಂಬ ಹೆಸರುಗಳು ಗಮನಾರ್ಹ.* ಇದರಂತೆಯೇ ಚಕ್ರವಾಕ, ವೇಗವಾಹಿನಿರಾಗಗಳು. ವೇಗವಾಹಿನಿಯಲ್ಲಿ ತ್ಯಾಗರಾಜರು 'ಚೆಲ್ಲಗನಾತೋ' ಎಂಬ ರಚನೆ ಹಾಡಿದ್ದಾರೆ (ಸರಿಗಮಪದನಿದಸ - ಸನಿದಪಮಗರಿಸ–ಚಕ್ರವಾಕದಲ್ಲಿ ಜನ್ಯ). ಅಸಂಪೂರ್ಣಮೇಳ ಪದ್ಧತಿಯಲ್ಲಿ ಹದಿನಾರನೇ ಮೇಳ 'ತೋಯವೇಗವಾಹಿನಿ'. ಇಲ್ಲಿ ವೇಗವಾಹಿನಿ, ತೋಯವೇಗ

---

* ಕೆ. ವಿ. ಶ್ರೀನಿವಾಸ ಅಯ್ಯಂಗಾರ್ಯರು ತಮ್ಮ 'ತ್ಯಾಗರಾಜಸ್ವಾಮಿ ಕೀರ್ತನಲು' ಗ್ರಂಥದ ಕೀರ್ತನೆಗಳ ಅಕಾರಾದಿ ಪಟ್ಟಿಯಲ್ಲಿ ಸಂದೇಹಮು (ರಾಮಪ್ರಿಯ), ಸೀತಾಮನೋಹರ (ರಾಮ ಮನೋಹರಿ) ಎಂದೇ ಹೇಳಿ ಮುಂದುವರೆದಂತೆ ಮೇಳಪಟ್ಟಿಯಲ್ಲಿ ಕೀರ್ತನೆಗಳನ್ನು ನೀಡುವಾಗ 'ಸೀತಾಮನೋಹರಿ' ರಚನೆಯನ್ನು ರಾಮಪ್ರಿಯದಲ್ಲೇ ಹೇಳುತ್ತಾರೆ. ನೋಡಿ, ಪು.೫೭-೫೮ ಹಾಗೂ ೮೭

ವಾಹಿನಿ ಎಂಬ ಹೆಸರುಗಳು ಗಮನಾರ್ಹ.

**೨. ಜನ್ಯರಾಗಗಳು** : ಮೇಳರಾಗಗಳಂತೆಯೇ ತ್ಯಾಗರಾಜರು ಕೆಲವು ಜನ್ಯರಾಗ ಗಳನ್ನು ವಿಶೇಷವಾಗಿ ಬಳಸಿರುವುದು ಗೋಚರವಾಗುತ್ತದೆ. ಉದಾಹರಣೆಗೆ, ಆರಭಿ (೧೫), ಅಠಾಣ (೧೩), ಬೇಗಡೆ (೧೦), ಬಿಲಹರಿ (೧೦), ದೇವಗಾಂಧಾರಿ (೧೩), ಕೇದಾರಗೌಳ (೧೦), ಮಧ್ಯಮಾವತಿ (೧೫), ಮೋಹನ (೧೦), ರೀತಿಗೌಳ (೧೦), ಪುನ್ನಾಗವರಾಳಿ (೧೦), ಅಸಾವೇರಿ (೮), ಸಾವೇರಿ (೧೮), ಸೌರಾಷ್ಟ್ರ (೧೪), ವರಾಳಿ (೧೦), ಮೊದಲಾದವು. ಇವುಗಳಿಗಿಂತ ಇನ್ನೂ ಕಡಿಮೆ ರಚನೆಗಳಿರುವ ರಾಗಗಳು ಶಹನ (೯), ಕಾಂಬೋಜಿ (೬), ಯದುಕುಲಕಾಂಬೋಜಿ (೭), ಮುಂತಾದವು. ಏಕಮಾತ್ರ ರಚನೆಗಳುಳ್ಳ ಜನ್ಯರಾಗಗಳಿಗೆ ಉದಾಹರಣೆಯಾಗಿ ಬಹುದಾರಿ (ಬ್ರೋವಭಾರಮ), ಅಭೇರಿ (ನಗುಮೋಮು ಗನಲೇನಿ), ಭೈರವ (ಮರಿಯಾದಗಾದಯ್ಯ), ಗುಂಡಕ್ರಿಯ (ಇಂತನುಚು ವರ್ಣಿಂಪತರಮಾ), ಗಂಭೀರವಾಣಿ (ಸದಾಮದಿನಿ ದಲತು), ಚಿತ್ತರಂಜನಿ (ನಾದತನುಮನಿಶಂ), ಸರಸ್ವತಿ (ಅನುರಾಗಮುಲೇನಿ) ನಾದಚಿಂತಾಮಣಿ ಅಥವಾ ದೇವಾಮೃತವರ್ಷಿಣಿ (ಎವರನಿ) ಮೊದಲಾದವನ್ನು ಹೆಸರಿಸಬಹುದು. ಮಧ್ಯಮ ಶೃತಿಯಲ್ಲಿ ಹಾಡಲ್ಪಡುವ ನಾದನಾಮಕ್ರಿಯ, ಪುನ್ನಾಗವರಾಳಿ ರಾಗಗಳಲ್ಲೂ ತ್ಯಾಗರಾಜರ ರಚನೆಗಳಿವೆ.* ದೇವಗಾಂಧಾರಿಯ ಕ್ಷೀರಸಾಗರಶಯನ, ಅಭೇರಿಯ ನಗುಮೋಮು, ಕಾಂಬೋಜಿಯ ಎವರಿಮಾಟಗಳಂಥ ಜನ್ಯರಾಗಗಳಲ್ಲಿರುವ ರಚನೆ ಗಳಲ್ಲಿ ಪಲ್ಲವಿ ಭಾಗದಲ್ಲೇ ರಾಗಭಾವ ಅದ್ಭುತವಾಗಿ ಹೊರಹೊಮ್ಮಿದೆ.

**೩. ಪುನರುದ್ಧರಿತ ರಾಗಗಳು** : ನಾಟ, ಆಹಿರಿ, ಗುರ್ಜರಿ, ಗೌರಿ, ಗುಂಡಕ್ರಿಯಾ, ವರಾಳಿಗಳಂಥ ರಾಗಗಳು ಪುರಂದರರಲ್ಲೂ, ಅನ್ನಮಯ್ಯನವರಲ್ಲೂ ಕಾಣುತ್ತೇವೆ. ಆದರೆ ಇವರ ರಚನೆಗಳಿಗೆ ಸ್ವರಲಿಪಿಯು ಉಪಲಬ್ಧವಿದ್ದಂತೆ ಕಾಣುವುದಿಲ್ಲ. ಪ್ರಯೋಗ ತಪ್ಪುತ್ತಿದ್ದ ಇಂತಹ ಹಲವು ರಾಗಗಳಲ್ಲಿ ಕೃತಿರಚನೆ ಮಾಡುವುದರ ಮೂಲಕ ಈ ರಾಗಗಳನ್ನು ತ್ಯಾಗರಾಜರು ಪುನರುದ್ಧರಿಸಿದ್ದಾರೆ.

**೪. ಸ್ವಸೃಷ್ಟಿಯ ರಾಗಗಳು** : ತ್ಯಾಗರಾಜ ಕಲ್ಪಿತ ರಾಗಗಳು ಅಸಂಖ್ಯ. ಈ ರಾಗಗಳನ್ನು ತ್ಯಾಗರಾಜರಿಗೆ ಪೂರ್ವದ ವಾಗ್ಗೇಯಕಾರರು ಬಳಸಿಲ್ಲವೆಂದೇ ಹೇಳ ಬಹುದು. ಈ ಮಾದರಿಯ ರಾಗಗಳಿಗೆ ನಾದಚಿಂತಾಮಣಿ, ಕಿರಣಾವಳಿ, ಬಹುದಾರಿ, ಬಲಹಂಸಗಳಂಥವುಗಳನ್ನು ಹೆಸರಿಸಬಹುದು. ತ್ಯಾಗರಾಜ ಕಲ್ಪಿತ ರಾಗಗಳಿಗೆ ಅವರ ರಚನೆಗಳೇ ಒಂದು ಶಬ್ದಕೋಶದಂತೆ. ಒಂದು ಅರ್ಥದಲ್ಲಿ ಈ ರಾಗಗಳಲ್ಲಿರುವ ರಚನೆಗಳು ಪ್ರಧಾನ ರಾಗಗಳಲ್ಲಿರುವ (Major Raga) ರಚನೆಗಳಿಗಿಂತ, ಸುಲಭ

---

* ಕುರುಂಜಿ, ನವರೋಜು ರಾಗಗಳಲ್ಲಿ ತ್ಯಾಗರಾಜರು ರಚನೆಗಳನ್ನು ರಚಿಸಿಲ್ಲವೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. (ನೋಡಿ, ತ್ಯಾಗರಾಜ ಕೀರ್ತನಲು, ಸಂ. ೬ (ಸಂ.) ವಾಡ್ರೇವು ಪುರು ಷೋತ್ತಂ, ಪು. ೩೬೪. ಆದರೆ ಅವರ 'ಸೀತಾಕಲ್ಯಾಣ ವೈಭೋಗಮೇ' ರಚನೆಯನ್ನು ಕೆಲವರು ಕುರಂಜಿ ರಾಗವೆಂದೂ ಕೆಲವರು ಶಂಕರಾಭರಣವೆಂದೂ ಹೇಳುತ್ತಾರೆ. ಇದನ್ನು ಈಗಾಗಲೇ ಪ್ರಸ್ತಾಪಿಸಲಾಗಿದೆ.

ವೆಂದರೆ ತಪ್ಪಿಲ್ಲ. ಉದಾಹರಣೆಗೆ, ಭೈರವಿ ಯಲ್ಲಿರುವ 'ಏನಾಟಿ ನೋಮುಫಲಮೋ' ರಂಜಕವಾಗಿ ಗಮಕಯುಕ್ತವಾಗಿ ಹಾಡುವುದಕ್ಕಿಂತ 'ಕೇಸರಿ' ರಾಗದ್ದೆನ್ನಲಾದ 'ನನ್ನು ಗನ್ನತಲ್ಲಿ ನಾಭಾಗ್ಯಮಾ' ಕೃತಿ ಸರಳವಾಗಿದೆ. ಅಲ್ಲದೆ ರಾಗಸಂಚಾರಗಳು ಹೆಚ್ಚಾಗಿ ವಿಸ್ತಾರಗೊಳ್ಳುವ ಸಾಧ್ಯತೆ ಕಡಿಮೆಯಿದ್ದು ರಾಗಕ್ಕೆಂದೇ ಮೀಸಲಾದ ಪ್ರಮುಖ ಸಂಚಾರಗಳೆಲ್ಲವನ್ನೂ ಮಿತವ್ಯಾಪ್ತಿಯುಳ್ಳ ಆ ರಚನೆಯಲ್ಲೇ ಅಳವಡಿಸಲಾಗಿದೆ. ಹೀಗಾಗಿ ಮೇಲಿನ ಅಭಿಪ್ರಾಯ ಸಮರ್ಥನೀಯವೆನಿಸುತ್ತದೆ.

ತ್ಯಾಗರಾಜ ಕಲ್ಪಿತವೆನ್ನಲಾದ ಕೆಲವು ರಾಗಗಳೆಂದರೆ ಕೋಕಿಲಧ್ವನಿ (ಕೊನಿಯಾಡೆ), ಉಮಾಭರಣ (ನಿಜಮರ್ಮಮುಲನು), ಸ್ವರಾವಳಿ (ಪ್ರಾರಬ್ಧಮಿಟ್ಲುಂಡಗಾ), ಬಹುದಾರಿ (ಬ್ರೋವಭಾರಮಾ), ನವರಸಕನ್ನಡ (ಪಲುಕುಕಂಡಚಕ್ಕರ, ನಿನ್ನುವಿನಾ ನಾಮದೆಂದು), ಮಂದಾರಿ (ಪರಲೋಕಭಯ), ಪ್ರತಾಪವರಾಳಿ (ವಿನನಾಸಗೊನಿ), ಗರುಡಧ್ವನಿ (ತತ್ವಮೆರುಗತರಮಾ ಮತ್ತು ಆನಂದಸಾಗರಮೀದನಿ), ದೀಪಕ (ಕಳಲನೇರ್ಚಿನ), ರಂಜನಿ (ದುರ್ಮಾರ್ಗಚರ), ಹಂಸನಾದ (ಬಂಟುರೀತಿ), ಕೈಕವಶಿ (ವಾಚಾಮಗೋಚರಮೇ). ಹೀಗೆ ಹೇಳುತ್ತಾ ಹೋದಂತೆ ರಾಗಗಳ ಪಟ್ಟಿ ದೀರ್ಘವಾಗುತ್ತದೆ.

ಒಟ್ಟಾರೆ ರಾಗಗಳ ಪ್ರಯೋಗದಲ್ಲಿ ತ್ಯಾಗರಾಜರು ವಿಶಿಷ್ಟವಾಗಿ ಮೆರೆದಿದ್ದಾರೆ. ಅಪೂರ್ವ ರಾಗಗಳಲ್ಲಿರುವ ಅವರ ಏಕೈಕ ರಚನೆಯಲ್ಲೂ ರಾಗದ ಪ್ರತ್ಯೇಕ ಛಾಯೆ ವ್ಯಕ್ತಗೊಂಡಿದೆ. ಇಂತಹ ರಾಗಗಳ ಪೂರ್ಣರೂಪವನ್ನೂ, ಅದರ ವ್ಯಾಪ್ತಿಯನ್ನೂ ಅರಿಯಬೇಕಾದರೆ ಆ ನಿರ್ದಿಷ್ಟ ರಾಗದಲ್ಲಿರುವ ರಚನೆಗಳನ್ನು ಅಧ್ಯಯನ ಮಾಡುವುದರಿಂದ ಮಾತ್ರ ಸಾಧ್ಯ.

ತ್ಯಾಗರಾಜರು ಶುದ್ಧ ಮಧ್ಯಮ ರಾಗಗಳನ್ನೇ ವಿಶೇಷವಾಗಿ ಬಳಸಿರುವುದೊಂದು ಮುಖ್ಯ ಅಂಶ. ಪ್ರತಿ ಮಧ್ಯಮ ಮೇಳ ಹಾಗೂ ಜನ್ಯರಾಗಗಳನ್ನು ಕಡಿಮೆ ಸಂಖ್ಯೆಯಲ್ಲಿ ಅವರು ಉಪಯೋಗಿಸಿದ್ದಾರೆ. ಅವರು ೭೨ ಮೇಳಗಳನ್ನೂ ಬಳಸಿದಂತೆ ಹೇಳುವುದುಂಟು. ಆದರೆ ತ್ಯಾಗರಾಜಾಂಕಿತದಲ್ಲಿ ಉಪಲಬ್ಧವಿರುವ ಮೇಳಕೃತಿಗಳನ್ನು ನೋಡಿದಾಗ ಅವು ಸುಮಾರು ೪೦ ರಷ್ಟಿವೆಯಷ್ಟೆ.

ಜನ್ಯರಾಗಗಳಲ್ಲಿ ತ್ಯಾಗರಾಜರು ನಿಶಾದಾಂತ್ಯ ರಾಗಗಳನ್ನೂ ಬಳಸಿದ್ದಾರೆ. ಇವುಗಳ ಪ್ರಯೋಗವನ್ನು ಇವರ ಹಿಂದಿನ ವಾಗ್ಗೇಯಕಾರರಲ್ಲೂ ಕಾಣುತ್ತೇವೆ. ಹಾಗೆಯೇ ವಿವಾದಿ ಮೇಳ ಮತ್ತು ವಿವಾದಿ ಸ್ವರಗಳುಳ್ಳ ಜನ್ಯರಾಗಗಳ ನಾಜೂಕಿನ ಬಳಕೆಯೂ ತ್ಯಾಗರಾಜರಲ್ಲಿವೆ.

ಶುದ್ಧಸಾವೇರಿ, ದೇವಗಾಂಧಾರಿ, ಮಾಯಾಮಾಳವಗೌಳದಂಥ ಹಲವಾರು ರಾಗಗಳಲ್ಲಿ ಅಭ್ಯಾಸಿಗಳಿಗೂ, ಪ್ರೌಢರಿಗೂ ಹಾಡಲು ಸಾಧ್ಯವಾಗುವಂಥ ರಚನೆಗಳಿವೆ (ಕಾಲಹರಣಮೇಲರಾ - ದರೀನಿ ತೆಲುಸುಕೊಂಟಿ ; ಕೊಲುವೈಯುನ್ನಾಡೆ - ಕ್ಷೀರಸಾಗರಶಯನ; ತುಳಸೀದಳಮುಲಚೇ - ಮೇರುಸಮಾನಧೀರ).

ತ್ಯಾಗರಾಜರೇ ಸ್ವತಃ ದೇವಗಾಂಧಾರಿ ರಾಗವನ್ನು ಆರು ದಿನಗಳ ಕಾಲ ಹಾಡಿದರೆಂಬ

ಅಂಶವು ಅವರಿಗೆ ರಾಗವಿಸ್ತರಣೆಯಲ್ಲಿದ್ದ ಕಲ್ಪನಾಸಾಮರ್ಥ್ಯವನ್ನು ಪ್ರತಿಬಿಂಬಿಸುತ್ತದೆ.

ನಿಜವಾಗಿಯೂ, ಸಂಗೀತ ರಚನೆಗಳ ಪ್ರಯೋಜನವೆಂದರೆ ರಾಗನಿರೂಪಣೆಯಲ್ಲದೆ ಬೇರೆಯಲ್ಲ. ರಚನೆಯೊಂದರಲ್ಲಿ ಅಳವಟ್ಟಿರುವ ಮಾತುಭಾಗವನ್ನೂ, ತಾಳವನ್ನೂ ಸ್ವಲ್ಪ ಮರೆತು, ಅಲ್ಲಿರುವ ವರ್ಣಮೆಟ್ಟಿಗೇ ಗಮನ ನೀಡಿದರೆ ಆ ರಾಗದ ಸ್ವರೂಪ ಸಾಕಾರವಾಗಿ ನಿಲ್ಲುತ್ತದೆ. ಅದಕ್ಕೆ 'ತದರಿನ್ನ ತೋಂ' ಅಕ್ಷರಗಳನ್ನು ಮಾತುಭಾಗವಾಗಿ ಸೇರಿಸಿ ಸ್ವಲ್ಪ ಹೆಚ್ಚುಕಡಿಮೆ ಹಾಡುವುದರಿಂದ ಸ್ಥೂಲವಾಗಿ ಆ ರಾಗದ ಆಲಾಪನೆಯನ್ನು ಪಡೆಯಬಹುದು (ಉದಾಹರಣೆಗೆ, ತೋಡಿರಾಗ - ರೂಪಕ ತಾಳದಲ್ಲಿರುವ ರೇ ಮಾನಸಚಿಂತಯಾ ರಚನೆ).

ಗಾ ಪಮಗಾ ರಿ ಸ || ರಿಸನಿದ ನೀ ಸಾಸರಿ || ಗಾ ಮಾ ೯ ||
ರೇ ಮಾ ನ ಸ || ಚಿಂ ತ ಯಾ ಶ್ರೀ || ರಾ ಮಂ ||

ಪದನೀ ದಪಮಾ ಗರಿಸೇ || ರಿಸನಿದ ನೀ ಸಾ ||
ರೇ ಮಾ ನಸ ಚಿಂ || ತ ಯಾ ||

ಗಾ ಪಮಗಾ ರಿ ಸಾ೯ ರಿಸನಿದ ನೀ ಸಾ೯೯
ತ ದ ರ ನ್ನ ನ್ನಾ

ಸರಿ ಗಾ ಮಾ ಪಾ೯ದ ನೀ ದಪಮಗಾ
ತದ ರಾ ನ್ನ ನ್ನಾ

ಮುಂತಾಗಿ ರಚನೆಯ ಮುಂದಿನ ಭಾಗಗಳನ್ನೂ ಹೀಗೆಯೇ ಮುಂದುವರಿಸಬಹುದು.

ತ್ಯಾಗರಾಜರ ಕಾಲಕ್ಕೆ ಪ್ರಥಮ ಹಾಗೂ ದ್ವಿತೀಯ ಘನರಾಗ ಪಂಚಕಗಳೆಂದು ಮಾನ್ಯವಾಗಿದ್ದ ರಾಗಗಳ ಪೈಕಿ ಸಾರಂಗನಾಟವೊಂದನ್ನುಳಿದು ಮಿಕ್ಕ ೯ ರಾಗಗಳಲ್ಲೂ ಅವರು ಕೃತಿರಚನೆ ಮಾಡಿದ್ದಾರೆ.

ತ್ಯಾಗರಾಜರಲ್ಲಿ ಕಾಣಬರುವ ಮತ್ತೊಂದು ಸ್ವಾರಸ್ಯಕರ ಅಂಶ, ರಚನೆಗಳ ಸಾಹಿತ್ಯಭಾವ ಮತ್ತು ರಾಗನಾಮಗಳಲ್ಲಿನ ಸಾಮರಸ್ಯ. ಈ ಸಾಲಿನಲ್ಲಿ ಉದಹರಿಸಬಹುದಾದ ಕೆಲವೆಂದರೆ,

ಅ. ಚಂದ್ರಜ್ಯೋತಿ : ಚಂದ್ರವಂಶದಲ್ಲಿ ಹುಟ್ಟಿದ ಶ್ರೀಕೃಷ್ಣನು ಅರ್ಜುನನಿಗೆ ಮಾಡಿದ ಉಪದೇಶವನ್ನು ಪ್ರಸ್ತಾಪಿಸುವ ವಸ್ತುವುಳ್ಳ ಕೃತಿಗೆ 'ಚಂದ್ರಜ್ಯೋತಿ' ರಾಗವೇ ಅಳವಟ್ಟಿದೆ (ಬಾಗಾಯನಯ್ಯ).

ಆ. ಸಿದ್ಧಸೇನ : ದೀನರ ಮೊರೆಯನ್ನು ಶ್ರೀರಾಮನಲ್ಲಿ ಬಿನ್ನವಿಸಲು ಸಿದ್ಧಿಪಡೆದ

ಮಹಾನುಭಾವರು ಯಾರೂ ಇಲ್ಲವೇ ಎನ್ನುವಾಗ 'ಸಿದ್ಧಸೇನ' ರಾಗ ಅಳವಟ್ಟಿದೆ (ಎವರ್ಸೈನ ಲೇರ).

ಇ. ಚಿತ್ತರಂಜನಿ : ಚಿತ್ತವನ್ನು ರಂಜಿಸುವಂಥ ನಾದವಿದ್ಯೆಗೆ ಮೂಲಾಧಾರನೆಂದು ನಂಬಲಾದ ಪರಮಶಿವನನ್ನು 'ಚಿತ್ತರಂಜನಿ' ರಾಗದಲ್ಲೇ ಸ್ತುತಿಸಲಾಗಿದೆ (ನಾದತನುಮನಿಶಂ).

ಈ. ದೇವಕ್ರಿಯ : ಪ್ರೀತಿಯ ಅತಿರೇಕದಲ್ಲಿ ಭಾಷೆ ನೀಡಿ, ಮರೆತ ದೇವರ ರೀತಿಯನ್ನು ಕಂಡು ಟ್ಟಾಪಿಸುವಂತಿರುವ ರಚನೆ -'ದೇವಕ್ರಿಯ' ರಾಗವನ್ನೇ ಹೊಂದಿದೆ (ನಾಟಿಮಾಟ).

ಉ. ಅಮೃತವಾಹಿನಿ : ಶ್ರೀರಾಮನ ಪಾದಗಳು ಬ್ರಹ್ಮಾನಂದ ಮತ್ತು ಚಿರಂಜೀವಿತ್ವವೆಂಬ ಅಮೃತವನ್ನು ಪ್ರವಹಿಸುವಂಥದ್ದು ಎಂಬ ಭಾವವನ್ನು 'ಅಮೃತವಾಹಿನಿ' ರಾಗದಲ್ಲೇ ಹಾಡಲಾಗಿದೆ (ಶ್ರೀರಾಮ ಪಾದಮಾ).

ಊ. ಗರುಡಧ್ವನಿ : ಸಂಗೀತದಿಂದ ಪಡೆಯುವ ಬ್ರಹ್ಮಾನಂದವು ಸ್ವತಂತ್ರ ಪ್ರವೃತ್ತಿಯುಳ್ಳದ್ದು. ಇದರಲ್ಲಿ ಸ್ವಚ್ಛಂದವಾಗಿ ವಿಹರಿಸಬಹುದೆಂಬ ಸೂಚನೆಯೋ ಎಂಬಂತೆ ಇದು 'ಗರುಡಧ್ವನಿ' ರಾಗದಲ್ಲಿದೆ. ಗರುಡ ಸ್ವಚ್ಛಂದದ ಪ್ರತೀಕ (ಆನಂದಸಾಗರಮೀದನಿ).

ಋ. ವೀರವಸಂತ : ಶಿವ, ಬ್ರಹ್ಮ ಹಾಗೂ ಇಂದ್ರರಿಗಿಂತ ಮೇಲಾದ ಭುವನವಾಸಿಯಾದ ಶ್ರೀರಾಮನ ವೀರಗುಣವನ್ನು 'ವೀರವಸಂತ' ರಾಗದಲ್ಲೇ ಹೇಳಲಾಗಿದೆ (ಏಮನಿಪೊಗಡುದುರಾ).

ೠ. ನಭೋಮಣಿ : ನಭೋಮಣಿ (ಸೂರ್ಯ) ವಂಶದ ಶ್ರೀರಾಮನಲ್ಲಿ ಪ್ರಾರ್ಥಿಸುವಾಗ 'ನಭೋಮಣಿ' ರಾಗವನ್ನೇ ಅಳವಡಿಸಿದ್ದಾರೆ (ನಾಯೆಡ ವಂಚನ ಸೇಯಕುರಾ).

ಎ. ಮಧ್ಯಮಾವತಿ : ಬಂಧನಗಳನ್ನೂ ಮೀರಿದ ಮುನಿಯ ಮನಸ್ಸು ಕೂಡ ಶ್ರೀರಾಮನ ಸೌಂದರ್ಯದಿಂದ ವಿಚಲಿತಗೊಂಡು ಪ್ರೀತಿ ಮತ್ತು ಅಸೂಯೆಗಳ ನಡುವಿನ ಮಧ್ಯಮಾವಸ್ಥೆಯನ್ನು ಹೊಂದಿತೆಂಬ ಭಾವ ಬರುವಂತೆ 'ಮಧ್ಯಮಾವತಿ' ರಾಗವನ್ನೇ ಅಳವಡಿಸಿರುವುದು ಗಮನಾರ್ಹ (ಅಲಕಲಲ್ಲಾಡಗ).

**ಜನಪದ ಧಾಟಿಗಳು** : ಜನಪದ ಎಂಬುದನ್ನು ತಜ್ಞರು 'ಜಾನೇನ ಜನ್ಮನಾ ಪದ್ಯತೇ ಇತಿ' ಎನ್ನುತ್ತಾರೆ. ಎಂದರೆ ಕ್ರಮವಾಗಿ ಕಲಿತದ್ದಲ್ಲದೆ, ಸ್ವಭಾವದಿಂದಲೇ ಸಿದ್ಧವಾದದ್ದು. ಹೆಂಗಸರು ಮುಂಜಾನೆ ಹಾಡುವ ಉದಯರಾಗ, ಹಸೆಹಾಡು, ಶೋಭಾನೆ ಪದ ಇವೆಲ್ಲವೂ ಈ ಗುಂಪಿನವೇ. ಮತ್ತೊಂದು ವಿವರಣೆಯಂತೆ ಸಾಮಾನ್ಯರಿಗೆಲ್ಲ ಯಾವುದು ಒಂದು ನೆಲೆಯನ್ನು ಒದಗಿಸುವುದೋ ಅದೇ ಜನಪದ.[೮] ಈ ವಿವರಣೆ

ಗಳನ್ನು ಅನ್ವಯಿಸಿದಾಗ ತ್ಯಾಗರಾಜರ ದಿವ್ಯನಾಮ ಮತ್ತು ಉತ್ಸವ ಸಂಪ್ರದಾಯ ರಚನೆಗಳನ್ನೂ ಈ ವಿಭಾಗಕ್ಕೆ ತರಬಹುದು. ಇಲ್ಲಿ ಬಳಸಿರುವ ಆನಂದಭೈರವಿ, ಯದುಕುಲಕಾಂಬೋಜಿ ಮೊದಲಾದ ರಾಗಗಳು ಪ್ರಾಚೀನರಲ್ಲೂ ರೂಢಿಯಿದ್ದ ರಾಗ ಗಳೇ. ಇವು ತ್ಯಾಗರಾಜರಲ್ಲೂ ಮೂಡಿಬಂದಿವೆ. 'ಕ್ಷೀರಸಾಗರವಿಹಾರ', 'ಪಾಹಿರಾಮ ಚಂದ್ರ'ದಂಥ ರಚನೆಗಳು ಸುಲಭ ಸರಳ ಧಾಟಿಯಲ್ಲಿವೆ. ಜನಪದ ಸಂಗೀತದಲ್ಲೂ ಈ ರಾಗದ ಬಳಕೆ ಕಾಣಬರುತ್ತದೆ. ಇದರಂತೆಯೇ ಮಧ್ಯಮಾವತಿ ರಾಗದಲ್ಲಿರುವ 'ನಗುಮೋಮುಗಲವಾನಿ' ರಚನೆಯು ತೆಲುಗಿನಲ್ಲಿರುವ ಲಾಲಿ ಹಾಡೊಂದನ್ನು ನೆನಪಿಗೆ ತರುತ್ತದೆ. 'ಏಡುವಕು ಏಡುವಕು ವೆರ್ರಿ ನಾ ತಂಡ್ರಿ । ಯೇಡಿಸ್ತೇ ನಿನ್ನೆವರು ಎತ್ತುಕೊಂಟಾರು.'[೯] ಈ ರಚನೆಯು ತ್ಯಾಗರಾಜರ ನಗುಮೋಮು ರಚನೆಯ ರಾಗ ಲಯಗಳಲ್ಲೇ ಅಳವಟ್ಟಿದೆ.

ಇಷ್ಟೇ ಅಲ್ಲದೆ ತ್ಯಾಗರಾಜರು ಇತರ ಸಂಗೀತ ಪದ್ಧತಿಗಳ ಸಂಪರ್ಕ ಉಂಟಾದಾಗ, ಕರ್ನಾಟಕ ಸಂಗೀತದ ಅಂತಃಸತ್ವಕ್ಕೆ ಧಕ್ಕೆಯುಂಟಾಗದಂತೆ ಆ ಪದ್ಧತಿಯನ್ನೂ ಅನು ಸರಿಸಿ ರಾಗಗಳ ಅಳವಡಿಕೆ ಮಾಡಿದ್ದಾರೆ. ಹಿಂದೂಸ್ತಾನೀ ಸಂಗೀತದ ಹಮೀರ್ ಕಲ್ಯಾಣಿ, ಬೃಂದಾವನಸಾರಂಗಗಳಂಥ ರಾಗಗಳನ್ನೂ ಸುಂದರವಾಗಿ ಮೂಡಿಸಿದ್ದಾರೆ (ಮಾನಮುಲೇದಾ, ನೀ ದಾಸಾನುದಾಸ ಎಂಬೆರಡು ರಚನೆಗಳು ಹಮೀರ್ ಕಲ್ಯಾಣಿ ಯಲ್ಲೂ ಕಮಲಾಪ್ತಕುಲ ಬೃಂದಾವನ ಸಾರಂಗದಲ್ಲೂ ಕಾಣಬರುತ್ತವೆ). ಅಂದು ತಂಜಾವೂರಿನ ಬ್ಯಾಂಡ್‌ದಳದವರು ನುಡಿಸುತ್ತಿದ್ದ ಪಾಶ್ಚಾತ್ಯ ಸಂಗೀತ ಶೈಲಿಯಿಂದ ಪ್ರಭಾವಿತರಾಗಿ 'ರಮಿಂಚುವಾರೆವರುರಾ' (ಸುಪೋಷಿಣಿರಾಗ), 'ಶರಶರ ಸಮರೈಕ ಶೂರ' (ಕುಂತಲವರಾಳಿರಾಗ), 'ವರಲೀಲಾ ಗಾನಲೋಲ'(ಶಂಕರಾಭರಣ)ಗಳನ್ನು ಪಾಶ್ಚಾತ್ಯ ಧಾಟಿಯೋ ಎಂಬಂತೆ ಸೃಷ್ಟಿಸಿದ್ದಾರೆ.

**ತಾಳಗಳು** : ಸಂಗೀತದಲ್ಲಿ ಭಾಷಾಸಾಹಿತ್ಯವನ್ನು ಬಿಟ್ಟು ಉಳಿದ ಪ್ರಮುಖ ಪ್ರಮೇಯಗಳು ಎರಡು. ಅವು ಸ್ವರ-ರಾಗ ಮತ್ತು ಲಯ-ತಾಳ. ಈ ತತ್ವಗಳ ಕ್ರಮ ಬದ್ಧ ನಿಯಮಗಳ ವಿಕಾಸವೇ ಸಂಗೀತಶಾಸ್ತ್ರ. ಇದು ತನ್ನ ವಿಕಾಸದಲ್ಲಿ ಹಲವಾರು ಮಾರ್ಪಾಟುಗಳಿಂದ ಮುಂದುವರೆದಿದೆ. ಪ್ರಕೃತ, ಪ್ರಾಚೀನ ಕಾಲದಲ್ಲಿ ಹೇಳಲಾಗಿದ್ದ ನೂರಾರು ತಾಳಗಳು ಪುರಂದರರ ಕಾಲಕ್ಕಾಗಲೇ ರೂಢಿತಪ್ಪಿದ್ದವು. ಅವರ ಕಾಲದಲ್ಲಿ ಹೆಚ್ಚುಹೆಚ್ಚು ರೂಢಿಯಲ್ಲಿದ್ದ ತಾಳಗಳೆಂದರೆ ಸುಳಾದಿ ತಾಳಗಳು ಹಾಗೂ ಝೊಂಪಟ ತಾಳ. ವೆಂಕಟಮಖಿಯು ಈ ೮ ತಾಳಗಳನ್ನು ಬಿಟ್ಟು ಉಳಿದವುಗಳಲ್ಲಿ ಗೀತ ಪ್ರಬಂಧಗಳು ರಚನೆಯಾಗಕೂಡದೆನ್ನುತ್ತಾನೆ.[೧೦] ಈ ಸುಳಾದಿ ತಾಳಗಳಲ್ಲೇ ಕೆಲವು ಎಣಿಕೆಯಲ್ಲಿ ವ್ಯತ್ಯಾಸಗೊಂಡು ಬರಿಯಘಾತಗಳಿಂದಲೇ ಗುರುತಿಸುವ ರೂಢಿಯೂ ಪುರಂದರರ ಕಾಲದಲ್ಲೇ ಆಗಿದೆ. ಇವೇ ಛಾಪುತಾಳಗಳು. ಅಂತೆಯೇ ಝೊಂಪಟ ತಾಳವೂ ಆದಿತಾಳವಾಗಿ ಪರಿಣಮಿಸಿದೆ. ಪ್ರಾಚೀನವಾದ ಈ ಸಂಪ್ರದಾಯವನ್ನೇ ಅನುಸರಿಸಿ ತ್ಯಾಗರಾಜರೂ ಆದಿತಾಳ, ಸುಳಾದಿತಾಳಗಳಲ್ಲೊಂದಾದ ರೂಪಕತಾಳ

ಹಾಗೂ ಛಾಪುತಾಳಗಳಲ್ಲಿ ತಮ್ಮ ರಚನೆಗಳನ್ನು ಅಳವಡಿಸಿದ್ದಾರೆ. ಅಪರೂಪವಾಗಿ ಇತರ ಲಯಗಳಲ್ಲೂ ಅವರ ರಚನೆಗಳು ಕಾಣುವುದುಂಟು. ಸ್ಥೂಲವಾಗಿ ಹೇಳುವುದಾದರೆ ಉಪಲಬ್ಧವಿರುವ ಅವರ ರಚನೆಗಳ ಸಂಖ್ಯೆಯಲ್ಲಿ ಸುಮಾರು ಮುನ್ನೂರರಷ್ಟು ಆದಿತಾಳದಲ್ಲೂ (ಚತುರಶ್ರ ತ್ರಿಪುಟ), ಇನ್ನುಳಿದ ಅರ್ಧಭಾಗವು ರೂಪಕ, ಛಾಪು, ಝುಂಪೆ ಹಾಗೂ ಇತರ ಲಯತಾಳಗಳಲ್ಲೂ ಇವೆ. ಕೆಲವು ರಚನೆಗಳಲ್ಲಿ ಛಾಪು ಹಾಗೂ ತ್ರಿಶ್ರ ತ್ರಿಪುಟ ತಾಳಗಳಲ್ಲಿ ವ್ಯತ್ಯಾಸ ಕಾಣದಂತೆ ಮುದ್ರಣದಲ್ಲೂ, ಪ್ರಯೋಗದಲ್ಲೂ ವ್ಯತ್ಯಾಸಗೊಂಡಿರುವುದುಂಟು. ಉದಾಹರಣೆಗೆ, 'ಎಂದುಕುದಯರಾದುರಾ', 'ಏಮಿಜೇಸಿತೆನೇಮಿ' (ತೋಡಿ). ಈ ತಾಳಗಳಲ್ಲಿ ಅಕ್ಷರಕಾಲ ಪ್ರಮಾಣ ಒಂದೇ ಆಗಿ ಇಂಥ ವ್ಯತ್ಯಾಸ ಕಾಣಬಂದರೆ ಅಕ್ಷರಕಾಲ ಪ್ರಮಾಣದಲ್ಲಿ ಏಕರೀತಿಯಿಲ್ಲದಂಥ ಕೆಲವು ರಚನೆಗಳ ತಾಳ ತಿಳಿಸುವಲ್ಲೂ ಕೆಲವು ಗ್ರಂಥಗಳಲ್ಲಿ ವ್ಯತ್ಯಾಸ ಕಾಣಬರುತ್ತದೆ. ಉದಾಹರಣೆಗೆ, 'ರಾಮಾ ನೀವಾದುಕೊಂದುವೋ' (ಕಲ್ಯಾಣಿ), 'ರಾಮಚಂದ್ರ ನೀದಯ' (ಸುರುಟಿ), ಮನಸು ಸ್ವಾಧೀನ (ಶಂಕರಾಭರಣ).[೧೧]

ತ್ಯಾಗರಾಜರ ರಚನೆಗಳ ಸಾಹಿತ್ಯವನ್ನು (ಅದರ ಸಂಗೀತವನ್ನು ಮರೆತು) ಮಾತ್ರ ಓದಿದರೂ ಅವುಗಳಲ್ಲಿ ನಿಗದಿತ ರೀತಿಯ ಲಯವೊಂದು ಓದುಗನಿಗೆ ಕಾಣಬರುತ್ತದೆ. ಉದಾಹರಣೆಗೆ; 'ಗಿರಿರಾಜಸುತಾ ತನಯಾ ಸದಯಾ' (ಬಂಗಾಳ). ಇಲ್ಲಿ ಮೂರು ಅಕ್ಷರಗಳ ಗಣಗಳು ಸುಂದರವಾಗಿ ಮೂಡಿಬರುತ್ತವೆ.

ಗಿರಿರಾ ಜಸುತಾ ತನಯಾ ಸದಯಾ

ಇದೇ ರೀತಿಯನ್ನು ಶ್ರೀವೆಂಕಟೇಶ್ವರ ಸ್ತೋತ್ರದಲ್ಲೂ ಗಮನಿಸಬಹುದು.

ಕಮಲಾ ಕುಚಚೂ ಚುಕಕುಂ ಕುಮತೋ

ಮುಂತಾಗಿ.

ಹೀಗೆಯೇ, ರಾಮನೀಸಮಾನಮೆವರು (ಖರಹರಪ್ರಿಯ) ರಚನೆಯಲ್ಲಿ

ರಾಮ ನೀಸ ಮಾನ ಮೆವರು

ರಘು ವಂಶೋ ದ್ಧಾರ ಕ

ಎಂಬಂತೆ ಲಯವೊಂದರ ಅನುಭವವಾಗುತ್ತದೆ. ಅಂತೆಯೇ ವಂದನಮು (ಶಹನ) ರಚನೆಯಲ್ಲೂ ವಿಶಿಷ್ಟ ರೀತಿಯ ನಡೆಯೊಂದನ್ನು ಕಾಣಬಹುದು. ಇದರ ಪಲ್ಲವಿ ಭಾಗದಲ್ಲಿ ಕೆಲವು ಅಕ್ಷರಗಳೊಂದಿಗೆ ಘಾತಬಿದ್ದರೆ ಚರಣದಲ್ಲಿ ಒಂದಕ್ಷರ ತಳ್ಳಿ ಪ್ರತಿ ಅರ್ಧ ಆವರ್ತವೂ ಆರಂಭಗೊಳ್ಳುತ್ತದೆ. [ವಂದನಮುರ **ಘು** ನಂದನ ಸೇ **ತು** ಬಂಧನಾ ಭ **ಕ್ತ** ಚಂದನ ರಾ **ಮ** ಮತ್ತು **೯** ಪಿಂಟನಿನಮ್ಮು **೯** ಕೊಂಟನಿ ಶರ **೯** ಣಂಟನಿರ **೯** ಮ್ಮಂಟನಿ ಎಂಬಂತೆ.]

ತ್ಯಾಗರಾಜರು ಬಹುಮಟ್ಟಿಗೆ ಆದಿತಾಳದಲ್ಲಿ ಚತುರಶ್ರಗತಿ ಅಥವಾ ನಡೆಯ ಮಾದರಿಯನ್ನೇ ತಂದಿದ್ದಾರೆ. ಎದುಟ ನಿಲಚಿತೆ, ಮರಿಯಾದಗಾದುರ (ಶಂಕರಾ

ಭರಣ)ಗಳಲ್ಲಿ ಇದನ್ನು ಕಾಣಬಹುದು. 'ಪೂಲಪಾನ್ಪು ಮೀದ' (ಆಹಿರಿ) ಎಂಬ ದಿವ್ಯನಾಮ ರಚನೆಯಲ್ಲಿ ತ್ರಿಶ್ರಗತಿಯಿದೆ. ಹೀಗೆಯೇ ಪಲುಕವೇಮಿ 'ಪತಿತಪಾವನ' (ಆರಭಿ) ಎಂಬ ರಚನೆಯಲ್ಲಿ ತ್ರಿಶ್ರ ಲಘು ಅಳವಟ್ಟಿದೆ.

'ದರಿನಿ ತೆಲುಸುಕೊಂಟಿ' (ಶುದ್ಧಸಾವೇರಿ) ರಚನೆಯ ಪಲ್ಲವಿಭಾಗದಲ್ಲಿ ಅಳವಟ್ಟಿರುವ ಧಾತುಭಾಗ ತಾಳಪ್ರಸ್ತಾರ ಕ್ರಮವನ್ನೇ ಸೂಚಿಸುವಂತಿದೆ. ಆದಿತಾಳಾವರ್ತವೊಂದಕ್ಕೆ ಬರಬೇಕಾದ ಒಟ್ಟು ಅಕ್ಷರಗಳನ್ನು (ಹಾಗೆಯೇ ಉಳಿಸಿಕೊಂಡು) ವಿವಿಧ ರೀತಿಯಲ್ಲಿ ಸಂಯೋಜನೆ ಮಾಡಿರುವುದನ್ನು ನಾವಿಲ್ಲಿ ಕಾಣುತ್ತೇವೆ.

**ಎಡುಪು** : ತ್ಯಾಗರಾಜರ ರಚನೆಗಳಲ್ಲಿ ವಿವಿಧ ರೀತಿಯ ಎಡುಪುಗಳನ್ನು ಕಾಣಬಹುದು. ಉದಾಹರಣೆಗೆ,

(ಅ) ಸಮಎಡುಪು : ನೀದಯರಾದ (ವಸಂತಭೈರವಿ), ಸಮಯಮುದೆಲಿಸಿ (ಅಸಾವೇರಿ), ಮರಚೇವಾಡನಾ (ಕೇದಾರ), ಭಜನಪರುಲಕೇಲ (ಸುರುಟಿ).

(ಆ) ವಿಷಮ–ಅನಾಗತ : ಕದ್ದನುವಾರಿಕಿ (ತೋಡಿ), ಮೋಸಪೋಕು (ಗೌಳಿಪಂತು), ಮುದ್ದುಮೋಮು (ಕಮಲಾಮನೋಹರಿ), ತೊಲಿನೇಜೇಸಿನ ಪೂಜಾಫಲಮು (ಶುದ್ಧ ಬಂಗಾಳ). ಎಂದರೋ ಮಹಾನುಭಾವುಲು (ಶ್ರೀರಾಗ) ಆದಿತಾಳದಲ್ಲಿ ಮೊದಲ ಒಂದು ಎಣಿಕೆಯನ್ನೇ ತಳ್ಳಿ (ಪಲ್ಲವಿ ಮತ್ತು ಅನುಪಲ್ಲವಿ ಭಾಗಗಳು) ರಚನೆ ಆರಂಭವಾಗುತ್ತದೆ.

**ಅತೀತ** : ಇದು ಅಪರೂಪವಾಗಿ ಪ್ರಯೋಗವಾಗಿದೆ. ವೇಣುಗಾನಲೋಲುನಿಗನ (ಕೇದಾರಗೌಳ) ಕೃತಿಯ ಅನುಪಲ್ಲವಿ, ಅಲಿವೇಣು ಎಂಬ ಸಾಹಿತ್ಯದಲ್ಲಿ 'ಅಲಿ' ಅಕ್ಷರವು ತಾಳಾವರ್ತದ ಆರಂಭಕ್ಕೆ ಮೊದಲೇ ಪ್ರಯೋಗವಾಗುತ್ತದೆ. ಇಲ್ಲಿ ಇಂತಹ ಜೋಡಣೆ ರಚನೆಯ ಮಧ್ಯಭಾಗದಲ್ಲಿದ್ದರೆ 'ಚೆಡೇಬುದ್ಧಿ' (ಅಠಾಣ) ಎಂಬ ಆದಿ ತಾಳದ ಕೃತಿಯ ಆರಂಭವೇ ಅತೀತ ಗ್ರಹವಾಗಿದೆ.[೧೨]

| | | | | | |
|---|---|---|---|---|---|
| ｅｅｅｅ | ｅｅ | ｅｅｅರಿ | ‖ | ಸನಿಪಾ | ದನಿಪ |
| | | ಚೆ | ‖ | ಡೇ | ಬು ದ್ಧಿ |

**ದೇಶಾದಿ, ಮಧ್ಯಾದಿ ತಾಳಗಳು** : ತ್ಯಾಗರಾಜರು ಬಳಸಿರುವ ಮತ್ತೆರಡು ಮುಖ್ಯ ತಾಳಗಳು ದೇಶ್ಯಾದಿ ಹಾಗೂ ಮಧ್ಯಾದಿ ತಾಳಗಳು. ಇವು ಆದಿತಾಳದ ಎರಡು ರೂಪಗಳೇ (ದೇಶ್ಯ + ಆದಿ ; ಮಧ್ಯ + ಆದಿ). ದೇಶ್ಯವೆಂದರೆ ಹಿಂದೂಸ್ತಾನೀ ಸಂಗೀತ ಪದ್ಧತಿಯಿಂದ ನಮ್ಮಲ್ಲಿ ಬಳಕೆಗೆ ಬಂದುದು. ಮಧ್ಯಾದಿ ಎಂಬುದು ಮಧ್ಯಮ ಕಾಲ-ಧೃತಗತಿಯಲ್ಲಿ ಪ್ರಯೋಗವಾಗುವುದು ಎಂದು ಅರ್ಥ.

ದೇಶ್ಯಾದಿ, ಮಧ್ಯಾದಿ ತಾಳಗಳನ್ನು ತ್ಯಾಗರಾಜರು ಮತ್ತು ಅವರ ಶಿಷ್ಯ ಪರಂಪರೆಯಲ್ಲಿ ಮಾತ್ರಾ ಕಾಣುತ್ತೇವೆ. ತ್ಯಾಗರಾಜರ ಕಾಲದಲ್ಲಿ ತಂಜಾವೂರನ್ನಾಳಿದ ಶರಭೋಜಿ ಆಸ್ಥಾನದಲ್ಲಿ ಔತ್ತರೇಯ ಸಂಗೀತದ ಪ್ರಭಾವ ವಿಶೇಷವಾಗಿದ್ದು ಆ ಮೂಲಕ

ಈ ತಾಳಗಳು ನಮ್ಮಲ್ಲಿ ರೂಢಿಗೆ ಬಂದಿರಬಹುದು. ಅಲ್ಲದೆ ಹರಿಕಥಾ ವಿದ್ವಾಂಸರು (ಕೀರ್ತನಕಾರರು) ಈ ತಾಳಗಳನ್ನು ವಿಶೇಷವಾಗಿ ಬಳಸಿದ್ದಿರಬಹುದು. ಒಟ್ಟಾರೆ ತ್ಯಾಗರಾಜರ ಕಾಲದಲ್ಲೇ, ಅವರಿಂದಲೇ ಹೆಚ್ಚು ರೂಢಿಗೆ ಬಂದ ತಾಳಗಳಿವು.

ದೇಶ್ಯಾದಿ, ಮಧ್ಯಾದಿತಾಳಗಳಲ್ಲಿ ವ್ಯತ್ಯಾಸವೆಂಬುದು ಎಡುಪಿನಿಂದ ಮಾತ್ರಾ. ಎರಡಕ್ಷರ ಪ್ರಮಾಣವಿರುವ ರಚನೆಗಳಲ್ಲಿ (ಮಧ್ಯಲಯದ) ಮೂರು ಅಕ್ಷರ ಕಾಲ ವನ್ನು ಬಿಟ್ಟು, ಅನಾಗತ ಎಡಪು ಮಾಡಿದರೆ ದೇಶ್ಯಾದಿ ಎನ್ನಲಾಗುತ್ತದೆ. ಈ ತಾಳದಲ್ಲಿನ ತ್ಯಾಗರಾಜರ ಕೆಲವು ರಚನೆಗಳು ಸೀತಾಪತೇ (ಕಮಾಚ್), ಎಂತವೇಡುಕೊಂದೋ (ಸರಸ್ವತೀ ಮನೋಹರಿ), ಪರಲೋಕಭಯಮುಲೇಕ (ಮಂದಾರಿ), ವಿನ ರಾದ ನಾಮನವಿ (ದೇವಗಾಂಧಾರಿ) ಮುಂತಾದವು.

ಮಧ್ಯಾದಿ ತಾಳದಲ್ಲಿ (ಎಡುಪು - ವಿಳಂಬಲಯದ) ಎರಡು ಅಕ್ಷರಗಳನ್ನು ಬಿಟ್ಟು ಆರಂಭವಾಗುತ್ತದೆ. ಉದಾಹರಣೆಗೆ, ನನ್ನು ಪಾಲಿಂಪ (ಮೋಹನ), ಏಮನಿ ಮಾಟಾಡಿ ತಿವೋ (ತೋಡಿ), ಮೇರು ಸಮಾನ (ಮಾಯಾಮಾಳವಗೌಳ) ಮುಂತಾದುವು. ಮೂಲತಃ ಮೂರುಘಾತ ಮತ್ತು ಒಮ್ಮೆ ಕೈಬೀಸುವ ಕ್ರಿಯೆಯುಳ್ಳ (ಒಟ್ಟು ೮ ಅಕ್ಷರ ಕಾಲವನ್ನೇ ಹೊಂದಿದ್ದ) ಈ ತಾಳಗಳು ತಮ್ಮ ಈ ರೂಪವನ್ನು ಬಿಟ್ಟು ಆದಿತಾಳದಲ್ಲೇ ಎಡುಪಿನ ವ್ಯತ್ಯಾಸದಿಂದ ತೋರುವ ರೂಢಿ ಹಲವಾರು ವರ್ಷಗಳಿಂದಲೇ ಇದ್ದುದು. ಹೀಗಾಗಿಯೇ ದೇಶ್ಯಾದಿ, ಮಧ್ಯಾದಿ ಹಾಗೂ ಆದಿ ತಾಳಗಳೆಲ್ಲವನ್ನೂ ಏಕಪ್ರಕಾರವಾಗಿ ಗ್ರಂಥಗಳಲ್ಲಿ ಕಾಣುತ್ತೇವೆ.

ಒಟ್ಟಾರೆ ತ್ಯಾಗರಾಜರ ಸಮಕಾಲೀನರಾಗಿ, ಸಾಮಾನ್ಯವಾಗಿ ತ್ರಿಮೂರ್ತಿಗಳೆಂದು ಗುರುತಿಸಲ್ಪಡುವವರಲ್ಲಿ—ಶ್ಯಾಮಶಾಸ್ತ್ರಿಗಳ ಶೈಲಿಯಲ್ಲಿ ಲಯಭಾವ ತುಳುಕಿದ್ದರೆ, ಮುತ್ತುಸ್ವಾಮಿ ದೀಕ್ಷಿತರ ಶೈಲಿಯಲ್ಲಿ ರಾಗಭಾವ ತುಳುಕಿದೆ. ಆದರೆ ತ್ಯಾಗರಾಜರಲ್ಲಿ ಇವೆರಡೂ ಸಮಪ್ರಮಾಣದಲ್ಲಿ ಮೂಡಿರುವುದು, ಇವರ ರಚನೆಗಳ ಜನಪ್ರಿಯತೆಗೆ ಪ್ರಮುಖ ಕಾರಣಗಳಲ್ಲಿ ಒಂದಾಗಿದೆ. ಮೂಲತಃ ನಾದಯೋಗಿಗಳಾಗಿರುವ ತ್ಯಾಗ ರಾಜರಲ್ಲಿ ವಿಶಾಲವಾದ ರಾಗಪ್ರಸ್ತಾರ, ತಾಳಪ್ರಸ್ತಾರಗಳನ್ನು ವೈವಿಧ್ಯಮಯವಾಗಿ ಕಾಣಬಹುದಾದರೂ ಅದರ ಸಂಗ್ರಹರೂಪವನ್ನು ಮಾತ್ರಾ ಇಲ್ಲಿ ಪರಿಚಯಿಸಲಾಗಿದೆ.

**ಟಿಪ್ಪಣಿಗಳು**

೧. ಎಸ್. ಕೃಷ್ಣಮೂರ್ತಿಯವರ ಲೇಖನ, ಕನ್ನಡಪ್ರಭ ಪತ್ರಿಕೆ, ಲೇಖನ ಸಂಖ್ಯೆ ೨೫, ದಿನಾಂಕ ೨೧ ಜೂನ್ ೧೯೭೦.

೨. *Great Composers–II Tyagaraja*, P. Sambamurthy, ೧೯೭೦, ಪು ೪೯.

೩. Tyagaraja Bi-centenary Volume, The Journal of the Music Academy, Madras, Vol XXXIX, 1968. ಪು. ೪೭, ಡಾ. ಎಸ್. ರಾಮಕೃಷ್ಣ ಅವರ ಲೇಖನ.

೪. ಕರ್ನಾಟಕ ಸಂಗೀತ ವಾಹಿನಿ, ರಾ. ಸತ್ಯನಾರಾಯಣ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೧೯೮೦, ಪು. ೩೨೮.

೫. ಸಾಲಗ ಭೈರವಿ - ತ್ಯಾಗರಾಜಸ್ವಾಮಿ ಕೀರ್ತನಲು, ಕೆ.ವಿ.ಶ್ರೀನಿವಾಸ ಅಯ್ಯಂಗಾರ್, ಪು ೧೦೯ ಮತ್ತು ತ್ಯಾಗರಾಜ ಕೀರ್ತನಲು ವಿಶೇಷವಿವರಣಮು ಸಂ೧. ಕಲ್ಲೂರಿ ವೀರಭದ್ರಶಾಸ್ತ್ರಿ, ಸ್ವಧರ್ಮ ಸ್ವರಾಜ್ಯ ಸಂಘಮು, ಮದರಾಸು ೧೯೭೫, ಪು ೩೪೯.
ಮುಖಾರಿ *The Spiritual Heritage of Tyagaraja*, C.Ramanujachari & Dr.V.Raghavan,Ramakrishna Math, Madras, ೧೯೬೬, ಪು. ೪೩೯ ಮತ್ತು ತ್ಯಾಗರಾಜ ಕೀರ್ತನಲು, ಭಾಗ ೨, ಕಳಾಪ್ರವೀಣ ಮಂಚಾಳ ಜಗನ್ನಾಥರಾವು (ಸಂ) ವಾಡ್ರೇವು ಪುರುಷೋತ್ತಂ, ತಿರುಮಲ ತಿರುಪತಿ ದೇವಸ್ಥಾನ, ೧೯೮೧, ಪು ೩೬೦.

೬. ಕರ್ನಾಟಕ ಸಂಗೀತವಾಹಿನಿ, ರಾ. ಸತ್ಯನಾರಾಯಣ, ಪು ೩೦೫.

೭. ತ್ಯಾಗರಾಜ ಕೀರ್ತನಲು, ಭಾಗ ೬, ಕಳಾಪ್ರವೀಣ ಮಂಚಾಳ ಜಗನ್ನಾಥರಾವು (ಸಂ) ವಾಡ್ರೇವು ಪುರುಷೋತ್ತಂ, ಪು ೯೨.

೮. ಕನಕ ಸಾಹಿತ್ಯದರ್ಶನ. ಸಂಪುಟ ೧. (ಸಂ) ದೇ.ಜವರೇಗೌಡ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೦, ಪ್ರೊ. ಎಸ್. ಕೆ. ರಾಮಚಂದ್ರರಾವ್ ಅವರ ಲೇಖನದಲ್ಲಿನ ಉಲ್ಲೇಖ ಪು ೫೮೭.

೯. Tyagaraja Bi-centenary Volume ೧೯೬೮, ಪು . ೫೬, ವೈ. ಸತ್ಯನಾರಾಯಣ ಅವರ ಲೇಖನದಲ್ಲಿನ ಉಲ್ಲೇಖ.

೧೦. ಅಷ್ಟಾ ಪ್ರಸಿದ್ಧಾಲಂಕಾರಾ ಲಕ್ಷ್ಯಂತೇ ತತ್ರ ಝೋಂಪಟಃ ।
ಧ್ರುವೋ ಮಠ್ಯೋ ರೂಪಕಶ್ಚ ಝಂಪಾ ತ್ರಿಪುಟ ಏವ ಚ ।
ಅಠತಾಲ್ಯೆಕ ತಾಲೌ ಚೇತ್ಯಷ್ಟಾಲಂಕೃತಯಃ ಸ್ಮೃತಾಃ ।
ಏತನ್ನವಾತಿರಿಕ್ತಾಂಸ್ತು ನ ಗೀತೇಷು ನಿವೇಶಯೇತ್ ।
ಏವಮಷ್ಟಾವಲಂಕಾರಾ ಲಕ್ಷಿತಾ ಲಕ್ಷಸಮ್ಮತಾಃ ।
ಏತಾನ್ ಧ್ರುವಾದಿಕಾನ್ಸಪ್ತತಾಲಾನ್ಸೂಲಾದಿ ಸಂಜ್ಞಕಾನ್ ।
ಪ್ರಬಂಧೇಷುಚ ಸಂಯೋಜ್ಯಾಸ್ತಾಲ ಪ್ರಕರಣೋದಿತಾಃ ।
ತಾಲಾಃ ಸೂಲಾದಿಕಾಸ್ತ್ವೇತೇ ಸರ್ವ ಏವೇತಿ ನಿರ್ಣಯ ।
ಉಲ್ಲೇಖ ಕರ್ನಾಟಕ ಸಂಗೀತವೂ ದಾಸಕೂಟವೂ ಅರ್ಥಾತ್ ಭಾರತೀಯ ಆರ್ಯ ಸಂಗೀತದ ಇತಿಹಾಸವು, ಹುಲಗೂರು ಕೃಷ್ಣಮಾಚಾರ್ಯರು, ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ, ೧೯೫೧, ಪು. ೧೦೦.

೧೧. (ಅ) ರಾಮಾ ನೀವಾದುಕೊಂದುವೋ (ಕಲ್ಯಾಣಿ).
ಮಂಚಾಲ ಜಗನ್ನಾಥರಾವು ಭಾಗ ೬ರಲ್ಲಿ ರೂಪಕ ತಾಳ ಎನ್ನುತ್ತಾರೆ. ಕೆ. ವಿ. ಶ್ರೀನಿವಾಸ ಅಯ್ಯಂಗಾರ್ಯರು, ಕಲ್ಲೂರಿ ವೀರಭದ್ರಶಾಸ್ತ್ರಿಗಳು ಮತ್ತು ಡಾ. ವಿ. ರಾಘವನ್‌ರವರು ಆದಿತಾಳವೆಂದಿದ್ದಾರೆ.
(ಆ) ರಾಮಚಂದ್ರನೀದಯ (ಸುರುಟಿ).
ಮಂಚಾಳ ಜಗನ್ನಾಥರಾವು ಭಾಗ ೪ರಲ್ಲಿ ತ್ರಿಶ್ರ ಏಕತಾಳ ಎಂದಿದ್ದರೆ. ಕೆ.ವಿ. ಶ್ರೀನಿವಾಸ

ಅಯ್ಯಂಗಾರ್ಯರು ಮತ್ತು ಕಲ್ಲೂರಿ ವೀರಭದ್ರಶಾಸ್ತ್ರಿಗಳು ಹಾಗೂ ವಿ. ರಾಘವನ್‌ರವರು ದೇಶಾದಿ ತಾಳವೆನ್ನುತ್ತಾರೆ.

(೩) ಮನಸು ಸ್ವಾಧೀನಮೈನ (ಶಂಕರಾಭರಣ) ಭಾಗ ೪ರಲ್ಲಿ ತ್ರಿಪುಟತಾಳ ಎನ್ನುತ್ತಾರೆ. ಕೆ.ವಿ. ಶ್ರೀನಿವಾಸಅಯ್ಯಂಗಾರ್, ಕಲ್ಲೂರಿ ವೀರಭದ್ರಶಾಸ್ತ್ರಿ ಹಾಗೂ ಡಾ.ವಿ. ರಾಘವನ್‌ರವರ ಪ್ರಕಾರ ಈ ರಚನೆಗೆ ರೂಪಕ ತಾಳವಾಗಿದೆ.

೧೨. ತ್ಯಾಗರಾಜಕೀರ್ತನಲು, ಭಾಗ ೫, ಕಳಾಪ್ರವೀಣ ಮಂಚಾಳ ಜಗನ್ನಾಥರಾವು (ಸಂ.) ವಾಡ್ರೇವು ಪುರುಷೋತ್ತಂ, ಪು. ೧೦೧.

೭

# ಸಮುದಾಯ ಕೃತಿಗಳು ಹಾಗೂ ಕ್ಷೇತ್ರ ಕೃತಿಗಳು

ತ್ಯಾಗರಾಜರು ತಮ್ಮ ಜೀವಿತಾವಧಿಯಲ್ಲಿ ಸಂದರ್ಶಿಸಿದ ತೀರ್ಥಕ್ಷೇತ್ರಗಳು ಕೆಲವು ಮಾತ್ರ. ಇಲ್ಲಿನ ಕ್ಷೇತ್ರ ದೇವತೆಗಳನ್ನು ಕುರಿತು, ತಮ್ಮ ಆರಾಧ್ಯ ದೈವದಲ್ಲಿದ್ದಷ್ಟೇ ತೀವ್ರ ಭಕ್ತಿಯಿಂದ ಅವರು ಹಾಡಿದ್ದಾರೆ. ಇದರಲ್ಲಿ ಕನಿಷ್ಠ ಒಂದು ರಚನೆಯಿಂದ ಆರಂಭವಾಗಿ ಹತ್ತಕ್ಕೂ ಮೀರಿದಂತೆ ರಚನೆಗಳಿವೆ ಎನ್ನಬಹುದು. ಇವೇ ಕ್ಷೇತ್ರ ಕೃತಿಗಳು. ಕ್ಷೇತ್ರ ಕೃತಿಗಳೇ ಅಲ್ಲದೇ ನಿರ್ದಿಷ್ಟ ದೇವತೆಗಳನ್ನು ಕುರಿತಂತೆ ಮತ್ತು ನಿರ್ದಿಷ್ಟ ರಾಗಸಮೂಹವನ್ನೊಳಗೊಂಡಂತೆಯೂ ಕೃತಿ ಸಮುದಾಯವುಂಟು. ಎಂದರೆ ತುಳಸೀ ಕೃತಿಗುಚ್ಛ, ನಾರದ ಕೃತಿಗುಚ್ಛಗಳೂ, ಘನರಾಗಪಂಚಕಗಳೂ, ಇವರ ಕೃತಿ ಭಂಡಾರದಲ್ಲಿ ಕಾಣಬರುತ್ತವೆ. ಹೀಗೆ ತ್ಯಾಗರಾಜ ವಿರಚಿತ ಸಮುದಾಯ ಕೃತಿಗಳು ಹಾಗೂ ಕ್ಷೇತ್ರ ಕೃತಿಗಳೆಂದರೆ,

೧. ತಿರುವೈಯಾರು ಕೃತಿಗುಚ್ಛ
೨. ಶ್ರೀರಂಗ ಪಂಚರತ್ನ
೩. ತಿರುವಟ್ಟಿಯೂರ್ ಪಂಚರತ್ನ
೪. ಲಾಲ್‌ಗುಡಿ ಪಂಚರತ್ನ
೫. ಕೋವೂರು ಪಂಚರತ್ನ
೬. ಘನರಾಗ ಪಂಚರತ್ನ
೭. ತುಲಸೀ ಕೃತಿಗುಚ್ಛ
೮. ಕಂಚಿಕ್ಷೇತ್ರ ಕೃತಿಗಳು
೯. ನಾಗಪಟ್ಟಣಕ್ಷೇತ್ರ ಕೃತಿಗಳು
೧೦. ಷೋಲಿಂಘರ್ ಕ್ಷೇತ್ರ ಕೃತಿಗಳು
೧೧. ತಿರುಪತಿಕ್ಷೇತ್ರ ಕೃತಿಗಳು
೧೨. ಶೀರ್ಗಾಳೀ ಅಥವಾ ಬ್ರಹ್ಮಪುರಿ ಕ್ಷೇತ್ರ ಕೃತಿಗಳು
೧೩. ಕಾವೇರಿ ವರ್ಣನೆ
೧೪. ಧನುಷ್ಕೋಟಿಯ ಪ್ರಸ್ತಾಪ

ತ್ಯಾಗರಾಜರ, ಬಹುತೇಕ ಕೃತಿಗುಚ್ಛಗಳಲ್ಲಿ ಐದು ರಚನೆಗಳು ಒಗ್ಗೂಡಿವೆ. ಸಂಖ್ಯೆ ಐದಕ್ಕೆ ನಮ್ಮಲ್ಲಿ ವಿಶೇಷ ಪ್ರಾಧಾನ್ಯವುಂಟು. ಇದನ್ನು ವಿಷದಪಡಿಸುವ ಕೆಲವು ಉದಾಹರಣೆಗಳೆಂದರೆ,

೧. ದೇವರು ಪಂಚಭೂತಗಳ ಒಡೆಯ.
೨. ಶಿವನು ಪಂಚಮುಖಿ. ಆತನ ಪಂಚಮುಖಿಗಳ ಹೆಸರು ಸದ್ಯೋಜಾತ,

ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನ. ಗಣಪತಿಯನ್ನು ಪಂಚಮಾತಂಗಮುಖನೆನ್ನುತ್ತಾರೆ. ದೇವಿ ಗಾಯತ್ರಿಯು ಪಂಚಮುಖಿ ಯಾಗಿದ್ದಾಳೆ.

೩. ದೇವರ ಪಂಚಕೃತ್ಯಗಳು—ಸೃಷ್ಟಿ, ಸ್ಥಿತಿ, ಲಯ, ತಿರೋಭಾವ ಮತ್ತು ಅನುಗ್ರಹ.

೪. (ದೇವ) ಪಂಚಾಯತನ— ಆದಿತ್ಯಮಂಬಿಕಾವಿಷ್ಣುರ್ಗಣನಾಥಮಹೇಶ್ವರಮ್.

೫. ಮನ್ಮಥನ ಪಂಚಬಾಣಗಳು—ಅರವಿಂದ, ಅಶೋಕ, ಚೂತ, ನವಮಲ್ಲಿಕಾ ಮತ್ತು ನೀಲೋತ್ಪಲ. ಇವುಗಳ ಪಂಚಶಕ್ತಿಗಳು ಕ್ರಮವಾಗಿ ಹರ್ಷಣ, ಮೋಹನ, ಮದನ, ಶೋಷಣ ಮತ್ತು ಸಂದೀಪನ.

೬. ಮಹಾಪಾತಕನಾಶಕರಾದ ಪಂಚಕನ್ಯೆಯರು—ಅಹಲ್ಯಾ, ದ್ರೌಪದೀ, ತಾರಾ, ತಾರಾ, ಮಂಡೋದರಿ. ಇವರಲ್ಲಿ ಅಹಲ್ಯ, ದ್ರೌಪದಿಯರನ್ನು ವಿಶೇಷವಾಗಿ ತ್ಯಾಗರಾಜರು ಪ್ರಸ್ತಾಪಿಸಿರುವುದನ್ನು ಕಾಣಬಹುದು.

೭. ಪಂಚಯಮಗಳು—ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ.

೮. ಮನುಷ್ಯನ ಪಂಚೇಂದ್ರಿಯಗಳು—ಶ್ರೋತ್ರ (ಕಿವಿ), ನೇತ್ರ (ಕಣ್ಣು), ಜಿಹ್ವಾ (ನಾಲಿಗೆ), ಘ್ರಾಣ (ಮೂಗು), ತ್ವಕ್ (ಸ್ಪರ್ಶ ಅಥವಾ ಚರ್ಮ).

ಹೀಗೆಯೇ ಪಂಚಗವ್ಯ, ಪಂಚಪತ್ರೆ, ಪಂಚಾಮೃತ, ಪಂಚಭಕ್ಷ್ಯ ಮುಂತಾದವು.[೧] ಸಂಗೀತಕ್ಕೆ ನೇರವಾಗಿ ಸಂಬಂಧಿಸಿದಂತೆ ಪ್ರಾಚೀನವಾದ ಪಂಚಮುಖ ವಾದ್ಯವನ್ನೂ ಇಲ್ಲಿ ಸ್ಮರಿಸಬಹುದು. ತ್ಯಾಗರಾಜರ ವಾಸಸ್ಥಳಕ್ಕೆ ತಿರುವೈಯಾರು ಎಂದು ಹೆಸರಾಗಲು ಇಲ್ಲಿ ಹರಿಯುವ ಪಂಚನದಿಗಳೇ ಕಾರಣವಾಗಿದೆ.

ಹೀಗೆ, ಸಂಖ್ಯೆ ಐದಕ್ಕೆ ಇರುವ ಪ್ರಾಧಾನ್ಯದಿಂದಲೇ ತ್ಯಾಗರಾಜರು ತಮ್ಮ ಕೃತಿಗುಚ್ಛಗಳಲ್ಲಿ ಬಹುಮಟ್ಟಿಗೆ ಐದು ರಚನೆಗಳನ್ನು ಅಳವಡಿಸಿರಬಹುದು. ಇದರಂತೆಯೇ ತ್ಯಾಗರಾಜರ ಸಮಕಾಲೀನರೇ ಆಗಿದ್ದ ಶ್ರೀಮುತ್ತುಸ್ವಾಮಿ ದೀಕ್ಷಿತರೂ ಅಧಿಕ ಸಂಖ್ಯೆಯಲ್ಲಿ ಕೃತಿಗುಚ್ಛಗಳನ್ನು ರಚಿಸಿದ್ದಾರೆಂಬುದನ್ನು ಪ್ರಾಸಂಗಿಕವಾಗಿ ಇಲ್ಲಿ ಸ್ಮರಿಸಬಹುದು.

## ೧. ತಿರುವೈಯಾರು ಕೃತಿಗುಚ್ಛ

ತ್ಯಾಗರಾಜರು ತಿರುವಾರೂರಿನಲ್ಲಿ ಜನಿಸಿದರೂ ತಿರುವೈಯಾರಿನಲ್ಲಿ ನೆಲೆಸಿದರು. ಬಹುಕಾಲ ಅವರು ಈ ಕ್ಷೇತ್ರದಲ್ಲೇ ಇದ್ದುದರಿಂದ ಕ್ಷೇತ್ರದೇವತೆಗಳಾದ ಪಂಚನದೀಶ್ವರ ಮತ್ತು ಧರ್ಮಾಂಬಿಕೆಯೊಡನೆ ಅವರು ನಿತ್ಯಾನುಬಂಧವನ್ನು ಇರಿಸಿ ಸಹಜವಾಗಿಯೇ ಹೆಚ್ಚು ರಚನೆಗಳಲ್ಲಿ ಅವರನ್ನು ಸ್ತುತಿಸುತ್ತಾರೆ. ಅವರು ಇಲ್ಲಿನ ದೇವತೆ

ಗಳನ್ನು ಒಟ್ಟಾರೆ ಸುಮಾರು ಹದಿನಾಲ್ಕು ರಚನೆಗಳಲ್ಲಿ ಸ್ತುತಿಸುವುದು ಕಾಣಬರುತ್ತದೆ.* ಈ ಕೃತಿಗಳೆಂದರೆ :

೧. ಕರುಣಜೂಡವಮ್ಮ – ತೋಡಿ – ಆದಿ
೨. ಇನ್ನಾಳ್ಳುವಲೆ ವಿಂತಸೇಯಕೇ – ದೇಶ್ಯತೋಡಿ – ಛಾಪು
೩. ಪರಾಶಕ್ತಿಮನುಪರಾದ – ಸಾವೇರಿ – ಆದಿ
೪. ನೀವು ಬ್ರೋವವಲೆನಮ್ಮ – ಸಾವೇರಿ – ಆದಿ
೫. ಬಾಲೇ ಬಾಲೇಂದು ಭೂಷಣೆ – ರೀತಿಗೌಳ – ಆದಿ
೬. ನನ್ನುಗನ್ನತಲ್ಲಿ ನಾಭಾಗ್ಯಮಾ – (ಎರಡು ರಾಗಗಳನ್ನು ಹೇಳಲಾಗಿದೆ) – ದೇಶಾದಿ
೭. ಅಂಬ ನಿನ್ನು ನಮ್ಮಿತಿನಂಟೇ ನೀಕನುಮಾನಮೇಮಮ್ಮಾ?– ಆರಭಿ – ಆದಿ
೮. ಅಮ್ಮ ಧರ್ಮ ಸಂವರ್ಧಿನಿ – ಅಠಾಣ – ಆದಿ

---

* ಪಂಚನದೀಶ ಪಾಹಿಮಾಂ (ಗೌರೀಮನೋಹರಿ) ಎಂಬ ಕೃತಿಯೂ ತ್ಯಾಗರಾಜಾಂಕಿತದಲ್ಲೇ ಒಂದೆರಡು ಗ್ರಂಥಗಳಲ್ಲಿ ಮಾತ್ರ ಕಾಣಬರುತ್ತದೆ (ನೋಡಿ, ತ್ಯಾಗರಾಜ ಕೀರ್ತನಲು, ಭಾಗ ೩, ಸಂಪಾದಕರು ವಾಡ್ರೇವು ಪುರುಷೋತ್ತಂ ಮತ್ತು ಶ್ರೀ ತ್ಯಾಗರಾಜ ಕೃತಿಮಂಜರಿ ಸಂಪುಟ ೨, ಡಾ. ವಿ. ಎಸ್. ಸಂಪತ್ಕುಮಾರಾಚಾರ್ಯ). The Spiritual Heritage of Thyagaraja, Rare and Unpublished Kirtanams of Tyagaraja, ತ್ಯಾಗರಾಜಸ್ವಾಮಿ ಕೀರ್ತನಲು, ತ್ಯಾಗರಾಜ ಕೀರ್ತನಲು ವಿಶೇಷ ವಿವರಣಮು–ಮುಂತಾದ ಗ್ರಂಥಗಳಲ್ಲಿ ಈ ಕೃತಿ ಕಾಣಬರದು. ಈ ಕೃತಿಯಲ್ಲಿ ತ್ಯಾಗರಾಂಜಾಂಕಿತವಿದೆಯಾದರೂ ಸಾಹಿತ್ಯ ಅಷ್ಟಾಗಿ ಹೊಂದಿಕೆಯಾದಂತಿಲ್ಲ. ವಾಡ್ರೇವು ಪುರುಷೋತ್ತಂ ಅವರು ಈ ಕೃತಿಯ ಸಾಹಿತ್ಯ ಭಾಗವು ಶಿಥಿಲಗೊಂಡು ಅಸ್ತವ್ಯಸ್ತವಾಗಿದ್ದು ತ್ಯಾಗರಾಜಾಂಕಿತ ಉಪಲಬ್ಧ ಕೃತಿಗಳಲ್ಲಿ ಇದೂ ಒಂದಾಗಿರುವುದರಿಂದ ಪ್ರಸ್ತುತಪಡಿಸಿರುವುದಾಗಿ ಹೇಳುತ್ತಾರೆ. ನೋಡಿ ಸಂಪುಟ ೩, ಪುಟ ೨೬೦. ಈ ಕೃತಿಯ ಸಾಹಿತ್ಯವು ಹೀಗಿದೆ.

ಪ ॥ ಪಂಚನದೀಶ ಪಾಹಿಮಾಂ ಹರೇ । ಪಾಹಿಮಾಂ ಪರಮಭಕ್ತ ಮನೋಹರ ॥
ಅಪ ॥ ಎಂಚಿ ಜೂಚುಟಕಿದಿ ವೇಳಗಾದು । ಮಂಚಿ ಸಮಯಮುಗ ಮಾನಮು ಕಾಪಾಡುಮು ॥
ಚರಣ ॥ ಪಂಚಭೂತಮುಲೆಲ್ಲ ಬಾಗುಗಾನು । ಪಂಚಾಕ್ಷರಮಂತ್ರ ಪ್ರಣವನಾದ ॥
ಪಂಚಶೃತಿ ಭಾವಮು ಪಲುಮಾರು ಪಲುಕಮನಿ । ಪಂಚಿನ ಶ್ರೀ ತ್ಯಾಗರಾಜುಡವಗು ॥

ಇನ್ನು 'ಮಾರವೈರಿರಮಣಿ' (ನಾಸಿಕಾಭೂಷಣಿ) ಎಂಬ ಕೃತಿಯನ್ನೂ ಈ ಗುಚ್ಛದಲ್ಲೇ ಸೇರಿಸಿರುವುದುಂಟು (ನೋಡಿ, An Anthology of Indian Music, Editors : M. Hariharan, Gowri Kuppuswamy). ಈ ಪುಸ್ತಕದ ವಿನಹ ಬಹುತೇಕ ಇತರ ಪುಸ್ತಕಗಳಲ್ಲಿ ಈ ಕೃತಿಯು ತಿರುವ್ವೆಯಾರು ಕೃತಿಗುಚ್ಛದಲ್ಲಿ ಸೇರಿಸಿರುವುದು ಕಂಡಿಲ್ಲ. ಬಹುತೇಕ ಪುಸ್ತಕಗಳಲ್ಲಿ ಈ ರಚನೆಯು ಕಾಣಸಿಗದು. ಕೃತಿಯ ಚರಣದಲ್ಲಿ ದೇವಿಗೆ 'ಧರ್ಮವರ್ಧಿನೀ' ಎಂಬ ಸಂಬೋಧನೆ ಕಾಣಬರುವುದಾದರೂ ಇದು ಕ್ಷೇತ್ರದೇವತೆ ಧರ್ಮಸಂವರ್ಧಿನಿಮುದ್ರೆ ಅಲ್ಲವೆನಿಸುತ್ತದೆ. ಏಕೆಂದರೆ, ಸಾಮಾನ್ಯವಾಗಿ ದೇವಿ ನಾಮಸ್ತುತಿಗಳಲ್ಲಿ ಧರ್ಮವನ್ನು ವರ್ಧಿಸುವವಳೆಂಬ ವಿಶೇಷಣ ಕಾಣಬರುವುದುಂಟು. ಉಪಲಬ್ಧ ಸಾಹಿತ್ಯ ಭಾಗಗಳನ್ನಾಧರಿಸಿದರೆ ಈ ಕೃತಿಯನ್ನು ತಿರುವ್ವೆಯಾರ್ ಕೃತಿಗುಚ್ಛದಲ್ಲಿ ಅಳವಡಿಸದಿದ್ದರೂ ತಪ್ಪಾಗದು. ತ್ಯಾಗರಾಜಾಂಕಿತ ಇಲ್ಲದಿರುವುದು ಈ ಕೃತಿಯ ಮತ್ತೊಂದು ಗಮನಾರ್ಹ ಅಂಶ. ಅಂತೆಯೇ ಮೇಲಿನ ಪಟ್ಟಿಯಲ್ಲಿ ಈ ರಚನೆಯನ್ನು ಹೆಸರಿಸಿಲ್ಲ.

೯. ಶಿವೇ ಪಾಹಿಮಾಂ ಅಂಬಿಕೆ – ಕಲ್ಯಾಣಿ – ಆದಿ
೧೦. ವಿಧಿ ಶಕ್ರಾದುಲಕು ದೊರಕುನಾ ?– ಯಮುನಕಲ್ಯಾಣಿ – ರೂಪಕ
೧೧. ಮುಚ್ಚಟ ಬ್ರಹ್ಮಾದುಲಕು ದೊರಕುನಾ ?– ಮಧ್ಯಮಾವತಿ – ಆದಿ
೧೨. ಇಲಲೋ ಪ್ರಣತಾರ್ಥಿಹರುಡನುಚು – ಅಠಾಣ – ಆದಿ
೧೩. ಏಹಿ ತ್ರಿಜಗದೀಶ – ಸಾರಂಗ – ಛಾಪು
೧೪. ಎವರುನ್ನಾರು ಬ್ರೋವ*– ಮಾಳವಶ್ರೀ – ಆದಿ

**ಕ್ಷೇತ್ರವಿವರ** : ತಿರವೈಯಾರು ಪದದಲ್ಲಿ 'ತಿರು' ಎಂದರೆ ಮಂಗಳಕರವಾದ 'ಐಯ್ಯಾರು' ಎಂದರೆ ಪಂಚನದಿಗಳು ಎಂದು ಅರ್ಥವಾಗುತ್ತದೆ. ಶ್ರೇಷ್ಠವಾದ ಈ ಸ್ಥಳವು ಪಾರ್ವತೀ-ಪರಮೇಶ್ವರರ ಕ್ಷೇತ್ರ. ಇಲ್ಲಿನ ದೇವರಿಗೆ 'ಪಂಚನದೀಶ' ಅಥವಾ 'ಪ್ರಣತಾರ್ಥಿಹರ'ನೆಂದೂ, ದೇವಿಗೆ 'ಧರ್ಮಸಂವರ್ಧಿನಿ' ಎಂದೂ ಹೆಸರುಂಟು. ಇಲ್ಲಿ ಹರಿಯುವ ಪಂಚನದಿಗಳೆಂದರೆ ಕಾವೇರಿ, ಅರಶಲಾರ್, ವೆನ್ನಾರು, ವಡಿಯಾರು ಮತ್ತು ಕುಡುಮುರುಟ್ಟಿ. ಐದು ನದಿಗಳು ಹರಿಯುವ ಮಂಗಳಕರ ಕ್ಷೇತ್ರವೆಂದೇ ಇದನ್ನು 'ತಿರುವೈಯಾರು' ಎನ್ನುತ್ತಾರೆ.

ಮೇಲೆ ತಿಳಿಸಿರುವ ಪಟ್ಟಿಯಲ್ಲಿ 'ಏಹಿ ತ್ರಿಜಗದೀಶ', 'ಇಲಲೋ ಪ್ರಣತಾರ್ಥಿಹರುಡನುಚು', 'ಎವರುನ್ನಾರು ಬ್ರೋವ' ಹಾಗೂ 'ಮುಚ್ಚಟ ಬ್ರಹ್ಮಾದುಲಕು ದೊರಕುನ'— ಈ ಕೃತಿಗಳು ಶಿವಸ್ತುತಿಯೂ, ಉಳಿದವು ಧರ್ಮಸಂವರ್ಧಿನೀ ಸ್ತುತಿಯೂ ಆಗಿವೆ. ಇಲ್ಲಿ ತ್ಯಾಗರಾಜರು ಪಂಚನದೀಶನನ್ನು ಹೀಗೆ ಪ್ರಾರ್ಥಿಸುತ್ತಾರೆ.

'ಮಂಗಳಕರನೂ ಶುಭಾಂಗನೂ ಆದ ಪಂಚನದೀಶ್ವರನೇ, ನನ್ನನ್ನು ರಕ್ಷಿಸು. ನೀನಲ್ಲದೆ ರಕ್ಷಿಸುವವರಿನ್ನಾರು ? ಚಿತ್ತಚಾಂಚಲ್ಯವಿಲ್ಲದೆ, ಏಕಾಗ್ರತೆಯಿಂದ ಧ್ಯಾನಿಸುವ ಮರ್ಮವನ್ನು ನೀನೇ ತಿಳಿಸು. ಪಾಪನಾಶನೇ ಅಗಸ್ತ್ಯನಿಂದ ಸ್ತುತಿಸಲ್ಪಟ್ಟವನೇ ತ್ಯಾಗರಾಜರೂಪನೇ ರಕ್ಷಿಸು.'

ಶಂಕರರು ಶಿವಾನಂದಲಹರಿಯಲ್ಲಿ ಪ್ರಾರ್ಥಿಸಿದಂತೆಯೇ ಇಲ್ಲಿ ತ್ಯಾಗರಾಜರೂ ಮನಃಸ್ಥಿರತೆಗಾಗಿ ಪ್ರಾರ್ಥಿಸುತ್ತಿದ್ದಾರೆ.

> ಕಪಾಲಿನ್ ಭಿಕ್ಷೋಮೇ ಹೃದಯಕಪಿಮತ್ಯಂತಚಪಲಂ
> ದೃಢಂ ಭಕ್ತ್ಯಾ ಬದ್ಧ್ವಾ ಶಿವ ಭವದಧೀನಂ ಕುರುವಿಭೋಃ[೨]

---

* ತ್ಯಾಗರಾಜರ ಕೃತಿಗಳನ್ನು ಪ್ರಸ್ತುತಪಡಿಸಿರುವ ಬಹುತೇಕ ಗ್ರಂಥಗಳಲ್ಲಿ ಈ ಕೃತಿ ಕಾಣಬರದು. ತ್ಯಾಗರಾಜಾಂಕಿತ ಕೃತಿಗಳೆಲ್ಲವನ್ನೂ ಹೊರತಂದಿರುವ ವಾಡ್ರೇವು ಪುರುಷೋತ್ತಮರೂ ಈ ಕೃತಿಯನ್ನು ಪ್ರಸ್ತಾಪಿಸಿಲ್ಲ. ಇವರು 'ಮಾಳವಶ್ರೀ' ರಾಗದಲ್ಲಿ 'ಎನ್ನಾಳ್ಳುತಿರುಗೇದಿ' ಎಂಬ ಒಂದು ರಚನೆಯನ್ನು ಮಾತ್ರ ತಿಳಿಸುತ್ತಾರೆ. ಆದರೆ ಕಲ್ಲೂರಿ ವೀರಭದ್ರಶಾಸ್ತ್ರಿಗಳು ಸಂಪುಟ ೨ ರ ಅನುಬಂಧದಲ್ಲಿ ಈ ಕೃತಿಯನ್ನು ನೀಡಿದ್ದಾರೆ. ಕೃತಿಯಲ್ಲಿ ವಿಶ್ವೇಶ ಶ್ರೀ ಪಂಚನದೀಶ ಎಂಬ ಕ್ಷೇತ್ರದೇವತಾಮುದ್ರೆ ಕಾಣಬರುತ್ತದೆ.

**ಮನಸಾರಗ ಧ್ಯಾನಿಂಪನು ಮನಸು ನಿಲುಪು ಮರ್ಮ್ಂಬು ದೆಲಿಪಿ**
**ತನವಾಡನೇ ದಲಚಿ ಧೈರ್ಯಮೊಸಗು**

(ಎವರುನ್ನಾರು ಬ್ರೋವ)

ಮಾನವ ಸಹಜ ಭಾವಗಳಿಂದ ತ್ಯಾಗರಾಜರೇನೂ ಹೊರತಲ್ಲ. ಒಮ್ಮೆ ಅವರು ದೀನರಾಗಿ ದೇವರನ್ನು ಪ್ರಾರ್ಥಿಸಿದರೆ ಮತ್ತೊಮ್ಮೆ ಭಕ್ತಿಮಾರ್ಗದಲ್ಲಿ ನಡೆದರೂ ತಮ್ಮ ಇಚ್ಛೆ ಕೈಗೂಡಲಿಲ್ಲವೆಂದು ದೇವರನ್ನು ನಿಂದಿಸುತ್ತಾರೆ. ಇಂತಹ ಮನಃಸ್ಥಿತಿಯ ಶಿವಕೃತಿಯೊಂದು ಈ ಗುಚ್ಛದಲ್ಲಿದೆ. ಅವರು ರೋಷದಿಂದ ಪಂಚನದೀಶನನ್ನು ಹೀಗೆ ಪ್ರಶ್ನಿಸುತ್ತಾರೆ.

"ಈ ಲೋಕದಲ್ಲಿ ನಿನಗೆ ಶಂಕರನೆಂದೂ (ಮಂಗಳಕರ), ಪ್ರಣತಾರ್ಥಿಹರನೆಂದೂ ಹೆಸರನ್ನು ಇಟ್ಟವರಾರು ? ಸ್ಮರಣ ಮತ್ತು ವಂದನ ಭಕ್ತಿಯಿಂದ ಚಿರಕಾಲವೂ ನಿನ್ನನ್ನು ಆಶ್ರಯಿಸಿದೆ. ನನ್ನ ಕೈ ಕಾಲ್ಗಳೂ, ಹಣೆ ಭುಜಗಳೂ ನೆಲತಾಗುವಂತೆ, ಎಂದರೆ ಸಾಷ್ಟಾಂಗ ಪ್ರಣಾಮವನ್ನು ನಾನು ಮಾಡಲಿಲ್ಲವೆ ? ಶರಣೆಂದು ನಾನು ಮೊರೆಯಿಡ ಲಿಲ್ಲವೆ ?" ಇಲ್ಲಿ ದೇವರ ದಯೆ ತಮಗೆ ಲಭ್ಯವಾಗಿಲ್ಲ ಎಂಬುದು ಅವರ ಈ ನಿಂದಾ ಸ್ತುತಿಗೆ ಕಾರಣವಾಗಿದೆ.

'ಮುಚ್ಚಟ ಬ್ರಹ್ಮಾದುಲಕು' ಕೃತಿಯಲ್ಲಿ ಇದೇ ಪಂಚನದೀಶನನ್ನು ಅವರು ಮದು ಮಗನಂತೆ ಅದ್ಭುತವಾಗಿ ಚಿತ್ರಿಸುತ್ತಾರೆ. ಪರಮಪಾವನೆಯಾದ ಪಾರ್ವತಿಯನ್ನು ಸ್ಮರಿ ಸುತ್ತಾ "ಪರಮೇಶ್ವರನು ಉತ್ಸವದಲ್ಲಿ ಹೊರಟಿದ್ದಾನೆ. ದೇವತೆಗಳು ಹೂಮಳೆ ಸುರಿಸಿ ದ್ದಾರೆ. ನಿಜಭಕ್ತರು ಹಾಡುತ್ತಿದ್ದಾರೆ. ದೇಹದ ತುಂಬಾ ಆಭರಣಗಳನ್ನೂ, ಮಲ್ಲೆ ಹಾರಗಳನ್ನೂ ಆತ ಧರಿಸಿದ್ದಾನೆ. ವಿವಿಧ ರೀತಿಯ ನೈವೇದ್ಯಗಳನ್ನು ಹೆಚ್ಚೆಹೆಚ್ಚೆಗೂ ಸವಿಯುತ್ತಾ, ಯಥೇಚ್ಛವಾಗಿ ಭಕ್ತರ ಅಭೀಷ್ಟಗಳನ್ನು ನೆರವೇರಿಸುತ್ತಿದ್ದಾನೆ. ಭಾಗ ವತರು ಅಪರೂಪರಾಗಗಳಲ್ಲಿ ಮಾಡಿದ ಹರಿಕೀರ್ತನೆಯನ್ನು ನಾಗಭೂಷಣನು ಆಲಿಸು ತ್ತಿದ್ದಾನೆ. ಈ ಗಾನ ಪರವಶತೆಯಿಂದ ಸಕಲ ಸುಜನ ರಕ್ಷಣೆಯನ್ನೂ ಉಲ್ಲಾಸದಿಂದ ಮಾಡುತ್ತಾ, ಪರಶಿವನು ಹೊರಟಿದ್ದಾನೆ." ಬ್ರಹ್ಮಾದಿಗಳಿಗೂ ಅಪರೂಪವಾದ ಈ ಉತ್ಸವವನ್ನು ನೋಡಲು ತ್ಯಾಗರಾಜರು ಇತರರನ್ನೂ ಆಹ್ವಾನಿಸುತ್ತಾರೆ.

ತಿರುವಾದಿ ಕ್ಷೇತ್ರದಲ್ಲಿ ವಾರ್ಷಿಕವಾಗಿ ನಡೆಯುವ ಕಲ್ಯಾಣ ಮಹೋತ್ಸವದ ಸಂದರ್ಭದಲ್ಲಿನ ಚಿತ್ರಣವಿದು ಎನ್ನುವುದುಂಟು.

ಈಶ್ವರನ ದಯಾತ್ಮಕ ಅಥವಾ ಸ್ತ್ರೀ ಅಂಶವನ್ನು ಅವಲಂಬಿಸದೆ ಒಬ್ಬನಿಗೆ ಆಧ್ಯಾತ್ಮಿಕ ಮುಕ್ತಿಯಿಲ್ಲ. ಈ ಹಿನ್ನೆಲೆಯಲ್ಲೇ ತ್ಯಾಗರಾಜರು ಪಂಚನದೀಶನನ್ನೇ ಅಲ್ಲದೆ ಧರ್ಮಸಂವರ್ಧಿನಿಯನ್ನೂ ಸ್ತುತಿಸುತ್ತಾರೆ. ದೇವಿಯು 'ಶಂಬರಾರಿ ವೈರಿಯ' ಅರ್ಧಶರೀರಿ. ಈಕೆ ಮಾಯೆಯೂ ಹೌದು, ತಾಯಿಯೂ ಹೌದು. ತ್ಯಾಗರಾಜರಿಗೆ ಆಕೆಯ ಮಾಯಾಜಾಲದಲ್ಲಿ ಸಿಲುಕುವುದು ಬೇಕಿಲ್ಲ. ಪ್ರತಿಯಾಗಿ ಆಕೆಯ ಮಾತೃತ್ವ ಬೇಕಾಗಿದೆ. ಆದ್ದರಿಂದಲೇ ತ್ಯಾಗರಾಜರು ದೇವಿಯನ್ನು ಹೀಗೆ ಪ್ರಾರ್ಥಿಸುತ್ತಾರೆ.

'ಸಕಲ ಲೋಕಾಧಾರಿಯಾದ ಜನನಿಯೇ, ನನ್ನ ಮನಸ್ಸು ವಿಷಯಗಳನ್ನು ಅರಸದಂತೆ ಮಾಡು. ನಿನ್ನ ಪಾದಾರವಿಂದಗಳ ಭಕ್ತಿದಾನ ನೀಡು. ಕಾವೇರಿಯ ಉತ್ತರ ದಡದಲ್ಲಿ ನೆಲೆಸಿದವಳೇ, ಇತರರನ್ನು ಆಶ್ರಯಿಸುವುದರಲ್ಲಿ ಫಲವಿಲ್ಲ. ರಮಾಪತಿ ಸೋದರಿಯೇ, ನೀನಲ್ಲದೆ ನನ್ನನ್ನು ರಕ್ಷಿಸುವವರು ಇನ್ನಾರು ? ಪಂಚನದ ಪುರ ವಿಹಾರಿಯಾಗಿರುವುದರಿಂದ (ತಾವೂ ಪಂಚನದ ಕ್ಷೇತ್ರದಲ್ಲಿರುವುದರಿಂದ) ನೀನು ನನ್ನ ಎಲ್ಲ ತಪ್ಪುಗಳನ್ನೂ ಸಹಿಸಿ ರಕ್ಷಿಸಬೇಕು. ನೀನು ಅನೇಕ ಮಕ್ಕಳಿಗೆ ನಿನ್ನಾಭರಣಗಳ ಗಲಗಲ ಶಬ್ದದೊಂದಿಗೆ ಹಾಲೂಡಿಸಿರುವೆ. ಶುಕಪಾಣಿಯೇ, ಧರ್ಮಸಂವರ್ಧಿನಿಯೇ ಪರಾಶಕ್ತಿಯೇ ನನ್ನನ್ನು ರಕ್ಷಿಸಲು ನಿನಗೇಕೀ ಪರಾಕು ?'

ತ್ಯಾಗರಾಜರಿಗೆ ದೇವಿಯಿಂದ ಬೇಕಾದುದು ಲೌಕಿಕ ಲಾಭವಲ್ಲ, ದೇವೀಭಕ್ತಿ ಮತ್ತು ಆ ಮೂಲಕ ಪುನರ್ಜನ್ಮರಹಿತವಾದ ಸ್ಥಿತಿ. ಇದನ್ನು ಪಡೆಯಬೇಕೆಂದೇ ಅವರು ಧರ್ಮಸಂವರ್ಧಿನಿಯಲ್ಲಿ ಬೇಡುವುದು.

ತ್ಯಾಗರಾಜರು 'ನಾದುಪೈ ವಿನೆಡು ಚಾಡಿ ಚಾಲುನೇ'—ಎಂದು ಹೇಳುವಲ್ಲಿ (ಕರುಣ ಜೂಡವಮ್ಮ) ವಿಶೇಷವೊಂದಿದೆ. ಶ್ರೀರಾಮನನ್ನೇ ಇಷ್ಟದೇವತೆಯಾಗಿ ಭಾವಿಸಿ ಕೀರ್ತಿಸುವುದನ್ನು ಕಂಡ ಅಸೂಯಾಪರರಾದ ಇತರರು ತ್ಯಾಗರಾಜರಿಗೆ ಶಿವನ ಮೇಲಾಗಲೀ, ದೇವಿಯ ಮೇಲಾಗಲೀ ಭಕ್ತಿ ಇಲ್ಲವೆಂದೂ, ಅವರು ದೇವರಲ್ಲಿ ಭೇದಭಾವ ಉಳ್ಳವರೆಂದೂ ಪ್ರಚಾರ ಮಾಡಿದರಂತೆ. ಈ ಮಾತು ತ್ಯಾಗರಾಜರ ಕಿವಿಗೂ ಬಿದ್ದು ದುಃಖಿತರಾದ ಅವರು, ದೇವಿಯಲ್ಲೇ ತಮ್ಮ ಭಕ್ತಿಸ್ಥಿರತೆಯನ್ನು ಬಿನ್ನವಿಸಿದುದಾಗಿ ತ್ಯಾಗರಾಜರ ಶಿಷ್ಯಪರಂಪರೆಯಲ್ಲಿ ಪ್ರತೀತಿಯಿದೆ.[೩] ತ್ಯಾಗರಾಜರು ತಮ್ಮ ಆರಾಧ್ಯದೈವ ರಾಮನಿಗೂ ದೇವಿಗೂ ಸೋದರಿಕೆಯ ಸಂಬಂಧವನ್ನು ಕಲ್ಪಿಸುತ್ತಾರೆ. ಅಷ್ಟಲ್ಲದೆ ಶಿವ, ರಾಮ ಹಾಗೂ ದೇವಿಯರ ನಡುವೆ ಭೇದ ಮಾಡಬಾರದೆಂಬ ಪದ್ಮಪುರಾಣದ ಅಂಶವನ್ನೂ[೪] ತಾವು ಮತ್ತೊಮ್ಮೆ ಜ್ಞಾಪಿಸುತ್ತಾರೆ.

> ಪುರಾಣ ಪುರುಷುಡಗು ರಾಮುನಿಕಿ ಯಾ
> ಪುರಾರಿಕಿನಿ ನೀಕು, ರಾಜಧರಿ ! ಮ
> ಚ್ಚರಾನ ವೇರೆಂಚರಾದು
>
> (ಕರುಣಜೂಡವಮ್ಮ)

ಹೀಗೆ ಇತರರ ಚಾಡಿ ಮಾತಿಗೆ ದೇವಿಯೇ ಪರಿಹಾರ ಸೂಚಿಸಬೇಕೆಂದು ಪ್ರಾರ್ಥಿಸುವುದು ಹೃದಯಸ್ಪರ್ಶಿಯಾಗಿದೆ.

ಈಶ್ವರನ ಉತ್ಸವಕ್ಕೆ ಆಹ್ವಾನಿಸುವಂತೆಯೇ ತ್ಯಾಗರಾಜರು ಶುಕ್ರವಾರದಂದು ನಡೆವ ದೇವಿಯ ವಿಶೇಷ ಪೂಜೆಗೂ ಎಲ್ಲರನ್ನೂ ಆಹ್ವಾನಿಸುತ್ತಾರೆ. ಶುಕ್ರವಾರದಂದು ವಿಶೇಷವಾಗಿ ಪೂಜಿತಳಾದ ದೇವೀ ದರ್ಶನವನ್ನೂ ಯಥಾವತ್ತಾಗಿ ಕಣ್ಮುಂದೆ ನಿಲ್ಲುವಂತೆ ಚಿತ್ರಿಸಲಾಗಿದೆ. ಚಂದ್ರವದನೆಯರು ಜಯಘೋಷ ಮಾಡುತ್ತಿದ್ದಾರೆ. ಅಪ್ಸರೆಯರು ನಾಟ್ಯವಾಡುತ್ತಿದ್ದಾರೆ. ಅಮರರಾದ ದೇವತೆಗಳು ದೇವಿಗೆ ನಮಸ್ಕರಿಸು

ತ್ತಿದ್ದಾರೆ. ನಾರದ ಸನಕಾದಿಗಳು ಪ್ರಶಂಸೆ ಮಾಡುತ್ತಿದ್ದಾರೆ. ದೇವಿಯು, ಶ್ರೀಲಕ್ಷ್ಮಿಯೊಂದಿಗೆ ಮಾತನಾಡುವಾಗ ಆಕೆಯ ನವರತ್ನಹಾರಗಳು ಅತ್ತಿಂದಿತ್ತ ಚಲಿಸುತ್ತಿವೆ. ಕಾಂತಿಯುತಳಾಗಿರುವ ಈಕೆಯ ಸೊಗಸನ್ನು ನೋಡಲು ವಿಧಿಶಕ್ರಾದಿಗಳಿಗೂ ಅಲಭ್ಯವೆಂದು ತ್ಯಾಗರಾಜರು ಹೇಳುತ್ತಿದ್ದಾರೆ.

**ಸಂಗೀತ ಮತ್ತು ಇತರ ವಿಶಿಷ್ಟಾಂಶಗಳು**

೧. ಈ ಗುಚ್ಛದ ಎಲ್ಲ ಕೃತಿಗಳಲ್ಲೂ ಕ್ಷೇತ್ರದೇವತಾ ಮುದ್ರೆ ಇದೆ.

೨. 'ಸ್ವರಜಿತ'—ಎಂಬ ಪದಪ್ರಯೋಗ 'ಅಂಬನಿನ್ನು ನಮ್ಮಿತಿನಂಟೆ', 'ಅಮ್ಮ ಧರ್ಮಸಂವರ್ಧಿನಿ' ಕೃತಿಗಳೆರಡರಲ್ಲೂ ಕಾಣಬರುತ್ತದೆ.

೩. 'ಇನ್ನಾಳ್ಳವಲೆ' ಕೃತಿಯಲ್ಲಿ ೧೮ ಬಾರಿ ದೇವಿಯ ನಾಮಸ್ಮರಣೆಯಿದೆ.

೪. 'ಪರಾಶಕ್ತಿ' ಕೃತಿಯಲ್ಲಿ ಭಾವಾಭಿವ್ಯಕ್ತಿಗಿಂತಲೂ ಶಬ್ದಪ್ರಯೋಗದ್ದೇ ಮೇಲುಗೈಯಾಗಿದೆ. ರಕಾರ, ವಕಾರ, ಶಕಾರ ಇತ್ಯಾದಿ ಪ್ರಯೋಗಗಳು ಅದ್ಭುತವಾಗಿವೆ.

**ವರಾಹಿ ಧರ ದೇವರಾಜ ಜಲಜಭ**
**ವ ರಾಕ್ಷ ಸಾದುಲು ವರಾಲು ಕೋರು**
**ವರಾನನೇ ! ನಗವರಾತ್ಮಜೇ ! ಮುನಿ**
**ವರಾರ್ಚಿತೇ ! ನನು ಬ್ರೋವರಾದಾ ? ||**

**ವಿಶಾಲನಯನೇ ! ಕುಶಾಲುಗಾ ನೀ**
**ದು ಸೇವ ಜೇಸಿ ತ್ರಿದಶಾಧಿಪಾದು**
**ಲು ಶಾಶ್ವತುಲ್ಕೆ ಪರವಶಾಲ ನುತಿ ಸೇ**
**ಯ ಶಾಂತಮುನ ಜೂಚು ಶಾಂಭವಿ ! ||**

**ನಿರ ಪರಾಧುಲ ನಿರಾಕರಿಂಚೇ**
**ದುರಾತ್ಮಕುಲ ನಿಂದುರಾಕ ಸೇಯ**
**ಗರಾದು ವರತ್ಯಾಗರಾಜನುತ ಶುಭ**
**ದ ! ರಾಮಸಹೋದರಿ ! ಧರಾಧರಸುತೇ ||**

**(ಪರಾಶಕ್ತಿ)**

೫. ಈ ಗುಚ್ಛದಲ್ಲಿ ಅಠಾಣ ರಾಗದಲ್ಲಿ ಎರಡು ಕೃತಿಗಳಿದ್ದು ಒಂದು ಶಿವ ಸ್ತುತಿಯೂ ಇನ್ನೊಂದು ದೇವೀಸ್ತುತಿಯೂ ಆಗಿದೆ (ಇಲಲೋ ಪ್ರಣತಾರ್ಥಿ, ಅಮ್ಮಧರ್ಮಸಂವರ್ಧಿನಿ).

೬. ಸಾವೇರಿ ರಾಗದಲ್ಲಿ ದೇವೀಸ್ತುತಿಗಳೆರಡಿವೆ (ಪರಾಶಕ್ತಿ, ನೀವು ಬ್ರೋವವಲೆ).

೭. ಪರಶಿವನ ಉತ್ಸವದ ವರ್ಣನೆ ಸಾಂಸ್ಕೃತಿಕ ಚಟುವಟಿಕೆಯಾದ್ದರಿಂದ ಮಂಗಳಕರವೇ ಆದ ಪ್ರಾಚೀನವಾದ ಮಧ್ಯಮಾವತಿ ರಾಗದಲ್ಲಿ ಹಾಡಲಾಗಿದೆ.

೮. 'ನನ್ನುಗನ್ನತಲ್ಲಿ' ಕೃತಿಗೆ ಕೇಸರಿ ಹಾಗೂ ಸಿಂಧುಕನ್ನಡ ಎಂಬ ಎರಡು ರಾಗಗಳು ಹೇಳಲ್ಪಟ್ಟಿವೆ.

೯. 'ಮುಚ್ಚಟಬ್ರಹ್ಮಾದುಲಕು' ಮತ್ತು 'ವಿಧಿಶಕ್ರಾದುಲಕು'ಗಳಲ್ಲಿ ಮಧ್ಯಮ ಕಾಲಿ ಸಾಹಿತ್ಯವಿದೆ. ಮಧ್ಯಮಕಾಲ ಸಾಹಿತ್ಯವನ್ನು ತ್ಯಾಗರಾಜರೇ ತಮ್ಮ ರಚನೆಗಳಲ್ಲಿ ಅಳವಡಿಸಿದ್ದರೇ ಎಂಬುದು ಖಚಿತವಿಲ್ಲದಿದ್ದರೂ ಅವರ ಹಲವು ರಚನೆಗಳಲ್ಲಿ ಮಧ್ಯಮಕಾಲಸಾಹಿತ್ಯ ಇಂದು ಪ್ರಯೋಗವಾಗುತ್ತಿವೆ. ಉದಾಹರಣೆಗೆ 'ದರಿನೀ' ಕೃತಿಯ ಕಡೆಯ ಭಾಗ.

೧೦. ನಿಂದಾಸ್ತುತಿ, 'ಇಲಲೋ ಪ್ರಣತಾರ್ಥಿಹರುಡು' ರಚನೆಯಲ್ಲಿ ಸಾಷ್ಟಾಂಗ ನಮಸ್ಕಾರ ಮಾಡುವ ವಿಧಾನವನ್ನು ಪ್ರಸ್ತುತಪಡಿಸಲಾಗಿದೆ. ಕೃತಿಯ ಆರಂಭ, ರಾಗದ ವಿಶಿಷ್ಟ ಸಂಚಾರದಲ್ಲೇ ಇದೆ.

೧೧. 'ಅಮ್ಮ ಧರ್ಮಸಂವರ್ಧಿನಿ' ರಚನೆಯಲ್ಲಿ ಧನ್ಯೆ, ಮೂರ್ಧನ್ಯೆ, ಮಾನ್ಯೆ, ಶರಣ್ಯೆ, ಕಾರುಣ್ಯೆ ಮುಂತಾದ ಪ್ರಾಸಬದ್ಧ ಪ್ರಯೋಗಗಳಿವೆ.

೧೨. 'ಕರುಣಜೂಡವಮ್ಮ' ದೈನ್ಯ ಪ್ರಾರ್ಥನೆಯಾಗಿದ್ದು ಕರುಣಾರಸ ಪ್ರಧಾನವಾದ ತೋಡಿರಾಗ ಮತ್ತು ಆದಿತಾಳದಲ್ಲೇ ಅಳವಟ್ಟಿದೆ. ಅಲ್ಲದೆ ಈ ದೈನ್ಯವು ಸ್ಫುಟಗೊಳ್ಳುವಂತೆ ಗಾಂಧಾರದಿಂದಲೇ ಆರಂಭವಾಗಿ ಅರ್ಧ ಆವರ್ತದ ನಂತರ ಗಾಂಧಾರದಲ್ಲೇ ವಿಶ್ರಾಂತಿ ಪಡೆಯುತ್ತದೆ.

| ಗಾ ಪಮಗ | ರಿ ಸಾ ; ; | ಸರಿಗರಿಸನಿ | ಧಾಗಾರಿ ‖ | ಗಾ |
|---|---|---|---|---|
| ಕ ರು | ಣ ಜೂ | ಡ | ವ ‖ | ಮ್ಮಾ |

ಈಶ್ವರನನ್ನು ಚಂದ್ರಕಲಾಧರನೆನ್ನುವಲ್ಲಿ ಕಮಲವೈರಿ ಎನ್ನಲಾಗಿದೆ. ಕಮಲದವೈರಿ ಚಂದ್ರ, ಚಂದ್ರಕಲಾಧರನ ಪ್ರಿಯೆ ಎಂಬುದನ್ನು 'ಕಮಲವೈರಿ ಕೊಮ್ಮ' ಎಂದು ಪ್ರಯೋಗಿಸಲಾಗಿದೆ.

## ೨. ಶ್ರೀರಂಗ ಪಂಚರತ್ನ

ತ್ಯಾಗರಾಜ ವಿರಚಿತ ತಿರುವೈಯಾರು ಕೃತಿಗುಚ್ಛ, ಕೋವೂರು ಪಂಚರತ್ನ ಹಾಗೂ ಲಾಲ್‌ಗುಡಿ ಪಂಚರತ್ನಗಳು ಶೈವ ಪ್ರಧಾನವಾದರೆ ಘನರಾಗ ಪಂಚರತ್ನ (ಈ ಗುಚ್ಛದ ಎಂದರೋ ಮಹಾನುಭಾವುಲು ಕೃತಿ ಬಿಟ್ಟು ಉಳಿದವು) ಮತ್ತು ಶ್ರೀರಂಗ ಪಂಚರತ್ನಗಳು ವೈಷ್ಣವ ಪ್ರಧಾನ ಕೃತಿಗುಚ್ಛಗಳು. ಪ್ರಸ್ತುತ ಶ್ರೀರಂಗ ಪಂಚರತ್ನ ಗುಚ್ಛದ ಕೃತಿಗಳೆಂದರೆ—

೧. ಜೂತಾಮುರಾರೆ – ಆರಭಿ – ರೂಪಕ
೨. ರಾಜುವೆಡಲೆ ಜೂತಾಮುರಾರೇ – ತೋಡಿ – ರೂಪಕ
೩. ವಿನರಾದ ನಾ ಮನವಿ – ದೇವಗಾಂಧಾರಿ – ಆದಿ
೪. ಕರುಣ ಜೂಡವಯ್ಯ – ಸಾರಂಗ – ಆದಿ
೫. ಓ ರಂಗಶಾಯಿ – ಕಾಂಬೋಜಿ – ಆದಿ

ಅಸೂಯಾಪರರ ಹಿಂಸೆಗಳಿಂದ ನೊಂದ ತ್ಯಾಗರಾಜರು ರಂಗಶಾಯಿಯ ದಿವ್ಯ ರೂಪವನ್ನು ಕಾಣಲು ಶ್ರೀರಂಗಕ್ಕೆ ಬಂದಿದ್ದಾರೆ.

**ಮೇಲೋರ್ವಲೇನಿ ಜನುಲಲೋ ನೇ ಮಿಗುಲ ನೊಗಿಲಿ ದಿವ್ಯರೂಪಮುನು**
**. . . . . . . . . ಗನವಚ್ಚಿತಿ . . . . . .**

(ಓ ರಂಗಶಾಯಿ)

ಇಲ್ಲಿ ರಂಗನಾಥನು 'ಭೂಲೋಕದಲ್ಲಿರುವ ವೈಕುಂಠವೇ ಶ್ರೀರಂಗ' ಎಂದು ತನ್ನಲ್ಲಿ ತಾನೇ ಸಂತೋಷಿಸುತ್ತಾ ಮೈಮರೆತಿದ್ದಾನೆ. ವೈಭೋಗರಂಗನಾದ ಈತ ಶೃಂಗಾರಶೇಖರನೂ ಹೌದು. ಆಗಮಸಂಚಾರಿ, ಅಖಿಲಜಗತ್‌ರಕ್ಷಕ, ಶ್ರೀರಂಗನಾಥ ನಿಗೆ ಸಮಸ್ತರಾಜರೂ ನವರತ್ನದ ದಿವ್ಯಭೂಷಣಗಳನ್ನಿಡುತ್ತಾ ಊಡಿಗ ಮಾಡುತ್ತಿ ದ್ದಾರೆ. ಉಭಯ ನಾಚ್ಚಿಯಾರರೂ (ಶ್ರೀದೇವಿಭೂದೇವಿಯರು) ಆಳ್ವಾರರೂ ನೀಡಿದ ನೈವೇದ್ಯವನ್ನೀತ ಸ್ವೀಕರಿಸುತ್ತಿದ್ದಾನೆ. ಕಸ್ತೂರಿರಂಗನು ಹೀಗೆ ತನ್ನ ಸಂತೋಷದಲ್ಲೇ ಮಗ್ನನಾದರೆ, ಭಕ್ತರ ಚಿಂತೆ ತೀರುವುದು ಯಾವಾಗ ಎಂಬುದು ತ್ಯಾಗರಾಜರ ಕಳಕಳಿ. ಆದ್ದರಿಂದಲೇ ಅವರು 'ನನ್ನ ಮನವಿಯನ್ನು ಕೇಳಬಾರದೇ ? ಓ ರಂಗಶಾಯಿ ಎಂದು ಕರೆದರೆ ಮಾರುತ್ತರ ನೀಡುತ್ತಾ ನನ್ನ ಬಳಿಗೆ ಬರಬಾರದೇ ?' ಎಂದು ಪ್ರಾರ್ಥಿಸುತ್ತಾರೆ. ಕಾವೇರಿರಂಗನೇ, ಕರುಣೆತೋರೆಂದೂ, ತಮ್ಮ ಪಾಲಿಗೆ ಆತ ನಿಧಿಯೆಂದೂ ತಿಳಿದು ಅವರು ಬೇಡುತ್ತಾರೆ. ಅಷ್ಟಲ್ಲದೆ ಕುದುರೆಯೇರಿ ಮೆರವಣಿಗೆ ಹೊರಟ ರಂಗನಾಥ ನನ್ನು ನೋಡಲು ಇತರರನ್ನು ಆಹ್ವಾನಿಸುತ್ತಾರೆ.

ತ್ಯಾಗರಾಜರು ಶ್ರೀರಂಗನಾಥನನ್ನು ರಂಗ, ರಂಗಪತಿ, ರಂಗಶಾಯಿ, ಕಸ್ತೂರಿರಂಗ, ಕಾವೇರಿರಂಗ, ವೈಭೋಗರಂಗನೆಂಬುದಾಗಿ ಸಂಬೋಧಿಸುತ್ತಾರೆ. ಈತ ಮೂಲತಃ ಆದಿಪುರುಷನಾದರೂ ಶೃಂಗಾರನಾಯಕ, ಸುಕುಮಾರನೆಂದು ಚಿತ್ರಿತನಾಗಿದ್ದಾನೆ.

**ಸಂಗೀತ ಮತ್ತು ಇತರ ವಿಶಿಷ್ಟಾಂಶಗಳು** :

೧. ಈ ಗುಚ್ಛದ ಐದು ಕೃತಿಗಳೂ ತಿಳಿಯಾದ ತೆಲುಗು ಭಾಷೆಯಲ್ಲಿವೆ.
೨. ಕ್ಷೇತ್ರದೇವತಾ ಮುದ್ರೆ ಎಲ್ಲ ಕೃತಿಗಳಲ್ಲೂ ಕಾಣಬರುತ್ತದೆ.
೩. ಓ ರಂಗಶಾಯಿ (ಕಾಂಬೋಜಿ), ಕರುಣಜೂಡವಯ್ಯ (ಸಾರಂಗ) ಕೃತಿಗಳಲ್ಲಿ ಹಲವು ಸಂಗತಿಗಳಿದ್ದು ರಾಗದ ಕ್ರಮ ಪ್ರಸ್ತಾರ ಚಿತ್ರಣವಿದೆ. ಕೃತಿಗಳು ವಿಳಂಬಕಾಲದ್ದು, ದೀರ್ಘವಾದದ್ದು. ಇನ್ನುಳಿದ ಮೂರು ಕೃತಿಗಳು ಸರಳ

ರೂಪದಲ್ಲಿದ್ದು, ಮಧ್ಯಮಕಾಲದ ರಚನೆಗಳಾಗಿವೆ.

೪. ದೇವಗಾಂಧಾರಿ ಕ್ಲಿಷ್ಟರಾಗವಾಗಿದ್ದು ತ್ಯಾಗರಾಜರು ಈ ರಾಗದಲ್ಲಿ 'ಎವರು ಮನಕು ಸಮಾನ', 'ಕ್ಷೀರಸಾಗರಶಯನ' ದಂತಹ ದೀರ್ಘರಚನೆಗಳನ್ನು ರಚಿಸಿದ್ದಾರೆ. ಆದರೆ ಅಷ್ಟೇ ಸರಳವಾಗಿಯೂ ಈ ರಾಗದ ಪ್ರಯೋಗ ಮಾಡಬಹುದೆಂಬುದನ್ನು 'ವಿನರಾದ ನಾ ಮನವಿ' ಕೃತಿಯ ಮೂಲಕ ತೋರಿದ್ದಾರೆ.[೯]

೫. ಶ್ರೀರಂಗವು ಕಾವೇರಿ ತೀರದಲ್ಲಿದೆ ಎಂಬುದನ್ನು ಚಮತ್ಕಾರಿಕವಾಗಿ ಹೇಳ ಲಾಗಿದೆ.

**ಕಾವೇರಿ ತೀರಮುನನು ಪಾವನಮಗು ರಂಗಪುರಿನಿ . . . .**

(ರಾಜುವೆಡಲೆ)

೬. ಸಾರಂಗದ ಕರುಣ ಜೂಡವಯ್ಯ ರಚನೆಯಲ್ಲಿ ಚಿಟ್ಟೆಸ್ವರವೊಂದು ಕಾಣ ಬರುತ್ತದೆ.

**ಕ್ಷೇತ್ರ ವಿವರ** : ಶ್ರೀರಂಗವು ಕಾವೇರಿ ನದಿಯ ಎರಡು ಕವಲುಗಳ ನಡುವೆ ಇರುವ ದ್ವೀಪ. ತಿರುಚನಾಪಳ್ಳಿಯ ಉತ್ತರಕ್ಕೆ ಮೂರು ಮೈಲಿ ದೂರದಲ್ಲಿದೆ. ಪ್ರಾಚೀನವಾದ, ಸುಪ್ರಸಿದ್ಧವಾದ ರಂಗನಾಥಸ್ವಾಮಿ ದೇವಸ್ಥಾನ ಇಲ್ಲಿದೆ. ಇಲ್ಲಿ ರಂಗನಾಥನು ಆದಿ ಶೇಷನಾಗಿ ಪವಡಿಸಿದ್ದಾನೆ. ಆತನ ಕಾಲಬಳಿ ಶ್ರೀದೇವಿ, ಭೂದೇವಿಯರು ಕುಳಿತಿದ್ದಾರೆ.

ಪುರಾಣದಪ್ರಕಾರ ಶ್ರೀರಂಗನಾಥನು ಸ್ವರ್ಗದಲ್ಲಿ ಮೊದಲಿಗೆ ಬ್ರಹ್ಮನಿಂದಲೇ ಪೂಜಿಸಲ್ಪಟ್ಟನು. ಅನಂತರ ಇಕ್ಷ್ವಾಕುರಾಜರಿಂದ ಅಯೋಧ್ಯೆಗೆ ಆತನನ್ನು ಕರೆತರ ಲಾಯಿತು. ಕಡೆಗೆ ಇದೇ ವಂಶದ ದೊರೆ ಶ್ರೀರಾಮನಿಂದಲೂ ಈತ ಪೂಜಿಸಲ್ಪಟ್ಟನು.

ವಿಭೀಷಣ ಲಂಕೆಗೆ ಹಿಂತಿರುಗುವಾಗ ರಾಮನಲ್ಲಿ ಪ್ರಾರ್ಥಿಸಿ, ಇಕ್ಷ್ವಾಕುವಂಶದ ಕುಲದೈವನಾದ ಶ್ರೀರಂಗನಾಥನ ವಿಗ್ರಹವೊಂದನ್ನು ಪಡೆದನು. ವಿಗ್ರಹವನ್ನು ಮಾರ್ಗ ಮಧ್ಯೆ ಎಲ್ಲೂ ನೆಲದ ಮೇಲೆ ಇಡಬಾರದೆಂಬ ನಿಯಮ ಇದ್ದಿತು. ಆದರೆ ವಿಭೀಷಣ ನಿಗೆ ಈ ನಿಯಮವನ್ನು ಪಾಲಿಸಲು ಸಾಧ್ಯವಾಗಲಿಲ್ಲ. ಶ್ರೀರಂಗದಲ್ಲಿ ವಿಗ್ರಹವನ್ನು ಕೆಳಗಿಟ್ಟನು. ಅಂದಿನಿಂದ ಶ್ರೀರಂಗನಾಥನು ಅಲ್ಲಿಯೇ ನೆಲೆಸಿದನೆಂದು ಪ್ರತೀತಿ ಯುಂಟು.

ಪಲ್ಲವರು, ಚೋಳರು, ಹೊಯ್ಸಳರು, ಪಾಂಡ್ಯರು ಹಾಗೂ ವಿಜಯನಗರದ ದೊರೆ ಗಳೆಲ್ಲರಿಂದ ಶ್ರೀರಂಗನಾಥ ದೇವಸ್ಥಾನವು ಪೋಷಿಸಲ್ಪಟ್ಟಿದೆ. ಆಳ್ವಾರರೆಲ್ಲರೂ ಶ್ರೀ ರಂಗನಾಥನನ್ನು ಸ್ತುತಿಸಿದ್ದಾರೆ. ಕೇರಳದ ದೊರೆಯಾಗಿದ್ದ ಕುಲಶೇಖರ ಆಳ್ವಾರರು ಶ್ರೀರಂಗನಾಥನ ಸ್ತುತಿಯಾಗಿ 'ಮುಕುಂದಮಾಲೆ'ಯನ್ನು ರಚಿಸಿದ್ದಾರೆ.[೬] ರಾಮಾ ನುಜರು ತಮ್ಮ ಗದ್ಯತ್ರಯದಲ್ಲಿ "ಅಪಾರಕರುಣಾಂಬುಧೇ । ಅನಾಲೋಚಿತ ವಿಶೇಷ ಶೇಷಲೋಕ ಶರಣ್ಯ । ಪ್ರಣತಾರ್ಥಿಹರ । ಆಶ್ರಿತ ವಾತ್ಸಲ್ಯೈಕ ಮಹೋದಧೇ" ಮುಂತಾಗಿ ಸ್ತುತಿಸುತ್ತಾರೆ.

ಸೀತಾಪತಿಯಿಂದ ಪೂಜಿತನಾದವನೆಂದು ತ್ಯಾಗರಾಜರೂ ಪೌರಾಣಿಕವಾದ ಈ ಹಿನ್ನೆಲೆಯನ್ನು ಪ್ರಸ್ತಾಪಿಸುತ್ತಾರೆ. 'ಸೀತಾಪತಿ ಪೂಜ್ಯುಡಟ' (ಜೂತಾಮುರಾರೆ). ಹೀಗಾಗಿ ತ್ಯಾಗರಾಜರ ಪಾಲಿಗೂ ರಂಗನಾಥ 'ಪೆನ್ನಿಧಾನ'ನೇ ಸರಿ (ನಿಧಿ).

ರಂಗನಾಥನು ಭೂಲೋಕವೈಕುಂಠದಲ್ಲಿ ನಿಂತುದರಿಂದ ಚಂದ್ರಧರನಾದ ಶಿವನು ಕೈಲಾಸವಾಸಿಯಾದನೆನ್ನುತ್ತಾರೆ, ತ್ಯಾಗರಾಜರು.

ತಮಿಳಿನಲ್ಲಿ 'ಪೆರಿಯಕೋಯಿಲ್' ಎಂಬುದು ಶ್ರೀರಂಗವನ್ನೇ ಸೂಚಿಸಿ ಇಲ್ಲಿನ ದೇವರನ್ನು'ಪೆರಿಯ ಪೆರುಮಾಳ್' ಎಂದು ಕರೆಯಲಾಗಿದೆ.[೭]

## ೩. ತಿರುವಟ್ಟಿಯೂರ್ ಪಂಚರತ್ನ

ಆದಿ ಶಂಕರಾಚಾರ್ಯರು, ತಿರುಜ್ಞಾನ ಸಂಬಂಧರ್, ಅಪ್ಪರ್, ಸುಂದರಮೂರ್ತಿ ನಾಯನಾರ್ ಮುಂತಾದ ಮಹಾನುಭಾವರು ಸಂದರ್ಶಿಸಿದರೆನ್ನಲಾದ ದಿವ್ಯಕ್ಷೇತ್ರ ತಿರುವಟ್ಟಿಯೂರು.[೮] ಈ ಪುಣ್ಯಸ್ಥಳಕ್ಕೆ ತ್ಯಾಗರಾಜರು ತಮ್ಮ ಶಿಷ್ಯರಾದ ವೀಣಾ ಕುಪ್ಪಯ್ಯರ್ ಅವರ ಕೋರಿಕೆಯಂತೆ ಭೇಟಿ ನೀಡಿದ್ದರು. ಇಲ್ಲಿನ ತ್ರಿಪುರಸುಂದರೀ ದೇವಿಯ ಸಾನ್ನಿಧ್ಯದಿಂದ ಸಂತೋಷಿಸಿ ಹಾಡಿದ ಐದು ರಚನೆಗಳೇ ತಿರುವಟ್ಟಿಯೂರ್ ಪಂಚರತ್ನಗಳೆನಿಸಿವೆ. ಇವುಗಳೆಂದರೆ :

೧. ದರಿನಿ ತೆಲುಸುಕೊಂಟಿ – ಶುದ್ಧಸಾವೇರಿ – ಆದಿ
೨. ಸುಂದರಿ ನನ್ನಿಂದರಿಲೋ ಜೂಚಿ ಬ್ರೋವವಮ್ಮ – ಬೇಗಡೆ – ರೂಪಕ
೩. ಸುಂದರಿ ನೀ ದಿವ್ಯರೂಪಮುನು ಜೂಡ – ಕಲ್ಯಾಣಿ – ಆದಿ
೪. ಸುಂದರಿ ನಿನ್ನು ವರ್ಣಿಂಪ – ಆರಭಿ – ಛಾಪು
೫. ಕನ್ನತಲ್ಲಿ ನೀವುಮಾಪಾಲ – ಸಾವೇರಿ – ಆದಿ

ತಿರುವಟ್ಟಿಯೂರು 'ಆದಿಪುರ'ವೆಂದೂ ಕರೆಯಲ್ಪಡುತ್ತದೆ. ನಾಯನಾರರಿಂದಲೂ ಪ್ರಶಂಸಿಸಲ್ಪಟ್ಟ ಈ ಕ್ಷೇತ್ರದ ದೇವಸ್ಥಾನದಲ್ಲಿ ಆದಿ ಶಂಕರರು 'ಶ್ರೀಚಕ್ರಪೀಠ'ವನ್ನು ಸ್ಥಾಪಿಸಿದರೆನ್ನುತ್ತಾರೆ.[೯] ಮದರಾಸಿನಿಂದ ಆರು ಮೈಲಿ ದೂರದಲ್ಲಿರುವ ತಿರುವಟ್ಟಿಯೂರಿಗೆ ಭೇಟಿ ನೀಡಿದ ನಂತರ, ವೀಣಾಕುಪ್ಪಯ್ಯರ್ ಅವರಿಗೆ ಪುತ್ರಜನನವಾಯಿತೆನ್ನುವುದುಂಟು. ಇದರಿಂದಲೇ ಕುಪ್ಪಯ್ಯರ್ ತಮ್ಮ ಮಗನಿಗೆ "ತ್ಯಾಗಯ್ಯ"ನೆಂದೇ ಹೆಸರಿಸಿದರು. ಇವರು "ತಿರುವಟ್ಟಿಯೂರ್ ತ್ಯಾಗಯ್ಯ"ನೆಂದೇ ಪ್ರಖ್ಯಾತರಾಗಿ, ವಾಗ್ಗೇಯಕಾರರಾದುದಲ್ಲದೆ ತಮ್ಮ ತಂದೆಯ ಗುರುವಾದ ತ್ಯಾಗರಾಜರನ್ನೇ ತಮಗೂ ಗುರುವೆಂದು ಭಾವಿಸಿ ಖರಹರಪ್ರಿಯ ರಾಗದಲ್ಲಿ 'ತ್ಯಾಗರಾಜಸ್ವಾಮಿ' ಎಂಬ ರಚನೆಯೊಂದನ್ನು ರಚಿಸಿದ್ದಾರೆ.

ಪೂರ್ವಕರ್ಮಗಳನ್ನು ಹೋಗಲಾಡಿಸಿ ರಕ್ಷಿಸುವ ಲೋಕರಕ್ಷಕಿ ತ್ರಿಪುರಸುಂದರಿಯ ದರ್ಶನ ಭಾಗ್ಯ ತ್ಯಾಗರಾಜರಿಗೆ ಲಭ್ಯವಾಗಿದೆ. ಇದು ತಮ್ಮ ಪೂಜಾಫಲದಿಂದಲೋ

ಅಥವಾ ದೇವಿಯ ಕಟಾಕ್ಷಬಲದಿಂದಲೋ ಅವರಿಗೆ ತಿಳಿಯದಾಗಿದೆ. ಗುಹ ಮತ್ತು ಗಣಪತಿಜನನಿಯಾದ ಈಕೆಯ ಜಪವೇ ಮುಕ್ತಿಮಾರ್ಗಕ್ಕೆ ಸಾಧನವೆಂದು ಅರಿತಿದ್ದ ಹಿರಿಯರ ಹಾದಿಯನ್ನೇ, ತ್ಯಾಗರಾಜರೂ ನಂಬಿ ಅದೇ ದಾರಿ ಹಿಡಿದಿದ್ದಾರೆ. ದೀನ ರಕ್ಷಕಿಯೂ, ಅಭೀಷ್ಟದಾಯಕಿಯೂ ಆದ ದೇವಿಯ ಭಕ್ತಿಯೇ ಮೇಲಾದುದೆಂಬು ದನ್ನು ತ್ಯಾಗರಾಜರು ಸಾರುತ್ತಾರೆ. ಏಕೆಂದರೆ ಬೇಸತ್ತು ಬಂದ ಅವರ ಮನಸ್ಸಿಗೆ ದೇವಿದರ್ಶನದಿಂದ ನೆಮ್ಮದಿ ದೊರೆತಿದೆ. ಆಕೆ ತಮ್ಮ ಪಾಲಿಗೆ ಇರುವುದರಿಂದ ಅವರು ಇನ್ನು ಕಳವಳಿಸಬೇಕಾಗಿಲ್ಲ.

ತಿರುವಟ್ಟಿಯೂರಿನ ತ್ರಿಪುರಸುಂದರಿಯನ್ನು ವರ್ಣಿಸಲು ಬ್ರಹ್ಮೇಂದ್ರಾದಿಗಳಿಗೇ ಸಾಧ್ಯವಿಲ್ಲ. ಅವರು ದೇವಿಯ ಪಾದಸೇವೆ ಮಾಡುತ್ತಾ ನಿತ್ಯಾನಂದದಲ್ಲಿದ್ದಾರೆ. (ದರಿನಿ). ಹೀಗಿದ್ದರೂ ಶುಕ್ರವಾರದಂದು ದೇವಿಗೆ ನಡೆಯುವ ಪೂಜೆಯನ್ನು ನೋಡ ಲಾದೀತೇ ಎಂದವರು ಉತ್ಸುಕರಾಗಿದ್ದಾರೆ (ಸುಂದರಿ ನೀ ದಿವ್ಯರೂಪಮು). ಇನ್ನು, ಶಂಕರನು ಈಕೆಯನ್ನು ಅಗಲಿ ಭುವಿಗೆ ಬರಲಾಗುತ್ತಿಲ್ಲ. ಈಕೆಯ ಗಾಂಭೀರ್ಯಕ್ಕೆ ಹೆದರಿ ಜಲರಾಜನು ಜಡವೇಷಿಯಾಗಿದ್ದಾನೆ. ಈಕೆಯ ಧೀರತನ ಮತ್ತು ಗಾಂಭೀರ್ಯಗಳನ್ನು ಕಂಡು ಕನಕಾಚಲನು ಶಿಲಾರೂಪಿಯಾಗಿದ್ದಾನೆ. ದೇವಿಯ ಮಂದಹಾಸದಿಂದ ಶಿವನು ಶುಭ್ರನಾಗಿದ್ದಾನೆ. ದೇವಿಯ ಇನಿದನಿ ಕೇಳಿ ಸರಸ್ವತಿಯು (ನಾಲಿಗೆಯನ್ನು ಚಲಿಸ ಲಾಗದೆ) ಸ್ತಬ್ಧಳಾಗಿದ್ದಾಳೆ. ದೇವಿಯು ದಯೆ ತೋರಿದ್ದರಿಂದಲೇ ಸತ್ಕವಿಗಳು ಕಾವ್ಯ ರಚಿಸಲು ಸಾಧ್ಯವಾದುದು. ಈಕೆಯನ್ನು ನಂಬಿದ ಭಕ್ತರ ಪಾಪಗಳು ಓಡಿಹೋದವು. ಒಟ್ಟಾರೆ ತ್ಯಾಗರಾಜರ ಪ್ರಕಾರ ತ್ರಿಪುರಸುಂದರೀ ದೇವಿಯಲ್ಲಿ ಪೂರ್ಣ ಶರಣಾ ಗತರಾಗಿ ಮಹಾವಿಶ್ವಾಸ ಹೊಂದಿದವರು ಬ್ರಹ್ಮಾನಂದ ಹೊಂದುತ್ತಾರೆ.

ವಾಸ್ತವವಾಗಿ 'ತ್ರಿಪುರ' ಎಂಬುದು ಮೂರು ದೇಹಗಳೊಳಗೆ ನೆಲೆಸಿರುವ ಆನಂದ ಸ್ವರೂಪವಾದ 'ಆತ್ಮ' ಎಂಬುದನ್ನು ಸಂಕೇತಿಸುತ್ತದೆ.[೧೦] ತ್ಯಾಗರಾಜರು ಧನಕನಕಾದಿ ಸಂಪತ್ತೆಲ್ಲವೂ ಮಾಯೆಯೆಂದು ತಿಳಿದು ಭ್ರಮಿಸಬೇಕೆ ? ಬಿಸಿಲುಗುದುರೆಯನ್ನು ಕಂಡು ನೀರೆಂದು ಭ್ರಮಿಸಬೇಕೆ ? ಕನಕಾಭರಣಗಳಿಂದ ಭೂಷಿತವಾಗಿ ಹಾಲಿನಿಂದ ಪೋಷಿಸಲ್ಪಟ್ಟ ಈ ಶರೀರವು ಸ್ಥಿರವಲ್ಲ ಎಂದರಿತು ಅನುದಿನವು ಮಾಡುವ ಸತ್ಕ್ರಿಯೆ ಗಳನ್ನು ದೇವಿಗೆ ಅರ್ಪಿಸಿ ಯೋಗಿಯಾಗಬೇಕೆನ್ನುತ್ತಾರೆ.

ತ್ಯಾಗರಾಜರು ಅದ್ವೈತದ ಎರಡು ಪ್ರತಿಮೆಗಳನ್ನು ಬಹುಸುಂದರವಾಗಿ 'ಕನ್ನತಲ್ಲಿ' (ಸಾವೇರಿ) ಕೃತಿಯಲ್ಲಿ ಅಳವಡಿಸಿದ್ದಾರೆ. ಅವೇ 'ಆವರಣಶಕ್ತಿ' ಮತ್ತು 'ವಿಕ್ಷೇಪಶಕ್ತಿ'. ಆವರಣ ಶಕ್ತಿಯು ಸತ್ಯವನ್ನು ಮರೆಮಾಡುತ್ತದೆ. ಇದರ ಕಾರ್ಯನಿಷೇಧಾತ್ಮಕವಾದುದು. ಎಂದರೆ ಧನಾದಿಸಂಪತ್ತನ್ನೂ, ಶರೀರವನ್ನೂ ಸ್ಥಿರವೆಂದು ಭಾವಿಸುವಂತೆ ಮಾಡು ವುದು. ವಿಕ್ಷೇಪ ಶಕ್ತಿಯು ಸತ್ಯಕ್ಕೆ ವಿರುದ್ಧವಾದುದನ್ನು ತೋರುವುದು. ಇದರ ಕಾರ್ಯ ಭಾವಾತ್ಮಕವಾದುದು. ಎಂದರೆ ಹಗ್ಗವನ್ನು ಹಗ್ಗವಾಗಿಯೆ ತೋರಿಸದೆ ಹಾವಾಗಿ

ತೋರುವುದು. ಎಂದರೆ ಅದು ಇರುವುದನ್ನು ಮರೆಮಾಚುವುದಷ್ಟೇ ಅಲ್ಲ, ಇಲ್ಲದಿರುವುದನ್ನು ತೋರಿಸುತ್ತದೆ. ಇದನ್ನೇ ತ್ಯಾಗರಾಜರು ಕೆಳಗಿನ ಮಾತುಗಳಲ್ಲಿ ಮೂಡಿಸುವುದು.

**ರಜ್ಜುಪೈ ಯುರಗಬುದ್ಧಿ ಚೆಂದನೇಲನಮ್ಮಾ . . . . .**
**ಕಲನು ಜೂಚಿ ನೀರನಿ ಭ್ರಮಸಿಕಂದುರಾ ?**
**ಕನಕಭೂಷಣಮುಲನು ಪೆಟ್ಟಿ ಮರಿಯು ಸೊಗಸುಜೇಸಿ ಪಾಲುಪೋಸಿ**
**ಪೆಂಚಿನ ತನುವು ಸತಮುಗಾದು . . . .**

(ಕನ್ನತಲ್ಲಿ)

ಒಟ್ಟಿನಲ್ಲಿ ದೇವಿಯು ಮಾಯಾಸ್ವರೂಪಳು. ಆಕೆಯ ರೂಪ ಮತ್ತು ಶಕ್ತಿ ಪಾರಮ್ಯವನ್ನು ಅರಿತು ಮಹಾವಿಶ್ವಾಸದಿಂದ 'ದೇವಿಯೇ ಅವರ ಪಾಲಿಗಿರಲು ದುಃಖವೇಕಿನ್ನು?' ಎಂಬ ಧೈರ್ಯವಿದೆ ತ್ಯಾಗರಾಜರಿಗೆ.

**ಸಂಗೀತ ಮತ್ತು ಇತರ ವಿಶಿಷ್ಟಾಂಶಗಳು**

೧. ಐದು ಕೃತಿಗಳೂ ತೆಲುಗುಭಾಷೆಯಲ್ಲಿವೆ.

೨. 'ದರಿನಿ' ಕೃತಿಯು ಈ ಗುಚ್ಛದಲ್ಲಿ ಹಿರಿದಾದ ಎಂದರೆ ವಿಳಂಬಕಾಲದ ಕೃತಿ. ಪಲ್ಲವಿಯಲ್ಲಿ ಹತ್ತಕ್ಕೂ ಮೀರಿ ಸಂಗತಿಗಳಿವೆ. ಇವು ಪ್ರಾಚೀನ ಅಲಂಕಾರಗಳನ್ನೂ, ತಾನದ ಮಾದರಿಯನ್ನೂ ಸೂಚಿಸುವಂತಿವೆ. ಅನುಪಲ್ಲವಿ ಮತ್ತು ಚರಣಗಳಲ್ಲೂ ಸಂಗತಿಗಳು ಸುಂದರವಾಗಿ ಅಳವಟ್ಟಿವೆ.

| | | | | | | | |
|---|---|---|---|---|---|---|---|
| ಸಾ | ದಾ | ಪಾ | ಮಾ | ರೀ | ಸಾ | ಸರಿಮರಿ ರಿಸಧಾ | ಸಾ |
| ದ | ರಿ | ನಿ | ತೆ | ಲು | ಸು | ಕೊಂ | ಟಿ . . . . |

| | | | | | |
|---|---|---|---|---|---|
| ಸರಿಸಸ | ದಸದದ | ಪಾ | ಮಪಮಮ | ರಿಮರಿರಿ | ಸಾ |
| ದ | ರಿ | ನಿ | ತೆ | ಲು | ಸು . . . . |
| ಸರಿಸಸ | ದಸದದ | ಪದಪಪ | ಮಪಮಮ | ರಿಮರಿರಿ | ಸರಿಸಸ |
| ದ | ರಿ | ನಿ | ತೆ | ಲು | ಸು . . . . |
| ಸರಿಸಾ | ದಸದಾ | ಪದಪಾ | ಮಪಮಾ | ರಿಮರೀ | ಸರಿಸಾ |
| ದ | ರಿ | ನಿ | ತೆ | ಲು | ಸು . . . . |
| ಸರೀಸ | ದಸಾದ | ಪದಾಪ | ಮಪಾಮ | ರಿಮಾರಿ | ಸರೀಸ |
| ದ | ರಿ | ನಿ | ತೆ | ಲು | ಸು . . . . |

ಮುಂತಾಗಿ.

೩. ಆರಂಭದಲ್ಲಿ 'ದರಿ' ಎಂಬ ಅಕ್ಷರಗಳು ಮಾರ್ಗ ಅಥವಾ ಹಾದಿ ಎಂಬರ್ಥ ಹೊಂದಿದೆ. ಮೊದಲ ಪಾದ ಪೂರ್ಣಗೊಂಡಂತೆ 'ತ್ರಿಪುರಸುಂದರಿ ನಿನ್ನೇ ಶರಣಂಟಿ' ಎಂದರೆ ದಾರಿಯನ್ನು ಅರಿತು ತ್ರಿಪುರಸುಂದರಿಯಲ್ಲೇ ಶರಣಾದೆನೆಂಬ ಅರ್ಥ ಮೂಡುವಂತಿದೆ.

೪. ಕೃತಿಯ ಮೊದಲ ಸಂಗತಿಯಲ್ಲಿ ಧಾತು ಅವರೋಹ ರೂಪದಲ್ಲಿದೆ. ಸಾಮಗಾನ ಸ್ವರಶ್ರೇಣಿಯೂ ಅವರೋಹರೂಪದಲ್ಲಿದ್ದುದನ್ನು ನಾವಿಲ್ಲಿ ಸ್ಮರಿಸಬಹುದು.

೫. ಕೃತಿಯ ಅಂತ್ಯದ ಸಾಹಿತ್ಯವನ್ನು ಮಧ್ಯಮ ಕಾಲದಲ್ಲಿಯೂ ಹಾಡುವ ರೂಢಿಯಿದೆ.

ದಾದಾದಪ ಪಾಪಮ ಪಮರಿಸರೀ
ಆಜನ್ಮಮು ಪೆದ್ದಲು ತಮಮದಿಲೋ

ಪಾಮರಿಸಾ ರಿಧಸ ರೀಮ ದಸದಪ
ನೀಜಪಮೇ ಮುಕ್ತಿ ಮಾರ್ಗ ಮನುಕೊನ

ಪಮಪದಪದ ಸಾ ರಿಮರಿಸ ಸದಪದ
ರಾಜಶೇಖ ರುಂ ಡಗುಶ್ರೀ ತ್ಯಾ ಗ

ದರಿಸದ ಪಾದಸ ದಪಮರಿ ರಿಮಪದ
ರಾ ಜಮ ನೋಹರಿ ಗೌ ರಿಪ ರಾ ತ್ಪರಿ

ಈ ಭಾಗವನ್ನು ಮೊದಲ ಕಾಲದಲ್ಲಿ ಹಾಡಿ ಅನಂತರ ಮಧ್ಯಮ ಕಾಲದಲ್ಲಿ ಹಾಡುವುದುಂಟು.

೬. 'ಸುಂದರಿ ನನ್ನಿಂದರಿಲೋ' ಕೃತಿಯಲ್ಲಿ

ವಾಣಿ ಬಾಲೇ
ಶುಕಪಾಣಿ ಪಾಲಿತಸುರಜಾಲೇ
ವರಶೇಷವೇಣಿ ಮರಾಳೇ
ಕಲ್ಯಾಣಿ ಸ್ವಕೃತಾಖಿಲಲೀಲೇ
ಸಾಂಬಶಿವುನಿರಾಣಿ ತಿಲಕಾಂಕಿತಫಾಲೇ
ಮಾಧುರ್ಯವಾಣಿ ನೀಭಕ್ತಿಯುಮೇಲೇ

ಎಂಬಲ್ಲಿ ಅಂತ್ಯ ಪ್ರಾಸವೂ

ವಾರೀಶಸ್ತುತ ಗಂಭೀರೇ ಯಾದಿಪುರ ವಿ
ಹಾರಿ ದೀನಜನಾಧಾರಿ ನಗರಾಜಕು

ಮಾರಿ ದುಷ್ಕರ್ಮವಿದಾರಿ ತ್ಯಾಗರಾಜು
ಕೋರಿಯುನ್ನ . . . . .

ಎಂಬಲ್ಲಿ ದ್ವಿತೀಯಾಕ್ಷರ ಪ್ರಾಸವೂ ಅಳವಟ್ಟಿದೆ.

೭. 'ಸುಂದರಿ ನೀ ದಿವ್ಯ ರೂಪಮುನುಜೂಡ' ಕೃತಿ

ಸಾಂ ನಿ ದ ಪಾ ಪ"ಗಾ ಗಾ
ಸುಂದರಿ ನೀ ದಿ ವ್ಯ

ಎಂದು ಅವರೋಹರೂಪದಲ್ಲೇ ಆರಂಭ. ಈ ಕೃತಿಗೆ ಸುಮಾರು ನಲವತ್ತು ವರ್ಷಗಳಿಂದ ಚಿಟ್ಟೆ ಸ್ವರವೊಂದು ರೂಢಿಯಲ್ಲಿದೆಯೆಂದು ಹೇಳುತ್ತಾರೆ.[೧೧]

೮. 'ಸುಂದರಿ ನಿನ್ನು ವರ್ಣಿಂಪ' ಕೃತಿಯಲ್ಲಿ ಕ್ಷೇತ್ರಮುದ್ರೆ ಕಾಣಬರದು. ಸಾಹಿತ್ಯಾಕ್ಷರಗಳು ನಿಬಿಡವಾಗಿರುವ ಈ ಕೃತಿಯಲ್ಲಿ ಕ್ಷೇತ್ರಮುದ್ರೆ ತ್ಯಾಗರಾಜರು ಭಾವುಕರಾಗಿ ಹಾಡುವಲ್ಲಿ ಲೋಪವಾಗಿದ್ದಿರಬಹುದು. ದೇವಿಯ ಪಾರಮ್ಯದ ಚಿತ್ರಣವಿಲ್ಲಿದೆ.

೯. 'ಕನ್ನತಲ್ಲಿ' ಶುದ್ಧಸಾವೇರಿ ಕೃತಿಸಾಹಿತ್ಯದ ನಡುವೆ ಗಾದೆ ಮಾತು ಸುಂದರವಾಗಿ ಅಳವಟ್ಟಿದೆ. 'ವೆನ್ನಯುಂಡ ನೇತಿಕಿಯೆವರ್ಕೈನ ವ್ಯಸನ ಪಡುದುರಾ ?' (ಬೆಣ್ಣೆ ಇರಲು ತುಪ್ಪಕ್ಕಾಗಿ ವ್ಯಥೆಮಾಡುವರೇ ?)
ಕೃತಿಯ ಆರಂಭವು ಆರೋಹರೂಪದ ಧಾತುವಿನಲ್ಲಿದೆ.

೯೯೯ ಸ ರಿಮಪಾ ದ ಪಮಪಾಮ
ಕ ನ್ನ ತ ಲ್ಲಿ

೧೦. ಈ ಗುಚ್ಛದ ಐದು ಕೃತಿಗಳಲ್ಲೂ 'ತ್ರಿಪುರಸುಂದರಿ' ಎಂಬ ಕ್ಷೇತ್ರದೇವತಾ ಮುದ್ರೆ ಕಾಣಬರುತ್ತದೆ.

೧೧. ಈ ಗುಚ್ಛದಲ್ಲಿ 'ದರಿನಿ' ಮತ್ತು 'ಕನ್ನತಲ್ಲಿ' ಕೃತಿಗಳು ವಿಳಂಬಕಾಲದಲ್ಲಿವೆ ಉಳಿದವು ಮಧ್ಯಮಕಾಲದ ಕೃತಿಗಳು.

## ೪. ಲಾಲ್‌ಗುಡಿ ಪಂಚರತ್ನ

**ತಮ್ಮ ಶಿಷ್ಯರಲ್ಲಿ ಒಬ್ಬರಾದ ರಾಮಯ್ಯರ್‌ರವರ ಪ್ರಾರ್ಥನೆಯ ಮೇರೆಗೆ ತ್ಯಾಗರಾಜರು ತಿರುಚಿರಪಳ್ಳಿ ಜಿಲ್ಲೆಯ ಲಾಲ್‌ಗುಡಿಗೆ ಭೇಟಿಯಿತ್ತಿದ್ದರು. 'ಶಿಷ್ಯನ ಕೋರಿಕೆಯಂತೆ' ಎಂಬ ಅಂಶ ಅವರ ಈ ಕೃತಿಗುಚ್ಛದಲ್ಲಿ ಪ್ರಸ್ತಾಪಗೊಳ್ಳದಿದ್ದರೂ ತ್ಯಾಗರಾಜರು ಲಾಲ್‌ಗುಡಿ ಸಂದರ್ಶಿಸಿದ ಅಂಶಕ್ಕೆ ಮಾಹಿತಿಯುಂಟು. 'ಅಲ್ಪರಿಗೆ ಈ ದರ್ಶನ ಸಾಧ್ಯವೇ ? ನಿನ್ನ ಸಾಕ್ಷಾತ್ಕಾರದಿಂದ ದುಃಖವೆಲ್ಲ ತೊಲಗಿತು. ಇದು ಭೂಲೋಕ ಕೈಲಾಸವೆಂಬುದು ನಿಜವೇ' ಎಂಬ ಅವರ ಮಾತುಗಳೇ ಇದಕ್ಕೆ ನಿದರ್ಶನ.**

**ದೊರಿಕೇನಾ ಅಲ್ಪುಲಕೀ ದರ್ಶನ . . . .**
**ಭೂಲೋಕ ಕೈಲಾಸಂಬನು ಪಲ್ಕುಲು ನಿಜಮೇ ಸಾರೆಕುಗಂಟಿ . . . .**
**ನೀ ಸಾಕ್ಷಾತ್ಕಾರಮುನ ವೇಸಟಲೆಲ್ಲ ದೊಲಿಗೆ**

**(ಈಶಪಾಹಿಮಾಂ)**

ತ್ಯಾಗರಾಜರು ಈ ಕ್ಷೇತ್ರವಾಸಿಗಳ ಪುಣ್ಯವನ್ನೂ ಇಲ್ಲಿ ಕೊಂಡಾಡುತ್ತಾರೆ.

**ಈ ಪುರಮುನ ಬಾಗ ಕಾಪುರಮು ಸೇಯುವಾರೇ ಪುಣ್ಯಮು ಜೇಸಿರೋ**

**(ಗತಿನೀವನಿ)**

ಲಾಲ್‌ಗುಡಿ ಕ್ಷೇತ್ರದ ಪ್ರಸಿದ್ಧ ದೇವತೆಗಳು 'ಶ್ರೀಸಪ್ತಋಷೀಶ್ವರ' ಮತ್ತು 'ಪ್ರವೃದ್ಧ ಶ್ರೀಮತಿ'. ಇವರನ್ನು ಸ್ತುತಿಸುವ ಐದು ರಚನೆಗಳ ಸಮೂಹವೇ ಲಾಲ್ ಗುಡಿ ಪಂಚರತ್ನ. ಈ ಗುಚ್ಛದಲ್ಲಿ ಸಪ್ತಋಷೀಶ್ವರನನ್ನು ಕುರಿತಂತೆ ಎರಡು ರಚನೆಗಳೂ ಶ್ರೀಮತಿ ಅಥವಾ ಅಂಬಿಕೆಯನ್ನು ಕುರಿತಂತೆ ಮೂರು ರಚನೆಗಳೂ ಇವೆ.

೧ ಈಶಪಾಹಿಮಾಂ - ಕಲ್ಯಾಣಿ - ರೂಪಕ - ಸಂಸ್ಕೃತಾರಂಭ - ಮಧ್ಯೆ ತೆಲುಗು ಭಾಷೆ
೨ ದೇವ ಶ್ರೀತಪಸ್ತೀರ್ಥಪುರನಿವಾಸ - ಮಧ್ಯಮಾವತಿ - ತ್ರಿಪುಟ - ಸಂಸ್ಕೃತ ಭಾಷೆ
೩ ಗತಿ ನೀವನಿ - ತೋಡಿ - ಆದಿ - ತೆಲುಗು ಭಾಷೆ
೪ ಲಲಿತೆ ಶ್ರೀಪ್ರವೃದ್ಧೆ - ಭೈರವಿ - ಆದಿ - ತೆಲುಗು ಭಾಷೆ
೫ ಮಹಿತಪ್ರವೃದ್ಧಶ್ರೀಮತಿ - ಕಾಂಬೋಜಿ - ಛಾಪು - ಸಂಸ್ಕೃತ ಭಾಷೆ

ತ್ಯಾಗರಾಜರು ಸಪ್ತಋಷೀಶನಲ್ಲಿ ಹೀಗೆ ಪ್ರಾರ್ಥಿಸುತ್ತಾರೆ. ಇಲ್ಲಿನ ಈಶ್ವರನು ಹೇಮಾಚಲಚಾಪ, ಸೋಮಾಗ್ನಿತರಣಿಲೋಚನ, ಅದ್ಭುತನಾದ, ಸಾಮಾದಿನಿಗಮ ಸಂಚಾರಿಯಾದ ಈತನ ನಾಮಾಮೃತವು ಎಂದಿನ ತಪಃಫಲದಿಂದಲೋ ತ್ಯಾಗರಾಜರಿಗೆ ಲಭ್ಯವಾಗಿದೆ. ಈಶ್ವರನೇ ಅವರಿಗೆ ಭಕ್ತಿ ನೀಡಿ ರಕ್ಷಿಸಬೇಕಾಗಿದೆ.

ದೇವಿ ಪಾರ್ವತಿಯನ್ನು ಅವರು ಪೌರಾಣಿಕ ಹಿನ್ನೆಲೆಯೊಂದಿಗೇ ಸ್ತುತಿಸುತ್ತಾರೆ. ತ್ಯಾಗರಾಜರು ಹೇಳುವಂತೆ ಈಕೆ ಗುಹ-ಗಣಪತಿ ಜನನಿ. ಈಕೆಯ ಹೃದಯದಲ್ಲೇ ಸಪ್ತಋಷೀಶನು ನೆಲೆಸಿದ್ದಾನೆ. ಸರ್ವಲೋಕನಾಯಕಿಯಾದ ಅಂಬಿಕೆಯು ದೇವತೆಗಳಿಗೇ ಮೂಲಳು. ಆದ್ದರಿಂದ ದೀನರಾಗಿ ತ್ಯಾಗರಾಜರು ಹೀಗೆ ಬೇಡುತ್ತಾರೆ. ಇಂದು-ನಾಳೆ ಎಂದು ಸತಾಯಿಸಬಾರದೆಂದು ಆಕೆಯಲ್ಲಿ ಪ್ರಾರ್ಥಿಸುತ್ತಾರೆ. ಜ್ಞಾನನಿಧಿಯಾದ ದೇವಿ ಮುಗ್ಧಬಾಲಕರಾದ ತ್ಯಾಗರಾಜರನ್ನು ರಕ್ಷಿಸಬೇಕಾಗಿದೆ. ಭೂಲೋಕದ ಜನರನ್ನು ಬೇಡುವುದು ನಿರರ್ಥಕವೆಂದರಿತು ತ್ಯಾಗರಾಜರು ಅಂಬಿಕೆಯನ್ನೇ ಕೋರಿಬಂದಿದ್ದಾರೆ. ಅಸಮಾನಳಾದ ಶ್ರೀಮತಿಯು ಅವರಲ್ಲಿ ನಿರ್ದಯಳಾಗಬಾರದೆಂಬುದು ತ್ಯಾಗರಾಜರ ದೀನಮೊರೆ.

**ಸಂಗೀತ ಮತ್ತು ಇತರ ವಿಶಿಷ್ಟಾಂಶಗಳು**

೧ ಲಾಲ್‌ಗುಡಿಯನ್ನು ಶ್ರೀಪುರ, ತಪಸ್ತೀರ್ಥಪುರ, ಯಾರಕಪುರಗಳೆಂದು ಹೆಸರಿಸಿದ್ದಾರೆ. ಈ ಮೂರು ಕ್ಷೇತ್ರಾಂಕಿತಗಳೂ ಗತಿನೀವನಿ (ತೋಡಿ) ಕೃತಿಯಲ್ಲಿ ಕಾಣಬರುವುದು ಗಮನಾರ್ಹ. ಈಶಪಾಹಿಮಾಂ (ಕಲ್ಯಾಣಿ) ರಚನೆಯಲ್ಲಿ ಕ್ಷೇತ್ರಾಂಕಿತವಿಲ್ಲ. ಉಳಿದ ಮೂರು ರಚನೆಗಳಲ್ಲೂ ತಪಸ್ತೀರ್ಥನಗರದ ಉಲ್ಲೇಖವಿದೆ. ಆದರೆ ಐದೂ ರಚನೆಗಳಲ್ಲಿ ಕ್ಷೇತ್ರದೇವತಾಂಕಿತಗಳಿರುವುದು ಗಮನಾರ್ಹ.

೨ ಈ ಗುಚ್ಛದ ದೇವೀಕೃತಿಗಳಲ್ಲಿನ ಭಾವ ಶ್ಯಾಮಶಾಸ್ತ್ರಿಗಳ ಕೃತಿಗಳಲ್ಲಿರುವಂತೆ ದೈನ್ಯವೇ ಆಗಿದೆ.

೩ ಆಶರ ಗಣಮದಹರಣ (ರಾಕ್ಷಸ ಸಮೂಹದ ಮದವಡಗಿಸಿದವನು), ಅನಾಪಜನಕ (ಅಗ್ನಿಯ ತಂದೆ), ಬಿಲೇಶಯಭೂಷ (ನಾಗಾಭರಣ) ಮೊದಲಾದ ವಿಶಿಷ್ಟ ಪದಗಳ ಬಳಕೆಯಿದೆ.

೪ ಶಂಕರನನ್ನು 'ಸಾಮಾದಿ ನಿಗಮ ಸಂಚಾರಿ' ಎಂದು ಸಂಬೋಧಿಸಲಾಗಿದೆ.

೫ ವಿಸ್ತಾರವ್ಯಾಪ್ತಿಯುಳ್ಳ ರಾಗಗಳಲ್ಲೇ ಈ ಗುಚ್ಛದ ಎಲ್ಲ ಕೃತಿಗಳೂ ರಚಿತವಾಗಿವೆ. ಈ ರಾಗಗಳಲ್ಲಿ ಒಂದಕ್ಕಿಂತ ಹೆಚ್ಚಿನ ಜೀವಸ್ವರಗಳಿದ್ದು ಪಲ್ಲವಿ, ಅನುಪಲ್ಲವಿಗಳಲ್ಲಿ ಸಂಗತಿಗಳ ಅಳವಡಿಕೆ ಕಾಣಬರುತ್ತದೆ.

## ೫. ಕೋವೂರು ಪಂಚರತ್ನ

ಕೋವೂರು, ಗೋವೂರು, ಗೋಪುರಂ—ಇವೆಲ್ಲವೂ ಒಂದೇ ಸ್ಥಳವನ್ನು ಸೂಚಿಸುತ್ತವೆ. ಈ ಊರು ಮದರಾಸಿನ ಪಶ್ಚಿಮಕ್ಕೆ ಹದಿಮೂರುವರೆ ಮೈಲಿ ದೂರದಲ್ಲಿರುವ ಒಂದು ಸ್ಥಳ. ಇದೊಂದು ಪವಿತ್ರ ಕ್ಷೇತ್ರ. ಇಲ್ಲಿನ ದೇವತೆಗಳು ಸುಂದರೇಶ್ವರ ಮತ್ತು ಸೌಂದರ್ಯನಾಯಕಿಯರು. ದೈವಭಕ್ತರೂ, ಶ್ರೀಮಂತರೂ ಆಗಿದ್ದ ಸುಂದರೇಶ ಮೊದಲಿಯಾರರ ಪ್ರಾರ್ಥನೆಯಂತೆ ತ್ಯಾಗರಾಜರು ಈ ದೇವಸ್ಥಾನಗಳಿಗೆ ಭೇಟಿ ನೀಡಿದ್ದರು. ಇಲ್ಲಿನ ಕ್ಷೇತ್ರ ದೇವತೆಗಳನ್ನು ಕುರಿತು ಹಾಡಿರುವ ರಚನೆಗಳೇ ಕೋವೂರು ಪಂಚರತ್ನಗಳೆನಿಸಿವೆ. ಈ ಗುಚ್ಛದಲ್ಲಿನ ಐದು ಕೃತಿಗಳೆಂದರೆ—

೧ ಶಂಭೋ ಮಹಾದೇವ - ಪಂತುವರಾಳಿ - ರೂಪಕ
೨ ಈ ವಸುಧ ನೀವಂಟಿದೈವಮು - ಶಹನ - ಆದಿ
೩ ಕೋರಿ ಸೇವಿಂಪರಾರೆ - ಖರಹರಪ್ರಿಯ - ಆದಿ
೪ ನಮ್ಮಿ ವಚ್ಚಿನ ನನ್ನು - ಕಲ್ಯಾಣಿ - ರೂಪಕ
೫ ಸುಂದರೇಶ್ವರುನಿ - ಶಂಕರಾಭರಣ - ಆದಿ

ತ್ಯಾಗರಾಜರು ಕೋವೂರು ಕ್ಷೇತ್ರದೇವತೆಗಳನ್ನು ಹೀಗೆ ವರ್ಣಿಸುತ್ತಾರೆ. 'ಸುಂದರೇಶ್ವರನನ್ನು ಸಾವಿರ ಬಣ್ಣದ ಪುಷ್ಪಗಳಿಂದ ದೇವತೆಗಳು ಪೂಜಿಸುತ್ತಿದ್ದಾರೆ. ಭೂ

ಸುರರೂ, ಮುನಿಗಳೂ, ತುಂಬುರು ನಾರದರೂ ಸ್ತುತಿಸುತ್ತಿದ್ದಾರೆ. ಸುಂದರೇಶ್ವರನು ಕಾಲ್ಗಳಲ್ಲಿ ಬಂಗಾರದ ನೂಪುರಗಳನ್ನೂ, ಕೈಗಳಲ್ಲಿ ಕಂಕಣಗಳನ್ನೂ, ಹಣೆಯಲ್ಲಿ ಕಸ್ತೂರಿ ತಿಲಕವನ್ನೂ ಹೊಂದಿದ್ದಾನೆ' (ಸುಂದರೇಶ್ವರುನಿ ಜೂಚಿ—ಇಲ್ಲಿ ಈಶ್ವರನು ಸಾಂಪ್ರದಾಯಿಕವಾಗಿ ನಂಬಲಾಗಿರುವಂತೆ ಭಸ್ಮಧೂಳಿತ ಸರ್ವಾಂಗನೂ, ಸರ್ಪಭೂಷಣನೂ ಆಗಿ ವರ್ಣಿತವಾಗಿಲ್ಲದಿರುವುದು ಗಮನಾರ್ಹ). ಮತ್ತೊಂದು ಕೃತಿಯ ಪ್ರಕಾರ 'ಸೌಂದರ್ಯನಾಯಕಿಪತಿಯೂ, ಗಿರಿಜಾರಮಣನೂ ಆದ ಸುಂದರೇಶ್ವರನು ಮೃಗಧರನೂ, ಸರ್ಪಭೂಷಣನೂ ಹೌದು. ಸುರಬೃಂದ ಕಿರೀಟಗಳಲ್ಲಿ ಅಳವಟ್ಟಿರುವ ಶ್ರೇಷ್ಠಮಣಿಗಳಿಂದ ನೀರಾಜಿತವಾದ ಪಾದಗಳುಳ್ಳವನಾಗಿ ವಿರಾಜಿಸಿರುವ (ಸುರ ಬೃಂದ ಕಿರೀಟ ಮಣಿವರ ನೀರಾಜಿತ ಪದ), ರಾಜಸಗುಣ ರಹಿತನಾದ ಸುಂದರೇಶ್ವರ ನನ್ನು ಸೇವಿಸೋಣ ಬನ್ನಿರೆಂದು ತ್ಯಾಗರಾಜರು ಇತರರನ್ನೂ ಆಹ್ವಾನಿಸುತ್ತಾರೆ.

ತ್ಯಾಗರಾಜರ ಪ್ರಕಾರ ಗೋಪುರವು ಕಾಶಿಗೆ ಸಮಾನವಾದುದು. "ವರಕಾಶಿಕಿ ಸಮಾನ ಮೈನ ಗೋಪುರ" (ಸುಂದರೇಶ್ವರುನಿ). ಆಸೆಯಿಂದ ಅರೆನಿಮಿಷವಾದರೂ ಈ ಕ್ಷೇತ್ರ ದಲ್ಲಿ ವಾಸಮಾಡುವವರ ಕಷ್ಟಗಳೆಲ್ಲ ತೊಲಗುತ್ತವೆ.

**ಆಸಚೇ ಅರನಿಮಿಷಮು ನೀ ಪುರವಾಸಮೊನರಜೇಯುವಾರಿ ಮದಿ**
**ವೇಸಟಲೆಲ್ಲನು ದೊಲಗಿಂಚಿ . . . .**

**(ಈ ವಸುಧಾ)**

ಶ್ರೀ ಶಂಕರ ಭಗವತ್ಪಾದರ ಸೌಂದರ್ಯಲಹರಿಯಲ್ಲಿ ಕಾಣಬರುವ ದೇವತಾ ಸಮೂಹದ ಕಿರೀಟಗಳಲ್ಲಿರುವ ಮಣಿಗಳಿಂದ ದೇವಿಯು ನೀರಾಜಿತಳಾಗುವ ಕಲ್ಪನೆ[೨] ತ್ಯಾಗರಾಜರ 'ಶಂಭೋ ಮಹಾದೇವ' ಕೃತಿಯಲ್ಲೇ ಅಲ್ಲದೆ ಪ್ರಹ್ಲಾದ ಭಕ್ತಿವಿಜಯ ಗೀತನಾಟಕದಲ್ಲೂ ಮೂಡಿಬಂದಿದೆ.[೧೩]

**ಸಂಗೀತ ಮತ್ತು ಇತರ ವಿಶಿಷ್ಟಾಂಶಗಳು**

೧. ಈ ಗುಚ್ಛದಲ್ಲಿ ಶಂಭೋ ಮಹಾದೇವ ಕೃತಿ ಮಾತ್ರ ಸಂಸ್ಕೃತ ಭಾಷೆಯಲ್ಲಿದೆ. ಉಳಿದ ನಾಲ್ಕು ಕೃತಿಗಳ ಭಾಷೆ ತೆಲುಗು.

೨. ಎಲ್ಲ ಕೃತಿಗಳಲ್ಲೂ ಗೋವೂರು, ಕೋವೂರು ಅಥವಾ ಗೋಪುರವೆಂಬ ಕ್ಷೇತ್ರಮುದ್ರೆ ಹಾಗೂ ಕ್ಷೇತ್ರದೇವತಾ ಮುದ್ರೆಗಳಿವೆ.

**ಕೊಮ್ಮನಿ ವರಮುಲನೊಸಗು - ಕೋವೂರಿ ಸುಂದರೇಶ ॥**
**ನಾದರೂಪ ! ಶ್ರೀ ಸೌಂದರ್ಯ ನಾಯಕೀ ಪತೇ ! ಭೇದ**
**ವಾದ ರಹಿತ ಶ್ರೀ ತ್ಯಾಗರಾಜವರದ ಸುಂದರೇಶ್ವರ ನಿನು ॥**

**(ನಮ್ಮಿ ವಚ್ಚಿನ ನನ್ನು)**

**ಭಾವುಕಮು ಗಲ್ಗಿ ವರ್ಧಿಲ್ಲು ಕೋವೂರಿ ಸುಂದರೇಶ . . .**

**(ಈ ವಸುಧಾ)**

**ಗೋಪುರವಾಸ, ಸುಂದರೇಶ**

**(ಶಂಭೋ ಮಹಾದೇವ)**

**ಶ್ರೀರಮಣೀ ಕರಮೌ ಕೋವೂರಿ ಸುಂದರೇಶ್ವರುನಿ ॥**

**ಶ್ರೀಸೌಂದರ್ಯನಾಯಿಕಾವರುನಿ**

**(ಕೋರಿ ಸೇವಿಂಪರಾರೇ)**

**ಸುಂದರೇಶ್ವರುನಿ ಜೂಚಿ . . . .**

**ಗೋಪುರಮಂದು ವೆಲಯು**

**ರಾಜಶೇಖರುನಿ ಗೋಪುರ ನಿಲಯುನಿ . . .**

**(ಸುಂದರೇಶ್ವರುನಿ ಜೂಚಿ)**

೩ ಸೌಂದರ್ಯನಾಯಕೀಪತೇ, ಸೌಂದರ್ಯನಾಯಿಕಾವರುನಿ—ಎಂದು ಶಿವನನ್ನು ಸಂಬೋಧಿಸಿದರೂ ಸೌಂದರ್ಯ ನಾಯಕಿ ದೇವತೆಯನ್ನೂ ಹೆಸರಿಸಲಾಗಿದೆ.

೪ ಶಿವನನ್ನು ನಾದರೂಪನೆಂದು ವರ್ಣಿಸಲಾಗಿದೆ (ಇನ್ನಿತರ ಬಿಡಿಕೃತಿಗಳಲ್ಲೂ ದೇವರು ನಾದರೂಪಿ, ನಾದಪ್ರಿಯ, ನಾದಲೋಲನಾಗಿದ್ದಾನೆ).

೫ ಖರಹರಪ್ರಿಯ ರಾಗದ 'ಕೋರಿಸೇವಿಂಪರಾರೆ' ಕೃತಿಯು ತಾನದ ಮಾದರಿಯಲ್ಲಿ, ಪ್ರಾಚೀನ ಅಲಂಕಾರದ ರೂಪದಲ್ಲಿ ಧಾತುಭಾಗವನ್ನು ಹೊಂದಿದೆ.

| | | | | | |
|---|---|---|---|---|---|
| ಪದನಿದ | ನೀಪಾ | ನಿದದಪಪಮ | ಗರಿಗಮಪಾ | | |
| ಕೋ | . . . ರಿ | ಸೇ | ವಿಂ . . . ಪ . . . . | | |
| ಸರಿಗಾ | ರಿಗಮಾ | ಗಮಪಾ | | | |
| ಕೋ | ರ್ಕ | ಲೀ . . . . . | | | |
| ರಿಸನಿದ | ಸನಿದಪ | ನಿದಪಮ | ದಪಮಗ | ರಿಗಮಪ | |
| ಸುಂ | ದ | ರೇ | ಶ್ವ | ರು | ನಿ |

೬ ವಿಶೇಷವಾಗಿ ಶಿವಪ್ರಿಯವೆಂದು ನಂಬಲಾದ ಖರಹರಪ್ರಿಯ, ಶಂಕರಾಭರಣ, ಪಂತುವರಾಳಿಗಳು ಈ ಗುಚ್ಛದ ಮೂರು ಕೃತಿಗಳಿಗೆ ಅಳವಡಿಸಲಾಗಿದೆ.

೭ ಈ ಗುಚ್ಛದಲ್ಲಿ ಎರಡು ವಿಳಂಬಕಾಲದ ಕೃತಿಗಳು (ಕೋರಿಸೇವಿಂಪರಾರೆ, ಸುಂದರೇಶ್ವರುನಿ), ಉಳಿದವು ಮಧ್ಯಮಕಾಲದ ಕೃತಿಗಳು.

೮ ಶಹನರಾಗದ 'ಈ ವಸುಧಾ' ಕೃತಿಗೆ ಇಂದಿನ ರೂಢಿಯಲ್ಲಿ ಚಿಟ್ಟೆಸ್ವರ ಪ್ರಯೋಗ ಇದೆ. ಇದರಲ್ಲಿ ಸಸಾಸ, ಪಪಾಪ, ರಿರೀಗಮರಿಗರಿಸ, ಸರಿಸಸಾಸ ಪಾಪ ಮುಂತಾದ ಸುಂದರ ಸ್ವರಜೋಡಣೆಗಳೂ ಇವೆ. ಆದರೆ ತ್ಯಾಗರಾಜರು ಘನರಾಗ ಪಂಚರತ್ನಗಳಿಗೆ ಮಾತ್ರ ಸ್ವರಸಾಹಿತ್ಯ ಜೋಡಿಸಿರುವರೇ

ಹೊರತು ಇತರ ಕೃತಿಗಳಿಗೆ ಚಿಟ್ಟೆಸ್ವರ ಜೋಡಣೆ ಅವರ ಉದ್ದೇಶವಾಗಿರಲಿಲ್ಲ. ಚಿಟ್ಟೆಸ್ವರವು ಸಾಹಿತ್ಯದ ಭಾವತೀವ್ರತೆಯನ್ನು ಸ್ವಲ್ಪಮಟ್ಟಿಗೆ ಕುಂಠಿತಗೊಳಿಸಬಹುದೆಂಬ ಅಭಿಪ್ರಾಯವನ್ನು ಕೆಲವು ಪರಿಣತರು ಹೇಳುತ್ತಾರೆ.[೧೪]

**ಕ್ಷೇತ್ರ ವಿವರ** : ಪರಾಶಕ್ತಿಯು ಮಾಂಗಾಡಿನಲ್ಲಿ ಪಂಚಾಗ್ನಿ ತಪಸ್ಸನ್ನು ಮಾಡಿದಾಗ ಅಲ್ಲಿ ಎಲ್ಲ ದೇವತೆಗಳೂ ನೆಲೆಸಿದರು. ಶಿವನೇ ಆ ಎಲ್ಲ ದೇವತೆಗಳಿಗೂ ಊಟೋಪಚಾರದ ಏರ್ಪಾಟನ್ನು ಮಾಡಿದನು. ಈ ಸಂದರ್ಭದಲ್ಲಿ ಆತ ದೇವಲೋಕದಿಂದ ಕಾಮಧೇನುವನ್ನು ಮಾಂಗಾಡಿಗೆ ಕರೆತಂದನು. 'ಗೋ' ಎಂಬುದು ಮಹಾಲಕ್ಷ್ಮಿಯನ್ನು ಸೂಚಿಸುತ್ತದೆ. ಗೋಮಾತೆಯು ಮಾಂಗಾಡಿನಲ್ಲಿ ನೆಲೆಸಿದುದರಿಂದಲೇ ಈ ಕ್ಷೇತ್ರಕ್ಕೆ ಗೋವೂರೆಂಬ ಹೆಸರಾಯಿತು. ಈ ಊರಿನ ಸುಂದರೇಶ್ವರನನ್ನು ಗೋಪುರನಿವಾಸಿ, ತಿರುಮೇನೀಶ್ವರಾರ್ ಎಂದೂ ಕರೆಯುವುದುಂಟು. ಸೆಕ್ಕಿಲಾರರು 'ಪೆರಿಯಪುರಾಣ'ವನ್ನು ರಚಿಸಲಾರಂಭಿಸಿದಾಗ ಕೋವೂರಿನ ಸುಂದರೇಶ್ವರನೇ ಗ್ರಂಥದ ಮೊದಲ ಸಾಲನ್ನು ರಚಿಸಿದಂತೆ ಹೇಳುತ್ತಾರೆ. ಈ ಊರಿನಲ್ಲಿ ದೇವಸ್ಥಾನವನ್ನು ನಿರ್ಮಿಸಿದವನು ರಾಜರಾಜಚೋಳ. ಈ ಕ್ಷೇತ್ರದಲ್ಲಿ ಮಾತ್ರವೇ ಮಾಣಿಕ್ಯವಾಚಕರ ಹಬ್ಬವನ್ನು ಆಚರಿಸುವುದು. ಒಂಬತ್ತು ದಿನಗಳ ಈ ಸಮಾರಂಭದಲ್ಲಿ ವಾಚಕರ 'ತಿರುವೆಂಪಾವೈ' ಹಾಡಲ್ಪಡುತ್ತದೆ.[೧೫]

## ೬. ಘನರಾಗ ಪಂಚರತ್ನ

ತ್ಯಾಗರಾಜರ ಕವಿತಾ ವೈಭವ ಅದ್ಭುತವಾಗಿ ಮೆರೆದಿದ್ದು ಅವರ ಸಂಗೀತ ಪಾಂಡಿತ್ಯಕ್ಕೆ ನಿಲುವುಗನ್ನಡಿಯಾಗಿರುವುದು ಘನರಾಗ ಪಂಚರತ್ನ[೧೬] ಕೃತಿಗಳು. ಉಳಿದ ರಚನೆಗಳು ಅವರ ಕೌಶಲವನ್ನು ಭಾಗಶಃ ಪರಿಚಯಿಸಿದರೆ ಘನರಾಗ ಪಂಚರತ್ನ ಕೃತಿಗಳು ಅವರ ಸರ್ವತೋಮುಖ ಸಾಮರ್ಥ್ಯವನ್ನು ಪ್ರತಿಬಿಂಬಿಸುತ್ತವೆ. ಹೆಸರೇ ಸೂಚಿಸುವಂತೆ ಈ ಗುಚ್ಛದಲ್ಲಿ ಐದು ಅಮೂಲ್ಯ ಕೃತಿಗಳು ಘನರಾಗದಲ್ಲಿ ರಚಿತವಾಗಿವೆ. ಅವೆಂದರೆ—

೧ ಜಗದಾನಂದಕಾರಕ - ನಾಟ - ಆದಿ

೨ ದುಡುಕುಗಲ -ಗೌಳ - ಆದಿ

೩ ಸಾಧಿಂಚೆನೆ - ಆರಭಿ - ಆದಿ

೪ ಕನಕನರುಚಿರಾ - ವರಾಳಿ - ಆದಿ

೫ ಎಂದರೋ ಮಹಾನುಭಾವುಲು - ಶ್ರೀ - ಆದಿ

ಈ ಕೃತಿಗಳ ಸೃಷ್ಟಿಗೆ ಮುಖ್ಯವಾಗಿ ಎರಡು ಕಾರಣಗಳನ್ನು ಊಹಿಸಲಾಗುತ್ತದೆ.

೧ ತ್ಯಾಗರಾಜರ ಕಾಲದಲ್ಲಿ ಸಂಗೀತ ರಾಜಾಶ್ರಯದಿಂದ ಉನ್ನತಸ್ಥಿತಿಯಲ್ಲಿದ್ದಿತು. ಮನೋಧರ್ಮ, ಸಂಗೀತದ ಪ್ರಕಾರಗಳಾದ ರಾಗಾಲಾಪನೆ, ತಾನ, ಪಲ್ಲವಿ ವಿನ್ಯಾಸಾದಿಗಳಲ್ಲೇ ಪ್ರತ್ಯೇಕವಾಗಿ ಸಾಧನೆ ಮಾಡಿದ ಸಂಗೀತಜ್ಞ

ರಿದ್ದರು. ಮನೋಧರ್ಮ ಸಂಗೀತವನ್ನೇ ಪ್ರಧಾನವಾಗಿ ಪರಿಗಣಿಸಿ ತ್ಯಾಗ ರಾಜರ ರಚನೆಗಳ ಪೂರ್ಣ ಸಾಹಿತ್ಯವನ್ನು ಅರ್ಥಮಾಡಿಕೊಳ್ಳಲಾಗದ ಮಂದಿ ಅವರ ಇತರ ರಚನೆಗಳನ್ನು ಲಘುವಾಗಿ ಪರಿಗಣಿಸಿ, ತ್ಯಾಗರಾಜರ ಕವಿತಾ ಸಾಮರ್ಥ್ಯದ ಬಗೆಗೆ ಮಾಡಿದ ಟೀಕೆ ಒಂದು ಕಾರಣವಾದರೆ,

೨ ಶಿಷ್ಯರು ತ್ಯಾಗರಾಜರಲ್ಲಿ ತಾನವರ್ಣಗಳನ್ನು ರಚಿಸುವಂತೆ ಮಾಡಿದ ಪ್ರಾರ್ಥನೆ ಮತ್ತೊಂದು ಕಾರಣವಾಯಿತು. ಈ ಕಾರಣಗಳಿಂದ ತ್ಯಾಗ ರಾಜರು ತಾನವರ್ಣಗಳ ಧಾಟಿಯಲ್ಲೇ ಈ ಕೃತಿಗಳನ್ನು ರಚಿಸಿದರು ಎಂದು ಹೇಳುವುದುಂಟು.[೧೭] ಹೀಗೆ ಕಾರಣವೇನೇ ಇದ್ದರೂ ತ್ಯಾಗರಾಜಕೃತ ಘನರಾಗ ಪಂಚರತ್ನ ಕೃತಿಗಳು ಕರ್ನಾಟಕ ಸಂಗೀತ ಕ್ಷೇತ್ರದಲ್ಲೇ ವಿಶಿಷ್ಟ ಸ್ಥಾನ ಪಡೆದ ಕೃತಿಗಳಾಗಿದ್ದು ಪ್ರತಿವರ್ಷವೂ ತ್ಯಾಗರಾಜರ ಆರಾಧನಾ ಸಂದರ್ಭದಲ್ಲಿ ತಪ್ಪದೆ ಹಾಡಲ್ಪಡುತ್ತವೆ.

ಪಂಚರತ್ನ ಕೃತಿಗಳಲ್ಲಿ ಮೊದಲನೆಯದಾದ 'ಜಗದಾನಂದಕಾರಕ' ಶ್ರೀರಾಮನ ಗುಣವಿಶೇಷಣಗಳನ್ನೂ, ವೇದೋಪನಿಷತ್ ತತ್ತ್ವವಿಶೇಷಗಳನ್ನೂ ಹೊಂದಿದೆ. ಸಂಸ್ಕೃತ ಭಾಷೆಯ ಈ ಕೃತಿಯಲ್ಲಿ ಸಾಹಿತ್ಯವು ನಾಮಾವಳಿಯಂತಿದ್ದು ರಾಮನ ೮೮ ಸಂಬೋಧನೆಗಳು ಅಳವಟ್ಟಿವೆ. ಪಲ್ಲವಿ, ಅನುಪಲ್ಲವಿಗಳು ಮತ್ತೆಮತ್ತೆ ಪುನರಾ ವರ್ತನೆಗೊಳ್ಳುವ ಮೂಲಕ ಶ್ರೀರಾಮನ ಅಷ್ಟೋತ್ತರ ಶತನಾಮಗಳನ್ನು ಹೇಳಿದಂತಾ ಗುತ್ತದೆ. ತ್ಯಾಗರಾಜರು ಈ ಕೃತಿಯನ್ನು ಅರ್ಚನಾರೂಪ ಕೃತಿಯಾಗಿ ರಚಿಸಿದ್ದಾರೆ. ತ್ಯಾಗರಾಜರ ಸಂಸ್ಕೃತ ಭಾಷಾ ಪಾಂಡಿತ್ಯಕ್ಕೆ ಈ ಕೃತಿಯೊಂದು ಉದಾಹರಣೆ.

**ಸಂಗೀತ ಮತ್ತು ಇತರ ವಿಶಿಷ್ಟಾಂಶಗಳು**

೧ ಈ ಕೃತಿ ಪಲ್ಲವಿ, ಅನುಪಲ್ಲವಿ ಮತ್ತು ಹತ್ತು ಚರಣಗಳನ್ನು ಹೊಂದಿದೆ.

೨ ನಾಟರಾಗದ ಆರೋಹದಲ್ಲಿ ಷಟ್‌ಶ್ರುತಿ ದೈವತದ ಬಳಕೆಯಿದ್ದರೂ (ಜಗ ದಾನಂದಕಾರಕ) ಅದರ ಪ್ರಯೋಗ ಇಡೀ ಕೃತಿಯಲ್ಲಿ ಕಾಣಬರುವುದಿಲ್ಲ.

೩ ಮಂದ್ರಸ್ಥಾಯಿ ಮಧ್ಯಮದಿಂದ ತಾರಸ್ಥಾಯಿ ಮಧ್ಯಮದವರೆಗೆ ರಾಗ ಸಂಚಾರ ಅಳವಟ್ಟಿದೆ.

ಮಪಸಸರಿ — ಮಾರಿಸನಿಪಮಾ

ರಕನಿಚಯ — ಲೇಶಶು ಭ್ರನಾ

೪ ಸಾಪಾ ಪಸಾ ಸಸಾ ಮುಂತಾದ ಸಂವಾದೀ ಸ್ವರಜೋಡಿಗಳಿವೆ.

೫ ಎಕ್ಕುಜಾರು, ದಿಗುಜಾರುಗಳ ಬಳಕೆ ಹೀಗಿವೆ.

/ ಸಾಸಾಸ        \ ಸಪಾನಿ

೬ ಸ್ರೋತೋವಹ ಯತಿ ಮಾದರಿಗಳಿವೆ.

| | | |
|---|---|---|
| ಪಮರೀ | ನಿಪಾ | ಮರಿಸ |
| ನಿಪಮರೀ | ಸನಿಪಾ | ಪಮರಿಸ |
| ಸನಿಪಮರೀ | ರಿಸನಿಪಾ | ನಿಪಮರಿಸ |
| | ಮರಿಸನಿಪ | ಸನಿಪಮರಿಸ |

೭ ಲಯ ವಿದ್ವಾಂಸರಿಗೆ ಇಂಬುಕೊಡುವಂಥ ಜತಿಮಾದರಿ ಸ್ವರಜೋಡಣೆಗಳು ಇಲ್ಲಿವೆ.

| | | |
|---|---|---|
| ಪಪ | ಸಸಾ | ನಿಪಾ |
| ಗಣಿ | ತವಾ | ನರಾ |

| | | |
|---|---|---|
| ಪಾನಿ ಪಾನಿ ಪಮ | ಮಾಪಮಾಪಮಗ | ಗಾಮಗಾಮರಿಸ |
| ಇಂದ್ರ ನೀಲ ಮಣಿ | ಸನ್ನಿಭಾಪಘನ | ಚಂದ್ರಸೂರ್ಯನಯ |

| | | | |
|---|---|---|---|
| ನಿಸಾರಿಗಮ | ರಿಗಾಮಪನಿ | ಪಸಾಸನಿಪ | ಸಸಾಮಮರಿ |
| ಘೃಣಾಕರಶ | ರಣಾಗತಜ | ನಪಾಲನಸು | ಮನೋರಮಣ |

| | | | |
|---|---|---|---|
| ಪಪಾನಿ ಪಮನಿಪ | ಮಮಾಪ ಮಗಮರಿ | ಸರೀಸಮಗಪಮ | ನಿಪಾಮಗಮಪನಿ |
| ಪುರಾಣ ಪುರುಷನ್ನ | ವರಾ ತ್ಮ ಜಾ. ಶ್ರಿ ತ | ಪರಾಧೀ ನಖರ | ವಿರಾಧರಾ ವಣ |

ಈ ಚರಣ ಪೂರ್ಣವಾಗಿ ಚತುರಶ್ರದಲ್ಲೇ ನಡೆಯುವುದಲ್ಲದೆ ಎರಡನೇ ಸ್ವರ ದೀರ್ಘತ್ವ ಪಡೆದಿದೆ.

೮ ಕಡೆಯ ಮೂರು ಚರಣಗಳಲ್ಲಿ ತ್ಯಾಗರಾಜಾಂಕಿತವಿದೆ.

೯ ಪ್ರತಿ ಚರಣ ಹಾಡಿದ ನಂತರ ಪಲ್ಲವಿಯನ್ನೇ ಪುನರಾವರ್ತಿಸಲಾಗುತ್ತದೆ. ಎತ್ತುಗಡೆ ಪಲ್ಲವಿಯಾಗಲೀ, ಅನುಬಂಧದ ಭಾಗವಾಗಲೀ ಕೃತಿಯಲ್ಲಿಲ್ಲ.

೧೦ ಚರಣಗಳು ಷಡ್ಜ ಅಥವಾ ಪಂಚಮದಲ್ಲಿ ಆರಂಭವಾಗುತ್ತವೆ.

**ಭಾವಾರ್ಥ** : ಜಗತ್ತಿಗೇ ಆನಂದವನ್ನುಂಟುಮಾಡುವ ಸತ್ಕುಲಜಾತ ರಾಜರಾಜೇಶ್ವರನು ಪರಿಪೂರ್ಣನು, ಲಕ್ಷ್ಮೀಲೋಲನಾದ ಈತ ಪಾಪರಹಿತ ದೇವತೆಗಳ ಶತ್ರುಗಳನ್ನು ಹೊಡೆದೋಡಿಸುವವನು. ಗರುಡವಾಹನ (ಖಗತುರಂಗ), ವಾಗೀಂದ್ರಜನಕ (ಬ್ರಹ್ಮನ ತಂದೆ), ಕಳಾಧರಾಪ್ತ (ಚಂದ್ರಮೌಳಿಯ ಮಿತ್ರ) ಮುಂತಾದ ವಿಶೇಷಣಗಳಿವೆ.

ಪಾದವಿಜಿತ ಮೌನಿಶಾಪ (ಅಹಲ್ಯಾ ಶಾಪವಿಮೋಚನೆ), ಸವ ಪರಿಪಾಲ (ಯಜ್ಞ ರಕ್ಷಕ), ಸುರಸಾ ರಿಪು ಕರಾಬ್ಜ ಚರಣ (ಸುರಸಾ ಎಂಬ ರಾಕ್ಷಸಿಯ ಶತ್ರುವಾದ,

ಆಂಜನೇಯನ ಹೂವಿನಂತಹ ಕರಗಳಿಂದ ಸೇವಿಸಲ್ಪಟ್ಟ ಚರಣವುಳ್ಳ), ಅಸುರಗಣ ಮದಹರಣ, ಪುರಹರ (ತ್ರಿಪುರವನ್ನು ನಾಶಮಾಡಿದ), ವಾಸವ ರಿಪು ಜನಕಾಂತಕ (ಇಂದ್ರನ ಶತ್ರು ಮೇಘನಾದನ ತಂದೆ ರಾವಣನನ್ನು ಸಂಹರಿಸಿದವ), ಕವೀನ ಬಿಲಜಮೌನಿ ಕೃತಚರಿತ್ರ (ಕವಿಶ್ರೇಷ್ಠ ವಾಲ್ಮೀಕಿಯಿಂದ ಚರಿತ್ರೆ ಬರೆಸಿಕೊಂಡ), ಕಲಶನೀರನಿಧಿಜಾರಮಣ (ಕ್ಷೀರ ಸಮುದ್ರದಲ್ಲಿರುವ ಲಕ್ಷ್ಮೀರಮಣನೆ) ಎಂದು ಸಂಬೋಧಿಸುವ ಮೂಲಕ ಪೌರಾಣಿಕವಾದ ಕೆಲವು ಪ್ರಸಂಗಗಳನ್ನೂ ಸ್ಥೂಲವಾಗಿ ಸೂಚಿಸಲಾಗಿದೆ.

ತ್ಯಾಗರಾಜರು ಶ್ರೀರಾಮನನ್ನು ಒಮ್ಮೆ ವಾಗೀಂದ್ರಜನಕನೆಂದೂ ಮತ್ತೊಮ್ಮೆ ಸರೋಜಭವ . . . ರೂಪನೆಂದೂ ಹೇಳಿರುವಲ್ಲಿ, ಶ್ರೀರಾಮನು ಬ್ರಹ್ಮನ ತಂದೆಯೂ, ಪರಬ್ರಹ್ಮ ಸ್ವರೂಪನೂ ಹೌದು ಎಂಬ ಅರ್ಥ ಬರುತ್ತದೆ.

**ರಾಗ ವಿವರ** : ಪ್ರಾಚೀನವಾದ ನಾಟ ರಾಗವು ಸಾರಂಗದೇವನು ಹೆಸರಿಸುವ ಪೂರ್ವ ಪ್ರಸಿದ್ಧ ರಾಗಗಳಲ್ಲಿ ಕಾಣಬರುತ್ತದೆ. ಪ್ರಾಚೀನರೂ ಉಲ್ಲೇಖಿಸುವ ಈ ರಾಗಕ್ಕೆ ಷಟ್‌ಶ್ರುತಿ ರಿಷಭ ಮತ್ತು ಷಟ್‌ಶ್ರುತಿ ದೈವತಗಳೇ ಪ್ರಯೋಗದಲ್ಲಿದ್ದಿತೇ ಎಂಬುದು ಅನುಮಾನಾಸ್ಪದವಾಗಿದೆ.[೧೮] ಪರಿಣತರ ಅಭಿಪ್ರಾಯದಂತೆ ನಾಟರಾಗಕ್ಕೆ ಈ ಸ್ವರ ಗಳನ್ನು ಮೊದಲ ಬಾರಿಗೆ ಹೇಳಿದವ ರಾಮಾಮಾತ್ಯ (೧೫೫೦).[೧೯] ೭೨ ಮೇಳಗಳನ್ನು ಹೆಸರಿಸುವ ಸಂದರ್ಭದಲ್ಲಿ ೩೬ನೇ ಮೇಳ ನಾಟವೆಂದೇ ಹೇಳಲ್ಪಟ್ಟಿದೆ (ಕನಕಾಂಬರಿ ಪಟ್ಟಿ). ಆದರೆ ಕನಕಾಂಗಿ ಪಟ್ಟಿಯಲ್ಲಿ ೩೬ನೇ ಮೇಳ ಚಲನಾಟವಾಗಿದೆ. ನಾಟವು ಚಲನಾಟದಲ್ಲಿ ಜನ್ಯವಾದ ಸಂಪೂರ್ಣ-ಔಡವ ಉಪಾಂಗರಾಗ. ತಮಿಳು ಸಂಗೀತದ ತೇವಾರಗಳಲ್ಲಿ ಹಾಗೂ ತಾಳ್ಳಪಾಕಂ ಅಣ್ಣಮಾಚಾರ್ಯರ ರಚನೆಗಳಲ್ಲಿ ಈ ರಾಗ ಕಾಣ ಬರುತ್ತದೆ. ಅಪರೂಪವಾದ ಅಭಿಪ್ರಾಯವೊಂದರಂತೆ ನಾಟ ಧೀರಶಂಕರಾಭರಣ ದಲ್ಲಿ ಜನ್ಯ. ಇದರ ಆರೋಹಾವರೋಹಗಳು ಸಗಮಪನಿಸ, ಸನಿಪಮಗಸ. ಶ್ರೀ ಅರಿಯಾಕುಡಿ ರಾಮಾನುಜ ಅಯ್ಯಂಗಾರರು ಆಂಡಾಳ್‌ನ ಮೊದಲ ತಿರುಪ್ಪಾವೈ ಯನ್ನು ಸ್ವರಲಿಪಿಗೆ ಅಳವಡಿಸುವಾಗ ಈ ಸ್ವರಶ್ರೇಣಿಯನ್ನೇ ಪ್ರಯೋಗಿಸಿದ್ದಾರೆ. ಇದು ಗಂಭೀರನಾಟ ಎಂದು ಕರೆಯಲ್ಪಟ್ಟಿದೆ. ದೇವಸ್ಥಾನಗಳಲ್ಲಿ ನಾಗಸ್ವರ ವಿದ್ವಾಂಸರಿಂದ ಈ ರಾಗ ಬಹುಕಾಲ ಬಳಸಲ್ಪಡುತ್ತಿತ್ತು[೨೦] ಎಂಬ ಅಭಿಪ್ರಾಯವೊಂದುಂಟು.

ತ್ಯಾಗರಾಜರು ನಾಟರಾಗದಲ್ಲಿ ಹೆಚ್ಚು ಕೃತಿಗಳನ್ನು ರಚಿಸಿಲ್ಲದಿದ್ದರೂ, ಅವರ ಪಂಚರತ್ನವೊಂದೇ ರಾಗವ್ಯಾಪ್ತಿಯನ್ನು ವಿಶದಪಡಿಸುತ್ತದೆ. 'ಆದಿನಾಟ' ಎಂಬ ಉಕ್ತಿಗೆ ಅನುಗುಣವಾಗಿ ಈ ಗುಚ್ಛದ ಮೊದಲ ಕೃತಿ ನಾಟ ರಾಗದಲ್ಲೇ ಇದೆ.

ಪಂಚರತ್ನ ಕೃತಿಗುಚ್ಛದಲ್ಲಿ ಎರಡನೆಯದಾದ '**ದುಡುಕುಗಲ**' ಭಕ್ತಿಭಾವಕ್ಕೆ ವಿರುದ್ಧ ವಾದ ದುರ್ಗುಣಗಳನ್ನೂ ದುಷ್ಟಚೇಷ್ಟೆಗಳನ್ನೂ ಉಲ್ಲೇಖಿಸಿ, ಅವೆಲ್ಲವೂ ತಮ್ಮ ಲ್ಲಿರುವಂತೆ, ತಮಗೇ ಆರೋಪಿಸಿಕೊಂಡು ತ್ಯಾಗರಾಜರು ಪಶ್ಚಾತ್ತಾಪ ಪಟ್ಟಿದ್ದಾರೆ. ತ್ಯಾಗರಾಜರಿಲ್ಲಿ ಹೇಳುವ ಪರಧನಾಸಕ್ತಿ, ಸುಖಜೀವನಾಸಕ್ತಿ ಅಥವಾ ಸಂಗೀತದ

ಅಂಶಗಳನ್ನು ಅರಿಯದೆ ಶಿಲಾತ್ಮರಾಗಿದ್ದುದು ಅವರ ನಿಜಜೀವನದಲ್ಲಿನದಲ್ಲ. ಅವರು ಪರಧನಕ್ಕಾಗಿ ಎಂದೂ ಆಶಿಸಿದವರಲ್ಲ, ಪ್ರಾಪಂಚಿಕವಾದ ಸುಖಜೀವನ ಅವರದಾಗಿರಲಿಲ್ಲ. ಸಂಗೀತದಲ್ಲಾದರೋ ಅವರೊಂದು ದಿಗ್ಗಜವೇ ಸರಿ. ಹೀಗಾಗಿ ಅವರು ಈ ಕೃತಿಯಲ್ಲಿ ಆರೋಪಿಸಿಕೊಂಡಿರುವ ಅಪರಾಧಗಳು ಇತರರನ್ನು ಪರೋಕ್ಷವಾಗಿ ತಿದ್ದುವಲ್ಲಿ ಅಳವಡಿಸಿಕೊಂಡಿರುವ ಒಂದು ವಿಧಾನವಷ್ಟೆ.

**ಸಂಗೀತ ಮತ್ತು ಇತರ ವಿಶಿಷ್ಟಾಂಶಗಳು**

೧ ಈ ಕೃತಿಯಲ್ಲಿ ಪಲ್ಲವಿ, ಅನುಪಲ್ಲವಿ, ಒಂಬತ್ತು ಚರಣಗಳಲ್ಲದೆ ಸತುಲಕ್ಕೆ ಎಂಬ ಅನುಬಂಧದ ಭಾಗವೊಂದಿದೆ. ಅನುಬಂಧದಲ್ಲಿ ಮಾತ್ರ ತ್ಯಾಗರಾಜಾಂಕಿತವಿದೆ.

೨ ಅನುಬಂಧದಲ್ಲಿ (ಸ್ವರಸಾಹಿತ್ಯದಂತಲ್ಲದೆ) ಬರಿಯ ಸಾಹಿತ್ಯಭಾಗ ಮಾತ್ರ ಹಾಡಲಾಗುತ್ತದೆ. ಎತ್ತುಗಡೆ ಪಲ್ಲವಿ ಇಲ್ಲ. ಪ್ರತಿ ಚರಣದ ನಂತರ ಪಲ್ಲವಿಯನ್ನೇ ಪುನರಾವರ್ತಿಸಲಾಗುವುದು.

೩ ಚರಣಗಳು ಸ, ರಿ, ಪ ಅಥವಾ ನಿ ಗಳಿಂದ ಆರಂಭವಾಗಿವೆ.

೪ ಗೌಳದಂತಹ ರಾಗದಲ್ಲಿ ಇಷ್ಟು ದೀರ್ಘವಾದ ರಚನೆಯನ್ನು ಮತ್ತಾವ ವಾಗ್ಗೇಯಕಾರರೂ ರಚಿಸಿದಂತಿಲ್ಲ.

೫ ಅವರೋಹಣ ಸನಿಪಮರಿಗಮರೀಸ ಎಂಬಂತಿದ್ದರೂ ಈ ಕೃತಿಯಲ್ಲಿ ಪಮಗಮರಿಸ, ಪಾಮರೀಸ, ಪಮರಿಗಮರೀಸ ಇವೆಲ್ಲವು ಬಳಕೆಯಾಗಿವೆ. ಅದರಂತೆಯೇ ತಾರಸ್ಥಾಯಿಯಲ್ಲಿ ಸರಿಮರೀಸ ಪ್ರಯೋಗವಿದೆ. ಸರಿಗಾಮ ರಿರಿಸನಿ ಎಂಬಂತೆ ಅಪರೂಪವಾಗಿ ಗಾಂಧಾರದ ದೀರ್ಘ ಪ್ರಯೋಗವಿದೆ.

೬

ರಿಮಪನಿ ಪಾ॰॰ ಮಪಾನಿಸಾ

ವಾ ಜ್ಮ ನ ಸಾ ಗೋ ಚರ

;ರಿರಿರೀಸಾರೀ ಪಮಗಮ

ಕಡುದುರ್ವಿ಼ಷ ಯಾ

ಹೀಗೆ ರಾಗ ಸಂಚಾರ ಮಂದ್ರ ರಿಷಭದಿಂದ ತಾರಸ್ಥಾಯಿ ಪಂಚಮದ ವರೆಗೂ ವ್ಯಾಪಿಸಿದೆ.

೭ ಕಂಪಿತ ಗಮಕದೊಂದಿಗೇ ಪ್ರಯೋಗವಾಗುವ ಏಕಶ್ರುತಿ ರಿಷಭ ಅಥವಾ ಕೋಮಲ ಶುದ್ಧ ರಿಷಭವು ಚಿತ್ತ ಚಾಂಚಲ್ಯವನ್ನೂ ದುಡುಕನ್ನೂ ಪ್ರತಿಬಿಂಬಿಸುವಂತಿದೆ.

ಅ

ಪನಿಪ ಪನಿಪ ಮಪಮ ಮಪಮ ರಿಮಪ ರಿಮಪ

ಮೊದಟಿ ಕುಲಜು ಡಗುಟು ಭುವಿನಿ , ಕರಗ ಬಲಿಕಿ

(ಮೂರು ಅಕ್ಷರಗಳ ಜೋಡಣೆ)

ರಿರಿಪಪ ರಿರಿಮಮ ಸಸರಿರಿ ಪ‌ನಿಸರಿ

ತೆಲಿಯನಿ ನಟವಿಟ ಕ್ಷೂ ದ್ರುಲ ವನಿತಲು

(ನಾಲ್ಕು ಅಕ್ಷರಗಳ ಜೋಡಣೆ)

ರಿರೀಮ ರಿಮಸರಿ ಮರೀಸ ನಿಪನಿಸ

ದುರಾಸ ಲನುರೋ ಯಲೇಕ ಸತತಮ

ಮರೀರಿಸನಿ ರಿಸಾಸನಿಪ ಸನೀಪಮರಿ ನಿಪಾಮರಿಸ

ಲ್ಡರುಂಗಕನೆ ಶಿಲಾತ್ಮುಲೈ ಸುಭಕ್ತುಲಕು ಸಮಾನಮಗು

ಮುಕ್ತಾಯ ರೂಪದ ಜತಿ ಜೋಡಣೆಯಿದೆ.

ರಿಪ ರಿನಿ ಪಸ ಸಪ ಪರೀ

ಇಂತಹ ದಾಟು ಸ್ವರ ಪ್ರಯೋಗಗಳಿವೆ.

**ಭಾವಾರ್ಥ** : ದುರ್ವಿಷಯಗಳಿಂದ ಬಂಧಿತನಾದ ನನ್ನನ್ನು ಯಾವ ದೊರೆಮಗ (ರಾಜಕುಮಾರ) ತಾನೆ ಕಾಪಾಡುತ್ತಾನೆ ? ಸರ್ವಾಂತರ್ಯಾಮಿಯಾದ ರಾಮನನ್ನು ಅರಿಯದೆ ಕುತರ್ಕಗಳಲ್ಲಿ ತೊಡಗಿ, ಪರರ ಸ್ವತ್ತನ್ನು ಆಶಿಸಿ, ಕಪಟವಾದ ಉಪದೇಶದಿಂದ ಇತರರು ವಶರಾಗುವಂತೆ ಮಾಡಿ, ಮದಾಂಧರಾದ ಜನರಲ್ಲಿ ಯಾಚಿಸಿ, ಮನಸ್ಸನ್ನು ಶ್ರೀರಾಮನಲ್ಲಿ ನಿಲ್ಲಿಸಲಾಗದೆ, ದುರ್ಲಭವಾದ ಮಾನವಜನ್ಮವನ್ನು ನಿರಂತರವೂ ವ್ಯರ್ಥವಾಗಿ ಕಳೆದಿದ್ದೇನೆ. ರಾಮಪಾದ ಭಜನೆಯನ್ನು ಮರೆತಿದ್ದೇನೆ. ಸ್ವರಲಯಾದಿಗಳನ್ನು ಅರಿಯದೆ ಶಿಲಾತ್ಮನಾದ ನನ್ನನ್ನು ಯಾವ ದೊರೆಮಗನು ಸಂರಕ್ಷಿಸಲು ಸಾಧ್ಯ? ಎಂದು ಭಕ್ತಿಭಾವಕ್ಕೆ ವಿರುದ್ಧವಾದ ದುರ್ಗುಣಗಳನ್ನೂ ದುಡುಕು ಚೇಷ್ಟೆಗಳನ್ನೂ ಪ್ರಸ್ತುತಪಡಿಸಿ ಅವೆಲ್ಲವೂ ತಮ್ಮಲ್ಲಿಯೆ ಇರುವಂತೆ ತ್ಯಾಗರಾಜರು ಪಶ್ಚಾತ್ತಾಪ ತೋರುತ್ತಾರೆ.

ಇಲ್ಲಿ ಇತರ ದುಷ್ಕೃತ್ಯಗಳೊಂದಿಗೆ ಸ್ವರಲಯಾದಿಗಳನ್ನು ಅರಿಯದೆ ಶಿಲಾತ್ಮನಾಗಿರುವುದೂ ತಪ್ಪೆಂಬ ಸ್ಪಷ್ಟ ನಿಲುವಿದೆ. ಇಲ್ಲಿ ಸಂಗೀತಸಾಹಿತ್ಯಗಳನ್ನು ತಿಳಿಯದವ ಕೊಂಬುಬಾಲಗಳಿಲ್ಲದ ಸಾಕ್ಷಾತ್ ಪಶುವೆಂದು ಹೇಳಿರುವ ಪ್ರಾಚೀನ ಉಕ್ತಿಯೊಂದನ್ನು ಸ್ಮರಿಸಬಹುದು.[೨೧] ಉಕ್ತಿಯಲ್ಲಿ ಸಂಗೀತವರಿಯದವನನ್ನು ಪಶುವಿಗೆ ಹೋಲಿಸಿದರೆ

ತ್ಯಾಗರಾಜರು ಶಿಲೆಗೆ ಹೋಲಿಸುತ್ತಾರೆ.

**ರಾಗವಿವರ** : ವಿದ್ಯಾರಣ್ಯರ 'ಸಂಗೀತ ಸಾರ' ಗ್ರಂಥದಲ್ಲಿ ಉಲ್ಲೇಖಿಗೊಂಡ ಹದಿನೈದು ಮೇಳಗಳಲ್ಲಿ ಗೌಳ ರಾಗಕ್ಕೆ ಅಗ್ರಸ್ಥಾನ ನೀಡಲಾಗಿದೆ. ೭೨ ಮೇಳಗಳನ್ನು ಪ್ರಸ್ತರಿಸಿದ ವೆಂಕಟಮಖಿ ೧೫ನೇ ಮೇಳಕ್ಕೆ ನಿದರ್ಶನವಾಗಿ ಗೌಳ ರಾಗವನ್ನು ಹೆಸರಿಸಿದ್ದಾನೆ. ಅದೇ ಗ್ರಂಥದಲ್ಲೇ ರಾಗಾಧ್ಯಾಯದಲ್ಲಿ ಈ ರಾಗ ಷಾಡವರಾಗ ವಾಗಿಯೇ ವಿವರಿಸಲ್ಪಟ್ಟಿದೆ. ಚತುರ್ದಂಡಿಪ್ರಕಾಶಿಕೆಯಲ್ಲಿ ಮಾಳವಗೌಳವೆಂಬ ಹೆಸರೇ ಕಾಣಬರುವುದಿಲ್ಲ. ವೆಂಕಟಮಖಿ ರಿಷಭವನ್ನು ಗ್ರಹಾಂಶ ನ್ಯಾಸಸ್ವರವಾಗಿ ಗಣಿಸಿ ರಾಗಗಳನ್ನು ಹೆಸರಿಸುವಾಗ ಗೌಳವನ್ನು ಹೆಸರಿಸುತ್ತಾನೆ.[೨೨]

ಇಂದು ರೂಢಿಯಲ್ಲಿರುವಂತೆ ಗೌಳವು ೧೫ನೇ ಮಾಯಾಮಾಳವಗೌಳದಲ್ಲಿ ಜನ್ಯ ವಾದ ಔಡವ ವಕ್ರ ಉಪಾಂಗರಾಗ. ಘನರಾಗ ಪಂಚಕಗಳಲ್ಲಿ ಎರಡನೆಯ ರಾಗ. ಆರೋಹಾವರೋಹಗಳು : ಸರಿಮಪನಿಸ | ಸನಿಪಮರಿಗಮರೀಸ.

ಸಂಗ್ರಹ ಚೂಡಾಮಣಿಯಲ್ಲಿ ಸರಿಗಮ ರಿಮಪನಿಸ | ಸನಿಪಮಗಮರಿಸ ಎಂದು ಆರೋಹಾವರೋಹಗಳನ್ನು ಹೇಳಲಾಗಿದೆ.

ಈ ಕೃತಿಗುಚ್ಛದ ಮೂರನೆಯ ಕೃತಿ ಆರಭಿ ರಾಗದ **ಸಾಧಿಂಚೆನೆ**. ಈ ಕೃತಿಯಲ್ಲಿ ತ್ಯಾಗರಾಜರು ಭಗವಂತನ ಲೀಲೆಗಳನ್ನು ನಿಂದಾಸ್ತುತಿ ರೂಪದಲ್ಲಿ ಕೀರ್ತಿಸುತ್ತಾರೆ. ಭಗವಂತನು ಈ ಹಿಂದೆ ತಾನೇ ಹೇಳಿದ್ದ ಮಾತುಗಳನ್ನು ಸುಳ್ಳಾಗಿಸಿ ತಾನು ಹಿಡಿದ ಹಟವನ್ನೇ ಸಾಧಿಸಿದನೆಂದು ಹೇಳುತ್ತಾರೆ.

**ಸಂಗೀತ ಮತ್ತು ವಿಶಿಷ್ಟಾಂಶಗಳು**

೧ ಘನರಾಗ ಪಂಚರತ್ನ ಕೃತಿಗಳಲ್ಲಿ ಮೊದಲಿಗೆ ರಚಿತವಾದ ಕೃತಿ ಇದು.[೨೩]

೨ ಪಲ್ಲವಿ, ಅನುಪಲ್ಲವಿ ಮತ್ತು ಎತ್ತುಗಡೆ ಚರಣದೊಂದಿಗೆ ಮತ್ತೆ ಏಳು ಚರಣಗಳಿವೆ.* 'ಸದ್ಭಕ್ತುಲ ನಡತಲಿಟ್ಲನೇನೇ' ಎಂಬ ಅನುಬಂಧದ ಭಾಗವೂ ಇದೆ.

೩ ಪ್ರತಿ ಚರಣ ಹಾಡಿದ ನಂತರ ಎತ್ತುಗಡೆ ಪಲ್ಲವಿಯನ್ನು (ಸಮಾಯಾನಿಕಿ†) ಪುನರಾವರ್ತಿಸಲಾಗುತ್ತದೆ. ಅನುಬಂಧ 'ಸದ್ಭಕ್ತುಲ ನಡತಲಿಟ್ಲನೇನೇ' ಹಾಡಿದ ಕೂಡಲೇ ಪಲ್ಲವಿ ಭಾಗ ಹಾಡಲಾಗುತ್ತದೆ.

೪ ಈ ಕೃತಿ ಸಂಪೂರ್ಣವಾಗಿ ತಾನವರ್ಣದ ಮಾದರಿಯಲ್ಲೇ ಇದೆ. (ಎತ್ತುಗಡೆ

---

* ಚರಣಗಳ ವಿಭಾಗದಲ್ಲಿ ವ್ಯತ್ಯಾಸ ಕಂಡುಬರುತ್ತದೆ. ನೋಡಿ *The Spiritual Heritage of Tyagaraja*, C. Ramanujachari & V. Raghavan, ಪುಟ ೪೨೭ ಮತ್ತು ತ್ಯಾಗರಾಜ ಸ್ವಾಮಿ ಕೀರ್ತನಲು, ಕೆ. ವಿ. ಶ್ರೀನಿವಾಸ ಅಯ್ಯಂಗಾರ್, ಪುಟ ೧೯೩.

† 'ಸಮಯಾನಿಕಿ' ಎಂಬುದು ಗ್ರಾಮ್ಯಪಾಠ ಮತ್ತು 'ಸಮಯಾಲಕು' ಎಂಬ ಪ್ರಯೋಗವೇ ಸರಿ ಎಂಬುದು ಕೆ. ವಿ. ಶ್ರೀನಿವಾಸ ಅಯ್ಯಂಗಾರರ ಅಭಿಪ್ರಾಯ.

ಪಲ್ಲವಿ ಸಮಯಾನಿಕಿಯೊಂದಿಗೆ).

೫ ಸಾರಾಸಾರುಡು ಸನಕಸನಂದುಡು—ಈ ಚರಣವು ತ್ಯಾಗರಾಜರ ಒಂದು ಪಂಥದಲ್ಲಿ (ತಿಲ್ಲೈಸ್ಥಾನಂ) ಮಾತ್ರ ಕಾಣಬರುತ್ತದೆ. ಈ ಚರಣವನ್ನು ಇಂದು ಎಲ್ಲೆಡೆಯೂ ಹಾಡುವ ಪರಿಪಾಠವಿದ್ದಂತಿಲ್ಲ. ಕೆಲವೆಡೆ ಮಾತ್ರ ಪ್ರಯೋಗವಿದೆ.

೬ ಈ ಕೃತಿಯ 'ಸದ್ಭಕ್ತುಲನಡತ' ಭಾಗ ೧೮ನೇ ಶತಮಾನದ ತಾನವರ್ಣಗಳಲ್ಲಿ ಕಾಣಬರುತ್ತಿದ್ದ ಅನುಬಂಧ ಭಾಗವನ್ನೇ ಜ್ಞಾಪಕಕ್ಕೆ ತರುತ್ತದೆ.

೭ ಕೃತಿಯಲ್ಲಿ ಮಂದ್ರ ಪಂಚಮದಿಂದ ತಾರ ಮಧ್ಯಮದವರೆಗೆ ಸಂಚಾರ ವ್ಯಾಪಿಸಿದೆ.

ಧ̣ಧ̣ಪ̣ಾ ಮ̇ಗ̇ರ̇ೀ

ರೀ ಸೋ , ಸರಸೀ

೮ ಆರಭಿಯಲ್ಲಿ ನಿಷಾದ ಗಾಂಧಾರಗಳು ಅಲ್ಪ ಪ್ರಯೋಗ ಸ್ವರಗಳೆಂದಿದ್ದರೂ ದೀರ್ಘಗಾಂಧಾರವನ್ನಿಲ್ಲಿ ಕಾಣಬಹುದು. ಸರಿಮಗಾರಿ ಮತ್ತು ನಿಷಾದ ವರ್ಜ್ಯದ ಪ್ರಯೋಗಗಳು ಇವೆ. ತುರಗರಾಜ

ಸ̇ಸ̇ದಾ ಸ̇ದಾ

ಧಲದೀ , ಮಯಾ

೯ ರಾಗ ರಂಜಕವಾದ ಜಂಟಿ, ದಾಟು, ತ್ರಿವಳಿ ಸ್ವರ ಪ್ರಯೋಗಗಳಿವೆ.

ಪಾಪಾ ದ್ಧ̣ಾದಾ ಸಸಾ ರಿರೀ ರಿರಿಸಸ

ರಂಗೇ , ಸಂಗೀ ತಸಂ ಪ್ರದಾ , ಜನಕುಡು (ಜಂಟಿ)

ಸಪಾ ದರ̇ೀ̇ರಿ ದಾಸ̇ಪಾದ ಸದಾಪ

ಹರೇ, ಮುದಂಬು , ಮುದ್ದುಪೆಟ್ಟ , ಯಶೋದ (ದಾಟು)

ಸ̇ಸ̇ಾ̇ಸ ರಿರೀರಿ ಪ̇ಪಾಪ

ಹೃದಂಬು ,ಕುಲೇಶ , ಕಟೇಶ (ತ್ರಿವಳಿ)

೧೦ ಸಪಾ ರಿಪಾ ಸದಾ ಮುಂತಾದ ಪ್ರಯೋಗಗಳು ಸಂವಾದಿ ಜೋಡಣೆಯಲ್ಲಿವೆ. ಇವು ಎಕ್ಕು ಜಾರು ಪ್ರಯೋಗದೊಂದಿಗೆ ಬಳಕೆಯಾಗಬೇಕಾಗುತ್ತವೆ.

೧೧ ಪಾದದಪಪಾಪ ಮಗರಿರೀರಿ
ಶ್ರೀವೆಂಕಟೇಶ ಸು ಪ್ರಕಾಶ
ಧೀಂತಕಿಟತಾಂತ ಝುಣತಧೀಂತ

(ಜತಿ ಮಾದರಿಯ ಸ್ವರಸಾಹಿತ್ಯ ಜೋಡಣೆ)

**ಭಾವಾರ್ಥ** : ತಾನೇ ಬೋಧಿಸಿದ ವಚನಗಳನ್ನು ಸುಳ್ಳಾಗಿಸಿ ರಂಗೇಶನು ದೇವಕೀ ವಸುದೇವರನ್ನೂ ಇತರ ಭಕ್ತರನ್ನೂ ಸಂಕಟಕ್ಕೀಡುಮಾಡಿದ್ದಾನೆ. ಸಂಗೀತ ಸಂಪ್ರ ದಾಯಕನಾದ ಕೃಷ್ಣ, ಗೋಪಿಯರ ಮನೋರಥವನ್ನು ಈಡೇರಿಸದೆ ಗೇಲಿ ಮಾಡಿ ದ್ದಾನೆ. ಯಶೋದ ವಾತ್ಸಲ್ಯಭಾವದಿಂದ ಮುದ್ದಿಡುತ್ತಿದ್ದರೆ ಹರಿ ನಗುತ್ತಲಿದ್ದ. ಪರನಾರೀ ಸೋದರನೆಂಬ ಈತ, ಭಕ್ತರನ್ನು ರಕ್ಷಿಸದೆ ಅವರ ಬಳಿ ಬಾರದೆ, ಸಮ ಯೋಚಿತ ಮಾತುಗಳನ್ನಾಡಿದ್ದಾನೆ. ಸದ್ಗುಣನಿಧಿಯೂ, ಸುಂದರನೂ ಅನಂತಶಯ ನನೂ ಆದ ರಾಮ 'ಸದ್ಭಕ್ತರ ನಡತೆ ಹೀಗೆಯೇ' ಎನ್ನುತ್ತಾ ತ್ಯಾಗರಾಜರ ಪೂಜೆಯನ್ನು ಸ್ವೀಕರಿಸಿ ದುಷ್ಟಸಹವಾಸ ಮಾಡಬೇಡ, ಧೃತಿಗೆಡಬೇಡವೆಂದು ಬೋಧಿಸಿದನಾದರೂ ಸಮೀಪಕ್ಕೆ ಬರಲಿಲ್ಲ. ತನ್ನ ಹಟವನ್ನೇ ಸಾಧಿಸಿದ.

**ರಾಗವಿವರ** : ಈ ರಾಗವು ಪ್ರಪ್ರಥಮವಾಗಿ ತುಳಜನ ಸಂಗೀತಸಾರಾಮೃತದಲ್ಲಿ ಉಲ್ಲೇಖಗೊಂಡಿದೆ. ತ್ಯಾಗರಾಜರ ಕೃತಿಗಳಲ್ಲಿ ಚಿತ್ರಿತವಾಗಿರುವುದೇ ರಾಗದ ನಿಜ ರೂಪ. ತೇವಾರ, ಪಣ್‌ಗಳಲ್ಲೂ ಕಾಣಬರುವ ರಾಗವಿದು.[೨೪] ತ್ಯಾಗರಾಜರು ವಿಶಿಷ್ಟ ವಾಗಿ ತೋರಿರುವ ರಾಗಭಾವ ಸಂಚಾರಗಳನ್ನು ಮೇಲೆ ತಿಳಿಸಲಾಗಿದೆ. ಈ ರಾಗದಲ್ಲಿ ತ್ಯಾಗರಾಜರ ಹಲವು ರಚನೆಗಳಿವೆ.

ಈ ಗುಚ್ಛದ ನಾಲ್ಕನೆಯ ಕೃತಿ ವರಾಳಿ ರಾಗದ '**ಕನಕನರುಚಿರಾ**'. ಶ್ರೀರಾಮನ ಸೌಂದರ್ಯವನ್ನು ನೋಡಿದಷ್ಟೂ ಅದನ್ನು ಆಸ್ವಾದಿಸಬೇಕೆಂಬ ಹಂಬಲ ಅಧಿಕಗೊಳ್ಳು ತ್ತಿದೆ. ಭಕ್ತ ಸಂರಕ್ಷಕನಾದ ಶ್ರೀರಾಮನನ್ನು ಸೀತೆಯೂ ಓರೆಗಣ್ಣಿನಿಂದ ನೋಡುತ್ತಾಳೆ. ರಾಮನ ಸೌಂದರ್ಯ ಮತ್ತು ಭಕ್ತ ಸಂರಕ್ಷಣಾ ಕಾರ್ಯಗಳಿಗೆ ಸೀತೆ, ಪಾರ್ವತಿ, ಪರಮೇಶ್ವರ, ಇಂದ್ರ, ಆಂಜನೇಯ, ಶುಕ, ಶೌನಕರೆಲ್ಲರೂ ಸಾಕ್ಷಿಯಾಗಿದ್ದಾರೆ. 'ಪುಂಸಾಂ ಮೋಹನ ರೂಪಾಯ' ಎಂಬಂತೆ ರಾಮನ ದಿವ್ಯಸೌಂದರ್ಯ ಪುರುಷರನ್ನೂ ಸೆಳೆದಿದೆ. ಇಲ್ಲಿ ತ್ಯಾಗರಾಜರು ಬಳಸಿರುವ 'ರುಚಿ' ಶಬ್ದವು 'ಕಾಂತಿ' ಎಂಬ ಅರ್ಥವನ್ನು ನೀಡುತ್ತದೆ.

### ಸಂಗೀತ ಮತ್ತು ಇತರ ವಿಶಿಷ್ಟಾಂಶಗಳು

೧ ಪಲ್ಲವಿ, ಅನುಪಲ್ಲವಿ ಮತ್ತು ಎಂಟು ಚರಣಗಳಿದ್ದರೂ ಕಡೆಯ ಚರಣವು ಮಿಕ್ಕ ಚರಣಗಳಂತೆ ಸ್ವರಸಾಹಿತ್ಯವಾಗಿ ಪ್ರಯೋಗಗೊಳ್ಳುವುದಿಲ್ಲ. ಬರಿಯ ಸಾಹಿತ್ಯ ಮಾತ್ರ ಹಾಡಲ್ಪಡುತ್ತದೆ (ಸತತಮು ಪ್ರೇಮಪೂರಿತುಡಗು). ಈ ಭಾಗವನ್ನು 'ಸಮಷ್ಟಿ' ಎಂಬ ಶೀರ್ಷಿಕೆಯಡಿ ಹೇಳಿರುವ ಗ್ರಂಥಗಳೂ ಉಂಟು.[೨೫]

೨ ಈ ಕೃತಿಯೂ ಆದಿತಾಳದಲ್ಲೇ ರಚಿತವಾಗಿದ್ದರೂ ತಾಳ ಎರಡು ಕಳೆ ಯಲ್ಲಿದೆ. ವರಾಳಿ ರಾಗವು ವಿಳಂಬ ನಡೆಗೆ ಹೆಚ್ಚು ಸೂಕ್ತವಾದ್ದರಿಂದ ತಾಳದ ಅಳವಡಿಕೆ ಸಮಂಜಸವಾಗುತ್ತದೆ.

೩. ಮಂದ್ರ ದೈವತದಿಂದ ತಾರ ಮಧ್ಯಮದವರೆಗೆ ಕೃತಿಸಂಚಾರ ವ್ಯಾಪಿಸಿದೆ.

ಧಾನಿಸಾರಿಸಾನಿ ಸಾಗೆರಿ ಗಾಮಗಾರಿ

ವಾಡುಸಾಕ್ಷಿರಾಮ , ಮುಖ್ಯಿಲು ಸಾಕ್ಷಿಗಾದ

೪ ಪಾಮಾದಾ ದಾಮ್ಯಾ ರಿನಿದ ರಿನಿ ಸದ ಪದ

ಬಾಲಾರ್ಕಾ , ಮಾಲಾ , ಟಧರ , ವರ ಸದ ನುಡು

(ದಾಟು ಪ್ರಯೋಗ)

೫ ಸಾಪಾ ದ ನೀದಪಾದ ಸದ ಪದ

ಸಾ ಪ ತ್ನಿ , ನೀದುಪಾದ , ಸದ ನುಡು

(ಶುದ್ಧ ಮತ್ತು ಸೂಚಿತ ಸ್ವರಾಕ್ಷರಗಳು.)

೬ ಯತಿ ಜತಿಗಳ ಮಾದರಿ ಹೀಗಿದೆ.

ದಪಮಗಾ

ನಿದಪಮಗಾ

ಸನಿದಪದಮಪದ (ಸ್ರೋತೋವಹಯತಿ)

ಗಗಮಪಾದ ಪದನಿಸಾರಿ ಗಾಗಗರಿಸ

ಸುತುಡುನೀದು ಮಹಿಮದೆಲ್ಪ ಸೀತದೆಲಿಸಿ

ನಿಸರಿನಿಸಾ ಪದನಿದಪಾ

ಸುಖಕಲಶಾಂ ಬುಧಿವಾ ಸಾ

ನಿರಿಸರಿನೀ ದನಿಪದಮಾ ಪದಮಪಗಾ

ಪರಮದಯಾ ಕರಕರುಣಾ ರಸವರುಣಾ

ಮೊದಲಾದ ಜತಿ ಮಾದರಿ ಸ್ವರಸಾಹಿತ್ಯವಿದೆ.

**ಭಾವಾರ್ಥ** : ಹಾಲ್ಮೊಗದ ಅಪಾರಮಹಿಮನನ್ನು ನೋಡಿದಷ್ಟೂ ಭಕ್ತನ ಆನಂದ ವೃದ್ಧಿಯಾಗುತ್ತಿದೆ. ರತ್ನಾದಿ ಮಾಲೆಗಳಿಂದ ಅಲಂಕೃತವಾದ ಕತ್ತು, ಶ್ರೇಷ್ಠಕಪೋಲ, ಕಿರೀಟಗಳನ್ನು ನೋಡಿ ಕಣ್ಣುಗಳು ತೃಪ್ತಿಗೊಳ್ಳುತ್ತಿಲ್ಲ. ಧ್ರುವ, ಜಟಾಯು, ಪವಮಾನ ಸುತಾದಿಗಳನ್ನು ಅನುಗ್ರಹಿಸಿದ, ಕಲ್ಪವೃಕ್ಷಕ್ಕೆ ಸಮನಾದ ಪ್ರೇಮಪೂರಿತನಾದ ವರದನ ಸೌಂದರ್ಯವನ್ನು ಕಂಡಷ್ಟೂ ಆನಂದವು ಹೆಚ್ಚಾಗುತ್ತಲೇ ಇದೆ.

**ರಾಗವಿವರ** : ವರಾಳಿ, ವರಾಟಿ ಎಂದು ಕರೆಯಲ್ಪಟ್ಟಿರುವ ಈ ರಾಗ ಮಧ್ಯಯುಗದಿಂದ ರಚಿತವಾದ ಎಲ್ಲ ಗ್ರಂಥಗಳಲ್ಲೂ ಕಾಣಬರುತ್ತದೆ. ಝಾಲವರಾಳಿ, ಧಾಳಿ ವರಾಳಿ, ದೂಲಿವರಾಳಿ ಎಂದು ಕರೆಯಲ್ಪಡುವ ೩೯ನೇ ಮೇಳವಿದು. ಮೇಳವೆಂದೇ

ಪರಿಗಣಿಸಲ್ಪಟ್ಟಿದ್ದರೂ ಆರೋಹದಲ್ಲಿ ಸರಿಗಮ ಎಂಬಂತೆ ಕ್ರಮಸ್ವರಸಂಚಾರವಿಲ್ಲ. ಸಗರಿಗಮ ಎಂದೇ ಪ್ರಯೋಗವಾಗುತ್ತದೆ. ಮದರಾಸಿನ ಸಂಗೀತ ಅಕಾಡೆಮಿಯಲ್ಲಿ ವಿದ್ವಾಂಸರ ಗೋಷ್ಠಿಯಲ್ಲಿ ನಿರ್ಧಾರವಾದಂತೆ ಈ ರಾಗ ೩೯ನೇ ಮೇಳಕ್ಕೆ ಸಮನಾದುದು (ವರಾಳಿ ರಾಗವು ಝಾಲವರಾಳಿಯಲ್ಲಿ ಜನ್ಯವೆಂಬ ಅಭಿಪ್ರಾಯವಿದ್ದಿತು). ಶುದ್ಧಗಾಂಧಾರ ಪ್ರಯೋಗವೇ ಇದ್ದು ಸಂಪೂರ್ಣ ರಾಗವಾಗಿದೆ.[೨೬]

ಕನಕಾಂಬರಿ ಪದ್ಧತಿಯನ್ನೇ ಅನುಸರಿಸಿದರೆನ್ನಲಾದ ಮುತ್ತುಸ್ವಾಮಿ ದೀಕ್ಷಿತರು ಝಾಲವರಾಳಿ ಅಥವಾ ಧಾಲಿವರಾಳಿ ಎಂದು ಸಾಹಿತ್ಯದ ನಡುವೆ ರಾಗಾಂಕಿತವನ್ನು ಅಳವಡಿಸಿಲ್ಲ. ವರಾಳಿ ಎಂದಷ್ಟೇ ಅಳವಡಿಸಿದ್ದಾರೆ (ಮಧುರವಾಣಿ ವರಾಳಿವೇಣಿ, ಮುನಿವರಾಳಿ) ಎಂಬುದು ಗಮನಾರ್ಹ.

ವರಾಳಿ ರಾಗದಲ್ಲಿ ಗಾಂಧಾರ, ಮಧ್ಯಮಗಳು ವಿಶಿಷ್ಟವಾದವು. ಇವು ವರಾಳಿ ಗಾಂಧಾರ, ಮಧ್ಯಮಗಳೆಂದೇ ಹೇಳುವುದುಂಟು. ಲಕ್ಷಣರೀತ್ಯಾ ಗಾಂಧಾರವು ಶುದ್ಧ ಗಾಂಧಾರವಾದರೂ ಪ್ರಯೋಗ ಚತುಶ್ರುತಿ ರಿಷಭ ಮತ್ತು ಸಾಧಾರಣ ಗಾಂಧಾರಗಳ ನಡುವೆ ಕಂಪಿತ ಗಮಕದೊಂದಿಗೆ ಇರುತ್ತದೆ. ವೀಣೆಯ ಮೆಟ್ಟಿಲುಗಳಲ್ಲಿ ಈ ಗಾಂಧಾರ ಪ್ರಯೋಗಿಸುವಾಗ ಶುದ್ಧ ರಿಷಭದ ಸ್ಥಾನದಿಂದಲೇ ನುಡಿಸುವುದುಂಟು. ಷಡ್ಜ ಪಂಚಮಗಳನ್ನು ಬಿಟ್ಟು ಉಳಿದ ಸ್ವರಗಳು ಈ ರಾಗದಲ್ಲಿ ಕಂಪಿತ ಗಮಕದೊಂದಿಗೇ ಬಳಕೆಯಾಗುತ್ತವೆ. ಹೀಗಾಗಿ ರಿಷಭ, ದೈವತ ಅವುಗಳ ಕೆಳಗಿನ ಷಡ್ಜ ಪಂಚಮಗಳಿಗೂ, ಮಧ್ಯಮ ನಿಷಾದಗಳು ಅವುಗಳ ಮೇಲಿನ ಪಂಚಮ ಷಡ್ಜಗಳಿಗೂ ಅಂಟಿಕೊಂಡಂತೆಯೇ ನುಡಿಯುತ್ತವೆ. ಇಂತಹ ಛಾಯಾರಾಗಗಳನ್ನು ಗುರುಮುಖೇನ ಕಲಿಯುವುದು ಹೆಚ್ಚು ಸೂಕ್ತ.

ಘನರಾಗ ಪಂಚರತ್ನದ ಐದನೆಯ ಹಾಗೂ ಕಡೆಯ ಕೃತಿ, ಶ್ರೀರಾಗದ '**ಎಂದರೋ ಮಹಾನುಭಾವುಲು.**' ಮಹಾನುಭಾವರಿಗೆಲ್ಲ ಕೃತಿಕರ್ತೃ ಇಲ್ಲಿ ನಮಿಸಿದ್ದಾರೆ. ಮಹಾನುಭಾವರ ಗುಣಲಕ್ಷಣಗಳು, ಸಾಧನೆಗಳು ಇಲ್ಲಿ ಪ್ರಸ್ತುತಗೊಂಡಿದೆ. ಮೂರ್ಧನ್ಯರೂ, ಜಗತ್ತನ್ನು ತಮ್ಮ ಅಮೃತದೃಷ್ಟಿಯಿಂದ ರಕ್ಷಿಸುವವರೂ, ಶಾಶ್ವತರೂ, ಸದಾ ಸುಖಿಗಳೂ, ದುರ್ಮತಗಳು ಸುಳ್ಳೆಂದು ಸಮರ್ಥಿಸಿ ಹರಿಯ ಮನವರಿತು ಸತತವೂ ಹರಿಗುಣ ಭಜನೆಯಲ್ಲಿ ಆನಂದ ಹೊಂದಿದ ಮಹಾನುಭಾವರನ್ನು, ತ್ಯಾಗರಾಜರು ಗೌರವ ಪೂರ್ವಕವಾಗಿ ನಮಸ್ಕರಿಸಿದ್ದಾರೆ. ಇಂತಹ ಮೂರ್ಧನ್ಯರು ಚಿರಂಜೀವಿಗಳೆಂಬುದನ್ನು ಒತ್ತಿಹೇಳಲಾಗಿದೆ (ಘನುಲು ಶಾಶ್ವತುಲು, ಚಿರಾಯುವುಲ್‌ಗಲಿಗಿ). ರಾಮಾಯಣ, ಭಾಗವತ, ಗೀತ, ಶ್ರುತಿಶಾಸ್ತ್ರ ಪುರಾಣಗಳೊಟ್ಟಿಗೇ ಭಾವ, ರಾಗ, ಲಯ, ಸ್ವರಗಳನ್ನೂ ಮಾನ್ಯಮಾಡಲಾಗಿರುವುದಿಲ್ಲಿ ಗಮನಾರ್ಹ.

## ಸಂಗೀತ ಮತ್ತು ಇತರ ವಿಶಿಷ್ಟಾಂಶಗಳು

೧ ಆರಭಿ ಕೃತಿಯ ನಂತರ ರಚಿತವಾದ ಇದು ಎರಡನೆಯ ರಚನೆ.[೨೭]

೨ ಪಲ್ಲವಿ, ಅನುಪಲ್ಲವಿ, ಒಂಬತ್ತು ಚರಣಗಳೊಟ್ಟಿಗೆ 'ಪ್ರೇಮಮುಪ್ಪಿರಿಗೊನುವೇಳ' ಎಂಬ ಅನುಬಂಧವೊಂದಿದೆ. ಪ್ರತಿ ಚರಣದ ನಂತರ ಪಲ್ಲವಿಯ ಸಾಲನ್ನೇ ಪುನರಾವರ್ತಿಸಲಾಗುತ್ತದೆ. ಎತ್ತುಗಡೆ ಪಲ್ಲವಿಯಂಥ ಭಾಗ ಈ ಕೃತಿಯಲ್ಲಿಲ್ಲ.

೩ ಮಂದ್ರ ಮಧ್ಯಮದಿಂದ ತಾರಗಾಂಧಾರದವರೆಗೆ ರಾಗ ಸಂಚಾರ ವ್ಯಾಪಿಸಿದೆ.

ಮಪನಿಸ ರೀ ೀೀೀ ರಿ ರಿರೀಗರಿಸನಿಪ

ಮನಸಿಜ ಲಾ , ಸರೋಜಭವ

೪ ಕೃತಿಯ ಎಡುಪು ಒಂದು ಎಣಿಕೆಯಾದ ನಂತರವಿದೆ.

; ;ಸಾರೀ

ಎಂದ ರೋ ......

೫ ಸನಿಪಾ, ರಿಸರೀ, ಸಸಾ, ಪಪಾ, ರಿರೀ—ಸಂವಾದಿ ಸ್ವರಜೋಡಣೆಯಿದೆ.

೬ ಸಾಮಗಾನಲೋಲ ಎಂಬ ಮೊದಲ ಚರಣವು ಸಾಮಗಾನ ಶ್ರೇಣಿಯಂತೆಯೇ ಅವರೋಹರೂಪದಲ್ಲಿ ಆರಂಭವಾಗುತ್ತದೆ. ಸಾಮಶ್ರೇಣಿಯ ಸ್ವರಗಳೇ ಶ್ರೀರಾಗದಲ್ಲಿದ್ದು ಇಲ್ಲಿ ಸಾಹಿತ್ಯ ಸಾಮಗಾನಲೋಲ ಎಂದೇ ಅಳವಟ್ಟಿರುವುದು ಗಮನಾರ್ಹ.

೭ ಯತಿ ಮಾದರಿಗಳು ಹೀಗಿವೆ.

ಪಮಮಪ ರಿರಿಗರಿ ನಿಸರಿಗ ರಿರಿಸನಿ

ಹರಿಗುಣ ಮಣಿಮಯ ಸರಮುಲು ಗಳಮುನ

(ಸಮಯತಿ ಅಥವಾ ಪಿಪೀಲಿಕಯತಿ)

ರಿಮಪನೀ

ಪರಮಭಾ

ಮಪನಿ

ಗವತ

ರೀಮ

ಮೌನಿ (ಗೋಪುಚ್ಛಯತಿ)

ಮಪನಿ

ವಚನ

ರೀಮಪನಿ

ಸತ್ಯಮುನು

ಸರಿಮಪನೀ

ರಘುವರನೀ (ಸ್ರೋತೋವಹಯತಿ)

೮ ಜತಿ ಮತ್ತು ಮುಕ್ತಾಯ ಸ್ವರದ ಮಾದರಿಯ ಜೋಡಣೆ ಕೆಳಗಿನಂತಿದೆ.

ಗರೀ ರಿಸಾ ಸನೀ ನಿಪಮರಿಮಪನಿ ಸಾನಿಪಾಮರೀಗರಿಸನಿಸ

ನೆರಿಂ ಗಿಸಂ ತತಂ ಬುನನುಗುಣಭಜ ನಾನಂದ ಕೀರ್ತನಮುಸೇ

ಗರಿರಿಗರಿರೀರಿರೀ ಗರಿರಿಗರಿರೀರಿ ಸಸಾ ಪಪಾ ರಿರೀ

ಬುಲನೆರಿಗಿಭಾವರಾ ಗಲಯಾದಿಸೌಖ್ಯ ಮುಚೇ ಚಿರಾ ಯುವುಲ್

ಗರೀಸನಿಪ ಸನೀಪಮರಿ

ನಿಮಘ್ನುಲ್ಲೈ ಮುದಂಬುನನು

ಸಾಸಿಸಾ ಪಾಪಪಾ ರೀರಿರೀ

ಖಾತ್ಮುಲ್ಲೈ ತ್ಯಾಗರಾ ಜಾಪ್ತುಲ್ಲೈ

ಪಂಚಾಕ್ಷರ ಮೇಳೈಕೆ ಇಲ್ಲಿ ಕಾಣಬರುತ್ತದೆ. ಇವು ಸಂವಾದಿ ಸ್ವರಜೋಡಣೆಯೂ ಹೌದು.

೯ ಸಂಗೀತ ಮಾಧ್ಯಮದಿಂದ ಮಹಾನುಭಾವರಾಗಿ ಚಿರಸುಖ ಅನುಭವಿಸಬಹುದೆಂಬುದನ್ನು ದೃಢವಾಗಿ ಸಾರುತ್ತಾರೆ. ತ್ಯಾಗರಾಜರು ನಾದಯೋಗಿಯಾಗಿ ಸ್ವಾನುಭವದಿಂದ ನುಡಿದ ಮಾತಿದು.

೧೦ ಈ ಕೃತಿಗೆ ಸಂಬಂಧಿಸಿದಂತೆಯೇ ಗೋವಿಂದ ಮಾರಾರರ ಹೆಸರು ಚಿರಸ್ಥಾಯಿಯಾಗಿದೆ. ತ್ಯಾಗರಾಜರ ಮನೆಯಲ್ಲಿ ಪ್ರತಿ ಏಕಾದಶಿಯಂದು ಭಜನೆ ನಡೆಯುತ್ತಿದ್ದಿತು. ಒಮ್ಮೆ ಗೋವಿಂದ ಮಾರಾರ್ ಅಥವಾ ಗೋವಿಂದದಾಸ ಷಟ್ಕಾಲದಲ್ಲಿ ಹಾಡಿದ ಅಷ್ಟಪದಿಯೊಂದನ್ನು ಕೇಳಿ, ಅವರ ಪಾಂಡಿತ್ಯಕ್ಕೆ ಬೆರಗಾದ ತ್ಯಾಗರಾಜರು, ಆ ಮೊದಲೇ ರಚಿತವಾಗಿದ್ದ ತಮ್ಮ ಈ ಕೃತಿಯನ್ನು ಶಿಷ್ಯರೊಡಗೂಡಿ ಹಾಡಿದರಂತೆ. ಈ ಮೂಲಕ ಷಟ್ಕಾಲ ಗಾಯನದಲ್ಲಿ ಪ್ರವೀಣರಾಗಿದ್ದ ಗೋವಿಂದ ಮಾರಾರರನ್ನು ಗೌರವಪೂರ್ವಕವಾಗಿ ಅವರು ನಮಸ್ಕರಿಸಿದ್ದಾರೆ.

**ಭಾವಾರ್ಥ** : ಪರೋಕ್ಷವಾಗಿ ಮಹಾನುಭಾವರ ಲಕ್ಷಣಗಳನ್ನು ತಿಳಿಸಿ, ಅವರೆಲ್ಲರನ್ನೂ ಗೌರವಪೂರ್ವಕವಾಗಿ ನಮಸ್ಕರಿಸಲಾಗಿದೆ.[೨೮]

**ರಾಗವಿವರ** : ಶ್ರೀರಾಗವೆಂಬುದು ಪ್ರಾಚೀನವೇ. ಕನಕಾಂಬರಿ ಪದ್ಧತಿಯಲ್ಲಿ ಇದು ೨೨ನೆಯ ಮೇಳವಾಗಿದೆ. ಈ ಪದ್ಧತಿಯನ್ನು ಅನುಸರಿಸಿದರೆನ್ನಲಾದ ಮುತ್ತುಸ್ವಾಮಿ ದೀಕ್ಷಿತರು ಕನಕಾಂಗಿ ಪದ್ಧತಿಯಲ್ಲಿ ೨೨ನೆಯ ಮೇಳವಾದ ಖರಹರಪ್ರಿಯದಲ್ಲಿ ರಚನೆಗಳನ್ನು ಸೃಷ್ಟಿಸಿಲ್ಲವೆಂಬುದು ಗಮನಾರ್ಹ. ಆದರೆ ದೀಕ್ಷಿತರ 'ಶ್ರೀವರಲಕ್ಷ್ಮಿ' ಯಂತಹ ಕೃತಿಗಳು ವಿಶಿಷ್ಟ ಪ್ರಯೋಗದಿಂದ ಜನ್ಯರಾಗವಾಗಿಯೇ ಇಂದು ಪ್ರಯೋಗ ದಲ್ಲಿದೆ. ಪದನಿಪ ಪ್ರಯೋಗವನ್ನು ಇವರು ಬಳಸಿರುತ್ತಾರೆ. ಆದರೆ ತ್ಯಾಗರಾಜರ ಪ್ರಕಾರ ಈ ರಾಗವು ೨೨ನೇ ಖರಹರಪ್ರಿಯದಲ್ಲಿ ಜನ್ಯವಾದ ಔಡವ-ಷಾಡವ ವಕ್ರರಾಗವಾಗಿದೆ. ಸ ರಿ ಮ ಪ ನಿ ಸ, ಸ ನಿ ಪ ಮ ರಿ ಗ ರಿ ಸ ಎಂಬುದು ಈ ರಾಗದ ಆರೋಹಾವರೋಹಗಳು. ಖರಹರಪ್ರಿಯ ಮತ್ತು ಶ್ರೀರಾಗದ ವ್ಯತ್ಯಾಸವನ್ನು ಸ್ಪಷ್ಟವಾಗಿ ತೋರುವಂತೆ ತ್ಯಾಗರಾಜರು ಈ ಎರಡು ರಾಗಗಳಲ್ಲೂ ಕೃತಿ ರಚನೆ ಮಾಡಿರುವಲ್ಲಿ, ಇವರು ದೀಕ್ಷಿತರಿಗಿಂತ ಬೇರೆಯಾಗಿ ನಿಲ್ಲುತ್ತಾರೆ.

ಒಟ್ಟಾರೆ ಘನರಾಗ ಪಂಚರತ್ನ ಕೃತಿಗಳಲ್ಲಿ ೧. ಸಾಹಿತ್ಯವಸ್ತು ವೈವಿಧ್ಯಮಯ ವಾಗಿವೆ. ಎಂದರೆ ಬೇರೆಬೇರೆ ವಿಷಯಗಳನ್ನು ವಸ್ತುವಾಗಿ ಹೊಂದಿವೆ. ವಿವಿಧ ಸಂದರ್ಭಗಳಲ್ಲಿ ರಚಿತವಾದ ಈ ಕೃತಿಗಳನ್ನು ರಚನೆಯ ರೂಪ ವೈಶಿಷ್ಟ್ಯದ ಆಧಾರದ ಮೇಲೆ ಒಗ್ಗೂಡಿಸಿ ಘನರಾಗ ಪಂಚರತ್ನವಾಗಿ ಗುರುತಿಸಲಾಗಿದೆ. ೨. ತ್ಯಾಗರಾಜರೇ ಈ ಕೃತಿಗಳನ್ನು ಸೇರಿಸಿ ಒಟ್ಟಾರೆ 'ಪಂಚರತ್ನ'ಗಳೆಂದು ಕರೆಯಲಿಲ್ಲವೆಂಬುದು ಗಮನಾರ್ಹ. ನಂತರದ ಸಂಗೀತಜ್ಞರು ರಚನೆಗಳ ಏಕರೂಪತೆಯಿಂದಾಗಿ ಇವುಗಳಿಗೆ ಪಂಚರತ್ನಗಳೆಂದು ಹೇಳಲಾರಂಭಿಸಿದರು. ಅಂದು ವೈಣಿಕರು ತಾನಗಳನ್ನು ನುಡಿಸಲು ಬಳಸುತ್ತಿದ್ದ ಮುಖ್ಯವಾದ ಐದು ರಾಗಗಳು ಘನರಾಗಗಳೆಂದು ಕರೆಯಲ್ಪಡುತ್ತಿದ್ದವು. ಈ ಎರಡು ಅಂಶಗಳ ಆಧಾರದ ಮೇಲೆ ಘನರಾಗ ಪಂಚರತ್ನ ಕೃತಿಗಳೆಂದೇ ಇವು ಗುರುತಿಸಲ್ಪಟ್ಟು ಮಾನ್ಯವಾದವು. ಈ ಐದು ರಾಗಸಮೂಹವನ್ನು ಘನರಾಗಗಳೆನ್ನುವ ಬದಲು ತಾನರಾಗಗಳೆಂದೇ ಕರೆಯಲ್ಪಡಬಹುದೆಂಬ ಅಭಿಪ್ರಾಯವೊಂದುಂಟು.[೨೯] ಘನ, ತಾನ, ಮಧ್ಯಮ ಕಾಲ ಎಂಬೆಲ್ಲವೂ ಪರ್ಯಾಯ ಪದಗಳೆಂಬುದನ್ನು ನಾವಿಲ್ಲಿ ಸ್ಮರಿಸಬಹುದು.

೩. ಘನರಾಗ ಪಂಚರತ್ನ ಕೃತಿಗಳೆಲ್ಲವೂ ಆದಿತಾಳಕ್ಕೆ ಅಳವಟ್ಟಿದ್ದರೂ, ಅವುಗಳ ಎಡುಪಿನಲ್ಲಿ ವ್ಯತ್ಯಾಸ ಕಾಣಬರುತ್ತವೆ. ಮೊದಲ ಮೂರು ಕೃತಿಗಳು ಸಮ ಎಡುಪಿ ನಲ್ಲಿವೆ. ನಾಲ್ಕನೆಯ ಕೃತಿ ಎರಡು ಅಕ್ಷರಗಳನ್ನು ತಳ್ಳಿದಂತೆ ವಿಷಮ ಎಡುಪಿನಲ್ಲಿದ್ದು, ವಿಳಂಬ ಕೃತಿಯಾಗಿದೆ. ಐದನೆಯ ಕೃತಿ ತಾಳದ ಮೊದಲ ಒಂದು ಎಣಿಕೆಯನ್ನೇ ಬಿಟ್ಟು ಆರಂಭವಾಗುತ್ತದೆ.

೪. ಸಾಧಿಂಚೆನೆ ಹಾಗೂ ಜಗದಾನಂದಕಾರಕ ಕೃತಿಗಳಲ್ಲಿ ಒಂದಕ್ಕಿಂತ ಹೆಚ್ಚುಬಾರಿ ತ್ಯಾಗರಾಜಾಂಕಿತಗಳಿವೆ. ೫. ಸಾಧಿಂಚೆನೆ ಕೃತಿಯಲ್ಲಿ ಮಾತ್ರ ಎತ್ತುಗಡೆ ಸ್ವರಸಾಹಿತ್ಯ (ಸಮಯಾನಿಕಿ) ಕಾಣಬರುತ್ತದೆ. ಜಗದಾನಂದಕಾರಕ ಕೃತಿಯನ್ನುಳಿದು ಮಿಕ್ಕ ನಾಲ್ಕು

ರಚನೆಗಳಲ್ಲೂ ಕಟ್ಟಕಡೆಯ ಭಾಗಗಳನ್ನು ಸ್ವರಸಾಹಿತ್ಯವಾಗಿ ಹಾಡದೆ, ಬರಿಯ ಸಾಹಿತ್ಯವನ್ನು ಮಾತ್ರ ಹಾಡಲಾಗುತ್ತದೆ (ಸತುಲಕ್ಕೆ, ಸದ್ಭಕ್ತುಲನಡತ, ಸತತಮು ಪ್ರೇಮಪೂರಿತುಡಗು, ಪ್ರೇಮಮುಪ್ಪಿರಿ).

೬. ಈ ಕೃತಿಗಳಿಗೆ ಆಯ್ಕೆಯಾಗಿರುವ ರಾಗಗಳಲ್ಲಿ (ಚತುಶ್ರುತಿಧೈವತವನ್ನೇ ಶುದ್ಧ ನಿಷಾದವೆಂದು ಭಾವಿಸದಿರುವಾಗ) ಶುದ್ಧನಿಷಾದದ ವಿನಾ ಮಿಕ್ಕೆಲ್ಲ ಸ್ವರವಿಭೇದಗಳೂ ಪ್ರಯೋಗಗೊಳ್ಳುತ್ತವೆ. ಸ ಪ ಸ್ವರಗಳು ಎಲ್ಲ ಕೃತಿಗಳಲ್ಲೂ ಇದ್ದು ಉಳಿದ ಸ್ವರಗಳ ಬಳಕೆ ಹೀಗಿವೆ. ರಿ$_{೧}$ - ಗೌಳ, ರಿ$_{೨}$ - ಆರಭಿ ಮತ್ತು ಶ್ರೀ, ರಿ$_{೩}$ - ನಾಟ, ಗ$_{೧}$ - ವರಾಳಿ (ಲಕ್ಷಣರೀತ್ಯಾ), ಗ$_{೨}$ - ಶ್ರೀ, ಗ$_{೩}$ - ಆರಭಿ, ಮ$_{೧}$ - ಆರಭಿ, ನಾಟ, ಗೌಳ, ಶ್ರೀ, ಮ$_{೨}$ - ವರಾಳಿ, ದ$_{೧}$ - ವರಾಳಿ, ದ$_{೨}$ - ಆರಭಿ, ದ$_{೩}$ - ನಾಟಿ, ನಿ$_{೨}$ - ಶ್ರೀ, ನಿ$_{೩}$ - ವರಾಳಿ, ಆರಭಿ, ಗೌಳ.

ಪಂಚರತ್ನದ ಈ ಗುಚ್ಛದಲ್ಲಿ ಯತಿ, ಗಣ, ಪ್ರಾಸ ನಿಯಮಗಳು ಇಲ್ಲವೆಂಬುದು ಕೆಲವರ ಅಭಿಪ್ರಾಯ. ಚತುರ್ವೇದಗಳಲ್ಲಿ ಒಂದಾದ ಯಜುರ್ವೇದವೇ ಗದ್ಯರೂಪದಲ್ಲಿರುವುದನ್ನು ನಾವಿಲ್ಲಿ ಸ್ಮರಿಸಬಹುದು. ಅಲ್ಲದೆ ತ್ಯಾಗರಾಜರು ಗದ್ಯ ಮತ್ತು ಪದ್ಯ ಸಾಹಿತ್ಯಗಳೆರಡನ್ನೂ ಬಳಸಿದ್ದಾರೆಂಬುದಿಲ್ಲಿ ಗಮನಾರ್ಹ.

ನೂರಾರು ಸಂಖ್ಯೆಯಲ್ಲಿ ಕೃತಿರಚನೆ ಮಾಡಿರುವ ತ್ಯಾಗರಾಜರ ಎಲ್ಲ ರಚನೆಗಳಿಗಿಂತ ವಿಭಿನ್ನವಾದ ಘನರಾಗ ಪಂಚರತ್ನಕೃತಿಗಳು ಅವರಿಗೊಂದು ವಿಶಿಷ್ಟ ಸ್ಥಾನ ನೀಡಿ ಅವರ ಸಂಗೀತ ಸಾಹಿತ್ಯಗಳ ಪ್ರೌಢಿಮೆಯನ್ನು ಮೆರೆದಿವೆ. ಅಧಿಕ ಸಂಖ್ಯೆಯಲ್ಲಿ ಇತರ ಕೃತಿಗಳನ್ನು ಅವರು ರಚಿಸಿರದಿದ್ದರೂ, ಈ ಪಂಚರತ್ನ ಕೃತಿಗಳಷ್ಟೇ ಅವರಿಗೆ ವಿಶೇಷಸ್ಥಾನ ನೀಡುತ್ತಿತ್ತು ಎಂಬಷ್ಟು ಪ್ರೌಢರಚನೆಗಳಾಗಿವೆ, ಇವು. ತ್ಯಾಗರಾಜರ ಹೆಸರನ್ನೇ ತಿಳಿಯದವರೂ ಕೂಡ ಅವರ ಈ ಪಂಚರತ್ನ ಕೃತಿಗಳ ಕೇಳ್ಮೆಯಿಂದ ಆಕರ್ಷಿತರಾಗುವರೆಂಬುದರಲ್ಲಿ ಸಂದೇಹವಿಲ್ಲ.

## ೭. ತುಲಸೀ ಕೃತಿಗುಚ್ಛ

ತ್ಯಾಗರಾಜರು ತುಲಸೀದೇವಿಯನ್ನು ನಾಲ್ಕು ಕೃತಿಗಳಲ್ಲಿ ಸ್ತುತಿಸುತ್ತಾರೆ. ಇವು ಒಟ್ಟುಗೂಡಿ ತುಲಸೀಕೃತಿಗುಚ್ಛಗಳೆನ್ನಬಹುದು.

೧. ದೇವೀ ಶ್ರೀ ತುಲಸಮ್ಮ - ಮಾಯಾಮಾಳವಗೌಳ - ಆದಿ
೨. ತುಲಸೀ ಜಗಜ್ಜನನಿ - ಸಾವೇರಿ - ಆದಿ
೩. ತುಲಸಮ್ಮ ಮಾಯಿಂಟನೆಲಕೊನವಮ್ಮ - ದೇವಗಾಂಧಾರಿ* - ಆದಿ

---

* ಈ ಕೃತಿಗೆ ಆರಭಿರಾಗ, ರೂಪಕತಾಳವನ್ನು ಹೇಳಲಾಗಿದೆ. ನೋಡಿ ತ್ಯಾಗರಾಜಕೀರ್ತನಲು, ಭಾಗ ೧, ಎನ್. ಸಿ. ಪಾರ್ಥಸಾರಥಿ ಮತ್ತು ದ್ವಾರಕಾ ಪಾರ್ಥಸಾರಥಿ, ಬಾಲಸರಸ್ವತಿ ಬುಕ್ ಡಿಪೋ, ಕರ್ನೂಲು, ಮದರಾಸು, ೧೯೮೦, ಪುಟ ೧೪೯.

೪. ಅಮ್ಮ ರಾವಮ್ಮ ತುಲಸಮ್ಮ - ಕಲ್ಯಾಣಿ - ಖಂಡಛಾಪು

ಇವಲ್ಲದೆ ಪರಮಾತ್ಮನ ಪಾದಗಳಿಗೆ ತುಲಸಿಯಿಂದ ಪೂಜಿಸುತ್ತೇನೆಂದು ಧನ್ಯತೆಯಿಂದ ತ್ಯಾಗರಾಜರು 'ತುಲಸೀದಳಮುಲಚೇ ಸಂತೋಷಮುಗಾ ಪೂಜಿಂತು' ಎಂದೂ, ಅವರು ಮಾಡಿದ ತುಲಸೀ ಪೂಜೆಯನ್ನು ಸ್ವೀಕರಿಸಬೇಕೆಂದೂ 'ತುಲಸೀಬಿಲ್ವ ಮಲ್ಲಿಕಾದಿ ಜಲಜಮುಲ ಗೈಕೊನವೇ' ಎಂದು ಪ್ರಾರ್ಥಿಸುವಲ್ಲಿಯೂ ತುಲಸಿಯನ್ನು ಸ್ಮರಿಸಿದ್ದಾರೆ.

ತ್ಯಾಗರಾಜರು ತುಲಸೀಮಾತೆಯನ್ನು ಹೀಗೆ ಸ್ತುತಿಸಿದ್ದಾರೆ. ಈಕೆಯ ಪಾದಗಳನ್ನೇ ಅವರು ಸತತವಾಗಿ ನಂಬಿದ್ದಾರೆ. ಇಹಪರಗಳೆರಡನ್ನೂ ನೀಡುವ ತುಲಸಿಯನ್ನು ವಿಷ್ಣುವು ಕನಸಿನಲ್ಲೂ ಅಗಲಿರಲಾರದೆ ತನ್ನ ಶಿರದಮೇಲೆ ಇಟ್ಟುಕೊಂಡಿದ್ದಾನೆ (ಅಮ್ಮರಾವಮ್ಮ). ಅದ್ವಿತೀಯಳಾದ ತುಲಸಿಯನ್ನು ತ್ಯಾಗರಾಜರು ವಿಧವಿಧವಾಗಿ ಸಿಂಗರಿಸಿ ಪೂಜಿಸಲಿಚ್ಛಿಸುತ್ತಾರೆ. ಅಸಮಾನಳಾದ ದೇವಿಯು ತ್ಯಾಗರಾಜರ ಮನೆಯಲ್ಲಿ ನೆಲೆಗೊಳ್ಳುವಂತೆ ಅವರು ಪ್ರಾರ್ಥಿಸುತ್ತಾರೆ (ತುಳಸಮ್ಮ ಮಾಯಿಂಟ). ಜಗಜ್ಜನನಿಯೂ, ದುರಿತಾಪಹಾರಿಣಿಯೂ ಆದ ತುಲಸಿಯ ಚರಣಯುಗಗಳು ನದೀದೇವತೆಗಳಿಗೆ ಪರಮ ವೈಕುಂಠವಂತೆ. ಆಕೆಯ ಶರೀರದ ಮಧ್ಯಭಾಗವು ಸಕಲ ದೇವತೆಗಳ ನೆಲೆಯಂತೆ. ತುಲಸಿಯ ಶಿರದಲ್ಲಿ ನಿಗಮಕೋಟಿಗಳು ಬೆಳಗುತ್ತಿವೆಯಂತೆ ಎಂದರೆ ವೇದವೇದಾಂಗಗಳ ಸಾಕಾರವೇ ಆಕೆಯ ಶಿರ (ತುಲಸೀ ಜಗಜ್ಜನನೀ).

ತುಲಸಿಯ ಶ್ರೇಷ್ಠತೆಯನ್ನು ತ್ಯಾಗರಾಜರು ಪೌರಾಣಿಕ ಹಿನ್ನೆಲೆಯೊಳಗೊಂಡಂತೆ ಹೀಗೆ ವಿವರಿಸುತ್ತಾರೆ. ಬ್ರಹ್ಮೇಂದ್ರಾದಿಗಳು ತಮ್ಮ ಪೂಜೆಯಲ್ಲಿ ತುಲಸಿಯನ್ನು ಉಪಯೋಗಿಸುವುದರಿಂದಲೇ ಶ್ರೇಷ್ಠರಾದರು. ಈಕೆಯಿಲ್ಲದೆ ಶಂಕರ, ವಿಷ್ಣು ಮತ್ತು ಇತರ ದೇವತೆಗಳು ಏನನ್ನೂ ಸ್ವೀಕರಿಸುವುದಿಲ್ಲ. ತುಲಸಿಯಿಲ್ಲದೆ ನೀರು ತೀರ್ಥವೆನಿಸದೆ ನೀರೇ* ಆಗುತ್ತದೆ. ಈಕೆಯಿಲ್ಲದೆ ಶ್ರೀಹರಿಯು ಕುಳಿತಿದ್ದ ತಕ್ಕಡಿಯೂ (ತಕ್ಕಡಿಯ ತಟ್ಟೆಗಳು) ಸಮನಾಗಲಿಲ್ಲ. ತುಲಸಿಯಿಲ್ಲದೆ ಶ್ರೀರಾಮನು ವನಮಾಲಿ ಎನಿಸುತ್ತಿರಲಿಲ್ಲ.

ನೀವುಲೇಕ ಶಂಕರು ಮಾರಮಣುಡು ನೀರಜಾದುಲ ನೊಲ್ಲರಟ
ನೀವುಲೇಕ ತೀರ್ಥಮು ಸೇವಿಂಚುಟ ನೀರನುಚುನು ಪೇರಾಯೆನಟ
ನೀವುಲೇಕ ತ್ರಾಸುನ ಶ್ರೀಹರಿ ಸರಿನಿಲ್ವಕ ಪೋಯೆನಟ
ನೀವುಲೇಕ ವನಮಾಲಿಯನಿ ಪಲಿಕಿರಾ

(ದೇವಿ ಶ್ರೀತುಳಸಮ್ಮ - ಮಾಯಾಮಾಳವಗೌಳ - ಆದಿತಾಳ)

'ನೀವುಲೇಕ ತ್ರಾಸುನ ಶ್ರೀಹರಿ ಸರಿನಿಲ್ವಕ ಪೋಯೆನಟ' ಎಂಬ ಸಾಲಿನಲ್ಲಿ ಶ್ರೀಕೃಷ್ಣ ತುಲಾಭಾರದ ಕಥೆ ಹಿನ್ನೆಲೆಯಿದೆ. ಶ್ರೀಕೃಷ್ಣತುಲಾಭಾರದಲ್ಲಿ ಅಸೂಯಾಪರಳಾದ

* 'ನೀರು' ಎಂಬುದಕ್ಕೆ 'ಸಾರಾಯಿ' ಎಂಬ ಒಂದು ಅರ್ಥವೂ ಉಂಟು.

ಸತ್ಯಾಭಾಮೆಯು ತಕ್ಕಡಿಯ ಒಂದು ತಟ್ಟೆಗೆ ಮುತ್ತುರತ್ನಬಂಗಾರಾದಿ ಅಮೂಲ್ಯ ವಸ್ತುಗಳನ್ನು ಹಾಕಿದರೂ ಅದು ಶ್ರೀಕೃಷ್ಣನ ತೂಕಕ್ಕೆ ಸಮನಾಗಲಿಲ್ಲ. ಅದೇ ನಿಜ ಭಕ್ತೆಯಾದ ರುಕ್ಮಿಣಿ ಕಾಂತಭಕ್ತಿಯಿಂದ ತುಲಸೀದಳವೊಂದನ್ನು ತ್ರಾಸಿನಲ್ಲಿ ಹಾಕಿದ ಕೂಡಲೇ ತಕ್ಕಡಿಯ ತಟ್ಟೆಗಳೆರಡೂ ಸಮನಾಯಿತೆಂಬುದು ಪುರಾಣ ಕಥೆ. ಇಲ್ಲಿ ರುಕ್ಮಿಣಿಯ ಪ್ರೀತಿಯ ಮಹತ್ವವಿದ್ದರೂ, ಅದನ್ನು ಅವಳು ಅಭಿವ್ಯಕ್ತಿಸಿದ ರೀತಿ ಮುಖ್ಯವಾದುದು. **ತುಲಸಿ**ಯನ್ನು ರುಕ್ಮಿಣಿ ಪ್ರೀತಿಪೂರ್ವಕವಾಗಿ ಹಾಕಿದಳೆಂಬುದಿಲ್ಲಿ ಗಮನಾರ್ಹ.

ಶಿವನಿಗೆ ಬಿಲ್ವಾರ್ಚನೆ ಪ್ರೀತಿಯಾದರೆ ವಿಷ್ಣುವಿಗೆ ತುಲಸೀ ಅರ್ಚನೆ ಪ್ರೀತಿ ಎಂಬುದು ನಂಬುಗೆ. ಆದರೆ ತ್ಯಾಗರಾಜರಿಲ್ಲಿ ಶಿವನಿಗೂ ತುಲಸೀ ಅರ್ಚನೆ ಪ್ರಿಯ ವೆಂಬುದನ್ನು ವಿಶೇಷವಾಗಿ ನುಡಿಯುತ್ತಾರೆ (ನೀವು ಲೇಕ ಶಂಕರು . . . .)

ತ್ಯಾಗರಾಜರು ತಮ್ಮ ದೈನಂದಿನ ಪೂಜೆಯಲ್ಲಿ ತುಲಸಿಯನ್ನು ತಪ್ಪದೆ ಬಳಸು ತ್ತಿದ್ದುದಾಗಿ ತಿಳಿದುಬರುತ್ತದೆ. ವೆಂಕಟರಮಣ ಭಾಗವತರು ದಿನಂಪ್ರತಿ ಅರ್ಚನೆಗಾಗಿ ತುಲಸಿಯನ್ನು ಒದಗಿಸುತ್ತಿದ್ದಂತೆಯೂ, ಇವರ ಭಕ್ತಿಯನ್ನು ಮೆಚ್ಚಿ ತ್ಯಾಗರಾಜರು ಇವರಿಗೆ ಪಾಠ ಹೇಳಲಾರಂಭಿಸಿದಂತೆಯೂ ಒಂದು ಪ್ರತೀತಿಯುಂಟು. ಈ ತುಲಸೀ ಕೈಂಕರ್ಯವನ್ನು ಮುಂದೆ ವೆಂಕಟರಮಣ ಭಾಗವತರ ಮಗ ಕೃಷ್ಣಸ್ವಾಮಿ ಭಾಗವತರು ಮುಂದುವರೆಸಿದಂತೆಯೂ, ಈ ಭಾವವು ತುಲಸೀದಳಮುಲಚೇ ಕೃತಿಯಲ್ಲಿ ಪ್ರತಿ ಧ್ವನಿತವಾಗಿದೆಯೆನ್ನುತ್ತಾರೆ.[೩೦]

ಪೌರಾಣಿಕವಾಗಿ ತುಲನೆ ಇಲ್ಲದವಳಾದ್ದರಿಂದ ಈಕೆ ತುಲಸಿ ಎನಿಸಿದ್ದಾಳೆ. ದೂರ್ವಾಸನ ಶಾಪದಿಂದ ಪದಭ್ರಷ್ಟನಾದ ಇಂದ್ರ, ಹಾಲ್ಗಡಲನ್ನು ಕಡೆದಾಗ ಅಮೃತ ಕಲಶ ಮೂಡಿಬರುತ್ತದೆ. ವಿಷ್ಣು ಅದನ್ನು ಕೈಗೆತ್ತಿಕೊಂಡು ಸುರಿಸಿದ ಆನಂದಬಾಷ್ಪಗಳು ಆ ಕಲಶದಲ್ಲಿ ಬೀಳಲಾಗಿ ಸಣ್ಣಗಿಡವೊಂದು ಅಲ್ಲಿ ಹುಟ್ಟಿತು. ಅದಕ್ಕೆ ತುಲಸಿಯೆಂದು ವಿಷ್ಣುವೇ ಹೆಸರಿಟ್ಟು, ಲಕ್ಷ್ಮಿಯೊಂದಿಗೆ ಆಕೆಯನ್ನು ವಿವಾಹವಾದಂತೆ ತಿಳಿದುಬರು ತ್ತದೆ. ಆದರೆ ದೇವೀಭಾಗವತದ ಪ್ರಕಾರ ಈಕೆಯ ಪತಿ ಶಂಖಚೂಡನು, ದೇವತೆ ಗಳೊಡನೆ ಯುದ್ಧ ಮಾಡಿ ಹತನಾದ ಸುದ್ದಿ ಕೇಳಿ ತುಲಸಿ ತಾನೂ ಗಿಡವಾಗುತ್ತಾಳೆ.[೩೧]

**ಸಂಗೀತ ಮತ್ತು ಇತರ ವಿಶಿಷ್ಟಾಂಶಗಳು**

೧ ಸಾವೇರಿಕೃತಿ ತುಲಸೀ ಜಗಜ್ಜನನೀಯಲ್ಲಿ ಪಲ್ಲವಿ ಷಡ್ಜದಿಂದಲೂ, ಅನು ಪಲ್ಲವಿ ಚರಣಗಳು ಪಂಚಮದಿಂದಲೂ ಆರಂಭವಾಗುತ್ತವೆ.

೨ ಕಲ್ಯಾಣಿಯ ಅಮ್ಮರಾವಮ್ಮದ ಪಲ್ಲವಿ, ಅನುಪಲ್ಲವಿಗಳು ತಾರ ಶಡ್ಜದಿಂ ದಲೂ ಚರಣಪಂಚಮದಿಂದಲೂ ಆರಂಭವಾಗುತ್ತವೆ. ಈ ಎರಡು ರಚನೆ ಗಳಲ್ಲೂ ಷಡ್ಜ ಪಂಚಮಗಳ ಸಂವಾದಭಾವ ಹೀಗೆ ಎದ್ದುಕಾಣುತ್ತದೆ.

೩ ತುಲಸಮ್ಮನನ್ನು ಪ್ರೀತಿಯಿಂದ ದೇವರು ತಲೆಯ ಮೇಲಿಟ್ಟುಕೊಂಡುದರ

ಉಲ್ಲೇಖವಿದೆ.

೪ ತುಲಸಮ್ಮ ಮಾಯಿಂಟ ನೆಲಕೊನವಮ್ಮ - ಕೃತಿಯ ಧಾತುಭಾಗವನ್ನು 'ತದನ್ನ' ಎಂಬ ಅಕ್ಷರಗಳೊಂದಿಗೆ ಹಾಡಿದರಷ್ಟೇ ಸಾಕು. ದೇವಗಾಂಧಾರಿ ರಾಗದ ಅದ್ಭುತ ಛಾಯೆ ಮೂಡುತ್ತದೆ.

## ೮. ಕಂಚಿಕ್ಷೇತ್ರ ಕೃತಿಗಳು

ತ್ಯಾಗರಾಜರು ಉಪನಿಷತ್‌ಬ್ರಹ್ಮರ ಆಹ್ವಾನದ ಮೇರೆಗೆ ಕಂಚಿಗೆ ಭೇಟಿ ಇತ್ತಿದ್ದರು. ಅಲ್ಲಿನ ವಿಷ್ಣು ಕಂಚಿಯಲ್ಲಿರುವ ವಿಷ್ಣುದೇವಾಲಯಗಳಲ್ಲಿ ಅತಿ ಪ್ರಸಿದ್ಧವಾಗಿದ್ದ ವರದರಾಜಸ್ವಾಮಿಯನ್ನೂ, ಕಂಚಿ ಕಾಮಾಕ್ಷಿದೇವಿಯನ್ನೂ ಕೆಳಗಿನ ಕೃತಿಗಳಲ್ಲಿ ಸ್ತುತಿಸಿದಂತೆ ಹೇಳುವುದುಂಟು.

೧ ವರದಾ ನವನೀತಾಶ ಪಾಹಿ - ರಾಗಪಂಜರ - ತ್ರಿಪುಟ

ಈ ರಚನೆ ಕಂಚಿಕ್ಷೇತ್ರದಲ್ಲಿ ಹಾಡಿದರೆಂಬ ಪ್ರತೀತಿಯಿದ್ದರೂ ಕೃತಿಯ ಸಾಹಿತ್ಯದಲ್ಲಿ ಅದಕ್ಕೆ ಆಧಾರವೇನೂ ಕಾಣಬರದು. ಸಾಹಿತ್ಯವು ವಿಶೇಷಣಗಳನ್ನೇ ಹೊಂದಿದೆಯಷ್ಟೆ. ಆದರೆ 'ವರದಾ' ಎಂಬ ಪ್ರಯೋಗವೇನೋ ಆರಂಭದಲ್ಲೇ ಕಾಣಬರುತ್ತದೆ.

೨ ವರದರಾಜ ನಿನ್ನು ಕೋರಿತಿ - ಸ್ವರಭೂಷಣಿ - ರೂಪಕ

೩ ವಿನಾಯಕುನಿವಲೆನುಬ್ರೋವವೇ - ಮಧ್ಯಮಾವತಿ - ಆದಿ

ತ್ಯಾಗರಾಜರ ಪ್ರಕಾರ ಕಂಚಿವರದನು ಶ್ರೇಷ್ಠವಾದ ಗಿರಿವೈಕುಂಠದಲ್ಲಿರುವವನು. ಸುರಮುನಿಗಳು ಹಾಗೂ ಭೂಸುರರಿಂದ ಮತ್ತೆಮತ್ತೆ ನಮಿಸಲ್ಪಡುವ ಈತ ತಾರೆಗಳ ನಡುವೆ ರಾರಾಜಿಸುವ ಚಂದ್ರನಂತಿದ್ದಾನೆ. ಸರ್ಪಭಕ್ಷಕನಾದ ಗರುಡನನ್ನೇ ವಾಹನವಾಗಿ ಉಳ್ಳ ವರದರಾಜನು ಕರಗಳಲ್ಲಿ ಬಾಣಗಳನ್ನು ಧರಿಸಿರುವುದೊಂದು ವಿಶೇಷ (ವರದಾ ನವನೀತಾಶ). ದಾಸಜನಾಗ್ರೇಸರನಾದ ವರದನು ಅವರನ್ನು ರಕ್ಷಿಸಬೇಕಾಗಿದೆ. ವರದರಾಜನ ಗರುಡಸೇವೆಯನ್ನು ನೋಡುವ ಉದ್ದೇಶ ತ್ಯಾಗರಾಜರಿಗಿದೆ.

ಕಂಚಿಯ ವರದರಾಜಸ್ವಾಮಿಗೆ ನಡೆಯುವ ಗರುಡೋತ್ಸವವು ಪ್ರಸಿದ್ಧವಾದ, ಪ್ರಧಾನವಾದ ಒಂದು ಉತ್ಸವವೇ ಹೌದು.

ಇನ್ನು, ಕಂಚಿ ಕಾಮಾಕ್ಷಿಗಿಂತ ಇತರ ದೇವತೆಗಳಿಲ್ಲ. ಅನಾಥರಕ್ಷಕಿಯಾದ ಆಕೆ ಸುಜನರ ಪಾಪಗಳನ್ನು ಹೋಗಲಾಡಿಸುವವಳು. ಪರಾಶಕ್ತಿಯಾದ ದೇವಿಯು ಶಂಕರಿಯೂ, ರಾಮನ ಸಹೋದರಿಯೂ ಆಗಿದ್ದಾಳೆ. ಕಾಮಾಕ್ಷಿಯು ಜನಹಿತಳಾಗುವ ನಿಜಮಾರ್ಗವೇನೆಂದು ಅರಿಯಲು ಬ್ರಹ್ಮನು ಉತ್ಸುಕನಾದುದರಿಂದಾಗಿ ದೇವಿಯು ಸಾತ್ವಿಕ ರೂಪದಲ್ಲಿ, ಕಂಚಿಕಾಮಾಕ್ಷಿಯಾಗಿ ಅವತರಿಸಿದ್ದಾಳೆ. ಈಕೆಯ ವೈಶಿಷ್ಟ್ಯವೆಂದರೆ ನರಾಧಮರನ್ನೂ ಅನುಗ್ರಹಿಸುವುದು.

**ಸಂಗೀತ ಮತ್ತು ಇತರ ವಿಶಿಷ್ಟಾಂಶಗಳು**

೧. ವರದರಾಜ ಸ್ತುತಿಗಳು ಅಪರೂಪವಾದ ರಾಗಗಳಲ್ಲಿ ಅಳವಟ್ಟಿವೆ (ರಾಗ

ಪಂಜರ ಮತ್ತು ಸ್ವರಭೂಷಣಿ).

೨. ಕಾಮಾಕ್ಷೀ ಸ್ತುತಿಯು ಪ್ರಾಚೀನವಾದ ರಾಗದಲ್ಲಿ ಸರಳಧಾತುವಿಗೆ ಅಳವಟ್ಟಿದೆ. ತ್ಯಾಗರಾಜರು ಪದ್ಯರೂಪದ ಗದ್ಯವನ್ನು ತಮ್ಮ ರಚನೆಗಳಲ್ಲಿ ಪ್ರಯೋಗಿಸಿದರೆಂಬುದಕ್ಕೆ ಉದಾಹರಣೆಯಾಗಿ ಹೇಳಬಹುದಾದ ಕೃತಿ ಇದು. ಸಾಹಿತ್ಯಾಕ್ಷರಗಳು ಅಧಿಕವಾಗಿಯೇ ಇದ್ದು ಹೆಚ್ಚು ಸಂಗತಿಗಳಿಲ್ಲ.

೩. ಈ ಕೃತಿಯ ಪಲ್ಲವಿ, ಅನುಪಲ್ಲವಿ ಮತ್ತು ಚರಣಗಳು ರಾಗದ ಜೀವಸ್ವರಗಳಿಂದಲೇ ಆರಂಭವಾಗಿವೆ.

**ಕ್ಷೇತ್ರವಿವರ** : ಮದರಾಸಿನಿಂದ ನಲವತ್ತೈದು ಮೈಲಿ ದೂರವಿರುವ ಕಂಚಿಗೆ ಕಚ್ಚಿ, ಕಚ್ಚಿಪ್ಪೇಡು, ಕಾಂಚೀವರಂ ಎಂಬ ಹೆಸರುಗಳೂ ಇವೆ. ಪವಿತ್ರ ಕ್ಷೇತ್ರಗಳೆಂದು ಪ್ರಸಿದ್ಧವಾದ ಸಪ್ತಕ್ಷೇತ್ರಗಳಲ್ಲಿ ಕಂಚಿಯೂ ಒಂದು. ಇನ್ನುಳಿದ ಆರು ಕ್ಷೇತ್ರಗಳೆಂದರೆ ಅಯೋಧ್ಯಾ, ಮಧುರಾ, ಹರಿದ್ವಾರ, ಕಾಶಿ, ಉಜ್ಜಯಿನಿ ಮತ್ತು ದ್ವಾರಕಾ. ಕಂಚಿಯು ಶೈವ-ವೈಷ್ಣವ ಕ್ಷೇತ್ರವೆಂದೇ ಪ್ರಸಿದ್ಧಿ. ಶಿವಕಂಚಿ ಅಥವಾ ಹಿರಿಯಕಂಚಿ, ವಿಷ್ಣುಕಂಚಿ ಅಥವಾ ಕಿರಿಯಕಂಚಿ ಎಂದು ಕಂಚಿಯು ಎರಡು ಭಾಗಗಳಾಗಿವೆ. ಶಿವಕಂಚಿಯಲ್ಲಿ ಹಲವು ಶಿವದೇವಾಲಯಗಳೂ, ವಿಷ್ಣುಕಂಚಿಯಲ್ಲಿ ಹಲವು ವಿಷ್ಣು ದೇವಾಲಯಗಳೂ ಇವೆ. ಕಾಶಿ ಮತ್ತು ಕಂಚಿ ಕ್ಷೇತ್ರಗಳು ಶಿವನ ಎರಡು ಕಣ್ಣುಗಳೆಂದು ಬ್ರಹ್ಮಾಂಡ ಪುರಾಣ ಹೇಳುತ್ತದೆ. ಪಟ್ಟಣಗಳಲ್ಲೆಲ್ಲಾ ಕಂಚಿ ಅತ್ಯುತ್ತಮವಾದುದೆಂದು ವಾಮನ ಪುರಾಣ ಹೇಳುತ್ತದೆ.[೩೨] ಹೀಗೆಯೇ ತ್ಯಾಗರಾಜರೂ ಈ ಕ್ಷೇತ್ರವನ್ನು ವರ್ಣಿಸಲಸದಳವಾದ ಶ್ರೇಷ್ಠ ಗಿರಿವೈಕುಂಠವಿದು ಎನ್ನುತ್ತಾರೆ.

**ವರಗಿರಿ ವೈಕುಂಠಮಟ ವರ್ಣಿಂಪ ದರಮುಗಾದಟ**

(ವರದರಾಜ ನಿನ್ನು)

ತ್ಯಾಗರಾಜರು ವಿಷ್ಣುಕಂಚಿ ಸ್ತುತಿಯನ್ನು ಮಾತ್ರ ಹಾಡಿದಂತೆ ತೋರುತ್ತದೆ. ಆದರೆ ಇತರ ಕ್ಷೇತ್ರಗಳಲ್ಲಿ ಶಿವಸ್ತುತಿ ಹಾಡಿರುವುದನ್ನು ಗಮನಿಸಬಹುದು.

### ೯. ನಾಗಪಟ್ಟಣಕ್ಷೇತ್ರ ಕೃತಿಗಳು

ತ್ಯಾಗರಾಜರು ತಮ್ಮ ಕ್ಷೇತ್ರಯಾತ್ರೆಯ ಅವಧಿಯಲ್ಲಿ ನಾಗಪಟ್ಟಣದ 'ನೀಲಾಯತಾಕ್ಷಿ' ದೇವಿಯನ್ನೂ ದರ್ಶಿಸಿದ್ದಾರೆ. ಆಕೆಯ ಸನ್ನಿಧಾನಕ್ಕೆ ಅವರು ಆಸೆದುಂಬಿಯೇ ಬಂದಿದ್ದಾರೆ.

**ನೀ ಸನ್ನಿಧಿಚೇರಿ, ನಿಂಡಾಸತೋ ವಚ್ಚಿ. . . . .**

(ಕರ್ಮಮೇ)

ಆಕೆಯನ್ನು ನಾಗಪುರದಲ್ಲಿ ದರ್ಶಿಸಿದ್ದುದು ಕೆಳಗಿನ ಅವರ ಮಾತಿನಿಂದ ವೇದ್ಯವಾಗುತ್ತದೆ.

**ನಾಗಪುರಮುನ ಕನುಗೊಂಟಿ . . . ನೀಲಾಯತಾಕ್ಷಿ**

(ಎವರುತೆಲಿಯಗ)

ನಾಗಪಟ್ಟಣ ಕ್ಷೇತ್ರ ಕೃತಿಗಳು ಒಟ್ಟು **ಎರಡು** ಮಾತ್ರ. ಅವೆಂದರೆ,

ಎವರುತೆಲಿಯಗ ಬೊಯ್ಯೇರು - ತೋಡಿ - ರೂಪಕ - ತೆಲುಗು ಭಾಷೆ

ಕರ್ಮಮೇ ಬಲವಂತಮಾಯಾ - ಸಾವೇರಿ - ಛಾಪು - ತೆಲುಗು ಭಾಷೆ

ತ್ಯಾಗರಾಜರು ಪ್ರಸ್ತುತಪಡಿಸುವಂತೆ, ನೀಲಾಯತಾಕ್ಷಿಯ ಮಹಿಮೆಯನ್ನು ಅರಿಯಲು ಯಾರಿಂದಲೂ ಸಾಧ್ಯವಿಲ್ಲ. ಈಕೆ ಮಾತೃವಾತ್ಸಲ್ಯದಿಂದ ಕೂಡಿದವಳು. ನಾಗಭೂಷಣನ ರಾಣಿಯಾಗಿ, ಭಕ್ತರಪಾಲಿನ ನಿಧಿಯಾಗಿದ್ದಾಳೆ. ಅತಿಸುಂದರಳೂ, ಕಲಾನಿಧಿಯೂ ಆದ ಈಕೆ ತಲೆಯ ತುಂಬಾ ಪಾರಿಜಾತ ಪುಷ್ಪವನ್ನು ಮುಡಿದಿದ್ದಾಳೆ (ನಿರ್ಜರ ತರುವಿನ ಹೂವು). ಕೈಲಿ ಗಿಳಿ ಹಿಡಿದಿದ್ದಾಳೆ. ಶಿವತಾಂಡವ ನೃತ್ಯಕ್ಕೆ ಪ್ರೇರಕಿಯಾದ ದೇವಿ ಕನಕಾಂಬರಭೂಷಿತೆಯೂ ಆಗಿ ಪರಶಿವನನ್ನು ಸಂತೋಷಗೊಳಿಸಿದ್ದಾಳೆ. ತ್ಯಾಗರಾಜರ ನುಡಿಗೆ ಒದಗಿ ಬಂದು ನಲಿದ ಈಕೆ ಸಮುದ್ರನ ಗರ್ವವನ್ನೂ ಅಡಗಿಸಿದ್ದಾಳೆ.

**ಸಂಗೀತ ಮತ್ತು ಇತರ ವಿಶಿಷ್ಟಾಂಶಗಳು**

೧ ಕ್ಷೇತ್ರಾಂಕಿತ ಮತ್ತು ಕ್ಷೇತ್ರದೇವತಾ ಅಂಕಿತಗಳು ರಚನೆಗಳಲ್ಲಿ ಕಾಣಬರುತ್ತವೆ.

ಅ. ತಲ್ಲಿ **ಕಾಯಾರೋಹಣ** ಜಾಯಾ

ಆ. ನಿರ್ಮಲಮಗು **ನಾಗಪುರಮು**ನ ನೆಲಕೊನ್ನ **ನೀಲಾಯತಾಕ್ಷಿ**

ಇ. **ನಾಗಪುರಮು**ನ ಕನುಗೊಂಟಿ ............ **ನೀಲಾಯತಾಕ್ಷಿ**

೨ ನಾಗಪಟ್ಟಣದಲ್ಲಿ ನೀಲಾಯತಾಕ್ಷಿಶಕ್ತಿಗೇ ವಿಶೇಷ ಪ್ರಾಧಾನ್ಯವಿದ್ದಿರಬಹುದು. ಅಥವಾ ತ್ಯಾಗರಾಜರು ಅಮ್ಮನವರ ದೇವಸ್ಥಾನಕ್ಕೆ ಮಾತ್ರ ಭೇಟಿ ನೀಡಿದ್ದಿರಬಹುದು. ಅಂತೆಯೇ ಕಾಯಾರೋಹಣೇಶ್ವರನನ್ನು ನೇರವಾಗಿ ಕೀರ್ತಿಸುವಂತೆ ತ್ಯಾಗರಾಜರ ರಚನೆಯಿಲ್ಲದಿದ್ದರೂ ನೀಲಾಯತಾಕ್ಷಿಯನ್ನು ಕುರಿತ ಅವರ ಈ ಎರಡು ಕೃತಿಗಳಲ್ಲಿ ಕಾಯಾರೋಹಣೇಶ್ವರನ ಉಲ್ಲೇಖವೂ ಕಾಣುತ್ತದೆ.

**ಕ್ಷೇತ್ರವಿವರ** : ನಾಗಪಟ್ಟಣ ತಂಜಾವೂರು ಮಂಡಲಕ್ಕೆ ಸೇರಿದುದು. ಇಲ್ಲಿನ ಮುಖ್ಯ ದೇವದೇವಿಯರು ಶಿವಪಾರ್ವತಿಯರು. ಇಲ್ಲಿನ ಶಿವಪಾರ್ವತಿಯರನ್ನು ಕಾಯಾರೋಹಣಸ್ವಾಮಿ ಮತ್ತು ನೀಲಾಯತಾಕ್ಷಿ ಎನ್ನುತ್ತಾರೆ. ನೀಲಾಯತಾಕ್ಷಿ ವಾರಿಧಿಗರ್ವವನ್ನು ಅಡಗಿಸಿದಳೆಂದು ಕ್ಷೇತ್ರಕಥೆಯಿದೆ. ಸಮುದ್ರದಲ್ಲಿ ಒಮ್ಮೆ ಉಬ್ಬರವುಂಟಾಗಿ ದೇವಿಯ ದೇವಸ್ಥಾನವೂ ನೀರಿನಲ್ಲಿ ಮುಳುಗಿ ಹೋಗುವಂಥ ಸನ್ನಿವೇಶ ಒದಗಿತಂತೆ. ಆಗ ದೇವಿ ತನ್ನ ಶಕ್ತಿಯಿಂದ ಸಮುದ್ರದ ಈ ಉಬ್ಬರವನ್ನು ಅದರ ಎಲ್ಲೆಯೊಳಗೇ

ಅಡಗಿಸಿದಳಂತೆ.[೩೩] ಈ ಅಂಶವನ್ನು ತ್ಯಾಗರಾಜರು ಬಲು ಚಮತ್ಕಾರಿಕವಾಗಿ ಹೇಳುವಾಗ 'ಭೂಮಿಗೆ ಬರಲೆಣಿಸಿದ ಸಮುದ್ರನು ನಿನ್ನನ್ನು ಕಂಡು ತಲೆತಗ್ಗಿಸುವಂತೆ ಮಾಡಿದ ಧೀರಳಾದ ದೇವಿ' ಎನ್ನುತ್ತಾರೆ.

**ವಾರಿಧಿ ಮದಿ ಗರ್ವಿಂಚಿ ಈ ವಸುಧಕು ತಾ ರಾನೆಂಚಿ ನಿನ್ನು**
**ಸಾರೆಕು ಗನಿ ತಲವಂಚಿಯುಂಡು ಧೀರತನಮು ಕಲ್ಗು ನಿನು ಪೊಡಗಾಂಚಿನಾ ॥**

**(ಕರ್ಮಮೇ)**

## ೧೦. ಷೋಲಿಂಘರ್‌ಕ್ಷೇತ್ರ ಕೃತಿಗಳು

ತ್ಯಾಗರಾಜಾಂಕಿತ ನೃಸಿಂಹಸ್ತುತಿಗಳು ಎರಡು ಮಾತ್ರ ಉಪಲಬ್ಧವಾಗಿವೆ. ಅವು,

೧ ಶ್ರೀನಾರಸಿಂಹ ಮಾಂ ಪಾಹಿ - ಫಲಮಂಜರಿ - ದೇಶಾದಿ - ಸಂಸ್ಕೃತ ಭಾಷೆ

೨ ನರಸಿಂಹಾ ನನ್ನುಬ್ರೋವವೇ - ಬಿಲಹರಿ - ತ್ರಿಪುಟ - ತೆಲುಗು ಭಾಷೆ

ಈ ಕೃತಿಗಳನ್ನು ತ್ಯಾಗರಾಜರು ಷೋಲಿಂಘರ್ ಕ್ಷೇತ್ರಕ್ಕೆ ಭೇಟಿ ಇತ್ತಾಗ ರಚಿಸಿದರೆನ್ನುವುದುಂಟು. ಆದರೆ ಕೃತಿಗಳ ಸಾಹಿತ್ಯದಲ್ಲಿ ಇದಕ್ಕೆ ಸಂಬಂಧಿಸಿದಂತಹ ಮಾಹಿತಿಯೇನೂ ಲಭ್ಯವಾಗುವುದಿಲ್ಲ.

ತ್ಯಾಗರಾಜರು ನರಸಿಂಹನಲ್ಲಿ ಹೀಗೆ ಪ್ರಾರ್ಥಿಸುತ್ತಾರೆ. 'ಪ್ರಹ್ಲಾದ ಪರಾಶರ ನಾರದ ಹೃತ್ಕಮಲ ಬಂಧುವಾದ ನಾರಸಿಂಹನೇ, ಶರಣೆಂದ ಪ್ರಹ್ಲಾದನನ್ನು ಸಂರಕ್ಷಿಸಿದಂತೆಯೇ ನನ್ನನ್ನೂ ರಕ್ಷಿಸು.' ತ್ಯಾಗರಾಜರಿಗೆ ನಾರಸಿಂಹನ ಜಪ, ಸ್ಮರಣೆ, ಪದಪೂಜೆ ಹಾಗೂ ಆತನ ಭಕ್ತರ ಸಂಗದ ಅಗತ್ಯವಿದೆ. ಇವುಗಳನ್ನು ಪ್ರೀತಿಯಿಂದ ಆತನೇ ದಯಪಾಲಿಸಬೇಕೆಂಬುದು ಅವರ ಬಿನ್ನಹ.

**ಶ್ರೀ ನಾರಸಿಂಹ ಮಾಂ ಪಾಹಿ ಕ್ಷೀರಾಬ್ಧಿ ಕನ್ಯಕಾರಮಣ**
**ದೀನಾರ್ತಿ ನಿವಾರಣ ಭವ್ಯಗುಣ**
**ದಿತಿ ತನಯ ತಿಮಿರ ಸೂರ್ಯ ತ್ರಿನೇತ್ರ**
**ಪ್ರಹ್ಲಾದ ಪರಾಶರ ನಾರದ ಹೃತ್**
**ಪಂಕೇರುಹ ನೀರಜ ಬಂಧೋ !**
**ಆಹ್ಲಾದಕರಾಶುಭರೋಗ ಸಂಹಾರ**
**ವರದ ತ್ಯಾಗರಾಜಾದಿ ವಿನುತ**

(ಫಲಮಂಜರಿ ರಾಗ)

**ನರಸಿಂಹಾ ನನುಬ್ರೋವವೇ ಶ್ರೀಲಕ್ಷ್ಮೀ**
**ಕೋರಮಾಲಿನ ನರುಲ ಕೊನಿಯಾಡನು ನೇನು**
**ಪರಮಪಾವನ ನಾಪಾಲಿ ಶ್ರೀಲಕ್ಷ್ಮೀ**
**ನೀದು ಭಕ್ತಾಗ್ರೇಸರುಡು ಪ್ರಹ್ಲಾದುಡಪುಡೊಕ ಕನಕಕಶಿಪು**
**ವಾದುಕೋರ್ವಕ ನಿನ್ನು ಶರಣನಿಯಾದುಕೋಮನ ಕಾಚಿನಾವು**

**ಎಂದುಕನಿ ಸ್ಥೈರಿಂತು ನೀಮನಸಂದು ತೆಲಿಯಲೇನಿದಿಯೇದಿ? ಲೋಕುಲ**
**ನಿಂದಕೋರ್ವಕ ನಿನ್ನು ಕೋರಿನಂದುಕೆಂತನಿ ಕರುಣಜೂತುವೋ**
**ನೀ ಜಪಮು ನೀಸ್ಮರಣ ನೀ ಪದಪೂಜ ನೀವಾರಿ ಚೆಲಿಮಿಯೊಸಗಿ**
**ರಾಜಿಗಾ ದಯಚೇಯು ತ್ಯಾಗರಾಜಸನ್ನುತ !. . . . .**

**(ಬಿಲಹರಿರಾಗ)**

ನೃಸಿಂಹನಲ್ಲಿ ಲಕ್ಷ್ಮೀನರಸಿಂಹ, ಅಘೋರ ನರಸಿಂಹ, ಉಗ್ರನರಸಿಂಹ, ಜ್ವಾಲಾ ನರಸಿಂಹ, ಯೋಗಾನರಸಿಂಹ, ಭೋಗಾನರಸಿಂಹ ಮುಂತಾದ ಕೆಲವು ಪ್ರಭೇದಗಳು ಹೇಳಲ್ಪಟ್ಟಿವೆ. ನರಸಿಂಹನದು ಕ್ರೂರ ರೂಪವೇ ಆದರೂ ತ್ಯಾಗರಾಜರು ಕ್ರೌರ್ಯವನ್ನು ಪ್ರಸ್ತಾಪಿಸದೆ ಪ್ರಹ್ಲಾದ ರಕ್ಷಕನೂ ದೀನಾರ್ತಿ ನಿವಾರಕನೂ ಆದ ಲಕ್ಷ್ಮೀನರಸಿಂಹನನ್ನು ಚಿತ್ರಿಸುತ್ತಾರೆ. ನರಸಿಂಹನ ಸ್ವಭಾವ ಸೌಮ್ಯವೆಂದೂ, ಕ್ರೌರ್ಯ ವಿಶೇಷವೆಂದೂ ಬಗೆದು ಪೂಜೆಯಲ್ಲಿ ಸೌಮ್ಯರೂಪವನ್ನೇ ಬಳಸಬೇಕೆಂಬ ವಿಧಿನಿಯಮವುಂಟು.[೩೪] ಈ ಕಾರಣ ದಿಂದಲೇ ತ್ಯಾಗರಾಜರು ಆಹ್ಲಾದಕರನಾಗಿ, ಅಶುಭರೋಗ ಸಂಹಾರಕನಾಗಿ ನರಸಿಂಹ ನನ್ನು ಚಿತ್ರಿಸಿರಬಹುದು. ಸತ್ಫಲಗಳನ್ನು ನೀಡುವಾತನೆಂದು ಹೇಳಿ 'ಫಲಮಂಜರಿ' ಎಂಬ ರಾಗವನ್ನು ಅಳವಡಿಸಿರುವುದು ಬಹಳ ಸೂಕ್ತವಾಗಿದೆ.

## ೧೧. ತಿರುಪತಿಕ್ಷೇತ್ರ ಕೃತಿಗಳು

ತ್ಯಾಗರಾಜರ ಕೃತಿಭಂಡಾರದಲ್ಲಿ ವೆಂಕಟೇಶ್ವರ ಸ್ತುತಿಯಾಗಿ ಉಪಲಬ್ಧವಾಗುವ ರಚನೆಗಳು ಎರಡು ಮಾತ್ರ.

೧ ತೆರ ತೀಯಗರಾದಾ - ಗೌಳಿಪಂತು - ಆದಿ - ತೆಲುಗು ಭಾಷೆ

೨ ವೆಂಕಟೇಶಾ ನಿನ್ನು - ಮಧ್ಯಮಾವತಿ - ಆದಿ - ತೆಲುಗು ಭಾಷೆ

ಆದರೆ ಇತರ ಕೆಲವು ಕೃತಿಗಳಲ್ಲೂ ವೆಂಕಟೇಶ್ವರನನ್ನು ಅವರು ಸ್ಮರಿಸಿರುವು ದುಂಟು. ಉದಾಗೆ. ನೋಡಿ ತರಮಾ, ಸಾಧಿಂಚೆನೆ. ಪ್ರಸ್ತುತ ಮೇಲಿನ ಎರಡು ಕೃತಿ ಗಳಲ್ಲೂ ತಿರುಪತಿ ವೆಂಕಟೇಶ್ವರನ ಅಂಕಿತ ಕಾಣಬರುತ್ತದೆ (ತಿರುಪತಿ ವೆಂಕಟರಮಣ, ನಾಗಾಚಲಮುಪ್ಪೆ ಬಾಗುಗ ನೆಲಕೊನ್ನ). ತ್ಯಾಗರಾಜರು ತಿರುಪತಿ ಕ್ಷೇತ್ರಕ್ಕೆ ಹೋದಾಗ ಗರ್ಭಗುಡಿಯಲ್ಲಿ ತೆರೆಹಾಕಿದ್ದಿತು. ಭಾವುಕರಾದ ತ್ಯಾಗರಾಜರಿಗೆ ಇದರಿಂದ ತೀವ್ರ ದುಃಖವಾಗಿ ಈ ತೆರೆಯು ತಮಗೂ-ದೇವರಿಗೂ ನಡುವೆ ಅಡ್ಡಿ ಇರುವುದಾಗಿ ಭಾವಿಸಿದರು. ತೆರೆಯನ್ನು ಮದಮತ್ಸರಗಳಿಗೆ ಸಾಂಕೇತಿಕವಾಗಿ ಹೋಲಿಸಿ, ತಮ್ಮಲ್ಲಿನ ಮದಮತ್ಸರಗಳೆಂಬ ತೆರೆಯನ್ನು ತೆಗೆಯಬೇಕೆಂದು ವೆಂಕಟೇಶನಲ್ಲಿ ಪ್ರಾರ್ಥಿಸಿದರು. ಈ ಪ್ರಸಂಗವನ್ನು 'ತೆರತೀಯಗರಾದಾ' ರಚನೆಗೆ ಸಂಬಂಧಿಸಿ ಹೇಳುವ ರೂಢಿಯಿದೆ.

ಅನಂತರ ವೆಂಕಟೇಶ್ವರನ ದಿವ್ಯದರ್ಶನದಿಂದ ರೋಮಾಂಚಿತರಾಗಿ, ಆತನ ದಿವ್ಯ ರೂಪವನ್ನು ನೋಡಲು ಹತ್ತುಸಾವಿರ ಕಣ್ಣುಳೂ ಸಾಲದೆಂಬಂತೆ ಹಾಡಿದರು. ಎಲ್ಲ ದಿಕ್ಕುಗಳಲ್ಲೂ ವ್ಯಾಪಿಸಿರುವ ವೆಂಕಟೇಶನ ದರ್ಶನಮಾತ್ರದಿಂದ ಭಕ್ತರಿಗೆ ಮೋಕ್ಷ

ಲಭ್ಯವಾಗುವುದು. ತ್ಯಾಗರಾಜರಿಗೆ ಯಾವ ಪೂರ್ವಪುಣ್ಯದಿಂದಲೋ ವೆಂಕಟೇಶನ ನಾಮಾಮೃತವೆಂಬ ಸಾಧನ ದೊರೆತಿದೆ. ಅದರಿಂದ ಅವರು ಧನ್ಯರಾಗಿದ್ದಾರೆ.

**ಸಂಗೀತ ಮತ್ತು ಇತರ ವಿಶಿಷ್ಟಾಂಶಗಳು**

೧ ಈ ರಚನೆಗಳು ತಿರುಪತಿ ವೆಂಕಟರಮಣನನ್ನೇ ಕುರಿತ ಸ್ತುತಿಗಳೆಂಬುದು ಖಚಿತವಾಗಿವೆ.

೨ ಮದಮತ್ಸರವೆಂಬ ಅಲ್ಪಗುಣಗಳಿವೆ ಎಂದು ತಪ್ಪೊಪ್ಪಿಗೆ ಮಾಡುವಾಗ, ಕೃತಿ ಬಹಳ ಸೂಕ್ತವಾಗಿ ಮಂದ್ರಸ್ಥಾಯಿ ಸ್ವರಗಳಿಂದಲೇ ಆರಂಭವಾಗಿವೆ. ಪ ಪ ನೀ . . . . .

೩ ಹೀಗೆ ನೈಚ್ಯಾನುಸಂಧಾನದ ನಂತರ ದೈವದರ್ಶನವಾದ ಸಂತೋಷಾಭಿವ್ಯಕ್ತಿಗೆ ಅನುಗುಣವಾಗಿ 'ವೆಂಕಟೇಶಾ ನಿನ್ನು' ತಾರಸ್ಥಾಯಿಯಲ್ಲೇ ಆರಂಭವಾಗಿದೆ. ರಿ ಸಾ ಸ

೪ ತೆರತೀಯಗರಾದ ಕೃತಿಯಲ್ಲಿ ಉಪಮಾನಾದಿ ಅಲಂಕಾರಗಳು, ಚರಣದಲ್ಲಿ ಅಳವಟ್ಟಿದೆ.

ಬೆಟ್ಟಗಳು ದೇವತಾಸ್ಥಾನಗಳೆಂಬ ಆಲೋಚನೆ ಮನುಷ್ಯನ ಬದುಕಿನೊಂದಿಗೇ ಬೆಳೆದುಬಂದಿದೆ. ತಿರುಮಲೆ ಎನ್ನುವುದು ಏಳು ಬೆಟ್ಟಗಳ ಸಮೂಹ. ಪುರಾಣಗಳಲ್ಲಿ ಒಂದೊಂದು ಬೆಟ್ಟಕ್ಕೂ ಒಂದೊಂದು ಹೆಸರು ಕೊಟ್ಟಿರುವುದುಂಟು. ಶೇಷಾಚಲ, ವೃಷಭಾಚಲ, ಗರುಡಾಚಲ, ಅಂಜನಾದ್ರಿ, ನಾರಾಯಣಾದ್ರಿ, ವೃಷಾದ್ರಿ (ಸಿಂಹಾಚಲ) ಮತ್ತು ವೆಂಕಟಾದ್ರಿ. ಈ ಹೆಸರುಗಳೆಲ್ಲ ಒಂದೇ ಬೆಟ್ಟಕ್ಕೆ ಬೇರೆಬೇರೆ ಸಂದರ್ಭಗಳಲ್ಲಿ ಬಂದವು ಎನ್ನುವ ಮಾತೂ ಇದೆ.[೩೫] ಏಳನೆಯ ಬೆಟ್ಟದ ಮೇಲೆಯೇ ಗುಡಿಯಿರುವುದು. ಈ ಬೆಟ್ಟಗಳ ಸಾಲನ್ನು ಆದಿಶೇಷ ಮಲಗಿರುವಂತೆ ಕಲ್ಪಿಸಿಕೊಂಡಿರುವುದೂ ಉಂಟು. ಈ ಆಧಾರದಲ್ಲೇ ತ್ಯಾಗರಾಜರು 'ನಾಗಾಚಲದ ಮೇಲೆ ಸ್ಥಿರನಾಗಿರುವ' ಎಂದು ಹೇಳುವುದು. ನಾಗಾಚಲದೊಡೆಯನ ಪ್ರಸ್ತಾಪ ಮೊಟ್ಟಮೊದಲಿಗೆ ಸ್ಪಷ್ಟವಾಗಿ ಬರುವುದು ಆಳ್ವಾರರ ತಮಿಳು ಪ್ರಬಂಧಗಳಲ್ಲಿ[೩೬] ಎಂಬುದನ್ನು ನಾವಿಲ್ಲಿ ಸ್ಮರಿಸಬಹುದು.

### ೧೨. ಶೀರ್ಗಾಳಿ ಅಥವಾ ಬ್ರಹ್ಮಪುರಿಕ್ಷೇತ್ರ ಕೃತಿ

ತ್ಯಾಗರಾಜರು ಬ್ರಹ್ಮಪುರಿ ಕ್ಷೇತ್ರಕ್ಕೆ ಭೇಟಿ ನೀಡಿದಾಗ ಅಲ್ಲಿನ ಸುಬ್ರಹ್ಮಣ್ಯನನ್ನು ಕುರಿತು ಹಾಡಿರುವ ರಚನೆ 'ನೀವಂಟಿ ದೈವಮುನು'. ಇದರಲ್ಲಿ ಕ್ಷೇತ್ರಮುದ್ರೆಯು ಕಾಣಬರುತ್ತದೆ.

ಭಾವಿಂಚಿಜೂಡ ತರಮುಗಾನಿ
ಬ್ರಹ್ಮಪುರಿ ನಿಲಯ

ತ್ಯಾಗರಾಜಾಂಕಿತದಲ್ಲಿ ಸುಬ್ರಹ್ಮಣ್ಯ* ಸ್ತುತಿಯಾಗಿ ಮತ್ತೊಂದು ಕೃತಿ (ವರಶಿಖಿ ವಾಹನ) ಲಭ್ಯವಿದ್ದರೂ ಅದರಲ್ಲಿ ಕ್ಷೇತ್ರಮುದ್ರೆ ಕಾಣುವುದಿಲ್ಲ. ಬಹುಶಃ ಶೀರ್ಗಾಳಿ ಯಲ್ಲಿ ಅವರು ಹಾಡಿದ ರಚನೆ ಇದೊಂದೇ ಇರಬಹುದು. ಈ ಕೃತಿಯು ಸುಂದರವಾದ ತೋಡಿ ರಾಗದಲ್ಲಿದ್ದು ಷಣ್ಮುಖನ ಅದ್ವಿತೀಯ ಸೌಂದರ್ಯವನ್ನು ವರ್ಣಿಸಿ ಆತನಿಗೆ ಸಂಬಂಧಿಸಿದ ಪೌರಾಣಿಕ ಪ್ರಸಂಗಗಳನ್ನು ಸಾಹಿತ್ಯದಲ್ಲಿ ಅಳವಡಿಸಿಕೊಂಡಿದೆ. ಒಟ್ಟಾರೆ ತ್ಯಾಗರಾಜರು ಈ ಕ್ಷೇತ್ರಕ್ಕೆ ಭೇಟಿ ನೀಡಿದಾಗ ರಚಿಸಿದ ಕೃತಿಯಿದೆಂದು ಹೇಳಲು ಅಡ್ಡಿಯಿಲ್ಲ.

## ೧೩. ಕಾವೇರಿ ವರ್ಣನೆ

ತ್ಯಾಗರಾಜರ ಕೃತಿ ಸಮೂಹದಲ್ಲಿ ಭಕ್ತಿ ಮಾತ್ರವಲ್ಲ, ದೇಶಪ್ರೇಮವೂ ಸೊಗಸಾಗಿ ಮೂಡಿದೆ. ತಂಜಾವೂರು ಪ್ರದೇಶವನ್ನು ಚೋಳಸೀಮೆ ಎಂದು ತ್ಯಾಗರಾಜರು ಹಾಡುತ್ತಾರೆ.[೩೭] ಅವರು ತಮ್ಮ ನಾಡಾದ ಚೋಳಸೀಮೆಯನ್ನು, ಅದರಲ್ಲೂ ಪಂಚ ನದ ಕ್ಷೇತ್ರವನ್ನು ಹೆಮ್ಮೆಯಿಂದ ಹೀಗೆ ಉಲ್ಲೇಖಿಸುತ್ತಾರೆ. 'ಈ ಭುವಿಯೊಳಗೆ ಸೊಗಸಾದ ಚೋಳಸೀಮೆಯಲ್ಲಿನ ಶ್ರೇಷ್ಠವಾದ ಪಂಚನದಪುರ' ಎನ್ನುತ್ತಾರೆ.

**ಈ ಮಹಿಲೋ ಸೊಗಸೈನ ಚೋಳ**
**ಸೀಮಯಂದು ವರಮ್ಮೆನ ಪಂಚನದಪುರ**

(ಮುರಿಪೆಮುಗಲಿಗೆಗದಾ - ಮುಖಾರಿ - ಆದಿತಾಳ)

ಅವರ ಈ ದೇಶಪ್ರೇಮಕ್ಕೆ ಕಾರಣವಿಲ್ಲದಿಲ್ಲ. ನದೀತೀರದಲ್ಲಿರುವ ಈ ಸ್ಥಳ ಒಂದು ಪುಣ್ಯಕ್ಷೇತ್ರ. ಇಲ್ಲಿನ ತಂಪಾದ ನೀರ ಮೇಲಿನ ಗಾಳಿ ಹಿತವಾಗಿದೆ. ಸುಂದರವಾದ, ದೊಡ್ಡದೊಡ್ಡದಾದ ಇಲ್ಲಿನ ಮನೆಗಳಲ್ಲಿ ಭೂಸುರರು ಅಗ್ನಿಹೋತ್ರರಾಗಿ ವೇದ ಘೋಷದಿಂದ ಸ್ತುತಿಸುತ್ತಿದ್ದಾರೆ. ಎಲ್ಲ ವಿಧದ ಸುಗಂಧಿತ ಪುಷ್ಪಗಳು ಇಲ್ಲಿವೆ. ಕೋಗಿಲೆಗಳು ಹಾಡುತ್ತಿವೆ. ಶುಕಸನಕಾದಿಗಳು ಸ್ತುತಿಸುತ್ತಿದ್ದಾರೆ. ಸರಸ್ವತೀದೇವಿಯು ಸಮೀಪದಿಂದಲೇ ಸೇವಿಸಲ್ಪಡುತ್ತಿದ್ದಾಳೆ, ಎಂದರೆ ವಿದ್ಯಾವಂತರಾದ ಜನರಿದ್ದಾರೆ.

ಹೀಗೆ ಪ್ರಕೃತಿಯ ಸುಂದರ ವಾತಾವರಣ, ಅಧ್ಯಾತ್ಮದಲ್ಲಿ ಆಸಕ್ತರಾಗಿದ್ದ ಜನ, ಸಂಸ್ಕೃತಿ-ಸಮೃದ್ಧಿಗಳ ತಾಣವಾಗಿದ್ದ ಇಲ್ಲಿ ಧರ್ಮಪರತೆಯೂ ಇದ್ದುದರಿಂದ ಇಂತಹ ನಾಡಿನ ಮೇಲೆ ಪ್ರೀತಿಯಿರುವುದು ಸಹಜವೇ. ಅಂತೆಯೇ ತ್ಯಾಗರಾಜರು ಹೆಮ್ಮೆ ಯಿಂದ ತಮ್ಮ ನಾಡನ್ನು ಕೀರ್ತಿಸುವುದು.

ತ್ಯಾಗರಾಜರು ಮತ್ತೊಂದು ರಚನೆಯಲ್ಲಿ ಈ ನಾಡಿನಲ್ಲಿ ಹರಿಯುವ ಕಾವೇರಿ ನದಿಯ ಹಿರಿಮೆಯನ್ನು ಹಾಡುತ್ತಾರೆ. ಇದಕ್ಕೆ ಕಾರಣ ಕಾವೇರಿಯು ಐಹಿಕ ಮತ್ತು ಆಮುಷ್ಮಿಕಗಳೆರಡು ನಿಟ್ಟಿನಲ್ಲೂ ಮನುಷ್ಯನನ್ನು ರಕ್ಷಿಸುವ ತಾಯಿಯಾಗಿದ್ದಾಳೆ.

---

* ಸುಬ್ರಹ್ಮಣ್ಯ ಸ್ವಾಮಿಯನ್ನು ಕುರಿತು ಪೌರಾಣಿಕ ಅಧ್ಯಾಯದಲ್ಲೂ ಪ್ರಸ್ತಾಪಿಸಲಾಗಿದೆ.

'ಕಾವೇರಿಯ- ಭವಹಾರಿಯ - ಮುಕ್ತಿಕಾರಿಯ ನೋಡುವ ಬನ್ನಿರಯ್ಯ' ಎಂದು ದಾಸವರೇಣ್ಯರೊಬ್ಬರು ಹಾಡಿದ್ದಾರೆ. 'ಕಾ' ಎಂದರೆ ಪಾಪನಾಶಕ, 'ವೇ' ಎಂದರೆ ಇಷ್ಟಾರ್ಥಪ್ರದ, 'ರೀ' ಎಂದರೆ ಸರ್ವ. ಒಟ್ಟಾರೆ ಈ ಅಕ್ಷರಗಳು ಒಗ್ಗೂಡಿ ಪಾಪನಾಶ ಮಾಡಿ, ಸರ್ವ ಇಷ್ಟಾರ್ಥಗಳನ್ನೂ ನೆರವೇರಿಸುವವಳಾದ್ದರಿಂದ ಕಾವೇರೀ ಎನಿಸುತ್ತಾಳೆ.[೨೮]

ತ್ಯಾಗರಾಜರು ಕಾವೇರಿಯ ಕೃತಿಯಲ್ಲಿ ಎರಡು ಮುಖ್ಯ ಅಂಶಗಳನ್ನು ನಮ್ಮ ಮುಂದಿಡುತ್ತಾರೆ. (೧) ಆಕೆಯು ಇಡೀ ಜಗತ್ತಿಗೆ ಜೀವಾಧಾರಳು. 'ಈರೇಡು ಜಗಮುಲಕು ಜೀವನಮ್ಮೈನ' ಎಂಬುದು ಅವರ ಉಕ್ತಿ. (೨) ಆಕೆಯು ಕರ್ನಾಟಕ ಹಾಗೂ ಚೋಳಸೀಮೆಯ ಭಾವೈಕ್ಯತೆಯ ಸಂಕೇತ. ಆಕೆಯು ಕನ್ನಡನಾಡಿನ ತಲಕಾವೇರಿಯಿಂದ ನೇರವಾಗಿ ಚೋಳಸೀಮೆಯೆಡೆಗೆ ಸಾಗುತ್ತಾಳೆ. ಮಾರ್ಗಮಧ್ಯೆ ಅವರಿವರೆಂಬ ಭೇದವಿಲ್ಲದೆ ಎಲ್ಲರಿಗೂ ಯಥೇಚ್ಛ ಫಲಗಳನ್ನು ನೀಡುವಳೆಂಬುದನ್ನು 'ವಾರುವೀರನುಚು ಜೂಡಕ ತಾನವ್ವಾರಿಗಾ ಅಭೀಷ್ಟಮುಲನೊಸಂಗುಚು' ಎಂಬ ಉಕ್ತಿಯಲ್ಲಿ ಸ್ಪಷ್ಟ ಮಾಡುತ್ತಾರೆ. ಹೀಗಾಗಿ ಕಾವೇರಿತಾಯಿ ಭೌಗೋಳಿಕವಾಗಿ ವಿವಿಧ ಪ್ರದೇಶದ ಜನರನ್ನು ಒಂದಾಗಿಸುವ ಸಂಕೇತವಾಗಿದ್ದಾಳೆ.

ತ್ಯಾಗರಾಜರ ವರ್ಣನೆಯಂತೆ ಈಕೆ ಒಂದೆಡೆ ವೇಗವಾಗಿ, ಇನ್ನೊಂದೆಡೆ ಗರ್ಜನೆಯೊಂದಿಗೆ, ಮತ್ತೊಂದೆಡೆ ತುಂಬು ಕರುಣೆಯಿಂದ ಮುನ್ನಡೆಯುತ್ತಾಳೆ. ಕನ್ಯಾಮಣಿಯಾದ ಈಕೆ ತನ್ನ ವರನಾದ ಪಂಚನದೀಶನೆಡೆಗೆ ಸಾಗುವಾಗ ಮಾರ್ಗಮಧ್ಯೆ ಕೋಗಿಲೆಗಳು ಸಂತಸದಿಂದ ಹಾಡುತ್ತಿವೆ. ಈ ಸಂಗೀತ ಕಾವೇರಿಗೆ, ತನ್ನ ಪತಿಯನ್ನು ಸೇರಲು ಉದ್ದೀಪನಗೊಳಿಸುತ್ತಿವೆ ಎಂಬುದು ಇಂಗಿತ. ಭಾರತೀಯ ರಸಕಲ್ಪನೆಯಲ್ಲಿ ಉದ್ದೀಪನ ಭಾವಕ್ಕೆ ಇದೊಂದು ಸುಂದರ ಉದಾಹರಣೆ. ಇನ್ನು ತ್ಯಾಗರಾಜರ ವರ್ಣನೆಯಂತೆ ಕಾವೇರಿಯು ಶ್ರೀರಂಗನಾಥನ ದರ್ಶನಾರ್ಚನಗಳನ್ನು ಮುಗಿಸಿ ಹದಿನಾಲ್ಕು ಲೋಕಗಳಿಗೂ ಜೀವನಾಥನಾದ ಪಂಚನದೀಶನೆಡೆಗೆ ಹರಿಯುತ್ತಾಳೆ. ಈಕೆಯನ್ನು ರಾಜರಾಜೇಶ್ವರಿಯೆಂದು ಹೊಗಳುತ್ತಾ, ಜನರು ಇಕ್ಕೆಲಗಳಲ್ಲೂ ಅರ್ಚಿಸುತ್ತಿದ್ದಾರೆ. ತ್ಯಾಗರಾಜರೂ ಈಕೆಯನ್ನು ಸ್ತುತಿಸಿದ್ದಾರೆ. ಇಂತಹ ಕಾವೇರಿಯನ್ನು ದರ್ಶಿಸಿರೆಂದು ಅವರು ಇತರರಿಗೂ ಹೇಳುತ್ತಿದ್ದಾರೆ.

**ಸಾರಿವೆಡಲಿನ ಈ ಕಾವೇರಿನಿ ಜೂಡರೇ**
**ವಾರುವೀರನುಚು ಜೂಡಕ ತಾನವ್ವಾರಿಗಾಭೀಷ್ಟಮುಲನೊಸಂಗುಚು**
**ದುರಮುನನೊಕತಾವುನ ಗರ್ಜನ ಭೀಕರಮೊಕತಾವುನ ನಿಂಡು ಕರುಣತೋ**
**ನಿರತಮುಗನೊಕತಾವುನ ನಡಚುಚು ವರಕಾವೇರಿ ಕನ್ಯಕಾಮಣಿ**

**ವೇಡುಕಗಾ ಕೋಕಿಲಲು ಮ್ರೋಯಗನು ವೇಡುಚು ರಂಗೇಶುನಿಜೂಚಿಮರಿಯೀ**
**ರೇಡು ಜಗಮುಲಕು ಜೀವನಮ್ಮೈನ ಮೂಡು ರೆಂಡು ನದಿ ನಾಥುನಿ ಜೂಡ**

**ರಾಜರಾಜೇಶ್ವರಿಯನಿ ಪೊಗಡುಚು ಜಾಜಿಸುಮಮುಲ ಧರಾಮರಗಣಮುಲು**
**ಪೂಜಲಿರುಗಡಲ ಸೇಯಗ ತ್ಯಾಗರಾಜ ಸನ್ನುತುರಾಲೈ ಮುದ್ದುಗ**

**(ಸಾರಿವೆಡಲಿನ - ಅಸಾವೇರಿ - ಆದಿತಾಳ)**

ಈ ನದಿಗೆ 'ಕಾವೇರಿ' ಎಂದೇಕೆ ಹೆಸರಾಯಿತು ಎಂಬುದಕ್ಕೆ ಕೆಲವು ವಿವರಣೆಗಳುಂಟು. ಅಗಸ್ತ್ಯ ಮುನಿಗಳು ಶಿವನಿಂದ ಪಡೆದ ನದಿಯನ್ನು ಕಮಂಡಲದಲ್ಲಿ ಅಡಗಿಸಿಕೊಂಡು ಕವೇರ ಮುನಿಯ ಆಶ್ರಮಕ್ಕೆ ಬಂದರು. ಅಲ್ಲಿ ಕಮಂಡಲವನ್ನಿಟ್ಟು ಹೂ ಕೊಯ್ಯುತ್ತಿದ್ದಾಗ, ವಿನಾಯಕನು ಕಾಗೆಯ ರೂಪದಲ್ಲಿ ಬಂದು ಕಮಂಡಲವನ್ನು ಉರುಳಿಸಿಬಿಟ್ಟನು. ಅದು ಹರಿದು ನದೀ ರೂಪ ತಾಳಿತು. ಕವೇರಮುನಿಯ ಆಶ್ರಮದಲ್ಲಿ ಈ ನದಿ ರೂಪ ತಾಳಿದ್ದರಿಂದ ಈಕೆಯನ್ನು ಕವೇರಮುನಿ ತಮ್ಮ ಮಗಳೆಂದೆಣಿಸಿದರು. ಈ ಕಾರಣದಿಂದ ನದಿಗೆ ಕಾವೇರಿ ಎಂಬ ಹೆಸರಾಯಿತು[೬೯] ಎಂಬುದು ಅಂತಹ ವಿವರಣೆಗಳಲ್ಲಿ ಮುಖ್ಯ ಒಂದು.

### ೧೪. ಧನುಷ್ಕೋಟಿಯ ಪ್ರಸ್ತಾಪ

ಸರ್ವಾಂತರ್ಯಾಮಿಯಾದ ಹರಿಯನ್ನು ಇದ್ದಲ್ಲಿಂದಲೇ ಕಾಣುವ ಮಹಾರಾಜರಿಗೆ ಕ್ಷೇತ್ರಾಟನೆ ಅನಗತ್ಯ ಎಂಬುದನ್ನು ತ್ಯಾಗರಾಜರು ಪ್ರಸ್ತಾಪಿಸುತ್ತಾರೆ. ವಾಸ್ತವವಾಗಿ ಅವರು ಸ್ವಇಚ್ಛೆಯಿಂದ ಕ್ಷೇತ್ರಯಾತ್ರೆ ಕೈಗೊಂಡವರಲ್ಲ. ಆದರೆ ಮಾನವ ಶರೀರದ ಅವಯವಗಳಲ್ಲಿ ಕಾಲ್ಗಳ ಸಾರ್ಥಕ್ಯವನ್ನು ಸ್ಪಷ್ಟಪಡಿಸುವಾಗ ಕಾಲುಗಳು ದೇವಾಲಯಗಳನ್ನೂ ಕ್ಷೇತ್ರಸ್ಥಳಗಳನ್ನೂ ಸುತ್ತಲು ಬಳಸಬೇಕೇ ಹೊರತು ಭೂರಿಭೋಜನಕ್ಕಾಗಿ ಓಡುವುದಕ್ಕಲ್ಲ ಎಂಬುದು ಅವರ ಅಭಿಪ್ರಾಯ.

**ವಾರಮು ನೀ ಕ್ಷೇತ್ರವರಮುಲ ಚುಟ್ಟಕ**
**ಭೂರಿಕಿ ಮುಂದುಗಾ ಪಾರಿಪಾರಿ ತಿರುಗ**

**(ಇಂದುಕಾ ಈತನುವುನು)**

ಮೇಲಿನ ಈ ಎರಡು ಹೇಳಿಕೆಗಳು ತದ್ವಿರುದ್ಧವಲ್ಲವೇ ಎಂಬ ಪ್ರಶ್ನೆ ಓದುಗನಿಗೆ ಮೂಡುವುದು ಸಹಜ. ಒಂದೆಡೆ ಕ್ಷೇತ್ರಯಾತ್ರೆ ಅನಗತ್ಯವೆಂದೂ, ಇನ್ನೊಂದೆಡೆ ಕಾಲ್ಗಳು ದೇವಸ್ಥಾನಗಳನ್ನು ಸುತ್ತಲು ಉಪಯೋಗಿಸಬೇಕೆಂದೂ ಹೇಳುವಲ್ಲಿ ಭಾವ ವೈರುಧ್ಯ ತೋರುತ್ತದೆ. ಆದರೆ ಈ ಸಮಸ್ಯೆಗೆ ಪರಿಹಾರವನ್ನು ತ್ಯಾಗರಾಜರು ಹೀಗೆ ನೀಡುತ್ತಾರೆ.

**ಕೋಟಿನದುಲು ಧನುಷ್ಕೋಟಿಲೋ ನುಂಡಗ**
**ಏಟಿಕಿ ತಿರಿಗೆದವೇ ? ಓ ಮನಸಾ**
**ಸೂಟಿಗ ಶ್ಯಾಮಸುಂದರ ಮೂರ್ತಿನಿ**
**ಮಾಟಿಮಾಟಿಕಿ ಜೂಚೆ ಮಹಾರಾಜುಲಕು**

**(ಕೋಟಿನದುಲು)**

ಧನುಷ್ಕೋಟಿಯಲ್ಲೇ ಕೋಟಿನದಿಗಳೂ ಅಂತರ್ಗತವಾಗಿರುವಾಗ (ಇತರ ನದಿಗಳ ಸ್ನಾನಕ್ಕಾಗಿ) ತಿರುಗುವೆಯೇಕೆ ? ಶ್ಯಾಮಸುಂದರ ಮೂರ್ತಿಯನ್ನು ಹೆಚ್ಚೆಹೆಚ್ಚೆಗೂ ಕಾಣುವ (ಭಕ್ತ) ಮಹಾರಾಜರು ಕೋಟಿ ನದಿಗಳ ಸ್ನಾನಕ್ಕಾಗಿ ಅಡ್ಡಾಡಬೇಕಿಲ್ಲ ಎಂಬುದು ತ್ಯಾಗರಾಜರ ಭಾವ. ಧನುಷ್ಕೋಟಿಯಲ್ಲಿ ಎಲ್ಲ ನದಿಗಳ ಸೇರ್ಪಡೆಯೂ ಆಗಿ ಅಲ್ಲಿ ಮಿಂದವನು ಇತರ ನದಿಗಳಲ್ಲಿ ಮೀಯಬೇಕಾದ್ದಿಲ್ಲ ಎಂಬ ಈ ಹಿನ್ನೆಲೆಯಲ್ಲಿ ರಾಮನ ಔನ್ನತ್ಯವನ್ನು ಹೇಳುವ ಉದ್ದೇಶವಿದೆಯಾದರೂ ಇದ್ದಲ್ಲಿಂದಲೇ ದೇವರನ್ನು ಕಾಣಬಹುದೆಂಬ ಅಂತರಾರ್ಥವೂ ಅಡಗಿದೆ. ಇದೇ ಭಾವವನ್ನೇ ತ್ಯಾಗರಾಜರು ಮತ್ತೊಂದು ರಚನೆಯಲ್ಲಿ ಇನ್ನೂ ಸ್ಪಷ್ಟವಾಗಿ ನುಡಿಯುತ್ತಾರೆ.

**ನಡಚಿ ನಡಚಿ ಜೂಚೇರಯೋಧ್ಯಾನಗರಮು ಗಾನರೇ**

**(ನಡಚಿ ನಡಚಿ)**

ದಹರಾಕಾಶದಲ್ಲಿರುವ ಆತ್ಮಾರಾಮನನ್ನು ಕಾಣದೆ ಬಹುದೂರ ನಡೆದು ಅಯೋಧ್ಯೆಯನ್ನು ತಲುಪುವ ಯತ್ನ ಮಾಡುವರಲ್ಲಾ ಎಂದು ಅವರು ವಿಷಾದಿಸುತ್ತಾರೆ. ಇಲ್ಲಿ ಆತ್ಮಾರಾಮನನ್ನು ಕಾಣುವುದೇ ಕ್ಷೇತ್ರಾಟನೆಗಿಂತ ಮಿಗಿಲೆಂಬ ಅವರ ನಿಲುವು ಸ್ಪಷ್ಟವಾಗಿದೆ. ಹೀಗೆ ತ್ಯಾಗರಾಜರು ಈ ಎರಡು ರಚನೆಗಳಲ್ಲಿ ಧನುಷ್ಕೋಟಿ ಹಾಗೂ ಅಯೋಧ್ಯೆಯನ್ನು ಸಾಂಕೇತಿಕವಾಗಿ ಪ್ರಸ್ತಾಪಿಸುತ್ತಾರಷ್ಟೆ.

ಸ್ಕಾಂದ ಮತ್ತು ಬ್ರಹ್ಮಪುರಾಣಗಳಲ್ಲಿ ಉಕ್ತವಾಗಿರುವಂತೆ ಧನುಷ್ಕೋಟಿಯ ಪುಣ್ಯನದಿಯಲ್ಲಿ ಮಾಡುವ ಸ್ನಾನವು ಬಹಳ ಪುಣ್ಯಕಾರಿ.[೪೦] ಏಕೆಂದರೆ ನಮ್ಮ ದೇಶದಲ್ಲಿರುವ ಅಸಂಖ್ಯ ಪುಣ್ಯನದಿಗಳ ಸಂಗಮ ಇಲ್ಲಿದೆ ಎಂಬುದು ಪುರಾಣ ಪ್ರಸಿದ್ಧಿ. ಇದನ್ನು ಶ್ರೀರಾಮನ ಪೂಜೆ, ಧ್ಯಾನಗಳಿಗೆ ಅನ್ವಯಿಸಿ ಮಾತ್ರ ತ್ಯಾಗರಾಜರು ಈ ಕ್ಷೇತ್ರಗಳನ್ನು ಹೆಸರಿಸುವುದು. ಅಯೋಧ್ಯೆಯು ಸಪ್ತ ಮಹಾಕ್ಷೇತ್ರಗಳಲ್ಲಿ ಮೊದಲನೆಯದೆಂಬುದು ಪುರಾಣ ಪ್ರಸಿದ್ಧಿ.[೪೧]

ತ್ಯಾಗರಾಜರು ತೀರ್ಥಯಾತ್ರೆ ಕೈಗೊಂಡ ಅವಧಿಯಲ್ಲಿ ಮೈಸೂರಿಗೂ ಭೇಟಿ ನೀಡಬೇಕೆಂಬ ರಾಜಾಹ್ವಾನ ಅವರಿಗಿದ್ದಂತೆ ಹೇಳುತ್ತಾರೆ.[೪೨] ಆದರೆ ಈ ಬಗೆಗೆ ನಿಖರವಾಗಿ ಹೇಳಲು ಯಾವ ಸಾಕ್ಷ್ಯಾಧಾರಗಳೂ ಕಾಣಬರದು.

## ಟಿಪ್ಪಣಿಗಳು

೧ ಸಂಖ್ಯೆಗಳಿಂದ ಸ್ಫೂರ್ತಿ, ಎಸ್.ಜಿ. ನರಸಿಂಹಯ್ಯ, ಸ್ಟ್ಯಾಂಡರ್ಡ್ ಬುಕ್ ಡಿಪೋ, ೧೯೮೩, ಪುಟ ೩೮-೬೧.

೨ ಶಿವಾನಂದಲಹರಿ, ಕಪಾಲನ್ ಭಿಕ್ಷೋ ಮೇ ....... ದೃಢ ಭಕ್ತಿಗಾಗಿ ಪ್ರಾರ್ಥಿಸುವುದು.

೩ ತ್ಯಾಗರಾಜ ಕೀರ್ತನಲು, ವಿಶೇಷ ವಿವರಣಮು, ಕಲ್ಲೂರಿ ವೀರಭದ್ರಶಾಸ್ತ್ರಿ, ಸ್ವಧರ್ಮ ಸ್ವಾರಾಜ್ಯ ಸಂಘಮು, ಮದರಾಸು, ಸಂಪುಟ ೧, ಪುಟ ೩೬೦.

೪ *The Spiritual Heritage of Tyagaraja*—C. Ramanujachari and V. Raghavan, Sri Ramakrishna Math, 1966,ಪು. ೧೩೨ರಲ್ಲಿ ಉಲ್ಲೇಖ.

೫ ದೇವಗಾಂಧಾರಿ ರಾಗದಲ್ಲೇ 'ಕೊಲುವೈಯುನ್ನಾಡೆ' ಎಂಬ ಸರಳ ಕೃತಿಯೊಂದನ್ನು ತ್ಯಾಗರಾಜರು ರಚಿಸಿರುವುದನ್ನು ಇಲ್ಲಿ ನಾವು ಸ್ಮರಿಸಬಹುದು.

೬ *Immortal India,* Volume 1, J. H. Dave, Bharatiya Vidya Bhavan, Bombay, 1970, p. 125 & 131.

೭ *An Anthology of Indian Music.* Editors : M. Hariharan, Gowri Kuppuswamy, Sundeep Prakashan, Delhi, 1989, p. 75.

೮ *Tyagaraja,* P. Sambamoorthy, National Book Trust, India, New Delhi, 1967, p. 44-45.

೯ *An Anthology of Indian Music*, Editors : M. Hariharan, Gowri Kuppuswamy, p. 73.

೧೦ ನೋಡಿ, ಶ್ರೀಲಲಿತಾಸಹಸ್ರನಾಮ.

೧೧ *An Anthology of Indian Music,* Editors : M. Hariharan, Gowri Kuppuswamy, p. 73.

೧೨ ಕಿರೀಟಮಣಿಗಳಿಂದ ನೀರಾಜನ– ಸೌಂದರ್ಯಲಹರಿ ೨೨ನೇ ಶ್ಲೋಕ

೧೩ ದ್ವಿತೀಯಾಂಕ, ಚೂರ್ಣಿಕೆ–ಸುರನಾಯಕಾದ್ಯಷ್ಟದಿಕ್ಪಾಲ ಮಕುಟ ಮಣಿಗಣ ನೀರಾಜಿತ ಪಾದಾರವಿಂದಃ

೧೪ *Great Composers II, Tyagaraja,* P. Sambamoorthy, p. 280-81.

೧೫ *An Anthology of Indian Music,* Editors : M. Hariharan, Gowri Kuppuswamy, p. 72.

೧೬ ಘನರಾಗವೆಂಬುದು ಘನವಾದ ನಾಭಿತಾನವಾಗಿ ಗಾನಕ್ರಿಯೆ ಮಾಡುವಂಥದ್ದು. ಇದು ಶೌರ್ಯ ವೀರೋತ್ಸಾಹ ಹೊಂದಿದ ಪುರುಷನನ್ನು ಹೋಲಿರುವುದು–ಸಂಗೀತ ಸಂಪ್ರದಾಯ ಪ್ರದರ್ಶಿನಿ. ದ್ವಿತೀಯ ಮುದ್ರಣ, (ಸಂ.) ಆಚಾರ್ಯ ನೋರಿ ನಾಗಭೂಷಣಂ, ಆಂಧ್ರ ಪ್ರದೇಶ್ ಸಂಗೀತ ನಾಟಕ ಅಕಾಡಮಿ, ೧೯೭೩, ಪುಟ ೭೩.

ತಾನರೂಪದ ಹಾಡುವಿಕೆಯಿಂದ ರಾಗಮಾಧುರ್ಯದ ಪ್ರತ್ಯೇಕತೆ ಸುಲಭಗ್ರಾಹ್ಯವಾಗುವಂತೆ ಇರುವ ರಾಗಗಳೇ ಘನರಾಗಗಳು. ನಾಟ, ಗೌಳ, ಆರಭಿ, ವರಾಳಿ ಮತ್ತು ಶ್ರೀರಾಗಗಳು ಪ್ರಸಿದ್ಧ ಉದಾಹರಣೆಗಳು. ಇವು ಪ್ರಥಮ ಘನರಾಗ ಪಂಚಕ.

ಕೇದಾರ, ನಾರಾಯಣಗೌಳ, ರೀತಿಗೌಳ, ಸಾರಂಗನಾಟ ಮತ್ತು ಬೌಳಿ ರಾಗಗಳನ್ನು ಒಗ್ಗೂಡಿಸಿ ದ್ವಿತೀಯ ಘನರಾಗ ಪಂಚಕಗಳೆನ್ನಲಾಗಿದೆ. ನೋಡಿ *A Dictionary of South Indian Music and Musicians*, Vol. II (G-K), P. Sambamoorthy, The Indian Music Publishing House, Madras-1, 1959, p. 50.

ದ್ರುತ ಮತ್ತು ವಿಳಂಬ ಕಾಲಕ್ಕಿಂತ ಮಧ್ಯನಡೆ ಎದ್ದು ಕಾಣುವಂತೆಯೂ ದೃಢವಾದ ನಾಭಿತಾಗಗಳ ರೂಪದಲ್ಲಿ ಹಾಡುವ ಕ್ರಮವನ್ನು ಘನಮಾರ್ಗ ಎಂದು ಪೂರ್ವಿಕರು ವಿವರಿಸಿದ್ದಾರೆ. ಸಾಧಕದ ಬಲದಿಂದಲೂ, ಶಾರೀರ ಸಂಪತ್ತಿನ ಸಹಾಯದಿಂದಲೂ ಯಾವ ರಾಗವನ್ನು ಬೇಕಾದರೂ ಘನ ಮಾರ್ಗಗಳಲ್ಲಿ ಹಾಡಲು ಸಾಧ್ಯವಾಗಬಹುದು. ನೋಡಿ, ಸಂಗೀತ ಸರಿತಾ,

ಎಸ್. ಕೃಷ್ಣಮೂರ್ತಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೭, ಪುಟ ೪೫.

೧೭ *Great Composers - II, Tyagaraja*—P. Sambamoorthy, p. 38-39.

೧೮ ಸಂಗೀತಶಾಸ್ತ್ರಸಾರಮು, ರೆಂಡವಭಾಗಮು, ಎಸ್.ಆರ್. ಜಾನಕೀರಾಮನ್, ತೆಲುಗು ವಿಶ್ವ ವಿದ್ಯಾನಿಲಯ ಧನಸಹಾಯದಿಂದ ಮುದ್ರಿತ, ೧೯೮೯, ಪುಟ ೧.

೧೯ ಅದೇ, ಪುಟ ೧.

೨೦ *Tyagaraja, Saint and Singer*, S.Y. Krishnaswamy, Orient Longmans, New Delhi, 1968, p. 174.

೨೧ ಸಂಗೀತ ಸಾಹಿತ್ಯ ಕಲಾ ವಿಹೀನಃ
ಸಾಕ್ಷಾತ್ ಪಶುಃಪುಚ್ಛ ವಿಷಾಣ ಹೀನಃ ||

೨೨ ಸಂಗೀತಶಾಸ್ತ್ರ ಸಾರಮು, ರೆಂಡವ ಭಾಗಮು, ಎಸ್.ಆರ್. ಜಾನಕೀರಾಮನ್, ಪುಟ ೩.

೨೩ *Great Composers II, Tyagaraja*, P. Sambamoorthy, p. 39.

೨೪ ಸಂಗೀತಶಾಸ್ತ್ರ ಸಾರಮು, ಎಸ್.ಆರ್. ಜಾನಕೀರಾಮನ್, ಪುಟ. ೫-೬.

೨೫ ತ್ಯಾಗರಾಜ ಕೀರ್ತನಲು, ಪಾರ್ಟ್ ೧, ಎನ್.ಸಿ. ಪಾರ್ಥಸಾರಥಿ, ದ್ವಾರಕಾ ಪಾರ್ಥಸಾರಥಿ, ಬಾಲಸರಸ್ವತಿ ಬುಕ್ ಡಿಪೋ, ಮದ್ರಾಸು, ೧೯೮೦, ಪುಟ ೬೦.

೨೬ Discussions of the Twentyfive Conferences of the Experts Committee of the Music Academy, Madras, p. 11.

೨೭ *Great Composers-II, Tyagaraja*, P. Sambamoorthy, p. 39.

೨೮ ಗುರು-ಹಿರಿಯರು ವಿಭಾಗದಲ್ಲೂ ನೋಡಿ.

೨೯ Tyagaraja, Saint and Singer, S.Y. Krishnaswamy, p. 172.

೩೦ ಸದ್ಗುರು ತ್ಯಾಗರಾಜರು, ವಿ. ಎಸ್. ಸಂಪತ್ಕುಮಾರಾಚಾರ್ಯ, ಗೀತಾ ಬುಕ್ ಹೌಸ್, ಮೈಸೂರು, ೧೯೮೭, ಪುಟ ೨೬೨.

೩೧ ಪುರಾಣನಾಮಚೂಡಾಮಣಿ, ಬೆನಗಲ್ ರಾಮರಾವ್, ಪಾನ್ಯಂ ಸುಂದರಶಾಸ್ತ್ರಿ, ಮೈಸೂರು ವಿಶ್ವವಿದ್ಯಾನಿಲಯ, ೧೯೫೭, ಪುಟ ೨೬೫-೨೬೬.

೩೨ *Immortal India*, Vol I, J.H. Dave, p. 69-70.

೩೩ ತ್ಯಾಗರಾಜ ಕೀರ್ತನಲು Vol. I, ಕಲ್ಲೂರಿ ವೀರಭದ್ರಶಾಸ್ತ್ರಿ, ಅಡಿ ಟಿಪ್ಪಣಿ, ಪುಟ ೩೭೨.

೩೪ ಮೂರ್ತಿಶಿಲ್ಪ ನೆಲೆ-ಹಿನ್ನೆಲೆ, ಎಸ್. ಕೆ. ರಾಮಚಂದ್ರರಾವ್, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು, ೧೯೭೫, ಪುಟ ೧೪೯-೧೫೦.

೩೫ ಏವರಣೆಗಾಗಿ ನೋಡಿ, ತಿರುಪತಿ ತಿಮ್ಮಪ್ಪ, ಎಸ್. ಕೆ. ರಾಮಚಂದ್ರರಾವ್, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೧೯೮೦, ಪುಟ ೧, ೪ ಮತ್ತು ೫.

೩೬ ಅದೇ, ಪುಟ ೧೪-೧೫.

೩೭ *Tanjore as a Seat of Music*, ಡಾ. ಸೀತ ಎಸ್., ಮದರಾಸು ವಿಶ್ವವಿದ್ಯಾನಿಲಯ, ಮದರಾಸು, ೧೯೮೧, ಪುಟ ೨೦.

೩೮ ಶ್ರೀ ಪುರಂದರದಾಸರು, ಟಿ. ಕೆ. ವೇಣುಗೋಪಾಲದಾಸರು, ಗುರುರಾಜ ಪ್ರಕಾಶನ,

ಬೆಂಗಳೂರು, ೧೯೮೫, ಪುಟ ೧೦೭.

೩೯ ಪೆರಿಯ ಪುರಾಣ, ಸಂ. ೧ (ಅನು.), ಎಲ್. ಗುಂಡಪ್ಪ, ಪುಟ ೨೮೦.

೪೦ *Immortal India*, Vol. I, J.H. Dave, p. 12.

೪೧ ಅದೇ, ಪುಟ ೮೧.

೪೨ *Tyagaraja Bi-centenary Volume.* The Journal of Music Academy, Madras, Vol. XXXIX, 1968. ಆಸ್ಥಾನ ವಿದ್ವಾನ್ ಎಸ್. ಚೆನ್ನಕೇಶವಯ್ಯನವರ ಲೇಖನ, ಪುಟ ೭೩-೭೪.

೮

# ತ್ಯಾಗರಾಜ ವಿರಚಿತ ಸಂಗೀತ ನಾಟಕಗಳು

ಸಂಸ್ಕೃತದ ಉಪರೂಪಕಗಳಿಂದ ಮೂಡಿದುದು ಗೀತನಾಟಕ. ಉಪರೂಪಕವೆಂಬುದು ಸಂಗೀತ ಮತ್ತು ನೃತ್ಯಗಳು ಪ್ರಧಾನವಾಗಿದ್ದ ಒಂದು ರೂಪ. ಇದರಲ್ಲಿ ಗದ್ಯಭಾಗಗಳಿರಲಿಲ್ಲ. ಕ್ರಮೇಣ ಕಥಾವಸ್ತುವೊಂದನ್ನು ಸಂಗೀತ, ಅಭಿನಯ, ಪದ್ಯ ಅಥವಾ ಶ್ಲೋಕಗಳು ಹಾಗೂ ಅಲ್ಲಲ್ಲಿ ಗದ್ಯಭಾಗಗಳನ್ನೂ ಸೇರಿಸಿಕೊಂಡು ಸಂಗೀತ ಮಾಧ್ಯಮದಲ್ಲೇ ನಡೆಯುವ ನಾಟಕಗಳು ರೂಪುಗೊಂಡು, ಇವು 'ಗೀತನಾಟಕ' ಗಳೆನಿಸಿದವು. ಇಂದು ಗೀತನಾಟಕ, ಗೇಯನಾಟಕ, ಸಂಗೀತರೂಪಕ, ಇಶೈನಾಟಕ ಹಾಗೂ ಆಪೆರಾ, ಈ ಎಲ್ಲ ಪದಗಳೂ ಸಮಾನಾರ್ಥಕ ಪದಗಳಾಗಿ ಬಳಸಲ್ಪಡುತ್ತಿವೆ. 'ಕಲೈಕಲಾಜಿಯಂ' ಎಂಬ ತಮಿಳಿನ ಶಬ್ದಕೋಶವೊಂದು Opera ಎಂಬುದಕ್ಕೆ 'ಇಶೈ ನಾಟಕಂ' ಎಂದು ಅರ್ಥೈಸುತ್ತದೆ. ದಕ್ಷಿಣ ಭಾರತದ ವಾಗ್ಗೇಯಕಾರರಲ್ಲಿ ರಾಯಾ ರಮಾನಂದನೆಂಬಾತನೇ 'ಸಂಗೀತನಾಟಕ' ಎಂಬ ಪದವನ್ನು ಮೊದಲ ಬಾರಿಗೆ ಬಳಸಿರುವ ಏಕೈಕ ವಾಗ್ಗೇಯಕಾರ.[೧] ಬೆಳವಣಿಗೆಯಲ್ಲಿ ನಾಟಕಕಲೆಯ ಮುಂದಿನ ಹಂತ ಗೀತನಾಟಕ. ಹಿಂದೆ ಇದ್ದ ನಾಟಕಗಳನ್ನು ಸಂಗೀತನಾಟಕಗಳೆಂದು ಗುರುತಿಸಬೇಕಾದ ಅಗತ್ಯ ಅಂದಿಗೆ ಇದ್ದಂತಿಲ್ಲ. ಏಕೆಂದರೆ ನಾಟಕವೊಂದರಲ್ಲಿ ಅಭಿನಯ ಹಾಗೂ ಸಂಗೀತಗಳು ಅವಿಭಾಜ್ಯ ಅಂಗಗಳಾಗಿದ್ದವು. ಆದರೆ ಕ್ರಮೇಣ ಸಂಗೀತವೇ ಪ್ರಧಾನವಾಗಿ ಅಭಿನಯಾದಿಗಳೆಲ್ಲ ಇದರೊಂದಿಗೆ ಸೇರಿಸುವ ಪರಿಪಾಠ ರೂಢಿಯಾದಂತೆ ಸಾಮಾನ್ಯ ನಾಟಕಗಳಿಂದ ಇವು ಬೇರ್ಪಟ್ಟು, ಸಂಗೀತ ನಾಟಕಗಳೆಂದು ಗುರುತಿಸುವ ರೂಢಿ ಮೊದಲಾಯಿತು. ಪಾಶ್ಚಾತ್ಯರ ಅಪೇರಾ (Opera) ಎಂಬ ಪದಕ್ಕೆ ಸರಿಸಮನಾಗಿ ಇಂದು ನಮ್ಮಲ್ಲಿ ಗೀತನಾಟಕ ಎನ್ನುವ ವಾಡಿಕೆಯಿದೆ. ವಾಸ್ತವವಾಗಿ Opera ಎಂಬ ಪದವು Opus ಎಂಬ ಲ್ಯಾಟಿನ್ ಪದದಿಂದ ಮೂಡಿಬಂದುದು. ಅಲ್ಲದೆ ಇಟಾಲಿಯನ್ನರ Opera in Musica (Musical work) ಎಂಬುದರ ಸಂಕ್ಷಿಪ್ತ ರೂಪವಿದು.[೨]

ನಮ್ಮ ದೇಶದಲ್ಲಿ ಮೊದಲಿಗೆ ಗದ್ಯರೂಪದ ನಾಟಕಗಳು ಸೃಷ್ಟಿಗೊಂಡು ಅನಂತರ ಗೀತನಾಟಕಗಳ ಸೃಷ್ಟಿಯಾಗಿದೆ. ಗೀತನಾಟಕಗಳನ್ನು ರಚಿಸಲು ರಚನಕಾರನಿಗೆ ವಿಶೇಷ ಅರ್ಹತೆಗಳು ಅವಶ್ಯ. ಆತನಿಗೆ ನಾಟಕಕಾರನ ಕಥನಕೌಶಲ, ಪಾತ್ರನಿರ್ಮಾಣ ಚತುರತೆ, ಜೀವನವನ್ನು ಹೊಕ್ಕಿ ನೋಡಿ ಅದರ ಸುಖ-ದುಃಖಗಳನ್ನು ಗ್ರಹಿಸಿ ಸೂಕ್ತ ರೀತಿಯಲ್ಲಿ ಪುನರ್ನಿರ್ಮಾಣ ಮಾಡುವ ಕೌಶಲ, ಸಾಹಿತ್ಯಜ್ಞಾನ, ಪುರಾಣಪ್ರಜ್ಞೆ, ವೇದಾಂತವಿಷಯ, ಕವಿತಾಶಕ್ತಿ ಅಷ್ಟಲ್ಲದೆ ಸಂಗೀತದ ಪರಿಪೂರ್ಣ ಅರಿವು ಅರ್ಥಾತ್ ರಾಗರಸಗಳ ಪರಿವೆ, ತಾಳಜ್ಞಾನ, ಸಂದರ್ಭೋಚಿತ ಸ್ವರ ಸಂಯೋಜನಾ ಸಾಮರ್ಥ್ಯಗಳೆಲ್ಲವೂ ಅತ್ಯಗತ್ಯ ಅರ್ಹತೆಗಳಾಗುತ್ತವೆ. ಇಷ್ಟೆಲ್ಲಾ ಅಗತ್ಯಗಳನ್ನು ಪೂರೈಸಬಲ್ಲ ಪ್ರತಿಭಾವಂತರು ಅತಿ

ವಿರಳ. ಈ ಕಾರಣದಿಂದಲೇ ನಮ್ಮಲ್ಲಿ ಗೀತನಾಟಕಗಳ ಸಂಖ್ಯೆ ಅತಿ ಕಡಿಮೆ. ಇಂತಹ ಅಪೇಕ್ಷಿತ ಅರ್ಹತೆಗಳೆಲ್ಲವನ್ನೂ ಹೊಂದಿ ನಾಟಕ ರಚಿಸಿರುವ ತ್ಯಾಗರಾಜರನ್ನು 'ಗೀತನಾಟಕ ಮಾರ್ಗದರ್ಶಿ' ಎನ್ನುವುದುಂಟು.

ಪ್ರಸ್ತುತ ತ್ಯಾಗರಾಜರ ಕಾಲಕ್ಕಿಂತ ಮುಂಚಿತವಾಗಿಯೇ ಪ್ರಾಂತೀಯ ಭಾಷೆಗಳಲ್ಲಿ ಗೀತನಾಟಕಗಳು ರೂಪುಗೊಂಡಿದ್ದವು. ತ್ಯಾಗರಾಜರ ಕಾಲದಲ್ಲಿ ಮೇರಟ್ಟೂರು ಮತ್ತು ತಂಜಾವೂರಿನ ಕೆಲವು ಹಳ್ಳಿಗಳಲ್ಲೂ, ದೇವಸ್ಥಾನಗಳಲ್ಲೂ ಸಂಗೀತ ಮತ್ತು ನೃತ್ಯ ನಾಟಕಗಳು ಪ್ರದರ್ಶಿತಗೊಳ್ಳುತ್ತಿದ್ದವು. ತ್ಯಾಗರಾಜರು ಇವುಗಳಿಂದ ಪ್ರಭಾವಿತರಾಗಿ ಭಕ್ತಿ ಮತ್ತು ಶರಣಾಗತಿಗಳ ಹಿರಿಮೆಯನ್ನು ಸಾರುವಂತೆ ಕೆಲವು ಗೀತನಾಟಕಗಳನ್ನು ರಚಿಸಿದ್ದಾರೆ. ಇವು ಸೀತಾರಾಮ ವಿಜಯ, ನೌಕಾಚರಿತ್ರೆ ಹಾಗೂ ಪ್ರಹ್ಲಾದ ಭಕ್ತಿ ವಿಜಯಗಳು. ಪ್ರಾಚೀನವಾದ ಗ್ರಂಥವೊಂದರಲ್ಲಿ ಪ್ರಹ್ಲಾದ ಭಕ್ತಿವಿಜಯ ಹಾಗೂ ನೌಕಾಚರಿತ್ರೆಗಳು ತ್ಯಾಗರಾಜರ ರಚನೆಗಳಲ್ಲ. ಆದರೂ ಈ ರಚನೆಗಳಲ್ಲಿ ಅಲ್ಲಲ್ಲಿ ತ್ಯಾಗರಾಜರ ಕೀರ್ತನೆಗಳು ಸೇರಿಕೊಂಡಿವೆ ಎಂಬ ಅಪರೂಪವಾದ ಅಭಿಪ್ರಾಯ ವೊರೆದು ಕಾಣಬರುತ್ತದೆ.[೬] ಮತ್ತೆ ಕೆಲವು ಗ್ರಂಥಗಳ ಪ್ರಕಾರ ತ್ಯಾಗರಾಜ ವಿರಚಿತ ನಾಟಕಗಳು ಎರಡು.[೭] ಅವು ನೌಕಾಚರಿತ್ರೆ ಮತ್ತು ಪ್ರಹ್ಲಾದ ಭಕ್ತಿವಿಜಯವೆಂದರೆ ಇನ್ನು ಕೆಲವು ಮೇಲೆ ಹೆಸರಿಸಿರುವ ಮೂರು ನಾಟಕಗಳನ್ನೂ ತ್ಯಾಗರಾಜ ವಿರಚಿತವೆನ್ನು ತ್ತವೆ.[೮] ತ್ಯಾಗರಾಜರು ತಮ್ಮ ನಾಟಕಗಳನ್ನು ನಿಖರವಾಗಿ 'ಗೀತನಾಟಕ'ಗಳೆಂದು ಸಂಬೋಧಿಸುವುದಿಲ್ಲ. ಆದರೆ ರಾಗತಾಳಗಳೊಂದಿಗೆ, ಸುಸಂಸ್ಕೃತ ಅಭಿನಯದೊಂ ದಿಗೆ ನಡೆಸಬೇಕಾದ ನಾಟಕ ಎಂದು ಪ್ರಹ್ಲಾದ ಭಕ್ತಿವಿಜಯದಲ್ಲಿ ನಿರೂಪಿಸುತ್ತಾರೆ. ಇವರ ನಾಟಕಗಳ ಭಾಷೆ ಪ್ರಧಾನವಾಗಿ ತೆಲುಗು. ಅಲ್ಲಲ್ಲಿ ಸಂಸ್ಕೃತದ ಶ್ಲೋಕಗಳೂ, ಉಲ್ಲೇಖಗಳೂ ಕಾಣಬರುತ್ತವೆ. ಅವರ 'ನೌಕಾಚರಿತ್ರೆ'ಯು ವಿಷ್ಣುವಿನ ಅವತಾರ ಗಳಲ್ಲಿ ಒಂದಾದ ಕೃಷ್ಣಾವತಾರವನ್ನು ಪ್ರಸ್ತುತ ಪಡಿಸಿದರೆ 'ಪ್ರಹ್ಲಾದಭಕ್ತಿವಿಜಯ'ವು ನೃಸಿಂಹ ಅವತಾರವನ್ನು ಕುರಿತದ್ದು. ಆದರೆ ಈ ನಾಟಕದಲ್ಲಿ ಅವರು ರಾಮ-ಕೃಷ್ಣ-ನೃಸಿಂಹನೆಂಬ ದೈವಾವತಾರಗಳಲ್ಲಿ ಭೇದ ಕಾಣುವುದಿಲ್ಲ. ಅವರ ಪ್ರಕಾರ ಶಿವ-ರಾಮ-ಕೃಷ್ಣರೆಲ್ಲ ಒಂದೇ. ಇದೇ ಅರ್ಥದಲ್ಲೇ ಅವರು ಬಿಡಿಕೃತಿಯೊಂದರಲ್ಲಿ ವೈವಿಧ್ಯಮಯ ವಾಗಿ ಊಟ ಮಾಡುವವರಿಗೆ ತೃಪ್ತಿಯಾಗುವಂತೆ ಎನ್ನುತ್ತಾರೆ. (ವಗವಗಗಾ ಭುಜಿ ಯಂಚೇವಾರಿಕಿ ತೃಪ್ತಿಯೌ ರೀತಿ-ಅನುರಾಗಮುಲೇನಿ-ಸರಸ್ವತಿ) ಸಂಗೀತ ಸಾಹಿತ್ಯಗಳ ಸಮ್ಮಿಶ್ರರೂಪವಾದ ಈ ನಾಟಕಗಳಲ್ಲಿ ತ್ಯಾಗರಾಜರ ಕವಿತಾ ಪ್ರೌಢಿಮೆ ಮತ್ತು ಸಂಗೀತ ಪಾಂಡಿತ್ಯಗಳು ಮೆರೆದಿವೆ. ಸಂಗೀತವು ಅತಿ ಪರಿಣಾಮಕಾರೀ ಮಾಧ್ಯಮ ವಾಗಿದ್ದು ಸರಳವಾದ ಹಾಗೂ ಪ್ರೌಢವಾದ ಧಾತು ಸಂಯೋಜನೆ ಇವುಗಳಲ್ಲಿ ಕಾಣಬರುತ್ತದೆ. ಚಿಟ್ಟೆಸ್ವರದಂಥ ಅಲಂಕಾರಗಳು ರಚನೆಗಳಲ್ಲಿ ಕಾಣಬರುವುದಿಲ್ಲ. ಸಂಗತಿಗಳು ಅಳವಟ್ಟಿದ್ದರೂ ಅವುಗಳ ಸಂಖ್ಯೆ ಅತಿ ಕಡಿಮೆಯಿದೆ. ಈ ನಾಟಕಗಳಲ್ಲಿ ವಿದೂಷಕನ ಪಾತ್ರ ಕಾಣಬರುವುದಿಲ್ಲ. ಈ ನಾಟಕಗಳನ್ನು ಗಾಯನ ಮಾಡದೆ

ಹಾಗೆಯೇ ಓದಿದಾಗಲೂ ಅವುಗಳ ಸೊಗಸೇನೂ ಕಡಿಮೆಯಾಗುವುದಿಲ್ಲ. ಆದರೆ ಹಾಡು, ಅಭಿನಯಗಳೊಂದಿಗೆ ಪ್ರದರ್ಶಿತವಾದಾಗ ಹೆಚ್ಚು ಪರಿಣಾಮಕಾರಿ ಎಂಬುದು ಸರ್ವವಿದಿತ. ತ್ಯಾಗರಾಜರು ಈ ನಾಟಕದ ಹಾಡುಗಳಿಗೆ ಮಾತ್ರ ರಾಗಗಳನ್ನು ನಿಯೋಜಿಸದೆ ಹಲವು ಪದ್ಯಗಳಿಗೂ ರಾಗಗಳನ್ನು ಸೂಚಿಸಿದ್ದಾರೆ.[೬] ಹೀಗಾಗಿ ತ್ಯಾಗರಾಜರ ಈ ನಾಟಕಗಳು ರಂಗದಲ್ಲಿ ಪ್ರದರ್ಶನಕ್ಕೂ ಹರಿಕಥಾಕಾಲಕ್ಷೇಪಕ್ಕೂ ಹೊಂದಿಕೊಳ್ಳುವಂತಿವೆ. ಈ ನಾಟಕಗಳ ವಿವರವಾದ ಅಧ್ಯಯನವನ್ನು ಮುಂದೆ ಮಾಡಲಾಗಿದೆ.

**ಸೀತಾರಾಮ ವಿಜಯ** : ತ್ಯಾಗರಾಜರ ಮೂರು ನಾಟಕಗಳ ಪೈಕಿ ಒಂದಾದ ಗೀತನಾಟಕವಿದು. ಇಲ್ಲಿನ ಕಥೆ ಉತ್ತರ ರಾಮಾಯಣಕ್ಕೆ ಸಂಬಂಧಿಸಿದೆ. ಇದರಲ್ಲಿ ಶ್ರೀರಾಮನು ತನ್ನ ಸಹೋದರ ಶತ್ರುಘ್ನನಿಗೆ ಯುದ್ಧಧರ್ಮದ ಮೇಲೆ ಉಪನ್ಯಾಸವೊಂದನ್ನು ನೀಡಿದಂತೆಯೂ, ಶ್ರೀರಾಮನ ಭಾವಮೈದುನನಾಗಿ ಕಲ್ಪಿತಗೊಂಡ ಲಕ್ಷ್ಮೀನಿಧಿಯೆಂಬ ಪಾತ್ರವೊಂದು ಸಲಿಗೆಯಿಂದ ಶ್ರೀರಾಮನನ್ನು ಹಾಸ್ಯಮಾಡಿದಂತೆಯೂ ಕಥಾವಸ್ತುವಿದೆಯೆಂಬುದು ಪರಿಣತರ ಅಭಿಪ್ರಾಯ. ಅಂತೆಯೇ 'ಮಾಜಾನಕಿ ಚೆಟ್ಟಬಟ್ಟಗ' (ಕಾಂಬೋಜಿ) ರಚನೆಯು ಈ ನಾಟಕದಲ್ಲಿನದು ಎನ್ನುತ್ತಾರೆ. ೧೮೬೮ರಲ್ಲಿ ಲೋಕನಾರಾಯಣಶಾಸ್ತ್ರಿ ಎಂಬುವರಿಂದ ಪ್ರಚುರಗೊಂಡ ಈ ನಾಟಕದ ಒಂದೇ ಒಂದು ಪ್ರತಿಯೂ ಇದೀಗ ಉಪಲಬ್ಧವಿಲ್ಲ.[೭]

**ನೌಕಾಚರಿತ್ರೆ** : ಶ್ರೀಕೃಷ್ಣ ಗೋಪಿಯರು ಯಮುನಾನದಿಯಲ್ಲಿ ನೌಕಾವಿಹಾರ ಮಾಡಿದುದು, ಮಾರ್ಗಮಧ್ಯೆ ಗೋಪಿಯರು ಗರ್ವಿತರಾಗಿ ಶ್ರೀಮನ್ನಾರಾಯಣನಾದ ದೇವರನ್ನೇ ಜರಿಯುವುದು, ಅವರ ಅಹಂಕಾರವೆಂಬ ಅಜ್ಞಾನವನ್ನು ತೊಲಗಿಸಿ ಪೂರ್ಣ ಶರಣಾಗತಿ ತತ್ವವನ್ನು ಬೋಧಿಸಿ, ತನ್ನ ದಿವ್ಯದರ್ಶನದೊಂದಿಗೆ ಅವರನ್ನು ರಕ್ಷಿಸುವುದು ನೌಕಾಚರಿತ್ರೆಯ ಕಥಾವಸ್ತು.

ಹಿಂದೆ ಭಾರತದ ವಿವಿಧ ಭಾಗಗಳ ಭಜನ ಸಂಪ್ರದಾಯದಲ್ಲಿ ಬೇರೆ ಬೇರೆ ಪಂಥಗಳ ನಡುವೆ ಸಂಪರ್ಕವಿದ್ದಿತು. ಅಸ್ಸಾಮಿನ ಶಂಕರದೇವ, ಬಂಗಾಳದ ಚೈತನ್ಯ ಪಂಥಗಳು ಒಂದೆಡೆ, ದಾಕ್ಷಿಣಾತ್ಯ ಪಂಥಗಳು ಮತ್ತೊಂದೆಡೆ ಇದ್ದು ಇವುಗಳ ನಡುವೆ ಕೊಡುವ-ಕೊಳ್ಳುವ ಸಂಪ್ರದಾಯವಿದ್ದಿತು. ಹೀಗೆ ಬಂಗಾಳದ ವೈಷ್ಣವ ಸಾಹಿತ್ಯದಲ್ಲಿ ಚಿರಪರಿಚಿತವಾಗಿದ್ದ ನೌಕಾವಿಹಾರ ಅಥವಾ ನಾವ್‌ವಿಹಾರ್ ಕಥಾವಸ್ತುವಿನಿಂದ ಪ್ರಭಾವಿತರಾಗಿ ತ್ಯಾಗರಾಜರು ನೌಕಾಚರಿತ್ರೆಯನ್ನು ರಚಿಸಿರಬಹುದು.[೮] ಭಾಗವತದಲ್ಲಿ ರಾಸ ಕ್ರೀಡೆ, ಜಲಕ್ರೀಡೆಗಳೆರಡೂ ಪ್ರಸಿದ್ಧವಾದರೂ ನೌಕಾಕ್ರೀಡೆ ಅಲ್ಲಿ ಕಾಣಬರದು. ನೌಕಾಚರಿತ್ರೆಯಲ್ಲಿ ರಾಸಲೀಲೆ ಮತ್ತು ವಸ್ತ್ರಾಪಹರಣ ಪ್ರಸಂಗಗಳೆರಡೂ ಧ್ವನಿಸಿವೆ. ತ್ಯಾಗರಾಜರು ಉತ್ತರ ಭಾರತದಲ್ಲಿ ಪ್ರವಾಸ ಮಾಡಿದ್ದರೋ ಇಲ್ಲವೋ ತಿಳಿಯದು. ಆದರೆ ಯಮುನಾನದಿ, ಗೋಪಿಯರ ವಸ್ತ್ರಾಭರಣ ವರ್ಣನೆಯನ್ನು ನೋಡಿದರೆ ಅವರಿಗೆ ಅಲ್ಲಿನ ಜನಜೀವನದ ಸಂಸ್ಕೃತಿಯ ಪರಿಚಯ ಇದ್ದಂತೆನಿಸುತ್ತದೆ.

ನೌಕಾಚರಿತ್ರೆಯು ಏಕಾಂಕನಾಟಕ. ನಾಟಕದಲ್ಲಿ ಒಟ್ಟಾರೆ ೨೧ ಹಾಡುಗಳು, ೨೪

ಕಂದಪದ್ಯಗಳು ೫ ಸೀಸಪದ್ಯಗಳು, ೨ ದ್ವಿಪದಿ, ೩ ಉತ್ಪಲಮಾಲಾ, ೫ ಚಂಪಕಮಾಲಾ, ೭ ಶಾರ್ದೂಲ ವಿಕ್ರೀಡಿತ, ೧ ಉತ್ಸಾಹ ಹಾಗೂ ವಚನಭಾಗಗಳು ಕಾಣಬರುತ್ತವೆ. ಪ್ರಹ್ಲಾದ ಭಕ್ತಿವಿಜಯ ನಾಟಕಕ್ಕಿಂತ ಕಿರಿದಾದ ಈ ನಾಟಕದ ಅಂತಃಸತ್ವ ಶೃಂಗಾರ ಮಿಳಿತ ಭಕ್ತಿಯಾಗಿದೆ.

ನೌಕಾಚರಿತ್ರೆಯು ಗಣಪತಿ ಸ್ತುತಿಯೊಂದಿಗೆ ಪ್ರಾರಂಭವಾಗುತ್ತದೆ. ಅನಂತರ ಸರಸ್ವತಿ, ಗುರುಗಳಾದ ನಾರದರು ಹಾಗೂ ರಾಮಕೃಷ್ಣಮೋದಾಖ್ಯರಿಗೆ ಹಾಗೂ ಭೂಲೋಕದ ಸತ್ಕವಿಗಳಿಗೆಲ್ಲಾ ತ್ಯಾಗರಾಜರ ನಮನ ಸಲ್ಲುತ್ತದೆ. ಆರಂಭದ ಕಂದ ಪದ್ಯಗಳಲ್ಲೇ ತ್ಯಾಗರಾಜರು ತಾವು ಶ್ರೀಕೃಷ್ಣನ ಮೇಲೆ ಈ ಕೃತಿಯನ್ನು ಹಾಡಲಿರುವ ರೆಂದು ತಿಳಿಸಿ ಶ್ರೀರಘುರಾಮನು ತಮ್ಮ ಈ ಕಾವ್ಯವನ್ನು ಆಲಿಸಬೇಕೆಂದು ಪ್ರಾರ್ಥಿಸು ತ್ತಾರೆ.

**ಕೃಷ್ಣದೇವುನಿಪ್ಯೆ ನೇ ಲಲಿತಮುಗಾ ರಚಿಯಿಂಚಿತಿ . . . .**
**ನೌಕಾಚರಿತ್ರ ಮೊನರ್ಚೆದ ಶ್ರೀಕಾಂತಾ ಚಿತ್ತಗಿಂಪು ಶ್ರೀರಾಮಾ**

ತ್ಯಾಗರಾಜರ ದೃಷ್ಟಿಯಲ್ಲಿ ರಾಮ, ಕೃಷ್ಣರೇನೂ ಬೇರೆಯಲ್ಲ. ಇವರೆಲ್ಲ ಪರ ಬ್ರಹ್ಮರೇ. ಅವರು ತಮ್ಮ ಈ ನಾಟಕವನ್ನು ಪರಬ್ರಹ್ಮಸ್ವರೂಪನಾದ ದೇವರಿಗೇ ಸಮರ್ಪಣೆ ಮಾಡುತ್ತಾ ಅದನ್ನು ಶ್ರವಣಮಾಡಬೇಕೆಂದು ಆತನಲ್ಲೇ ಪ್ರಾರ್ಥಿಸಿ ದ್ದಾರೆ.

ಕಥೆಯ ಆರಂಭದಲ್ಲಿ ಶ್ರೀಕೃಷ್ಣನು ತನ್ನ ಕೈತುಂಬ ಮುತ್ತುಗಳನ್ನು ಹಿಡಿದು ಅದನ್ನು ಕೊಟ್ಟು ಯಗಚಿ ಹಣ್ಣುಗಳನ್ನು ತೆಗೆದುಕೊಳ್ಳುವವನಾಗಿದ್ದಾನೆ. ಕೃಷ್ಣನ ಸುಂದರವಾದ ಮುಖವನ್ನು ನೋಡಿದ ಗೋಪಿಯರು ಆತನ ವೇಣುಗಾನದಿಂದ ಮರುಳಾಗಿ ಪ್ರಣಯಾಕಾಂಕ್ಷಿಗಳಾಗಿ ಆತನನ್ನು ಸೇರುವ ಹೆಬ್ಬಯಕೆ ಹೊಂದಿ ತಮ್ಮ ಸರ್ವಸ್ವವನ್ನೂ ಆತನಿಗರ್ಪಿಸುವ ಕುತೂಹಲದಿಂದ ಹೊರಟಂತಿದೆ. ಪ್ರತಿಯೊಬ್ಬ ಗೋಪಿಯೂ ತನ್ನ ಚಿತ್ತವೃತ್ತಿಗೆ ಅನುಗುಣವಾಗಿ ಅಲಂಕರಿಸಿಕೊಳ್ಳುತ್ತಿರುವಂತೆ ಮೇಲ್ನೋಟಕ್ಕೆ ತೋರಿ ದರೂ, ರಾಗದ್ವೇಷಗಳಿಂದ ಕೂಡಿದ ಚಿತ್ತವೃತ್ತಿ ಅದಲ್ಲ ಎಂಬುದಿಲ್ಲಿ ಗಮನಿಸಬೇಕಾದ ಅಂಶ (ಶೃಂಗಾರಿಂಚುಕೊನಿ ವೆಡಲಿರಿ - ಸುರುಟಿ).

ಕೃಷ್ಣನನ್ನು ಸೇರಿದ ಗೋಪಿಯರು ಉತ್ಸಾಹಭರಿತರಾಗಿ ಯಮುನಾ ನದಿಯನ್ನೂ, ಅದರಲ್ಲಿದ್ದ ಕೆಂಪು ತಾವರೆಗಳನ್ನೂ, ಹಂಸಗಳ ಗಾನವನ್ನೂ, ಅಲ್ಲಲ್ಲಿ ಕಾಣುತ್ತಿದ್ದ ಖರ್ಜೂರ, ದ್ರಾಕ್ಷಾಫಲಗಳನ್ನೂ ವಿವಿಧ ಪುಷ್ಪಗಳ ತರುಲತೆಗಳನ್ನೂ, ಜೋಡಿ ಗಿಳಿ ಗಳನ್ನೂ, ಕೋಗಿಲೆಗಳ ಸುಮಧುರ ಸಂಗೀತವನ್ನೂ, ಮಂದಮಾರುತವನ್ನೂ ವರ್ಣಿ ಸುತ್ತಾ ಕೃಷ್ಣನೊಂದಿಗೆ ಕೋಲಾಟವಾಡುತ್ತಾರೆ (ಚೂಡರೇ ಚೆಲುಲಾರ ಯಮುನಾ ದೇವಿ ಸೊಗಸೆಲ್ಲ-ಪಂತುವರಾಳಿ). ಇಂತಹ ಪ್ರಕೃತಿಯ ಸುಮಧುರ ವಾತಾವರಣ ಗೋಪಿಯರಿಗೆ ಶೃಂಗಾರ ಉದ್ದೀಪಕವಾಗಿದೆ.

ಇದೇ ಸಮಯದಲ್ಲಿ ಹರಿಯುವ ಯಮುನೆಯ ದಡದಲ್ಲಿ ತೇಲಿಬಂದ ರಜತ ನೌಕೆ

ಯೊಂದು ಗೋಪಿಯರ ದೃಷ್ಟಿಗೆ ಬೀಳುತ್ತದೆ. ಸಂತೋಷಸಲ್ಲಾಪದಲ್ಲಿ ತೊಡಗಿದ್ದ ಗೋಪಿಯರು ಅದನ್ನು ಕಾಣುತ್ತಲೇ ನೌಕಾವಿಹಾರವನ್ನೂ, ಜಲಕ್ರೀಡೆಯನ್ನೂ ಕೈಗೊಳ್ಳಬೇಕೆಂದು ಆಶಿಸುತ್ತಾರೆ. ಆಗ ತಮ್ಮೊಡನೆ ಅಲ್ಲೇ ಇದ್ದ ಕೃಷ್ಣನನ್ನು ವಿಹಾರಕ್ಕೆ ಕರೆದೊಯ್ಯುವುದೋ, ಬೇಡವೋ ಎಂಬ ಸಂದಿಗ್ಧತೆ ಗೋಪಿಯರಿಗೆ ಉಂಟಾಗುತ್ತದೆ. ಆದರೆ ಮನದಾಳದಲ್ಲಿ ಕೃಷ್ಣನನ್ನೂ ತಮ್ಮೊಂದಿಗೆ ಕರೆದೊಯ್ಯಬೇಕೆಂಬ ಹಂಬಲ ಅವರದು. ಹೀಗಾಗಿ ಅವರು ಹೀಗೆ ಯೋಚಿಸುತ್ತಾರೆ. 'ಕೃಷ್ಣನು ಇನ್ನೂ ಚಿಕ್ಕ ಬಾಲಕ ಆದ್ದರಿಂದ (ನೀರನ್ನು ಕಂಡು) ಭಯಪಡುವನೇನೋ ? ಅಲ್ಲದೆ ಆತ ರಾಜಕುಮಾರನಾದುದರಿಂದ ಮೈತುಂಬ ಆಭರಣಗಳನ್ನು ಧರಿಸಿದ್ದಾನೆ. ಕರೆದೊಯ್ದರೆ ಒಂದು ರೀತಿ, ಕರೆದೊಯ್ಯದಿದ್ದರೆ ಮತ್ತೊಂದು ರೀತಿ ನಮಗೆ ಅಪಖ್ಯಾತಿ ಬರುತ್ತದೆ. ಈಗೇನು ಮಾಡುವುದು ? ಈತನನ್ನು ಬಿಟ್ಟುಹೋದರೆ ನಮಗಾದರೂ ಸುಖವುಂಟೇ ? ಈತನ ಸಹಾಯವಿಲ್ಲದೆ ನಾವು ವಿಹಾರಮಾಡಿ ದಡ ಮುಟ್ಟಲು ಸಾಧ್ಯವೇ ?' ಎಂದು ಚಿಂತೆಗೊಳಗಾಗುತ್ತಾರೆ.

ಬಾಲುಡು ಅದಿಗಾಕ ಮಹೀಪಾಲುನಿ ತನಯುಡು ಮೇನ ಬಂಗರುಸೊಮ್ಮುಲ್
ಚಾಲ ಧರಿಂಚಿನವಾಡೇ . . . . .

(ಕಂದ ಪದ್ಯ)

ರಾಜಕುಮಾರುಡು ವೀಡು ನವರತ್ನ ಸೊಮ್ಮುಲು ಪೆಟ್ಟಿನಾಡು
ಪಸಿಬಿಡ್ಡಗಾದಟವಮ್ಮ ವೀಡು ಭಯಪಡುನೋ ತೆಲಿಯದಮ್ಮ
ಕಮಲ ನೇತ್ರುನಿ ಬಾಸಿ ಸುಖಮಾ ಓಡ ಗಟ್ಟುಜೇರ್ಪ ಮನತರಮಾ

(ಆಡವಾರಮೆಲ್ಲಗೂಡಿ-ಯದುಕುಲಕಾಂಬೋಜಿ)

ಗೋಪಿಯರ ವಾದತರ್ಕವನ್ನು ಕೇಳಿದ ಶ್ರೀಕೃಷ್ಣನು ಅವರೊಡನೆ ಹೊರಡಲಿರುವ ತನ್ನ ನಿರ್ಧಾರವನ್ನು ತಾನಾಗಿಯೇ ವ್ಯಕ್ತಪಡಿಸುತ್ತಾನೆ. ಪುರುಷನೊಬ್ಬನ ರಕ್ಷಣೆಯಿಲ್ಲದೆ ತರುಣಿಯರು ನೌಕಾವಿಹಾರ ಹೊರಡುವುದು ಕ್ಷೇಮಕರವಲ್ಲವೆಂದು ಎಚ್ಚರಿಸುತ್ತಾನೆ. ಆದರೆ ಅಜ್ಞಾನಿಗಳಾಗಿದ್ದ ತರುಣಿಯರು ಆತನ ಮಾತನ್ನು ನಿರ್ಲಕ್ಷಿಸುತ್ತಾರೆ. ಅಲ್ಲದೆ ಆತ ನಂಬಲರ್ಹನಲ್ಲವೆಂದೂ ಹಿಯ್ಯಾಳಿಸುತ್ತಾರೆ. ತಾವು ಕಾಳಿಂದೀ ನದಿಯಲ್ಲಿ ಮೀಯುತ್ತಿದ್ದಾಗ ತಮ್ಮ ವಸ್ತ್ರಗಳನ್ನು ಅಪಹರಿಸಿದ, ತಿಲಕವಿಡಲು ಬಂದ ಗೋಪಿಯ ಅಧರಗಳನ್ನು ಕಚ್ಚಿದ, ಬೆಣ್ಣೆಯನ್ನು ತಾನೇ ತಿಂದು ಇತರರ ಮುಖಕ್ಕೂ ಬಳಿದ ಆತನ ಮೋಸದ ಕಾರ್ಯಗಳನ್ನು ಪಟ್ಟಿಮಾಡುತ್ತಾರೆ. ಇದಕ್ಕೆ ಉತ್ತರಿಸುವಂತೆ ಶ್ರೀಹರಿಯು ಭಕ್ತ ರಕ್ಷಣೆಗಾಗಿ ತಾನೆಸಗಿದ ಪ್ರಸಂಗಗಳನ್ನು ಪ್ರಕಟಪಡಿಸುತ್ತಾ 'ಈ ಯಮುನಾ ನದಿಯನ್ನೇ ಅಲ್ಲ, ಹುಟ್ಟು ಸಾವುಗಳೆಂಬ ಸಂಸಾರ ಸಾಗರವನ್ನೂ ಹರಿಸಬಲ್ಲ ಮಾಧವ ತಾನು' ಎಂದು ನುಡಿಯುತ್ತಾನೆ. ನಿರ್ದಯರಾಗಿ ತನ್ನ ಮೇಲೆ ಇಂಥ ಆರೋಪಗಳನ್ನು ಮಾಡುವುದು ಸರಿಯಲ್ಲವೆನ್ನುತ್ತಾನೆ (ಏಮೇಮೋ ತೆಲಿಯಕ ಬಲಿಕೇರು ಚೆಲುಲಾರ ನಾಮೀದ ದಯಲೇಕ-ಸೌರಾಷ್ಟ್ರ).

**ಈ ನದಿನೇಕಾದು ಜಲನಿಧಿಗಾನನಿ ಭವವಾರ್ಧಿನಿಪುಡು ಕಡುವೇಗಮುನನ್**
**ಮಾನಿನುಲಾರ ಸುರಾಸುರ ಮಾನವುಲ ದರಿಂಪಜೇಯು ಮಾಧವುಗಾನೇ**

(ಕಂದ ಪದ್ಯ)

ಭಕ್ತ ಸಂರಕ್ಷಣೆಯ ತನ್ನ ಸ್ವಭಾವವನ್ನು ದೇವರು ಹೀಗೆ ಸ್ಪಷ್ಟಪಡಿಸುತ್ತಾನೆ. ಅವರ ಆಕ್ಷೇಪಗಳೆಲ್ಲವನ್ನೂ ಪ್ರಿಯವಚನಗಳಾಗಿಯೇ ಸ್ವೀಕರಿಸುತ್ತಾನೆ.

ಕೃಷ್ಣಾಷ್ಟೋತ್ತರ ಶತನಾಮಗಳಲ್ಲಿ ಒಂದು 'ಜಲಕ್ರೀಡಾ ಸಮಾಸಕ್ತ ಗೋಪೀ ವಸ್ತ್ರಾಪಹಾರಕಃ' ಎಂಬುದು. ಜಲ ಶಬ್ದದಲ್ಲಿ 'ಜ' ಎಂದರೆ ಹುಟ್ಟು, 'ಲ' ಎಂದರೆ ಲಯವೆಂದರ್ಥ. ಹುಟ್ಟುಸಾವುಗಳಿಂದ ಕೂಡಿರುವುದಕ್ಕೆ ಸಂಸಾರವೆಂದು ಹೆಸರು. ಈ ಸಂಸಾರದಲ್ಲಿ ಸಿಕ್ಕಿಬಿದ್ದಿರುವವರೇ ಜಲಕ್ರೀಡಾ ಸಮಾಸಕ್ತರು. ಅರ್ಥಾತ್ ಜೀವಾತ್ಮರು.

ಇನ್ನು, ಗೋಪಿ ಎಂಬಲ್ಲಿ 'ಗೋ' ಎಂದರೆ ವಿದ್ಯೆಯೆಂದೂ 'ಪಿ' ಎಂದರೆ ಜ್ಞಾನ ವೃದ್ಧಿಯೆಂದೂ ಅರ್ಥ. ಎಂದರೆ ಗೋಪೀಶಬ್ದವು ಜ್ಞಾನಸಾಧನೆಯಲ್ಲಿ ತೊಡಗಿರುವವ ರನ್ನು ಸೂಚಿಸುತ್ತದೆ. 'ವಸ್ತ್ರ' ಎಂಬ ಶಬ್ದವು 'ವಸ್ ಆಚ್ಛಾದನೆ' ಎಂಬ ಧಾತುವಿನಿಂದ 'ಮರೆಮಾಚು' ಎಂದರ್ಥ ನೀಡುತ್ತದೆ. ಒಟ್ಟಾರೆ ಸಂಸಾರದಲ್ಲಿ ಸಿಕ್ಕಿಬಿದ್ದಿರುವವರ ಮತ್ತು ಜ್ಞಾನಸಾಧನೆಯಲ್ಲಿ ತೊಡಗಿರುವವರ 'ಅವಿದ್ಯೆ'ಯೆಂಬ ಆಚ್ಛಾದನೆಯನ್ನು ತೊಡೆದುಹಾಕುವವನು ಶ್ರೀಕೃಷ್ಣನೆಂಬುದು ಮೇಲಿನ ನಾಮದ ಅರ್ಥ ವಿವರಣೆ. ಇದೇ ಸಾರವನ್ನೇ ತ್ಯಾಗರಾಜರು ಮೇಲಿನ ಕಂದಪದ್ಯದಲ್ಲಿ ಸ್ವಲ್ಪ ವ್ಯತ್ಯಾಸದೊಂದಿಗೆ ಸೂಚಿಸಿ ದ್ದಾರೆ.

ಗೋಪಿಯರು ಭಾವಜಜನಕನ ಮಾತುಗಳನ್ನು ದಿಟವೆಂದು ಈಗ ಅರಿಯುತ್ತಾರೆ. ಕೃಷ್ಣನೊಂದಿಗೆ ವಿಹರಿಸುವ ಪುಣ್ಯ ಲಭ್ಯವಾದ ಆನಂದದಲ್ಲಿ ಮತ್ತೇನನ್ನೂ ಅವರು ಗಣಿಸುವುದಿಲ್ಲ (ಓಡನು ಜರಿಪೆ ಮುಚ್ಚಟಗನರೇ-ಸಾರಂಗ). ಆದರೆ ಆ ಕ್ಷಣದಲ್ಲೂ ಅವರು ಹರಿಕೀರ್ತನಾಸಕ್ತರಾಗಿದ್ದಾರೆ. ಗೋಪಿಯರ ನಿಜಪ್ರೇಮವನ್ನು ಅರಿತಿದ್ದ ಕೃಷ್ಣನು ಪ್ರತಿಯೊಬ್ಬ ಗೋಪಿಯನ್ನೂ ಅವರವರ ಇಚ್ಛೆಗಳಿಗನುಗುಣವಾಗಿ ತೃಪ್ತಿ ಪಡಿಸುತ್ತಿದ್ದಾನೆ. ದೇವರ ಸರ್ವವ್ಯಾಪಿತ್ವವನ್ನೂ ಲೀಲೆಗಳನ್ನೂ ಅರಿಯಲಾರದ ಮುಗ್ಧ ಯುವತಿಯರೊಬ್ಬೊಬ್ಬರೂ ಕೃಷ್ಣನು ತನ್ನಲ್ಲಿ ಮಾತ್ರ ಪ್ರೇಮಗೊಂಡಿದ್ದಾನೆಂದು ತಿಳಿ ಯುತ್ತಾರೆ (ತನಯಂದೇ ಪ್ರೇಮ-ಭೈರವಿ). ಶ್ರೀಕೃಷ್ಣನಾದರೋ ಅವರನ್ನೆಲ್ಲಾ ಉತ್ತೇ ಜಿಸುವಂತೆ, ಅವರ ರೂಪಿನಿಂದ ತಾನು ಮರುಳಾದಂತೆ ಮೇಲ್ನೋಟದಲ್ಲಿ ವ್ಯಕ್ತಪಡಿಸು ತ್ತಾನೆ. ಇದು ನಿಜವೆಂದು ಭಾವಿಸಿದ ಗೋಪಿಯರು ಮದಾಂಧರಾಗಿ ತಮ್ಮನ್ನು 'ಸ್ತ್ರೀರತ್ನ'ರೆಂದು ಸಂಬೋಧಿಸಿಕೊಳ್ಳುತ್ತಾರೆ. ತಮ್ಮ ಪೂರ್ವಪುಣ್ಯ ವಿಶೇಷವಿದೆಂದು ತಿಳಿಯುತ್ತಾರೆ.

ಇಷ್ಟಾದರೂ ಒಮ್ಮೊಮ್ಮೆ ಗೋಪಿಯರು ಅಜ್ಞಾನಿಗಳಂತೆ ಶ್ರೀಹರಿಯನ್ನೂ, ಆತನ ಸಲಹೆಗಳನ್ನೂ ಶಂಕಿಸುತ್ತಾರೆ. ತಮ್ಮಲ್ಲಿ ಅನುರಾಗವಿದ್ದಂತೆ ತೋರಿ ಸ್ವಾರ್ಥಸಾಧನೆ

ಮಾಡಿಕೊಳ್ಳುವವನೆಂದು ಜರಿಯುತ್ತಾರೆ. ಶ್ರೀಕೃಷ್ಣನೇ ತಮ್ಮ ಬಲೆಯಲ್ಲಿ ಸಿಕ್ಕಿಬಿದ್ದ ನೆಂಬ ಭ್ರಮೆಯು ಅಹಂಕಾರಕ್ಕೆ ತಿರುಗುತ್ತದೆ. ಅವರ ಗರ್ವ ಕ್ರಮೇಣ ಹೆಚ್ಚಾಗುತ್ತಾ ಕೊನೆಗೆ ಮುಗಿಲು ಮುಟ್ಟುತ್ತದೆ (ಎವರು ಮನಕು ಸಮಾನಮಿಲಲೋ- ದೇವ ಗಾಂಧಾರಿ).

ಆಗ ಇದ್ದಕ್ಕಿದ್ದಂತೆ ಆಕಾಶವು ಮೋಡದಿಂದ ಆವೃತವಾಗುತ್ತದೆ. ಬಿರುಗಾಳಿ ಏಳುತ್ತದೆ. ಮಳೆ ಸುರಿಯಲಾರಂಭಿಸುತ್ತದೆ. ನೌಕೆ ದಿಕ್ಕಾಪಾಲಾಗಿ ಚಲಿಸುತ್ತಿದ್ದಾಗ ನೌಕೆಯಲ್ಲಿ ರಂಧ್ರವೇರ್ಪಡುತ್ತದೆ. ಅಬಲೆಯರಾದ ಭಾಮೆಯರು ಭಯಾವಿಷ್ಟರಾಗಿ, ಅನಿರೀಕ್ಷಿತವಾಗಿ ಉಂಟಾದ ದಿಗಿಲಿನ ಈ ಪ್ರಸಂಗಕ್ಕೆ ತಾವೇ ಕಾರಣರೋ ಅಥವಾ ಇತರರು ಕಾರಣರೋ ಎಂದು ಶಂಕಿಸುತ್ತಾ ಹೀಗೆಂದುಕೊಳ್ಳುತ್ತಾರೆ. 'ಈ ರಾಜಕುವರ ನನ್ನು ಪರಿಹಾಸ್ಯ ಮಾಡಿದ್ದರ ಫಲವಿದೋ ? ಅಥವಾ ಯಾವುದಾದರೂ ಸಾಧ್ವಿಯ ಶಾಪವೋ ? ಅಥವಾ ನೌಕಾವಿಹಾರ ಹೊರಟ ಘಳಿಗೆ ಅಶುಭವಾಗಿದ್ದಿತೋ ? ಇಲ್ಲವೇ ಇನ್ನಾವುದಾದರೂ ದೇವತೆಗಳ ದುಷ್ಕೃತ್ಯವೋ ?'

**ಈ ರಾಜಾನನು ಆಡುಕೊನ್ನ ಫಲಮೋ ? ಏಮಾನಿನೀ ಶಾಪಮೋ ?**
**ಈ ರಾಮಾಮಣುಲೇಗುವೇಳ ಗುಣಮೋ ? ಯೇ ವೇಲ್ಪು ದುಷ್ಕೃತ್ಯಮೋ ?**
**(ಶಾರ್ದೂಲ)**

ಪ್ರೀತಿಯಿಂದ ತಮ್ಮ ಯೌವ್ವನವನ್ನೂ ಕೃಷ್ಣನಿಗೆ ಅರ್ಪಿಸಿ, ಆತನ ಸೇವೆ ಮಾಡುವ ಪುಣ್ಯವಿಲ್ಲದೆ, ಯಮುನೆಯ ಪಾಲಾಗುವ ಸಲುವಾಗಿಯೇ ತಾವು ತಮ್ಮ ಈ ಶರೀರ ವನ್ನು ಈವರೆಗೆ ಪೋಷಿಸಿದುದು ಎಂದು ಪ್ರಲಾಪಿಸುತ್ತಾರೆ (ಪೆರಗು ಪಾಲು ಭುಜಿ ಯಿಂಚಿ ತನುವುನು ಪೆಂಚಿನದಿಂದುಕಾ-ಘಂಟಾ). ಕೃಷ್ಣನಲ್ಲಿ ತಮಗಿದ್ದ ಪ್ರೀತಿಯಿಂ ದಾಗಿ ತಮ್ಮ ವಿಧಿ ಹೇಗೇ ಇದ್ದರೂ ಶ್ರೀಕೃಷ್ಣನನ್ನು ಮಾತ್ರ ಕ್ಷೇಮವಾಗಿ ಊರು ಮುಟ್ಟಿಸುವಂತೆ ಯಮುನಾದೇವಿಗೆ ಹರಕೆ ಹೊತ್ತು ಪ್ರಾರ್ಥಿಸುತ್ತಾರೆ.

**ನಳಿನಭವುಡು ವ್ರಾಸಿನವ್ರಾಲು ಯೆಟ್ಲೈನಗಾನಿ ನಾಥುಡು ಬ್ರತಿಕಿಯುಂಟೇ ಚಾಲು**
**ದೇಹಮುಲೆಲ್ಲನೊಸಗೇಮಮ್ಮ ಓದೇವಿ ಕೃಷ್ಣದೇವುನಿ ಗಟ್ಟುಚೇರ್ಪುಮಮ್ಮಾ**
**(ಅಲ್ಲಕಲ್ಲೋಲಮಾಯೆನಮ್ಮ- ಸೌರಾಷ್ಟ್ರ)**

ಅನಿರೀಕ್ಷಿತವಾದ ಈ ಪ್ರಸಂಗದಿಂದ ಗೋಪಿಯರ ಗರ್ವ ತಗ್ಗುತ್ತಾ, ದುಃಖ ಹೆಚ್ಚಾಗುತ್ತಾ ಬಂದು ತಮ್ಮ ಯೋಜನೆಗಳೆಲ್ಲವನ್ನೂ ಮೀರಿದಂಥ ದೈವನಿಯಮ ವೊಂದಿರುವುದೆಂದು ಅವರು ಮನಗಾಣುತ್ತಾರೆ. ಭಕ್ತೆಯರಾದ ಗೋಪಿಯರಿಗೆ ಈಗ ಸೂಕ್ತ ಮಾರ್ಗವೊಂದನ್ನು ಸೂಚಿಸಬೇಕೆಂದೆನಿಸಿ ಶ್ರೀಕೃಷ್ಣನು ತಮ್ಮ ಕಂಚುಕಗಳಿಂದ ನೌಕೆಯ ರಂಧ್ರವನ್ನು ಮುಚ್ಚುವಂತೆ ಭಾಮೆಯರಿಗೆ ಹೇಳುತ್ತಾನೆ. ಗೋಪಿಯರು ಅಂತೆಯೇ ಮಾಡುತ್ತಾರೆ. ಆದರೆ ನೀರಿನ ರಭಸ ಅಧಿಕವಾದ್ದರಿಂದ ಅವು ಕೊಚ್ಚಿ ಹೋಗುತ್ತವೆ. ಪುನಃ ರಂಧ್ರದಿಂದ ನುಗ್ಗಿದ ನೀರಿನ ಮಟ್ಟವು ಏರತೊಡಗಿದಂತೆ

ಭಾಮೆಯರ ಭಯವೂ ಹೆಚ್ಚಾಗುತ್ತದೆ. ಇಲ್ಲಿ ಗೋಪಿಯರಿಗೆ ಭಯ ಎರಡು ರೀತಿಯದು. ಒಂದು, ಶ್ರೀಕೃಷ್ಣನ ಜವಾಬ್ದಾರಿ ತಮ್ಮದೇ ಎಂಬ ಭಯ ಮೊದಲಿನದು. ಎರಡನೆಯದು, ತಮ್ಮ ತನು-ಮನಗಳೆರಡನ್ನೂ ಪ್ರೀತಿಯಿಂದ ಕೃಷ್ಣಾರ್ಪಣ ಮಾಡಲಾಗದೆ, ಅನಿರೀಕ್ಷಿತವಾಗಿ ತಾವು ಸಾವನ್ನು ಅಪ್ಪಬೇಕಾಗುವುದೆಂಬುದು. ಇವುಗಳಲ್ಲಿ ತಮ್ಮ ಪ್ರಾಣಹಾನಿಯಾದರೂ ಸರಿಯೇ, ಕೃಷ್ಣನನ್ನು ಮಾತ್ರ ಸೌಖ್ಯವಾಗಿರಿಸಬೇಕೆಂಬುದು ಅವರ ಪರಮೋದ್ದೇಶ. ಇದಕ್ಕಾಗಿ ಅವರು ಯಾವುದಕ್ಕೂ ಸಿದ್ಧರಾಗಿದ್ದಾರೆ. ಅವರು ಭಯಗೊಂಡು ಕೃಷ್ಣನನ್ನೇ ಮತ್ತೇನಾದರೂ ಮಾರ್ಗ ಸೂಚಿಸಬೇಕೆಂದು ಪ್ರಾರ್ಥಿಸುತ್ತಾರೆ. ತಮ್ಮೆಲ್ಲ ವಸ್ತ್ರಗಳನ್ನೂ ತೆಗೆದು ದೋಣಿಯ ತೂತನ್ನು ಮುಚ್ಚುವಂತೆ ಹರಿಯು ಸಲಹೆ ನೀಡಿದಾಗ, ಗೋಪಿಯರಿಗೆ ಮಾನ-ಪ್ರಾಣಗಳ ಸಮಸ್ಯೆ ಎದುರಾಗುತ್ತದೆ.

ಸ್ತ್ರೀಯರಿಗೆ ಪ್ರಾಣಕ್ಕಿಂತ ಮಾನವೇ ಮಿಗಿಲಲ್ಲವೇ ? ಈಗೇನು ಮಾಡುವುದು ? ಕೃಷ್ಣನ ಉಪದೇಶವನ್ನು ಪಾಲಿಸುವುದೋ ಅಥವಾ ಆತ್ಮಹತ್ಯೆಗೆ ಸಿದ್ಧರಾಗುವುದೋ ಎಂಬ ಸಮಸ್ಯೆ ಏಳುತ್ತದೆ. ಅವರು ತಮ್ಮಲ್ಲಿಯೇ ಸಮಾಲೋಚನೆ ನಡೆಸಿ ಕಡೆಗೆ ತಮ್ಮ ಜೀವಿತಸರ್ವಸ್ವವೂ ಶ್ರೀಕೃಷ್ಣನೇ ಆದ್ದರಿಂದ ಆತನ ಆದೇಶವೇ ವೇದವಾಕ್ಯವೆಂದರಿತು ಅದರಂತೆಯೇ ನಡೆಯುತ್ತಾರೆ. ವಿವಸ್ತ್ರರಾದ ಈ ಘಟ್ಟದಲ್ಲಿ ಗೋಪಿಯರ ದುಃಖ ನೂರ್ಮಡಿಯಾಗುತ್ತದೆ. ಬಾಯಿ ಒಣಗುತ್ತದೆ, ಮುಖ ಸುಕ್ಕುಗಟ್ಟುತ್ತದೆ, ಕಾಡಿಗೆಯಿಂದ ಅಲಂಕರಿಸಿಕೊಂಡಿದ್ದ ಅವರ ಕಣ್ಣುಗಳಿಂದ ನೀರು ಚಿಲುಮೆಯಾಗಿ ಹರಿಯಲಾರಂಭಿಸುತ್ತದೆ. ಅವರಲ್ಲಿದ್ದ ಅಹಂಕಾರವು ಪೂರ್ಣವಾಗಿ ನಾಶಗೊಳ್ಳುತ್ತದೆ. ಆ ಸಮಯದಲ್ಲಿ ಕೃಷ್ಣನಿಗೆ ಅವರಲ್ಲಿ ಕನಿಕರ ಮೂಡುತ್ತದೆ.

**ವೇದವಾಕ್ಯಮನಿಯೆಂಚಿರಿ ಯೀ ವೆಲದುಲೆಲ್ಲಾ ಸಮ್ಮತಿಂಚಿರಿ**
**ಚೆಲುಲನೋರು ಯೆಂಡನಾಯೆನು . . . .**
**. . . ಸತುಲ ವದನಮುಲು ಸ್ರುಕ್ಕನಾಯೆನು**
**ಕನುಲಕಾಟುಕ ನೀರು ಕಾರಗ . . .**
**ರಮಣುಲ ಮದಮೆಲ್ಲ ಜರಿಗೆನು ತ್ಯಾಗರಾಜನುತುನಿ ಮದಿ ಕರಿಗೆನು**
**(ವೇದವಾಕ್ಯಮನಿಯೆಂಚಿರಿ-ಮೋಹನ).**

ಆಗ ಗೋಪಿಯರು ಹೀಗೆನ್ನುತ್ತಾರೆ. 'ಹರಿಯೇ, ಪ್ರಾಪಂಚಿಕ ಭೋಗಭಾಗ್ಯಗಳೆಲ್ಲವೂ ಅಶಾಶ್ವತ. ಸನಕಸನಂದನಾದಿಗಳಿಂದಲೂ, ಹರಿಹರಬ್ರಹ್ಮಾದಿಗಳಿಂದಲೂ ಸೇವಿಸಲ್ಪಟ್ಟ ನಿನ್ನ ದಿವ್ಯಪಾದಾರವಿಂದಗಳ ಜ್ಞಾನವನ್ನು ಕರುಣಿಸು' (ಹರಿಹರಿ ನೀಯೊಕ್ಕ ದಿವ್ಯ ಪಾದಾರವಿಂದ ಮೀಯವೇ-ಘಂಟಾ).

ಇದಕ್ಕೆ ಪ್ರತ್ಯುತ್ತರವಾಗಿ ಶ್ರೀಹರಿಯು 'ಬಾಹ್ಯ ಚಕ್ಷುರಿಂದ್ರಿಯವನ್ನು ಕೈಗಳಿಂದ ಮುಚ್ಚಿ ನೀವು ಅಂತಃಚಕ್ಷುವಿನಿಂದ ನನ್ನನ್ನೇ ಧ್ಯಾನಿಸಿ, ದುಃಖಿಸುವುದನ್ನು ನಿಲ್ಲಿಸಿ. ನಿಮ್ಮ

ಪಾಲಿನ ದೇವರು ನಿಮಗೆ ಸತ್ಫಲವನ್ನು ನೀಡುತ್ತಾನೆ' ಎನ್ನುತ್ತಾನೆ.

**ನನ್ನೇ ಧ್ಯಾನಮು ಸೇಯುಚು ಕನ್ನೀರುಲ ನಿಲಿಪಿಮೀರು ಕರಯುಗಮುಲಚೇ**
**ಕನ್ನುಲುಮೂಸಿ ಭಜಿಂಪುಡು ಪನ್ನುಗ ಮೀಪಾಲಿವೇಲ್ಪು ಫಲಮಿಚ್ಚುದಯನ್**
**(ಕಂದ ಪದ್ಯ)**

ರೋಗಿಯು ವೈದ್ಯನ ಸಲಹೆಯನ್ನು ಪಾಲಿಸುವಂತೆ, ಭವರೋಗಹರನ ಸಲಹೆಯನ್ನು ದಿಕ್ಕುಗಾಣದ ಗೋಪಿಯರು ಅನುಸರಿಸುತ್ತಾರೆ. ಆಗ ಕತ್ತಲೆ ಹರಿಯುತ್ತದೆ. ಬಿರುಗಾಳಿ-ಮಳೆ ನಿಲ್ಲುತ್ತದೆ. ದೋಣಿ ದಡಸೇರುತ್ತದೆ. ವಿವಸ್ತ್ರರಾಗಿದ್ದ ಗೋಪಿಯರ ದೇಹದ ಮೇಲೆ ವಸ್ತ್ರಗಳು ಕಂಗೊಳಿಸುತ್ತವೆ. ಈ ಮೂಲಕ ಗೋಪಿಯರಿಗೆ ಮಾನ-ಪ್ರಾಣಗಳು ಪ್ರಾಪ್ತಿಯಾದುದಲ್ಲದೆ ಶ್ರೀಮನ್ನಾರಾಯಣನ ದಿವ್ಯಕಟಾಕ್ಷವೂ ಲಭ್ಯವಾಗುತ್ತದೆ. ದಿವ್ಯಾನಂದದಿಂದ ಗೋಪಿಯರು ಹರಿಯನ್ನು ವಿಧವಿಧವಾಗಿ ಚಂದನ ಕಸ್ತೂರಿಗಳಿಂದ ಅಲಂಕರಿಸುತ್ತಾರೆ. ಇದರ ಸುವಾಸನೆ ನಾಲ್ದೆಸೆಗೂ ಪಸರಿಸುತ್ತದೆ. ಎಂದರೆ ಅವರ ಭಕ್ತಿಸಾಧನೆ ಜಗಜ್ಜನಿತವಾಗುತ್ತದೆ. ವ್ರತಗಳನ್ನು ಆಚರಿಸದಿದ್ದರೂ ಸತ್ಸಂಗದಿಂದ ಬ್ರಹ್ಮಾನುಭವವನ್ನು ಹೊಂದಬಹುದೆಂಬ ಉಪನಿಷತ್ ಪ್ರತಿಪಾದನೆಯನ್ನೇ ತ್ಯಾಗರಾಜರು ಇಲ್ಲಿ ವ್ಯಕ್ತಗೊಳಿಸಿರುವುದು. ಸತೀಮಣಿಯರ ಪುಣ್ಯವೆಂಬ ಸುವಾಸನೆ ಇಡೀ ವಿಶ್ವವನ್ನೇ ವ್ಯಾಪಿಸಿತೆಂಬ ಶಾಸ್ತ್ರೀಯ ಸಂಪ್ರದಾಯವನ್ನು ತ್ಯಾಗರಾಜರು ಇಲ್ಲಿ ಹೇಳಿದ್ದಾರೆ. ಕೃಷ್ಣನಲ್ಲಿ ಅವರಿಗಿದ್ದ ದೈವದತ್ತವಾದ ಪ್ರೇಮಭಾವವೇ ಅವರಿಗೆ ಇಂಥ ಪರಿಣತಿಯನ್ನು ಉಂಟುಮಾಡಿದೆ. ಅಂತ್ಯದಲ್ಲಿ ಗೋಪಿಯರು ಭಗವಂತನನ್ನು ಆತನ ವಾಸಸ್ಥಾನಕ್ಕೆ ತಲುಪಿಸಿ, ಆತನ ಹಿರಿಮೆಗಳನ್ನೊಳಗೊಂಡಂತೆ ಮಂಗಳ ಹಾಡುತ್ತಾರೆ. ಆರತಿ ಎತ್ತುತ್ತಾರೆ. ದೇವತೆಗಳು ಪುಷ್ಪವೃಷ್ಟಿ ಕರೆಯುತ್ತಾರೆ. ಮುತ್ತೈದೆಯರು ದೇವರಿಗೆ ಮಾಡುವ 'ಆರತಿ'ಯು, ಅವರ ಸೌಭಾಗ್ಯವನ್ನು ಚಿರಕಾಲ ವಿರಿಸುತ್ತದ್ ಎಂಬುದೊಂದು ನಂಬುಗೆ. ವ್ರಜಕಾಂತೆಯರು ಕೃಷ್ಣನಿಗೆ ಇಂಥ ನಂಬುಗೆಯಿಂದಲೇ ಆರತಿ ಮಾಡುತ್ತಾರೆ. ತ್ಯಾಗರಾಜಕೃತವಾದ ಈ ಪುಣ್ಯಕಥೆಯನ್ನು ಶ್ರವಣ ಮಾಡಿದವರು ಶ್ರೀಕೃಷ್ಣನ ಕೃಪೆಗೆ ಪಾತ್ರರಾಗುವರೆಂಬ 'ಫಲಶ್ರುತಿ'ಯೊಂದಿಗೆ ನಾಟಕ ಮುಕ್ತಾಯಗೊಳ್ಳುತ್ತದೆ.

ಭಗವದನುಗ್ರಹ ಪ್ರಾಪ್ತಿಗೆ ವ್ರತೋಪವಾಸಗಳೂ, ಜಪತಪಗಳೂ, ಪೂಜೋಪಚಾರಗಳೂ ಸಾಧನಗಳೆಂಬುದು ಶಾಸ್ತ್ರ ಪ್ರಸಿದ್ಧಿ. ಇವಲ್ಲಕ್ಕಿಂತ ಮಿಗಿಲಾದುದು ಆತನಲ್ಲಿ ಪರಮಪ್ರೇಮ ಮತ್ತು ಅನನ್ಯ ಶರಣಾಗತಿ. ಇದನ್ನು ಅನುಸರಿಸಿದವರೇ ವ್ರಜಕಾಂತೆಯರು. ಮಧುರ ಭಕ್ತಿಯ ಆರಾಧನೆಗೆ ಇವರೇ ಆದರ್ಶ. ಪಟ್ಟಭದ್ರೆಯರಾದ ಇವರು ತಮ್ಮ ವಿಶುದ್ಧ ಪ್ರೇಮದಿಂದ ಭಗವಂತನನ್ನು ಸೇರಿದ್ದಾರೆ. ಇವರ ಉಪಾಸನೆ ಶ್ರೇಷ್ಠತಮವಾದುದು. ಇದರಲ್ಲಿ ಏಕಾಂತಿಕ ಭಕ್ತಿಯೂ ಮೂರ್ತೀಭವಿಸಿದೆ. ಈ ಅಂಶಗಳನ್ನೇ ತ್ಯಾಗರಾಜರು ನಾಟಕದಲ್ಲಿ ಪ್ರತಿಧ್ವನಿಸಿರುವುದು.

**ಒಟ್ಟಾರೆ ನಾಟಕದ ಮುಖ್ಯಾಂಶಗಳು**

೧ ಕಿರಿದಾದರೂ ನಾಟಕಾಂಶಗಳನ್ನು ವಿಶೇಷವಾಗಿ ಹೊಂದಿದ ಈ ನಾಟಕವು ಪ್ರಪತ್ತಿ* ಅಥವಾ ಪೂರ್ಣ ಶರಣಾಗತಿಯನ್ನು ಸಾರುವಂತಿದೆ.

೨ ಗೋಪಿಯರು (ಜೀವರು) ವಿವಸ್ತ್ರರಾದರೆಂದರೆ, ಅವರು ಲೌಕಿಕ ಬಂಧನಗಳೆಲ್ಲವನ್ನೂ ಕಿತ್ತೊಗೆದರು ಎಂಬುದು ಆಂತರಿಕ ಭಾವ. ಜೀವನವು ಒಂದು ನೌಕೆಗೂ, ಪ್ರಪಂಚವು ಸಂಸಾರಸಾಗರಕ್ಕೂ ಹೋಲಿಸಲ್ಪಡುತ್ತವೆ. ಇದರಲ್ಲಿ ಹಲವು ವಿಧದ ಕಷ್ಟಗಳು ಉಂಟಾದರೂ, ದೇವರಲ್ಲಿನ ಅನನ್ಯ ಪ್ರೀತಿ ಮತ್ತು ಶರಣಾಗತಿಗಳು ಒಬ್ಬನನ್ನು ದಡಮುಟ್ಟಿಸುತ್ತದೆ ಎಂಬುದು ಸಾರ.

೩ ಈ ನಾಟಕವು ಸೂತ್ರಧಾರನಿಂದ ಆರಂಭಗೊಳ್ಳುವುದಿಲ್ಲ. ನೇರವಾಗಿ ಕಥೆ ಆರಂಭಗೊಳ್ಳುತ್ತದೆ (ಪ್ರಾರ್ಥನೆಯ ನಂತರ).

೪ 'ತೃಣಮಪಿ ನಚಲತಿ ತೇನವಿನಾ' ಎಂಬ ಉಕ್ತಿಯಂತೆ ನಾಟಕದಲ್ಲಿ ಶ್ರೀ ಕೃಷ್ಣನೇ 'ನನುವಿನಾ ತೃಣಮ್ಮೈನ ನಡಚುನಾ' ಎನ್ನುತ್ತಾನೆ. (ನಾನಿಲ್ಲದೆ ಒಂದು ತೃಣವಾದರೂ ಜರುಗಬಲ್ಲುದೇ ?).

೫ ಗೋಪಿಯರೊಂದಿಗೆ ಶ್ರೀಹರಿಯು ಆಡುವ ನೃತ್ಯದಿಂದ ದೇವರು ತನ್ನ ಸರ್ವವ್ಯಾಪಿತ್ವವನ್ನು ಪ್ರಕಟಗೊಳಿಸಿದ್ದಾನೆ.

೬ ನಾಟಕದಲ್ಲಿನ ಪಾತ್ರಗಳೆಂದರೆ, ಶ್ರೀಕೃಷ್ಣ, ಗೋಪಿಯರು ಮಾತ್ರ. ನೇಪಥ್ಯದಲ್ಲಿ ಇಂದ್ರಾದಿಗಳು, ದೇವಕಾಂತೆಯರು, ಅಪ್ಸರ ಸ್ತ್ರೀಯರ ಪಾತ್ರಗಳಿವೆ (ಚೂತಾಮುರಾರೆ - ಕಾಪಿ, ಪಾಕಾರಿಪ್ರಮುಖುಲ್ ವಿನೋದಮುಲು ಸಲ್ಪನ್ - ಶಾರ್ದೂಲ).

೭ ಗೋಪಿಯರು ಯಮುನಾದೇವಿಗೆ ಹರಕೆ ಮಾಡಿಕೊಳ್ಳುವುದು ಮಾನವ ಸಹಜ ಪ್ರಕ್ರಿಯೆಯನ್ನು ಸೂಚಿಸುತ್ತದೆ.

೮ ಭವವಾರಿಧಿಯನ್ನೇ ದಾಟಿಸುವ 'ವರದ'ನಿಗಾಗಿ ಯುವತಿಯರು ಯಮುನೆಯನ್ನು ಬೇಡುವುದರಲ್ಲಿ ಹಾಸ್ಯದ ಧ್ವನಿಯಿದೆ.

೯ ನಿಜಭಕ್ತರಿಗೆ ಧ್ಯಾನಮಾಡಲು ನಿಗದಿತ ಸಮಯವಿಲ್ಲ ಎಂಬುದು 'ಸ್ನಾನಪಾನಮುಲು ಸೇಯುವೇಳ ನಿನು ಧ್ಯಾನಮು ಚೇಸಿನದಿ' ಎಂಬ ಸಾಲಿನಲ್ಲಿ ಮೂಡಿದೆ.

೧೦ ಸಂವಾದ ದರು, ಕೋಲಾಟ ದರುವಿನಂಥ ರಚನೆಗಳು ಈ ನಾಟಕದಲ್ಲಿ ಕಾಣಬರುತ್ತವೆ. (ಇಂದುಕೇಮಿ ಸೇತುಮಮ್ಮಾ-ವರಾಳಿ ; ಚೂಡರೆ ಚೆಲುಲಾರ-ಪಂತುವರಾಳಿ). ಚೂಡರೆ ರಚನೆಯಲ್ಲಿ ಶೃಂಗಾರ ಭಾವೋದ್ದೀಪಕವಾದ ಲಕ್ಷಣಗಳ ವಿವರ ಕಾಣಬರುತ್ತದೆ. ಒಟ್ಟಾರೆ ಇರುವ ೨೧ ಹಾಡು

---

* ನೋಡಿ ಅಧ್ಯಾಯ – ನವವಿಧ ಭಕ್ತಿ

ಗಳಲ್ಲಿ ೭ ಮಾತ್ರ ಕೃತಿ ಶೈಲಿಯಲ್ಲಿವೆ. ಉಳಿದವು ಕಥಾ ನಿರೂಪಣೆಗೆ ಅನುವಾದ ಸರಳಶೈಲಿಯಲ್ಲಿವೆ. ಆದ್ದರಿಂದ ಇವು ಕಚೇರಿಗಳಲ್ಲಿ ಅಷ್ಟಾಗಿ ಕೇಳಬರುವುದಿಲ್ಲ.

೧೧ ಸ್ತ್ರೀಯರು ಸೇರಿ ಮಾಡಿದ ಯಾವ ಕೆಲಸವೂ ಪ್ರಳಯಾಂತಕ ಎಂಬ ಮಾತನ್ನು ಗೋಪಿಯರಿಂದಲೇ ತ್ಯಾಗರಾಜರು ನುಡಿಸುತ್ತಾರೆ (ಅಲ್ಲಕಲ್ಲೋಲ ಮಾಯೆನಮ್ಮ-ಸೌರಾಷ್ಟ್ರ).

೧೨ ನಾವೊಂದು ನೆನೆದರೆ ದೈವವಿನ್ನೊಂದು ನೆನೆಯುತ್ತದೆ

**ಮೇಮೊಕ್ಕಟೆಂಚಬೋತಿವಮ್ಮ ಮಾಪಾಲಿ ದೇವುಡೇಮೇಮೋ**

**ಎಂಚುಕೊನ್ನಾಡಮ್ಮ**

(ಅಲ್ಲಕಲ್ಲೋಲ-ಸೌರಾಷ್ಟ್ರ)

ಮಗುವನ್ನೂ ಚಿವುಟಿ ತೊಟ್ಟಿಲನ್ನೂ ತೂಗುವುದನ್ನು ಅರಿಯದಾದೆವು

**ಬಾಲುನಿಗಿಲ್ಲಿ ಮರಿ ತೊಟ್ಲ ನೂಚೇದೆರುಗಮ್ಮೆತಿಮಿ**

(ಬಾಲು ಬಾಲು-ಸಾವೇರಿ)

ಮುಂತಾದ ಸೂಕ್ತಿಗಳಿವೆ.

೧೩ ರೋಗಿಯು ವೈದ್ಯನ ಸಲಹೆಯನ್ನು ವಿನಯ ವಿಶ್ವಾಸಗಳಿಂದ ಅನುಸರಿಸಿದಂತೆ ಎಂಬ ಸಾಮ್ಯವಿದೆ.

೧೪ ಈ ಧರೆಯಲ್ಲಿನ ಭೋಗಭಾಗ್ಯಗಳು ನಿಜವಲ್ಲವೆಂಬ ನಿಜಜ್ಞಾನ (ವೈರಾಗ್ಯ) ಸ್ಪಷ್ಟವಾಗಿ ಅಳವಟ್ಟಿದೆ.*

೧೫ ಯಥೇಚ್ಛವಾಗಿ ಪೌರಾಣಿಕ ಹಿನ್ನೆಲೆಯುಳ್ಳ ಮಾತುಗಳು ಕಾಣಬರುತ್ತವೆ.

**ವಲಚುಚು ತೊಲಿಜನ್ಮಮು ರಾಮುನಿಚೇ ವರಮುಲು ಬಡಿಸಿನದಿಂದುಕಾ..**

(ಪೂರ್ವ ಜನ್ಮದಲ್ಲಿ ರಾಮನಿಂದ ವರಗಳನ್ನು ಬಯಸಿ ಪಡೆದುದಾದರೂ ಇದಕ್ಕಾಗಿಯೇ ?)

(ಪೆರಗುಪಾಲು - ಘಂಟಾ)

**ಬುಧರಕ್ಷಕ ಶಲ್ಯ ಸಾರಥ್ಯಮೊನರಿಂಚಿ. . .**

(ಸಜ್ಜನ ರಕ್ಷಕನೇ ಶಲ್ಯ ಸಾರಥ್ಯ ನಡೆಸಿದುದು)

(ಬಾಲುಬಾಲು - ಸಾವೇರಿ)

ಶ್ರೀಕೃಷ್ಣನ ಅನೇಕ ಲೀಲೆಗಳ ಹಿನ್ನಲೆಯೊಳಗೊಂಡಂತೆ 'ಏಮನಿ ನೆರನಮ್ಮು ಕೊಂದುಮೋ' ಮತ್ತು 'ಏಮೇಮೋ ದೆಲಿಯಕ ಬಲಿಕೇರು' ರಚನೆಗಳಿವೆ. ಈ ಎರಡು ರಚನೆಗಳೂ ಉತ್ತರ ಪ್ರತ್ಯುತ್ತರ ದರುವಿನಂತೆ ಇದ್ದು ಒಂದೇ ರಾಗದಲ್ಲಿ ಅಳವಟ್ಟಿರುವುದು ಗಮನಾರ್ಹ.

---

* ನೋಡಿ ಅಧ್ಯಾಯ – ನವವಿಧ ಭಕ್ತಿ

**ಅವನಿ ಹರಿಹರ ಬ್ರಹ್ಮಾದಿ ಸುರುಲು ಆಸಚೇ ಮೋಸಪೋಯಿರಿ.**

(ಹರಿಹರಬ್ರಹ್ಮಾದಿ ದೇವತೆಗಳೇ ಆಸೆಯಿಂದ ಮೋಸಹೋಗಿದ್ದಾರೆ)

(ಎವರು ಮನಕು - ದೇವಗಾಂಧಾರಿ)

೧೬. ನಾಟಕದಲ್ಲಿ ಎರಡು ಫಲಶ್ರುತಿಗಳು ಕಾಣಬರುತ್ತವೆ. ಮೊದಲಿನಲ್ಲಿ ಒಂದು ತೆಲುಗು ಭಾಷೆಯಲ್ಲೂ (ಧರಲೋ ಹರಿಕೃತ ನೌಕಾಚರಿತಂಬುನು). ಕಡೆಯಲ್ಲಿ ಮತ್ತೊಂದು ಸಂಸ್ಕೃತ ಭಾಷೆಯಲ್ಲೂ ಅಳವಟ್ಟಿವೆ (ತ್ಯಾಗರಾಜ-ಕೃತಾಂ ಪುಣ್ಯಾಂ . . . .).

೧೭. ನಾಟಕದ ಆರಂಭದಲ್ಲಿ ಮುರಹರನು 'ಸರಿಗಮಪದನಿಸ' ಎನ್ನುತ್ತಾ ವೇಣುವನ್ನು ಸಾಂಪ್ರದಾಯಿಕವಾಗಿ ನುಡಿಸಿದನೆನ್ನಲಾಗಿದೆ. ತ್ಯಾಗರಾಜರೂ 'ನಾದಯೋಗಿ'ಯಾದ್ದರಿಂದ ಕೃಷ್ಣನ ವೇಣುನಾದದಲ್ಲಿ ತಮ್ಮ ಅಂತರ್ಯವನ್ನೂ ಮೇಳೈಸಿ ಮೃದುಮಧುರ ಸಂಗೀತ ಸಾಹಿತ್ಯ ರಸಪುಷ್ಟಿಯೊಂದಿಗೆ ಹಾಡಿದ್ದಾರೆ. ಗೋಪಿಯರಲ್ಲಿ ತಾವೂ ಒಬ್ಬರೆಂಬಂತೆ, ಗೋಪಿಯರ ಆರಾಧನೆಯನ್ನೇ ಪರಮಾದರ್ಶವಾಗಿ ಭಾವಿಸಿ, ಮೊದಲಿಗೆ ಗೋಪಿಯರನ್ನೇ ತ್ಯಾಗರಾಜರು ರಂಗಕ್ಕೆ ತರುತ್ತಾರೆ. ನಾಟಕದ ಮೊದಲ ಹಾಡು ಗೋಪಿಯರು ಸಿಂಗರಿಸಿಕೊಂಡು ಹೊರಟಿರುವುದಾಗಿದೆ.

೧೮ ನಾಟಕ ರಚನೆಯ ಹಿನ್ನಲೆಯಲ್ಲಿ ಕವಿಯ ಉದ್ದೇಶವೇನೆಂಬುದನ್ನು ತಿಳಿಸುವ ಹೇಳಿಕೆ(Key Statement)ಗಳು ಹೀಗಿವೆ.

ಸ್ತ್ರೀರತ್ನರಾದ ಭಾಮೆಯರ ಯೌವ್ವನವು ವಾರಿಜಲೋಚನನ ಪಾಲಾಯಿತು. ಗೋಪಿಯರು ಶ್ರೀಹರಿಯಲ್ಲಿ, ಯಮುನಾನದಿಯಲ್ಲಿ ಸೇರಿ ಭೋಗಗಳನ್ನು ಅನುಭವಿಸಿ ತೃಪ್ತರಾದರು. ಭಗವಂತನೂ ತನ್ನ ಭಕ್ತರಾದ ಗೋಪಿಯರ ಸ್ವತ್ತಾದನೆಂಬುದು.

**ವಾರಿಜಲೋಚನುಡು ಚೆಲುಲ ಪಾಲಾಯೆಗದವಮ್ಮ**
**ಕೋರಿಕಲೀಡೇರೆನು ಯದುವೀರುನಿ ಕನುಲಾರಜೂಡ**
**ಮಂಗಳಾಕಾರುನಿತೋ ಚೆಲುಲು ಮನಸಾರಗೂಡಿತಿಮಿ**
**ರಂಗಪತಿಯುಪ್ಪೊಂಗುಚು ಮನಚಂಗಟನು ಚಲಂಗಗ. . .**
**ತ್ಯಾಗರಾಜಾಪ್ತುನಿತೋ ಚೆಲುಲು ಭೋಗಮುಲಂದುಚುನು . . . .**

(ಏನೋಮುನೋಚಿತಿಮೋ - ಪುನ್ನಾಗವರಾಳಿ)

**ಭಾಮೆಯರ ಅಹಂಕಾರವೆಲ್ಲ ಕರಗಿತು. ಅಂತೆಯೇ ತ್ಯಾಗರಾಜನುತನ ಕೃಪೆ ಅವರಿಗಾಯಿತು. (ರಮಣುಲ ಮದಮೆಲ್ಲ ಜರಿಗೆನು ತ್ಯಾಗರಾಜನುತುನಿ ಮದಿ ಕರಿಗೆನು)**

(ವೇದವಾಕ್ಯಮನಿ - ಮೋಹನ).

**ಪಾರಮುಗಾನಿ ಈ ಭವವಾರಿಧಿನಿ ದರಿಂಪಜೇಯುವರದು**
(ಅನಂತ್ಯವಾದ ಈ ಸಂಸಾರ ಸಾಗರವನ್ನು ದಾಟಿಸುವ ವರದ)

(ಕಂದಪದ್ಯ)

**ಪತಿತುಲ ಬ್ರೋಚುವಾಡು ಮನ ಪಾಲಿಟಗಲ್ಗಿ ಸುಖಿಂಬುಲಿಚ್ಚುನೇ**
(ಪತಿತರನ್ನು ಕಾಪಾಡುವ ದೇವರು ನಮ್ಮ ಪಾಲಿಗೆ ಲಭ್ಯವಾಗಿ ಸುಖ ನೀಡುವನು)

(ಚಂಪಕಮಾಲೆ)

**ನನ್ನೇ ಧ್ಯಾನಮು ಸೇಯುಚು . . . . .**
(ಈ ಒಂದೆ ಬರೆಯಲಾಗಿದೆ)

೧೯ ಸ್ಥಿರ ಅನುಗ್ರಹಕ್ಕಾಗಿ ಗೋಪಿಯರು ಕೃಷ್ಣನಲ್ಲಿಗೆ ಉತ್ಸುಕರಾಗಿ ತೆರಳುವುದು ರಮ್ಯವೂ, ಮಂಗಳಕರವೂ ಆದ ಸುರುಟಿ ರಾಗದಲ್ಲಿವೆ (ಶೃಂಗಾರಿಂಚು ಕೊನಿ).

ಗೋಪಿಯರಿಗೆ ನಖಶಿಕಾಂತ ಇದ್ದ ಸ್ವಪ್ರತಿಷ್ಠೆಯು, ಗಂಭೀರವೂ, ಪ್ರತಿಷ್ಠಿತವೂ ಆದ ಭೈರವಿ ರಾಗದಲ್ಲಿದೆ. (ತನಯಂದೇಪ್ರೇಮ).

ನೌಕೆಯ ಏರಿಳಿತಗಳೂ, ನೌಕೆಯನ್ನು ನಡೆಸುತ್ತಿದ್ದ ಗೋಪಿಯರ ಕೈಬಳೆಗಳ ನಿನಾದವೂ ಸೊಗಸಾದ ಪುನ್ನಾಗವರಾಳಿಯಲ್ಲಿ ಧ್ವನಿಸಿದೆ (ಏನೋಮು ನೋಚಿತಿಮೋ - ಮಾನಕಮೋ ವಾನುಚು ಚಂದಾನನು ಹೃದಯಾನನುಂಚ ಇತ್ಯಾದಿ).

ದೇವತೆಗಳು ಕೃಷ್ಣನ ಲೀಲೆಗಳನ್ನು ಆಶ್ಚರ್ಯ ಚಕಿತರಾಗಿ ನೋಡುವುದು ಉಲ್ಲಾಸಭರಿತವಾದ ಕರ್ನಾಟಕಕಾಪಿ* ರಾಗದಲ್ಲಿದೆ (ಜೂತಾಮುರಾರೆ ಈ ವೇಡ್ಕನು).

ಗೋಪಿಯರು ಎದೆಗುಂದಿ ಹಾಡುವ ರಚನೆಗಳು ಶೋಕರಸ ಪ್ರಧಾನವಾದ ವರಾಳಿ, ಘಂಟಾ ರಾಗಗಳಲ್ಲಿವೆ. (ಇಂದುಕೇಮಿ ಸೇತುಮಮ್ಮಾ; ಪೆರುಗು ಪಾಲು ಭುಜಿಯಿಂಚಿ.) 'ಏನೋಮು ನೋಚಿತಿಮೋ' ಹಾಡಿನಲ್ಲಿ 'ನಯ ರಾಗ'ಗಳ ಉಲ್ಲೇಖವಿದೆ.

೨೦ **ಮಯ್ಯರ್ಪಿತ ಮನೋಬುದ್ಧಿ ರ್ಮಾಮೇ ವ್ಯಷ್ಯಸ್ಯ ಸಂಶಯಃ**
'ಮನಸ್ಸು ಬುದ್ಧಿಗಳನ್ನು ಅರ್ಪಿಸಿ ಎಲ್ಲ ಕಾಲದಲ್ಲಿಯೂ ನನ್ನನ್ನೇ ಸ್ಮರಿಸುತ್ತಿರುವ (ನೀನು) ನನ್ನನ್ನೇ ನಿಸ್ಸಂಶಯವಾಗಿ ಹೊಂದುವೆ'[೧೧] ಎಂಬ ಭಗವದ್ಗೀತೆಯ ಸಾರವು ಈ ನಾಟಕದಲ್ಲಿ ಅಡಗಿದೆ. ಇದನ್ನು ಶ್ರೀಕೃಷ್ಣನು ದಿಟಗೊಳಿಸಿದಂತೆ ನಾಟಕದಲ್ಲಿ ಚಿತ್ರಣವಿದೆ.

---

* ಕೆಲವು ಪುಸ್ತಕಗಳಲ್ಲಿ ಈ ರಚನೆಯನ್ನು 'ಕಾಪಿ' ರಾಗದಲ್ಲಿ ಹೇಳಿರುವುದುಂಟು.

**ಪ್ರಹ್ಲಾದ ಭಕ್ತಿವಿಜಯ** : ಭಾಗವತದಲ್ಲಿ ಬರುವ ಪ್ರಹ್ಲಾದನ ಚಿರಪರಿಚಿತವಾದ ಕಥೆಯೇ ಈ ನಾಟಕದ ಕಥಾವಸ್ತು. ಆದರೆ ಮೂಲಕಥೆಯನ್ನು ತ್ಯಾಗರಾಜರು ಇಲ್ಲಿ ಯಥಾವತ್ತಾಗಿ ಚಿತ್ರಿಸದೆ ಅದರೊಂದಿಗೆ ತಮ್ಮ ಕಲ್ಪನೆಯನ್ನೂ ಜೊತೆಗೂಡಿಸಿ ನಾಟಕವನ್ನು ಹೆಣೆದಿದ್ದಾರೆ. ಹೀಗಾಗಿ ನಾಟಕದಲ್ಲಿ ಮೂಲಕಥೆಗಿಂತ ಕೆಲವು ಮಾರ್ಪಾಟುಗಳಿದ್ದರೂ ಕಥಾಸಾರಾಂಶ ಮಾತ್ರ ಒಂದೇ ಆಗಿದೆ.

**ಪ್ರಥಮಾಂಕ** : ಪ್ರಹ್ಲಾದ ಭಕ್ತಿವಿಜಯದ ಪ್ರಥಮಾಂಕವು ಪ್ರಾರ್ಥನೆಯೊಂದಿಗೆ ಆರಂಭವಾಗುತ್ತದೆ. ಪ್ರಾರ್ಥನೆಯ ಬಿಂದು ದೇವತೆ ತ್ಯಾಗರಾಜರ ಇಷ್ಟದೈವವಾದ ಶ್ರೀಸೀತಾರಾಮಚಂದ್ರ. ನಂತರ ಗಣಪತಿಯನ್ನು ಸ್ತುತಿಸಲಾಗಿದೆ. ಎಲ್ಲ ಕಾರ್ಯಾರಂಭದಲ್ಲಿ, ವಿಘ್ನನಿವಾರಣೆಗಾಗಿ ವಿಘ್ನೇಶ್ವರನನ್ನು ಧ್ಯಾನಿಸುವುದು ವಾಡಿಕೆ. ಶ್ರೀವೈಷ್ಣವ ಸಂಪ್ರದಾಯದಂತೆ ವಿಶ್ವಕ್ಸೇನನು ನಿತ್ಯಸೂರಿಯಾದವನು. ನಿತ್ಯಸೂರಿಗಳು ಬಂಧನವನ್ನೆಂದಿಗೂ ಅನುಭವಿಸದವರು. ಅನಂತರ ಸರಸ್ವತಿ, ಗುರುನಾರದ ಹಾಗೂ ಇನ್ನಿತರ ಭಕ್ತರುಗಳಾದ ತುಲಸೀದಾಸ, ಪುರಂದರದಾಸ, ಭದ್ರಾಚಲರಾಮದಾಸ, ಪಾಂಡುರಂಗ, ನಾಮದೇವ, ಜಯದೇವಾದಿ ಪೂರ್ವಭಕ್ತರೆಲ್ಲರಿಗೂ ತ್ಯಾಗರಾಜರ ಪ್ರಣಾಮಗಳು ಸಲ್ಲುತ್ತವೆ.

ತ್ಯಾಗರಾಜರು ಮತ್ತೆ, ಕಲ್ಯಾಣಪರಂಪರೆಯನ್ನೇ ಉಂಟು ಮಾಡಿದ ಸಾಕೇತಾಧಿಪತಿಯನ್ನು ಕುರಿತು, ತಮ್ಮ ಕಾವ್ಯವನ್ನು ಶ್ರವಣಮಾಡುವಂತೆ ಪ್ರಾರ್ಥಿಸುತ್ತಾರೆ. 'ಕಲ್ಯಾಣಪರಂಪರ' ಎಂಬ ಅವರ ಸಂಬೋಧನೆಯು, ದೇವರ ಕರುಣೆಯು ಸಾರ್ವಕಾಲಿಕ ಹಾಗೂ ಸಾರ್ವತ್ರಿಕ ಎಂಬುದನ್ನು ಸೂಚಿಸುತ್ತದೆ. ಅದು ಭಕ್ತನ ಸೇವೆಯಿಂದ ನಿಯಂತ್ರಿತವಲ್ಲ. ಯಾವುದೇ ಭೇದವಿಲ್ಲದೆ ಸರ್ವರಿಗೂ ಮಂಗಳವನ್ನು ಮಾಡಿದವನೆಂಬುದು ಇದರ ಅರ್ಥ. ಮುಂದುವರೆದಂತೆ ಅವರು ಸ್ವವಿಷಯವನ್ನೂ, ಸ್ವಯೋಗ್ಯತೆಯನ್ನೂ 'ರಾಗರಹಿತ'ನೆಂದು ರಾಮನಲ್ಲಿ ನಿವೇದಿಸುತ್ತಾರೆ. ತಮ್ಮ ಈ ಕಾವ್ಯವನ್ನು 'ನಾಟಕ'ವೆಂದೂ ಅದರ ಹೆಸರು ಪ್ರಹ್ಲಾದ ಭಕ್ತಿ(ಭಕ್ತ)ವಿಜಯವೆಂದೂ ಹೇಳಿಕೊಂಡಿರುವುದಿಲ್ಲಿ ಗಮನಾರ್ಹ.* ನಾಟಕದ ಮರ್ಮಗಳನ್ನೂ, ಕಥಾವಸ್ತುವನ್ನೂ ಒಂದೆರಡು ಸಾಲುಗಳಲ್ಲೇ ಅವರು ತಿಳಿಸುತ್ತಾರೆ. ಈ ಕಾವ್ಯವನ್ನು ಸ್ತುತಿಸಿದ, ಶ್ರವಣಮಾಡಿದವರಿಗೆಲ್ಲ ಯಥೇಚ್ಛ ಫಲ ನೀಡುವಂತೆ ರಾಮನಲ್ಲಿ ಅವರು ಪ್ರಾರ್ಥಿಸುತ್ತಾರೆ.

ಈ ಅಂಕದಲ್ಲಿನ ನೃತ್ಯ ಗಣಪತಿಯ ಚಿತ್ರಣ ಬಲು ಸೊಗಸಾಗಿದೆ. ನಟಿಸುತ್ತಾ ಬಂದ ಈತ ಹಲಸು, ನಾರಿಕೇಳ, ಜಂಬೂಫಲಗಳನ್ನು ಸೇವಿಸುತ್ತಾ ಗಂಭೀರ ನಡಿಗೆಯೊಂದಿಗೆ, ಗೆಜ್ಜೆನಾದದೊಂದಿಗೆ ಹೊರಟಿದ್ದಾನೆ.

**ನಟಿಂಪುಚುನು ವೆಡಲಿನ . . . .**
**ಪನಸನಾರಿಕೇಳಾದಿ ಜಂಬೂ ಫಲಮುಲನಾರಗಿಂಚಿ**

---

* ಕೆಲವು ಗ್ರಂಥಗಳು ಪ್ರಹ್ಲಾದ ಭಕ್ತಿವಿಜಯವೆಂದೂ ಮತ್ತೆ ಕೆಲವು ಪ್ರಹ್ಲಾದ ಭಕ್ತವಿಜಯವೆಂದೂ ಹೇಳುತ್ತವೆ.

**ಘನತರಂಬುಗನು ಮಹಿಪೈ ಪದಮುಲು**
**ಘಲ್ಲು ಘಲ್ಲುನ ನುಂಚಿ . . . .**

**(ಶ್ರೀಗಣಪತಿನಿ ಸೇವಿಂಪರಾರೆ - ಸೌರಾಷ್ಟ್ರ)**

ಇದೇ ವೇಳೆಯಲ್ಲಿ ದೌವ್ವಾರಿಕನೊಬ್ಬ ವಾಸುದೇವನನ್ನು ಸ್ಮರಿಸುತ್ತಾ ಬರುತ್ತಾನೆ. ಸೂತ್ರಧಾರ ಮತ್ತು ಈತನ ನಡುವೆ ನಡೆದ ಸಂಭಾಷಣೆಯಿಂದ, ಈ ನಾಟಕದ ಪಠನೆಯಿಂದ ಇಹಪರಗಳೆರಡರಲ್ಲೂ ಸುಖ ಉಂಟಾಗುವುದೆಂಬುದು ಸ್ಪಷ್ಟವಾಗುತ್ತದೆ.

ಕಥಾರಂಭದಲ್ಲಿ ಹರಿದ್ವೇಷಿಯಾದ ಹಿರಣ್ಯಕಶಿಪು ಪ್ರಹ್ಲಾದನನ್ನು ಶಿಕ್ಷಿಸುವ ಸಲುವಾಗಿ ಭಟರಿಗೆ ಆಜ್ಞೆ ಮಾಡಿದ್ದಾನೆ. ಭಟರು ತಮ್ಮ ದೊರೆಯ ಆದೇಶವನ್ನು ಉಲ್ಲಂಘಿಸಲಾರದೆ ಹರಿಭಕ್ತನಾದ ಪ್ರಹ್ಲಾದನನ್ನು ನಾಗಪಾಶದಿಂದ ಬಂಧಿಸಿ ಬೆಟ್ಟದಿಂದ ಸಾಗರದೆಡೆಗೆ ನೂಕಿದ್ದಾರೆ. ಸಾಗರನು ತನ್ನಲ್ಲಿಗೆ ಬಂದವನು ಪರಮಭಕ್ತನಾದ ಪ್ರಹ್ಲಾದನೆಂದು ತಿಳಿದು ಆತನನ್ನು ಆದರಿಸುತ್ತಾನೆ. ಅನಂತರ ಪ್ರಹ್ಲಾದ ಮತ್ತು ಸಮುದ್ರರ ನಡುವೆ ಸಂಭಾಷಣೆ ಜರುಗುತ್ತದೆ. ಸಮುದ್ರನು ಪ್ರಹ್ಲಾದನಿಗೆ ಕಾಣಿಕೆಗಳನ್ನಿತ್ತು 'ನನ್ನ ಪಾಲಿಗೆ ಶ್ರೀಹರಿ ಹೇಗೋ ನೀನೂ ಹಾಗೆಯೇ' ಎಂದು ಪ್ರೀತಿ ತೋರಿದರೆ, ಪ್ರಹ್ಲಾದನೂ ಅಷ್ಟೇ ಗೌರವದಿಂದ 'ನನ್ನ ಪೂರ್ವಪುಣ್ಯ ವಿಶೇಷದಿಂದ ನಿನ್ನನ್ನು ಕಾಣುವಂತಾಯಿತು. ನನ್ನನ್ನು ನಿನ್ನಂತೆಯೇ ಹರಿಸೇವೆಯಲ್ಲಿ ತೊಡಗಿಸು' ಎಂದು ಪ್ರಾರ್ಥಿಸುತ್ತಾನೆ.

ಶ್ರೀಹರಿಯು ಸಾಗರಶಯನನೆಂಬುದು ಪುರಾಣದ ಕಲ್ಪನೆ. ಸಾಗರನು ಹೀಗೆ ತನ್ನ ಹೃನ್ಮಧ್ಯೆ ಹರಿಯನ್ನು ಇರಿಸಿಕೊಳ್ಳುವಲ್ಲಿ, ಆತನು ಆಚರಿಸಿದ ಪುಣ್ಯಕಾರ್ಯವಾದರೂ ಏನೆಂದು ಅತೀವ ಉತ್ಸುಕತೆಯಿಂದ ಪ್ರಹ್ಲಾದ ಸಾಗರನನ್ನು ಪ್ರಶ್ನಿಸುತ್ತಾನೆ. ಆಗ ಸಾಗರನು ದೇವರನ್ನು ಹೃತ್ಪೂರ್ವಕವಾಗಿ ಪೂಜಿಸುವ ವಿಧಾನವನ್ನು ಅರ್ಥಾತ್ ಮಾನಸ ಪೂಜೆಯನ್ನೂ, ಕೀರ್ತನಭಕ್ತಿಯ ಹಿರಿಮೆಯನ್ನೂ ಮನದಟ್ಟು ಮಾಡುತ್ತಾನೆ. ದೇವರು ಯಾವುದೇ ಜಪತಪಗಳಿಗಾಗಲೀ, ಯಜ್ಞಯಾಗಾದಿಗಳಿಗಾಗಲೀ ಬರುವುದಿಲ್ಲ. ಮನಸಾರ ಆತನನ್ನು ಸ್ತುತಿಸಿದರೆ ಹರಿ ಸನಿಹ ಬಂದು ತನ್ನ ಭಕ್ತನನ್ನು ಮೆಚ್ಚಿಕೊಳ್ಳುವನೆಂಬ ರಹಸ್ಯವನ್ನು ಸಮುದ್ರರಾಜನು ಪ್ರಹ್ಲಾದನಿಗೆ ತಿಳಿಸುತ್ತಾನೆ.

**ಏಜಪತಪಮುಲಕು ರಾಡು - ಯಾಜನಾದುಲಕುರಾಡು**
**ರಾಜಿಗಾ ನುತಿಯಿಂಚು ತ್ಯಾಗರಾಜನುತುನಿ ಈ ವೇಳ**
**ವಚ್ಚುನು ಹರಿ ನಿನುಜೂಡ - ಮೆಚ್ಚುನು ಹರಿ ನಿನ್ನು ಜೂಚಿ**

ಹೀಗೆ ಈ ಅಂಕ ಅಂತ್ಯಗೊಳ್ಳುತ್ತದೆ.

**ಪ್ರಥಮಾಂಕದ ಮುಖ್ಯಾಂಶಗಳು**

೧ ಆದಿ ದ್ವಿಪದಿ 'ಶ್ರೀಚೇತವಿಲಸಿಲ್ಲು' ಭಾಗದಲ್ಲಿ ನಾಟಕದ ಶಿರೋನಾಮೆ

ತ್ಯಾಗರಾಜರಿಂದಲೇ ಅಳವಟ್ಟಿದೆ (*ಪ್ರಹ್ಲಾದ ಭಕ್ತಿವಿಜಯಂಬನ ಬಾಗೈನ ಕೃತಿನಿ*).

ನಾಟಕದ ಮರ್ಮಗಳು ಜ್ಞಾನ, ವಿಜ್ಞಾನ, ವೈರಾಗ್ಯ, ಸದ್ಭಕ್ತಿಗಳು [ಶಾಸ್ತ್ರಗ್ರಂಥಗಳ ಅಧ್ಯಯನದಿಂದ ಉಂಟಾಗುವ ಅರಿವು ಜ್ಞಾನ, ಇದರ ಆಚರಣೆಯಿಂದ ಲಭ್ಯವಾಗುವ ಅನುಭವ ವಿಜ್ಞಾನ, ಐಹಿಕ ವಿಷಯಾದಿಗಳ ಬಗೆಗೆ ನಿರಾಸಕ್ತಿ-ವೈರಾಗ್ಯ, ಸದ್ವಸ್ತುವಾದ ಭಗವಂತನನ್ನು ಕುರಿತ ಆದರಣೆಯೇ (ಪ್ರೀತಿಯೇ) ಸದ್ಭಕ್ತಿ ಎಂದು ಅರ್ಥೈಸಬಹುದು].

**ಜ್ಞಾನ ವಿಜ್ಞಾನ ವೈರಾಗ್ಯ ಸದ್ಭಕ್ತಿ ದೀನಿ ಭಾವಮುಲೆಲ್ಲ ದಿವ್ಯಮೈವೆಲುಗು**

೨ ತಮ್ಮ ಕಾವ್ಯದಲ್ಲಿನ ತಪ್ಪು-ಒಪ್ಪುಗಳೆರಡನ್ನೂ ಭಗವದರ್ಪಣ ಮಾಡುವುದು ಸತ್ಕವಿ ಸಂಪ್ರದಾಯ. ತ್ಯಾಗರಾಜರೂ ಅದನ್ನಿಲ್ಲಿ ಅನುಸರಿಸಿದ್ದಾರೆ.

**ಸಗುಣ ನಿರ್ಗುಣಮುಲ ಸಮಮುಗಾನೆಂಚು**

೩ ಈ ಸತ್ಕಾವ್ಯವನ್ನು ಓದಿದ, ಶ್ರವಣ ಮಾಡಿದ, ಸ್ತುತಿಸಿದವರಿಗೆಲ್ಲ ಅಮಿತ ಫಲ ನೀಡಬೇಕೆಂದು ತ್ಯಾಗರಾಜರು ಶ್ರೀರಾಮನಲ್ಲಿ ಪ್ರಾರ್ಥಿಸುತ್ತಾರೆ. ಇದು ಎರಡು ದೃಷ್ಟಿಗಳಿಂದ ಗಮನಾರ್ಹ. ಒಂದು, ಅವರ ಭಕ್ತಿ ದ್ಯೋತಕ. ಎರಡು, ಇತರರನ್ನೂ ಅಧ್ಯಾತ್ಮ ಸಾಧನೆಯತ್ತ ಸೆಳೆಯುವಲ್ಲಿ ಅವರ ಹಿರಿಮೆ. ಈ ಮೂಲಕ, ಸಾಮಾಜಿಕರೆಡೆಗೆ ತ್ಯಾಗರಾಜರಲ್ಲಿದ್ದ ಕಳಕಳಿ. ಅರ್ಥಾತ್ ಸಮಾಜ ಸುಧಾರಣೆ ವ್ಯಕ್ತವಾಗುತ್ತದೆ.

೪ ಇಡೀ ನಾಟಕದಲ್ಲಿ ಕಾಣಬರುವ ಏಕೈಕ **ತೇಟಗೀತ** ಈ ಅಂಕದಲ್ಲಿದೆ. ಈ ಗೀತದಲ್ಲಿ ರಾಗತಾಳ ಸಹಿತವಾದ ಗಾನರಸವನ್ನು ಪ್ರತ್ಯೇಕವಾಗಿ ಉಲ್ಲೇಖಿಸಲಾಗಿದೆ.

**ಆಗಮಾಂತ ವಿಹಾರಿವೈಯಲರುನೀಕು**
**ರಾಗತಾಳಾದಿಯುತ ಗಾನರಸಮುಚೇತ . . . .**

೫ 'ಶ್ರೀಗಣಪತಿನಿ' ಗಣಪತಿ ಸ್ತುತಿಯಲ್ಲಿ 'ಧಿತ್ತಳಾಂಗು' ಎಂಬ ಜತಿ ಕಾಣಬರುತ್ತದೆ. ಬಹುಶಃ ತ್ಯಾಗರಾಜ ವಿರಚಿತ ರಚನೆಗಳಲ್ಲಿ ಜತಿಯನ್ನು ಒಳಗೊಂಡ ಏಕೈಕ ರಚನೆಯಿದು.

೬ 'ವಾಸುದೇವಯನಿ' ಎಂಬ **ದರುವಿನಲ್ಲಿ** ದ್ವಾರಪಾಲಕನ ಚಿತ್ರಣ ಬಲು ಆಕರ್ಷಕವಾಗಿದೆ. ವಾಸುದೇವನನ್ನು ಸ್ಮರಿಸುತ್ತಾ ಬರುತ್ತಿರುವ ಈತ ಕಾವಿಪಂಚೆಯುಟ್ಟಿದ್ದಾನೆ. ಹಣೆಯಲ್ಲಿ ಶ್ರೀಚೂರ್ಣ ಮೆರೆದಿದೆ. ಕೈಲಿ ಬಂಗಾರದ ದಂಡ ಹಿಡಿದಿದ್ದಾನೆ. ರೂಪಿನಲ್ಲಿ ತಾನೊಬ್ಬ 'ಮನ್ಮಥನೋ' ಎಂಬ ಹೆಮ್ಮೆಯಿದೆ. ತನ್ನ ಮೀಸೆಗಳನ್ನು ತಿರುವುತ್ತಾ, ದಾಪುಗಾಲು ಹಾಕುತ್ತಾ, ಅಟ್ಟಹಾಸ ಮಾಡುತ್ತಾ ಹೊರಟಿದ್ದಾನೆ.

೭ ನಾಟಕಾರಂಭದವೇಳೆಗೆ ಮೂಲ ಕಥೆಯಲ್ಲಿನ ಎಷ್ಟೋ ಘಟನೆಗಳು ನಡೆದು

ಹೋಗಿವೆ (ಪ್ರಹ್ಲಾದನನ್ನು ಇನ್ನಿತರ ರೀತಿಯಲ್ಲಿ ಶಿಕ್ಷಿಸಿದುದು ಇತ್ಯಾದಿ).

೮ ಸಮುದ್ರನ ಪ್ರಾರ್ಥನೆಯ ಮೇರೆಗೆ ಗರುಡ ಬಂದು ಪ್ರಹ್ಲಾದನನ್ನು ಪಾಶ ವಿಮುಕ್ತನಾಗಿಸುತ್ತಾನೆ. ಆದರೆ ಮೂಲಕಥೆಯಲ್ಲಿ ಯಾರ ಮಧ್ಯವರ್ತಿತ್ವವೂ ಇಲ್ಲದೆ ಪ್ರಹ್ಲಾದ ಹರಿಯಿಂದಲೇ ಬಿಡುಗಡೆ ಪಡೆದಿರುತ್ತಾನೆ.

೯ ಸಮುದ್ರರಾಜ ಹಾಗೂ ಪ್ರಹ್ಲಾದರ ಸಂಭಾಷಣೆಯ ನಡುವೆ ಹರಿಭಕ್ತರು ಮತ್ತು ಸತ್ಸಂಗದ ಹಿರಿಮೆ-ಗರಿಮೆಗಳನ್ನು* ಸಮುದ್ರನು ನಾಲ್ಕು ಶ್ಲೋಕಗಳ ಮೂಲಕ ಹೇಳುತ್ತಾನೆ.

**ಅಭ್ಯರ್ಚಯಿತ್ವಾಗೋವಿಂದಂ . . . .**

**ಅರ್ಚಯಾಮೇವತುಹರೇ . . . .**

**ತುಲಯಾಮಿಲವೇನಾಪಿ . . . .**

**ಅಮೃತಶ್ರುತಿಮೀಪ್ಸಿತಾರ್ಥಲಾಭಂ . . . .**

೧೦ ಕೃತಿಯ ಮೂಲೋದ್ದೇಶವನ್ನು ಸಮರ್ಥಿಸುವ ಅಥವಾ ಪುಷ್ಟೀಕರಿಸುವಂಥ ಹೇಳಿಕೆ ಕಾಣಬರುತ್ತದೆ (Key Statement).

**ಹರಿಭಕ್ತುಲನರ್ಚಿಂಚನಿ ಜನ್ಮಂಬಿಲಕುಮೋಪು**

(ಹರಿಭಕ್ತರನ್ನು ಅರ್ಚಿಸದ ಜನ್ಮ ಭೂಭಾರವಾದುದು)

೧೧ ಪೌರಾಣಿಕ ಪ್ರಸಂಗದ ಹಿನ್ನಲೆಗಳು ಕಾಣಬರುತ್ತವೆ (Allusions).

**ಅಮರೇಶುನಿ ಗೆಲಿಚಿ ನೀವಮೃತಮುದೆಚ್ಚಿ**
**ವಿಮಲಕೀರ್ತಿವಹಿಂಚಿ ವೆಲಸಿಲ್ಲಿನ ವೀರ.**

ಇಂದ್ರನನ್ನು ಗೆದ್ದು ಅಮೃತ ಹೊತ್ತು ತಂದ ಗರುಡನ ಕಥೆ.

೧೨ ಭ್ರಮರ-ಕೀಟ ನ್ಯಾಯ ಅಲಂಕಾರಶಾಸ್ತ್ರದಲ್ಲಿ ಪ್ರಸಿದ್ಧವಾದ ಒಂದು ನ್ಯಾಯ. ಇಲ್ಲಿ ಕೀಟವೊಂದನ್ನು ಭ್ರಮರವು ತನ್ನಂತೆಯೇ ಆಗುವಂತೆ ಪರಿವರ್ತಿಸುತ್ತದೆ. ಇದನ್ನು ಈ ಅಂಕದಲ್ಲಿ ಪ್ರಸ್ತಾಪಿಸಲಾಗಿದೆ. ಸಮುದ್ರನಂತೆಯೇ ಶ್ರೀಹರಿಯನ್ನು ತನ್ನ ಹೃನ್ಮಧ್ಯೆ ಇರಿಸಿಕೊಳ್ಳಬೇಕೆಂಬ ಆಸೆಯಿಂದ ಪ್ರಹ್ಲಾದನು ಸಮುದ್ರನಲ್ಲಿ ಹೀಗೆ ಪ್ರಾರ್ಥಿಸುತ್ತಾನೆ.

**ಭ್ರಮರಕೀಟಮು ರೀತಿ ಬನಿಬೂನಿ ಸೇಯವೇ**

೧೩ ಈ ಅಂಕದಲ್ಲಿರುವ ಏಳು ದರುಗಳ ಪೈಕಿ ಶ್ರೀ ಗಣಪತಿ (ಸೌರಾಷ್ಟ್ರ) ಮತ್ತು ವಾಸುದೇವಯನಿ (ಕಲ್ಯಾಣಿ) ಅತ್ಯಂತ ಜನಪ್ರಿಯವಾಗಿದ್ದು ಕಚೇರಿಗಳಲ್ಲಿ ಮತ್ತೆ ಮತ್ತೆ ಕೇಳಿಬರುತ್ತವೆ. ಉಳಿದವು ಸಾಗರುಂಡುವೆಡಲೆ (ಯಮುನಾ ಕಲ್ಯಾಣಿ) ವಿನತಾಸುತರಾರಾ (ಹುಸೇನಿ) ವಿಷ್ಣುವಾಹನುಂಡು (ಶಂಕರಾ

---

* ಹದಿನಾಲ್ಕನೇ ಅಧ್ಯಾಯದಲ್ಲೂ ನೋಡಿ.

ಭರಣ) ವಾರಿಧಿನೀಕು (ತೋಡಿ) ವಚ್ಚುನು ಹರಿ (ಕಲ್ಯಾಣಿ) ರಚನೆಗಳು. ಇವುಗಳಲ್ಲಿ ವಾಸುದೇವಯನಿ ರಚನೆಯ ಸಂಗೀತವು ಭಾಗಶಃ ಅಥವಾ ಪೂರ್ಣವಾಗಿ ಪ್ರಕ್ಷಿಪ್ತವಿರಬೇಕೆಂಬುದು ಹಿರಿಯರ ಅಭಿಪ್ರಾಯ.[೧೧] ಮೊದಲದರು ಮಂಗಳಕರವಾದ ಸೌರಾಷ್ಟ್ರ ರಾಗದಲ್ಲಿ ಅಳವಟ್ಟಿರುವುದು ಗಮನಾರ್ಹ.

**ದ್ವಿತೀಯಾಂಕ** : ಸಮುದ್ರರಾಜನ ಉಪದೇಶದಂತೆ ಪ್ರಹ್ಲಾದ ಹರಿಸ್ಮರಣೆಯಲ್ಲಿ ತೊಡಗುತ್ತಾನೆ. ನಡುವೆ ತನ್ನ ಪೂರ್ವೋತ್ತರವನ್ನೂ ಹೇಳಿಕೊಳ್ಳುತ್ತಾನೆ. ಬಾಲ್ಯ ದಿಂದಲೇ ತಾನು ಹರಿಯನ್ನು ನಂಬಿ ಸ್ತುತಿಸಿದುದರಿಂದ ತಂದೆಯಿಂದ ಉಂಟಾದ ಉಪಟಳಗಳನ್ನು ಪ್ರಸ್ತಾಪಿಸುತ್ತಾನೆ. ಇಂತಹ ನೋವೆಲ್ಲವನ್ನೂ ತಾನು ಸಹಿಸಿದು ದಾದರೂ ಹರಿಯಿಂದ ದೂರವಿರುವುದಕ್ಕಾಗಿಯೇ ಎಂದು ದುಃಖಪಡುತ್ತಾನೆ. ದೇವ ರೆಲ್ಲಿ-ತಾನೆಲ್ಲಿ ಎಂಬ ನಿರಾಸೆ ಮೂಡುತ್ತದೆ. ಎಟುಕದ ಹಣ್ಣಿಗಾಗಿ ಆಸೆಪಟ್ಟೆನೇನೋ ಎಂದು ಕನಲುತ್ತಾನೆ. ತಾಯಿಯ ಗರ್ಭದಲ್ಲಿದ್ದಾಗಲೇ ದೇವರೇಕೆ ತನ್ನನ್ನು ರಕ್ಷಿಸಿದ ನೆಂದು ಪ್ರಶ್ನಿಸುತ್ತಾನೆ. ಈಗಾಗಲೇ ಒಮ್ಮೆ ರಕ್ಷಿಸಿದ ದೇವರೇಕೆ ಇದೀಗ ಈ ರೀತಿಯಿದ್ದಾನೆಂಬುದು ಆತನ ಅಳಲಿಗೆ ಕಾರಣವಾಗಿದೆ.

ಪ್ರಹ್ಲಾದ ಮೊರೆಯಿಡುತ್ತಿದ್ದ ಇದೇ ಸಮಯದಲ್ಲಿ ಶ್ರೀ ನಾರದಮುನಿಯು ಸನಕಸನಂದನಾದಿಗಳೆಡೆ ಹೋಗಿ ಪ್ರಹ್ಲಾದನ ಭಕ್ತಿ ಔನ್ನತ್ಯವನ್ನೂ ಜ್ಞಾನವಿವೇಕವನ್ನೂ ಪ್ರಶಂಸಿಸಿ ನಂತರ ಪ್ರಹ್ಲಾದನೆಡೆಗೆ ಬರುತ್ತಾನೆ.

ಶ್ರೀಹರಿಯು ಪ್ರಹ್ಲಾದನೆಡೆಗೆ ಬರಲು ನಿಶ್ಚಯಿಸಿರುವ ಸುವಾರ್ತೆಯನ್ನು ನಾರದನು ಪ್ರಹ್ಲಾದನಿಗೆ ತಿಳಿಸುತ್ತಾನೆ. ಇದರಿಂದ ಪ್ರಹ್ಲಾದನಿಗೆ ಪರಮಾನಂದವಾಗುತ್ತದೆ.

**ದ್ವಿತೀಯಾಂಕದ ಮುಖ್ಯಾಂಶಗಳು**

೧ ಹಿರಿಯರ ಮಾತು ಸತ್ಯವಾಗುವುದೆಂಬ ದೃಢನಂಬಿಕೆಯನ್ನು ಪ್ರಹ್ಲಾದನ ಮೂಲಕ ತ್ಯಾಗರಾಜರು ಹೇಳಿಸುತ್ತಾರೆ.

**ಪೆದ್ದಲ ಮಾಟಲವಲ್ಲನು ಗದ್ದನಿ ಸತ್ಯಂಬು ವರದ ಕಡುನಮ್ಮಿತಿ**

೨ ಇಡೀ ನಾಟಕದಲ್ಲಿ ಕಾಣಬರುವ ಏಕೈಕ **ದಂಡಕ** ಈ ಅಂಕದಲ್ಲಿದೆ. (ಶ್ರೀ ಭಕ್ತ ಹೃತ್ತಾಪ . . .) ದಂಡಕದ ಕಡೆಯಲ್ಲಿ 'ಮಾಂಪಾಹಿ' ಶಬ್ದವು ಮೂರು ಬಾರಿ ಪ್ರಯೋಗಗೊಂಡಿದೆ. ಶಾಂತಿ ಮಂತ್ರದಲ್ಲಿಯೂ ಹೀಗೆಯೇ ಓಂ **ಶಾಂತಿಃ ಶಾಂತಿಃ ಶಾಂತಿಃ** ಎಂದಿರುವುದನ್ನು ನಾವಿಲ್ಲಿ ಸ್ಮರಿಸಬಹುದು. ಬಹುಶಃ ಇದು ಆಧ್ಯಾತ್ಮಿಕ, ಆಧಿದೈವಿಕ ಮತ್ತು ಆಧಿಭೌತಿಕ ದುಃಖ(ತಾಪ ತ್ರಯ)ಗಳ ನಿವಾರಣೆಗಾಗಿ ಮೂರು ಬಾರಿ ಈ ಪದವನ್ನು ಉಚ್ಚರಿಸಿರ ಬಹುದು.[೧೨]

೩ ವಂದನಮು ರಘುನಂದನ (ಶಹನ) ರಚನೆಯ ಪಲ್ಲವಿಯಲ್ಲಿ ವಂದನಭಕ್ತಿ,

ಚರಣದಲ್ಲಿ ರಾಮನಾಮದ ಬಗೆಗೆ ತ್ಯಾಗರಾಜರಲ್ಲಿದ್ದ ಅಚಲ ನಂಬುಗೆ ಮತ್ತು ಹಿರಿಮೆಗಳು ಪ್ರಹ್ಲಾದನ ಮಾತುಗಳ ಮೂಲಕ ಹೊರಸೂಸಿದೆ.

**ಕ್ಷೇಮಮು ದಿವ್ಯಧಾಮಮು ನಿತ್ಯನೇಮಮು ರಾಮನಾಮಮು**

ಕ್ಲಿಷ್ಟರಾಗವಾದರೂ ಸರಳ ಧಾತು ಈ ರಚನೆಗೆ ಅಳವಟ್ಟಿದೆ.

೪ ಮೂಲೋದ್ದೇಶ ಸಮರ್ಥನಾ ಉಕ್ತಿ ಹೀಗಿದೆ. (Key statement)

**ಯೀಶುಗನಲೇನಿ ಜನ್ಮಂಬಿಲಕು ಮೋಪು**

(ದೇವರನ್ನು ಕಾಣಲಾಗದ ಜನ್ಮ ಭೂಮಿಗೆ ಭಾರ)

ಪ್ರಥಮಾಂಕದಲ್ಲಿ ಹರಿಭಕ್ತರನ್ನು ಅರ್ಚಿಸದ ಜನ್ಮ ಭೂಭಾರವೆಂದು ಹೇಳಿದರೆ ಭಕ್ತರನ್ನು ಅರ್ಚಿಸುವ ಮೂಲಕ ಭಗವಂತನನ್ನು ಕಾಣಬಹು ದೆಂಬ ಅಧ್ಯಾತ್ಮ ಸಾಧನೆಯ ರೀತಿಯನ್ನಿಲ್ಲಿ ತಿಳಿಸಲಾಗಿದೆ.*

೫ ತೀವ್ರ ನಿರಾಸೆಯ ಘಟ್ಟದಲ್ಲಿ ಆಶಾಕಿರಣವೊಂದು ಮೂಡಿದಾಗ ಉಂಟಾ ಗುವ ಆನಂದ ಹೇಳಲಾಗದುದು. ಇದು ಮಾನವ ಸಹಜಸ್ವಭಾವ. ತ್ಯಾಗ ರಾಜರು ಪ್ರಹ್ಲಾದನಿಗೆ ದೂರದಿಂದ ವೀಣಾನಾದ ಕೇಳಿಸಿತೆಂದು ಹೇಳುವಲ್ಲಿ ಮನೋವಿಜ್ಞಾನದ ಈ ಹಿನ್ನಲೆಯಿದೆ. ಇದು ತ್ಯಾಗರಾಜರಿಗಿದ್ದ ಮಾನವ ಸಹಜ ಸ್ವಭಾವದ ಅರಿವನ್ನು ಪ್ರತಿಬಿಂಬಿಸುತ್ತದೆ.

೬ ನಿಜಭಕ್ತನಾದ ಪ್ರಹ್ಲಾದನಿಲ್ಲಿ ನಿಷ್ಠೆ ಮತ್ತು ಆತ್ಮಸ್ಥೈರ್ಯದಿಂದ 'ಎಲ್ಲ ಕಾಲದಲ್ಲೂ ನಾನು ನಿಜಭಕ್ತನೇ ಆಗಿದ್ದರೆ ವೀಣಾನಾದವು ನನ್ನೆದುರು ಬರಲಿ' ಎಂದು ಪಣ ಒಡ್ಡುತ್ತಾನೆ.[೧೩] ಆತ್ಮಸ್ಥೈರ್ಯವಿಲ್ಲದೆ ಅಳುಕಿನಿಂದ ಮಾಡಿದ ಕೆಲಸ ಫಲಕಾರಿಯಲ್ಲವೆಂಬ ಅಂಶ ಪರೋಕ್ಷವಾಗಿ ಇಲ್ಲಿ ಮೂಡಿದೆ.

೭ ಇಡೀ ನಾಟಕದಲ್ಲಿ ಕಾಣಬರುವ ಏಕಮಾತ್ರ '**ಚೂರ್ಣಿಕೆ**' (ಜಯ ಜಯಾ ಸಕಲನಿಗಮಾಗಮ ಕುಶಲ ಕಿನ್ನರ ಕಿಂಪುರುಷ . . . .) ಈ ಅಂಕದಲ್ಲಿದ್ದು ಇದರಲ್ಲಿ ವೈಕುಂಠದ ವರ್ಣನೆ ವೈಭವೋಪೇತವಾಗಿದೆ.

೮ ಲಕ್ಷ್ಮೀ-ಹರಿ ಸಂವಾದ ಈ ಅಂಕದಲ್ಲಿ ಕಾಣಬರುತ್ತದೆ. ಮಾತೃಸ್ವರೂಪಳಾದ ದೇವಿಯು ಮೊದಲಿಗೆ ಸ್ತ್ರೀಸಹಜ ಸ್ವಭಾವದಂತೆ ಪ್ರತಿಕ್ರಿಯೆ ತೋರುತ್ತಾಳೆ. ಪದೇ ಪದೇ ಭಕ್ತರಕ್ಷಣೆಗಾಗಿ ದೇವರು ತನ್ನನ್ನು ಬಿಟ್ಟು ತೆರಳುವುದರಿಂದ ವಿರಹಬಾಧೆ ತಾಳಲಾರೆನೆನ್ನುತ್ತಾಳೆ.

೯ ಈ ಅಂಕದಲ್ಲಿ ಆರು ದರುಗಳಿವೆ. ಅವುಗಳ ಪೈಕಿ ವಂದನಮು (ಶಹನ), ನಾರದಮುನಿವೆಡಲಿನ (ಪಂತುವರಾಳಿ) ಗಳು ವಿಶೇಷವಾಗಿ ಪ್ರಯೋಗದ ಲ್ಲಿವೆ. ಉಳಿದವು ಎಟ್ಲಕನುಗೊಂದುನೋ (ಘಂಟಾ) ಇಂದುಕಾ

---

* ಹದಿನಾಲ್ಕನೇ ಅಧ್ಯಾಯದಲ್ಲೂ ನೋಡಿ.

ಈತನುವುನು (ಪುನ್ನಾಗವರಾಳಿ) ನಿಜಮ್ಮೈತೆ (ಭೈರವಿ) ಇವುಡೈನ ನನು ದಲಚಿನಾರಾ (ಆರಭಿ) ಅಪರೂಪವಾಗಿದೆ.

೧೦ *ನಿಜಮ್ಮೈತೆ ಮುಂದರ ನಿಲುವುಮು* (ನಿಜವೇ ಆದರೆ ನನ್ನೆದುರು ನಿಲ್ಲು) ಎಂಬ ಸವಾಲನ್ನುಳ್ಳ ಈ ರಚನೆ ತಾರಗಾಂಧಾರದಿಂದ ಆರಂಭವಾಗುವಂತಿದೆ. ಇದು ಪ್ರಹ್ಲಾದನಿಗೆ ತನ್ನ ಭಕ್ತಿಸ್ಥಿರತೆಯ ಬಗೆಗಿದ್ದ ನಂಬುಗೆಯನ್ನು ವ್ಯಕ್ತಗೊಳಿಸುವಂತಿದೆ.

ೞೞ ಗರೀ ಸಾ ಸಾ

ನಿಜ ಮೈತೇ (ಮಿಶ್ರಛಾಪುತಾಳ)

**ತೃತೀಯಾಂಕ** : ಹರಿ-ಲಕ್ಷ್ಮಿಯರ ಸಂವಾದದ ಸಾರವನ್ನು ತಿಳಿದ ಪ್ರಹ್ಲಾದನ ದುಃಖ ಇದೀಗ ಇಮ್ಮಡಿಗೊಂಡಿದೆ. ಇದಕ್ಕೆ ಕಾರಣ ಆ ಕ್ಷಣದಲ್ಲೇ ದೇವರು ತನ್ನೆಡೆಗೆ ಬರಲಿಲ್ಲವೆಂಬುದು. ಹೀಗಾಗಿ ಪ್ರಹ್ಲಾದನು ದುಃಖಸಾಗರದಲ್ಲಿ ಮುಳುಗುತ್ತಾನೆ. ಅದೇ ಕ್ಷಣದಲ್ಲಿ ಅವನಿಗೆ ಮೊದಲಬಾರಿಗೆ ಹರಿದರ್ಶನವಾಗುತ್ತದೆ. ಇದರಿಂದ ಪ್ರಹ್ಲಾದನಿಗೆ ಆಶ್ಚರ್ಯ, ಹರ್ಷ, ಭಯಗಳೆಲ್ಲವೂ ಏಕಕಾಲದಲ್ಲೇ ಉಂಟಾಗುತ್ತದೆ. ಅರೆಕ್ಷಣ ಭಾವಗಳ ಹೊಯ್ದಾಟದಲ್ಲಿದ್ದ ಪ್ರಹ್ಲಾದ ಎಚ್ಚೆತ್ತು 'ಇಂತಹ ಸುಖ ತನಗೆ ಲಭ್ಯವಾಗಲು ತಾನು ಮಾಡಿದ ಪುಣ್ಯವಾದರೂ ಯಾವುದೆಂದು' ಆನಂದದಿಂದ ಸ್ತುತಿ ಮಾಡುತ್ತಾನೆ.

**ತೃತೀಯಾಂಕದ ಮುಖ್ಯಾಂಶಗಳು**

೧ ವಿರಹದುಃಖದ ತೀವ್ರತೆಯನ್ನು ಉತ್ತಮ ಉಪಮೆಗಳೊಂದಿಗೆ ಪ್ರಸ್ತುತಪಡಿಸಲಾಗಿದೆ. ನಾರದನ ಮಾತುಗಳನ್ನು ಕೇಳಿದ ಪ್ರಹ್ಲಾದನ ಶೋಕ ಇಮ್ಮಡಿಸಿತು. ಇದು ಉರಿಯುವ ಬೆಂಕಿಯ ಜ್ವಾಲೆಯನ್ನು ಹೆಚ್ಚಿಸುವ ಗಾಳಿ, ತುಪ್ಪಗಳಂತಾಯ್ತು.

**ಮೌನಿ ವಾರ್ತಲು ಆಜ್ಯಪ್ರವಾಹಮಾಯೆ**
**ಮೌನಿ ಪಲ್ಕುಲು ಪವಮಾನಮಾಯೆ**

'ಮಾತು' ಎಂಬುದರ ಸಮಾನಾರ್ಥಕ ಪದಗಳಾಗಿ ವಾರ್ತಲು, ಪಲ್ಕುಲು ಎಂಬ ಪದಪ್ರಯೋಗ ತ್ಯಾಗರಾಜರ ವಾಕ್‌ಸಾಮರ್ಥ್ಯವನ್ನು ಬಿಂಬಿಸಿವೆ.

೨ ಎನ್ನಗ ಮನಸುಕುರಾನಿ-ಸ್ವಗತ ದರು ರಚನೆ ನೀಲಾಂಬರಿ ರಾಗದಲ್ಲಿ ವಿಳಂಬಕಾಲದಲ್ಲಿ ಅಳವಟ್ಟಿರುವುದು ರಾಗಭಾವವನ್ನೂ, ಸಾಹಿತ್ಯಭಾವವನ್ನೂ ಸುಂದರವಾಗಿ ಮೂಡಿಸಿದೆ. ಮನಸ್ಸು ಮತ್ತು ಬಾಹ್ಯ ಇಂದ್ರಿಯಗಳ (ಕಣ್ಣು, ನಾಲಿಗೆ, ಇತ್ಯಾದಿ) ಸಾರ್ಥಕತೆಯನ್ನು ಹೀಗೆ ಪ್ರಸ್ತಾಪಿಸುವಲ್ಲಿ ತೆಲುಗು ಕವಿ ಪೋತನನ ಪ್ರಭಾವ ತ್ಯಾಗರಾಜರ ಮೇಲೆ ಸ್ಫುಟಗೊಂಡಿದೆ.*

---

* ಅಲ್ಲದೆ ನೋಡಿ ಅಧ್ಯಾಯ ೧೬ ಹಾಗೂ ೧೭.

೩ ದೇವರು ತನ್ನ ಭಕ್ತಬಂಧುಗಳನ್ನೇ ವಿಶೇಷವಾಗಿ ಆದರಿಸುವನೆಂಬ ಹೇಳಿಕೆ ಕಾಣಬರುತ್ತದೆ (Key Statement). ಈ ಸಂದರ್ಭದಲ್ಲಿ ದೇವರಿಗೆ ಲಕ್ಷ್ಮಿಗಿಂತ ಭಕ್ತರೇ ಹೆಚ್ಚು ಪ್ರಿಯರೆನಿಸುತ್ತಾರೆ.

**ಶ್ರೀಲಕ್ಷ್ಮಿಕೈನನು ಚಿಕ್ಕನಿಯಂಕಂಬು ಹರಿಯು ಭಕ್ತುನಿಕಿಚ್ಚಿಯಾದರಿಂಚೆ**

೪ ಹಿಂದಿನ ಮತ್ತು ಈ ಅಂಕಗಳೆರಡರಲ್ಲೂ ಭೈರವಿರಾಗದ ಒಂದೊಂದು ರಚನೆಗಳು ಅಳವಟ್ಟಿವೆ (ನಿಜಮ್ಮೈತೆ ಮುಂದರ ನಿಲುವುಮು ಮತ್ತು ಏನಾಟಿ ನೋಮುಫಲಮೋ).

೫ ಈ ಅಂಕದಲ್ಲಿ ನಾಲ್ಕು ರಚನೆಗಳಿವೆ. ಅವುಗಳಲ್ಲಿ ಎನ್ನಗಮನಸುಕುರಾನಿ (ನೀಲಾಂಬರಿ), ಏಟಿಜನ್ಮಮಿದಿ (ವರಾಳಿ), ಏನಾಟಿ ನೋಮು ಫಲಮೋ (ಭೈರವಿ) ಹೆಚ್ಚು ಪ್ರಯೋಗದಲ್ಲಿವೆ. ಎಂತನುಚುವರ್ಣಿಂತುನೇ (ಸೌರಾಷ್ಟ್ರ) ಅಷ್ಟಾಗಿ ಪ್ರಯೋಗವಿಲ್ಲ.

೬ ಶ್ರೀಹರಿಯ ದರ್ಶನವಾದಾಗ ಈ ಅಂಕದಲ್ಲಿ ಪ್ರಹ್ಲಾದನಿಗೆ ಹರ್ಷವಾಗುವುದೇನೋ ಸರಿಯೇ. ಆದರೆ ಭಯವೂ ಉಂಟಾಯಿತೆನ್ನುತ್ತಾರೆ ತ್ಯಾಗರಾಜರು. ಏಕೆಂದರೆ ಭಯವೆಂಬುದು ಪ್ರಾಪಂಚಿಕನ ಲಕ್ಷಣ. ಪ್ರಹ್ಲಾದನಿಗೆ ಇಲ್ಲಿ ಎರಡು ವಿಧದಲ್ಲಿ ಭಯ. ಅಲಭ್ಯವಾದ ವಸ್ತುವೊಂದು ತನ್ನೆಡೆಗೆ ಬಂದಿರುವಾಗ ಅದೆಲ್ಲಿ ಕೈಜಾರಿಬಿಡುವುದೋ ಎಂಬುದು ಒಂದಾದರೆ, ಇಂತಹ ಅತ್ಯದ್ಭುತ ವಸ್ತುವನ್ನು ಹೊಂದಲು ತಾನು ಅರ್ಹನೇ ಎಂಬುದು ಮತ್ತೊಂದು. ಭಕ್ತಿ ಸಾಧನೆಯಲ್ಲಿ ತನ್ನಲ್ಲಿದ್ದ ದೃಢತೆಯ ಬಗೆಗೆ ಪ್ರಹ್ಲಾದನಲ್ಲಿ ಆತ್ಮಸ್ಥೈರ್ಯವಿದ್ದರೂ ಇತರ ಸಂಚಾರೀ ಭಾವಗಳೂ ಆತನಲ್ಲಿ ಉದಯಿಸಿವೆ ಎಂಬುದಿಲ್ಲಿ ಮುಖ್ಯ ಅಂಶ.

**ಚತುರ್ಥಾಂಕ** : ನಾಟಕದಲ್ಲಿರುವ ಐದು ಅಂಕಗಳಲ್ಲಿ ಹಿರಿದಾದ ನಾಲ್ಕನೇ ಅಂಕದ ಕಥಾವಸ್ತು ದೇವರು ಮತ್ತು ಪ್ರಹ್ಲಾದರ ನಡುವೆ ನಡೆದ ಸಂವಾದ. ಪ್ರಹ್ಲಾದನ ಭಕ್ತಿತೀವ್ರತೆಯನ್ನು ಲೋಕಕ್ಕೆಲ್ಲಾ ತಿಳಿಸುವ ಸಲುವಾಗಿಯೂ, ಆ ಭಕ್ತಿಯನ್ನು ಮತ್ತೆ ಮತ್ತೆ ಪರೀಕ್ಷಿಸುವ ಸಲುವಾಗಿಯೂ ಹರಿಯು ಹಲವು ರೀತಿಯ ವರಗಳನ್ನು ನೀಡುವೆನೆನ್ನುತ್ತಾನೆ. ಆದರೆ ದೇವರಿಗಾಗಿಯೇ, ಅರ್ಥಾತ್ ಆತನ ಸಾನ್ನಿಧ್ಯಕ್ಕಾಗಿಯೇ (ಕೈಂಕರ್ಯ) ಭಕ್ತಿಸಾಧನೆ ಮಾಡಿರುವ ಪ್ರಹ್ಲಾದ ಹರಿಯ ಮಾತಿಗೆ ಒಪ್ಪುವುದಿಲ್ಲ. ಹರಿ ನೀಡಲಿರುವ ವರಗಳೆಲ್ಲವನ್ನೂ ವಿನಯವಾಗಿಯೇ ತಿರಸ್ಕರಿಸುತ್ತಾನೆ. ಸದಾಕಾಲ ದೇವರೊಂದಿಗೇ ಇದ್ದು ಸೇವೆ ಮಾಡುವಂಥ ವರವನ್ನು ಮಾತ್ರ ಕೇಳಿ ಹರಿಯಿಂದ ಆಶೀರ್ವಾದ ಪಡೆಯುತ್ತಾನೆ, ಪ್ರಹ್ಲಾದ.

**ಚತುರ್ಥಾಂಕದ ಮುಖ್ಯಾಂಶಗಳು**

ಈ ಅಂಕದಲ್ಲಿ ಸಾಹಿತ್ಯಕ ಅಲಂಕಾರಿಕ ಅಂಶಗಳಾದ ಸೂಕ್ತಿ, ಗಾದೆ ಮಾತುಗಳು,

ಉಪಮೆಗಳಿವೆ. ಅತ್ಯುಚ್ಚಮಟ್ಟದ ವೇದಾಂತ ಪ್ರತಿಪಾದನೆ, ವಾತ್ಸಲ್ಯ, ಶೃಂಗಾರ ಭಾವದ ಆರಾಧನೆ, ದೇವರ ದಯೆಯ ಹಿರಿಮೆ, ದಾಸ್ಯಭಕ್ತಿ, ಆಶೀರ್ವಚನ, ಪೌರಾಣಿಕ ಹಿನ್ನೆಲೆಯುಳ್ಳ ಮಾತುಗಳು, ಮುಕುಂದಮಾಲಾ ಶ್ಲೋಕದ ಉಲ್ಲೇಖ, ಗಾಯನ ನಟನೆಗಳ ಪ್ರಸ್ತಾಪಗಳು ಕಾಣಬರುತ್ತವೆ.

ಇಲ್ಲಿನ ಹಲವು ಉಪಮೆಗಳು ಹೀಗಿವೆ

೧ ದೇವರನ್ನು ಕಲ್ಪವೃಕ್ಷಕ್ಕೆ ಹೋಲಿಸಲಾಗಿದೆ—

**'ಸದಯಾಮರ ತರುವುನು. . . . '**

ಬಿಡಿಗಾಸಿಗಾಗಿ ಹುಡುಕುತ್ತಿದ್ದಾಗ ಮುತ್ತುರತ್ನಗಳೇ ಲಭ್ಯವಾದಂತೆ, ಅಂಬಲಿಗಾಗಿ ಬಯಸುತ್ತಿದ್ದಾಗ ಅಮೃತವೇ ದೊರೆತಂತೆ, ಈಜುತ್ತಿದ್ದಾಗ ಕೈಸೋತು ಮುಳುಗುವ ಸಮಯದಲ್ಲಿ ತೆಪ್ಪ ದೊರೆತಂತೆ, ಯಾತ್ರೆ ಮಾಡ ಬಯಸಿದಾಗ ಕ್ಷೇತ್ರವೇ ಎದುರಾದಂತೆ, ಮಾನಾಪಹರಣದ ವೇಳೆ ವಸ್ತ್ರ ಲಭ್ಯವಾದಂತಾಗಿದೆ ಪ್ರಹ್ಲಾದನಿಗೆ ಹರಿದರ್ಶನ. ಅಷ್ಟಲ್ಲದೆ ದೇವರು ಪ್ರಹ್ಲಾದನಿಗೆ—ತಾವರೆಗೆ ಸೂರ್ಯನಿದ್ದಂತೆ, ನೈದಿಲೆಗೆ ಚಂದ್ರನಿದ್ದಂತೆ, ಸಾಧ್ವಿಸತಿಗೆ ಆಕೆಯ ಪತಿಯಂತೆ ಪ್ರಿಯನಾಗಿದ್ದಾನೆ. ಆತನ ಹೃದಯ ಹರಿಯನ್ನು ಕಂಡು ಅರಳಿದೆ.(ನನ್ನು ಬ್ರೋವಕನು ; ದ್ವಿಪದಿ-ಸಾರೆಸಾರೆಕು.)

೨ **'ಅರಸಿಕ ಸಂಭಾಷಣತೋ ರಸಿಕ ಜನೇಷು ವಾಕ್ಕಲಹ ಶ್ರೇಯಃ'**

ಎಅರಸಿಕರೊಂದಿಗೆ ಸಂಭಾಷಿಸುವುದಕ್ಕಿಂತ ರಸಿಕರೊಂದಿಗೆ ಮಾಡುವ ವಾಕ್ಕಲಹ ಶ್ರೇಯಸ್ಕರ)

**'ವೆನ್ನಯುಂಡಗ ನೇತಿ ವೆಸನಂಬುಲೇಲ ?'**

**'ಅನ್ನಮುಂಡಗ ಜೊನ್ನ ಅಂಬಲೇಲ ?'**

(ಬೆಣ್ಣೆ ಇರುವಾಗ ತುಪ್ಪಕ್ಕಾಗಿ ವ್ಯಸನವೇಕೆ ? ಅನ್ನವಿರುವಾಗ ಜೋಳದ ಅಂಬಲಿಯೇಕೆ ?)

**'ತಲ್ಲುಂಡು ಸುತುನಕು ದಾದಿ ವೆಸನಂಬುಲೇಲ ?'**

(ತಾಯಿ ಇರುವ ಮಗುವಿಗೆ ದಾದಿಯ ಗೊಡವೆಯೇಕೆ ?)

**'ವ್ಯಾಧಿ ಹೀನುನಿಕಿ ವರವೈದ್ಯುನಿ ಚೆಲಿಮೇಲ ?'**

(ಆರೋಗ್ಯವಂತನಿಗೆ ವೈದ್ಯನ ಗೊಡವೆಯೇಕೆ ?)

**'ಸ್ವಧನಂಬುಲುಂಡ ಪಂಚಾಗಮೇಲ ?'**

(ತುಂಬಿದ ಸಿರಿಯಿರಲು ಪಂಚಾಗವೇಕೆ ?)

**'ಧೀರುನಕೊಕ ವೈರಿ ದಿಗುಲದೇಲ ?'**

(ಧೀರನಾದವನಿಗೆ ಶತ್ರು ಭಯವೇಕೆ ?)

ಎಂಬ ನಾಣ್ಣುಡಿಗಳು ಅಳವಟ್ಟಿವೆ. ಸರ್ವವೂ ನೀನೇ ಎಂದು ತಿಳಿದವನಿಗೆ ಬೇಧವೆಲ್ಲಿಯದೆಂಬುದು ಭಾವ.

೩ ಪ್ರಹ್ಲಾದನ ಭಕ್ತಿಯನ್ನು ಮೆಚ್ಚಿ ಹರಿಯು ಹೀಗೆ ನುಡಿಯುತ್ತಾನೆ.

**'ನಿನ್ನೇದಲಚುಚುನ್ನಾನು, ಅದ್ಭುತಮ್ಮೈನ ಭಕ್ತಿಕಿ ಸೊಕ್ಕಿನಾನು'**

(ನಿನ್ನ ಅದ್ಭುತ ಭಕ್ತಿಗೆ ಮಾರುಹೋಗಿ ನಿನ್ನನ್ನೇ ಸ್ಮರಿಸುತ್ತಿದ್ದೇನೆ)

**'ಎಡಲೇನಿ ಪ್ರೇಮಗೊಂಟನಿ ಕಡುಭಕ್ತಿಯು ನೀಕುಗಲದು'**

(ಕಡುಭಕ್ತಿಯು ನಿನ್ನಲ್ಲಿದೆಯೆಂದೇ ನಿನ್ನಲ್ಲಿ ಪ್ರೀತಿಯುಳ್ಳವನಾದೆ)

**'ಮುಂದಟಿ ಭಕ್ತುಡು ನೀವನಿ ಮುಂದರನೇ ಖ್ಯಾತಿಗಾನು**
**ಮೋದಮುತೋಡ**
**ಅಂದರು ಬಲ್ಕಗ ಜೇಸಿತಿ ಇಂದುನ ನೀಕನ್ನ ಭಕ್ತುಲೆವ್ವರುಗಲರೆ ?'**

(ಭಕ್ತಾಗ್ರಣ್ಯ ನೀನೆಂದು ಸಂತೋಷದಿಂದ ಈ ಮೊದಲೇ ಎಲ್ಲರೂ ನಿನ್ನನ್ನು ಪ್ರಶಂಸಿಸುವಂತೆ ಮಾಡಿದ್ದೇನೆ. ಹೀಗಿರುವಾಗ ನಿನಗಿಂತ ಮಿಗಿಲಾದ ಭಕ್ತರು ಇನ್ನಾರಿದ್ದಾರೆ ?)

**'ಜ್ಞಾನಮು ವೈರಾಗ್ಯಮು ವಿಜ್ಞಾನಮು ಸದ್ಭಕ್ತಿ ಸಮಮುಗಾನನುಭವಿನಿ**
**ಗಾನನು ಮುಲ್ಲೋಕಮುಲೊ ಮಾನ್ಯುನಿ ನಿನುಗಂಟೆ ನೀ**
**ಸಮಾನಂಬೆವರೆ ?'**

(ಜ್ಞಾನ, ವೈರಾಗ್ಯ, ವಿಜ್ಞಾನ ಮತ್ತು ಸದ್ಭಕ್ತಿಗಳೆಲ್ಲವನ್ನೂ ಸಮನಾಗಿ ಅರಿತ ನಿನ್ನಂಥ ಮಾನ್ಯನನ್ನು ಮೂರು ಲೋಕಗಳಲ್ಲಿಯೂ ನಾಕಾಣೆ. ಹೀಗಿರುವಾಗ ನಿನ್ನ ಸಮಾನರು ಯಾರಿದ್ದಾರೆ ?)

೪ 'ತನಲೋನೆ ಧ್ಯಾನಿಂಚಿ ' (ದೇವಗಾಂಧಾರಿ) ರಚನೆಯಲ್ಲಿ ವೇದಾಂತದ ಪ್ರತಿಪಾದನೆ ಅದ್ಭುತವಾಗಿದೆ. ಪಲ್ಲವಿ ಹಾಗೂ ಮೊದಲ ಏಳು ಚರಣಗಳ ವರೆಗೆ ಜ್ಞಾನಪ್ರಧಾನವಾಗಿ ಹಾಡುತ್ತಿದ್ದ ತ್ಯಾಗರಾಜರು ಕಡೆಯ ಎರಡು ಚರಣಗಳಲ್ಲಿ ಭಕ್ತಿಯೆಡೆಗೆ ತಿರುಗುತ್ತಾರೆ. ವಾಸ್ತವವಾಗಿ ಭಕ್ತಿ, ಜ್ಞಾನ ಗಳೆರಡೂ ದೈವವನ್ನು ಸೇರಲಿರುವ ಮಾರ್ಗಗಳೇ ಆದ್ದರಿಂದ ಇವುಗಳಲ್ಲಿ ವ್ಯತ್ಯಾಸವಿಲ್ಲ. ಒಟ್ಟಾರೆ ಈ ರಚನೆ ಅದ್ವೈತ ವೇದಾಂತವನ್ನು ವ್ಯಕ್ತಪಡಿಸು ತ್ತದೆ.

೫ ಶೃಂಗಾರದ ಅಭಿವ್ಯಕ್ತಿ : ತ್ಯಾಗರಾಜರು ತಮ್ಮನ್ನು ಸ್ತ್ರೀಭಕ್ತೆಯಂತೆ, ಸೀತಾ ಮಾತೆಯಂತೆ ಭಾವಿಸಿಕೊಳ್ಳುತ್ತಾರೆ.

**'ಪಂಕಜನಯನ ನಾ ಕುಂಕುಮ ನೀವೇ' ; 'ಅವನಿಜಾಧಿಪ ನಾ**
**ಸೊಗಸೆವ್ವರಿದೆ ?'**

(ಕಮಲನಯನನೇ ನನ್ನ ಕುಂಕುಮಭಾಗ್ಯ ನೀನೇ ಆಗಿದ್ದೀಯೆ ;
ಭೂಸುತಾರಮಣನೇ ನನ್ನ ಸೌಂದರ್ಯವೆಲ್ಲ ನಿನ್ನದಲ್ಲದೆ ಇನ್ನಾರದು?
(ಶ್ರೀರಾಮ ಜಯರಾಮ)

**'ಜನಕಜಗು ಬೊಟ್ಟುಕಟ್ಟಿ ಕರಮುಪಟ್ಟುವೇಳ**
**ಕಾಂತಕುನ್ನ ಸುಖಮು ತನಕು'** (ದಯಸೇಯುವಯ್ಯ)
(ಜನಕಜೆಯನ್ನು ವಿವಾಹವಾಗಿ ಕೈಹಿಡಿದ ಕ್ಷಣದಲ್ಲಿ ಆಕೆಗೆ ನೀಡಿದ ಸುಖವನ್ನೇ ನನಗೂ ದಯಪಾಲಿಸು ದಯಸೇಯವಯ್ಯ)

೬ ದೇವರ ದಯೆಯೊಂದು ಪ್ರಾಪ್ತವಾದರೆ, ಸತ್ಸಂಗ ಮಾಡಿದಂತೆ, ಮಧುರ ಭೋಜನ ಮಾಡಿದಂತೆ, ಧನಕನಕಾದಿಗಳೆಲ್ಲ ಲಭ್ಯವಾದಂತೆ, ಬ್ರಹ್ಮೇಂದ್ರಾದಿ ಪಟ್ಟವೂ ದೊರೆತಂತೆ, ಹದಿನಾಲ್ಕು ಲೋಕಗಳನ್ನೂ ಆಳಿದಂತೆ ತಮ್ಮ ಕುಲಕೋಟಿ ಎಲ್ಲ ಉದ್ಧಾರವಾದಂತಾಗುತ್ತದೆ. ದೇವರಲ್ಲಿ ಮತ್ತಾವ ಸಂಪತ್ತಿಗಾಗಿಯೂ ಬೇಡಲಿಲ್ಲ. ಧರ್ಮದಲ್ಲಾಗಲೀ, ಅರ್ಥದಲ್ಲಾಗಲೀ, ಕಾಮಾದಿ ಭೋಗಗಳಲ್ಲಾಗಲೀ ಆಸಕ್ತಿ ಇಲ್ಲ. ಪೂರ್ವ ಕರ್ಮಕ್ಕೆ ಅನುಸಾರವಾಗಿ ಏನು ನಡೆಯಬೇಕಿದೆಯೋ ಅದು ನಡೆಯಲಿ. ಆದರೆ ನಿನ್ನಲ್ಲಿ ನನ್ನ ಭಕ್ತಿ ಮಾತ್ರ ನಿಶ್ಚಲವಾಗಿರಲಿ ಎಂಬುದು ಪ್ರಹ್ಲಾದನ ಸ್ಥಿರ ನಿಲುವಾಗಿದೆ.
**'ಸಾಧು ಸಂಗತಿನೇನು ಸಲುಪಿನಯಟ್ಲು'** (ಸರಸೀರುಹ ನಯನ-ಬಿಲಹರಿ)
**'ನಾಸ್ಥಾಧರ್ಮೇ ನವಸುನಿಚಯೇ . . . .**
**ನೀಸೊಮ್ಮು ನೇನಡುಗಲೇದು'** (ರಾಮಾಭಿರಾಮ-ಸಾವೇರಿ)

೭ ಶ್ರೀಹರಿಯ ಕೈಂಕರ್ಯ ಮಾಡುವಲ್ಲಿ ಪ್ರಹ್ಲಾದ ಹೀಗೆನ್ನುತ್ತಾನೆ. ಹರಿಯ ಪದಸಾರಸಗಳನ್ನು ಹೃದಯಾರವಿಂದದಲ್ಲಿಟ್ಟುಕೊಂಡು, ಕ್ಷೀರಾನ್ನ ಮತ್ತು ಸುಗಂಧಿತ ವೀಳ್ಯವನ್ನು ಆತನಿಗೆ ನೀಡಿ, ಆತನ ಪಾದಗಳನ್ನು ಒತ್ತುತ್ತಾ, ಬಂಗಾರದ ಬೀಸಣಿಗೆಯಿಂದ ಬೀಸುತ್ತಾ, ಆತನನ್ನು ತೂಗುತ್ತಾ, ಆತನೆದುರು ನಟಿಸುತ್ತಾ ಗಾಯನ ಮಾಡುತ್ತಿರಬೇಕೆಂಬುದು ಪ್ರಹ್ಲಾದನ ಆಶಯ. ಗಾಯನ ನರ್ತನದೊಂದಿಗೆ ಕೈಂಕರ್ಯ ಮಾಡುವುದು ಹರಿದಾಸರ ಲಕ್ಷಣ ಎಂಬುದು ಗಮನಾರ್ಹ.

೮ ಆಶೀರ್ವಚನ : ಶ್ರೀಹರಿಯು ಪ್ರಹ್ಲಾದನ ಕೋರಿಕೆಗಳೆಲ್ಲ ನೆರವೇರಿ ಆಚಂದ್ರಾರ್ಕವಾಗಿ ಪ್ರಹ್ಲಾದ ಸುಖವಾಗಿ, ಆರೋಗ್ಯಶಾಲಿಯಾಗಿರುವಂತೆ ಆಶೀರ್ವದಿಸುತ್ತಾನೆ.
**'ನೀಕೋರ್ಕಲೆಲ್ಲನು ನಿಜಮುಗ ಗಲ್ಗು, ನೀಗೋರುಪನುಲೆಲ್ಲ**
**ನೆರವೇರುನಿಪುಡು**
**ಸುಖಮುನವರ್ಧಿಲ್ಲು ಸುರವೈರಿತನಯ, ಅಖಿಲಾಂಡಮುಲನೇಲು**
**ಆಚಂದ್ರಸೂರ್ಯಸ್ಥಾಯಿಗಾ ವಿಲಸಿಲ್ಲು ಸಾನಂದಮುಗನು**
**ಹಾಯಿಗಾನುಂಡು ನೀವಾರೋಗ್ಯಮುನನು'**
ತ್ಯಾಗರಾಜರ ಈ ಮಾತುಗಳಲ್ಲಿ ಅವರಿಗಿದ್ದ ವ್ಯವಹಾರ ಪ್ರಜ್ಞೆ ಎದ್ದು ಕಾಣುತ್ತದೆ (Common Sense). ಒಬ್ಬನು ಸಂತೋಷವಾಗಿರಲು ಮಾನಸಿಕ

ಸ್ಥಿತಿ ಅತಿ ಮುಖ್ಯ. ಇದರಲ್ಲಿ ಲೌಕಿಕ ಬದುಕಿನಲ್ಲಿ ಅತ್ಯಗತ್ಯವಾದ ಸಂಪತ್ತಿನ ಒಡೆತನವನ್ನು 'ಅಖಿಲಾಂಡಮುಲನೇಲು' ಎಂಬ ಮಾತಿನಲ್ಲೂ ದೇಹಾರೋಗ್ಯವನ್ನು 'ಹಾಯಿಗಾನುಂಡು ನೀವಾರೋಗ್ಯಮುನನು' ಎಂಬ ಮಾತಿನಲ್ಲೂ ಅಡಗಿಸುತ್ತಾರೆ. ಆರೋಗ್ಯವಿಲ್ಲದೆ ಸಂಪತ್ತು ಎಷ್ಟಿದ್ದರೂ ಒಬ್ಬನು ಸುಖಿಯಾಗಲಾರ. ಆರೋಗ್ಯವಾಗಿದ್ದೂ ಅಪೇಕ್ಷಿಸಿದುದೆಲ್ಲ ನೆರವೇರಿ, ಕಾರ್ಯಗಳು ಸಫಲವಾಗದಿದ್ದಲ್ಲಿ ಸುಖವಿರುವುದಿಲ್ಲ. ಹೀಗಾಗಿ ದೇವರಿಲ್ಲಿ ಆಶೀರ್ವದಿಸುವಾಗ 'ನಿನ್ನ ಕೋರಿಕೆಗಳೆಲ್ಲವೂ ನಿಜವಾಗಿಯೂ ನೆರವೇರುವುದು. ಅಖಿಲಾಂಡಗಳನ್ನೂ ಆಳುತ್ತಾ ಆರೋಗ್ಯವಾಗಿ, ಆಚಂದ್ರಾರ್ಕವಾಗಿ ಸುಖಿಸು' ಎನ್ನುತ್ತಾನೆ.

ಇಲ್ಲಿ ಮತ್ತೊಂದು ಅಂಶವನ್ನು ಗಮನಿಸಬಹುದು. ಪ್ರಾಪಂಚಿಕನೊಬ್ಬ ದೇವರಿಂದ ಏನೇನನ್ನು ಪಡೆಯಲಿಚ್ಛಿಸುತ್ತಾನೆಯೋ (ಆಯುಸ್ಸು, ಆರೋಗ್ಯ, ಸಂಪತ್ತು, ಅಧಿಕಾರ, ಕೀರ್ತಿ, ಯಶಸ್ಸುಗಳು) ಅವೆಲ್ಲವನ್ನೂ ನೀಡಿ ಮಹಾಭಕ್ತನೊಬ್ಬನನ್ನು ಪ್ರಾಪಂಚಿಕ ಮಟ್ಟಕ್ಕೆ ಮೋಹಜಾಲದಿಂದ ಸೆಳೆದು ಆತನ ಭಕ್ತಿಯನ್ನು ಒರೆಹಚ್ಚಿದ್ದಾನೆ, ದೇವರು. ಈ ಮೂಲಕವೂ ತ್ಯಾಗರಾಜರು ಪ್ರಹ್ಲಾದನ ಭಕ್ತಿ ಔನ್ನತ್ಯಕ್ಕೆ ಕನ್ನಡಿ ಹಿಡಿದಿದ್ದಾರೆ.

೯ ವಾತ್ಸಲ್ಯ ಭಾವ : ಪ್ರಹ್ಲಾದನು ದೇವರನ್ನು ಕಾಣುತ್ತಲೇ ಆತನ ಪಾದಗಳಲ್ಲಿ ತಾಯಿಯನ್ನು ಕಂಡ ಮಗುವಿನಂತೆ ಸಂತೋಷದಿಂದ ಎರಗುತ್ತಾನೆ.

೧೦ ಪೌರಾಣಿಕ ಹಿನ್ನೆಲೆಯನ್ನೊಳಗೊಂಡ ಸಾಲುಗಳು ಹೀಗಿವೆ.

**'ಮಂದರಾಗಧರಾಯ'**—
(ಮಂದರ ಪರ್ವತ ಎತ್ತಿ ಹಿಡಿದುದು)
**'ಮತ್ತವಾರಣ ಶರಣ'**—
(ಗಜೇಂದ್ರಮೋಕ್ಷ)
**'ಸುಪರ್ಣುನಿವಲೆ ಭಕ್ತಿನಿಮ್ಮು'**— (ಗರುಡನ ಕೈಂಕರ್ಯಭಕ್ತಿ)
**'ಭರತು ಚರ್ಯ ಸಹಚರುನಿತೋ ನಿಂಡಾರು ಕರಗುಟು ಬಲಿಕಿತಿವೇ**
**ಕಾಚಿತಿವೇ** . . .'
(ಭರತನನ್ನು ಕುರಿತು ನಿನ್ನ ಸಹಚರನಾಗಿದ್ದ ಸುಗ್ರೀವನೊಂದಿಗೆ ಮನಕರಗಿ ನುಡಿದು, ಆತನನ್ನು ರಕ್ಷಿಸಿದೆಯಲ್ಲ !)
**'ಸತಿಮಾಟಲು ಸದಾ ಕಪಿಜುಟೇವಿನಿ ಸಮ್ಮತಿನಿ ಕೌಗಿಲಿಂಚಿನ**
**ಶುಭಾನನ** . . . '
(ಸೀತೆಯ ಕುಶಲವನ್ನು ಹನುಮಂತನಿಂದ ತಿಳಿದು, ಆತನನ್ನು ಅಪ್ಪಿಕೊಂಡ ಶುಭಾನನನೆ)

**'ಧನಕನಕಮುಲನು ದಾರಪುತ್ರುಲಗ್ಗೆಕೊನಿ ಮರವನು**

**ರವಿತನಯುಡುಗಾನು . . .'**

(ಧನಕನಕ ಮಡದಿಮಕ್ಕಳನ್ನು ಪಡೆದನಂತರ ನಿನ್ನನ್ನು ಮರೆಯಲು ನಾನು ಸುಗ್ರೀವನಲ್ಲ)

**'ಜನಕಜಗು ಬೊಟ್ಟುಕಟ್ಟಿ ಕರಮುಪಟ್ಟುವೇಳ . . .'**—(ಸೀತಾಕಲ್ಯಾಣ)

೧೧ ಕುಲಶೇಖರ ಆಳ್ವಾರರ ಮುಕುಂದಮಾಲೆಯಲ್ಲಿನ ಶ್ಲೋಕಗಳು ಉಲ್ಲೇಖಗೊಂಡಿವೆ.[೧೪]

೧೨ ಸನಕಸನಂದನಾದಿಗಳ ಹೆಚ್ಚು ಮಾತುಗಳನ್ನು ಈ ಅಂಕದಲ್ಲಿ ಉಲ್ಲೇಖಿಸುವರಾದರೂ ತ್ಯಾಗರಾಜರು ಅವರನ್ನು ರಂಗದ ಮೇಲೆ ತರುವುದಿಲ್ಲ. ನೇಪಥ್ಯದಲ್ಲಿ ಮಾತ್ರ ಅವರ ಪಾತ್ರ.

೧೩ ಈ ಅಂಕದಲ್ಲಿ ಒಟ್ಟಾರೆ ೧೪ ದರುಗಳಿವೆ. ಅವುಗಳಲ್ಲಿ 'ದಯರಾನಿ' (ಮೋಹನ), 'ಆನಂದಮಾನಂದಮಾಯೆನು'(ಭೈರವಿ)ಗಳನ್ನು ಬಿಟ್ಟರೆ ಉಳಿದವು ನನ್ನುಬ್ರೋವಕನು (ಶಂಕರಾಭರಣ ); ಅಡುಗುವರಮುಲ- (ಆರಭಿ); ವಾರಿಜನಯನ-(ಕೇದಾರಗೌಳ); ತನಲೋನೆ-(ದೇವಗಾಂಧಾರಿ); ಓರಾಮ ರಾಮ-(ನಾಗಗಾಂಧಾರಿ); ಶ್ರೀರಾಮಜಯರಾಮ-(ಮಧ್ಯಮಾವತಿ); ಸರಸೀರುಹನಯನ-(ಬಿಲಹರಿ); ವದ್ದನುಂಡೇದೇ-(ವರಾಳಿ); ತೀರುನಾ(-ಸಾವೇರಿ); ದಯಸೇಯವಯ್ಯ-(ಯದುಕುಲಕಾಂಬೋಜಿ); ಜಯಮಂಗಳಂ-(ಘಂಟಾ) ಅಷ್ಟಾಗಿ ಪ್ರಯೋಗದಲ್ಲಿಲ್ಲ. ಈ ರಚನೆಗಳಲ್ಲಿ ಕೆಲವು ದಿವ್ಯನಾಮಗಳಂತೆ ಸರಳ ಸಂಗೀತವನ್ನೂ, ಕೆಲವು ಕೃತಿಗಳಂತೆ ಪ್ರೌಢ ಸಂಗೀತವನ್ನೂ ಹೊಂದಿವೆ.

೨-೩-೪- ಈ ಮೂರು ಅಂಕಗಳಲ್ಲೂ ಭೈರವಿ ರಾಗವು ಬೇರೆ ಬೇರೆ ರಸಾಭಿವ್ಯಕ್ತಿಗಾಗಿ ಬಳಸಲ್ಪಟ್ಟಿದೆ. ವೀರ (ನಿಜಮ್ಮೆತೆ), ಶಾಂತ (ಏನಾಟಿ ನೋಮುಫಲಮೋ), ಸಂತೋಷ (ಆನಂದಮಾನಂದಮಾಯೆನು) ಭಾವಗಳು ಇಲ್ಲಿ ಕಾಣಬರುತ್ತವೆ. ಚತುರ್ಥಾಂಕದಲ್ಲೇ ಸಾವೇರಿಯ ಎರಡು ದರುಗಳಿವೆ (ತೀರುನಾ ; ರಾಮಾಭಿರಾಮ). ಅಪರೂಪವಾದ 'ಘಂಟಾ' ರಾಗದಲ್ಲಿ ಮಂಗಳವಿರುವುದೊಂದು ವಿಶೇಷ. ಇತರ ರಾಗಗಳಲ್ಲಿ ಕರುಣ ಹಾಗೂ ಭೀಭತ್ಸ ರಸ ಪ್ರತಿಪಾದಿತವಾಗಿವೆ. ರಸ ಮತ್ತು ಅದರ ಆಸ್ವಾದನೆಯು ಪರಿಣತರಲ್ಲಿ ಭಿನ್ನಾಭಿಪ್ರಾಯಗಳನ್ನು ಉಂಟುಮಾಡಿರುವ ವಿಷಯವೆಂಬುದನ್ನು ನಾವಿಲ್ಲಿ ಪ್ರಾಸಂಗಿಕವಾಗಿ ಸ್ಮರಿಸಬಹುದು.

ಒಟ್ಟಾರೆ ಈ ಅಂಕದಲ್ಲಿ ಶ್ರೀಹರಿಯು ತನ್ನ ಮಾಯಾಜಾಲವನ್ನು ವರಗಳ ರೂಪದಲ್ಲಿ ವಿಸ್ತರಿಸಿದಷ್ಟೂ ಪ್ರಹ್ಲಾದ ಅಧ್ಯಾತ್ಮದ ಯಶಸ್ಸಿನ ಹಂತವನ್ನು ಏರುತ್ತಲೇ ಹೋಗುತ್ತಾನೆ. ನಾಲ್ಕು ವಿಧದ ಭಕ್ತರಲ್ಲಿ ಜ್ಞಾನಿಯೇ ತನಗೆ ಅತಿ ಪ್ರಿಯನೆನ್ನುತ್ತಾನೆ.

ಭಗವದ್ಗೀತೆಯಲ್ಲಿ ಶ್ರೀಕೃಷ್ಣ. ಇಲ್ಲಿ ಪ್ರಹ್ಲಾದನೂ ನಿಜಜ್ಞಾನಿಯಾದ್ದರಿಂದ ಶ್ರೀಹರಿಗೆ ಪ್ರಿಯನಾಗಿ ಆತನಿಂದಲೇ ಸ್ತುತಿಸಲ್ಪಟ್ಟಿದ್ದಾನೆ.

'ಮಾನ್ಯನಾದ ನಿನ್ನನ್ನು ನೋಡಿದೆ'ನೆಂದು ಶ್ರೀಹರಿಯು ಹೇಳಿದ ಮಾತಿನಲ್ಲಿ ಪರಿಪೂರ್ಣನಾದ ಒಬ್ಬ ಭಕ್ತನ ದರ್ಶನದಿಂದ ದೇವರೇ ಧನ್ಯನಾದನೋ ಎಂಬ ಭಾವವಿದೆ. ಇಲ್ಲಿ ಪ್ರೀತಿಯು ಏಕಮುಖವಾದುದಲ್ಲ, ಪರಸ್ಪರವಾದುದು. ಭಕ್ತ ಹಾಗೂ ಭಗವಂತನ ಪ್ರೀತಿಯು ಪರಸ್ಪರರೆಡೆಗೆ ಹರಿದು ಮಿಲನಗೊಂಡಾಗ ಮಾತ್ರ ಅನುಭವವು ಪರಿಪೂರ್ಣವಾಗುವುದು. ಈ ದೃಷ್ಟಿಯಿಂದ ನೋಡಿದಾಗ ಹರಿ ಮತ್ತು ಪ್ರಹ್ಲಾದರಿಬ್ಬರ ಧನ್ಯತಾಸ್ಥಿತಿಯೂ ಇಲ್ಲಿ ಅಭಿವ್ಯಕ್ತಗೊಂಡಿದೆ.

ಇನ್ನು ಪ್ರಹ್ಲಾದನು 'ನನ್ನ ಪ್ರಾಯವೆಲ್ಲವನ್ನೂ ನಿನಗರ್ಪಿಸಿದೆ' ಎಂದು ಹೇಳುತ್ತಾನೆ (ಆನಂದಮಾನಂದಮಾಯೆನು). ಇಲ್ಲೊಂದು ಔಚಿತ್ಯವುಂಟು. ಪ್ರಾಯವೆಂಬುದು ಮನುಷ್ಯನ ಇಡೀ ಜೀವಿತದ ಸಾರ. ಈ ಹಂತದಲ್ಲಿ ಸಾಧಿಸುವ ಯಾವುದೇ ಕಾರ್ಯವೂ —ಅದು ಲೌಕಿಕವಿರಲಿ ಅಥವಾ ಅಧ್ಯಾತ್ಮವಿರಲಿ—ಫಲವನ್ನು (ಸಾರ್ಥಕತೆಯನ್ನು) ನೀಡುತ್ತದೆ. ಇದಕ್ಕೆ ಕಾರಣವಿಲ್ಲದಿಲ್ಲ. ಮನುಷ್ಯ ಈ ಹಂತದಲ್ಲಿ ದೈಹಿಕವಾಗಿಯೂ, ಮಾನಸಿಕವಾಗಿಯೂ, ದೃಢನಾಗಿರುತ್ತಾನೆ. ಆದ್ದರಿಂದ ತನ್ನ ಸಾಧನೆ ಫಲನೀಡಬೇಕಾದರೆ ಆತ ಈ ಹಂತದಲ್ಲಿ ಕಾರ್ಯಗತನಾಗಬೇಕು. ಇದೇ ಅರ್ಥದಲ್ಲೇ ಮುಂಡಕೋಪನಿಷತ್ತು 'ನ ಅಯಂ ಆತ್ಮಾ ಬಲಹೀನೇನ ಲಭ್ಯಃ' ಎನ್ನುತ್ತದೆ.[೧೫]

ಸಾಮಾನ್ಯವಾಗಿ ಬಾಲ್ಯದಲ್ಲಿ ಸಾಧನೆಗೆ ತೊಡಗುವಷ್ಟು ಸ್ಥಿರಚಿತ್ತವಿರುವುದಿಲ್ಲ (ಮಹಾತ್ಮರನ್ನುಳಿದು). ವಾರ್ಧಕ್ಯದಲ್ಲಿ ನಿತ್ರಾಣದ ಸಮಸ್ಯೆಯಿರುತ್ತದೆ. ಚಿಂತೆಗಳಿಂದ ಮನಸ್ಸು ನಿರುತ್ಸಾಹಿಯಾಗಿರುತ್ತದೆ. ಹೀಗಾಗಿ ಇಂತಹ ತೊಂದರೆಗಳಿಂದ ಮುಕ್ತವಾಗಿರುವ ಅವಧಿ ಪ್ರಾಯ. ಇದನ್ನು ಸದುಪಯೋಗಪಡಿಸಿಕೊಳ್ಳಬೇಕೆಂಬುದೇ ತ್ಯಾಗರಾಜರ '**ನಾ ಪ್ರಾಯಮುಲೆಲ್ಲ ನೀ ಪಾಲು ಜೇಸಿತಿ**' ಮಾತಿನ ಔಚಿತ್ಯ. ಇತರರಿಗಿದು ಪರೋಕ್ಷ ಬೋಧನೆಯಾಗಿದೆ.

**ಪಂಚಮಾಂಕ** : ಚತುರ್ಥಾಂಕದಲ್ಲಿ ಪ್ರಹ್ಲಾದನನ್ನು ಮೆಚ್ಚಿ ಅಭಯ ನೀಡಿದರೂ ಈ ಅಂಕದಲ್ಲಿ ಮತ್ತೆ ಶ್ರೀಹರಿಯು ಹೀಗೆನ್ನುತ್ತಾನೆ. 'ಎಲೈ ಪ್ರಹ್ಲಾದ, ನಾನು ನಿನ್ನ ಬಳಿಗೆ ಬಂದು ಬಹಳ ವೇಳೆಯಾಗಿದೆ. ಇದೀಗ ಹೊರಟು ಮತ್ತೆ ಬರುತ್ತೇನೆ. ನಾನು ಹಿಂತಿರುಗುವಷ್ಟರಲ್ಲಿ, ನನ್ನನ್ನು ನೋಡಲಾಗಲಿಲ್ಲವೆಂದು ದುಃಖಿಸಬೇಡ.' ಈ ಮಾತುಗಳಿಂದ ಪ್ರಹ್ಲಾದ ತತ್ತರಿಸಿದ. ಶ್ರೀಹರಿ ಸಾಮೀಪ್ಯ ತನಗಿನ್ನು ನಿರಂತರವಾಗಿ ಲಭ್ಯವೆಂದು ತಿಳಿದಿದ್ದ ಆತನಿಗೆ ದೇವರ ಮಾತುಗಳು ಕರ್ಣಕಠೋರವೆನಿಸಿತು. ಪ್ರಹ್ಲಾದ ಅತೀವ ದುಃಖದಿಂದ ತನ್ನನ್ನು ಬಿಟ್ಟು ಕದಲಕೂಡದೆಂದು ದೀನನಾದ. ಆದರೆ ದೇವರ ನಿರ್ಧಾರ ಸಡಿಲಗೊಳ್ಳಲಿಲ್ಲ. ಪ್ರಹ್ಲಾದನೊಂದಿಗೆ ಶ್ರೀಹರಿ ತಾನು ಮತ್ತೆ ಹಿಂತಿರುಗಿ ಬರುವುದಾಗಿ ಭಾಷೆಯಿತ್ತ. ಆಗ ಪ್ರಹ್ಲಾದ ಶೀಘ್ರವಾಗಿ ಹಿಂತಿರುಗುವೆನೆಂದು ತನ್ನ ಮೇಲೆಯೇ ಆಣೆಯಿಟ್ಟು ಹೊರಡುವಂತೆ ಕೋರಿದ. ಪ್ರಹ್ಲಾದನ ಆಶಯದಂತೆಯೇ

ಹರಿ ಪ್ರಹ್ಲಾದನ ಮೇಲೆ ಆಣೆಯಿಟ್ಟು ತೆರಳಿದ. ಹರಿ ತೆರಳಿದ ಮರುಕ್ಷಣದಿಂದಲೇ ಪ್ರಹ್ಲಾದ ಪರಮ ದುಃಖದಿಂದ, ದೇವರು ನೆಲಸಿರಬಹುದಾದ ತಾಣಗಳನ್ನು ಸ್ಮರಿಸ ತೊಡಗಿದ. ಪರಮಭಕ್ತರೊಂದಿಗೆ ಶ್ರೀರಾಮನ ಚಹರೆಗಳೆಲ್ಲವನ್ನೂ ತಿಳಿಸುತ್ತಾ 'ರಾಮನನ್ನು ನೀವು ಕಂಡಿರಾ?' ಎನ್ನುತ್ತಾ ದಿಕ್ಕುಗಾಣದಂತಾದ. ಭಕ್ತಾಗ್ರೇಸರನಾದ ಪ್ರಹ್ಲಾದನ ವ್ಯಥೆಯನ್ನು ನಿರಂತರವಾಗಿ ಪರಿಹರಿಸುವ ಸಲುವಾಗಿ ಹರಿ ಇದೀಗ ಶ್ರೀಲಕ್ಷ್ಮಿಯೊಂದಿಗೆ (ಎರಡನೆಯಬಾರಿಗೆ) ದರ್ಶನ ನೀಡಿ ಪ್ರಹ್ಲಾದನನ್ನು ಸರ್ವೋನ್ನತ ಪದವಿಗೆ ಏರಿಸಿದ. ದಿವ್ಯವಾದ ಇಂತಹ ಭಕ್ತ-ಭಗವಂತರ ಧನ್ಯತಾ ಪ್ರಸಂಗವನ್ನು ಕಾಣಲು ಬ್ರಹ್ಮೇಂದ್ರಾದಿಗಳೆಲ್ಲ ಸುರಲೋಕದಿಂದ ಧರೆಗಿಳಿದರು. ಅದೇ ವೇಳೆ ಸೂರ್ಯೋದಯವಾಯಿತು. ಇದು ಪಂಚಮಾಂಕದ ಕಥಾವಸ್ತು.

**ಪಂಚಮಾಂಕದ ಮುಖ್ಯಾಂಶಗಳು**

೧ ಕೃತಿಕರ್ತನ ಉದ್ದೇಶವನ್ನು, ಭಕ್ತಿ ಮತ್ತು ಭಕ್ತನ ಔನ್ನತ್ಯವನ್ನು, ಸಮರ್ಥಿಸುವಂತೆ ಶ್ರೀಹರಿ ಹೀಗೆನ್ನುತ್ತಾನೆ. ಈ ಹೇಳಿಕೆಗಳು ಹೀಗಿವೆ (Key Statement)

'ಕ್ಷೀರಸಾಗರದಲ್ಲಿ ಶಯನಿಸುವುದಕ್ಕಿಂತ, ವೈಕುಂಠದಲ್ಲಿ ಲಕ್ಷ್ಮಿಯ ಸಾಮೀಪ್ಯಕ್ಕಿಂತ, ಸೂರ್ಯ ಚಂದ್ರರಲ್ಲಿ ಸತತವಾಗಿರುವುದಕ್ಕಿಂತ, ರಾಜ ಯೋಗಿಗಳ ಅಂತರಂಗ ರಮ್ಯತೆಗಿಂತ ಭಕ್ತನ ಹೃದಯವೇ (ಅಲ್ಲಿ ನೆಲೆ ಸಿರುವುದೇ) ಬಹಳ ಸುಂದರವಾಗಿರುತ್ತದೆ.

**ಹೋಲಿಕೆಗಳು** : ಮೊದಲ ಬಾರಿಗೆ ಶ್ರೀಹರಿಯ ದರ್ಶನವಾದಾಗ ಪ್ರಹ್ಲಾದ ತನ್ನ ಆನಂದವನ್ನು ಹೋಲಿಕೆಯೊಂದಿಗೆ ಹೀಗೆನ್ನುತ್ತಾನೆ.

'ಉಸಿರನ್ನು ಬಿಗಿಹಿಡಿದು ಕಡಲಿನಲ್ಲಿ ಮುಳುಗಿ ಆಣಿಮುತ್ತುಗಳನ್ನು ಕಂಡಂತಾಗಿದೆ, ಅಸಹನೀಯವಾದ ಬಿಸಿಲಬೇಗೆಯಲ್ಲಿ ಕಲ್ಪವೃಕ್ಷದ ನೆರಳು ಸಿಕ್ಕಂತಾಗಿದೆ, ಭೂಮಿಯನ್ನು ಖನನ ಮಾಡಿದಾಗ ಲಭ್ಯವಾದ ನಿಧಿಯಂತಾಗಿದೆ.'

ಹೀಗೆಯೇ ಮತ್ತೆ ಬರುವೆನೆಂದು ಹೇಳಿ ಶ್ರೀಹರಿ ತೆರಳಿದಾಗ ಪ್ರಹ್ಲಾದನ ವಿರಹಬಾಧೆ ಹೀಗಿದೆ.

'ತಾಯಿಲ್ಲದ ತಬ್ಬಲಿಯಂತೆ, ಪತಿಯನ್ನು ಕಾಣಲಾಗದ ಪರಮಸಾಧ್ವೀ ಸತಿಯಂತೆ, ಸೂರ್ಯನು ಅಸ್ತಂಗತನಾದ ಮೇಲೆ ಶೋಕಿಸುವ ಚಕ್ರವಾಕ ಪಕ್ಷಿಯಂತೆ, ತೀವ್ರ ದಾಹವಾಗಿರುವಾಗ ನೀರು ಅಲಭ್ಯವಾದಂತೆ, ಈ ಮೊದಲು ಧನಿಕನಾಗಿದ್ದು ಇದೀಗ ದರಿದ್ರನಾದಂತೆ, ಪರಮ ಸಾಧ್ವಿಯನ್ನು ಬಿಟ್ಟು, ಪತಿಯು ಪರಸತಿ ಪ್ರಿಯನಾದಂತೆ, ಜ್ಞಾನಚಿತ್ತನಾದ ಗುರುವಿಗೆ ಅಜ್ಞಾನಿ ಶಿಷ್ಯ ದೊರೆತಂತೆ, ಹರಿಯನ್ನು ನೋಡಿದ ಕಣ್ಣುಗಳಲ್ಲಿ ಇತರ

ರೂಪಗಳನ್ನು ಕಾಣುವಂತೆ' ಸಹಿಸಲಾರದ ದುಃಖವಾಗಿದೆ, ಪ್ರಹ್ಲಾದನಿಗೆ.

೩ ವಾಲ್ಮೀಕಿ ರಾಮಾಯಣದ ಸನ್ನಿವೇಶ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಈ ಅಂಕದಲ್ಲಿ ಪ್ರಸ್ತಾಪಗೊಂಡಿದೆ.[೧]

೪ **ಅತಿಶಯೋಕ್ತಿ** : ಶ್ರೀರಾಮನನ್ನು ನೋಡಬೇಕೆಂದು ಹಂಬಲಿಸಿ ಕಾಣಲಾಗ ದಿದ್ದಾಗ ಪ್ರಹ್ಲಾದನ ಕಣ್ಣೀರು ಕಾಲುವೆಯಾಗಿ ಹರಿಯುತ್ತದೆ.
**'ಕನವಲೆನನು ವೇಳ ಲೇಕುಂಟೆ ಕನ್ನೀರು ಕಾಲುವಗಾ ಪಾರುನೇ'**

೫ ಪ್ರಹ್ಲಾದನ ಭಕ್ತಿ ಜೀವನದ ಪರಮಗುರಿ ಸ್ಪಷ್ಟವಾಗಿ ವ್ಯಕ್ತಗೊಂಡಿದೆ. ಭಗವಂತನ ಸೇವೆ ಮಾಡುವುದೇ ತನ್ನ ಜೀವನವೆಂದು ಪ್ರಹ್ಲಾದ ತಿಳಿದಿದ್ದಾನೆ.
'ಸೇವಜೇಯುಟೇ ಜೀವನಮನಿಯುಂಟಿ' (ಎಂತಪಾಪಿನೈತಿ-ಗೌಳೀಪಂತು) ಇದಕ್ಕಾಗಿಯೇ ಅವನು ಗರುಡನಿಗಿರುವಂಥ ಭಾಗ್ಯ ನೀಡೆಂದು ಚತುರ್ಥಾಂಕದಲ್ಲಿ ಪ್ರಾರ್ಥಿಸುವುದು.

೬ ಶ್ರೀಮನ್ನಾರಾಯಣನ ಸ್ಥಿರತಾಣವೆಂದರೆ ಭಕ್ತರ ಹೃದಯ. ಕರಗಳಿಂದ ಅರ್ಚಿಸಿ ಕಣ್ಣಾರೆ ಆತನನ್ನು ಕಾಣಲು ಬಯಸುವ ಧೀರಶ್ರೇಷ್ಠರಲ್ಲಿ, ತನ್ನನ್ನು ಸಿಂಗರಿಸಿ ಹಾಲುತುಪ್ಪಗಳನ್ನು ನಿವೇದಿಸುವ ಶುದ್ಧಾತ್ಮರಲ್ಲಿ, ಸುವಾಸಿತ ತಾಂಬೂಲ ನೀಡಿ ಆಲಂಗಿಸಬಯಸುವ ಭಕ್ತರಲ್ಲಿ ದೇವರು ನೆಲೆಸಿರುತ್ತಾನೆ. ಇಲ್ಲಿ ಅರ್ಚನ, ಆತ್ಮನಿವೇದನ ಹಾಗೂ ಶೃಂಗಾರ ಭಕ್ತಿಗಳನ್ನು ಕಾಣಬಹುದು. ಅಂತೆಯೇ ಶ್ರೀ ಸೀತಾರಾಮರನ್ನು ಕಂಡೊಡನೆ ಪ್ರಹ್ಲಾದ ಹರಿಪದಪಲ್ಲವಗಳಲ್ಲಿ 'ತಾಯಿಯನ್ನು ಕಂಡ ಮಗುವಿನಂತೆ' ಆನಂದಬಾಷ್ಪ ಸುರಿಸುತ್ತಾ ಎರಗಿದ ವಾತ್ಸಲ್ಯ ಭಾವವನ್ನು ಕಾಣಬಹುದು.

೭ ನಾಟಕಾಂತ್ಯದಲ್ಲಿ ಶ್ರೀಮನ್ನಾರಾಯಣನು ಲಕ್ಷ್ಮಿಯೊಂದಿಗೆ ದರ್ಶನ ನೀಡುವುದು ಒಂದು ಮಹತ್ತರ ಅಂಶ. ನಮ್ಮಲ್ಲಿ ಲಕ್ಷ್ಮೀನಾರಾಯಣ, ರಾಧಾಕೃಷ್ಣ, ಶಿವಪಾರ್ವತಿ, ಸೀತಾ-ರಾಮ ಎಂದು ದಯೆಯೊಂದಿಗಿರುವ ದೇವರನ್ನು ಗುರುತಿಸುವುದು ಸಂಪ್ರದಾಯ. ದೇವಿಯು ದಯಾ ಪ್ರತೀಕ. ದಯೆಯೊಂದಿಗಿಲ್ಲದ ದೇವರು ಅಪೂರ್ಣನೆನಿಸುತ್ತಾನೆ. ಅಪೂರ್ಣನಾದ ಆತ ಸುಮುಖನಾಗಿ, ಭಕ್ತರನ್ನು ರಕ್ಷಿಸಲಾರ. ಹೀಗಾಗಿ ಪೂರ್ಣಾವತಾರದಿಂದ ಭಕ್ತನಿಗೆ ನೀಡುವ ದರ್ಶನ ಮಹತ್ತರವಾದುದು. ಈ ಕಾರಣದಿಂದಲೇ ತ್ಯಾಗರಾಜರು, ಶ್ರೀಹರಿಯು ಪ್ರಹ್ಲಾದನಿಗಿತ್ತ ಈ ದರ್ಶನದಲ್ಲಿ ಲಕ್ಷ್ಮಿಯನ್ನೂ ಚಿತ್ರಿಸುತ್ತಾರೆ.

೮ ಸಾಮಾನ್ಯವಾಗಿ ಸತ್ಕಾವ್ಯಗಳ ಅಂತ್ಯದಲ್ಲಿ ಫಲಶ್ರುತಿ ಕಾಣಬರುವುದು ಸಂಪ್ರದಾಯ. ಅಂತೆಯೇ ನಾಟಕಾಂತ್ಯದಲ್ಲಿ ಸಂಸ್ಕೃತ ಫಲಶ್ರುತಿಯೊಂದು ಅಳವಟ್ಟಿದೆ.

೯ ಅಂಕದ ಕೊನೆಯಲ್ಲಿ ಬರುವ ಸೂರ್ಯೋದಯ ದುಃಖನಿವಾರಣೆಯಾಗಿ ಬೆಳಕಾಯಿತೆಂದು ಹೇಳುವ ಸೂಚನೆ (ವರಮೈನ ನೇತ್ರೋತ್ಸವಮುನು ಕನುಗೊನ ತರಣಿ ವೆಡಲೆ-ಘರಸ್). ಅಂತೆಯೇ ಪ್ರಹ್ಲಾದನ ವಿರಹವು ಅಂತ್ಯಗೊಂಡು ಧನ್ಯತಾಸ್ಥಿತಿ ಅರ್ಥಾತ್ ಮುಕ್ತಿ ಪಡೆದುದನ್ನು ಸಾಂಕೇತಿಕ ವಾಗಿ ತ್ಯಾಗರಾಜರು ಹಾಡಿದ್ದಾರೆ.

೧೦ ಒಟ್ಟಾರೆ ಈ ಅಂಕದಲ್ಲಿ ೧೪ರಚನೆಗಳಿದ್ದು ಅವುಗಳ ಪೈಕಿ 'ನನ್ನುವಿಡಚಿ' (ರೀತಿಗೌಳ), 'ರಾರಾಮಾಯಿಂಟಿದಾಕ' (ಅಸಾವೇರಿ), 'ಚಲ್ಲರೇ' (ಆಹಿರಿ) ಹಾಗೂ 'ನೀನಾಮರೂಪಮುಲಕು'(ಸೌರಾಷ್ಟ್ರ)ಗಳು ಬಹು ಪ್ರಸಿದ್ಧವಾಗಿವೆ. ಸೌರಾಷ್ಟ್ರದ ಮಂಗಳವಂತೂ ಪ್ರತಿ ಕಚೇರಿಯ ಅಂತ್ಯದಲ್ಲೂ ಕೇಳಿ ಬರುತ್ತದೆ. ಇನ್ನುಳಿದ ಹಾಡುಗಳೆಂದರೆ, 'ಅಂದುಂಡಗನೆ' (ಪಂತುವರಾಳಿ), 'ಏಮನಿವೇಗಿಂತುನೇ' (ಹುಸೇನಿ), 'ಎಂತಪಾಪಿನೈತಿ' (ಗೌಳಿಪಂತು), 'ಓ ಜಗನ್ನಾಥಾಯನಿ'(ಕೇದಾರಗೌಳ), 'ಚೆಲಿಮಿನಿ ಜಲಜಾಕ್ಷುಕಂಟೆ'(ಯದುಕುಲ ಕಾಂಬೋಜಿ), 'ಪಾಹಿ ಕಲ್ಯಾಣರಾಮ' (ಕಾಪಿ), 'ಕಮಲಭವುಡು' (ಕಲ್ಯಾಣಿ), 'ದೊರಕುನಾಯನಿ' (ತೋಡಿ), 'ವರಮೈನ' (ಘರಸ್) ಹಾಗೂ 'ಜಯ ಮಂಗಳಂ' (ಮೋಹನ).

ಇಡೀನಾಟಕದಲ್ಲಿ ೧-ತೇಟಗೀತ, ೧-ದಂಡಕ, ೧-ಚೂರ್ಣಿಕ, ೮೦-ಕಂದಪದ್ಯಗಳು, ೧೭-ಸೀಸಪದ್ಯಗಳು, ೧೯-ದ್ವಿಪದಿಗಳು, ೩-ಚಂಪಕಮಾಲೆ, ೧೦-ಉತ್ಪಲಮಾಲೆಗಳಿವೆ. ಸಾಹಿತ್ಯಕ ರೂಪಗಳಾದ ಇವು (Literary Forms) ವಿವಿಧ ಛಂದಸ್ಸಿಗೆ ಅಳವಟ್ಟಿರು ವುದರಿಂದ ನಾಟಕವು ಏಕತಾನತೆಯಿಂದ ಬೇಸರ ತರಿಸದೆ, ಲವಲವಿಕೆ ಮೂಡಲು ಸಾಧ್ಯವಾಗಿದೆ. ಇವು ನಾಟಕದಲ್ಲಿ ಹಲವು ಕಾರ್ಯಗಳನ್ನು ನಿರ್ವಹಿಸಿವೆ. ಅವೆಂದರೆ,

೧ ತ್ಯಾಗರಾಜರ ಸ್ವವಿಷಯ ತಿಳಿಸಿವೆ.

೨ ಅವರ ಉದ್ದೇಶವನ್ನೂ ಪಾಂಡಿತ್ಯವನ್ನೂ ಪ್ರತಿಪಾದಿಸಿವೆ.

೩ ಕಥೆಯಬೆಳವಣಿಗೆಗೆ ಸಂಬಂಧ ಕಲ್ಪಿಸಿವೆ.

೪ ಅಲಂಕಾರಗಳನ್ನೂ (ಉಪಮಾನ ಉಪಮೇಯಾದಿ), ಪೌರಾಣಿಕ ಹಿನ್ನೆಲೆ ಯನ್ನೂ, ಸಮರ್ಥನಾ ಹೇಳಿಕೆಗಳನ್ನೂ ಒಳಗೊಂಡಿವೆ (Allusions, Key Statements).

ನಾಟಕದಲ್ಲಿ ಒಟ್ಟಾರೆ ೪೫ ಹಾಡುಗಳು ಅಳವಟ್ಟಿದ್ದು ಇವುಗಳು ಬಹುಮಟ್ಟಿಗೆ ಪ್ರೌಢಕೃತಿ ಮಾದರಿಯಲ್ಲೇ ಇವೆ. ಕೆಲವು ದಿವ್ಯನಾಮ ರೂಪದಲ್ಲಿವೆ. ರಾಗ-ರಸಗಳು ಮತ್ತು ಸಾಹಿತ್ಯ ಭಾವದ ನಡುವೆ ಅತ್ಯುತ್ತಮ ಸಾಮರಸ್ಯ ಕಾಣಬರುತ್ತವೆ. ಒಟ್ಟಾರೆ ೨೮ ರಾಗಗಳು ಪ್ರಯೋಗಗೊಂಡಿವೆ. ಅವು ೩-ಸೌರಾಷ್ಟ್ರ, ೩-ಕಲ್ಯಾಣಿ, ೧-ಯಮುನಾ ಕಲ್ಯಾಣಿ, ೨-ಹುಸೇನಿ, ೨-ಶಂಕರಾಭರಣ, ೨-ತೋಡಿ, ೧-ಶಹನ, ೨-ಘಂಟಾ, ೧-ಪುನ್ನಾಗವರಾಳಿ, ೩-ಭೈರವಿ, ೨-ಕಾಮವರ್ಧಿನಿ, ೨-ಆರಭಿ, ೧-ನೀಲಾಂಬರಿ, ೨-ವರಾಳಿ,

೨-ಕೇದಾರಗೌಳ, ೧-ದೇವಗಾಂಧಾರಿ, ೧-ನಾಗಗಾಂಧಾರಿ, ೧-ಮಧ್ಯಮಾವತಿ, ೧-ಬಿಲಹರಿ, ೨-ಸಾವೇರಿ, ೨-ಮೋಹನ, ೨-ಯದುಕುಲ ಕಾಂಬೋಜಿ, ೧-ಗೌಳೀಪಂತು, ೧-ರೀತಿಗೌಳ, ೧-ಕಾಪಿ, ೧-ಅಸಾವೇರಿ, ೧-ಆಹಿರಿ ಮತ್ತು ೧-ಫರಸ್. ಬಹುತೇಕ ಈ ರಾಗಗಳು ರಕ್ತಿರಾಗಗಳೇ ಆಗಿವೆ. ಭಕ್ತಿ ಮತ್ತು ಕರುಣ ರಸಗಳೇ ನಾಟಕದಲ್ಲಿ ಪ್ರಧಾನವಾಗಿವೆ. ವೈರಾಗ್ಯದ ಪರಿಪೂರ್ಣ ಚಿತ್ರಣಕ್ಕೆ ಕರುಣ ರಸವೇ ಸೂಕ್ತವೆನ್ನುತ್ತಾರೆ. ಆದರೆ ವಾಸುದೇವಯನಿ, ಶ್ರೀಗಣಪತಿನಿ, ಸಾಗರುಂಡು, ವಿಷ್ಣುವಾಹನುಂಡು ಈ ರಚನೆಗಳಲ್ಲಿ ಮಾತ್ರ ಕರುಣರಸ ಕಾಣಬರದು. ನಿಜಭಕ್ತಿಯ ಶಾಂತ ಚಿತ್ರಣವನ್ನು ನೀಡಬೇಕೆಂಬ ಉದ್ದೇಶದಿಂದಲೇ ತ್ಯಾಗರಾಜರು ಕ್ರೂರಿಯಾದ ಹಿರಣ್ಯಕಶಿಪುವ ನ್ನಾಗಲೀ, ಉಗ್ರನಾದ ನರಸಿಂಹನನ್ನಾಗಲೀ ಚಿತ್ರಿಸುವುದಿಲ್ಲ. ವಿಷ್ಣುವಿನ ಎಲ್ಲ ಅವ ತಾರಗಳ ಬಗೆಗೆ ಅವರಿಗೆ ಅರಿವಿದ್ದರೂ ಆತ ಪರಬ್ರಹ್ಮನೆಂಬ ಅರ್ಥದಲ್ಲೇ ಒಮ್ಮೆ ರಾಮನೆಂದರೆ ಮತ್ತೊಮ್ಮೆ ಕೃಷ್ಣನೆಂದು ಸಂಬೋಧಿಸುತ್ತಾರೆ. ತ್ಯಾಗರಾಜರಿಗೆ ರಾಮ-ಕೃಷ್ಣ-ನೃಸಿಂಹಾವತಾರಗಳ ನಡುವೆ ವ್ಯತ್ಯಾಸವಿಲ್ಲ.

ನಾಟಕದಲ್ಲಿ ಪ್ರಸ್ತುತಗೊಳ್ಳುವ ಪಾತ್ರಗಳು ಪರಬ್ರಹ್ಮ, ಪ್ರಹ್ಲಾದ, ಗಣಪತಿ, ಸೂತ್ರಧಾರ, ದೌವ್ವಾರಿಕ, ಸಾಗರರಾಜ, ನಾರದ, ಗರುಡ, ಲಕ್ಷ್ಮಿ, ಇಂದ್ರ, ಬ್ರಹ್ಮ, ಸೂರ್ಯ ಹಾಗೂ ಸನಕಸನಂದನಾದಿಗಳು. ತ್ಯಾಗರಾಜರು ಈ ನಾಟಕದಲ್ಲಿ ತಮ್ಮನ್ನು ಪ್ರಹ್ಲಾದನೊಂದಿಗೆ ತಾದಾತ್ಮ್ಯಭಾವದಿಂದ ಕಂಡಿದ್ದಾರೆ. ಭಕ್ತಿಸಾಧನೆಯ ಮಾರ್ಗ ದಲ್ಲಿ ತ್ಯಾಗರಾಜರೂ ಪ್ರಹ್ಲಾದನಂತೆಯೇ (ತಂದೆಯಿಂದ ಅಲ್ಲದಿದ್ದರೂ) ಕಷ್ಟ ಅನುಭವಿಸಿದ್ದಾರೆ. ಆದ್ದರಿಂದಲೇ ಪ್ರಹ್ಲಾದನ ಹೃದಯಾಂತ ರಾಳವನ್ನು ಹೃದ್ಗತ ಮಾಡಿಕೊಳ್ಳಲು ಅವರಿಗೆ ಸಾಧ್ಯವಾಗಿದ್ದಿರಬೇಕು.

ಪ್ರಹ್ಲಾದನ ಕಥೆಯು ಭಕ್ತಿ ಮಾರ್ಗೋಪಾಸಕರಿಗೆಲ್ಲ ಬಹಳ ಪ್ರಿಯವಾದುದು. ತ್ಯಾಗರಾಜರೇ ಅಲ್ಲದೆ ಇತರರೂ ಪ್ರಹ್ಲಾದನನ್ನು ಕುರಿತು ಸ್ತುತಿಸಿರುವುದುಂಟು. ಪ್ರಸ್ತುತ ತ್ಯಾಗರಾಜರು ಮೂಲ ಭಾಗವತದಲ್ಲಿನ ಪ್ರಹ್ಲಾದನ ಕಥೆಗಿಂತ ಕೆಲವು ಮಾರ್ಪಾಟುಗಳನ್ನು ನಾಟಕದಲ್ಲಿ ತೋರಿದ್ದಾರೆ. ಮೂಲದಲ್ಲಿ ದೌವ್ವಾರಿಕ, ಗರುಡ, ಸೂತ್ರಧಾರ, ಸಮುದ್ರರಾಜ ಇವರುಗಳ ಪಾತ್ರವಿಲ್ಲ, ಶ್ರೀಹರಿ ಪ್ರಹ್ಲಾದನೆಡೆಗೆ ಎರಡು ಬಾರಿ ಬಂದು ದರ್ಶನ ನೀಡುವುದಿಲ್ಲ. ಲಕ್ಷ್ಮಿ-ಹರಿ ಸಂವಾದ ಕಾಣಬರುವುದಿಲ್ಲ. ತ್ಯಾಗರಾಜರು ನಾಟಕದ ಆದ್ಯಂತಗಳಲ್ಲೂ ರಾಮಭಕ್ತಿಯನ್ನೇ ಹೊರಸೂಸುತ್ತಾರೆ. ಹೀಗಾಗಿ ತ್ಯಾಗರಾಜವಿರಚಿತ ಈ ನಾಟಕವು ಭಾಗಶಃ ಸಾಂಪ್ರದಾಯಿಕ ಹಾಗೂ ಭಾಗಶಃ ಸ್ವಕಲ್ಪಿತವಾಗಿದೆ. ನವವಿಧ ಭಕ್ತಿಗಳೂ ನವರಸಗಳೂ ಅಲ್ಲದೆ ವಿಶೇಷವಾಗಿ ತ್ಯಾಗ ರಾಜರೇ ಹೇಳುವಂತೆ ಗಾನರಸದೊಂದಿಗೆ ಈ ನಾಟಕ ರಚನೆಗೊಂಡಿದೆ. ಆದ್ದರಿಂದ ಕಥಾಕಾಲಕ್ಷೇಪಕ್ಕೂ ಅಳವಡಿಸಬಹುದಾದ ನಾಟಕ ಇದಾಗಿದೆ.

ನಾಟಕದ ಶಿರೋನಾಮೆಯ ಬಗೆಗೆ ಪರಿಣತರಲ್ಲಿ ಅಭಿಪ್ರಾಯ ಭೇದಗಳಿವೆ. ಕೆಲವು ಗ್ರಂಥಗಳು ಇದನ್ನು ಪ್ರಹ್ಲಾದ ಭಕ್ತ ವಿಜಯವೆಂದರೆ ಇನ್ನು ಕೆಲವು ಪ್ರಹ್ಲಾದ ಭಕ್ತಿ

ವಿಜಯ ಎನ್ನುತ್ತವೆ. ಒಂದೇ ಪುಸ್ತಕದಲ್ಲಿ ಇವೆರಡು ರೀತಿಯ ಸಂಬೋಧನೆ ಇರುವುದೂ ಉಂಟು (ನೋಡಿ, ಶ್ರೀ ಎಂ. ಆರ್. ಶಂಕರಮೂರ್ತಿಯವರು ಕನ್ನಡೀಕರಿಸಿರುವ ಪ್ರಹ್ಲಾದ.ಭಕ್ತಿ ವಿಜಯದ ಪುಟಗಳು ೨೦೩-೨೦೪). ಭಕ್ತ ವಿಜಯವೆಂದಾಗ ಹಿರಿಮೆ ಪ್ರಹ್ಲಾದನದು. ಭಕ್ತಿ ವಿಜಯವೆಂದಾಗ ಭಕ್ತಿಯೇ ಹಿರಿದೆಂಬ ಅರ್ಥ ಬರುತ್ತದೆ. ತ್ಯಾಗರಾಜರ ಪ್ರಕಾರ ಭಕ್ತಿಯೆಂಬುದು ರಾಜಮಾರ್ಗವೇ ಸರಿ (ಭಕ್ತಿಯನೇ ಚಕ್ಕನಿ ರಾಜಮಾರ್ಗಮು-ಖರಹರಪ್ರಿಯ). ರಾಮಭಕ್ತಿಯು ವಿಶಿಷ್ಟವಾದ ಒಂದು ಸಾಮ್ರಾಜ್ಯ ಎಂಬುದು ಅವರ ಅಭಿಪ್ರಾಯ (ರಾಮಭಕ್ತಿ ಸಾಮ್ರಾಜ್ಯ-ಶುದ್ಧ ಬಂಗಾಳಿ). ಅವರ ದೃಷ್ಟಿಯಲ್ಲಿ ಪ್ರಹ್ಲಾದನು ಭಕ್ತಿಯ ಒಂದು ಮೂರ್ತರೂಪವೇ ಸರಿ. ರೂಪ ಆಕಾರಗಳಿಲ್ಲದ ಯಾವುದೇ ವಸ್ತು ಅಥವಾ ವಿಷಯವನ್ನು ಸಾಮಾನ್ಯನು ಅಂಗೀಕರಿಸುವುದು ಕಷ್ಟಸಾಧ್ಯ. ಆದ್ದರಿಂದ ಇಲ್ಲಿ ಭಕ್ತಿಯ ಚಿಂತನೆ ಎಂದರೆ ಪ್ರಹ್ಲಾದನ ಚಿಂತನೆಯೇ. ತನ್ನ ಭಕ್ತಿಯು ಸಫಲವಾಗದೆ ತಾನು ಜೀವಿಸುವಂತಾಗಿದ್ದಿದ್ದರೆ ಪ್ರಹ್ಲಾದನೂ ಸಂತೋಷವಾಗಿದ್ದಿರಲು ಸಾಧ್ಯವಿರಲಿಲ್ಲ. ಆತನಿಗೆ ತನ್ನ ಜೀವಕ್ಕಿಂತ ಮಿಗಿಲಾದುದು ಭಕ್ತಿಯೇ ಆಗಿದ್ದಿತು. ಹೀಗಾಗಿಯೇ ಆತ ಭಕ್ತರ ಪಟ್ಟಿಯಲ್ಲಿ ಅಗ್ರಮಾನ್ಯನಾದ. 'ಪ್ರಹ್ಲಾದನಾರದಪರಾಶರ...' ಮುಂತಾಗಿ ಆರಂಭವಾಗುವ ಪ್ರಾಚೀನ ಸೂಕ್ತಿಯೊಂದನ್ನು ನಾವಿಲ್ಲಿ ಸ್ಮರಿಸಬಹುದು. ಈ ದೃಷ್ಟಿಕೋನದಿಂದ ನೋಡಿದಾಗ ನಾಟಕದ ಹೆಸರು 'ಪ್ರಹ್ಲಾದ ಭಕ್ತಿ ವಿಜಯ' ಎಂಬುದು ಸೂಕ್ತವೆನಿಸುತ್ತದೆ.

ಒಟ್ಟಾರೆ ತ್ಯಾಗರಾಜರ ಅತ್ಯದ್ಭುತ ಪ್ರತಿಭೆ ಮೇಲಿನ ಎರಡು ನಾಟಕಗಳಲ್ಲಿ ಮೂಡಿಬಂದಿದೆ. ಸಂಗೀತಗಾರರಾಗಿ, ಕವಿಗಳಾಗಿ, ನಾಟಕಕರ್ತರಾಗಿ, ಕಲಾತಜ್ಞರಾಗಿ ಎಲ್ಲಕ್ಕಿಂತ ಮಿಗಿಲಾಗಿ ಭಕ್ತರಾಗಿ ಸರ್ವತೋಮುಖ ಪ್ರತಿಭೆಯನ್ನು ಅವರು ಸೂಸಿದ್ದಾರೆ. ತ್ಯಾಗರಾಜರ ಶೈಲಿಯನ್ನು ದ್ರಾಕ್ಷಾಪಾಕಕ್ಕೆ ಹೋಲಿಸಿರುವುದುಂಟು. ಇದಕ್ಕೆ ಇವರ (ಬಿಡಿ ಕೃತಿಗಳಲ್ಲದೆ) ಈ ನಾಟಕಗಳು ಅತ್ಯುತ್ತಮ ನಿದರ್ಶನ. ಇವುಗಳಲ್ಲಿ ಕಾಣಬರುವ ಜೇನಿನಂಥ ವಾಕ್ಸರಣಿ, ಪ್ರೀತಿಯಲ್ಲಿ ಮಿಂದ ಭಕ್ತಿಭಾವ, ಪರವಶಗೊಳಿಸುವ ಸಂಗೀತ ಅವರ ಶೈಲಿಯನ್ನು ಪರಿಪೂರ್ಣಗೊಳಿಸಿವೆ. ನೌಕಾಚರಿತ್ರೆಯಲ್ಲಿ ಶೃಂಗಾರವು ಭಕ್ತಿಗೆ ಸಾಧನವಾದರೆ, ಪ್ರಹ್ಲಾದ ಭಕ್ತಿವಿಜಯದಲ್ಲಿ ಶುದ್ಧ ಭಕ್ತಿಯ ಸಹಜರೂಪವು ಕಾಣಬರುತ್ತದೆ. ಪುನ್ನಾಗವರಾಳಿ, ಘಂಟಾ, ಸೌರಾಷ್ಟ್ರ, ದೇವಗಾಂಧಾರಿ, ಮೋಹನ, ವರಾಳಿ ರಾಗಗಳು ಎರಡು ನಾಟಕಗಳಲ್ಲೂ ಪ್ರಯೋಗಗೊಂಡಿವೆ. ನೌಕಾಚರಿತ್ರೆಯಲ್ಲಿ 'ನಯ' ರಾಗಗಳೆಂಬ ಉಲ್ಲೇಖವೂ ಕಾಣಬರುತ್ತದೆ (ಏನೋಮು ನೋಚಿತಿವೋ-ಪುನ್ನಾಗವರಾಳಿ) ನಾಟಕಗಳಹೆಸರು ಅನ್ವರ್ಥಕವಾಗಿರುವ ಕಾವ್ಯಗಳಿವು. ಧೀರೋದಾತ್ತ ಗುಣಾನ್ವಿತನಾದ ದೇವತೆ, ಸತ್ಕುಲಪ್ರಸೂತನಾದ ನಾಯಕ. ಶೃಂಗಾರ, ವೀರ, ಶಾಂತರಸಗಳಲ್ಲಿ ಒಂದು ರಸ ಪ್ರಧಾನವಾಗಿರುವುದು, ಉಳಿದೆಲ್ಲ ರಸಗಳೂ ಪ್ರಧಾನ ರಸಕ್ಕೆ ಅಧೀನವಾಗಿರುವುದು, ಆದಿಯಲ್ಲಿ ನಮಸ್ಕಾರ, ಆಶೀರ್ವಚನ ಅಥವಾ ವಸ್ತುನಿರ್ದೇಶಗಳಿರುವುದು, ಸೂರ್ಯ, ಋತುಗಳು, ಸಂಭೋಗ,

ವಿಪ್ರಲಂಭ ಮೊದಲಾದವು ಯಥಾಯೋಗ್ಯವಾಗಿ ವರ್ಣಿಸಲ್ಪಟ್ಟಿರುವುದು—ಈ ಮುಂತಾದ ಲಕ್ಷಣಗಳುಳ್ಳ ಕಾವ್ಯಗಳನ್ನು ಮಹಾಕಾವ್ಯಗಳೆಂದು ಸಂಬೋಧಿಸಲಾಗುತ್ತದೆ.[೧೭] ತ್ಯಾಗರಾಜರ ಈ ನಾಟಕಗಳಲ್ಲಿ ಬಹುತೇಕ ಮೇಲಿನ ಲಕ್ಷಣಗಳನ್ನು ಕಾಣಬಹುದಾದ್ದರಿಂದ ಇವುಗಳನ್ನು ಮಹಾಕಾವ್ಯಗಳ ಗುಂಪಿಗೂ ಸೇರಿಸಬಹುದು. ಪ್ರಪನ್ನರಿಗೆ ಕಲ್ಪವೃಕ್ಷದಂತಿರುವ ಭಗವಂತನನ್ನು ಸೇರಲಿರುವ ಹಲವು ಮಾರ್ಗಗಳಲ್ಲಿ ಶುದ್ಧ ಭಕ್ತಿ ಹಾಗೂ ಶೃಂಗಾರ ಮಾರ್ಗಗಳ ಹಿರಿಮೆಯನ್ನು ಈ ನಾಟಕಗಳು ಪ್ರತಿಪಾದಿಸುತ್ತವೆ.

## ಟಿಪ್ಪಣಿಗಳು

೧ The Opera in South India, Dr. S.A. K. Durga, B. R. Publishing Corporation, Delhi, 1979,ಪು. ೭

೨ ಅದೇ, ಪುಟ ೬

೩ ತ್ಯಾಗರಾಜಸ್ವಾಮಿ ಕೀರ್ತನಲು, ಕೆ. ವಿ. ಶ್ರೀನಿವಾಸ ಅಯ್ಯಂಗಾರ್, ಪೀಠಿಕೆ ಪು. ೫

೪ The Spiritual Heritage of Tyagaraja, C. Ramanujachari & Dr. V. Raghavan, Sri Ramakrishna Math, Madras, 19966 ಪು. ೩೭.

೫ Great Composers-II-Tyagaraja, P. Sambamurthy, 1970, ಪುಟ ೫೮-೭೩.

೬ ಅದೇ ಪು. ೫೭

೭ ಅದೇ ಪುಟ ೫೮

೮ The Spiritual Heritage of Tyagaraja, C. Ramanujachari and Dr. V. Raghavan, Sri Ramakrishna Math, Madras, 1966, Introductory Thesis,ಪು. ೩೯

೯ ತ್ಯಾಗರಾಜ ಕೀರ್ತನಲು ವಿಶೇಷ ವಿವರಣಮು. ಸಂ. ೧ ಕಲ್ಲೂರಿ ವೀರಭದ್ರಶಾಸ್ತ್ರಿ, ಸ್ವಧರ್ಮ ಸ್ವಾರಾಜ್ಯ ಸಂಘಮು, ಮದರಾಸು, ೧೯೭೫, ಪು. ೯೧

೧೦ ತಸ್ಮಾತ್ ಸರ್ವೇಷು ಕಾಲೇಷು ಮಾಮನುಸ್ಮರ . . .
ಮಯ್ಯರ್ಪಿತ ಮನೋಬುದ್ಧಿರ್ಮಾಮೇವೈಷ್ಯಸ್ಯ ಸಂಶಯಃ ॥

ಶ್ರೀಮದ್ ಭಗವದ್ಗೀತಾ, ೮-೮.

೧೧ Great Composers-II Tyagaraja, P. Sambamurthy, ಪು. ೨೬೧

೧೨ ಅಧ್ಯಾತ್ಮಿಕ ದುಃಖ—ಶಾರೀರಿಕ ಮತ್ತು ಮಾನಸಿಕ (ಜ್ವರ, ಚಿಂತೆ, ರೋಷಾದಿ) ತಾಪತ್ರಯಗಳು. ಆಧಿದೈವಿಕ-ಭೂತಪ್ರೇತಾದಿ ಅತಿಪ್ರಾಕೃತಿಕ ಶಕ್ತಿಗಳಿಂದ ಬರುವ ತಾಪತ್ರಯಗಳು. ಆಧಿಭೌತಿಕ—ಇತರ ಮನುಷ್ಯರು—ಪ್ರಾಣಿಗಳು ಇತ್ಯಾದಿಗಳಿಂದ ಉಂಟಾಗುವ (ಕೊಲೆ, ಹಾವುಕಡಿತ, ಮುಳ್ಳು ಚುಚ್ಚುವುದು, ಇತ್ಯಾದಿ) ತಾಪತ್ರಯಗಳು. ಉಲ್ಲೇಖ ಹಿಂದೂಧರ್ಮದ ಪರಿಚಯ, ಎದುರ್ಕಳ ಕೆ. ಶಂಕರನಾರಾಯಣ ಭಟ್, ಕೊಡಗು ಜಿಲ್ಲೆ. ೧೯೬೮, ಪು ೧೨೩

೧೩ ವಾಲ್ಮೀಕಿ ರಾಮಾಯಣದ ಸುಂದರಕಾಂಡ ೫೩ನೇ ಸರ್ಗದಲ್ಲಿ ಸೀತಾಮಾತೆಯು ತನ್ನ ಪಾತಿವ್ರತ್ಯ ಹಾಗೂ ನಡತೆಗಳ ಮೇಲೆ ಪಣ ಒಡ್ಡಿ ಹನುಮಂತನ ಬಾಲ ಸುಡದಿರಲೆಂದು

ಪ್ರಾರ್ಥಿಸಿದುದನ್ನು ನೆನಪಿಗೆ ತರುತ್ತದೆ. ಈ ಅಂಶ ೨೭ರಿಂದ ೩೧ನೇ ಶ್ಲೋಕಗಳಲ್ಲಿ ಅಡಕಗೊಂಡಿದೆ

೧೪ ಶ್ಲೋಕ ೫—ನಾಸ್ಥಾಧರ್ಮೇ, ನವಸುನಿಚಯೆ . . . . .

೧೫ ೩-೨-೪

೧೬ ನಚಸೀತಾ ತ್ವಯಾಹೀನ . . . . ಮತ್ತು ನಹಿತಾತಂ ನ ಶತ್ರುಘ್ನಂ ಶ್ಲೋಕಗಳು ವಾಲ್ಮೀಕಿ ರಾಮಾಯಣದಲ್ಲಿ ಅಯೋಧ್ಯಾಕಾಂಡ ೫೩ನೇ ಸರ್ಗದ ೩೧-೩೨ನೇ ಶ್ಲೋಕಗಳಾಗಿವೆ
ರಾಮನ ಚಹರೆಗಳನ್ನು ಹೇಳುತ್ತಾ ಭಕ್ತವೃಂದದೊಡನೆ ಪ್ರಹ್ಲಾದನು ರಾಮನಿಗಾಗಿ ಹುಡುಕುವುದು ಅರಣ್ಯಕಾಂಡ ೬೦ನೇ ಸರ್ಗದ ೧೨-೨೪ನೇ ಶ್ಲೋಕಗಳ ನಡುವೆ ವರ್ಣಿತವಾದ ಶ್ರೀರಾಮನ ವಿರಹೋನ್ಮಾದದ ಸ್ಥಿತಿಯನ್ನೇ ಹೋಲುವಂತಿದೆ. ರಾಮಾಯಣದಲ್ಲಿ ಶ್ರೀ ರಾಮನು ಪ್ರಾಣಿಪಕ್ಷಿಗಳನ್ನೂ, ತರುಲತೆಗಳನ್ನೂ 'ಸೀತಾದೇವಿಯನ್ನು ನೋಡಿದಿರಾ' ಎಂದು ಪ್ರಶ್ನಿಸುತ್ತಾನೆ. ಶ್ರೀರಾಮನಿಗಾದ ವಿರಹದ ವ್ಯಾಕುಲವೇ ಪ್ರಹ್ಲಾದನಿಗೂ ಇದ್ದರೂ ಶ್ರೀ ರಾಮನು ಪ್ರಕೃತಿಯೊಡನೆ ಹೀಗೆ ಪ್ರಲಾಪಿಸಿದರೆ, ಪ್ರಹ್ಲಾದ ಭಕ್ತರಲ್ಲಿ ವಿಚಾರಿಸುತ್ತಾ ಪ್ರಲಾಪಿಸುತ್ತಾನೆ.

೧೭ ಕನಕ ಸಾಹಿತ್ಯ ದರ್ಶನ ಸಂ. ೧, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು (ಸಂ.)ಡಾ. ದೇ. ಜವರೇಗೌಡ ಡಾ. ಪ್ರಧಾನಗುರುದತ್ತರ ಲೇಖನದಲ್ಲಿ ಉಲ್ಲೇಖ, ಪು. ೩೨೪-೩೨೫

೯

# ಭಗವಂತನ ಸ್ವರೂಪ

ನಮ್ಮೆಲ್ಲ ಆಲೋಚನೆ, ಭಾವನೆಗಳಿಗೂ ಇರುವಂತೆ ಭಕ್ತಿಗೂ ಒಂದು ವಸ್ತು ಉಂಟು. ಅದೇ ದೇವರು. ಆದ್ದರಿಂದ ದೇವರನ್ನು ಕುರಿತ ವಿವರಣೆ ಇಲ್ಲದೆ ಭಕ್ತಿ ಪ್ರಸ್ತಾಪವು ಅರ್ಥಹೀನವಾಗುವುದರಿಂದ, ತ್ಯಾಗರಾಜರ ಪ್ರಕಾರ ದೇವರ ಸ್ವರೂಪವೇನೆಂದು ತಿಳಿಯುವುದು ಅಗತ್ಯ.

ದೇವರ ಸ್ವರೂಪವೇನೆಂದು ತಿಳಿಯುವುದಕ್ಕೂ ಮೊದಲು ದೇವರಾದರೂ ಇರುವನೇ ಎಂಬುದು ಪ್ರಶ್ನೆ. ತಾತ್ವಿಕ ಇತಿಹಾಸದಲ್ಲಿ ಈ ಬಗ್ಗೆ ಸಾಕಷ್ಟು ಜಿಜ್ಞಾಸೆಯೇ ನಡೆದಿದೆ. ತ್ಯಾಗರಾಜರು ತಾರ್ಕಿಕರಲ್ಲದಿದ್ದರೂ ಪರಮತಾತ್ವಿಕರು. ಅವರು ಮೂರು ಹಂತಗಳಲ್ಲಿ ದೇವರ ಅಸ್ತಿತ್ವವನ್ನು ಸಮರ್ಥಿಸುತ್ತಾರೆ.

(ಅ) ನಂಬಿಕೆಯ ಹಂತ
(ಆ) ವಿಚಾರದ ಹಂತ
(ಇ) ಶ್ರುತಿಯ ಹಂತ

**(ಅ) ನಂಬಿಕೆಯ ಹಂತ** : ನಮ್ಮೆಲ್ಲ ವ್ಯವಹಾರಗಳಿಗೂ ನಂಬಿಕೆಯೇ ಮೂಲ. ನಂಬಿಕೆ ಇಲ್ಲದೆ ಪರಮಾರ್ಥವಿರಲಿ, ವ್ಯವಹಾರವೇ ಸಾಧ್ಯವಿಲ್ಲ. ಭಗವದ್ಗೀತೆಯು ಹೀಗೆ ಹೇಳುತ್ತದೆ.

**ಅಜ್ಞಶ್ಚ ಅಶ್ರದ್ಧ ಧಾನಶ್ಚ ಸಂಶಯಾತ್ಮಾ ವಿನಶ್ಯತಿ**[೧]

ಎಂದರೆ ಅಜ್ಞಾನಿಯೂ, ಅಶ್ರದ್ಧನೂ ಮತ್ತು ಸಂಶಯಾತ್ಮನೂ ನಾಶವಾಗುವರೆಂದು ಇದರ ಅರ್ಥ. ಆದಿ ಶಂಕರರು ಈ ಸಾಲಿನ ಬಗ್ಗೆ ವ್ಯಾಖ್ಯಾನಿಸುತ್ತಾ 'ಅಜ್ಞಾನಿ ಮತ್ತು ಅಶ್ರದ್ಧರು ನಾಶವಾಗುವರೆಂಬುದು ನಿಜ, ಆದರೆ ಅವರು ಸಂಶಯಾತ್ಮನಷ್ಟು ಪಾಪಿಗಳಲ್ಲ. ಆದ್ದರಿಂದ ಸಂಶಯಾತ್ಮನಿಗೆ ಪರವಿರಲಿ, ಇಹವೇ ಇಲ್ಲ' ಎನ್ನುತ್ತಾರೆ. 'ಯದ್ಭಾವಂ ತದ್ಭವತಿ' ಎಂಬ ಉಕ್ತಿಗೆ ಅನುಸಾರವಾಗಿ, ಇರುವನೆನ್ನುವವರಿಗೆ ದೇವರು ಇದ್ದಾನೆ, ಇಲ್ಲ ಎನ್ನುವವರಿಗೆ ಆತನಿಲ್ಲ. ಈ ಅಂಶವನ್ನು ಸಮರ್ಥಿಸುವಲ್ಲಿ ತ್ಯಾಗರಾಜರು ನಂಬಿಕೆಯ ಅಗತ್ಯವನ್ನು 'ಕದ್ದನುವಾರಿಕಿ ಕದ್ದು'—ಎಂಬ ಕೃತಿಯಲ್ಲಿ ಒತ್ತಿ ನುಡಿಯುತ್ತಾರೆ.

**(ಆ) ವಿಚಾರದ ಹಂತ** : ಜಗತ್ತಿನಲ್ಲಿ ಕಾಣಬರುವ ಸೂರ್ಯೋದಯ, ಸೂರ್ಯಾಸ್ತಗಳೇ ಮುಂತಾದ ಘಟನೆಗಳಲ್ಲಿ ಒಂದು ವ್ಯವಸ್ಥೆಯುಂಟು. ಈ ವ್ಯವಸ್ಥೆಯು ಒಬ್ಬ ವ್ಯವಸ್ಥಾಪಕನಿಲ್ಲದೇ ಅರ್ಥಪೂರ್ಣವಾಗಲಾರದು. ಜಗತ್ತಿನ ವ್ಯವಸ್ಥೆಯು ಅದ್ಭುತವಾದುದರಿಂದ ಅದರ ವ್ಯವಸ್ಥಾಪಕನೂ ಅದ್ಭುತನಾಗಿಯೇ ಇರಬೇಕು. ಈ ವ್ಯವಸ್ಥಾಪಕನೇ 'ದೇವರು'. ವೇದವು ಜಗತ್ತಿನ ವ್ಯವಸ್ಥೆಯನ್ನು 'ಋತ' ಎಂದು ಕರೆದು,

ದೇವತೆಗಳನ್ನು 'ಋತರಕ್ಷಕರು'(ಗೋಪಾಋತಸ್ಯ) ಎಂದು ವರ್ಣಿಸುತ್ತದೆ. ತೈತ್ತಿರೀಯ ಉಪನಿಷತ್ತು ಹೀಗೆ ಹೇಳುತ್ತದೆ.

**ಭೀಷಾಸ್ಮಾತ್ ವಾತಃ ಪವತೇ । ಭೀಷೋದೇತಿ ಸೂರ್ಯಃ ।**

**ಭೀಷಾಸ್ಮಾತ್ ಅಗ್ನಿಶ್ಚೇಂದ್ರಶ್ಚ ।**[೨]

ಈತನ ಭಯದಿಂದಲೇ ಗಾಳಿ, ಸೂರ್ಯ, ಅಗ್ನಿಚಂದ್ರಾದಿಗಳು ತಮ್ಮ ಕರ್ತವ್ಯಗಳಲ್ಲಿ ತೊಡಗುವುದು. ಇದೇ ರೀತಿ ತ್ಯಾಗರಾಜರೂ ಕೂಡ ಈ ವಾದವನ್ನು ಬಹು ಮನೋಜ್ಞ ವಾಗಿ ಹೀಗೆ ಮಂಡಿಸುತ್ತಾರೆ.

**ನೀವುಲೇಕ ಯೇ ತನುವುಲು ನಿರತಮುಗಾ ನಡಚುನು**
**ನೀವುಲೇಕ ಯೇ ತರುವುಲು ನಿಕ್ಕಮುಗಾ ಮೊಲಚುನು**
**ನೀವುಲೇಕ ಯೇ ವಾನಲು ನಿತ್ಯಮುಗಾ ಗುರಿಯುನು**
**ನೀವುಲೇಕ ತ್ಯಾಗರಾಜು ನೀ ಗುಣಮುಲನೆಟುಬಾಡುನು**

**(ನಾರದ ಗಾನಲೋಲ)**

ಎಂದರೆ ಶ್ರೀರಾಮನಿಲ್ಲದೆ ಯಾವ ಜಂತುವೂ ಇರಲಾರದು. ಕಾಲಕಾಲಕ್ಕೆ ಮಳೆ ಬೀಳದು, ಬೆಳೆ ಬಾರದು. ಆತನಿಲ್ಲದೆ ತ್ಯಾಗರಾಜರೂ ಕೂಡ ಆತನ ಮಹಿಮೆಯನ್ನು ಕೊಂಡಾಡಲಾರರು.

**(೩) ಶ್ರುತಿಯ ಹಂತ** : ಇನ್ನು, ತರ್ಕವು ನಮಗೆ ದೇವರ ಬಗ್ಗೆ ತಿಳಿಸುವುದಾದರೂ ಅದರ ತೀರ್ಮಾನವು ಸಂಭಾವ್ಯವೇ ಹೊರತು ಖಚಿತವಲ್ಲ. ಅದರಿಂದ ದೇವರು 'ಇರಬಹುದೇನೋ' ಎಂಬ ಭಾವ ಸಿದ್ಧಿಸುವುದೇ ಹೊರತು 'ದೇವರು ಖಂಡಿತವಾಗಿ ಇದ್ದೇ ಇರುವನು' ಎಂಬ ತೀರ್ಮಾನವು ಸಿದ್ಧಿಸುವುದಿಲ್ಲ. ಒಂದು ಪಕ್ಷ ಅದು ನಮಗೆ ದೇವರ ಸುಳಿವನ್ನು ನೀಡಿದರೂ ಆ ದೇವರು ಹೇಗಿರುವನೆಂಬ ಸಮಸ್ಯೆಯು ಉಳಿದೇ ತೀರುತ್ತದೆ. ಏಕೆಂದರೆ ಆತನು ವಿಚಾರದ ಎಲ್ಲೆಯನ್ನು ಮತ್ತು ಮಾತು ಮನಸ್ಸುಗಳನ್ನು ಮೀರಿದವನು. ತೈತ್ತರೀಯ ಉಪನಿಷತ್ತು ಹೀಗೆ ಸಾರುತ್ತದೆ.

**ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ ।**[೩]

ಯಾವುದರಿಂದ ಮಾತು, ಮನಸ್ಸಿನೊಡನೆ ಅದನ್ನು ಗ್ರಹಿಸಲಾರದೇ ಹಿಂತಿರುಗು ವುದೋ ಎಂಬುದು ಭಾವ. ಹಾಗೆಯೇ

**ನಾಯಮಾತ್ಮಾ ಪ್ರವಚನೇನ ಲಭ್ಯಃ**
**ನಮೇಧಯಾ ನಬಹುನಾ ಶ್ರುತೇನ**[೪]

**ನೈಷಾ ತರ್ಕೇಣ ಮತಿರಾಪನೇಯಾ**[೫]

ಎಂಬ ಉಪನಿಷದ್ ವಾಕ್ಯಗಳೂ ಇವೆ. ಬ್ರಹ್ಮಸೂತ್ರವು 'ತರ್ಕಾ ಪ್ರತಿಷ್ಠಾನಾತ್'[೬] ಎನ್ನುತ್ತದೆ.

ಆದ್ದರಿಂದ ದೇವರನ್ನು ತಿಳಿಯಬಹುದಾದ ಏಕೈಕ ಸಾಧನ ಅಥವಾ ಪ್ರಮಾಣ

ವೆಂದರೆ 'ಶಬ್ದ'. ಶಬ್ದವೆಂದರೆ 'ವೇದ' ಎಂದು ಅರ್ಥ. ಇದು ಇತರ ಪ್ರಮಾಣಗಳಿಂದ ತಿಳಿಯಲಾಗದ 'ಈಶ್ವರನ' ಬಗ್ಗೆ ಮಾಹಿತಿ ನೀಡುತ್ತದೆ. ವೇದಗಳಾದರೋ ಮಂತ್ರ ದ್ರಷ್ಟಾರರಾದ ಋಷಿಗಳ ಅತೀಂದ್ರಿಯಾನುಭವದ ವಾಗಭಿವ್ಯಕ್ತಿಯೇ ಆಗಿದೆ. ಯೋಗ್ಯ ಗುರುವಿನಿಂದ ಶ್ರವಣದ ಮೂಲಕ ಮಾತ್ರ ಕಲಿಯಬೇಕಾದ್ದರಿಂದ ಇದು 'ಶ್ರುತಿ'ಯೂ ಹೌದು. ಇದಕ್ಕೆ 'ಆಪ್ತವಚನ' ಎಂಬ ಹೆಸರೂ ಉಂಟು. ಯಾರು ಸತ್ಯವನ್ನು ಅದು ಇದ್ದಂತೆಯೇ ಯಥಾರ್ಥವಾಗಿ ತಿಳಿದಿರುವರೋ ಮತ್ತು ಆ ಸತ್ಯವನ್ನು ಇತರರಿಗೂ ನಿಷ್ಕಲ್ಮಶವಾಗಿ ತಿಳಿಸುವರೋ ಅವರೇ ಆಪ್ತರು. ತಿಳಿ ಮತ್ತು ತಿಳಿಸು ಇವು ಆಪ್ತನ ಲಕ್ಷಣ. ದೇವರಿರುವನೆಂಬ ಅಂತಹ ಆಪ್ತರ, ಹಿರಿಯರ ಮಾತುಗಳೆಂದಿಗೂ ಸುಳ್ಳಾಗ ದೆಂದು ತ್ಯಾಗರಾಜರ ಅಭಿಮತ.

ಪೆದ್ದಲ ಮಾಟಲು ನೇಡಬದ್ಧಮೌನೇ ?

(ಕದ್ದನುವಾರಿಕಿ ಕದ್ದು)

ತ್ಯಾಗರಾಜರಿಗೆ ದೇವರು ವೇದವೇದ್ಯ, ಆಗಮಮೂಲ, ಆಗಮ ಸಂಚಾರಿ, ಆಗಮ ನಿಗಮ ವಿಹಾರಿ. ಆತ ಸಕಲ ವೇದಗಳಿಗೆ ಮೂಲವಾದ ಪ್ರಣವಸ್ವರೂಪ, ಓಂಕಾರ ಪಂಜರಕೀರ. ಆತನಿಂದ ಹೊರಹೊಮ್ಮಿದ ವೇದದ ಅಂತಿಮ ತಾತ್ಪರ್ಯವೂ ಆತನೇ.

ಆಗಮನಿಗಮ ಚಯಾರ್ಥಮು ನೀವನಿ

(ನನ್ನುಬ್ರೋವಕನು)

ಆತನು ಸಕಲಶ್ರುತಿಸಾರ, ಆಗಮಗೋಚರ. ತ್ಯಾಗರಾಜರ ಭಾಷೆಯಲ್ಲೇ ಹೇಳುವು ದಾದರೆ,

ಸಕಲವೇದಶಾಸ್ತ್ರ ಪುರಾಣಾದಿ ದೀಪ

(ಭಜನಸೇಯವೇ)

ತ್ಯಾಗರಾಜರು ದೇವರನ್ನು 'ಆಗಮನಿಗಮಾತೀತ' ಎನ್ನುವಾಗ ಜ್ಞಾನರಹಿತವಾದ ಶುಷ್ಕ ಅಧ್ಯಯನಕ್ಕೆ ನಿಲುಕದವನೆಂದು ಅರ್ಥವೇ ಹೊರತು ವೇದಕ್ಕೆ ನಿಲುಕದವನೆಂದು ಅರ್ಥವಲ್ಲ.

ಇನ್ನು, ಪರಮಾತ್ಮನ ಸ್ವರೂಪವೇನು ? ಆತನು ಅದ್ವೈತ ಸ್ವರೂಪನೋ, ದ್ವೈತನೋ ? ನಿರ್ಗುಣನೋ, ಸಗುಣನೋ ? ನಿರಾಕಾರನೋ, ಸಾಕಾರನೋ ? ಇದು ವೇದಾಂತದ ಮತ್ತೊಂದು ಸಮಸ್ಯೆ. ಇದರ ಅರಿವು ತ್ಯಾಗರಾಜರಿಗೆ ಇದೆ. ಈ ಸಮಸ್ಯೆಯ ಪರಿಹಾರಕ್ಕಾಗಿ ಅವರು ಸರ್ವಸಾಕ್ಷಿಯಾದ ಚೈತನ್ಯವನ್ನೇ ಮೊರೆಹೋಗು ತ್ತಾರೆ.

ದ್ವೈತಮು ಸುಖಮಾ ? ಅದ್ವೈತಮು ಸುಖಮಾ ?
ಚೈತನ್ಯಮಾ ವಿನು ಸರ್ವಸಾಕ್ಷೀ ವಿ
ಸ್ತಾರಮುಗಾನು ದೆಲ್ಪುಮು ನಾತೋ

ಮತ್ತೊಂದು ರಚನೆಯಲ್ಲಿ ಸರ್ವವೂ ನಾನೇ ಆಗಿರುವೆನೆಂಬ ಮಾರ್ಗವನ್ನು ಅನು

ಸರಿಸಿದರೆ ರಕ್ಷಿತ-ರಕ್ಷಕರಲ್ಲಿ ಭೇದಭಾವವಿಲ್ಲವೆಂದು ನೀನು ರಕ್ಷಕನಾಗಲಾರೆ. ಹಾಗಿಲ್ಲದೆ ದಾಸವರದನೆ, ನನ್ನನ್ನು ರಕ್ಷಿಸೆಂದು ಕೇಳಿದರೆ ಈತನು 'ದ್ವೈತಿ' ಎನ್ನುತ್ತೀಯೆ. ನಾನೀಗ ಯಾವ ಮಾರ್ಗ ಅನುಸರಿಸಲಿ ಹೇಳು ಎನ್ನುತ್ತಾರೆ.

**ಏದಾರಿ ಸಂಚರಿಂತುರಾ, ಇಕ ಬಲ್ಕರಾ**
**ಅನ್ನಿ ತಾನನು ಮಾರ್ಗಮುನು ಚನಿತೇ**
**ನನ್ನು ವೀಡೆನು ಭಾರಮನಿಯನೇವು**
**ತನ್ನು ಬ್ರೋವರಾ ಸದಾಯಂಟೇ**
**ದ್ವೈತುಡನೇವು**

**(ಏದಾರಿ ಸಂಚರಿಂತುರಾ)**

ಈ ವಿಚಾರವೇನೇ ಇದ್ದರೂ ತ್ಯಾಗರಾಜರ ಪ್ರಕಾರ ದೇವರು ಮೂಲತಃ ಅದ್ವೈತನೇ (ಸುಂದರತರದೇಹಂ). 'ಏಕಮೇವಾದ್ವಿತೀಯಮ್'[೭] ಎಂದು ಛಾಂದೋಗ್ಯವು ಹೇಳುವಂತೆ ಆತನು ಅಂತರಹಿತ (ವರಲೀಲಾ ಗಾನಲೋಲ ಮತ್ತು ರಾಮ ಸಮಯಮು ಬ್ರೋವ). ಯಾವುದರಲ್ಲಿ ಎರಡು ಅಥವಾ ಭೇದವಿಲ್ಲವೋ ಅದೇ ಅದ್ವೈತ ಅಥವಾ ಅಂತರಹಿತ. ಭೇದವು ಸಜಾತೀಯ, ವಿಜಾತೀಯ ಮತ್ತು ಸ್ವಗತವೆಂದು ಮೂರು ಬಗೆ. ಒಂದೇ ವರ್ಗಕ್ಕೆ ಸೇರಿದ ಎರಡು ವಸ್ತುಗಳಲ್ಲಿ ಎಂದರೆ ಇಬ್ಬರು ಮನುಷ್ಯರಲ್ಲಿ ಇರುವ ಭೇದ ಸಜಾತೀಯ ಭೇದ. ಬೇರೆ ಬೇರೆ ವರ್ಗದ ಎರಡು ವಸ್ತುಗಳಲ್ಲಿ ಎಂದರೆ ಮನುಷ್ಯ ಮತ್ತು ಸಸ್ಯಗಳ ನಡುವೆ ಇರುವ ಭೇದವು ವಿಜಾತೀಯ ಭೇದ. ಒಂದೇ ವಸ್ತುವಿನೊಳಗೆ—ಉದಾಹರಣೆಗೆ ಮನುಷ್ಯನೊಳಗೇ ಕಾಣುವ ಅಂಗಾಂಗ ಭೇದವು ಸ್ವಗತಭೇದ. ಮೂಲತಃ ಪರಮಾತ್ಮನಲ್ಲಿ ಈ ಭೇದಗಳಾವುವೂ ಇಲ್ಲ. ಆದ್ದರಿಂದಲೇ ತ್ಯಾಗರಾಜರು ಆತನನ್ನು ಅದ್ವಿತೀಯನೆನ್ನುವುದು.

**ಸಾಟಿ ದೊರಕನಿ ರಾಮಸ್ವಾಮಿ (ಮಾಟಾಡವೇಮಿ)**
**ಸಾಟಿದೈವಮೆವರೇ (ಸರಸ ಸಾಮದಾನ)**

ಎಂದರೆ ಆತನ ವರ್ಗಕ್ಕೆ ಸೇರಿದ ಹಾಗೂ ಸೇರದ ಮತ್ತೊಂದು ವಸ್ತುವಿಲ್ಲ. ಅಲ್ಲದೇ ಆತನಲ್ಲಿ ಸ್ವಗತ ಭೇದವೂ ಇಲ್ಲ. ಏಕೆಂದರೆ ಆತನು 'ಅಖಂಡ' (ಶ್ರೀರಾಮ ರಾಮ). ಆತ ಭಕ್ತರಿಗಾಗಿ ಸ್ವಇಚ್ಛೆಯಿಂದ ಅನಂತ ನಾಮರೂಪಗಳನ್ನು ತಳೆಯಬಲ್ಲನಾದರೂ ಮೂಲತಃ ಆತನು ಅವೆಲ್ಲವನ್ನೂ ಮೀರಿದವನು. ಒಟ್ಟಾರೆ ಆತ ಸಮಾನರಹಿತ (ರೇ ಮಾನಸ). ಆತನು ತ್ಯಾಗರಾಜರ ಭಾಷೆಯಲ್ಲಿ 'ಗೊಪ್ಪದೈವವೇ' ಸರಿ (ಶ್ರೇಷ್ಠದೈವ-ಚಿನ್ನನಾಡೇ).

ಆಕಾಶವೇ ಭಗವಂತನ ಶರೀರವೆಂದು ತ್ಯಾಗರಾಜರು ವರ್ಣಿಸುತ್ತಾರೆ.

**ಆಕಾಶ ಶರೀರಮು ಬ್ರಹ್ಮಮನೇ (ಸೀತಾವರ)**

ಇದನ್ನೇ ತೈತ್ತರೀಯ ಉಪನಿಷತ್ತು[೮] ಮತ್ತು ಬ್ರಹ್ಮಸೂತ್ರ[೯] "ಆಕಾಶ ಶರೀರಂ ಬ್ರಹ್ಮ ।"—ಎನ್ನುತ್ತವೆ.

ತ್ಯಾಗರಾಜರ ಪ್ರಕಾರ, ದೇವರು ನಿರ್ಗುಣ (ನಾಥಾಬ್ರೋವವೇ) 'ತ್ರಿಗುಣಾತೀತ' (ದೊರಕುನಾ) ಮತ್ತು 'ತಾಮಸಾದಿ ಗುಣರಹಿತ' (ಉಂಡೇದಿ ರಾಮುಡೊಕಡು). ಆದರೂ ಆತನು ಸಚ್ಚಿದಾನಂದ ಘನನು (ಶ್ರೀರಾಮಚಂದ್ರರಾಘವ, ಜಯಸೀತಾರಾಂ ಮತ್ತು ನೀವೇಗಾನಿ). ಈ ಸತ್, ಚಿತ್, ಆನಂದಗಳು ರಾಮನ ಗುಣಗಳಲ್ಲ. ಅವು ಆತನ ಸ್ವರೂಪ. ಎಂದರೆ ಅವುಗಳಿಗೂ ಆತನಿಗೂ ಸ್ವಲ್ಪವೂ ಭೇದವಿಲ್ಲವೆಂದು ಅರ್ಥ.

ತ್ಯಾಗರಾಜರು ಶ್ರೀರಾಮನನ್ನು '**ಸತ್ ಸ್ವರೂಪುಡು**', '**ಸತ್ತಾಮಾತ್ರ**' ಎಂದು ವಿಧ ವಿಧವಾಗಿ ಬಣ್ಣಿಸುತ್ತಾರೆ. ಪರಮಾತ್ಮನು ಮೂರು ಅರ್ಥಗಳಲ್ಲಿ ಸತ್ ಅಥವಾ ಸತ್ಯ.

(ಅ) ಆತ ತನ್ನ ಅಸ್ತಿತ್ವಕ್ಕೆ ಬೇರಾವ ವಸ್ತುವನ್ನು ಅವಲಂಬಿಸಿಲ್ಲ.

(ಆ) ಆತ ನಿರ್ದಿಷ್ಟ ದೇಶಕಾಲಗಳಿಗೆ ಸೀಮಿತನಾಗದೆ ಎಲ್ಲೆಲ್ಲೂ ಮತ್ತು ಯಾವಾಗಲೂ ಇರುವನು. ಆತ ಆದ್ಯಂತರಹಿತ (ಏಲಾನೀದಯ).

(ಇ) ಆತ ಎಲ್ಲ ವಿಕಾರಗಳಿಂದಲೂ ದೂರಾದವನು. ಆತನು ನಿರ್ವಿಕಾರಿ. (ಜಗದಾನಂದಕಾರಕ, ದಿನಮಣಿವಂಶ, ನಳಿನಲೋಚನ, ಮಾಮವಸತತಂ).

ಪರಮಾತ್ಮನು 'ಚಿತ್' ಸ್ವರೂಪನೂ ಹೌದು. ತ್ಯಾಗರಾಜರಿಗೆ ಆತ ಸತ್‌ಚಿತ್ತ ಶಾಯಿ (ಸತ್ತಲೇನಿದಿನಮು). ಇಲ್ಲಿ ಚಿತ್ ಎಂದರೆ ಚಿತ್ತವಲ್ಲ. ಚಿತ್ ಮತ್ತು ಚಿತ್ತಗಳಿಗೆ ವ್ಯತ್ಯಾಸವಿದೆ. ಚಿತ್ ತ್ರಿಗುಣಾತೀತವಾದ ಚೈತನ್ಯವಾದರೆ, ಚಿತ್ತವು ತ್ರಿಗುಣಾತ್ಮಕವಾದ ಜಡಪ್ರಕೃತಿ. ಸತ್ವಗುಣ ಪ್ರಧಾನವಾದ ಚಿತ್ತವು ಚೈತನ್ಯವನ್ನು ಪ್ರತಿಬಿಂಬಿಸುವ ಕನ್ನಡಿ ಮಾತ್ರ. ತ್ಯಾಗರಾಜರು ಪರಮಾತ್ಮನನ್ನು ಚಿನ್ಮಯ (ಲೇಕನಾ) ಚೈತನ್ಯ, ಜ್ಞಾನ ಸ್ವರೂಪ (ರಾಮನಾಮಮು), ಜ್ಞಾನನಿಧಿ (ನಗುಮೋಮು), ಚಿದ್ವಿಲಾಸ (ಶ್ರೀರಾಮ ಚಂದ್ರ ರಾಘವ), ಜ್ಯೋತಿರ್ಮಯ (ಶ್ರೀರಾಮರಾಮ) ಎಂದು ನಾನಾ ವಿಧವಾಗಿ ಬಣ್ಣಿಸುತ್ತಾರೆ.

ತ್ಯಾಗರಾಜರು ದೇವರನ್ನು ಕನಕಪಟಾವೃತನೆಂದೂ ವಿವರಿಸುವುದುಂಟು (ಪರಿಪಾಲಯ ದಾಶರಥೇ). ಇದಕ್ಕೆ ಎರಡು ಅರ್ಥಗಳುಂಟು. ಕನಕ ಎಂದರೆ ಚಿನ್ನ ಮತ್ತು ಪಟವೆಂದರೆ ತೆರೆ. ಪರಮಾತ್ಮನು ಚಿನ್ನದ ತೆರೆಯಿಂದ ಆವೃತನಾದವನೆಂದು ಅರ್ಥ. ಪೀತಾಂಬರಧಾರಿ ಎಂದು ಇನ್ನೊಂದು ಅರ್ಥ. ತ್ಯಾಗರಾಜರು ಇದನ್ನು

**"ಚಂಡಮಾರ್ತಾಂಡ ಮಧ್ಯ ಮಂಡಲಮುನು ಚೆಲಂಗುಚು"**

**(ಉಂಡೇದಿ ರಾಮುಡೊಕಡು)**

ಎನ್ನುವಾಗ ಮೊದಲ ಅರ್ಥವನ್ನು ಸ್ಪಷ್ಟಪಡಿಸುತ್ತಾರೆ. ಮಾರ್ತಾಂಡನೆಂದರೆ ಸೂರ್ಯ. ಭಗವಂತನು ಪ್ರಖರ ಪ್ರಕಾಶವುಳ್ಳ ಸೂರ್ಯಮಂಡಲದ ಮಧ್ಯೆ ಹೊಳೆಯುತ್ತಿರುವನೆಂದು ಅರ್ಥ. ತ್ಯಾಗರಾಜರ ಈ ವರ್ಣನೆಯು ಈಶೋಪನಿಷತ್ತಿನ ಕೆಳಕಂಡ ಮಂತ್ರವನ್ನು ಜ್ಞಾಪಕಕ್ಕೆ ತರುತ್ತದೆ.

**ಹಿರಣ್ಮಯೇನ ಪಾತ್ರೇಣ ಸತ್ಯಸ್ಯ ಅಪಿಹಿತಂ ಮುಖಮ್ ।**
**ತತ್ತ್ವಂ ಪಷನ್ ಅಪಾವೃಣ ಸತ್ಯಧರ್ಮಾಯ ದೃಷ್ಟಯೇ ॥**[೧೦]

ಎಂದರೆ ಸತ್ಯದ ಮುಖವು ಚಿನ್ನದ ಪಾತ್ರೆಯಿಂದ ಮುಚ್ಚಲ್ಪಟ್ಟು, ಋಷಿಗಳು ಈ ಮಂತ್ರದಲ್ಲಿ ಆ ಪಾತ್ರೆಯ ಮುಚ್ಚಳವನ್ನು ತೆರೆಯೆಂದು ಸೂರ್ಯನನ್ನು ಪ್ರಾರ್ಥಿಸುತ್ತಾರೆ.

ಭಗವಂತನ ಚಿತ್‌ಸ್ವರೂಪದ ಇನ್ನೂ ಸ್ಫುಟವಾದ ವಿವರಣೆ ಆತನು "ದಿನರಾಜ ಕೋಟಿ ಸಮತೇಜ"—ಎಂಬ ತ್ಯಾಗರಾಜರ ನುಡಿಯಲ್ಲಿದೆ (ಏಲಾ ನೀದಯರಾದು). ತ್ಯಾಗರಾಜರ ಪ್ರಕಾರ ಆತನು "ಮಂದಜನಕ ಶತಸಂಕಾಶ". ಎಂದರೆ ಶತಕೋಟಿ ಸೂರ್ಯರ ಪ್ರಕಾಶವನ್ನು ಹೊಂದಿದವನು (ರಘುಪತೇ ರಾಮ, ಲಾಲಿಲಾಲಯ್ಯ, ಜಯ ಮಂಗಳಂ, ಪಾಹಿಮಾಂ ಶ್ರೀರಾಮಚಂದ್ರ, ಓ ಜಗನ್ನಾಥಾಯನಿ, ರಾಮುನಿ ಮರವಕವೇ, ಯೋಚನ ಕಮಲಲೋಚನ). ಆತನು ತಪ್ತ ಸುವರ್ಣವನ್ನು ಹೋಲುವ ತೇಜಸ್ಸುಳ್ಳ, ಅದ್ಭುತಾಕಾರವನ್ನು ಹೊಂದಿರುವ ಮತ್ತು ಜಗತ್ತಿನ ವಿಕಾರ ಗುಣಗಳನ್ನು ತನ್ನಲ್ಲಿ ಲೀನವಾಗಿಸಿಕೊಂಡು ಶುದ್ಧ ಚೈತನ್ಯವಾಗಿ ಬೆಳಗುವ ಶಿವಲಿಂಗ ಮೂರ್ತಿ (ದರ್ಶನಮುಸೇಯ).

ವಾಸ್ತವವಾಗಿ ಸೂರ್ಯ ಮತ್ತು ಸೂರ್ಯರಂತಹ ಬೆಳಗುವ ಇತರ ವಸ್ತುಗಳು ತಮ್ಮ ಬೆಳಕನ್ನು ಆತನಿಂದಲೇ ಪಡೆದಿರುವುದು. ಜಗತ್ತಿನ ಪ್ರತಿಯೊಂದು ಬೆಳಕೂ ತನ್ನ ಜ್ಯೋತಿಯನ್ನು ಆತನಿಂದಲೇ ಪಡೆದಿದೆ.

**ನ ತತ್ರ ಸೂರ್ಯೋಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾಂತಿ**
**ಕುತೋಽಯಮಗ್ನಿಃ ।**
**ತಮೇವ ಭಾಂತ ಮನುಭಾತಿ ಸರ್ವಂ ತಸ್ಯಭಾಸಾ ಸರ್ವಮಿದಂ ವಿಭಾತಿ ॥**[೧೧]

ಆತ ಸ್ವಪ್ರಕಾಶ (ಸಾಧಿಂಚೆನೆ) ಸುಪ್ರಕಾಶನೂ ಹೌದೆಂಬುದು ತ್ಯಾಗರಾಜರ ಮಡಿ (ಎವರುರಾ). ಆತ ಒಟ್ಟಾರೆ ತನ್ನ ಅರಿವಿಗೆ ಯಾವುದೇ ಬಾಹ್ಯ ಬೆಳಕನ್ನು ಅವಲಂಬಿಸದೆ ಎಲ್ಲಾ ಜ್ಞಾನಗಳಿಗೂ ಆತನೇ ಆಶ್ರಯಭೂತನಾಗಿದ್ದಾನೆ.

ಒಟ್ಟಾರೆ ಪರಮಾತ್ಮನು ವಿಶ್ವಚೇತನ. ತ್ಯಾಗರಾಜರ ಪ್ರಕಾರ ಇಡೀ ವಿಶ್ವವು ಚಿನ್ಮಯವೇ ಸರಿ "ಲೋಕಾದುಲು ಚಿನ್ಮಯಮನು" (ಸೀತಾವರ). ಈ ಚೈತನ್ಯವು ಪಂಚಭೂತಗಳಲ್ಲಿ, ಸರ್ವದೇವತೆಗಳಲ್ಲಿ, ಭಕ್ತರಲ್ಲಿ ಅರ್ಥಾತ್ ಇಡೀ ಜಗತ್ತಿನಲ್ಲಿ ಪಸರಿಸಿದೆ. ಇದನ್ನೇ ತ್ಯಾಗರಾಜರು ಹೀಗೆನ್ನುತ್ತಾರೆ.

**ಗಗನ ಪವನ ತಪನ ಭುವನಾದ್ಯವನಿಲೋ**
**ನಗಧರಾಜ ಶಿವೇಂದ್ರಾದಿ ಸುರುಲಲೋ**
**ಭಗವದ್ಭಕ್ತ ವರಾಗ್ರೇಸರುಲಲೋ**
**ಬಾಗ ರಮಿಂಚೇ ತ್ಯಾಗರಾಜಾರ್ಚಿತ**

**(ದ್ವೈತಮು ಸುಖಮಾ)**

ಆದರೂ ಚೈತನ್ಯವು ಸೂರ್ಯನಂತಹ ವಸ್ತುಗಳಲ್ಲಿ ಮಾತ್ರ ಗೋಚರಿಸಲು ಕಾರಣ ಸೂರ್ಯಚಂದ್ರಾದಿಗಳು ಸತ್ವಗುಣ ಪ್ರಧಾನರು ಎಂಬುದು. ಸತ್ವಗುಣ ಪ್ರಧಾನ ವಸ್ತು

ಗಳು ಪಾರದರ್ಶಕವಾದ ಕನ್ನಡಿಯಿದ್ದಂತೆ. ಅವು ಬೆಳಕನ್ನು ಸುಲಭವಾಗಿ ಪ್ರತಿಬಿಂಬಿಸಬಲ್ಲವು. ಇತರ ವಸ್ತುಗಳು ತಮ್ಮ ತಮೋಗುಣ ಪ್ರಭಾವದಿಂದ, ಚೈತನ್ಯವು ಸರ್ವವ್ಯಾಪಿಯಾದರೂ ಅದನ್ನು ಸುಲಭವಾಗಿ ಪ್ರತಿಬಿಂಬಿಸಲಾರವು.[೧೭]

ಹಾಗೆಯೇ ದೇವರು ಆನಂದ ಸ್ವರೂಪಿ (ಜಗದಾನಂದಕಾರಕ). ಇಯಮಾತ್ಮಾ ಪರಾನಂದಃ ಪರಮ ಪ್ರೇಮಾಸ್ಪದಃ ಯತಃ ಎನ್ನುತ್ತದೆ ವಿದ್ಯಾರಣ್ಯರ ಪಂಚದಶಿ.[೧೮] ಆತ ಆನಂದಘನ, ಬ್ರಹ್ಮಾನಂದಸಾಗರ. ಈ ಆನಂದವು ಶಾಶ್ವತವಾದ್ದರಿಂದ ಆತ ನಿತ್ಯಾನಂದ (ಪರಾಮುಖಮೇಲರಾ), ಸದಾನಂದ (ಲಾವಣ್ಯರಾಮ) ಮತ್ತು ನಿತ್ಯೋತ್ಸವ (ಎವರುರಾ). ಸದಾ ಚಿದಾನಂದ ಸಾಗರದಲ್ಲಿ ಲೀನನಾದ್ದರಿಂದ ಆತನು ಚಿದ್ವಿಲಾಸ (ಈ ವಸುಧಾ). ನಿತ್ಯಮುಕ್ತನಾದ್ದರಿಂದ ಆತನು ಸಾಕ್ಷಾತ್ಕಾರಿ (ಏವಿತ ಮುನ್ನೈನ). ದುಃಖದ ಲೇಶವಿಲ್ಲದಿರುವುದರಿಂದ ಆತನು ನಿರವಧಿಸುಖಿ. ತ್ಯಾಗರಾಜರು ಆತನನ್ನು 'ನಿರವಧಿಶಯ್ಯೆಯಲ್ಲಿ ನಿತ್ಯಾನಂದದಿಂದ ಇದ್ದೀಯೆ' ಎನ್ನುತ್ತಾರೆ (ತನಲೋನೆ). ತ್ರಿತಾಪರಹಿತನಾದವನು ಆತ (ಶ್ರೀಪಪ್ರಿಯ). ಯಾವುದೇ ಕೊರತೆಯಿಲ್ಲದಿರುವುದರಿಂದ ಪೂರ್ಣಕಾಮ, ಗತಕಾಮ, ಆಪ್ತಕಾಮ (ದೊರಕುನಾ, ಲಾಲಿಲಾಲಯ್ಯ, ಶ್ರೀರಾಮರಾಮರಾಮ). ತನ್ನ ಈ ಅಮಿತ ಸುಖವನ್ನು ಭಕ್ತರಿಗೂ ಕರುಣಿಸುವುದರಿಂದ ಆತನು ನಿರವಧಿಸುಖದ.

ಇನ್ನು ಪರಮಾತ್ಮನಿಗೂ, ಜೀವಾತ್ಮನಿಗೂ ಇರುವ ಸಂಬಂಧವೇನು ? ಅವು ಒಂದೋ ಅಥವಾ ಬೇರೆಯೋ ? ಎಂದರೆ, ಅವೆರಡೂ ಒಂದೇ ಎಂಬುದು ಉತ್ತರ. ದ್ವೈತ ಭಾವನೆಯಲ್ಲಿ ಎಂದರೆ ಏಕದಲ್ಲಿ ಅನೇಕವನ್ನು ಕಾಣುವವನಿಗೆ ಭಯವು ಕಟ್ಟಿಟ್ಟ ಬುತ್ತಿ. "ಜೀವೋ ಬ್ರಹ್ಮೈವನಾಪರಃ" ಎಂಬುದು ವೇದಾಂತದ ಉಕ್ತಿ. ದ್ವಿತೀಯಾತ್ ವೈಭಯಂ ಭವತಿ ಎಂದು ಬೃಹದಾರಣ್ಯಕವೂ[೧೯] ಮತ್ತು ಏತಸ್ಮಿನ್ ಉದರಂ ಅಂತರಂ ಕುರುತೇ । ಅಥ ತಸ್ಯ ಭಯಂ ಭವತಿ ।[೨೦] ಎಂದು ತೈತ್ತರೀಯವೂ ಸಾರುತ್ತದೆ.

ಜೀವ ಬ್ರಹ್ಮೈಕ್ಯವಾದವನ್ನು ಛಾಂದೋಗ್ಯವು ತತ್ವಮಸಿ† ಎಂಬ ಮಹಾವಾಕ್ಯದಲ್ಲಿ[೨೧] ಪ್ರತಿಪಾದಿಸುತ್ತದೆ. ಈ ವಾಕ್ಯದಲ್ಲಿ 'ತತ್', ತ್ವಂ ಮತ್ತು 'ಅಸಿ' ಎಂಬ ಮೂರು ಪದಗಳುಂಟು. 'ಅದು', 'ನೀನು' ಮತ್ತು 'ಆಗಿರುವೆ' ಎಂದು ಕ್ರಮವಾಗಿ ಇವುಗಳ ಅರ್ಥ. ಎಂದರೆ ಇವು ಕ್ರಮವಾಗಿ 'ಬ್ರಹ್ಮ', 'ಜೀವ' ಮತ್ತು ಬ್ರಹ್ಮಜೀವರ ಐಕ್ಯತೆಯನ್ನು ಸೂಚಿಸುತ್ತವೆ. ಒಡವೆಗಳು ನಾಮರೂಪದಲ್ಲಿ ಬೇರೆ ಇದ್ದರೂ ಮೂಲತಃ ಚಿನ್ನವೇ ಆಗಿರುವಂತೆ ಜೀವಬ್ರಹ್ಮರೂ ನಾಮರೂಪಗಳಲ್ಲಿ ಭಿನ್ನವಿದ್ದು ಸ್ವರೂಪತಃ ಒಂದೇ ಆಗಿದ್ದಾರೆ. ಹೀಗೆ ಜೀವವನ್ನು ದೈವವಾಗಿಸಿದ ಪ್ರಪ್ರಥಮ ಖ್ಯಾತಿ

---

† ಇದು ಉಪನಿಷತ್ತುಗಳ ನಾಲ್ಕು ಮಹಾವಾಕ್ಯಗಳಲ್ಲಿ ಒಂದು. ಅಹಂಬ್ರಹ್ಮಾಸ್ಮಿ, ಅಯಮಾತ್ಮಾ ಬ್ರಹ್ಮ ಮತ್ತು ಪ್ರಜ್ಞಾನಂಬ್ರಹ್ಮ—ಉಳಿದ ಮೂರು ವಾಕ್ಯಗಳು. ಉಪನಿಷತ್ತುಗಳ ಸಾರವೇ ಇಲ್ಲಿ ಅಡಗಿರುವುದರಿಂದ ಇವುಗಳನ್ನು ಮಹಾವಾಕ್ಯಗಳೆನ್ನುತ್ತಾರೆ.

ತಾತ್ತ್ವಿಕ ಇತಿಹಾಸದಲ್ಲಿ ಉಪನಿಷತ್ತುಗಳಿಗೆ ಸಲ್ಲುತ್ತದೆ.

ಉಪನಿಷತ್ತುಗಳು ಮತ್ತು ಆಚಾರ್ಯ ಶಂಕರರಂತೆ ತ್ಯಾಗರಾಜರಿಗೂ ಭೇದ ಶಬ್ದವು ಅಸಹನೀಯ. ಅವರ ಪ್ರಕಾರ ಸುಖವಿರುವುದು ಬ್ರಹ್ಮಾತ್ಮ ಭಾವದಲ್ಲಿ, ಭೇದ ಬುದ್ಧಿಯಲ್ಲಲ್ಲ. ಇಲ್ಲಿ ಭೇದವೆಂಬುದು ಎರಡು ರೀತಿಯದು.

(ಅ) ನಾನು ಮತ್ತು ದೇವರು ಬೇರೆಂಬ ಭಾವನೆ.

(ಆ) ನಾನು ಮತ್ತು ಇತರ ಜೀವಿ ಅಥವಾ ವಸ್ತುಗಳು ಬೇರೆಂಬ ಭಾವನೆ.

ಈ ಭಾವನೆ ಅಜ್ಞಾನದ ದ್ಯೋತಕ. ಅವುಗಳಿಂದ ಮನುಷ್ಯನಿಗೆ ಸುಖವಿಲ್ಲ. ಈ ಅಭಿಪ್ರಾಯವನ್ನೇ ತ್ಯಾಗರಾಜರು ಕೆಳಗಿನ ಸಾಲುಗಳಲ್ಲಿ ಮೂಡಿಸಿರುವುದು.

**'ಏಕೋಪಿಂಚಕ ನೇನು ನೀವನುಜ್ಞಾನಿಕಿ ಏಲಾಗು ಸುಖಮಿಚ್ಚುನೇ' ?**

**(ನೀಕೇ ದಯರಾಕ)**

**'ಎದುರುತಾನನೇ ಇಂಗಿತಂಬೆರಿಗಿ'**

**(ಕನ್ನತಂಡ್ರಿ)**

ಸರ್ವಸಿದ್ಧಾಂತಸಾರವೂ, ತತ್ವವೇತ್ತರ ಅನುಭವವೂ ಆದ ಮೇಲಿನ ತತ್ವವು ನೈತಿಕ ಬುನಾದಿಯಿಲ್ಲದೆ ಗ್ರಾಹ್ಯವಲ್ಲ. ವಾಸ್ತವವಾಗಿ ಶ್ರೀ ಶಂಕರರು ಬ್ರಹ್ಮಸೂತ್ರದ 'ಅಥ ಅತಃ ಬ್ರಹ್ಮ ಜಿಜ್ಞಾಸಾ' ಎಂಬ ಮೊದಲನೇ ಸೂತ್ರದ **ಅಥ** ಶಬ್ದಕ್ಕೆ ನೈತಿಕ ವ್ಯಾಖ್ಯಾನ ವನ್ನೇ ನೀಡುವುದು. ಎಂದರೆ 'ಸಾಧನ ಚತುಷ್ಟಯಗಳನ್ನು ಸಂಪಾದಿಸಿಕೊಂಡ ನಂತರ' ಎಂದು ಈ ಶಬ್ದದ ಅರ್ಥ. ನಿತ್ಯಾನಿತ್ಯವಸ್ತುವಿವೇಕ, ಇಹಾಮುತ್ರ ಫಲಭೋಗ ವಿರಾಗ, ಶಮದಮಾದಿಷಟ್ಕಸಂಪತ್ತಿ ಮತ್ತು ಮುಮುಕ್ಷತ್ವಗಳು ಸಾಧನ ಚತುಷ್ಟಯಗಳು.* ಈ ನೈತಿಕ ಸಾಧನಗಳಿಲ್ಲದೇ ಒಬ್ಬನು ಬ್ರಹ್ಮನನ್ನು ತಿಳಿಯುವುದಿರಲಿ, ಅದರ ಬಗ್ಗೆ ಚರ್ಚಿಸಲೂ ಅರ್ಹನಲ್ಲವೆಂಬುದು ಶಂಕರರ ಮತ.[೧೭] ಇದು ತ್ಯಾಗರಾಜರಿಗೂ ಸಮ್ಮತ. ಅವರ ಪ್ರಕಾರ ರಜಸ್ ತಮೋಗುಣಗಳಲ್ಲಿ ತೊಳಲಾಡುತ್ತಿರುವವನಿಗೆ 'ತತ್ವಮಸಿ'ಯ ಜ್ಞಾನವು ಸಾಧ್ಯವಿಲ್ಲ. ಈ ಅಂಶವನ್ನು ಅವರು ನಾಲ್ಕೇ ಸಾಲಿನ ಈ

---

* ನಿತ್ಯಾನಿತ್ಯ ವಸ್ತು ವಿವೇಕವೆಂದರೆ–ಬ್ರಹ್ಮವೊಂದೇ ಸತ್ಯ, ಜಗತ್ತು ಮಿಥ್ಯ ಎಂಬ ನಿರ್ಣಯ. ಇಹಾಮುತ್ರ ಫಲಭೋಗ ವಿರಾಗವೆಂದರೆ–ದೇಹದಿಂದ ಹಿಡಿದು ಬ್ರಹ್ಮದವರೆಗೆ ಎಲ್ಲ ಭೋಗ ವಸ್ತುಗಳಲ್ಲೂ ಜಿಗುಪ್ಸೆ ಭಾವ.

ಶಮ, ದಮ, ಉಪರತಿ, ತಿತಿಕ್ಷೆ ಶ್ರದ್ಧೆ ಮತ್ತು ಸಮಾಧಾನ–ಇವು ಷಟ್ಕಸಂಪತ್ತಿ. ಇದರಲ್ಲಿ ಶಮ ಎಂಬುದು ಮನಸ್ಸನ್ನು ಬಾಹ್ಯ ವಿಷಯಗಳಿಂದ ಬೇರ್ಪಡಿಸಿ ಬ್ರಹ್ಮದಲ್ಲಿ ಸ್ಥಾಪಿಸುವುದು. ದಮ ಎಂಬುದು ಇಂದ್ರಿಯಗಳನ್ನು ವಿಷಯಗಳಿಂದ ಹಿಂತಿರುಗಿಸಿ ಅವುಗಳನ್ನು ತಮ್ಮ ಮೂಲದಲ್ಲಿ ಸ್ಥಾಪಿಸುವುದು. ಉಪರತಿಯು, ಮನಸ್ಸು ಬಾಹ್ಯವಾದ ಯಾವ ವಸ್ತುವನ್ನೂ ಅನುಸರಿಸದಿರುವುದು. ತಿತಿಕ್ಷೆ ಎಂಬುದು ಬೇರೆಯವರಿಂದ ನೋವಾದರೂ ಕೊರಗದೆ, ಪ್ರತೀಕಾರ ಮಾಡದೆ ನೋವು ಸಹಿಸಿಕೊಂಡಿರುವುದು. ಗುರು ಮತ್ತು ಶಾಸ್ತ್ರಗಳಲ್ಲಿ ದೃಢ ನಂಬಿಕೆ ಶ್ರದ್ಧೆ. ಬ್ರಹ್ಮನಲ್ಲಿ ಬುದ್ಧಿಯನ್ನು ಸ್ಥಿರವಾಗಿರಿಸಿಕೊಳ್ಳುವುದು ಸಮಾಧಾನ. ಮೋಕ್ಷದ ತೀವ್ರ ಹಂಬಲ ಮುಮುಕ್ಷುತ್ವ. ಅಧ್ಯಾಯ ಹದಿಮೂರರಲ್ಲಿ ನೋಡಿ.

ಕೃತಿಯಲ್ಲಿ ಹೀಗೆ ಹೇಳುತ್ತಾರೆ.

**ತತ್ವಮೆರುಗ ತರಮಾ ? ಪರ**
**ತತ್ವಮಸಿಯನು ವಾಕ್ಯಾರ್ಥಮು, ರಾಮ । ನೀವನು ಪರ**
**ತಾಮಸ ರಾಜಸ ಗುಣಮುಲ ತನ್ನುಕೊಳ್ಳ ವೋದಯಾ**
**ರಾಮಭಕ್ತುಡೈನ ತ್ಯಾಗರಾಜವಿಮತ ವೇದಶಾಸ್ತ್ರ**

ಇಡೀ ಜೀವಿತವನ್ನೇ ನಾಮಸಂಕೀರ್ತನೆಗೆ ಅಳವಡಿಸಿಕೊಂಡಿದ್ದ ತ್ಯಾಗರಾಜರು ಜ್ಞಾನಮೊಸಗರಾದಾ ಕೃತಿಯಲ್ಲಿ 'ತತ್ತ್ವಮಸಿ'ಯ ಜ್ಞಾನಕ್ಕಾಗಿಯೇ ಹಂಬಲಿಸುವುದು. ಈ ಕೃತಿಯಲ್ಲಿ ಅವರು ಜೀವಬ್ರಹ್ಮೈಕ್ಯತೆಯ ಬಗ್ಗೆ ಕೊನೆಯ ಪದದವರೆಗೂ ರಹಸ್ಯವಾಗಿಯೇ ಇಡುತ್ತಾರೆ. ಕೃತಿಯಲ್ಲಿ ಕೊನೆಯ ಶಬ್ದವಾದ '**ತಾನನೆ**' ಎಂಬ ಶಬ್ದವನ್ನು ಓದಿದಾಗಲೇ ಜೀವಬ್ರಹ್ಮರ ಸಂಬಂಧವನ್ನು ಕುರಿತಂತೆ ತ್ಯಾಗರಾಜರ ನಿಲುವು ನಮಗೆ ಸ್ಪಷ್ಟವಾಗುವುದು.

**ಜ್ಞಾನಮೊಸಗರಾದಾ । ಗರುಡಗಮನ । ವಾದಾ**
**ನೀ ನಾಮಮುಚೇ ನಾಮದಿ ನಿರ್ಮಲಮ್ಮೆನದಿ**
**ಪರಮಾತ್ಮುಡು ಜೀವಾತ್ಮುಡು ಪದಿನಾಲುಗು ಲೋಕಮುಲು**
**ನರಕಿನ್ನರ ಕಿಂಪುರುಷ ನಾರದಾದಿ ಮುನುಲು**
**ಪರಿಪೂರ್ಣ ನಿಷ್ಕಳಂಕ ನಿರವಧಿ ಸುಖದಾಯಕ**
**ವರ ತ್ಯಾಗರಾಜಾರ್ಚಿತ ವಾರಮು ತಾನನೆ**

ಹೀಗೆ ಶ್ರೀರಾಮನು ಧಾರ್ಮಿಕವಷ್ಟೆ ಅಲ್ಲ, ತಾತ್ತ್ವಿಕ ಐಕ್ಯತೆಯ ಪ್ರತೀಕವೂ ಹೌದು. ಎಂದರೆ ಆತನು ಶಿವವಿಷ್ಣುಗಳಷ್ಟೇ ಅಲ್ಲ, ಜೀವೇಶ್ವರರ ಐಕ್ಯತೆಯ ಪ್ರತೀಕವೂ ಹೌದು. ಈ ತಾತ್ತ್ವಿಕ ಐಕ್ಯತೆಯನ್ನು ಸಾಕ್ಷಾತ್ಕರಿಸಿಕೊಳ್ಳುವುದೇ ರಾಮೋಪಾಸಕರ ಪರಮ ಗುರಿ.

**ಸಗುಣ ಮತ್ತು ಸಾಕಾರ** : ತ್ಯಾಗರಾಜರಿಗೆ ನಿರ್ಗುಣ ಸಿದ್ಧಾಂತವು ಹೇಗೋ ಹಾಗೆಯೇ ಸಗುಣವಾದವೂ ವೇದ ಪ್ರಣೀತ. ನಿರ್ಗುಣ ನಿರಾಕಾರಗಳು ವೈಜ್ಞಾನಿಕವಾಗಿ ಎಷ್ಟೇ ಸತ್ಯವಾದರೂ, ಮನುಷ್ಯನಿಗೆ ತೃಪ್ತಿ ನೀಡುವುದು ಗುಣಸಾಕಾರಗಳು ಮಾತ್ರ. ಕವಿಯಾಗಿ, ಭಾವನಾಶೀಲ ವ್ಯಕ್ತಿಯಾಗಿ, ಎಲ್ಲಕ್ಕಿಂತ ಮಿಗಿಲಾಗಿ ಭಕ್ತರಾಗಿ ತ್ಯಾಗರಾಜರಿಗೆ ಬೇಕಿರುವುದು ತಮ್ಮ ಪವಿತ್ರ ಭಾವನೆಗೆ ಸ್ಪಂದಿಸುವ, ತಮ್ಮ ಧಾರ್ಮಿಕ ಅಗತ್ಯಗಳನ್ನು ಪೂರೈಸುವ ಮತ್ತು ಇಡೀ ಮನುಕುಲದ ಹಡಗನ್ನು ದುಃಖಸಾಗರದಿಂದ ದಾಟಿಸಬಲ್ಲ ದೇವರು. ಆದ್ದರಿಂದಲೇ ಅವರು ದೇವರನ್ನು ಮಾನವೀಕರಿಸುವುದು ಹಾಗೂ ಸಗುಣಗೊಳಿಸುವುದು.

ಆದ್ದರಿಂದ ತ್ಯಾಗರಾಜರ ಪ್ರಕಾರ ದೇವರು ನಿರ್ಗುಣನೂ ಹೌದು, ಗುಣಮಯನೂ ಹೌದು (ಎವರಿತೋ). ಆತನಿಗೆ ಕೆಟ್ಟ ಗುಣಗಳಿಲ್ಲ. ವಾಸ್ತವವಾಗಿ ವಿಶಿಷ್ಟಾದ್ವೈತ ವೇದಾಂತವು ಉಪನಿಷತ್ತುಗಳ ನಿರ್ಗುಣ ಶಬ್ದವನ್ನು ದುರ್ಗುಣ ರಹಿತನೆಂದೇ ಅರ್ಥೈ

ಸುವುದು. ತ್ಯಾಗರಾಜರಿಗೆ ದೇವರು 'ಅಕಳಂಕ ಗುಣಸಾಂದ್ರ' (ನೋಡಿ—ಶ್ರೀರಾಮ ಚಂದ್ರ ರಾಘವ; ಲಾಲಿಲಾಲಯ್ಯ ; ಪ್ರಾರಬ್ಧಮಿಟ್ಲುಂಡಗಾ ; ರಾಮುನಿ ಮರವಕವೇ; ಪಾಹಿ ರಾಮಚಂದ್ರ ; ಮಾಮವ ಸತತಂ ; ಪರಾಮುಖಮೇಲರಾ ; ಕರುಣಾ ಜಲಧೀ; ಕಾಲಹರಣ ; ವರಲೀಲಾ ; ಶ್ರೀ ರಘುವರಾಪ್ರಮೇಯ). ಅಷ್ಟೇ ಅಲ್ಲ, ಆತನು ಭವ್ಯಗುಣ ಮಣಿಕೋಶ (ಜನಕಜಾ ಸಮೇತ) ಮತ್ತು ಕಲ್ಯಾಣ ಸುಗುಣ ನಿಧಿ (ಕರುಣಾ ಜಲಧಿ). ಆತನ ಸದ್ಗುಣಗಳಿಗೆ ಸಾಟಿಯಿಲ್ಲವಾದ್ದರಿಂದ ಆತನು ನಿರುಪಮ ಗುಣಶೀಲ. ಈ ಗುಣಗಳು ಅಸಂಖ್ಯಾತವಾದ್ದರಿಂದ ಆತ ಅಗಣಿತ ಗುಣಗಣ (ಶ್ರೀ ರಘುವರ ದಾಶರಥೇ, ಜಗದಾನಂದಕಾರಕ) ಮತ್ತು ಸುಗುಣ ಪಾರಾವಾರ. ಈ ಕಾರಣದಿಂದಲೇ ಆತನು ಮನೋವಾಕ್ಕುಗಳಿಗೆ ಅಗ್ರಾಹ್ಯ 'ಮಾಟಿಕೆಕ್ಕುವೈನ ನೀದು ಗುಣಮ್ಮುಲು' (ತಲಚಿನಂತನೆ). ದೇವರು ನಿರ್ಗುಣ ಮತ್ತು ಸಗುಣ. ಈ ಎರಡು ಹಂತಗಳಲ್ಲೂ ಮನೋವಾಕ್ಕುಗಳಿಗೆ ಅಗ್ರಾಹ್ಯ. ಏಕೆಂದರೆ ನಮ್ಮ ಮಾತು ಮನಸ್ಸುಗಳು ಗುಣವಿರುವ ವಸ್ತುಗಳನ್ನು ಮಾತ್ರ ಗ್ರಹಿಸಬಲ್ಲವು. ಆತನ ಕಲ್ಯಾಣಗುಣಗಳು ಮಾತು ಮನಸ್ಸುಗಳಿಗೆ ನಿಲುಕದಷ್ಟು ಅಸಂಖ್ಯವಾದವು. ಆದರೆ ಇಲ್ಲೊಂದು ವಿಶೇಷ. ಗುಣ (ಎಂದರೆ ಜಡ ಮತ್ತು ಚೇತನಗಳನ್ನೊಳಗೊಂಡ ಪ್ರಪಂಚ) ಮತ್ತು ಗುಣಿ (ದೇವರು) ಸಂಬಂಧದಲ್ಲಿ ಗುಣಿಯು ಮುಖ್ಯವೇ ಹೊರತು ಗುಣವಲ್ಲ. ಏಕೆಂದರೆ ಗುಣಿಯಿಲ್ಲದೆ ಗುಣವಿರಲು ಸಾಧ್ಯವಿಲ್ಲ. ತ್ಯಾಗರಾಜರು ಈ ಅಂಶವನ್ನು ಸ್ಪಷ್ಟಪಡಿಸುತ್ತಾರೆ.

"**ಗುಣಮುಲಲೋ ನಣಗುಂಟೇ ಗುಣಿಯೇ ಗತಿಗಾನಿ**"

**(ರಘುನಂದನ)**

ಇಲ್ಲಿ ತ್ಯಾಗರಾಜರ ಅದ್ಭುತ ವೇದಾಂತ ಪ್ರತಿಭೆ ಎದ್ದುಕಾಣುತ್ತದೆ. ಹಾಗೆಯೇ ತ್ಯಾಗರಾಜರ ಪ್ರಕಾರ ದೇವರು ನಿರಾಕಾರ ಅಥವಾ ಅಮೂರ್ತನಷ್ಟೇ ಅಲ್ಲ, ಸಾಕಾರ ಅಥವಾ ಮೂರ್ತನೂ ಹೌದು. ತ್ಯಾಗರಾಜರ ಭಾಷೆಯಲ್ಲಿ ಆತನು ಅಂಗಅನಂಗ [೧೮] (ಶಂಕರ ಗುರುವರುಲ). ಇನ್ನೂ ಸ್ಪಷ್ಟವಾಗಿ ಹೇಳಬೇಕೆಂದರೆ ಅವನೊಬ್ಬ ಪುರುಷ. ಆದರೆ ಸಾಮಾನ್ಯ ಪುರುಷನಲ್ಲ, ಪುರುಷರಲ್ಲಿ ಪುರುಷ - ಪರಮಪುರುಷ ಅಥವಾ ಪುರುಷೋತ್ತಮ (ಕರುಣಜೂಡವಯ್ಯ). ತ್ಯಾಗರಾಜರು ಪದೇಪದೇ ತಮ್ಮ ಕೃತಿಗಳಲ್ಲಿ ದೇವರ ವಿರಾಟ್‌ರೂಪವನ್ನು ಬಣ್ಣಿಸುತ್ತಾರೆ. ಅವರ ದೃಷ್ಟಿಯಲ್ಲಿ ಈಶ್ವರನು 'ಸ್ಥಾವರ ಜಂಗಮ ರೂಪ' (ರಘುವೀರ ರಣಧೀರ). ಅವರು ಶ್ರೀರಾಮನನ್ನು 'ಸರ್ವಮು ನೀವೇ' ಎಂದು ವಿವರಿಸುವಾಗ (ಶ್ರೀರಾಮ ಮನೋಹರಾ) 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಉಪನಿಷದ್ ವಾಕ್ಯವು ನೆನಪಿಗೆ ಬರುತ್ತದೆ. ಈಶ್ವರನ ಶರೀರವು ಎರಡು ಅರ್ಥಗಳಲ್ಲಿ ನಿರುಪಮ (ನೋಡಿ—ಸೀತಾಕಲ್ಯಾಣ ; ರಂಗನಾಯಕಾ ರಕ್ಷಿಂಪು; ಜಗದಾನಂದಕಾರಕ). ಒಂದು, ಅದು ನಿರ್ದಿಷ್ಟ ದೇಶಕಾಲಗಳಿಗೆ ಸೀಮಿತವಾಗದೇ ವಿಶ್ವ ವ್ಯಾಪಿಯಾಗಿದೆ. ಆತನದು ವಿಶ್ವರೂಪ (ವಿನನಾಸಗೊನಿ), ಅದ್ಭುತರೂಪ. ಎರಡು, ಅದರಲ್ಲಿ ಸಾಮಾನ್ಯ ಶರೀರದಲ್ಲಿನಂತೆ ಯಾವ ಕಳಂಕವೂ ಇಲ್ಲ. ಸೂರ್ಯ ಚಂದ್ರರೇ

ಆತನ ಕಣ್ಣುಗಳು (ಪತಿಕಿಹಾರತೀರೆ, ಏಲಾ ನೀದಯರಾದು, ಸೀತಾಕಲ್ಯಾಣ, ನೀದಯಗಲ್ಗುಟೇ, ನೀವೇರಾ).

ಇನ್ನು ಈಶ್ವರನ ಸ್ವರೂಪವನ್ನು ಪ್ರಧಾನವಾಗಿ ಪರತ್ವ, ಸೌಲಭ್ಯ ಮತ್ತು ಕಲಾತ್ಮಕ ಎಂದು ಮೂರು ವಿಧವಾಗಿ ವಿಂಗಡಿಸಬಹುದು. ಪರತ್ವವು ಆತನ ಸರ್ವಶ್ರೇಷ್ಠತೆಯನ್ನು ಎಂದರೆ ಸರ್ವಜ್ಞತ್ವ, ಸರ್ವಶಕ್ತಿತ್ವ ಮತ್ತು ಸರ್ವಾಂತರ್ಯಾಮಿತ್ವವನ್ನು ಒಳಗೊಂಡುದು. ಸೌಲಭ್ಯವು ಆತನ ದಯಾಪರತೆ ಹಾಗೂ ಭಕ್ತರಿಗಾಗಿ ಆತ ಸುಲಭನಾಗುವಿಕೆಯನ್ನು ಮತ್ತು ಕಲಾತ್ಮಕವು ಆತನ ದಿವ್ಯಸೌಂದರ್ಯವನ್ನು (ಆಪಾದಮಸ್ತಕ ಅಥವಾ ಅವಯವ) ಒಳಗೊಂಡಿದೆ.

ಸರ್ವಜ್ಞನೆಂದರೆ ಎಲ್ಲವನ್ನು ತಿಳಿದವನೆಂದು ಅರ್ಥ. ಈಶ್ವರನು ಸರ್ವಜ್ಞನೇ ಸರಿ. ಯಾವುದೂ ಆತನ ಜ್ಞಾನದ ಪರಿಧಿಯಿಂದ ಬಾಹ್ಯವಲ್ಲ. ಇದನ್ನು ಸೂಚಿಸಲು ತ್ಯಾಗರಾಜರು ಆತನನ್ನು ವಿಶಾಲನಯನ (ಶ್ರೀರಘುವರ ದಾಶರಥೇ), ಪೂರ್ಣನೇತ್ರ (ಶ್ರೀ ರಾಮರಾಮ), ವಿಚಕ್ಷಣ (ಲಕ್ಷಣಮುಲುಗಲ) ಎಂದು ನಾನಾ ವಿಧವಾಗಿ ವರ್ಣಿಸುತ್ತಾರೆ.

'ನೀ ಮನಸಂದು ತೆಲಿಯಲೇನಿದಿಯೇದಿ ?' ಎಂದು ದೇವರನ್ನು ಪ್ರಶ್ನಿಸಿ 'ಜಾಗರೂಕುಡನಿ ಪೇರೆ' ಎಂದು ಉತ್ತರಿಸುತ್ತಾರೆ. ಇಲ್ಲಿ ಹರಿಗೆ ತಿಳಿಯದುದು ಯಾವುದೂ ಇಲ್ಲ. ಆತ ಪ್ರತಿಯೊಂದರಲ್ಲೂ ಪ್ರತಿಕ್ಷಣದಲ್ಲೂ ಜಾಗರೂಕನಾಗಿಯೇ ಇರುತ್ತಾನೆಂಬುದು ಭಾವ. ಪುರುಷ ಸೂಕ್ತವು ವಿವರಿಸುವಂತೆ ಆತನು ಸಹಸ್ರಾಕ್ಷ. ಜಗತ್ತಿನ ಆಗುಹೋಗುಗಳನ್ನು ಯಾವುದೇ ಬಾಹ್ಯ ಸಾಧನವಿಲ್ಲದೆ ಆತನು ನೇರವಾಗಿ ನೋಡಬಲ್ಲವನು. ಆದರೆ ಆತನು ಕೇವಲ ಜಗತ್ತಿನ ಪ್ರೇಕ್ಷಕ ಅಥವಾ ಜಗತ್‌ಸಾಕ್ಷಿ ಯಷ್ಟೆ (ಏವಿತಮ್ಮೆನ). ಸಾಮಾನ್ಯ ಜೀವಿಯಂತೆ ಆತ ಜಗತ್ತಿಗೆ ಅಂಟಿಕೊಳ್ಳುವುದಿಲ್ಲ.

**ಪರತ್ವ** : ತ್ಯಾಗರಾಜರಿಗೆ ಶ್ರೀರಾಮನು ಕೇವಲ ಪೌರಾಣಿಕ ವ್ಯಕ್ತಿಯಾಗದೆ, ಮಹೋನ್ನತವಾದ ಒಂದು ತತ್ವವಾಗಿ ವಿಜೃಂಭಿಸಿದ್ದಾನೆ. ಸರ್ವೋನ್ನತನಾದ (ಸಾಧಿಂಚೆನೆ, ನೀವೇರಾಕುಲಧನಮು) ಆತನು ಸತ್‌ಸಾರ್ವಭೌಮ (ಉಯ್ಯಾಲಲೂಗ ವಯ್ಯ ; ಸಾಕೇತರಾಮ), ಅಖಿಲಾಂಡನಾಥ (ಪತಿಕಿ ಹಾರತಿರೇ; ಏಟಿಯೋಚನಲು ; ಇಕ ಕಾವಲಸಿನದೇಮಿ) ಮತ್ತು ಪರಾತ್ಪರ (ಏವಿಧಮ್ಮೆನ ; ಕರುಣಾ ಜಲಧೇ ; ನಳಿನ ಲೋಚನ) ಸಕಲದೇವನಾಥ (ಭಜನಸೇಯ). ಆತನೆಷ್ಟು ಪ್ರಾಚೀನನೆಂದರೆ ಬ್ರಹ್ಮ ನಿಗೂ ಆತ ತಂದೆ. 'ಬೊಮ್ಮ ದೇವರ ತಂಡ್ರಿ' (ಲಾಲಿಯೂಗವೇ) ಆದಿದೇವ. ತ್ಯಾಗರಾಜರು ಹೀಗೆ ಹೇಳುತ್ತಾರೆ. ಕಥೆಗಳೆಷ್ಟನ್ನೋ ಹೊಂದಿದ, ತುದಿಮೊದಲಿಲ್ಲದ ಆದಿದೇವನಾತ.

**ಕಥಲೆನ್ನೋ ಕಲವಾಡೇ**
**ಮೊದಲೇ ತಾನ್ನೆನಾಡೇ**

## ತುದಿಮೊದಲೇ ಲೇನಿವಾಡೈನಾಡೆ

(ಕದಲೇವಾಡುಗಾಡೆ)

ಆತನಿಗೆ ಸಾಟಿಯಾದ ಮತ್ತು ಆತನಿಗಿಂತಲೂ ಶ್ರೇಷ್ಠರಾದ ದೇವತೆಗಳಿಲ್ಲ. (ಸಾಮಿಕಿ ಸರಿಯನುಚು ; ಪಾಹಿ ರಾಮಚಂದ್ರ). ಕೋಟಿ ದೇವತೆಗಳಲ್ಲೂ ಮೇಲಾದ (ಏಟಿ ಯೋಚನಲು) ಆತನು ಮಾರಾರಿ ದೇವೇಂದ್ರ ಪಿತಾಮಹಾದ್ಯಷ್ಟ ದಿಕ್ಪಾಲಸೇವ್ಯ (ಶ್ರೀ ರಮ್ಯಚಿತ್ತಾಲಂಕಾರ). ಆತನು ಅಜ, ರುದ್ರ, ಸುರೇಶರಿಗೆ, ಅವರ ತಪಸ್ಸಿಗೆ ಅನುಗುಣವಾಗಿ ಆಯಾ ಸ್ಥಾನಮಾನಗಳನ್ನು ನೀಡಿದವ (ಭಜನಪರುಲಕೇಲ). ಶಿವನಿಗೆ ತಾಮಸಗುಣವನ್ನೂ, ಬ್ರಹ್ಮನಿಗೆ ರಾಜಸಗುಣವನ್ನೂ, ಇಂದ್ರನನ್ನು ಗರ್ವಹೃದಯಿ ಯಾಗಿಯೂ ಮಾಡಿದ ದಾಶರಥಿ.

**ಶಿವುನಿಕಿ ತಾಮಸ ಗುಣಮಿಚ್ಚಿ ಕಮಲ**
**ಭವುನಿಕಿ ರಾಜಸ ಗುಣಮೊಸಗಿ ಶಚೀ**
**ಧವುನಿ ಗರ್ವ ಹೃದಯುನಿಗಾ ಜೇಸಿನ**
**ದಾಶರಥೀ !**

(ಏಮನಿ ಪೊಗಡುದುರಾ)

ಸೃಷ್ಟಿ ಸ್ಥಿತಿ ಕಾರ್ಯಗಳು ತನ್ನ ಘನತೆಗೆ ನಿಕೃಷ್ಟವೆಂದು ಅವುಗಳನ್ನು ಆತ ತ್ರಿಮೂರ್ತಿ ಗಳಿಗೆ ಒಪ್ಪಿಸಿದವನು.

**ಸೃಷ್ಟಿ ಪುಷ್ಟಿ ನಷ್ಟಿಚೇಯು ಪನುಲುನಿ**
**ಕೃಷ್ಟ ಮನುಚುನು ತ್ರಿಮೂರ್ತುಲ ಕೊಸಗಿ**

(ಮನಸಾ ಶ್ರೀ ರಾಮಚಂದ್ರುನಿ)

ತ್ರಿಮೂರ್ತಿಗಳು ಒಮ್ಮೆ ತಮ್ಮ ಗುಣಗಳನ್ನೂ, ಶ್ರೀರಾಮನ ಗುಣಗಳನ್ನೂ ತಕ್ಕಡಿ ಯಲ್ಲಿ ಹಾಕಿ ತೂಗಿ ನೋಡಿದರಂತೆ. ಹಾಗೆ ನೋಡಿದಾಗ ಶ್ರೀರಾಮನ ಗುಣಗಳೇ ಹೆಚ್ಚು ತೂಕವುಳ್ಳದ್ದಾಗಿ ಕಂಡುಬಂದು ಅವರಿಗೆ ಅಚ್ಚರಿಯಾಯಿತಂತೆ. ಆತನು ಭೂಲೋಕದ ರಾಜನೊಬ್ಬನ ಮಗನೆಂದು ತಿಳಿದುಬಂದಾಗ, ಅಂತಹವನು ಇಂತಹ ಕಲ್ಯಾಣಗುಣಗಳನ್ನು ಹೇಗೆ ಪಡೆದನೆಂದು ಅವರಿಗೆ ಇನ್ನೂ ಆಶ್ಚರ್ಯವಾಯಿತಂತೆ. ಕೊನೆಗೆ ವಿಧಿಯಿಲ್ಲದೇ ಮೂವರೂ ಕೂಡಿ ಆತನನ್ನು ಸ್ತುತಿಸಿದರಂತೆ (ಮುಮ್ಮೂ ರ್ತುಲು). ಈ ಚಮತ್ಕಾರವೇನೇ ಇರಲಿ, ತ್ಯಾಗರಾಜರ ಪ್ರಕಾರ ಶ್ರೀರಾಮತತ್ತ್ವವು ತ್ರಿಮೂರ್ತಿಗಳನ್ನು ಮೀರಿದುದು.

## ಮುಗ್ಗುರಿಲೋ ಮೇಲೈನ ರಾಮ

(ಸಿಗ್ಗುಮಾಲಿ)

ಪರಮಾತ್ಮನ ಕಾರ್ಯವು ವೈವಿಧ್ಯಮಯವಾದ್ದರಿಂದ ಆತನು ಬಹುಪ್ರಭಾವ (ರಾಮುನಿ ಮರವಕವೇ). ಆತನು ಅದ್ಭುತನೆಂಬ ತ್ಯಾಗರಾಜರ ವರ್ಣನೆಯು ಆತನ ಅಘಟಿತ ಘಟನಾ ಸಾಮರ್ಥ್ಯವನ್ನು ಸೂಚಿಸುತ್ತದೆ (ರಾಮ ರಘುಕುಲ ಜಲನಿಧಿ

ಸೋಮ). ಗೀತೆಯು ಇದನ್ನು 'ಯೋಗಮಾಯಾ' ಎನ್ನುತ್ತದೆ. ತ್ಯಾಗರಾಜರಿಗೆ ಶ್ರೀರಾಮನೇ ಸಕಲಶಕ್ತಿ. 'ಸಕಲಶಕ್ತಿಯು ನೀವೇರಾ' (ಶ್ಯಾಮಸುಂದರಾಂಗ). ಈ ಜಗತ್ತಿನಲ್ಲಿ ಪಾಮರರು, ಕಿನ್ನರ ಕಿಂಪುರುಷರು, ದೇವತೆಗಳು, ತ್ರಿಮೂರ್ತಿಗಳು, ಸಕಲ ಚರಾಚರಗಳೂ ಆತನ ಲೀಲೆಯೇ ಸರಿ (ಲೀಲಗಾನುಜೂಚೆ). ಕಪಟಿಗಳು ಆತನ ಲೀಲೆಯನ್ನು ಅರಿಯರು (ನಿಜಮುಗ ನೀ ಮಹಿಮಲು). ದೇವರ ಮಹಿಮೆಯ ನಿಗೂಢತೆಯನ್ನು ತ್ಯಾಗರಾಜರು ಕೆಳಗಿನ ಸಾಲಿನಲ್ಲಿ ತಿಳಿಸುತ್ತಾರೆ.

**ಮರುಗುಜೇಸುಕೊನುನಟ್ಟಿ ಮಹಿಮರಾರಾ**

**(ರಾಮರಾಮ ನೀವಾರಮು)**

ಪುರುಷಸೂಕ್ತವು ಹೇಳುವಂತೆ ಆತನ ಮಹಿಮೆಯ ಕೇವಲ ಕಾಲುಭಾಗ ಮಾತ್ರ ಈ ವಿಶ್ವದ ರೂಪದಲ್ಲಿ ಪ್ರಕಟವಾಗಿ ಉಳಿದ ಮುಕ್ಕಾಲು ಭಾಗವು ಹಾಗೆಯೇ ಸುಪ್ತವಾಗಿದೆ.[೧೯]

ಈಶ್ವರನ ಸರ್ವಶಕ್ತಿತ್ವವು ಆತನ ಸೃಷ್ಟಿ, ಸ್ಥಿತಿ, ಲಯಕಾರ್ಯಗಳನ್ನು ಒಳಗೊಂಡಿದೆ. ತ್ಯಾಗರಾಜರ ಪ್ರಕಾರ ಪರಮಾತ್ಮನು ತ್ರಿಶಕ್ತಿಯನ್ನು ಹೊಂದಿದ ದೇವರು.

**ತ್ರಿಶಕ್ತಿಯು ಗಲಿಗಿನ ದೇವುಡು**

**(ಯುಕ್ತಮುಗಾದು)**

**ಸೃಷ್ಟಿ ಸ್ಥಿತಿ ಅಂತಕಾರಕ**

**(ಜಗದಾನಂದಕಾರಕ)**

(ಅ) **ಸೃಷ್ಟಿ** : ದೇವರು ಜಗತ್ತಿನ ಸೃಷ್ಟಿಕರ್ತನೆಂಬುದನ್ನು ವಾಸ್ತವವಾಗಿ ಉಪನಿಷತ್ತಿನ 'ಬ್ರಹ್ಮ' ಶಬ್ದದ ಮೂಲವಾದ 'ಬೃಹ್' ಎಂಬದು ಸೂಚಿಸುತ್ತದೆ. 'ಬೃಹ್' ಎಂದರೆ ಒಡೆದು ಮೂಡು ಎಂದು ಅರ್ಥ. ಯಾವ ಶಕ್ತಿಯು ಈ ಬೃಹತ್ ವಿಶ್ವವಾಗಿ ಸ್ಫೋಟಿಸುವುದೋ ಅಥವಾ ವ್ಯಕ್ತಗೊಳ್ಳುವುದೋ ಅದೇ ಬ್ರಹ್ಮ. ಪರಮಾತ್ಮನ ನೇತೃತ್ವದಲ್ಲಿ ಪಂಚಭೂತಗಳು ವಿವಿಧ ಪ್ರಮಾಣಗಳಲ್ಲಿ ಸೇರಿ ಈ ಜಗತ್ತು ಉಂಟಾಗುತ್ತದೆ. ಪಂಚಮಹಾಭೂತಗಳ ಸಂಯೋಗವು ಸೃಷ್ಟಿಯಾದರೆ, ಅವುಗಳ ವಿಯೋಗವು ಲಯವಾಗುತ್ತದೆ. ತ್ಯಾಗರಾಜರು 'ಭೂತಮುಲ್ಯೆದುನು ನೀವು ಪೊರಲ ಜೇಯುಚುನ್ನಾವು' (ತನಲೋನೆ ಧ್ಯಾನಿಂಚಿ) ಎನ್ನುವಾಗ ಈ ಸಂಯೋಗ ವಿಯೋಗಗಳ ಬಗ್ಗೆಯೇ ಪ್ರಸ್ತಾಪಿಸುವುದು.

ದೇವರು ಈ ಬ್ರಹ್ಮಾಂಡವನ್ನು ಮಾಯೆಯೆಂಬ ಶಕ್ತಿಯ ಮೂಲಕ ಸೃಷ್ಟಿಸುತ್ತಾನೆ. 'ಮಾಯಾ' ಶಬ್ದವು ಋಗ್ವೇದದಷ್ಟೇ ಪ್ರಾಚೀನವಾದುದು. ಬೃಹದಾರಣ್ಯಕ ಉಪನಿಷತ್ತು ಋಗ್ವೇದದ ಕೆಳಗಿನ ಮಂತ್ರವನ್ನು ಉಲ್ಲೇಖಿಸುತ್ತದೆ.

**ರೂಪಂ ರೂಪಂ ಪ್ರತಿರೂಪೋ ಬಭೂವ ತದಸ್ಯರೂಪಂ ಪ್ರತಿಚಕ್ಷಣಾಯ ।**
**ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾಹ್ಯಸ್ಯ ಹರಯಃ**
**ಶತಾದಶ ॥**[೨೦]

ಎಂದರೆ ಪರಮೇಶ್ವರನು ಮಾಯೆಯಿಂದ ಬಹುರೂಪನಾಗಿ ನೂರಾರು ಇಂದ್ರಿಯಗಳಿಂದ (ಹರಯಃ) ಕೂಡಿದವನಾಗುತ್ತಾನೆ. ಮಾಯೆಗೆ ಪ್ರಕೃತಿ ಎಂಬ ಹೆಸರೂ ಉಂಟು. ಉಪನಿಷತ್ತೊಂದು ಸಾರುವಂತೆ ಮಾಯೆಯು ಪ್ರಕೃತಿಯಾದರೆ, ಮಹೇಶ್ವರನು ಮಾಯೆಯ ಒಡೆಯ.[೨೧] ಎಂದರೆ ಆತನು ಈ ಪ್ರಕೃತಿಗೆ ಅಧ್ಯಕ್ಷ ಅಥವಾ ತ್ಯಾಗರಾಜರ ಭಾಷೆಯಲ್ಲಿ ಮಾಯಾಧಾರಿ (ರಾಕಾ ಶಶಿವದನ). ಆತನ ಅಧ್ಯಕ್ಷತೆಯಲ್ಲಿ ಪ್ರಕೃತಿಯಿಂದ ಸಕಲ ಚರಾಚರ ಜಗತ್ತೂ ಹೊರಹೊಮ್ಮುತ್ತದೆ. ತ್ಯಾಗರಾಜರು 'ವಿಶ್ವಮನೇ ರಥಮುನೆಕ್ಕಿ ತನ ಸಾಮರ್ಥ್ಯಮುಚೇ ದಾನೇ ನಡಿಪಿಂಚೆನೆ' (ಮನಸಾ ಮನಸಾಮರ್ಥ್ಯಮೇಮಿ) ಎನ್ನುವಾಗ ಈಶ್ವರನ ಈ ನಿರಪೇಕ್ಷ ಸಾಮರ್ಥ್ಯವನ್ನೇ ಅರ್ಥಾತ್ ಮಾಯಾಶಕ್ತಿಯನ್ನೇ ಬಣ್ಣಿಸುವುದು. ಅವರ ಪ್ರಕಾರ ದೇವರು ಈ ವಿಶ್ವವೆಂಬ ಮಹಾರಥವನ್ನು ಯಾವ ಬಾಹ್ಯನೆರವಿಲ್ಲದೆ ಸ್ವಸಾಮರ್ಥ್ಯದಿಂದಲೇ ನಡೆಸುತ್ತಾನೆ.

ಈಶ್ವರನ ಸರ್ವಸಾಮರ್ಥ್ಯದ ಬಗ್ಗೆ ಪ್ರಸ್ತಾಪಿಸುವಾಗ ತ್ಯಾಗರಾಜರು ಆತನು 'ಭಾವಾಭಾವ' ನೆಂದು ವಿವರಿಸುತ್ತಾರೆ (ನೀವೇ ನನ್ನೆಡಜೇಸಿತೆ). ಎಂದರೆ ಅವರ ಪ್ರಕಾರ ದೇವರು ಭಾವನೂ ಹೌದು, ಅಭಾವನೂ ಹೌದು. ಇದನ್ನೇ ಶ್ರೀಕೃಷ್ಣನು ಗೀತೆಯಲ್ಲಿ 'ಸದಸಚ್ಚಾಹಮರ್ಜುನ' ಎಂದು ವಿವರಿಸುತ್ತಾನೆ.[೨೨] ತೈತ್ತರೀಯವಂತೂ ಮೊದಲು 'ಅಸತ್' ಇದ್ದಿತು. ಅದರಿಂದ ಸತ್ ಉಂಟಾಯಿತು ಎನ್ನುವ ಮಟ್ಟಕ್ಕೆ ಹೋಗುತ್ತದೆ.[೨೩] ಇಲ್ಲಿ ಭಾವಭಾವವೆಂದರೇನೆಂಬುದು ಪ್ರಶ್ನೆ. ಸಾಮಾನ್ಯವಾಗಿ 'ಭಾವ' ಅಥವಾ 'ಸತ್' ಎಂದರೆ 'ಇದೆ' ಎಂದೂ, 'ಅಭಾವ' ಅಥವಾ 'ಅಸತ್' ಎಂದರೆ 'ಇಲ್ಲ' ಎಂದೂ ಅರ್ಥ. ಈ ಅರ್ಥದಲ್ಲಿ ದೇವರು ಹೇಗೆ ಭಾವಾಭಾವನೆಂಬುದು ಹೇಗೆ ಅಭಾವನೆಂಬುದು ಪ್ರಶ್ನೆ. ಒಬ್ಬನೇ ದೇವರು ಹೇಗೆ ಭಾವಾ ಅಥವಾ ಭಾವನೆಂಬುದು ಮತ್ತೊಂದು ಪ್ರಶ್ನೆ. ಆದರೆ ವೇದಾಂತಿಗಳ ಪ್ರಕಾರ ಭಾವ ಮತ್ತು ಅಭಾವಗಳು ಒಂದೇ ಸತ್ಯದ ಎರಡು ಸ್ಥಿತಿಗಳಷ್ಟೇ. ಎರಡೂ ಅಸ್ತಿತ್ವದ ಸ್ಥಿತಿಗಳೇ. ಅಭಾವವು ದೇವರ ಸೂಕ್ಷ್ಮ ಅಥವಾ ಅವ್ಯಕ್ತ ಸ್ಥಿತಿಯಾದರೆ, ಭಾವವು ದೇವರ ಸ್ಥೂಲ ಅಥವಾ ವ್ಯಕ್ತಸ್ಥಿತಿ. ಅಭಾವವೆಂದರೆ ದೇವರಿಲ್ಲವೆಂಬ ಅರ್ಥವಲ್ಲ. ಅದು ಈಶ್ವರನ ಅವ್ಯಕ್ತ ಸ್ಥಿತಿ. ಇಲ್ಲಿ ಈಶ್ವರನು ಇಡೀ ಬ್ರಹ್ಮಾಂಡವನ್ನು ತನ್ನೊಳಗೆ ಸೂಕ್ಷ್ಮವಾಗಿ ಅಡಗಿಸಿಕೊಳ್ಳುತ್ತಾನೆ.

**ಅಂಡಕೋಟ್ಲ ಗುಕ್ಷಿನಿಯುಂಚುಕೋಲೇದಾ ?**

**(ಬ್ರೋವಭಾರಮಾ)**

**ಕುಕ್ಷಿನಿ ಬ್ರಹ್ಮಾಂಡಮುಲುನ್ನವಟ**

**(ಲಕ್ಷಣಮುಗಲ)**

ಈಶ್ವರನು ಇಡೀ ಬ್ರಹ್ಮಾಂಡವನ್ನು ತನ್ನಲ್ಲಿ ಹುದುಗಿಸಿಕೊಂಡಿರುವ ಈ ಸ್ಥಿತಿಗೆ 'ಅಭಾವ' ಎನ್ನುವುದು. ಇದಕ್ಕೆ 'ಲಯ' ಎಂದೂ ಹೆಸರು. ಸೃಷ್ಟಿಕಾಲದಲ್ಲಿ ಈಶ್ವರನು

ಬ್ರಹ್ಮಾಂಡವನ್ನು ಪುನಃ ವ್ಯಕ್ತಗೊಳಿಸುತ್ತಾನೆ. ಹೀಗೆ ದೇವರ ಅವ್ಯಕ್ತ ಸ್ಥಿತಿಯು ಅಭಾವವಾದರೆ ಆತನ ವ್ಯಕ್ತ ಸ್ಥಿತಿಯು ಭಾವ. ತ್ಯಾಗರಾಜರು ಶ್ರೀರಾಮನನ್ನು ಭಾವಾಭಾವನೆಂದು ಸಂಬೋಧಿಸುವಾಗ ಅವರ ಅದ್ಭುತ ವೇದಾಂತ ಪ್ರಜ್ಞೆಯು ಎದ್ದು ಕಾಣುತ್ತದೆ.

(ಆ) **ಸ್ಥಿತಿ** : ಪರಮಾತ್ಮನು ಈ ಜಗತ್ತಿನ ಸ್ಥಿತಿಕರ್ತನೂ ಹೌದು. ತ್ಯಾಗರಾಜರ ಭಾಷೆಯಲ್ಲಿ ಆತ ಬೃಂದಾರಕಾಧಾರ (ರಘುವೀರ ರಣಧೀರ). ಅವರ ಪ್ರಕಾರ ಪರಮಾತ್ಮನ ಹೊರತಾಗಿ ಈ ಹದಿನಾಲ್ಕು ಲೋಕಗಳಿಗೆ ಬೇರೊಂದು ಆಧಾರವಿಲ್ಲ.

**ಈರೇಡು ಲೋಕಮುಲಕು ಆಧಾರುಡಗು ನಿನುವಿನಾ ವೇರೆವ್ವರೇ ಗತಿ ?**

**(ವೇರೆವ್ವರೇ ಗತಿ)**

ಲೋಕಾಧಾರ (ಪರಿಪಾಲಯ ದಾಶರಥೆ). ಈಶ್ವರನು 'ಸರ್ವಗ್ರಹಾಧಾರಭೂತ' (ಶ್ರೀರಾಮರಾಮ). ವಿಶಿಷ್ಟಾದ್ವೈತದ ಪ್ರಕಾರ ಆಧಾರತ್ವ ಪರಮಾತ್ಮನ ಮೂರು ಲಕ್ಷಣಗಳಲ್ಲಿ ಒಂದು. ನಿಯಂತೃತ್ವ ಮತ್ತು ಶೇಷಿತ್ವ ಆತನ ಉಳಿದೆರಡು ಲಕ್ಷಣಗಳು. ಈ ಮೂರು ಲಕ್ಷಣಗಳಿರುವ ದೇವರನ್ನು 'ಆತ್ಮ' ಎನ್ನುತ್ತಾರೆ. ತಮ್ಮ ಅಸ್ತಿತ್ವಕ್ಕೆ ದೇವರನ್ನು ಅವಲಂಬಿಸಿ, ಆತನಿಂದ ನಿಯಂತ್ರಿತವಾಗಿ ಮತ್ತು ಆತನ ಮಹೋದ್ದೇಶವನ್ನು ಪೂರೈಸುವ ಜೀವ ಜಗತ್ತುಗಳನ್ನು 'ಶರೀರ' ಎನ್ನುತ್ತಾರೆ. ಹೀಗೆ ವಿಶಿಷ್ಟಾದ್ವೈತ ವೇದಾಂತದ ಪ್ರಕಾರ ದೇವರು ಮತ್ತು ಜಗತ್ತುಗಳ ಸಂಬಂಧವು ಆತ್ಮ ಮತ್ತು ಶರೀರಗಳ ಸಂಬಂಧವಾಗಿದೆ.[೨೫] ಇದೇನೇ ಇರಲಿ, ತ್ಯಾಗರಾಜರಿಗೆ ಈಶ್ವರನು ಸಕಲಲೋಕಾಧಾರ (ಶ್ರೀರಾಮಚಂದ್ರ ರಾಘವ ; ಸೀತಾಕಲ್ಯಾಣ ; ಚಲ್ಲಗನಾತೋ).

**ಸರ್ವವ್ಯಾಪಿತ್ವ** : ದೇವರ ಆಧಾರತ್ವವು ಆತನ ಸರ್ವವ್ಯಾಪಿತ್ವ ಮತ್ತು ಅಂತರ್ಯಾಮಿತ್ವಗಳನ್ನು ಸೂಚಿಸುತ್ತದೆ. ಎಂದರೆ ದೇವರು ಜಗತ್ತಿನೊಳಗೇ ವ್ಯಾಪಿಸುವ ಮೂಲಕ ಅದಕ್ಕೆ ಆಧಾರಭೂತನಾಗಿದ್ದಾನೆಂದು ಅರ್ಥ. ಆತನು ಬೇರೆಲ್ಲೋ ಇದ್ದು ಜಗತ್ತಿಗೆ ಆಸರೆಯಾಗಿರಲಾರ, 'ಸೂತ್ರೇ ಮಣಿಗಣಾ ಇವ'[೨೬] ಎಂಬಂತೆ ಮಣಿಗಳು ದಾರಕ್ಕೆ ಪೋಣಿಸಲ್ಪಟ್ಟ ಹಾಗೆ ಎಲ್ಲವೂ ದೇವರಲ್ಲೇ ಪೋಣಿಸಲ್ಪಟ್ಟಿವೆ. ಎಂದರೆ ಈಶ್ವರನು ಪ್ರಪಂಚದೊಳಗೆ ಎಲ್ಲೆಲ್ಲೂ ವ್ಯಾಪಿಸುವ ಮೂಲಕ ಅದಕ್ಕೆ ಆಶ್ರಯನಾಗಬಲ್ಲ. ವಾಸ್ತವವಾಗಿ 'ವಿಷ್ಣು' ಶಬ್ದವು ದೇವರ ಸರ್ವವ್ಯಾಪಿತ್ವವನ್ನೇ ಸೂಚಿಸುವುದು. 'ವ್ಯಾಪ್ನೋತೀತಿ ವಿಷ್ಣುಃ' ಎಂಬುದು ಆದಿಶಂಕರರ ವ್ಯಾಖ್ಯಾನ.[೨೭] ತ್ಯಾಗರಾಜರು ಈಶ್ವರನ ಈ ಸರ್ವವ್ಯಾಪಿತ್ವವನ್ನು ತಮ್ಮ ಕೃತಿಗಳಲ್ಲಿ ಪುನಃ ಪುನಃ ಪ್ರಶ್ನಿಸುತ್ತಾರೆ. ಅವರ ದೃಷ್ಟಿಯಲ್ಲಿ ಈಶ್ವರನು ಭೂಮಿಯ ಎಲ್ಲದರಲ್ಲೂ, ಎಲ್ಲೆಲ್ಲೂ ತುಂಬಿದ್ದಾನೆ. ಆತ 'ಅನ್ನಿಟನಿಂಡಿನ ಆನಂದ ಘನ' (ಇದಿನೀಕು ಮೇರಗಾದುರ). ಅವರು

**ಇಲನು ನಿಶ್ಚಯಮುಗ ನೀವು ಲೇನಿ ತಾವೆಂದೈನ ಗಲದಾ ?**

**(ರಾಮ ನಾಪೈನೀದಯ)**

ಎಂದು ಪ್ರಶ್ನಿಸಿ 'ಅಂಡಕೋಟ್ಲ ನಿಂಡಿನ ಕೋದಂಡಪಾಣಿ' (ಭಜನ ಪರುಲಕೇಲ)

ಎಂದು ಉತ್ತರಿಸುತ್ತಾರೆ. 'ಭುವನಮೆಲ್ಲ ನೀವ್ಯೆ'* (ಬ್ರೋವಭಾರಮಾ) ಎಂಬ ಅವರ ನುಡಿಮುತ್ತು ಪುರುಷಸೂಕ್ತದ 'ಸ ಭೂಮಿಂ ವಿಶ್ವತೋ ವೃತ್ವಾ' ಎಂಬ ಶ್ರುತಿಯ ಸಾಲನ್ನು ನೆನಪಿಸುತ್ತದೆ.

ಈಶ್ವರನ ಸರ್ವವ್ಯಾಪಿತ್ವದ ಮನೋಜ್ಞ ಚಿತ್ರಣವು ನಮಗೆ ದೊರೆಯುವುದು ತ್ಯಾಗರಾಜರ 'ಏತಾವುನರ' ಕೃತಿಯಲ್ಲಿ. ಎಷ್ಟು ಅನ್ವೇಷಿಸಿದರೂ ತ್ಯಾಗರಾಜರಿಗೆ ದೇವರು ಕಾಣುತ್ತಿಲ್ಲ. ಆದ್ದರಿಂದ ಅವರಿಗೆ ಆತನ 'ನೆಲೆ' ಏನೆಂಬ ಪ್ರಶ್ನೆಯು ಕಾಡಿದೆ. ಆತನು ಲಕ್ಷ್ಮಿ, ಗೌರಿ ಮತ್ತು ಸರಸ್ವತಿಯಲ್ಲಿರುವನೇ ? ಅಥವಾ ಬ್ರಹ್ಮ, ವಿಷ್ಣು ಮತ್ತು ಶಿವರೆಂಬ ತ್ರಿಮೂರ್ತಿಗಳಲ್ಲಿರುವನೆ? ಅಥವಾ ಆತನು ಪೃಥ್ವಿ, ಅಪ್, ತೇಜ, ವಾಯು ಮತ್ತು ಆಕಾಶಗಳೆಂಬ ಪಂಚಮಹಾಭೂತಗಳಲ್ಲಿರುವನೇ ?† ಅಥವಾ ಲೋಕಕೋಟಿ ಗಳಲ್ಲಿ ನೆಲೆಸಿರುವನೋ ? ಎಂದರೆ ಈಶ್ವರನು ಈ ಎಲ್ಲ ವಸ್ತುಗಳಲ್ಲೂ ಇರುವನೆಂ ಬುದು ಧ್ವನಿ. ಈ ಬಗ್ಗೆ ತ್ಯಾಗರಾಜರಿಗೆ ಸಂದೇಹಕ್ಕಿಂತಲೂ ಅದ್ಭುತಾಶ್ಚರ್ಯವೇ ಸರಿ. ದೇವರಿಲ್ಲದ ಸ್ಥಳವಿಲ್ಲ. ಆತ ತಳೆಯದ ಆಕಾರಗಳಿಲ್ಲ. ಆತ ವಿಶ್ವರೂಪನೇ ಸರಿ (ವಿನನಾಸಗೂನಿ). ಆತನು ಇರುವೆಯಿಂದ ತ್ರಿಮೂರ್ತಿಗಳವರೆಗೆ ಎಲ್ಲರಲ್ಲೂ, ಎಲ್ಲ ವಸ್ತುಗಳಲ್ಲೂ ಪ್ರೇಮದಿಂದ ಬೆಳಗುವ ಖ್ಯಾತಿಯನ್ನು ಹೊಂದಿದವನು.

> ಚೀಮಲೋ ಬ್ರಹ್ಮಲೋ ಶಿವಕೇಶವಾದುಲಲೋ
> ಪ್ರೇಮ ಮೀರ ವೆಲಗುಚುಂಡೆ ...................
>
> (ರಾಮನನ್ನು ಬ್ರೋವರಾ)

ಮತ್ತೊಂದೆಡೆ ತ್ಯಾಗರಾಜರು ಹೀಗೆ ಹಾಡುತ್ತಾರೆ.

> ಪರಮಾತ್ಮುಡು ವೆಲಿಗೆ ಮುಚ್ಚಟ ಬಾಗ ದೆಲುಸುಕೋರೆ ||
> ಹರಿಯಟ ಹರುಡಟ ಸುರುಲಟ ನರುಲಟ
> ಯಖಿಲಾಂಡ ಕೋಟುಲಟ ಯಂದರಿಲೋ ||
> ಗಗನಾನಿಲ ತೇಜೋ ಜಲ ಭೂ ಮಯಮಗು
> ಮೃಗ ಖಗ ನಗ ತರು ಕೋಟುಲಲೋ
> ಸಗುಣಮುಲಲೋ ವಿಗುಣಮುಲಲೋ

---

* ಇದೇ ಭಾವಕ್ಕಾಗಿ ನೋಡಿ—ಎಂದುಕು ನಿರ್ದಯ. ಉಂಡೇದಿ ರಾಮುಡೊಕಡು ಮತ್ತು ಎವರನಿ.

† ತ್ಯಾಗರಾಜರು ಸರ್ವಲೋಕ ದಯಾನಿಧೇ ಕೃತಿಯಲ್ಲಿ ರಾಮನನ್ನು ಪಂಚಭೂತಗಳನಾಥನೆಂದು ವರ್ಣಿಸುತ್ತಾರೆ. ಇಲ್ಲಿ ಶ್ರೀರಾಮನ ಒಡೆತನವು ಕೇವಲ ಪಂಚಭೂತಗಳಿಗೆ ಮಾತ್ರ ಸೀಮಿತವಲ್ಲ. ಅದು ಪುರುಷ, ಪ್ರಕೃತಿಯಿಂದಾಗಿ ಪಂಚಭೂತಗಳವರೆಗೆ ಇಪ್ಪತ್ತೈದು ತತ್ವಗಳಿಗೂವಿಸ್ತೃತವೆಂದು ತಿಳಿಯಬೇಕು. (ಪ್ರಕೃತಿ, ಪುರುಷ, ಮಹತ್, ಅಹಂಕಾರ, ಮನಸ್ಸು, ಪಂಚೇಂದ್ರಿಯಗಳು. ಪಂಚಕ ರ್ಮೇಂದ್ರಿಯಗಳು, ಪಂಚ ಮಹಾಭೂತಗಳು ಸೇರಿ ೨೫ ತತ್ವಗಳು).

**ಸಾಧು ತ್ಯಾಗರಾಜಾರ್ಚಿತುಡಿಲಲೋ ॥ ***

(**ಪರಮಾತ್ಮುಡು**)

ಶ್ರೀರಾಮನು ಬಾಹ್ಯಜಗತ್ತಿನಲ್ಲಿ ವ್ಯಾಪಿಸಿರುವುದಷ್ಟೇ ಅಲ್ಲ, ಆತ ತ್ಯಾಗರಾಜರ ಜೀವಾಧಾರನೂ ಹೌದು (ಭಜರಾಮಂಸತತಂ). ಎಂದರೆ ಆತನು ಅವರಲ್ಲಿ ಅಂತ ರ್ಯಾಮಿಯಾಗಿದ್ದು ಅವರ ಇಂದ್ರಿಯಗಳನ್ನು ಪ್ರೇರೇಪಿಸುವವನು. ಆದ್ದರಿಂದಲೇ ಅವರು ಹೀಗೆನ್ನುವುದು.

**ನಾ ಜೀವಾಧಾರ !**
**ನಾ ಚೂಪು ಪ್ರಕಾಶಮಾ !**
**ನಾ ನಾಸಿಕ ಪರಿಮಳಮಾ !**

(**ನಾ ಜೀವಾಧಾರ**)

ಶ್ರೀರಾಮನು ತ್ಯಾಗರಾಜರಲ್ಲಷ್ಟೇ ಅಲ್ಲ, ಎಲ್ಲ ಜೀವಿಗಳ ಅಂತರ್ಯಾಮಿಯೂ ಹೌದು. ಆತನು ಸುರಮುನಿಜನ ಯೋಗಿಗಣಗಳ ಹೃದಯವನ್ನೇ ಸ್ವಗೃಹವಾಗಿಸಿ ಕೊಂಡವನು.

**ಸುರಮುನಿಜನ ಯೋಗಿಗಣಮುಲ ಹೃದಯಮು**
**ಸ್ವಗೃಹಮೌ .......................**

(**ನೀವೇಗಾನಿ**)

ತ್ಯಾಗರಾಜರಿಗೆ ಶ್ರೇಷ್ಠ ಸುಖವಿರುವುದು ಈ ಅಂತರಾತ್ಮನನ್ನು ಕಾಣುವುದರಲ್ಲೇ ಹೊರತು ಬಾಹ್ಯವಸ್ತುವನ್ನುಕಾಣುವುದರಲ್ಲಿ ಅಲ್ಲ.

**ಚಿತ್ತಮಂದುನಿನ್ನು ಚೂಚುಸೌಖ್ಯಮೇ**
**ಯುತ್ತಮಂಬನುಚು ನುಪ್ಪೊಂಗುಚುನು**

(**ಎಂತವೇಡುಕೊಂದೋರಾಘವ**)

ಈಶ್ವರನ ಸರ್ವವ್ಯಾಪಿತ್ವದ ಮೂಲೋದ್ದೇಶ 'ಭಕ್ತರಕ್ಷಣೆ'. ದೇವರು ಕೆಲವೊಮ್ಮೆ ಭಕ್ತರನ್ನು ಪ್ರತ್ಯಕ್ಷವಾಗಿ ಅನುಗ್ರಹಿಸಿದರೆ, ಇನ್ನು ಕೆಲವೊಮ್ಮೆ ಪರೋಕ್ಷವಾಗಿ ಎಂದರೆ ಅದೃಶ್ಯನಾಗಿ ಅನುಗ್ರಹಿಸುವನಂತೆ. 'ಪರೋಕ್ಷ ಪ್ರಿಯಾಯ್ಯೆ ದೇವಾಃ' ಎಂಬುದು ಶ್ರುತಿ ವಾಕ್ಯ. ತ್ಯಾಗರಾಜರು ಈ ಅಂಶವನ್ನು ಎರಡು ಪೌರಾಣಿಕ ದೃಷ್ಟಾಂತಗಳ ಮೂಲಕ ಬಲು ಸ್ವಾರಸ್ಯವಾಗಿ ಮಂಡಿಸುತ್ತಾರೆ. ಪ್ರಹ್ಲಾದನ ಪಿತೃಬಾಧೆಯನ್ನು ನೋಡಲಾಗದೆ, ದೇವರು ಪ್ರಹ್ಲಾದನ ಮಾತನ್ನು ನಿಜಗೊಳಿಸಲು ಎಲ್ಲ ಕಂಬಗಳಲ್ಲಿಯೂ ಅಡಗಿ ಕುಳಿತ.[೨೨] ಹಾಗೆಯೇ ಸುಗ್ರೀವನ ಸೋದರಬಾಧೆಯನ್ನು ತಾಳಲಾರದೆ ಆತನನ್ನು ರಕ್ಷಿಸಲು ತಾಳೆಮರಗಳ ಹಿಂದೆ ಅಡಗಿದ. ಹೀಗೆ ಅಡಗುವ ಉದ್ದೇಶ ತನ್ನ ಭಕ್ತರನ್ನು ಸಲಹುವುದೇ ಆಗಿದ್ದಿತು. ತ್ಯಾಗರಾಜರ ಪ್ರಕಾರ ದೇವರು ಈಗಲೂ ನಿಜಭಕ್ತರ

---

* ತ್ಯಾಗರಾಜಾದಿಯಾಶ್ರಿತುಲಲೋ ಎಂಬ ಪಾಠಾಂತರವನ್ನೂ ಕಾಣಬಹುದು.

ಅರಿಷಡ್ವರ್ಗಗಳನ್ನು ನಾಶಗೊಳಿಸಿ, ಅವರನ್ನು ಸಲಹಲು ಎಲ್ಲಿಯೋ ಅಡಗಿರುವನು. ಹೀಗೆ ತ್ಯಾಗರಾಜರ ಪ್ರಕಾರ ಈಶ್ವರನ ಸರ್ವವ್ಯಾಪಿತ್ವವು ಆತನ ಕೃಪೆಯಿಂದ ಅಥವಾ ಭಕ್ತರಕ್ಷಣೆಯಿಂದ ಪ್ರೇರಿತವಾಗಿದೆ (ಎಂದುದಾಗಿನಾಡೋ).[೨೮]

ಮತ್ತೊಂದು ಮುಖ್ಯ ವಿಷಯವೆಂದರೆ ದೇವರು ವಿಶ್ವಾಂತಸ್ಥನಷ್ಟೆ ಅಲ್ಲ, ವಿಶ್ವಾತೀತನೂ ಹೌದು. ಈತ ಎರಡು ಅರ್ಥಗಳಲ್ಲಿ ವಿಶ್ವಾತೀತ. ಒಂದು - ಆತನು ಜಗತ್ತಿನ ಒಳಗಷ್ಟೇ ಅಲ್ಲ, ಪುರುಷಸೂಕ್ತವು 'ಅತ್ಯತಿಷ್ಠದ್ದಶಾಂಗುಲಂ' ಎನ್ನುವಂತೆ ಮತ್ತು ನಾರಾಯಣ ಸೂಕ್ತವು 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣ ಸ್ಥಿತಃ' ಎನ್ನುವಂತೆ ಈ ಜಗತ್ತಿನ ಹೊರಗೂ ಇದ್ದಾನೆ. ಎರಡು—ಈ ಜಗತ್ತಿನ ಒಳಗಿದ್ದೂ ಆತನು ಅದರ ವಿಕಾರ, ಪರಿಮಿತಿಯಿಂದ ದೂರಾಗಿದ್ದಾನೆ, ನೀರಿನಲ್ಲಿರುವ ತಾವರೆ ಎಲೆಯು ನೀರಿಗೆ ಅಂಟದಿರುವಂತೆ. ಒಟ್ಟಿನಲ್ಲಿ ದೇವರು ಇಡೀ ಬ್ರಹ್ಮಾಂಡದ ಒಳ ಹೊರಗೆ ವ್ಯಾಪಿಸುವ ಮೂಲಕ ಅದನ್ನು ಸ್ಥಿರವಾಗಿ ಹಿಡಿದಿದ್ದಾನೆ. ಆತನು ಸರ್ವವ್ಯಾಪಿ ಯಾಗದೇ ಇದ್ದಲ್ಲಿ ಬ್ರಹ್ಮಾಂಡವು ಒಡೆದು ಚೂರಾಗುತ್ತಿದ್ದುದು ಖಂಡಿತ.

**(ಇ) ಕರ್ಮಸಿದ್ಧಾಂತ : ದೇವರು ಸರ್ವಶಕ್ತನೆಂದ ಮೇಲೆ ಆತನು ಜಗನ್ನಾಟಕ ಸೂತ್ರಧಾರಿಯೂ ಹೌದು. ತ್ಯಾಗರಾಜರು ಹೀಗೆ ಹೇಳುತ್ತಾರೆ.**

**ಜತಗೂರ್ಚಿ ನಾಟಕಸೂತ್ರಮುನು**
**ಜಗಮೆಲ್ಲ ಮೆಚ್ಚಗ ಕರಮುನನಿಡಿ**
**ಗತಿ ತಪ್ಪಕಾಡಿಂಚೇವು .............**

**(ಮಾಕೇಲರಾ ವಿಚಾರಮು)**

ಎಂದರೆ ಆತನು ಈ ಜಗತ್ತೆಂಬ ನಾಟಕ ಮಂದಿರದ ಸೂತ್ರಧಾರಿ.* ಜಗತ್ತಿನ ಗತಿ ಯಲ್ಲಿ ಸ್ಥಿರತೆಯಿರಲು ಕಾರಣ ಆತನ ಕೈಚಳಕ. ಆತನು 'ಸಕಲಲೀಲಾ ವಿನೋದ' (ನಾಮಕುಸುಮ).[೨೯] (ಆದಿತಾಳದ ಉಪಚಾರಮುಲನು ಮತ್ತು ಪರಿಪಾಲಯ ದಾಶರಥೇ ಕೃತಿಗಳನ್ನೂ ನೋಡಿ).

ಈ ಸಂದರ್ಭದಲ್ಲಿ ನಮಗೆ ಎರಡು ತೊಡಕುಗಳು ಎದುರಾಗುತ್ತವೆ. ದೇವರು ಸರ್ವಶಕ್ತನಾದರೆ ನಮಗೆ ಇಚ್ಛಾಸ್ವಾತಂತ್ರ್ಯವೇ ಇಲ್ಲವಾಗಿ ನಾವು ಮಾಡಿಲ್ಲದ ಕರ್ಮ

---

* ಅನ್ನಮಾಚಾರ್ಯರು ಇಡೀ ಬ್ರಹ್ಮಾಂಡವನ್ನು ನಾಟಕರಂಗಕ್ಕೆ ಮಾಯೆಯನ್ನು ಹಿನ್ನಲೆಯ ಪರದೆಗೆ ಮತ್ತು ಅಜ್ಞಾನವನ್ನು ಮುಂದಿನ ತೆರೆಗೆ ಹೋಲಿಸುತ್ತಾರೆ. ವಿಶೇಷವೆಂದರೆ ಈ ನಾಟಕದ ನಿರ್ದೇಶಕ ಮತ್ತು ಪ್ರೇಕ್ಷಕರಿಬ್ಬರೂ ದೇವರೇ. ಆತ ವಿಶ್ವವೆಂಬ ರಂಗಮಂದಿರವನ್ನು ಸೃಷ್ಟಿಸಿ, ಅಲ್ಲಿ ಜೀವನು ಆಡುವ ನಾಟಕವನ್ನು ಅದರಲ್ಲಿ ತಾನು ಭಾಗಿಯಾಗದೇ ಸಾಕ್ಷೀಭೂತನಾಗಿ ನೋಡುತ್ತಾನೆ. ಮಾಯೆಯು ದೇವರ ಸೂತ್ರಧಾರಿತ್ವವನ್ನು ಮತ್ತು ಅಜ್ಞಾನವು ಆತನ ಪ್ರೇಕ್ಷಕತ್ವವನ್ನು ಮರೆಮಾಚು ತ್ತದೆ. ಎಂದರೆ ಎರಡೂ ತೆರೆಗಳು ದೇವರ ಸರ್ವವ್ಯಾಪಿತ್ವವನ್ನು ಮರೆಮಾಚಿ ಈ ಜಗತ್ತೆಂಬ ನಾಟಕವೇ ನಿಜವೇನೋ ಎಂಬ ಭ್ರಮೆಯನ್ನು ಮೂಡಿಸುತ್ತದೆ. Annamacharya—APhilosophical Study. Dr. H. L. Chandrashekara, Vidyashankara Prakashana, Mysore. 1990, page 237-239.

ಗಳಿಗೆ ನಾವು ಹೊಣೆಯಾಗಬೇಕಾಗುತ್ತದೆ. ಎರಡನೆಯದಾಗಿ, ಈ ಜಗತ್ತಿನಲ್ಲಿ ಕೆಲವರು ನಲಿವನ್ನು ಮತ್ತು ಕೆಲವರು ನೋವನ್ನು ಅನುಭವಿಸಬೇಕಾಗಿ ಬಂದು ದೇವರಿಗೆ ಪಕ್ಷಪಾತ (ವೈಷಮ್ಯ) ಮತ್ತು ಕ್ರೌರ್ಯ (ನೈರ್ಘೃಣ್ಯ) ಎಂಬ ದೋಷಗಳು ತಟ್ಟುತ್ತವೆ. ಎಂದರೆ ದೇವರು ತನ್ನ ಪರಿಪೂರ್ಣತೆಯನ್ನು ಕಳೆದುಕೊಳ್ಳುತ್ತಾನೆ. ಈ ಸಮಸ್ಯೆಗಳನ್ನು ಬ್ರಹ್ಮಸೂತ್ರವು[೬೦] ಒಂದು ಸೂತ್ರದಲ್ಲಿ ಚರ್ಚಿಸುತ್ತದೆ. ಅದರ ಪ್ರಕಾರ ಮನುಷ್ಯನ ಸುಖದುಃಖಗಳಿಗೆ ಕಾರಣ ಅವನ ಪುಣ್ಯ ಪಾಪ ಕರ್ಮಗಳೇ ಹೊರತು ದೇವರಲ್ಲ. ಈ ಬಗ್ಗೆ '*ಪುಣ್ಯೋವೈ ಪುಣ್ಯೇನ ಕರ್ಮಣಾಭವತಿ ಪಾಪಃ ಪಾಪೇನೇತಿ*' ಎಂಬ ಶ್ರುತಿ ವಾಕ್ಯವು ಇದೆ.[೬೧] ದೇವರು ಜೀವಿಗಳಿಗೆ ಫಲಗಳನ್ನು ವಿತರಿಸುವವನು ಮಾತ್ರ—ಅವುಗಳನ್ನು ಸೃಷ್ಟಿಸುವವನಲ್ಲ. ಇದಕ್ಕೆ ಆದಿ ಶಂಕರರು ಸುಂದರವಾದ ಉದಾಹರಣೆಯೊಂದನ್ನು ನೀಡುತ್ತಾರೆ. ಮಳೆಯು ಬೆಳೆಗೆ ಸಾಮಾನ್ಯ ಕಾರಣವಾದರೂ ಬೆಳೆಗಳಲ್ಲಿನ ವೈವಿಧ್ಯಕ್ಕೆ ಮಳೆಯೇ ಕಾರಣವಲ್ಲ. ಇದಕ್ಕೆ ಕಾರಣ ಬೆಳೆಗಳ ಮೊಳೆಯುವ ಸಾಮರ್ಥ್ಯ. ಹಾಗೆಯೇ ದೇವರು ಈ ಜಗತ್ತಿಗೆ ಸಾಮಾನ್ಯ ಕಾರಣನಾದರೂ ಜೀವಿಗಳ ಸುಖದುಃಖಗಳಲ್ಲಿ ಕಂಡುಬರುವ ವೈವಿಧ್ಯಕ್ಕೆ ಆತನು ಕಾರಣನಲ್ಲ. ಅದಕ್ಕೆ ಕಾರಣ ಅವರ ಕರ್ಮಗಳು. ದೇವರು ಈ ಕರ್ಮಗಳಿಗೆ ಅನುಸಾರವಾಗಿ ಮನುಷ್ಯನಿಗೆ ಸುಖದುಃಖಗಳನ್ನು ನೀಡುವವನೇ ಹೊರತು ತನಗಿಷ್ಟ ಬಂದಂತೆ ಅಲ್ಲ.[೬೨]

ತ್ಯಾಗರಾಜರು ಕೂಡ ಈ ವೈಷಮ್ಯ ನೈರ್ಘೃಣ್ಯಗಳ ಸಮಸ್ಯೆಯನ್ನು ಭಕ್ತಿರಸದೊಂದಿಗೆ ಬೆರೆಸಿ ಬಲು ಸ್ವಾರಸ್ಯವಾಗಿ ಚರ್ಚಿಸುತ್ತಾರೆ. ಅವರಿಗೆ ದೇವರು ಒಮ್ಮೊಮ್ಮೆ ಒಂದೊಂದು ರೀತಿಯ ಮಾತನ್ನು ಆಡುವನು. ಆತ ತೊಟ್ಟಿಲನ್ನೂ ತೂಗುವನು, ಮಗುವನ್ನೂ ಜಿಗುಟುವನು. ಜೀವಗಳನ್ನು ಶಿಕ್ಷಿಸುವನು ಮತ್ತು ಅವರನ್ನು ರಕ್ಷಿಸಿಯೂ ತೋರುವನು. ಈ ಬಗ್ಗೆ ತ್ಯಾಗರಾಜರಿಗೆ ಗೊಂದಲವುಂಟಾಗಿದೆ.

**ಅಟ್ಟ ಬಲುಕುದು ಇಟ್ಟಬಲುಕುದು ವಂದುಕೇಮಿ ಸೇತುರಾಮ ನೀ**
**ತೊಟ್ಲನರ್ಭಕುಲನೂತುವು ಮರಿಮರಿ**
**ತೋಚಿನಟ್ಲು ಗಿಲ್ಲುದುವು ಶ್ರೀರಾಮ ನೀ**
**ಜೀವುಲ ಶಿಕ್ಷಿಂಪಗನೇರ್ತುವು ಚಿರಂ**
**ಜೀವುಲುಗಾ ಜೇಯನೇರ್ತುವುರಾ**
**ಭಾವಮೆರಿಗಿ ಬ್ರೋತುವು ..........**

**(ಅಟ್ಟಬಲುಕುದು ಇಟ್ಟಬಲುಕುದುವು)**

ಈ ಪ್ರಶ್ನೆಗಳಿಗೆ ತ್ಯಾಗರಾಜರೇ ಬೇರೆಡೆಗಳಲ್ಲಿ ಉತ್ತರಿಸುತ್ತಾರೆ. ಅವರ ಪ್ರಕಾರ ದೇವರು ಅವರವರ ಕೃತ್ಯಗಳಿಗೆ ಅನುಸಾರವಾಗಿ ಭಾಗ್ಯ ನೀಡುತ್ತಾನೆ.

**ವಾರಿವಾರಿ ಮಂಚಿಕಿ ದಗಿನಟ್ಲು**
**ವಾರಿವಾರಿ ಭಾಗ್ಯಮುಲೀವ**

**(ಶ್ರೀ ರಘುವರ ಕರುಣಾಕರ)**

ಅವರ ಪ್ರಕಾರ ಮನುಷ್ಯನ ವೈಭೋಗವು ಅವನ ಹಣಕ್ಕೆ ಅನುಸಾರವಾಗಿರುತ್ತದೆ. ಹಾಗೆಯೇ ಜೀವನದ ಆಗುಹೋಗುಗಳು, ಕಷ್ಟಸುಖಗಳು ನಮ್ಮ ಧರ್ಮಕರ್ಮಗಳಿಗೆ ಅನುಸಾರವಾಗಿ ಸಂಭವಿಸುತ್ತವೆ. ಚಿತ್ತಕ್ಕೆ ಅನುಸಾರವಾಗಿ ಸಿದ್ಧಿಯಾಗುತ್ತದೆ. ಹೀಗಿರುವಾಗ ಮನುಷ್ಯನು ತನ್ನ ಪರಿಸ್ಥಿತಿಗೆ ದೈವ ಅಥವಾ ಇತರರನ್ನೇಕೆ ದೂರಬೇಕೆಂಬುದು ತ್ಯಾಗರಾಜರ ಪ್ರಶ್ನೆ.

ನಿನ್ನಾಡನೇಲ ನೀರಜಾಕ್ಷ
ಕನ್ನವಾರಿಪೈನಿ ಕಾಕಸೇಯನೇಲ ?
ಕರ್ಮಮುನಕು ತಗಿನ ಕಾರ್ಯಮುಲು ನಡಚುನು
ಧರ್ಮಮುನಕು ದಗಿನಟ್ಟು ದೈವಮು ಬ್ರೋಚುನು

ಚಿತ್ತಮುನಕು ದಗಿನ ಸಿದ್ಧಿಯುಗಲ್ಗುನು
ವಿತ್ತಮುನಕು ದಗಿನಟ್ಟು ವೇಡುಕ ನಡಚುನು

(ನಿನ್ನಾಡನೇಲ)

ಇದೇ ತತ್ತ್ವವನ್ನು ತ್ಯಾಗರಾಜರು ಬೇರೆಡೆಯಲ್ಲಿ ಲೋಕೋಕ್ತಿಗಳ ಮೂಲಕ ಪ್ರತಿಪಾದಿಸುತ್ತಾರೆ. ಚಿನ್ನವೇ ಅಶುದ್ಧವಾದರೆ ಅಕ್ಕಸಾಲಿಗನನ್ನು ದೂರಲೇಕೆ ? ಮಗಳು ಪ್ರಸವ ವೇದನೆಯನ್ನು ತಡೆಯಲಾರಳಾದರೆ ಅಳಿಯನನ್ನು ನಿಂದಿಸಲೇಕೆ ? ಪೂರ್ವಜನ್ಮದಲ್ಲಿ ದೇವರನ್ನು ಪೂಜಿಸಿ, ಸತ್ಪಾತ್ರರಿಗೆ ದಾನಮಾಡದಿದ್ದಲ್ಲಿ ತನ್ನ ಕಾರ್ಪಣ್ಯಕ್ಕೆ ದೇವರನ್ನು ದೂರಲೇಕೆ ? ನನ್ನ ಸ್ವಭಾವ ಮತ್ತು ಗುಣದೋಷಗಳೇ ನನ್ನ ಕಷ್ಟಕ್ಕೆ ಕಾರಣವೇ ಹೊರತು ನಿನ್ನವಲ್ಲ.

ಮೀವಲ್ಲ ಗುಣದೋಷಮೇಮಿ ? ಶ್ರೀರಾಮ
ನಾವಲ್ಲನೇಗಾನಿ, ನಳಿನದಳ ನಯನ
ಬಂಗಾರುಬಾಗುಗ ಪದಿವನ್ನೆ ಗಾಕುಂಟೆ
ಅಂಗನಾರ್ಜುಚು ಬತ್ತುನಾಡುಕೋನೇಲ
ತನತನಯ ಪ್ರಸವವೇದನ ಕೋರ್ವಲೇಕುಂಟೆ
ಅನಯಮಲ್ಲುನಿಪೈಯಹಂಕಾರ ಪಡನೇಲ
ಏಜನ್ಮಮುನ ಪಾತ್ರಮೆರಿಗಿ ದಾನಂಬೀಕ
ಪೂಜಿಂಚ ಮರಚಿ ವೇಲ್ಪುಲ ನಾಡುಕೋನೇಲ ?
ನಾಮನಸು ನಾಪ್ರೇಮ ನನ್ನಲಯಜೇಸಿನ
ರಾಜಿಲ್ಲು ಶ್ರೀತ್ಯಾಗರಾಜನುತ ಚರಣ

(ಮೀವಲ್ಲ ಗುಣದೋಷಮೇಮಿ ?)

ಒಟ್ಟಿನಲ್ಲಿ ಕರ್ಮ ಸಿದ್ಧಾಂತದಲ್ಲಿನ ನಂಬುಗೆಯ ಕೊರತೆ ಮನುಷ್ಯನನ್ನು ದುಃಖಕ್ಕೆ ಚೆಲ್ಲುತ್ತದೆ. ಅದರಲ್ಲಿನ ನಂಬಿಕೆಯು ಜೀವನದ ಸುಖದುಃಖಗಳನ್ನು ಸಮತೋಲನ

ವಾಗಿ ಗ್ರಹಿಸುವಂತೆ ಮಾಡುತ್ತದೆ.

ತ್ಯಾಗರಾಜರಲ್ಲಿ ದೋಷವಿತ್ತೇ ಎಂಬುದು ಬೇರೆ ಪ್ರಶ್ನೆ. ಇಲ್ಲಿ ಮುಖ್ಯವಾದುದು ಮನುಷ್ಯನ ಕಷ್ಟಸುಖಗಳಿಗೆ ಅವನೇ ಕಾರಣನೆಂಬುದು. ಅವನ ಪರಿಸ್ಥಿತಿಗೆ ಅವನೇ ಹೊಣೆ ಅಥವಾ ಅವನು ಇಚ್ಛಾಪೂರ್ವಕವಾಗಿ ಮಾಡಿದ ಕರ್ಮಗಳೇ ಕಾರಣ. ಇಲ್ಲಿ ನಮಗೆ ಎದುರಾಗುವ ಮತ್ತೊಂದು ಪ್ರಶ್ನೆಯೆಂದರೆ, ಮನುಷ್ಯನು ಸ್ವತಂತ್ರನಾದರೆ ದೇವರ ಸರ್ವಶಕ್ತಿತ್ವಕ್ಕೆ ಧಕ್ಕೆ ಬರುವುದಿಲ್ಲವೇ ಎಂಬುದು. ಏಕೆಂದರೆ ಎರಡು ಸ್ವತಂತ್ರ ವಸ್ತುಗಳಿರಲು ಸಾಧ್ಯವಿಲ್ಲ. ವೇದಾಂತಿಗಳ ಪ್ರಕಾರ ಇದೇನೂ ವಿರೋಧವಲ್ಲ. ಏಕೆಂದರೆ ಮನುಷ್ಯನಿಗೆ ಸ್ವಾತಂತ್ರ್ಯವನ್ನು ನೀಡುವವನು ದೇವರೇ. ದೈವದತ್ತವಾದ ಈ ಸ್ವಾತಂತ್ರ್ಯವನ್ನು ಒಳ್ಳೆಯ ಅಥವಾ ಕೆಟ್ಟರೀತಿಯಲ್ಲಿ ಬಳಸಿಕೊಳ್ಳುವುದು ಮನುಷ್ಯನಿಗೆ ಸೇರಿದ್ದು. ಅಂತಿಮವಾಗಿ ಅದಕ್ಕೆ ಮನುಷ್ಯನು ಹೊಣೆಯೇ ಹೊರತು ದೇವರಲ್ಲ. ಹೀಗೆ ತ್ಯಾಗರಾಜರು 'ದೈವ ನಿರ್ಧಾರಿತವಾದ' ಮತ್ತು 'ಇಚ್ಛಾಸ್ವಾತಂತ್ರ್ಯವಾದಗಳ' ನಡುವೆ ಈ ತೋರಿಕೆಯ ಘರ್ಷಣೆಗಳನ್ನು ಲೋಕೋಕ್ತಿಗಳ ಮೂಲಕ ಸರಳ ಹಾಗೂ ಸ್ಪಷ್ಟ ವಾಗಿ ಪರಿಹರಿಸುತ್ತಾರೆ. ಅವರ ಪ್ರಕಾರ ಕರ್ಮಸಿದ್ಧಾಂತವೇನೂ ನಿಷ್ಕ್ರಿಯತೆಯನ್ನು ಒಳ ಗೊಂಡಿಲ್ಲ. ಎಂದರೆ ಅದು ನಮ್ಮ ಕಷ್ಟಗಳನ್ನು ಎದುರಿಸದೆ ಸುಮ್ಮನೆ ಕಲ್ಲಿನಂತೆ ಸ್ವೀಕರಿಸಬೇಕೆಂದು ಸಾರುವುದಿಲ್ಲ. ಬದಲಾಗಿ ಪುರುಷ ಪ್ರಯತ್ನದ ಮೂಲಕ ಅವು ಗಳನ್ನು ಎದುರಿಸಬೇಕೆಂದು ಅದು ಬೋಧಿಸುತ್ತದೆ. ಮನುಷ್ಯನ ಸುಖದುಃಖಗಳಿಗೆ ಅವನೇ ಕಾರಣನಾದರೆ, ಅವನು ತನ್ನ ಇಚ್ಛಾಸ್ವಾತಂತ್ರ್ಯವನ್ನು ಯೋಗ್ಯ ರೀತಿಯಲ್ಲಿ ಬಳಸುವ ಮೂಲಕ ತನ್ನ ಸುಖವನ್ನು ವೃದ್ಧಿಸಿಕೊಂಡು ದುಃಖವನ್ನು ತಗ್ಗಿಸಿಕೊಳ್ಳ ಬಹುದು. ಇದೇ ಕರ್ಮರಹಸ್ಯ.

**ಸೌಲಭ್ಯ** : ಸೌಲಭ್ಯ ಎಂಬುದು ಈಶ್ವರನ ದಯೆಗೆ ಮತ್ತೊಂದು ಹೆಸರು. ತ್ಯಾಗ ರಾಜರು ತಮ್ಮ ಅನೇಕ ಕೃತಿಗಳಲ್ಲಿ ದಯೆಯ ಹಿರಿಮೆಯನ್ನು ಕೊಂಡಾಡುತ್ತಾರೆ. ಹಾಗೆ ಮಾಡುವಾಗ ಅವರು ಬಳಸದ ವಿಶೇಷಣಗಳಿಲ್ಲ, ಉಪಮಾಲಂಕಾರಗಳಿಲ್ಲ. ಅವರ ಕೃತಿಗಳು ದಯೆಯ ಮಹಿಮೆಯನ್ನು ಬಣ್ಣಿಸುವ ಒಂದು ಅಗಾಧ ಭಂಡಾರವೇ ಸರಿ. ಅವರ ಪ್ರಕಾರ ಈಶ್ವರನು ಅಪಾರ ಮಹಿಮಾದ್ಭುತನಷ್ಟೇ ಅಲ್ಲ, ಕರುಣಾಕರ ಅಥವಾ ಘೃಣಾಸಾಗರನೂ ಹೌದು (ವಂದನಮು; ಕಮಲಾಪ್ತಕುಲ ; ದರಿನಿ ತೆಲುಸುಕೊಂಟಿ; ದೀನಜನಾವನ ; ಪ್ರಾರಬ್ಧ ಮಿಟ್ಲುಂಡಗಾ ; ಪಾಲಯ ರಘುವೀರ ; ರಾಮಲಾಲಿ; ಕಾಲಹರಣ; ಸಾಮಜವರಗಮನ). ಕೃಪಾಲವಾಲನೂ ಹೌದು. ಅಷ್ಟೇ ಅಲ್ಲ, ಆತ ಕರುಣಾಸ್ವಾಂತ ಮತ್ತು ಸುಧಾರಸಪೂರ್ಣ (ನೀದಯ).

ಭಗವಂತನದಯೆಗೆ ಮುಖ್ಯವಾಗಿ ಮೂರು ಲಕ್ಷಣಗಳುಂಟು

(ಅ) ಅದಕ್ಕೆ ಮಿತಿಯೇ ಇಲ್ಲ. ಈ ಕಾರಣದಿಂದಲೇ ತ್ಯಾಗರಾಜರು ದೇವರನ್ನು ಕಾರುಣ್ಯ ಪಾರಾವಾರ (ಜಯಸೀತಾರಾಂ, ಸುಂದರತರದೇಹಂ), ಉದಾರ (ಪ್ರಾರಬ್ಧಮಿಟ್ಲುಂಡಗಾ), ಪರಮದಯಾಕರ (ಮನವಿನಿ ವಿನುಮಾ) ಎಂದು

ನಾನಾ ವಿಧವಾಗಿ ವಿವರಿಸುವುದು.

(ಆ) ಅದು ಯಾವುದೇ ನಿರ್ದಿಷ್ಟ ದೇಶ ಅಥವಾ ನಿರ್ದಿಷ್ಟ ವರ್ಗದ ಜೀವಿಗಳಿಗೆ ಸೀಮಿತವಲ್ಲ. ಅದು ಎಲ್ಲ ವರ್ಗದ ಜೀವಿಗಳಿಗೂ ಸಮನಾಗಿರುವುದು. ಈಶ್ವರನು ಸರ್ವಲೋಕದಯಾನಿಧಿಯೇ ಸರಿ. ದಯೆಯನ್ನು ಹೊರಸೂಸುವ ಆತನ ಕಣ್ಣುಗಳು ಇಡೀ ಜಗತ್ತನ್ನು ಪಸರಿಸಿವೆ. ಬೇರೆ ರೀತಿ ಹೇಳಬೇಕೆಂದರೆ ಆತನ ದಯೆಯು ಸಾರ್ವತ್ರಿಕ ಮತ್ತು ಸಾರ್ವಕಾಲಿಕ.

(ಇ) ಅದು ನಿರ್ಹೇತುಕವಾದುದು. ಎಂದರೆ ದೇವರು ಯಾವ ಪ್ರತಿಫಲವನ್ನು ಅಪೇಕ್ಷಿಸದೆ, ಜೀವಿಗಳಿಗೆ ತನ್ನ ದಯೆಯನ್ನು ಆತ ತೋರುತ್ತಾನೆ. ತ್ಯಾಗ ರಾಜರ ಮಾತಿನಲ್ಲೂ ಆತ ಅವ್ಯಾಜ ಕರುಣಾಸಾಗರ (ಸುಂದರ ತರದೇಹಂ). ತ್ಯಾಗರಾಜರು ಹೀಗೆ ಸಾರುತ್ತಾರೆ.

**ಈ ಜಗತಿನಿ ಅವ್ಯಾಜಮುನ ನಾಪ್ತ ಸ**
**ಮಾಜಮುನನು ಬ್ರೋಚು ಜಗತ್ಪತಿನಿ**

**(ರಾಮುನಿ ಮರವಕವೇ)**

ತ್ಯಾಗರಾಜರು ದೇವರನ್ನು ಪೂಜಿಸುವ ಉದ್ದೇಶವೇ ಆತನು ಅವ್ಯಾಜಕರುಣಾ ಮೂರ್ತಿಯೆಂದು. ಇದನ್ನು ಅವರು ಹೀಗೆ ನುಡಿಯುತ್ತಾರೆ.

**ಈ ಜಗತಿನಿ ನೀವವ್ಯಾಜ ಕರುಣಾಮೂರ್ತಿ**
**ವನಿ ಪೂಜ ಜೇಸಿತಿ**

**(ರಾಮ ಸಮಯಮು ಬ್ರೋವರಾ)**

**ನೀವು ಕರುಣಾವಾರಾಸಿಯನಿ ಪೂಜಜೇಸಿ**

**(ಇದೇಭಾಗ್ಯಮು)**

ಒಂದೊಮ್ಮೆ ದೇವರು ಜೀವಿಯನ್ನು ಶಿಕ್ಷಿಸಿದ್ದರೂ ಸಹ, ಅದರಿಂದ ಜೀವಿ ಕುಪಿತ ನಾಗುವಂತಿಲ್ಲ. ಈಶ್ವರನೊಂದಿಗೆ ರಾಜಿಯಾಗದೆ ಜೀವಿಗಳಿಗೆ ಸಂತೋಷವಾಗಿರಲು ಸಾಧ್ಯವಿಲ್ಲ. ಆದ್ದರಿಂದಲೇ ತ್ಯಾಗರಾಜರು ಹೀಗೆನ್ನುತ್ತಾರೆ.

**ಈಜನ್ಮಮುನ ನಿನ್ನು ರಾಜಿ ಜೇಸಿಕೊನಲೇಕ ರಾಜಿಲ್ಲರನಿ**

**(ನಿನ್ನೇ ನೆರನಮ್ಮಿನಾನುರಾ)**

ತ್ಯಾಗರಾಜರಿಗೆ ತಿಳಿದಿದೆ. ಈಶ್ವರನಂತೆ ಕರುಣಾನಿಧಿಯಾಗಿ ರಕ್ಷಿಸಬಲ್ಲ ಮತ್ತಾವ ದೇವತೆಯೂ ಇಲ್ಲ, ಆತನ ಕಟಾಕ್ಷವಿಲ್ಲದೆ ಯಾರೂ ಬದುಕಲು ಸಾಧ್ಯವಿಲ್ಲ. ಅವನ ಲ್ಲದೆ ಈ ಧರೆಯಲ್ಲಿ ಮತ್ತಾವ ರಕ್ಷಕರೂ ಇಲ್ಲವಾಗಿದ್ದಾರೆ.

**ನೀವಲೆ ಕರುಣಾನಿಧಿಯ್ಯೆ ಬ್ರೋಚಿನ ದೇವತುಲೆವರುರಾ ?**
**ನೀದು ಕಟಾಕ್ಷಮು ಲೇಕ ಎವರು ಬ್ರತಿಕಿರಿ ?**

**(ಏವಿಧಮುಲನ್ನೆನಗಾನಿ)**

ಧರಲೋನ ರಕ್ಷಕುಲು ಲೇರು ದೇವಾ

(ಓರಾಮ ಓರಾಮ ಓಂಕಾರಧಾಮ)

ಮತ್ತೊಂದು ಕೃತಿಯಲ್ಲಿ ತ್ಯಾಗರಾಜರು ಹೀಗೆನ್ನುತ್ತಾರೆ

ನೀಕೇ ದಯ ನೀಕೇ ದಮ ನೀಕೆವರೆ ಸಾಟಿ
ಮುಲ್ಲೋಕಮುಲಲ್ಲಾಡಿನ ಇಲ್ಲೇ ಗತಿಗಾನಿ
ಇಲನಂತಟ ಗಲವಾನಕು ಜಲಧೇ ಗತಿಗಾನಿ

(ರಘುನಂದನ)

ಎಂದರೆ ಈಶ್ವರನ ದಯೆಗೆ ಸಾಟಿಯಿಲ್ಲವಾದ್ದರಿಂದ, ಮಳೆಗೆ ಸಾಗರವು ಹೇಗೋ, ಹಾಗೆಯೇ ತ್ಯಾಗರಾಜರಿಗೂ ದೇವರೇ ದಿಕ್ಕು. ಆತನ ಕರುಣೆಯೇ ಅವರ ಪಾಲಿಗೆ ರಾಜ ಯೋಗ (ಇಂತಕನ್ನ ದೆಲ್ಪತರಮಾ). ಆತನ ದಯೆಯಿಲ್ಲದೆ ಅವರ ಕಾರ್ಯಗಳೆಲ್ಲವೂ ವ್ಯರ್ಥ. ಅವರು ಹೀಗೆ ಪ್ರಶ್ನಿಸುತ್ತಾರೆ. ದೇವರಿಗೆ ದಯಬಾರದಿದ್ದರೆ, ತ್ಯಾಗರಾಜರು ಮಾಡುವ ಕೆಲಸಗಳೆಲ್ಲವೂ (ಸಮರ್ಥವಾಗಿ) ನೆರವೇರುತ್ತದೆಯೆ ? (ನೀಕೇದಯಾರಾಕ). ಎಲ್ಲ ಸಾಧನಗಳಿಗೂ ಮೂಲಭೂತ ಸಾಧನ ಭಗವಂತನ 'ದಯೆ'. ಇದಿಲ್ಲದೆ ಯಾವ ಕಾರ್ಯವೂ ಸಫಲವಾಗದು.

ದಯೆಯಿಂದಲೇ ದೇವರಿಗೆ ಹಿರಿಮೆ. ದಯೆಯಿಲ್ಲದ ದೇವರು, ದೇವರಾಗದೆ ಇಡೀ ಜಗತ್ತನ್ನು ತನ್ನ ಶಕ್ತಿಯಿಂದ ನುಂಗಿಬಿಡುವ ಸಂಭವವುಂಟು, ಎಂದೇ ಸರ್ವಶಕ್ತನಿಗೆ ದಯೆಯ ಒತ್ತಾಸೆ. ಈಶ್ವರನ ದಯಾಲಕ್ಷಣ ಅಥವಾ ದಯಾಪ್ರತೀಕಳಾದ ದೇವಿ ತನ್ನ ಭಕ್ತರನ್ನು ಸಹಜವಾದ ದಯಾಗುಣದಿಂದ ಸಂರಕ್ಷಿಸುತ್ತಾಳೆ. ಇಲ್ಲಿ ಈಶ್ವರನು ದಯಾ ಪರಾಧೀನ. ಈ ಅಂಶವನ್ನು ತ್ಯಾಗರಾಜರು ಹೀಗೆ ಹೇಳುತ್ತಾರೆ. ಸತಿಯ ಶಿಫಾರಸಿನಿಂದ, ಸದ್ಭಕ್ತಿ ಕೋಟಿಯನ್ನು ಸಂರಕ್ಷಿಸಲಿಲ್ಲವೆ ? (ಎನ್ನಾಳ್ಳುಯೂರಕೆಯುಂದುವೋ). ಮತ್ತೊಂದು ಕೃತಿಯಲ್ಲಂತೂ ಈ ಅಂಶವನ್ನು ಇನ್ನೂ ಸ್ವಾರಸ್ಯವಾಗಿ ಬಣ್ಣಿಸುತ್ತಾರೆ. ಈ ಬಣ್ಣನೆಯಲ್ಲಿ ತ್ಯಾಗರಾಜರಿಗೆ ಶ್ರೀರಾಮನ ಬಗ್ಗೆ ಅತೀವ ಸಲಿಗೆಯ ಜೊತೆಗೆ ಚಮತ್ಕಾರವೂ ಎದ್ದು ಕಾಣುತ್ತದೆ. ಅವರ ಪ್ರಕಾರ, ರಾಮನಿಗೆ ರಾವಣನನ್ನು ಕೊಂದು ಪೂಜ್ಯನಾದ ಕೀರ್ತಿ ಬಂದುದು ಸೀತೆಯನ್ನು ಕೈಹಿಡಿದುದರಿಂದಲೇ (ಮಾಜಾನಕೀ).

ವಾಸ್ತವವಾಗಿ ತ್ಯಾಗರಾಜರಂತಹ ಭಕ್ತರಿಗೆ ದೇವರ ಪರತ್ವಕ್ಕಿಂತಲೂ, ಈಶ್ವರನ ಸೌಲಭ್ಯದಲ್ಲಿ ಹೆಚ್ಚು ತೃಪ್ತಿ. ದೇವರ ಶಕ್ತಿ ಸ್ತುತ್ಯರ್ಹವಾದರೂ ಅದು ಭಕ್ತನ ಹೃದಯಕ್ಕೆ ಸಮೀಪವೆನಿಸುವುದು ದಯಾಪೂರ್ಣವಾದಾಗ ಮಾತ್ರ. ಆತ ದಯಾ ಮಯನೂ ಭಕ್ತ ಸುಲಭನೂ ಹೌದೆಂಬ ಭಾವನೆಯೇ ಭಕ್ತನಿಗೆ ದೇವರಲ್ಲಿ ಹೆಚ್ಚು ಪ್ರೀತಿ ಮೂಡಿಸುತ್ತದೆ. ರಾಮಕೃಷ್ಣ ಪರಮಹಂಸರ ಅಭಿಪ್ರಾಯದಂತೆ 'ಭಯಹುಟ್ಟಿ ಸುವ ದೇವರಲ್ಲಿ ಸಲಿಗೆಯಾಗಲೀ, ಪ್ರೀತಿಯಾಗಲೀ ಮೂಡುವುದು ಕಷ್ಟಸಾಧ್ಯ.' ಆದ್ದ ರಿಂದಲೇ ಭಕ್ತ ದೇವರ ಸೌಲಭ್ಯದಿಂದಲೇ ಆಕರ್ಷಿತನಾಗಿ, ದೇವರ ಪರತ್ವವೇನ್ನೂ, ಕಲಾತ್ಮಕತೆಯನ್ನೂ ಹೆಚ್ಚು ಹೆಚ್ಚು ಅರಿಯಲು, ಆಸ್ವಾದಿಸಲು ಸಾಧ್ಯವಾಗುವುದು.

ತ್ಯಾಗರಾಜರೇ ಒಂದು ಕಡೆ ಹೇಳುವಂತೆ ದೇವರು ಒಂದು ರೂಪದಲ್ಲಿ ರಕ್ಷಿಸಿ, ಮತ್ತೊಂದು ರೂಪದಲ್ಲಿ ಹಿಂಸಿಸಿ, ಇನ್ನೊಂದು ರೂಪದಲ್ಲಿ ಸಾಕ್ಷೀಭೂತನಾಗಿ ರುವುದು (ಇನ್ನಾಳ್ಳು ನನ್ನೇಲಿ) ಅವರಿಗಿಷ್ಟವಿಲ್ಲ. ವಾಸ್ತವವಾಗಿ ದೇವರು ಸುಲಭನೆಂಬ ಈ ನಂಬಿಕೆಯೇ ಮನುಷ್ಯನ ಅಧ್ಯಾತ್ಮ ಪ್ರಗತಿಗೆ ಸಾಧನ. ದೇವರ ಸರ್ವಶಕ್ತಿತ್ವವನ್ನು ಕುರಿತು ಧ್ಯಾನಿಸಿದರೆ ನಾವು ನಮಗರಿವಿಲ್ಲದಂತೆ, ನಮಗೂ ಆತನಿಗೂ ಕಂದಕವನ್ನು ನಿರ್ಮಿಸಿಕೊಳ್ಳುತ್ತೇವೆ. ಆತ ನಮಗೆ ಹತ್ತಿರದವನಾಗಬೇಕಾದರೆ ನಮಗೆ ಸೇರಿದವ ನೆಂದೇ ಭಾವಿಸಬೇಕು.

ಹೀಗೆಂದ ಮಾತ್ರಕ್ಕೆ ಸೌಲಭ್ಯವೇ ಪರತ್ವಕ್ಕಿಂತಲೂ ಶ್ರೇಷ್ಠವೆಂದು ಅರ್ಥವಲ್ಲ. ಶಕ್ತಿ ವಂತನಲ್ಲದ ಕರುಣಾಮೂರ್ತಿಯು ಜೀವಿಗಳ ಕಷ್ಟಗಳನ್ನು ನಾಶಮಾಡಲಾರ. ಅಂತಹ ವನು ಜೀವಿಗಳಿಗೆ ತುಟಿಯಂಚಿನ ಕರುಣೆಯನ್ನು ಮಾತ್ರ ತೋರುವ ಒಬ್ಬ ಸಾಮಾನ್ಯ ವ್ಯಕ್ತಿಯಾಗುತ್ತಾನೆ. ಆದರೆ ದೇವರ ಸರ್ವಶಕ್ತಿತ್ವದ ಹಿನ್ನೆಲೆಯಲ್ಲಿ ದಯೆಯೂ, ದಯೆಯ ಹಿನ್ನೆಲೆಯಲ್ಲಿ ಸರ್ವಶಕ್ತಿತ್ವವೂ ಸದಾಕಾಲ ಕ್ರಿಯಾಶೀಲವಾಗಿರುತ್ತದೆ. ತ್ಯಾಗ ರಾಜರು ಶ್ರೀರಾಮನನ್ನು ಶ್ರೀಲೋಲ (ರಘುನಂದನ ; ವಿಲರಾಕೃಷ್ಣ*) ಎಂದು ಬಣ್ಣಿಸುವಾಗ ಪರತ್ವ ಸೌಲಭ್ಯಗಳ ಈ ಅಪೃಥಕ್ ಸಂಬಂಧವೇ ಎದ್ದು ಕಾಣುವುದು. ಈ ಅವಿಭಾಜ್ಯತೆಯು ಅವರ 'ಅದ್ಭುತ ಶುಭಮುಲುಗಲ' ಮತ್ತು 'ಭೂಸುತಾ ಕರಮುಬಟ್ಟಿ ಭೂಮಿ ವೆಲಯುವಾಡು ನೀವು' ಎಂಬ ವರ್ಣನೆಗಳಲ್ಲೂ ಸ್ಪಷ್ಟವಾಗು ತ್ತದೆ. ಒಟ್ಟಿನಲ್ಲಿ ಈಶ್ವರನು ಪರತ್ವ ಸೌಲಭ್ಯಗಳೆರಡನ್ನೂ ಪ್ರತಿನಿಧಿಸಿದ್ದು—ಈ ಸಂಬಂಧದಿಂದ ಮಾತ್ರ ಲೋಕೋದ್ಧಾರ ಸಾಧ್ಯವೆಂದು ತ್ಯಾಗರಾಜರ ಅಭಿಪ್ರಾಯ.

ದಯೆಯ ಕಾರ್ಯಗಳು ಎರಡು ವಿಧ. ಅವು ನಿಷೇಧಾತ್ಮಕ ಮತ್ತು ಭಾವಾತ್ಮಕ. ಮನುಷ್ಯನ ಅಜ್ಞಾನ, ಪಾಪ ಮತ್ತು ತನ್ಮೂಲಕ ಭವದುಃಖವನ್ನು ಕಳೆಯುವುದು ನಿಷೇಧಾತ್ಮಕ ಕಾರ್ಯ. ದೇವರು ತ್ಯಾಗರಾಜರ ಪ್ರಕಾರ ಅಜ್ಞಾನವೆಂಬ ಅಂಧಕಾರವನ್ನು ನಾಶಗೊಳಿಸುವ ಸೂರ್ಯ.

ಅಜ್ಞಾನ ತಮಮುನು ಅಣಚು ಭಾಸ್ಕರು

(ನಗುಮೋಮು)

ಆತನು ಮಾಯಾಂಬುಧ ಸಮೀರ ಎಂದರೆ ಮಾಯೆಯೆಂಬ ಮೇಘಕ್ಕೆ ವಾಯು ಪ್ರಾಯನು (ಎವರಿತೋ ನೇ ದೆಲ್ಪುದುರಾಮಾ). ಅಲ್ಲದೆ ಅವನು '*ಅಘವನ ಕುಠಾರ ರೂಪ*' ಎಂದರೆ ಪಾಪವೆಂಬ ಅರಣ್ಯಕ್ಕೆ ಕುಠಾರ ಪ್ರಾಯ (ಪಾಹಿಪಾಹಿ ದೀನಬಂಧೋ, ಶರಶರಸಮರೈಕ ಶೂರ). ಈ ಪಾಪಗಳು ಯಾವುವೆಂದು ತ್ಯಾಗರಾಜರು ಇನ್ನೂ ಸ್ಪಷ್ಟ ಪಡಿಸುತ್ತಾರೆ. ಅವರ ಪ್ರಕಾರ ಈಶ್ವರನು ರಾಗಾದಿ ಸಂಹಾರ (ಸುಂದರತರದೇಹಂ) ಕಾಮಾದಿ ಷಡ್ಗುಣಹರ (ನೀದಯರಾವಲೆ) ಮತ್ತು ರಾಗಲೋಭ ಮದಾದಿಗಳನ್ನು

---

* ಈ ಕೃತಿ ವೀಣಾಕುಪ್ಪಯ್ಯರ್ ವಿರಚಿತವಿರಬಹುದೆಂಬ ವಿರಳ ಅಭಿಪ್ರಾಯ ಉಂಟು.

ಹೋಗಲಾಡಿಸಿ ರಕ್ಷಿಸುವ ಬಿರುದಾಂಕಿತ.

**ರಾಗಲೋಭ ಮದಾದುಲಗೊಟ್ಟಿ ರಕ್ಷಿಂಚೇ ಬಿರುದಾಂಕ**

(ನೀದಯಗಲ್ಗುಟೇ)

ಪಾಪವು ನಾಶವಾಯಿತೆಂದರೆ, ಮನುಷ್ಯನಿಗೆ ದುಃಖವು ತಾನೇ ತಾನಾಗಿ ನಾಶ ವಾದಂತೆ. ಈ ಅರ್ಥದಲ್ಲಿ ದೇವರು ಭವತಾರಕನೂ ಹೌದು (ಗತಮೋಹಾಶ್ರಿತ, ಭವನುತ). ಆತನು ಭವವಾರಣ ಮೃಗೇಶ (ದಯಜೂಚುಟಕು). ಎಂದರೆ ಭವವೆಂಬ ಆನೆಗೆ ಸಿಂಹಪ್ರಾಯ. ಆತನು ಭವಜಲಧಿ ಪೋತನೂ ಹೌದು (ಭಜರಾಮಂ ಸತತಂ), ಎಂದರೆ ಭವವೆಂಬ ಸಾಗರವನ್ನು ದಾಟಿಸುವ ಹಡಗು.

ಇನ್ನು, ಶುಭವುಂಟು ಮಾಡುವುದು ದಯೆಯ ಭಾವಾತ್ಮಕ ಕಾರ್ಯ. ದೇವರು ಶುಭ ಫಲದ ಮತ್ತು ಸುಕರ (ಪಾಹಿ ದೀನಬಂಧೋ). ತ್ಯಾಗರಾಜರು ದೇವರನ್ನು ಕ್ಷೇಮ ಕರುಡು ಎಂದು (ಉಂಡೇದಿ ರಾಮುಡೊಕಡು) ಬಣ್ಣಿಸುವಾಗ ಸ್ವಾರಸ್ಯವೊಂದುಂಟು. ಸಾಮಾನ್ಯವಾಗಿ ಕ್ಷೇಮದ ಜೊತೆಗೆ ಯೋಗವೂ ಸೇರಿರುತ್ತದೆ. ಶ್ರೀಕೃಷ್ಣನು ಗೀತೆಯಲ್ಲಿ 'ಯೋಗಕ್ಷೇಮಂ ವಹಾಮ್ಯಹಂ'[೩೩] ಎಂದು ಸಾರುತ್ತಾನೆ. ಶ್ರೀಶಂಕರರ ಪ್ರಕಾರ ಯೋಗ ಎಂದರೆ ಇಲ್ಲದ ವಸ್ತುವನ್ನು—ಅದು ಲೌಕಿಕವಿರಲಿ ಅಥವಾ ಅಧ್ಯಾತ್ಮಿಕವಿರಲಿ—ಅದನ್ನು ಪಡೆಯುವುದೆಂದು ಅರ್ಥ. ಹಾಗೆ ಪಡೆದದ್ದನ್ನು ಕಾಪಾಡಿಕೊಳ್ಳುವುದು ಕ್ಷೇಮ.[೩೪] ತ್ಯಾಗರಾಜರು ದೇವರನ್ನು ಕ್ಷೇಮಕರುಡು ಎಂದು ವಿವರಿಸುವಾಗ ಅದರಲ್ಲಿ ಯೋಗವೂ ಅಂತರ್ಗತ. ದೇವರು ಮನುಷ್ಯನಿಗೆ ಅವನ ಬಳಿಯಲ್ಲಿಲ್ಲದ ವಸ್ತುವನ್ನು ದೊರಕಿಸಿಕೊಡುವುದಷ್ಟೇ ಅಲ್ಲ, ಆ ವಸ್ತುವು ಅವನ ಬಳಿ ಶಾಶ್ವತವಾಗಿ ಇರುವಂತೆ ಮಾಡುತ್ತಾನೆ. ದೇವರು ಮನುಷ್ಯನಿಗೆ ಅನುಗ್ರಹಿಸುವ ವಸ್ತುಗಳ ಪಟ್ಟಿಯನ್ನೂ ತ್ಯಾಗರಾಜರು ನಮ್ಮ ಮುಂದಿಡುತ್ತಾರೆ. ಇದರಲ್ಲಿ ಐಹಿಕ, ಆಮುಷ್ಮಿಕಗಳೆರಡೂ ಸೇರಿವೆ. ದೇವರು ಭಾಗ್ಯದಾಯಕ (ಪಾಹಿ ಪರಮಾತ್ಮ). ಅಭೀಷ್ಟಗಳನ್ನಿತ್ತು ಅವರನ್ನು ಕರುಣಿಸಿ ಕಾಪಾಡುವ ತಾಯಿತಂದೆ.

**ಕಾವಲಸಿನ ಕೋರಿಕಲಿಚ್ಚಿ ನನ್ನುಬಾಲ ಕರುಣಿಂಚಿ ಬ್ರೋಚೇ ತಲ್ಲಿ ತಂಡ್ರಿವಿ**

(ನೀವೇಗಾನಿ ನನ್ನೆವರು)

ಅಷ್ಟೇ ಅಲ್ಲ, ಚಿರಂಜೀವಿತ್ವವನ್ನೂ, ದೇವ ಸೌಲಭ್ಯವನ್ನೂ ಪ್ರಸಾದಿಸುವ ದೈವ ವಾಗಿ ಭೂಲೋಕದಲ್ಲೇ ಇದ್ದಾನೆ.

**ಚಿರಂಜೀವತ್ವಮು ನಿರ್ಜರವರ ಮೋಕ್ಷ* ಮೊಸಂಗುನೇ**
**ಧರ ಭ್ವರಗು ದೇವುಡೇ**

(ಒಕಮಾಟ ಯೊಕ ಬಾಣಮು)

ಒಂದು ವೈಶಿಷ್ಟ್ಯವೆಂದರೆ, ತ್ಯಾಗರಾಜರು ತಮ್ಮ ಕೃತಿಗಳಲ್ಲಿ ದೇವರನ್ನು ಆರೋಗ್ಯ

* ಸಖ್ಯಮೊಸಂಗುನೇ ಎಂಬ ಪಾಠಾಂತರವೂ ಇದೆ.

ಕರನೆಂದು ಉಲ್ಲೇಖಿಸುವುದು (ಪಾಹಿಪರಮಾತ್ಮ). ಯಶಸ್ಸು, ಆಯಸ್ಸು, ಸದ್ಭಕ್ತಿ, ಏಕಾಗ್ರತೆಗಳೊಂದಿಗೆ ಆರೋಗ್ಯವನ್ನೂ ನೀಡುವನಾತ.

**ಯಶಮಾಯುವು ಸದ್ಭಕ್ತಿಯು ಯೇಕಾಂತ ಚಿತ್ತಮು**
**ಸುಶರೀರ ಮೊಸಂಗೆಡು**

(ಏಮಾಣ ತಿಚ್ಚೆದವ್ವೊ)

ದೈವ ಸಾಕ್ಷಾತ್ಕಾರಕ್ಕೆ ಆಯಸ್ಸೊಂದಿದ್ದರೆ ಸಾಲದು, ಭಕ್ತಿ, ಆರೋಗ್ಯ ಸ್ಥಿರಬುದ್ಧಿ ಗಳೂ ಅಗತ್ಯ. ಇದೇ ಅರ್ಥದಲ್ಲೇ ಉಪನಿಷತ್ತೊಂದು '*ನಾಯಮಾತ್ಮಾ ಬಲಹೀನೇನ ಲಭ್ಯಃ*' ಎನ್ನುವುದು.[೩೫] ದೇವರು ಮನುಷ್ಯನಿಗೆ ಇವೆಲ್ಲವನ್ನೂ ಕರುಣಿಸುವನೆಂದರ್ಥ. ಅವನು ಮನುಷ್ಯನಿಗೆ ಇಹಪರಗಳನ್ನೂ, ಅವುಗಳನ್ನು ಗಳಿಸುವ ಸಾಧನಗಳನ್ನೂ ನೀಡು ವನು. ಆತನು ಭುಕ್ತಿ ಮುಕ್ತಿದ (ಸೀತಾ ಕಲ್ಯಾಣ), ನಿರ್ವಾಣ ಫಲದ (ಶ್ರೀರಾಮ ರಾಮ). ತ್ಯಾಗರಾಜರು ಆತನನ್ನು 'ಧರ್ಮಾದಿ ಮೋಕ್ಷಂಬು ದಯಚೇಯು ಘನುನಿ' (ನಗುಮೋಮು) ಎಂದು ಸ್ತುತಿಸುತ್ತಾರೆ. ಹೀಗೆ ಧರ್ಮಾದಿ ಮೋಕ್ಷ ಫಲಗಳನ್ನು ನೀಡುವ ಘನವಂತನು, ಈಶ್ವರ.

ಈಶ್ವರನು ಲೌಕಿಕ ವರಕ್ಕಾಗಿಯೇ ತನ್ನನ್ನು ಆಶ್ರಯಿಸಿದವರಿಗೂ ಮುಕ್ತಿ ನೀಡು ತ್ತಾನೆ. ತ್ಯಾಗರಾಜರ ಪ್ರಕಾರ ಇದಕ್ಕೆ ಪ್ರಹ್ಲಾದ ಮತ್ತು ಧ್ರುವರೇ ಸಾಕ್ಷಿ. ಅಲ್ಪ ಫಲ ಗಳನ್ನು ಆಶಿಸದ ಪ್ರಹ್ಲಾದನಿಗಲ್ಲದೇ, ಲೌಕಿಕ ವರಕ್ಕಾಗಿ ಆಶ್ರಯಿಸಿದ ಧ್ರುವನಿಗೂ ದೇವರು ವರನೀಡಿದ. ಎಂದರೆ ಮನುಷ್ಯನು ಭುಕ್ತಿಗಾಗಿ ಪ್ರಾರ್ಥಿಸಲಿ ಅಥವಾ ಮುಕ್ತಿ ಗಾಗಿ ಪ್ರಾರ್ಥಿಸಲಿ, ಆತನು ಭುಕ್ತಿಮುಕ್ತಿಗಳೆರಡನ್ನೂ ಕರುಣಿಸುವ ಉದಾರಿ (ವರಾ ಲಂದುಕೊಮ್ಮನಿ). ಚಮರೀ ಮೃಗಕ್ಕೆ ಶ್ರೀರಾಮನು ಪ್ರಾಣದಾನ ನೀಡುವಾಗ ಆತನ ದೀನಾರ್ತಿಭಂಜನತ್ವವು ಎದ್ದು ಕಾಣುತ್ತದೆ.[೩೬] ತ್ಯಾಗರಾಜರಿಗೆ ಭಗವಂತನ ಈ ಕೃಪಾ ಕಟಾಕ್ಷವು ಅತ್ಯಗತ್ಯ. ಅವರು

**ಭೋಗದ !** ......................... **ಭವ**
**ರೋಗಹರಣ ! ಶ್ರೀ ತ್ಯಾಗರಾಜನುತ**
**ಸೊಗಸು ಕನುಲತೋ ಬಾಗು ಮೀರನು**
**ವೇಗ ಜೂಡರಾದಾ ?**

(ಇಂದುಕಾ ಪುಟ್ಟಿಂಚಿತಿವಿ)

ಎಂದು ದೇವರನ್ನು ಬೇಡಿಕೊಳ್ಳುತ್ತಾರೆ. ಇಲ್ಲಿ '*ಸೊಗಸು ಕನುಲತೋ ಬಾಗು ಮೀರನು* ಎಂಬ ಶಬ್ದಗಳಲ್ಲಿ ದೇವರು ಜೀವಿಗಳತ್ತ ಕೃಪಾದೃಷ್ಟಿಯನ್ನೇ ಬೀರ ಬೇಕೆಂಬುದು ಭಾವ. ಅವರು ಮತ್ತೊಂದು ಹಾಡಿನಲ್ಲಿ ಇನ್ನೂ ಸ್ಪಷ್ಟವಾಗಿ ಇದನ್ನು '*ತೇಟಕನ್ನುಲತೋ ನನ್ನು ಜೂಡು* (ಮೇಲುಕೋ ದಯಾನಿಧೇ) ತಿಳಿಗಣ್ಣುಗಳಿಂದ ನನ್ನನ್ನು ನೋಡೆಂದು ಪ್ರಾರ್ಥಿಸುತ್ತಾರೆ. ಈಶ್ವರನ ನೇರ ಹಾಗೂ ತೀಕ್ಷ್ಣ ದೃಷ್ಟಿ ಜಗತ್ತನ್ನು ಎಲ್ಲಿ ದಹಿಸಿಬಿಡುವುದೋ ಎಂಬ ಭಯ ಅವರಿಗೆ. ಆದ್ದರಿಂದ ಅವರು

ಈಶ್ವರನ ತಿಳಿನೋಟಕ್ಕಾಗಿ ಹಂಬಲಿಸುವುದು. ಇದು ಜೀವಿಗಳನ್ನು ಸಂಕಷ್ಟದಿಂದ ನಿವಾರಿಸಿ, ಅವರಿಗೆ ಸುಖ ನೀಡುವುದೆಂಬುದು ತ್ಯಾಗರಾಜರ ಇಂಗಿತ.

ದೇವರ ದಯೆಯು ಆತನ ದುಷ್ಟಶಿಕ್ಷೆ ಮತ್ತು ಶಿಷ್ಟರಕ್ಷಣೆಯ ಮೂಲಕ ಎದ್ದು ಕಾಣುತ್ತದೆ (ಏದಿ ನೀ ಬಾಹುಬಲ ಪರಾಕ್ರಮ). ತ್ಯಾಗರಾಜರು ದೇವರನ್ನು ಗಿರಿಜಾ ಬಾಹುನಿ ಎಂದು ವರ್ಣಿಸುವಾಗಲೂ ದೇವರ ದುಷ್ಟ ಶಿಕ್ಷತೆಯು ಎದ್ದುಕಾಣುತ್ತದೆ. ಗಿರಿಜಾ ಎಂದರೆ ಕಬ್ಬಿಣ. ಕಬ್ಬಿಣದಂತಹ ತೋಳುಗಳನ್ನು ಉಳ್ಳವನಾತ. ಈಶ್ವರನು ಅಸುರರೆಂಬ ಮೇಘಕ್ಕೆ ವಾಯುಪ್ರಾಯನು. ಅಸುರ ಜಲದಾಶುಗ (ರಾಮ ರಘು ಕುಲ). ಆತನು ದೈತ್ಯರೆಂಬ ಕತ್ತಲೆಗೆ ಸೂರ್ಯಪ್ರಾಯ. ದಿತಿತನಯತಿಮಿರಸೂರ್ಯ (ಶ್ರೀ ನಾರಸಿಂಹ). ಅಷ್ಟೇ ಅಲ್ಲ, ದೇವರು ಶಿಷ್ಟ ರಕ್ಷಕನೂ ಹೌದು. ಆತನು ರಾಕ್ಷಸ ಭೀಮನಷ್ಟೇ ಅಲ್ಲ, ಅಮರಪಾಲನೂ ಹೌದು. ಕುಮನೋಜನ ಭೀಮನಷ್ಟೇ ಅಲ್ಲ, ಸುಮನೋವಾರಿಧಿ ಸೋಮನೂ ಹೌದು. ಈಶ್ವರನ ಭಕ್ತ ರಕ್ಷಕತ್ವವನ್ನು ತ್ಯಾಗರಾಜರು ಕೆಳಕಂಡ ಕೆಲವು ವಿಶೇಷಣಗಳ ಮೂಲಕ ಸ್ಪಷ್ಟಪಡಿಸುತ್ತಾರೆ. ಈ ವರ್ಣನೆಗಳಿಂದ ದೇವರ ಸೌಲಭ್ಯ ಸ್ವರೂಪವಷ್ಟೇ ಅಲ್ಲ, ತ್ಯಾಗರಾಜರ ವಾಕ್ಪಟುತ್ವವೂ ಎದ್ದುಕಾಣು ತ್ತದೆ.

**ಶರಣಾಗತಾಪ್ತ ಸರ್ವಸ್ವ (ಪರಿಪಾಲಯ)**
**ಶ್ರಿತಜನಶುಭ ಫಲದ (ಮಾಮವ ಸತತಂ)**
**ಪರಮಶಾಂತುಡಟ, ಭಕ್ತಕಾಂತುಡಟ (ಶ್ರೀರಾಮ ಮನೋಹರಮಾ)**
**ಪರಮಭಕ್ತ ವತ್ಸಲ (ಸಾಧಿಂಚೆನೆ)**
**ಸದ್ಭಕ್ತ ಸುಲಭ (ಲಾಲಿಲಾಲಯ್ಯ)**
**ಸದ್ಭಕ್ತ ಮಂದಾರ (ಮಾಕೇಲರಾ)**
**ಪರಮ ಭಾಗವತ ಭಾಗದೇಯ (ಭಜನಸೇಯ)**
**ದಾಸಪೋಷಕ (ಇಂದುಕಾ)**
**ಕಿಂಕರ ಜನಗಣ ತಾಪತ್ರಯ ತಮೋಮಿತ್ರ (ಭಜರೇ ಮಾನಸ)**
**ಆಪ್ತ ಕುಮುದ ಶಶಾಂಕ (ಸುಂದರ ತರದೇಹಂ)**
**ಆಪ್ತ ಸುಲಭ (ಇಂದುಕಾ)**
**ಸುಜನ ಮಾನಾಭಿಮಾನ ಪಾಲನ (ಮಾಪಾಲ ವೆಲಸಿ)**
**ಸುಜನ ಹೃತ್ಪಂಜರಕೀರ (ರಾಮನಿನ್ನೇ)**
**ಸಾಧು ಹೃತ್ಸಾರಸಾಬ್ಜಪಾಲ (ಸಾಮಜ ವರಗಮನಾ)**
**ಮುನಿ ಹೃದಯಾಬ್ಜ ಭೃಂಗ (ರಾಮ ನಿನ್ನುನಮ್ಮಿನ)**
**ತಾಪಸ ಜನ ಮಾನಸ ಧನಮು (ಶ್ರೀಪಪ್ರಿಯ)**

ಈ ಸಂದರ್ಭದಲ್ಲಿ ನಾವೊಂದು ಮುಖ್ಯ ವಿಷಯವನ್ನು ಪ್ರಸ್ತಾಪಿಸುವುದು ಅಗತ್ಯ. ದೇವರು ದುಷ್ಟ ಶಿಕ್ಷಕನೆಂದರೆ ದುಷ್ಟ ಸಂಹಾರಕನೆಂದು ಅರ್ಥವಲ್ಲ. ಆತನು ಅವರನ್ನು

ಶಿಕ್ಷಿಸುವ ಮೂಲಕ ನೈತಿಕವಾಗಿ ಉದ್ಧರಿಸುವನೆಂದು ಅರ್ಥ. ಇದು ತ್ಯಾಗರಾಜರ 'ದಿತಿಜ ಮದ ದಮನ' (ಸುಂದರ ತರದೇಹ), 'ದುರ್ಜನಾಘ ಪುರುಹೂತ' (ಜನಕಜಾ ಸಮೇತ) ಇವೇ ಮೊದಲಾದ ವರ್ಣನೆಗಳಿಂದ ಸ್ಪಷ್ಟವಾಗುತ್ತದೆ. ಇಲ್ಲಿ ದೇವರು ದುರ್ಜನರಿಗೇ ಇಂದ್ರಪ್ರಾಯನಲ್ಲ (ಪುರುಹೂತ). ಮದವೇ ಮುಂತಾದ ಅವರ ಪಾಪ ಗಳಿಗೂ ಆತ ಇಂದ್ರಪ್ರಾಯನಷ್ಟೆ.

ಶಿಕ್ಷೆಯ ಕಾರ್ಯಗಳು ಮುಖ್ಯವಾಗಿ ಮೂರು (ಅ) ಅದು ಇತರರು ತಪ್ಪು ಮಾಡ ದಂತೆ ತಡೆಯುತ್ತದೆ (Preventive). (ಆ) ತಪ್ಪಿತಸ್ಥನು ಶಿಕ್ಷೆಯಲ್ಲಿ ಭಾಗಿಯಾಗುವಂತೆ ಮಾಡುತ್ತದೆ (Retributive). (ಇ) ಕೊನೆಗೆ ಪಶ್ಚಾತ್ತಾಪವನ್ನು ಮೂಡಿಸಿ ಅವನಲ್ಲಿ ನೈತಿಕ ಜಾಗೃತಿಯನ್ನುಂಟು ಮಾಡುತ್ತದೆ (Reformative).

ಒಟ್ಟಿನಲ್ಲಿ ಶಿಕ್ಷೆಯು ಮನುಷ್ಯನ ಪಾಪಗಳನ್ನು ಕಳೆದು ಅವನನ್ನು ಶುದ್ಧನಾಗಿಸು ತ್ತದೆ. ಕೆಲವೊಮ್ಮೆ ಶಿಕ್ಷೆಯಿಲ್ಲದೆ ತೀವ್ರ ಪಶ್ಚಾತ್ತಾಪದ ಮೂಲಕ ಇದು ಸಾಧ್ಯವಾಗುವು ದಾದರೂ, ಸಾಮಾನ್ಯವಾಗಿ ಶಿಕ್ಷೆಯ ಮೂಲಕ ಮಾತ್ರ ಮನುಷ್ಯನಲ್ಲಿ ಪಶ್ಚಾತ್ತಾಪವು ಸಾಧ್ಯ. ತಾನು ಮಾಡಿದ ಅಪರಾಧದಲ್ಲಿ ಅವನೂ ಭಾಗಿಯಾಗುವಂತೆ ಮಾಡಿದಾಗ ಮಾತ್ರವೇ ಇತರರಿಗೆ ತಾನು ಮಾಡಿದ ದ್ರೋಹ ಆತನಿಗೆ ಅರಿವಾಗುವುದು. ಇದೇ ಅಂಶವನ್ನು ರಾಮಾನುಜರು ತಮ್ಮ ಗೀತಾಭಾಷ್ಯದಲ್ಲಿ ಸ್ಪಷ್ಟಪಡಿಸುವುದು. ಅವರ ಪ್ರಕಾರ ಮನುಷ್ಯನು ಶಿಕ್ಷೆಯ ಮೂಲಕ ತನ್ನ ದುಷ್ಟತನವನ್ನು ಕಳೆದುಕೊಂಡು, ಹೊಸ ಜನ್ಮದಲ್ಲಿ ಶಿಷ್ಟನಾಗುವನು. ಈ ದಿಶೆಯಲ್ಲಿ ಶಿಕ್ಷೆಯು ದುಷ್ಟತನವನ್ನು ಕಳೆದು ಒಳ್ಳೆಯವನಾಗಲು ದೇವರು ಮನುಷ್ಯನಿಗೆ ಕಲ್ಪಿಸುವ ಒಂದು ಸದವಕಾಶವಷ್ಟೆ.[೩೭] ಹೀಗೆ ದುಷ್ಟ ಶಿಕ್ಷಣೆಯೂ ಈಶ್ವರನ ಸೌಲಭ್ಯದ ಅಭಿವ್ಯಕ್ತಿಯೇ. ಈ ಕಾರ್ಯದಲ್ಲಿ ಈಶ್ವರನು ಭಕ್ತನಿಗಷ್ಟೇ ಅಲ್ಲ, ದುಷ್ಟನಿಗೂ ಪರೋಕ್ಷವಾಗಿ ಸುಲಭನಾಗುತ್ತಿದ್ದಾನೆ. ಅವನನ್ನು ಉದ್ಧರಿಸಲು ಮುಂದಾಗುತ್ತಾನೆ. ಹೀಗಾಗಿ ದೇವರು ಭಕ್ತ ಸುಲಭ, ಸಜ್ಜನ ಮಾನಸಾಬ್ಧಿ ಸುಧಾಕರನೆಂಬ ತ್ಯಾಗರಾಜರ ಅಥವಾ ಇನ್ನಾವುದೇ ಸಂತರ ವರ್ಣನೆ ಯಿಂದ ಆತ ಪಕ್ಷಪಾತಿಯೆಂದು ತಿಳಿಯುವಂತಿಲ್ಲ. ಎಷ್ಟೇ ಕೆಟ್ಟವರಾದರೂ, ಆತನು ತನ್ನ ಭಕ್ತರಾದ ಕೆಲವರನ್ನು ಮಾತ್ರ ರಕ್ಷಿಸುವನೆಂದೂ ಮತ್ತು ಎಷ್ಟೇ ಒಳ್ಳೆಯವ ನಾದರೂ ತನ್ನ ಭಕ್ತರಲ್ಲದ ಇತರರನ್ನು ಶಿಕ್ಷಿಸುವನೆಂದೂ ಅರ್ಥವಲ್ಲ. ವಾಸ್ತವವಾಗಿ ಆತ ಎಲ್ಲರಿಗೂ ಒಂದೇ. ಬೆಂಕಿಯು ಸರ್ವರಿಗೂ ಸಮನಾಗಿರುವಂತೆ, ಬೆಂಕಿ ತನ್ನ ಸಮೀಪದಲ್ಲಿರುವವರ ಚಳಿಯನ್ನು ಮಾತ್ರ ನೀಗಿಸುವಂತೆ, ದೇವರು ಎಲ್ಲರಿಗೂ ದಯಾಶೀಲನೇ ಆಗಿದ್ದರೂ ಆತನ ದಯೆಯ ಅನುಭವವಾಗುವುದು ಆತನನ್ನು ಭಕ್ತಿ ಯಿಂದ ಆಶ್ರಯಿಸಿದವರಿಗೆ ಮಾತ್ರ.[೩೮] ಆದ್ದರಿಂದ ದೋಷವಿರುವುದು ಮೂಲತಃ ಮನುಷ್ಯನಲ್ಲಿ, ದೇವರಲ್ಲಲ್ಲ. ತ್ಯಾಗರಾಜರೇ ಹೇಳುವಂತೆ ಆತ ಸರ್ವರಿಗೂ ಸಮನು (ಉಂಡೇದಿ ರಾಮುಡೊಕಡು). ಶತ್ರು ಮಿತ್ರರಿಬ್ಬರನ್ನೂ ಸಮನಾಗಿ ಕಾಣುವಾತನೆಂದು ತ್ಯಾಗರಾಜರು ಕೊಂಡಾಡುತ್ತಾರೆ.

**ಶತ್ರುಲ ಮಿತ್ರುಲ ಸಮಮುಗ ಜೂಚಿ.**

(ಎಂದುಕುನಿರ್ದಯು)

ಈ ಭಾವವು ಗೀತೆಯ '*ಸಮೋಹಂ ಸರ್ವಭೂತೇಷು ನಮೇ ದ್ವೇಷ್ಯೋಽಸ್ತಿ ನ ಪ್ರಿಯಃ*'[೩೯] ಎಂಬ ಸಾಲನ್ನು ಪ್ರತಿಬಿಂಬಿಸಿದೆ.

**ಶ್ರೀರಾಮನ ಸೌಂದರ್ಯ ವರ್ಣನೆ ಅಥವಾ ಕಲಾತ್ಮಕ ವರ್ಣನೆ** : ಶ್ರೀರಾಮನ ದಿವ್ಯ ಮಂಗಳ ವಿಗ್ರಹವನ್ನು ಬಣ್ಣಿಸಲು ತ್ಯಾಗರಾಜರಿಗೆ ಶಬ್ದಗಳೇ ಸಾಲದು. '*ಈಯಂದ ಮೀಚಂದ ಮೆಂದ್ಯೆನ ಗಲದಾ ?*' ಎಂಬುದು ಅವರ ಪ್ರಶ್ನೆ (ಶ್ರೀರಾಮ ಜಯರಾಮ). ಶ್ರೀರಾಮನ ಈ ಅಂದ ಚಂದಗಳು ಇನ್ನೆಲ್ಲಾದರೂ ಉಂಟೇ ಎಂಬ ವಿಸ್ಮಯ. ಶ್ರೀರಾಮನು ಸುಕುಮಾರ (ನೀದಯ ರಾವಲೆ ; ಜಯಮಂಗಳಂ). ಕಮನೀಯ (ಕ್ಷೀರಸಾಗರವಿಹಾರ ; ಸೊಗಸುಜೂಡ ತರಮಾ). ಆತ ತನ್ನ ದಿವ್ಯ ಸೌಂದರ್ಯದ ಮೂಲಕ ಮೂರು ಲೋಕಗಳನ್ನು ಸೆಳೆಯುವವನು. ಆದ್ದರಿಂದಲೇ ಆತನಿಗೆ ಜಗದಭಿರಾಮ (ಪಾಹಿ ಪರಮಾತ್ಮಾ ; ಸೀತಾಕಲ್ಯಾಣ) ಮತ್ತು ಲೋಕಾಭಿರಾಮನೆಂದು (ರಘುಕುಲ ಜಲನಿಧಿ) ಹೆಸರು. ಸೌಂದರ್ಯದಲ್ಲಿ ಆತನು ಪಂಚಶರಜನಕ (ನಾದುಪ್ಯೆ ಪಲಿಕೆದರು), ಎಂದರೆ ಮನ್ಮಥನ ತಂದೆ. ತ್ಯಾಗರಾಜರು '*ಕಮ್ಮ ವಿಲ್ತುನಿ ತಂಡ್ರಿ ಮಾ ಚಕ್ಕನಿ ಕಲ್ಯಾಣರಾಮ* ಎಂದು ದೇವರನ್ನು ಸ್ತುತಿಸುತ್ತಾರೆ. ಎಂದರೆ ಪರಮಾತ್ಮನು ನವ ಮನ್ಮಥರೂಪನಾದರೂ (ಮರವಕುರಾ), ಆತನ ಸೌಂದರ್ಯವು ಕೋಟಿ ಮನ್ಮಥರ ರೂಪವನ್ನು ಮೀರಿದುದು.

**ಕೋಟಿ ಮದನ ಲಾವಣ್ಯಮುಲ್ಕೆನ**
**ಸಾಟಿಗಾನಿ ನೀ ದಿವ್ಯರೂಪಮುನು**

(ತಲಿಚಿನಂತನೇ)

**(ಇದೇ ಭಾವಕ್ಕಾಗಿ ನೋಡಿ. ರಾಮಚಂದ್ರನೀದಯ, ಏಟಿಜನ್ಮಮಿದಿ, ಸುಂದರ ತರದೇಹಂ)**

ಜಗತ್ತಿನಲ್ಲಿ ವಸ್ತುವೊಂದನ್ನು ನಾವು ಪ್ರೀತಿಸುವುದು ಅದರಲ್ಲಿ ಅಡಗಿರುವ ಸೌಂದರ್ಯದಿಂದ. ಆ ವಸ್ತುವು ಆನಂದದ ನೆಲೆಯಾಗಿರದೇ ನಾವು ಅದನ್ನು ಪ್ರೀತಿಸುವುದಿಲ್ಲ. ವೇದಾಂತದ ಈ ಗಹನ ಅಂಶವನ್ನು ತ್ಯಾಗರಾಜರು ರಾಮಾಯಣ ದೃಷ್ಟಾಂತದ ಮೂಲಕ ಬಹು ಸ್ವಾರಸ್ಯವಾಗಿ ಮಂಡಿಸುತ್ತಾರೆ. ಅವರ ಪ್ರಕಾರ ಭಗವಂತನು ಆನಂದದ ನೆಲೆಯಾಗಿರದೇ ಭಕ್ತರು ಆತನನ್ನು ಏಕಹೃದಯರಾಗಿ ಸುತ್ತುವರಿಯುತ್ತಿರಲಿಲ್ಲ. ಪ್ರತಿಯೊಬ್ಬ ಭಕ್ತನಿಗೂ ಭಗವಂತನ ದಿವ್ಯಸಾಕಾರದ ಒಂದೊಂದು ಅಂಶದಲ್ಲಿ ಆಕರ್ಷಣೆ. ಆತನ ಸೌಂದರ್ಯದಲ್ಲಿ ಸೀತೆಗೆ, ಓರೆನೋಟದಲ್ಲಿ ಲಕ್ಷ್ಮಣನಿಗೆ, ಸುಂದರ ಮುಖದಲ್ಲಿ ಭರತನಿಗೆ, ಸುಜ್ಞಾನ ರೂಪದಲ್ಲಿ ಶತ್ರುಘ್ನನಿಗೆ ಮತ್ತು ಪಾದಾರವಿಂದಗಳಲ್ಲಿ ಆಂಜನೇಯನಿಗೆ ದಿವ್ಯ ಸುಖವುಂಟು (ಲೇಕನಾ ನಿನ್ನು ಜುಟ್ಟುಕೊನ್ನಾರು). ತ್ಯಾಗರಾಜರೇ ಹೇಳುವಂತೆ ಶ್ರೀರಾಮನು 'ಮೋದರೂಪ' (ರಾಮಶ್ರೀರಾಮಲಾಲಿ)

ನಾಗದೇ ಅವರೆಲ್ಲ ಅವನನ್ನು ಆಶ್ರಯಿಸುತ್ತಿರಲಿಲ್ಲ.

ತ್ಯಾಗರಾಜರು ಪರಮಾತ್ಮನ ಸೌಂದರ್ಯವನ್ನು ಎರಡು ರೀತಿ ವಿವರಿಸುವರು. ಒಂದು ದೇವರ ವಿಶ್ವರೂಪ. ಪರಮಾತ್ಮನ ವಿಶ್ವರೂಪದಲ್ಲೂ ಒಂದು ರೀತಿಯ ಭವ್ಯತೆಯುಂಟು. ಈ ಭೀಮಸೌಂದರ್ಯ ಅಥವಾ ರುದ್ರರಮಣೀಯತೆಯ ಕಲ್ಪನೆಗೆ ಪಾಶ್ಚಾತ್ಯ ಸೌಂದರ್ಯಶಾಸ್ತ್ರದಲ್ಲಿ 'SUBLIME' ಎಂದು ಹೆಸರು. ಲಾಂಜಿನಸ್ ಎಂಬ ಕಲಾತಜ್ಞನು ಹೇಳುವಂತೆ 'ಯಾವುದು ನಮಗಿಂತಲೂ ಉನ್ನತವೋ ಮತ್ತು ಯಾವುದು ನಮ್ಮನ್ನು ಮಾನವ ಪರಿಮಿತಿಗಳಿಂದ ದಾಟಿಸಿ ನಮ್ಮನ್ನು ದಿವ್ಯದ ಸನಿಹಕ್ಕೆ ಕೊಂಡೊಯ್ಯುವುದೋ ಅದೇ ಭವ್ಯ.'[೪೦] ಈ ಅರ್ಥದಲ್ಲಿ ಸತ್ಯ-ಶಿವ-ಸುಂದರನಾದ ಈಶ್ವರ ಮತ್ತು ಆತನಿಂದ ಹೊರಹೊಮ್ಮುವ ಈ ವಿಶ್ವವು ಭವ್ಯವೇ ಸರಿ. ಭವ್ಯದ ಅನುಭವದಲ್ಲಿ ಆನಂದದ ಜೊತೆಗೆ ಭೀತಿಯೂ ಇರುವುದು. ಇದು ಭಯಮಿಶ್ರಿತ ಆನಂದದ ಅನುಭವ. ಈ ವಿಶ್ವವು ಈಶ್ವರ ಶಕ್ತಿಯ ನಿರಂತರ ಹರಿವು. ಆದ್ದರಿಂದಲೇ ಅಲ್ಲಿ ಸೌಂದರ್ಯದ ಛಾಯೆ ಇರುವುದು. ಸೌಂದರ್ಯವೆಂಬುದು ಜಡವಲ್ಲ, ಚೇತನದ ಲಕ್ಷಣ. ಅದು ದೃಶ್ಯ ಮಾಧ್ಯಮ ದಲ್ಲಿ- ಅದೃಶ್ಯದ ಅಭಿವ್ಯಕ್ತಿ. ವಾಸ್ತವವಾಗಿ ಪೂರ್ಣ ಸೌಂದರ್ಯದ ಗ್ರಹಿಕೆಗೆ ದೃಶ್ಯ ಸೌಂದರ್ಯದ ಮೆಚ್ಚುಗೆಯು ಮೊದಲ ಸೋಪಾನ. ಈ ಕಾರಣದಿಂದಲೇ ಕಲೆಯನ್ನು 'ಸತ್ಯಕ್ಕೆ ನಮ್ಮನ್ನು ಕೊಂಡೊಯ್ಯುವ ಸಾಧನ' ಎಂದು ಸಂತರು ಬಣ್ಣಿಸುವುದು. ಭೀಮ ಸೌಂದರ್ಯಕ್ಕೂ, ಸೌಂದರ್ಯಕ್ಕೂ ಮುಖ್ಯವಾದ ಒಂದು ವ್ಯತ್ಯಾಸವುಂಟು. ಭೀಮಸೌಂದರ್ಯ ದಲ್ಲಿ ದೇವರು ಯಾವುದೇ ನಿರ್ದಿಷ್ಟ ಆಕಾರಕ್ಕೆ ಸೀಮಿತನಲ್ಲ. ಇಲ್ಲಿ ಭಕ್ತನಿಗೆ ದೇವರು ವಿಶ್ವರೂಪನಾಗಿ ಗೋಚರಿಸಿ ಅವನಿಗೆ ಭಯಮಿಶ್ರಿತ ಆನಂದವುಂಟಾಗುತ್ತದೆ. ಉದಾ ಹರಣೆಗೆ ಗೀತೆಯಲ್ಲಿ ಅರ್ಜುನನಿಗೆ ಉಂಟಾದ ವಿಶ್ವರೂಪ ದರ್ಶನ. 'ನೀಕಂಟೆ ದೊರಕುನಾ ನಿರುಪಮಗಾತ್ರ' (ಓರಾಮರಾಮ) ಎಂಬ ತ್ಯಾಗರಾಜರ ನುಡಿಯಲ್ಲೂ ಇದೇ ಭಾವ. ಬರಿಯ ಸೌಂದರ್ಯದಲ್ಲಾದರೋ ದೇವರು ಭಕ್ತನಿಗೆ ನಿರ್ದಿಷ್ಟ ಆಕಾರ ದಲ್ಲಿ ಗೋಚರಿಸುತ್ತಾನೆ. ಈ ಎರಡು ರೀತಿಯ ಸೌಂದರ್ಯದಲ್ಲೂ ಆನಂದವಿದೆ ಯಾದರೂ ಒಂದರಲ್ಲಿ ಭಯದ ಲೇಪವಿದ್ದರೆ, ಮತ್ತೊಂದರಲ್ಲಿ ಅದು ಇಲ್ಲ. ಗೀತೆ ಯಲ್ಲಿ ಪರಮಾತ್ಮನ ವಿಭೂತಿವರ್ಣನೆಯಲ್ಲೂ ಭವ್ಯದ ಕಲ್ಪನೆಯಿದೆ. 'ವಿಭು' ಎಂದರೆ ಸರ್ವನಿಯಾಮಕನಾದ ಈಶ್ವರ. ಈಶ್ವರನ ನಿಯಂತ್ರಣಕ್ಕೆ ಒಳಪಟ್ಟ ಬ್ರಹ್ಮಾಂಡವು 'ವಿಭೂತಿ'.[೪೧]

ಒಂದು ವಿಶೇಷವೆಂದರೆ ಶ್ರೀರಾಮನ ದಿವ್ಯಸಾಕಾರವು ಇಂದ್ರಿಯಗಳಿಗೆ ಗ್ರಾಹ್ಯ ವೆಂಬುದು. ಅದು ಇಂದ್ರಿಯ ಗ್ರಾಹ್ಯವಷ್ಟೇ ಅಲ್ಲ, ಇಂದ್ರಿಯಗಳಿಗೆ ಆಹ್ಲಾದಕರವೂ ಹೌದು.

**ಇಂದ್ರಿಯಮುಲುಕು ಆಹ್ಲಾದಮಿಚ್ಚು ರೂಪಮುಗಲ**

**(ನಮ್ಮಕನೇ ಮೋಸಪೋದು)**

**ಕಂಟಿಕಿ ಸುಂದರತರಮಗು ರೂಪಮೇ (ದೃಕ್ ಗೋಚರವಾದರೂಪ)**
**(ಚಕ್ಕನಿ ರಾಜಮಾರ್ಗಮು)**

**ಕನುಲಕು ನೀಸೊಗಸೆಂತೋ ಕ್ರಮ್ಮಿಯುನ್ನದಿ (ಕಣ್ತುಂಬ ನಿನ್ನ ಸೊಗಸೇ ತುಂಬಿದೆ.)**
**(ನಿನ್ನುವಿನಾ ನಾಮದೆಂದು ನಿಲ್ವದೇ)**

**ಜೂಚುಟಕೆಂತೋ ನೀವು ಸುಂದರಮೂರ್ತಿವನುಚು (ನೋಡಲು ನೀನೆಷ್ಟೋ ಸುಂದರ ಮೂರ್ತಿಯೆಂದು)**
**(ಕೋರಿವಚ್ಚಿತಿನಿ)**

ಶ್ರುತಿಯು ಪರಮಾತ್ಮನನ್ನು ಇಂದ್ರಿಯಾತೀತನೆನ್ನುವಾಗ, ಆತನನ್ನು ಇಂದ್ರಿಯಗಳಿಂದ ಪೂರ್ಣವಾಗಿ ಗ್ರಹಿಸಲು ಅಸಾಧ್ಯನೆಂದು ಅರ್ಥವೇ ಹೊರತು, ಇಂದ್ರಿಯಗಳಿಂದ ಕಾಣಲು ಸಾಧ್ಯವೇ ಇಲ್ಲವೆಂದು ಅರ್ಥವಲ್ಲ. ದೇವರು ಇಂದ್ರಿಯಗಳಿಗೆ ಪೂರ್ಣವಾಗಿ ಅಲ್ಲದಿದ್ದರೂ ಗ್ರಾಹ್ಯವಂತೂ ಸರಿ. ಇದನ್ನು ಸೂಚಿಸಲು ತ್ಯಾಗರಾಜರು ಒಂದೆಡೆ—

**ವೇಣುಗಾನ ಲೋಲುನಿಗನ ವೇಯಿಕನ್ನುಲು ಕಾವಲೆನೇ**
**(ವೇಣುಗಾನಲೋಲುನಿ)**

ಎನ್ನುತ್ತಾರೆ. ಎಂದರೆ ವೇಣುಗಾನ ಲೋಲನಾದ ಶ್ರೀ ಕೃಷ್ಣನ ದಿವ್ಯ ಸೌಂದರ್ಯವನ್ನು ಆಸ್ವಾದಿಸಲು ಅವರಿಗೆ ಎರಡು ಕಣ್ಣುಳು ಸಾಲವು ಸಾವಿರ ಕಣ್ಣುಳು ಬೇಕು. ಮತ್ತೊಮ್ಮೆ ಸಾವಿರವಿರಲಿ, ವೆಂಕಟೇಶನನ್ನು ಸೇವಿಸಲು ಅವರಿಗೆ ಹತ್ತು ಸಾವಿರ ಕಣ್ಣುಳೇ ಅವಶ್ಯಕ (ವೆಂಕಟೇಶನಿನ್ನು ಸೇವಿಂಪನು). ಎಂದರೆ ಆತನ ದಿವ್ಯ ಸಾಕಾರವನ್ನು ನೋಡುತ್ತಿದ್ದಷ್ಟೂ ನೋಡುತ್ತಲೇ ಇರಬೇಕೆಂಬ ತೀವ್ರ ಹಂಬಲವಿದೆ, ಅವರಿಗೆ. ಹಾಗೆ ನೋಡಿದಷ್ಟೂ ಅದರ ಸವಿ ವೃದ್ಧಿಯಾಗುತ್ತಲೇ ಇದೆ.

**ಕನಕನರುಚಿರಾ ಕನಕವಸನ ನಿನ್ನು**
**(ಕನಕನರುಚಿರಾ)**

ಆದರೆ ಒಂದು ವಿಷಯವಿಲ್ಲಿ ಗಮನಾರ್ಹ. ಈಶ್ವರನನ್ನು ಕಾಣಲು ನಮ್ಮ ಇಂದ್ರಿಯಗಳು ಪರಿಶುದ್ಧವಿರಬೇಕು. ಇದಕ್ಕೆ ತಪಸ್ಸು, ಪೂಜೆಗಳು ಅಗತ್ಯ. ಇವು ದೇವರಲ್ಲಿ ಈ ಮೊದಲೇ ಇಲ್ಲದ ಸೌಂದರ್ಯವನ್ನು ಹೊಸದಾಗಿ ಸೃಷ್ಟಿಸಲಾರವು. ಅವು ದೇವರಲ್ಲಿ ಈಗಾಗಲೇ ಇರುವ ಸೌಂದರ್ಯವನ್ನು ಕಾಣಲು ಬುದ್ಧಿ-ಇಂದ್ರಿಯಗಳನ್ನು ಶುದ್ಧಗೊಳಿಸುವುವು.

ತ್ಯಾಗರಾಜರು ಒಂದೆಡೆ, ಮುನಿಗಳಿಗೆ ಶ್ರೀರಾಮನ ಸೌಂದರ್ಯದ ದರ್ಶನವು ಹೇಗಾಯಿತೆಂದು ಸೋಜಿಗಪಟ್ಟಿದ್ದಾರೆ. ಅದು ಶುದ್ಧಚಿತ್ತದ ಬ್ರಾಹ್ಮಣರ ಆಶೀರ್ವಾದದ ಫಲವೊ ? ಮುನಿಗಳ ಪೂಜಾನಿಷ್ಠೆಯ ಫಲವೋ ? ಅವರ ಪೂರ್ವ ತಪಃಫಲವೋ ? ಅಥವಾ ಸ್ವಭಾವತಃ ಶ್ರೀರಾಮನ ದಿವ್ಯಸಾಕಾರವೇ ಅವರನ್ನು ಆಕರ್ಷಿಸಿದೆಯೋ ?

ಒಂದರ್ಥದಲ್ಲಿ ಇವೆಲ್ಲವೂ ಕಾರಣ ಎಂಬುದು ಧ್ವನಿ. ಶ್ರೀರಾಮನು ಮೂಲತಃ ಲಾವಣ್ಯ ಸ್ವರೂಪನಷ್ಟೆ ಅಲ್ಲ, ಆ ಲಾವಣ್ಯವನ್ನು ಆಸ್ವಾದಿಸಲು ಭಕ್ತರಿಗೆ ತಪಸ್ಸು, ಪೂಜೆಗಳೂ ಅಗತ್ಯವೆಂಬುದಿಲ್ಲ ಹಿನ್ನೆಲೆ. (ಮುದ್ದು ಮೋಮು ಏಲಾಗುಚೆಲಂಗೆನೋ).

ತ್ಯಾಗರಾಜರು ಒಂದೆಡೆ ಹೀಗೆ ಸಾರುತ್ತಾರೆ.

**ಕನುಲಕು ಚೆಲುವ ಚೆವುಲಕಮೃತಮು**
**ವಿನು ರಸನಕುರುಚಿ ಮನಸುಕು ಸುಖಮು**
**ತನುವುಕು ಸಾನಂದಮುನು ಗಲ್ಗ ಜೇಸೇ .......**
**ನಿನುಬಾಸಿ ಯೆಟ್ಲಯುಂದುರೋ ನಿರ್ಮಲಾತ್ಮುಲೌ ಜನುಲು.**

(ನಿನುಬಾಸಿಯೆಟ್ಲಯುಂ**ದುರೋ**)

ಕಣ್ಣಳಿಗೆ ಹಿತವಾದ, ಕಿವಿಗಳಿಗೆ ಅಮೃತವಾದ, ನಾಲಗೆಗೆ ರುಚಿಯಾದ, ಮತ್ತು ಮನಸ್ಸು ದೇಹಗಳಿಗೆ ಮುದನೀಡುವ ನಿನ್ನನ್ನು ಬಿಟ್ಟು ನಿರ್ಮಲಾತ್ಮರು ಹೇಗಿರುವರು? ತ್ಯಾಗರಾಜರ ಈ ವರ್ಣನೆಯಲ್ಲಿ ಮುಖ್ಯವಾಗಿ ಮೂರು ಅಂಶಗಳುಂಟು.

(೧) ಸೌಂದರ್ಯಾನುಭವದಲ್ಲಿ ದೃಶ್ಯ, ಶ್ರವಣಗಳಲ್ಲದೇ ರಸನವೂ ಪಾಲ್ಗೊಂಡಿದೆ. ಸಾಮಾನ್ಯವಾಗಿ ನಾವು ಕಣ್ಣು ಕಿವಿಗಳ ಮೂಲಕವೇ ಲೌಕಿಕ ಸೌಂದರ್ಯವನ್ನು ಆಸ್ವಾದಿಸುವುದು. ಆದರಿಲ್ಲಿ ರಸನವೂ ಸೇರಿರುವುದೊಂದು ವಿಶೇಷ.

(೨) ಇಲ್ಲಿ ಇಂದ್ರಿಯಗಳು ಪಾಲ್ಗೊಂಡಿದ್ದರೂ, ಅದು ಇಂದ್ರಿಯ ತೃಷ್ಣೆಯಿಲ್ಲದ ಸ್ಥಿತಿ. ಏಕೆಂದರೆ ಇಲ್ಲಿ ಇಂದ್ರಿಯಗಳು ಪರಿಶುದ್ಧವಾಗಿವೆ.

(೩) ಇಲ್ಲಿ ಇಂದ್ರಿಯಗಳಷ್ಟೇ ಅಲ್ಲ, ಮನಸ್ಸು ಮತ್ತು ದೇಹಗಳೂ ಪಾಲ್ಗೊಂಡಿವೆ. ಭಗವಂತನ ಸಾಕಾರದಿಂದ ಹೊರಹೊಮ್ಮುವ ಶುದ್ಧ ಸಂವೇದನೆಗಳು ಇಂದ್ರಿಯಗಳ ಮೂಲಕ ಮನಸ್ಸನ್ನು ಹೊಕ್ಕು ಅಲ್ಲಿಂದ ಕರ್ಮೇಂದ್ರಿಯಗಳನ್ನು ತಲುಪಿ, ತನ್ಮೂಲಕ ಭಕ್ತನ ಇಡೀ ಮನೋದೈಹಿಕ ಸರಕೀರ್ಣತೆ ಪಾಲ್ಗೊಳ್ಳುವಂತಾಗುತ್ತದೆ. ಪರಮಾತ್ಮನ ದಿವ್ಯ ಸೌಂದರ್ಯವು ಮನುಷ್ಯನ ಯಾವುದೇ ಒಂದು ಭಾಗಕ್ಕೆ ಅಥವಾ ಅಂಗಕ್ಕೆ ಮಾತ್ರ ಮುದನೀಡುವಂತಹುದಲ್ಲ. ಅದು ಇಂದ್ರಿಯಗಳು, ದೇಹ-ಮನಸ್ಸು ಹಾಗೂ ದೇಹದ ಪ್ರತಿಯೊಂದು ಕಣವನ್ನು ಆನಂದದ ಹೊನಲಿನಲ್ಲಿ ಮುಳುಗಿಸುವಂತಹುದು.

ಆದರೆ ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ಪರಮಾತ್ಮನು ಇಂದ್ರಿಯ ಗ್ರಾಹ್ಯನಾದರೂ ಆತನು ಇತರ ಇಂದ್ರಿಯ ವಿಷಯಗಳಂತೆ ಮನುಷ್ಯನ ಅಧಃಪತನಕ್ಕೆ ಕಾರಣನಲ್ಲ. ಬದಲಾಗಿ ಆತ ಮನುಷ್ಯನನ್ನು ಆಧ್ಯಾತ್ಮಿಕ ಉತ್ತುಂಗಕ್ಕೆ ಏರಿಸುವಂಥವನು. ಆದ್ದರಿಂದಲೇ ತ್ಯಾಗರಾಜರು ಆತನನ್ನು ಶುಭಾಕಾರ (ರೇ ಮಾನಸ; ಸುಂದರತರ), ಮಂಗಳಕರ ರೂಪ (ರಾಮಾ ನಿನ್ನು ನಮ್ಮಿನ), ಶ್ರೀಕರರೂಪ (ಪಾಹಿ ರಾಮಚಂದ್ರ), ದಿವ್ಯ ಸುಂದರ (ನಗುಮೋಮು) ಎಂದು ನಾನಾ ವಿಧವಾಗಿ ವರ್ಣಿಸುವುದು.

ಇನ್ನು ದೇವರ ದಿವ್ಯಮಂಗಳ ವಿಗ್ರಹದ ವರ್ಣನೆಯಲ್ಲಿ ಎರಡನೆಯ ವಿಧ. ಇಲ್ಲಿ ತ್ಯಾಗರಾಜರು ಶ್ರೀರಾಮನ ಸಾಕಾರವನ್ನು ಇಡಿಯಾಗಿಯೂ ಮತ್ತು ಬಿಡಿಯಾಗಿಯೂ ವಿವರಿಸುತ್ತಾರೆ. ಎಂದರೆ ಅವರು ಈಶ್ವರನ 'ಅವಯವಿ' ಮತ್ತು 'ಅವಯವ' ಶೋಭೆ ಗಳೆರಡನ್ನೂ ಬಣ್ಣಿಸುತ್ತಾರೆ. ದೇವರ ಅವಯವಿ ಶೋಭೆಗೆ ಲಾವಣ್ಯವೆಂದೂ, ಅವ ಯವ ಶೋಭೆಗೆ ಸೌಂದರ್ಯವೆಂದೂ ಹೆಸರು.[೨]

ತ್ಯಾಗರಾಜರು ಶ್ರೀರಾಮನ ಲಾವಣ್ಯವನ್ನು ಇಡಿಯಾಗಿ ವಿವರಿಸುವ ಕೃತಿಗಳ ಪಟ್ಟಿ ಯೊಂದನ್ನೇ ನೀಡುವರು. ಲಾವಣ್ಯರಾಮ ; ಮೇರು ಸಮಾನಧೀರ ; ಸೊಗಸುಜೂಡ ತರಮಾ ;ಎಂದು ಕೌಗಿಲಿಂತುರಾ ; ಮರವಕುರಾ ನವ ಮನ್ಮಥರೂಪುನಿ ; ದೊರಕುನಾ ಇಟುವಂಟಿಸೇವ—ಇವು ಅವುಗಳಲ್ಲಿ ಕೆಲವು. ಶ್ರೀರಾಮನ ಪಾದಗಳು, ಕರಗಳು, ಕಾಂತಿ ಯುತ ಕಪೋಲಗಳಿಂದ ಕೂಡಿದ ವದನ, ಅಧರಗಳು, ವಕ್ಷಸ್ಥಳ, ಕಿರುನಗೆ, ತಿಳಿಗಣ್ಣು, ಕರಧೃತ, ಶರಕೋದಂಡಗಳ ಅಪಾರ ಸೌಂದರ್ಯದ ವರ್ಣನೆಯಿರುವ ಒಂದು ಕೃತಿ ಹೀಗಿದೆ.

ಸೊಗಸುಜೂಡ ತರಮಾ ನೀ
ನಿಗನಿಗಮನುಚು ಕಪೋಲಯುಗಮುಚೇ ಮೆರಯುಮೋಮು
ಅಮರಾರ್ಚಿತ ಪದಯುಗಮೋ
ಅಭಯಪ್ರದ ಕರಯುಗಮೋ
ಕಮನೀಯ ತನುನಿಂದಿತ ಕಾಮ
ಕಾಮರಿಪುನುತ ನೀ
ವರಬಿಂಬಾ ಸಮಾಧರಮೋ
ವಕುಳ ಸುಮಂಬುಲಯುರಮೋ
ಕರಧೃತ ಶರಕೋದಂಡ
ಮರಕತಾಂಗ । ವರಮ್ಮೈನ
ಚಿರುನವ್ವೊ ಮುಂಗುರುಲೋ
ಮರಿಕನ್ನುಲ ತೇಟೋ
ವರತ್ಯಾಗರಾಜಾರ್ಚಿತ
ವಂದನೀಯ ಇಟುವಂಟಿ

(ಸೊಗಸುಜೂಡತರಮಾ)

ಹೀಗೆಯೇ ತ್ಯಾಗರಾಜರು ಶ್ರೀರಾಮನ ಸಾಕಾರವನ್ನು ಬಿಡಿಯಾಗಿಯೂ ವರ್ಣಿಸು ತ್ತಾರೆ. ಆತನ ಪಾದ, ತೊಡೆ, ಮುಖ, ನೋಟ ಇತ್ಯಾದಿಗಳ ಬಿಡಿವರ್ಣನೆಯೂ ಅವರ ಕೃತಿಗಳಲ್ಲಿವೆ. ಅವರ ಪ್ರಕಾರ ಪರಮಾತ್ಮನ ಶರೀರವು ರಮಣೀಯ (ಸುಜನಜೀವನ; ಸೀತಾಕಲ್ಯಾಣ ; ಕಮಲಾಪ್ತಕುಲ). ಅದರಲ್ಲಿ ಒಂದಾದರೂ ಕಳಂಕವಿಲ್ಲ. ಆದ್ದ ರಿಂದಲೇ ಅದು ಸುದೇಹ (ಜಯಮಂಗಳಂ). ಶರೀರವು ಹೆಚ್ಚು ಕಡಿಮೆ ಮೂರು

ವಸ್ತುಗಳನ್ನು ಹೋಲುತ್ತದೆ. (ಅ) ಕಪ್ಪುಮೋಡ. ಆತನದು ದಾರಾಧರ ನಿಭದೇಹ (ರಾಮಾ ನೀವೇಗಾನಿ ; ರಾಮಾನಿನ್ನುನಮ್ಮಿನ ; ಶ್ರೀರಾಮರಾಮ ; ನೀದಯಗಲ್ಗುಟೇ; ರಾಮುನಿ ಮರವಕವೇ ; ಪಾಹಿರಾಮಚಂದ್ರ ; ರಾಮಸಮಯಮು)(ಆ) ಮರಕತಮಣಿ ಎಂದರೆ ನೀಲಮಣಿ (ನಿರವಧಿ ಸುಖದ ; ಮಾಮವ ರಘುರಾಮ) (ಇ) ಎಳೆಯ ಗರಿಕೆಯದಳ. ಪರಮಾತ್ಮನು ದೂರ್ವಾದಳ ನೀಲ ಎಂದರೆ ಆತನ ಶರೀರವು ಎಳೆ ಗರಿಕೆಯ ದಳದ ಬಣ್ಣ ಹೊಂದಿದೆ (ಸುಂದರತರ ದೇಹಂ); ಶ್ರೀರಾಮನು ವರ ಪೀತಾಂಬರಧಾರಿ, ಕನಕಮಯ ಚೇಲ (ಲಾಲಿಲಾಲಯ್ಯ; ರಾಮಾ ನಿನ್ನು ನಮ್ಮಿನ; ಏಲಾ ನೀದಯರಾದು ; ಸಾಧಿಂಚೆನೆ ; ಅನುಪಮ ಗುಣಾಂಬುಧಿ).

ದೇವರ ಪಾದವು ಕಮಲದ ಬಣ್ಣವನ್ನು ಹೋಲುವಂತಹುದು. ಆತನು ಜಲಜಾರುಣ ಚರಣ (ರಘುಕುಲ). ಅರುಣಾಬ್ಜ ನಿಭಚರಣ (ಲಾಲಿಲಾಲಯ್ಯ). ಆತನ ಕಟಿಯಲ್ಲಿ ಬಂಗಾರದ ಉಡುದಾರವು ಮೆರೆಯುತ್ತಿದೆ. ಅಬ್ಜನಾಭನಾದ ಆತನು ಆಜಾನುಬಾಹು. ಎಂದರೆ ಆತನ ಬಾಹುಗಳು ಜಾನು ಅಥವಾ ಮಂಡಿಯನ್ನು ಮುಟ್ಟುವಷ್ಟು ದೀರ್ಘವಾಗಿವೆ. ಭುಜಗಳು ಚಿನ್ನದ ತೋಳಬಂದಿಗಳಿಂದ ಭೂಷಿತವಾಗಿವೆ. ಕನಕ ಕೇಯೂರ (ರಾಮನಿನ್ನೇ) ಕರಗಳಲ್ಲಿ ಶರಚಾಪಗಳು ಶೋಭಿಸುತ್ತಿವೆ (ಲಾಲಿಲಾಲಯ್ಯ; ರಘುಪತೇ). ಕರಕಲಿತ ಶರಚಾಪ. ಕತ್ತಿನಲ್ಲಿ ಮುತ್ತಿನಹಾರ (ರಾಮನಿನ್ನೇ) ಮತ್ತು ನವ್ಯವನಮಾಲಿಕೆಯೂ (ಏಲಾ ನೀದಯರಾದು) ರಾರಾಜಿಸುತ್ತಿವೆ. ಆತನ ನಡಿಗೆಯಲ್ಲಿ ಮದಿಸಿದ ಆನೆಯ ಗತ್ತಿದೆ. ಆತನು ಸಾಮಜವರಗಮನ. ಅಷ್ಟೇ ಅಲ್ಲ ವೈಯ್ಯಾರವೂ ಆತನ ನಡಿಗೆಯಲ್ಲಿದೆ (ಮೇರು ಸಮಾನಧೀರ).

ಇನ್ನು ಪರಮಾತ್ಮನ ಮುಖವೋ ಕಮನೀಯವಾದುದು. (ರಾಮನಿನ್ನೇ; ರಾಮಾ ನೀವೇ ; ಜಯಮಂಗಳಂ). ಆತನದು ಸ್ವಚ್ಛವಾದ ಕನ್ನಡಿಯಂತೆ ಹೊಳೆಯುವ ಕಪೋಲಗಳಿಂದ ಕೂಡಿದ ಮುದ್ದು ಮುಖ.

**ಅದ್ದಂಪು ಚೆಕ್ಕಿಳ್ಳ ಚೇ ಮುದ್ದುಗಾರು ಮೋಮು**

**(ಕದ್ದನುವಾರಿಕಿ ಕದ್ದು)**

ಆತನ ಮುದ್ದು ಮುಖವು ಸ್ಥೂಲವಾಗಿ ಎರಡು ವಸ್ತುಗಳನ್ನು ಹೋಲುತ್ತದೆ. ಅವು ಅರಳಿದ ತಾವರೆ (ವಾರಿಜನಯನ ; ಚಲ್ಲಗನಾತೋ) ಮತ್ತು ಹುಣ್ಣಿಮೆಯ ಚಂದ್ರ (ಸುಂದರ ದಶರಥ ನಂದನ). ಆತನು ಸಂಪೂರ್ಣ ಶಶಿವದನ (ಲಾಲಿಲಾಲಯ್ಯ) ಸುಧಾಕರವದನ (ಪಾಹಿ ರಾಮಚಂದ್ರ ; ವರಲೀಲಾ ಗಾನಲೋಲ ; ಶ್ರೀರಘುವರ ದಾಶರಥೇ ; ಸಾಕೇತ ನಿಕೇತನ ; ರಾಮನಾಮಂ ಭಜರೇ ; ಸಾಕ್ಷಿಲೇದನುಚು). ಶ್ರೀರಾಮನದು ಪಾಲುಗಾರು ಮೋಮು ಎಂದರೆ ಹಾಲಿನಂಥ ಮುಖ. ತ್ಯಾಗರಾಜರು ಆತನನ್ನು 'ಚುಕ್ಕಲ ರಾಯುನಿಗೇರು ಮೋಮುಗಲ' ಎಂದು ವರ್ಣಿಸುತ್ತಾರೆ. ಎಂದರೆ ಆತನದು ತಾರೆಗಳ ಒಡೆಯನಾದ ಚಂದ್ರನನ್ನು ಹೋಲುವ ಮುಖ.

ಇನ್ನು ಈ ಮುಖದಲ್ಲಿ ಹೊಳೆಯುವ ಕಣ್ಣುಗಳೋ ಕಮಲ ಅಥವಾ ನೈದಿಲೆಯ

ದಳಗಳನ್ನು ಹೋಲುವಂತಿದೆ. ಚಾರುನೇತ್ರನಾದ ಪರಮಾತ್ಮನು ಶರಜನಯನ. ಶರ ಎಂದರೆ ನೀರು. ಜ-ಹುಟ್ಟಿದುದು ಎಂದರೆ ನೀರಿನಲ್ಲಿ ಹುಟ್ಟಿದ ತಾವರೆಯ ಹಾಗೆ ಆತನ ಕಣ್ಣುಗಳು. ತಾವರೆಯ ದಳದಂತೆ ಸುಂದರ ಹಾಗೂ ಮೋಹಕ. ಆತನ ದೃಷ್ಟಿಯು ತೀಕ್ಷ್ಣವಾಗಿರದೆ ಓರೆನೋಟದೊಂದಿಗಿದೆ. ಪರಮಾತ್ಮನು ಉದ್ದೇಶಪೂರ್ವಕವಾಗಿಯೇ ತನ್ನ ನೋಟವನ್ನು ಓರೆಗೊಳಿಸಿದ್ದಾನೆ.[೪೩] ಈ ನೋಟದಲ್ಲಿ ಮಾದಕತೆ ಇದೆ. ಒಟ್ಟಾರೆ ಆತನ ಕಣ್ಣುಗಳು ಕರುಣಾರಸದಿಂದ ತುಂಬಿದೆ (ಚೆಲಿಮಿನಿ ಜಲಜಾಕ್ಷು ಕಂಟೆ).

ಶ್ರೀರಾಮನು 'ಲಸನ್ಮಕುಟ ವಿರಾಜಿತ' ಎಂದರೆ ಆತನ ಶಿರದಲ್ಲಿ ಪ್ರಕಾಶಮಾನವಾದ ಕಿರೀಟವು ರಾರಾಜಿಸುತ್ತಿದೆ (ಸಾಧಿಂಚೆನೆ). ಹಣೆಯಲ್ಲಿ ಶೋಭಿಸುತ್ತಿರುವ ತಿಲಕವಂತೂ ತ್ಯಾಗರಾಜರಿಗೆ ಆನಂದದ ಮತ್ತುಬರಿಸುವಂತಿದೆ.

**ಸುಮುಖ ಮುನನು ತಿಲಕಮು ಚೆಲಗಗ ಗನಿ ಸೊಕ್ಕನಾಯೆ**

(ರಾರಾ ರಘುವೀರ)

ಇನ್ನು ತುಟಿಗಳಂತೂ ಮಾಧುರ್ಯಪೂರ್ಣವಾಗಿರುವ ಅರುಣ ವರ್ಣದವು (ಭಜನಸೇಯ ರಾದಾ). ಸುರುಚಿರ ದಂತಾವಳಿ. ಅದು ಮಲ್ಲಿಗೆಯ ಮೊಗ್ಗನ್ನು ಹೋಲುತ್ತದೆ. ಆದ್ದರಿಂದಲೇ ತ್ಯಾಗರಾಜರು ಆತನನ್ನು ಕುಂದರದನ (ವರಲೀಲಾ ; ಸುಂದರ ತರ ದೇಹ), ಕುಂದ ಕುಟ್ಮಲರದನ (ಕುವಲಯದಳನಯನ) ಎಂದು ಬಣ್ಣಿಸುವುದು. ಆತನು ದರಹಾಸ. ಎಂದರೆ ಆತನದು ಕಿರುನಗೆಯುಳ್ಳ ಮುದ್ದಾದ ಮೊಗ (ಭಜನಸೇಯ ರಾದಾ). ಇಲ್ಲಿ ಅಟ್ಟಹಾಸವಾಗಲೀ, ಸಿಡುಕಾಗಲೀ ಇಲ್ಲ. ಆತನದು ನಗುಮೋಮು, ಮುದ್ದು ಮೋಮು.

ಶ್ರೀರಾಮನು ಸರಸಗುಣಿ. ಮಾತು ಮಧುರ, ಅದರಲ್ಲಿ ಸುಳ್ಳು, ಹಿಂಸೆಗಳ ಲೇಪವಿಲ್ಲ. ತ್ಯಾಗರಾಜರು ಇದನ್ನು ಸೂಚಿಸಲು ಶ್ರೀರಾಮನನ್ನು ಸುಭಾಷಾ, ಲಲಿತಾಭಾಷಾ, ಮೃದುತರಭಾಷಾ, ಮೃದುಭಾಷಣ ಎಂದು ನಾನಾ ವಿಧವಾಗಿ ಬಣ್ಣಿಸುತ್ತಾರೆ. ಆತನ ಮಾತುಗಳು—ತಂದೆ, ತಾಯಿ, ಅನುಜರು, ಭಾಮೆಯರು, ಪರಿಜನರು, ಪುರಜನರು ಎಲ್ಲರೂ ಆತನ ವಶವಾಗುವಂತೆ ಮಾಡುವಷ್ಟು ಆಕರ್ಷಣೀಯವಾದುದು. ಅದು ಕಲ್ಲುಸಕ್ಕರೆಯನ್ನು ಹೋಲುತ್ತದೆ. ಸಕಲರನ್ನೂ ಪ್ರೀತಿಗೊಳಿಸುವಲ್ಲಿ ಶ್ರೀರಾಮನು ಹೇಗೆ ಮಾತನಾಡಿರಬಹುದೆಂದು ತ್ಯಾಗರಾಜರು ಆತನನ್ನೇ ಪ್ರಶ್ನಿಸುತ್ತಾರೆ.

**ಏಮನಿ ಮಾಟ್ಲಾಡಿತಿವೋ ರಾಮ**
**ಎವರಿ ಮನಸುಕೇ ಏತಮೋ ತೆಲಿಸಿ**

(ಏಮನಿ ಮಾಟ್ಲಾಡಿತಿವೋ)

ಆದ್ದರಿಂದ ತ್ಯಾಗರಾಜರು ಬಲು ಮೆಚ್ಚಿಕೆಯಿಂದ ಹೀಗೆ ನುಡಿಯುತ್ತಾರೆ.

**ನೀದು ಪಲುಕೇ ಪಲುಕುರಾ ನೀದು ಕುಲುಕೇ ಕುಲಕುರಾ**
**ನೀದು ತಳುಕೇ ತಳುಕುರಾ**

(ಎಂದು ಕೌಗಿಲಿಂತುರಾ)

ಭಕ್ತರ ಜಾಡನ್ನು ತಿಳಿದು ಮಾತನಾಡುವ ಜಾಣ (ಚೆಲಿಮಿನಿ ಜಲಜಾಕ್ಷು) ನಾದ ಶ್ರೀರಾಮನ ಮಾತುಗಳಿಗೆ ಸರಿಸಾಟಿಯಿಲ್ಲ. ಈ ಮಾತುಗಳಷ್ಟೇ ಮಂಜುಳ ಆತನ ಧ್ವನಿಯೂ ಸಹ (ಜೋಜೋ ಶ್ರೀರಾಮ).

ಒಟ್ಟಿನಲ್ಲಿ ತ್ಯಾಗರಾಜರಿಗೆ ದೇವರು ಸಗುಣ, ನಿರ್ಗುಣ ಎರಡೂ ಹೌದು. ಅವರು ತಮ್ಮ ಕೃತಿಗಳಲ್ಲಿ ಸಗುಣ, ನಿರ್ಗುಣಗಳ ಸಮನ್ವಯವನ್ನು ಪ್ರತಿಪಾದಿಸುತ್ತಾರೆ. ಮೂಲತಃ ನಿರ್ಗುಣ ನಿರಾಕಾರನಾದ ದೇವರು ತನ್ನ ಭಕ್ತನ ಕರೆಗೆ ಓಗೊಟ್ಟು ಆಕಾರ ಗುಣಗಳನ್ನು ತಳೆಯುತ್ತಾನೆ. ಶ್ರೀರಾಮಕೃಷ್ಣರು 'ನನ್ನ ಜಗನ್ಮಾತೆಯು ವೇದಾಂತದ ಬ್ರಹ್ಮವಲ್ಲದೆ ಬೇರೆಯಲ್ಲ' ಎಂದು ಸಾರಿದಂತೆ, ಕಬೀರನು 'ಸಾಕಾರವು ನನ್ನ ತಾಯಿ, ನಿರಾಕಾರವು ನನ್ನ ತಂದೆ. ಇವುಗಳಲ್ಲಿ, ನಾನು ಯಾವುದನ್ನು ತ್ಯಜಿಸಲಿ ? ತಕ್ಕಡಿಯ ಎರಡು ತಟ್ಟೆಗಳೂ ಸಮವಷ್ಟೆ?' ಎಂದು ಹೇಳಿದಂತೆ,[೪೪] ತ್ಯಾಗರಾಜರಿಗೆ ದೇವರ ನಿರ್ಗುಣ ಸಗುಣಗಳೆರಡೂ ಸಮವಾಗಿ ಸತ್ಯ. ಶಿವ, ಉಪನಿಷತ್ತಿನ ಬ್ರಹ್ಮ, ಕೃಷ್ಣ, ನಾರಸಿಂಹ ಹಾಗೂ ದೇವಿ ಎಲ್ಲವೂ ಅವರಿಗೆ ಶ್ರೀರಾಮನ ಇತರ ರೂಪಗಳೇ ಸರಿ. ಎಂದರೆ ಇವೆಲ್ಲವೂ ಪರ್ಯಾಯಾತ್ಮಕ ಶಬ್ದ-ರೂಪಗಳೇ ಆಗಿವೆ.

## ಟಿಪ್ಪಣಿಗಳು

೧ ೪-೪೦.

೨ ೨-೮-೧.

೩ ೨-೪-೧ ; ೨-೯-೧.

೪ ಕಠೋಪನಿಷತ್ತು ೧-೨-೨೩ ಮತ್ತು ಮುಂಡಕ ಉಪನಿಷತ್ತು ೩-೨-೩.

೫ ಕಠೋಪನಿಷತ್ತು ೧-೨-೯.

೬ ೨-೧-೧೧.

೭ ೬-೨-೧.

೮ ೧-೬-೨.

೯ ೧-೩-೧೪.

೧೦ ೧೫ನೇ ಮಂತ್ರ.

೧೧ ಕಠೋಪನಿಷತ್ತು ೨-೨-೧೫.

೧೨ ಶ್ರೀ ಶಂಕರರ ಗೀತಾಭಾಷ್ಯ ೧೫-೧೨.

೧೩ ೧-೮.

೧೪ ೧-೪-೨.

೧೫ ೨-೭-೧.

೧೬ ಆರನೇ ಅಧ್ಯಾಯ. ಎಂಟರಿಂದ ಹದಿನಾರು ಖಂಡಗಳು—ಪ್ರತಿಯೊಂದು ಖಂಡದ ಕಡೆಯ ಮಂತ್ರದಲ್ಲೂ, ಈ ವಾಕ್ಯ ಉಲ್ಲೇಖಗೊಂಡಿದೆ.

೧೭ ವಿವೇಕ ಚೂಡಾಮಣಿ. ಶ್ಲೋಕ ೧೮-೧೯.

೧೮ ಪುರಂದರರೂ ಕೂಸನು ಕಂಡೀರಾ ಎಂಬ ರಚನೆಯಲ್ಲಿ 'ಆಕಾರವಿದ್ದೂ ನಿರಾಕಾರ ಕೂಸು' ಎಂದು ಹಾಡಿದ್ದಾರೆ. ನೋಡಿ Pathway to God in Kannada Literature—R. D. Ranade. Bharatiya Vidya Bhavan, Bombay, ೧೯೬೦, ಪುಟ ೧೫೯.

೧೯ ಭಗವದ್ಗೀತೆಯ ವಿಭೂತಿಯೋಗದ ೪೧-೪೨ನೇ ಶ್ಲೋಕಗಳನ್ನು ನೋಡಿ.

೨೦ ೨ – ೫– ೧೯.

೨೧ ಶ್ವೇತಾಶ್ವತರ ಉಪನಿಷತ್ತು ೪-೧೦.

೨೨ ೯-೧೯; ಶ್ರೀಲಲಿತಾ ಸಹಸ್ರನಾಮದ ೧೩೦ನೇ ಶ್ಲೋಕವನ್ನೂ ನೋಡಿ.

೨೩. ೨-೭-೧.

೨೪. The Essentials of Indian Philosophy. M. Hiriyanna, George Allen and Unwin Ltd., London, ೧೯೪೯, ಪುಟ ೧೭೭-೧೭೮.

೨೫ ಭಗವದ್ಗೀತೆ. ೭-೭.

೨೬ ವಿಷ್ಣು ಸಹಸ್ರನಾಮದಲ್ಲಿ ಎರಡನೇ ನಾಮ.

೨೭ ಸರ್ವಂ ವಿಧಾತಂ ನಿಜಭೃತ್ಯ ಭೂಷಿತಂ ।
ವ್ಯಾಪ್ತಿಂ ಚ ಭೂತೇಷು ಅಖಿಲೇಶ ಚಾತ್ಮನಿ ॥ ವೇದಾಂತ ದೇಶಿಕರು.

೨೮ ಈ ಕೃತಿಯ ರಚನಕಾರರನ್ನು ಕುರಿತಂತೆ ವಿಭಿನ್ನ ಅಭಿಪ್ರಾಯಕ್ಕಾಗಿ ನೋಡಿ. ತ್ಯಾಗರಾಜ ಕೃತಿ ಮಂಜರಿ, ಸಂಪುಟ ೧, ಡಾ. ವಿ. ಎಸ್. ಸಂಪತ್ಕುಮಾರಾಚಾರ್ಯ. ಗೀತಾ ಬುಕ್ ಹೌಸ್, ಮೈಸೂರು. ೧೯೯೨, ಪುಟ ೧೨೩.

೨೯ ಬ್ರಹ್ಮಸೂತ್ರದ 'ಲೋಕವತ್ತು ಲೀಲಾ ಕೈವಲ್ಯಮ್' ಎಂಬ ಸೂತ್ರದೊಡನೆ ಹೋಲಿಸಿ. ೨-೧-೩೩.

೩೦ ೨-೧-೩೪.

೩೧ ಬೃಹದಾರಣ್ಯಕ ಉಪನಿಷತ್ತು ೩-೨-೧೩.

೩೨ ಬ್ರಹ್ಮಸೂತ್ರ ಭಾಷ್ಯ, ಸ್ವಾಮಿ ವೀರೇಶ್ವರಾನಂದ, ಅದ್ವೈತಾಶ್ರಮ ಮಾಯಾವತಿ, ೧೯೪೮. ಪುಟ ೧೯೫-೧೯೬ ; ಬ್ರಹ್ಮಸೂತ್ರದ 'ಫಲಮತ ಉಪಪತ್ತೇಃ' ಎಂಬ ಸೂತ್ರವನ್ನೂ ನೋಡಿ.

೩೩ ೯-೨೨.

೩೪ *The Bhagavad Gita with the Commentary of Sri Sankarcharya.* Translated into English by A. Mahadeva Sastry, Samata Books, Madras, 1981. Page 252.

೩೫ ಮುಂಡಕ ಉಪನಿಷತ್ತು. ೩-೨-೪.

೩೬ ಚಮರೀ ಮೃಗದ ಕಥೆಗಾಗಿ 'ಪೌರಾಣಿಕ ಅಂಶಗಳು' ಅಧ್ಯಾಯ ನೋಡಿ.

೩೭ *Sri Ramanuja on the Gita.* Prof. S. S. Raghavachar, Sri Ramakrishna Ashrama, Mangalore, 1969, page 49.

೩೮ *The Bhagavad Gita with the Commentary of Sri Sankaracharya,*

Translated into English by A. Mahadeva Sastry, p. 256.

೩೯ ೯-೨೯.

೪೦ *A History of Aesthetics*, Bernard Bosanquet, George Allen and Unwin Ltd., London, 1956, p. 104-105.

೪೧ ಅಧ್ಯಾಯ ೧೦.

೪೨ ಸೌಂದರ್ಯ ಸೌಗಂಧ್ಯ ಲಾವಣ್ಯ ಯೌವ್ವನಾದಿ ಅನಂತಗುಣನಿಧಿ ದಿವ್ಯರೂಪ ಎಂಬ ಶರಣಾಗತಿ ಗದ್ಯದ ಸಾಲಿನಲ್ಲಿ ಸೌಂದರ್ಯ ಮತ್ತು ಲಾವಣ್ಯ ಎಂಬ ಶಬ್ದಗಳಿಗೆ ಸುದರ್ಶನ ಸೂರಿಗಳು "ಸೌಂದರ್ಯಂ ಅವಯವ ಶೋಭಾ" ಎಂದೂ ಮತ್ತು "ಲಾವಣ್ಯಂ ಅವಯವಿ ಶೋಭಾ" ಎಂದು ವ್ಯಾಖ್ಯಾನಿಸುತ್ತಾರೆ. ನೋಡಿ ಶರಣಾಗತಿ ಗದ್ಯಮ್, ಎನ್. ಎಸ್. ಅನಂತರಂಗಾಚಾರ್ಯ (ಸಂ.), ಮೈಸೂರು, ಪುಟ ೧೧.

೪೩ ಓರಜೂಪು ಎಂಬ ಶಬ್ದವನ್ನು ತಾತ್ಪಾರದ ನೋಟ, ಕಡೆಗಣ್ಣ ನೋಟ ಎಂಬ ಅರ್ಥದಲ್ಲೂ ತ್ಯಾಗರಾಜರು ಬಳಸುತ್ತಾರೆ. ನೋಡಿ. ಓರಜೂಪುಜೂಚೆದಿ ನ್ಯಾಯಮಾ? ಕನ್ನಡಗೌಳರಾಗ, ಆದಿತಾಳ.

೪೪ ಉಲ್ಲೇಖ—*Gospel.* of Sri Ramakrishna by M. ಪುಟ ೬೪ ಮತ್ತು ೧೦೦೮.

೧೦

# ಭಕ್ತಿಮಾರ್ಗ

ಕಳೆದ ಅಧ್ಯಾಯದಲ್ಲಿ ದೇವರ ಸ್ವರೂಪವನ್ನು ನಿರೂಪಿಸಲಾಯಿತು. ಈಗ ತ್ಯಾಗ ರಾಜರ ದೃಷ್ಟಿಯಿಂದ ದೇವರನ್ನು ತಿಳಿಯುವ ಸಾಧನದ ಬಗ್ಗೆ ವಿವರಿಸಬೇಕು. ನಮ್ಮ ಸನಾತನ ಧರ್ಮದಲ್ಲಿ ಈ ಸಾಧನಗಳು ಸ್ಥೂಲವಾಗಿ ನಾಲ್ಕು. ಅವು ಕರ್ಮಯೋಗ, ಜ್ಞಾನಯೋಗ, ರಾಜಯೋಗ ಮತ್ತು ಭಕ್ತಿಯೋಗಗಳು.[೧]

ಕರ್ಮಯೋಗವೆಂಬ ಶಬ್ದದಲ್ಲಿ ಕರ್ಮ ಮತ್ತು ಯೋಗ ಎಂಬ ಎರಡು ಪದಗಳಿವೆ. ನಾವು ಮಾಡುವ ಯಾವುದೇ ಕೆಲಸವು ಕರ್ಮವಾದರೆ, ಆ ಕೆಲಸದಲ್ಲಿ ನಮ್ಮನ್ನು ತೊಡಗಿಸಿಕೊಳ್ಳುವುದು (ನಿರತವಾಗುವಿಕೆ) ಯೋಗವಾಗುತ್ತದೆ. ಎಂದರೆ ನಮ್ಮ ಕರ್ತವ್ಯಗಳಲ್ಲಿ ನಿಷ್ಠೆಯಿಂದ ತೊಡಗುವುದೇ ಕರ್ಮಯೋಗ. ಇಲ್ಲಿ ನಾವು ತ್ಯಜಿಸ ಬೇಕಾದ ಒಂದು ಮುಖ್ಯ ಅಂಶವೆಂದರೆ ಕರ್ಮಫಲದ ಆಸೆ. ಫಲಾಫಲಗಳನ್ನು ಭಗವಂತ ನಿಗೆ ಸಮರ್ಪಿಸಿ ನಾವು ಕರ್ತವ್ಯವನ್ನು ನಿಸ್ಪೃಹತೆಯಿಂದ ಮಾಡಬೇಕೆಂಬುದೇ ಕರ್ಮ ಯೋಗ. ಭಗವಾನ್ ಶ್ರೀಕೃಷ್ಣನು ಹೀಗೆ ಹೇಳುತ್ತಾನೆ, 'ನಿನಗೆ ಅಧಿಕಾರವಿರುವುದು ಕರ್ಮದಲ್ಲೇ ಹೊರತು ಕರ್ಮ ಫಲದಲ್ಲಿ ಅಲ್ಲ ; ಯಾವನು ನನ್ನಲ್ಲಿ ಕರ್ಮಗಳನ್ನು ಸಮರ್ಪಿಸಿ ಫಲದಲ್ಲಿ ಆಸಕ್ತಿಯನ್ನು ಬಿಟ್ಟು ಕರ್ಮವನ್ನು ಮಾಡುತ್ತಾನೆಯೋ ಅವನು ತಾವರೆ ಎಲೆಯು ನೀರಿನಿಂದ ಲಿಪ್ತವಾಗದ ಹಾಗೆ, ಪಾಪಗಳಿಂದ ಲಿಪ್ತನಾಗುವುದಿಲ್ಲ.'[೨] ಇದಕ್ಕೆ 'ನಿಷ್ಕಾಮ ಕರ್ಮಯೋಗ' ವೆಂದು ಹೆಸರು. ಗೀತೆಯು ಇದನ್ನು 'ಸಂನ್ಯಾಸ ಯೋಗ'ವೆಂದೂ ಕರೆಯುತ್ತದೆ.[೩] ಇಲ್ಲಿ ಕರ್ಮವನ್ನು ಮಾಡುವುದರಿಂದ ವ್ಯಕ್ತಿಯು 'ಯೋಗಿ' ಎನಿಸಿಕೊಳ್ಳುತ್ತಾನೆ. ಅದರ ಫಲಗಳನ್ನು ತ್ಯಜಿಸುವುದರಿಂದ ಅವನು ಸಂನ್ಯಾಸಿಯೆನಿಸಿಕೊಳ್ಳುತ್ತಾನೆ. ಹೀಗಾಗಿ ಸಂನ್ಯಾಸಯೋಗವೆಂದರೆ ಕರ್ಮದ ಸಂನ್ಯಾಸ ವಲ್ಲ, ಕರ್ಮದಲ್ಲಿನ ಫಲದ ಸಂನ್ಯಾಸ. ಈ ವಿಚಾರವನ್ನು ಆಧುನಿಕ ವಿದ್ವಾಂಸ ರೊಬ್ಬರು ಹೀಗೆ ಮಂಡಿಸುತ್ತಾರೆ. '. . . . the teaching of Gita stands not for renunciation of action, but for renunciation in action.'[೪]

ಈ ವಿಚಾರವನ್ನು ತ್ಯಾಗರಾಜರು ತಮ್ಮ ಅನೇಕ ರಚನೆಗಳಲ್ಲಿ ಮಂಡಿಸುತ್ತಾರೆ. '**ಸುಕೃತಮುಲೊಪ್ಪಗಿಂತುರೇ**' (ಜನರು ತಮ್ಮ ಸುಕೃತಗಳನ್ನು ನಿನಗೆ ಒಪ್ಪಿಸುವರೇ ?– ಕರುಣಾಜಲಧೆ), '**ಕರ್ಮಮುಬಾಸಿ**' (ಕರ್ಮಫಲಗಳನ್ನು ಬಿಟ್ಟು-ಇದೇ ಭಾಗ್ಯಮು). ಮೂಲತಃ ತ್ಯಾಗರಾಜರು ಒಬ್ಬ ಕರ್ಮಯೋಗಿಗಳೇ ಸರಿ. ಅವರು ಒಂದು ರಚನೆ ಯಲ್ಲಂತೂ ಹೀಗೆನ್ನುತ್ತಾರೆ.

**ಅನುದಿನಮೊನರಿಂಚು ಸತ್ಕ್ರಿಯಲ ನೀಕನಿ ಪಲ್ಕಿನ**

**(ಕನ್ನತಲ್ಲಿನೀವು)**

ಎಂದರೆ ಅವರು ಇಲ್ಲಿ ತಾವು ನಿತ್ಯವೂ ಮಾಡುವ ಸತ್ಕ್ರಿಯೆಗಳನ್ನು, ಎಂದರೆ ಅವುಗಳ ಫಲಗಳನ್ನು ದೇವಿಗೆ ಅರ್ಪಿಸುತ್ತಾರೆ. ಅವರ ಈ ಕರ್ಮಗಳು ಫಲಾಪೇಕ್ಷೆಗೆಂದು, ಸ್ವಾರ್ಥಕ್ಕೆಂದು ಆಚರಿಸಲ್ಪಟ್ಟುದಲ್ಲ. ಅವುಗಳ ಹಿನ್ನೆಲೆಯಲ್ಲಿ ಕಪಟದ ಲೇಪವಿಲ್ಲ. ಈ ಮಾತುಗಳನ್ನು ಅವರು ಕಪಟಿಗಳಾಗಿಯೂ ನುಡಿಯಲಿಲ್ಲ.

**ಕಪಟಾತ್ಮುಡೈ ಪಲಿಕಿತಿನೋ ?**

**(ನೇ ಮೊರಪೆಟ್ಟಿತೇ)**

ಒಂದೆಡೆ ತ್ಯಾಗರಾಜರು ಸಂನ್ಯಾಸದ ಚಿತ್ರಣವನ್ನು ಬಹು ಮನೋಜ್ಞವಾಗಿ ವಿವರಿಸುತ್ತಾರೆ. ಅವರ ಪ್ರಕಾರ ಸಂನ್ಯಾಸವೆಂದರೆ ಸಂಸಾರವನ್ನು ತೊರೆದು ಕಾಡಿನಲ್ಲಿರುವುದೆಂದು ಅರ್ಥವಲ್ಲ. ಕಾಡಿನಲ್ಲಿರುವವರೆಲ್ಲರೂ ಸಂನ್ಯಾಸಿಗಳೂ ಅಲ್ಲ. ಸಂಸಾರಿಗಳೆಲ್ಲರೂ ಬದ್ಧರೂ ಅಲ್ಲ. ಒಬ್ಬನು ಕಾಡಿನಲ್ಲಿದ್ದು ಆಂತರಿಕವಾಗಿ ಸಂಸಾರಿಯಾಗಿರಬಹುದು. ಆತನಲ್ಲಿ 'ವಿಷಯತೃಷ್ಣೆ' ಇರಬಹುದು. ಹಾಗೆಯೇ ಒಬ್ಬನು ಸಂಸಾರಿಯಾಗಿದ್ದೂ ಆಂತರಿಕವಾಗಿ ಸಂನ್ಯಾಸಿಯಾಗಿರಬಹುದು. ಆದ್ದರಿಂದ ದೋಷವಿರುವುದು ಸಂಸಾರದಲ್ಲಿ ಅಲ್ಲ, ಅದನ್ನು ಕುರಿತ ನಮ್ಮ ಆಸಕ್ತಿಯಲ್ಲಿ. ತ್ಯಾಗರಾಜರಾದರೋ ಭಗವದ್ಗೀತೆಯು ಹೇಳುವಂತೆ ಪ್ರವೃತ್ತಿ ನಿವೃತ್ತಿ ಮಾರ್ಗಗಳಿಗೆ ಮಧ್ಯೆ ಸುವರ್ಣಮಾಧ್ಯಮವೊಂದನ್ನು ಕಲ್ಪಿಸುತ್ತಾರೆ. ಸಂಸಾರಿಯು ತನ್ನ ಕರ್ತವ್ಯವನ್ನು ಮಾಡಿ ಅದರ ಫಲವನ್ನು ದೇವರಿಗೆ ಅರ್ಪಿಸಬೇಕೆಂದಷ್ಟೇ ಅಲ್ಲ, ಮುಂದುವರಿದು, ಆತನು ತನ್ನ ಸತಿ-ಸುತರನ್ನೂ ಭಗವತ್ಸೇವೆಯಲ್ಲಿ ತೊಡಗಿಸಬೇಕೆಂಬುದು ಅವರ ಬೋಧನೆ. ಭಗವಂತನ ನಾಮಸ್ಮರಣೆ ಮಾಡುವ, ನಾನಾ ಕರ್ಮಫಲಗಳನ್ನು ದಾನ ಮಾಡುವ, ಸತಿಸುತರನ್ನು ಭಗವದ್‌ಕಿಂಕರರಾಗಿಸುವ, ದುಷ್ಟಯೋಚನೆಗಳನ್ನು ದೂರ ಮಾಡಿ ದೇವರನ್ನು ಮನಸಾರ ಪೂಜಿಸುವಾತನು ಸಂಸಾರಿಯಾದರೇನು ಎನ್ನುವಲ್ಲಿ ಸತ್ಕಾರ್ಯಗಳನ್ನು ಎಸಗಿ ಎಲ್ಲವನ್ನೂ ದೇವರಿಗೆ ಅರ್ಪಿಸುವಾತನಿಗೆ ಆಶ್ರಮಭೇದಗಳಿಲ್ಲವೆಂಬುದು ಸ್ಪಷ್ಟ (ಸಂಸಾರುಲೈತೆ ಏಮಯ್ಯ; ಮನಸು ಸ್ವಾಧೀನಮೈನ).

ದೇವರನ್ನು ಕುರಿತ ಶಾಸ್ತ್ರಜ್ಞಾನವೇ ಜ್ಞಾನಯೋಗ. ಇಲ್ಲಿ ಜ್ಞಾನವೆಂದರೆ ಆತ್ಯಂತಿಕ ಅಥವಾ ಅಪರೋಕ್ಷ ಜ್ಞಾನವಲ್ಲ. ಗುರುವಿನ ಮಾರ್ಗದರ್ಶನದಲ್ಲಿ ದೇವರ ಬಗ್ಗೆ ಪಡೆಯುವ ಬೌದ್ಧಿಕ ಜ್ಞಾನವೇ ಜ್ಞಾನಯೋಗ. ಜ್ಞಾನಯೋಗದಲ್ಲಿ ಶ್ರವಣ, ಮನನ ಮತ್ತು ನಿಧಿಧ್ಯಾಸಗಳೆಂಬ ಮೂರು ಹಂತಗಳುಂಟು. ಶ್ರವಣದಲ್ಲಿ ಗುರುವು ಶಿಷ್ಯನಿಗೆ ದೇವರ ಸ್ವರೂಪದ ಬಗ್ಗೆ ಬೋಧಿಸುತ್ತಾನೆ. ಮನನದಲ್ಲಿ ಶಿಷ್ಯನು ಈ ಬೋಧನೆಯ ಬಗ್ಗೆ ಮೂಡುವ ಸಂದೇಹಗಳನ್ನು ವಿಚಾರದ ಮೂಲಕ ನಿವಾರಿಸಿಕೊಳ್ಳುತ್ತಾನೆ. ನಿಧಿಧ್ಯಾಸದಲ್ಲಿ ಹೀಗೆ ನಿಸ್ಸಂದಿಗ್ಧವಾದ ಬೋಧನೆಯನ್ನು ಧ್ಯಾನಿಸುತ್ತಾನೆ. ಈ ಧ್ಯಾನದಲ್ಲಿನ ಸಾಫಲ್ಯವೇ ದೈವಸಾಕ್ಷಾತ್ಕಾರ.

ಆದರೆ ಜ್ಞಾನಯೋಗದ ಅಭ್ಯಾಸವು ನಾವು ತಿಳಿದಿರುವಷ್ಟು ಸುಲಭವಲ್ಲ. ಜೀವನ ನಿರ್ವಹಣೆಯೇ ಕಷ್ಟವಿರುವ ಈ ಕಲಿಗಾಲದಲ್ಲಿ ಜ್ಞಾನಯೋಗದ ಅಭ್ಯಾಸಕ್ಕೆ ಅಗತ್ಯ

ವಾದ ಚಿತ್ತಸ್ಥಿರತೆಯು ಮನುಷ್ಯನಿಗೆಲ್ಲಿದೆ? ಅಲ್ಲದೇ ನಮ್ಮ ಆಯುಷ್ಯವು ಇದರಲ್ಲಿ ಸಫಲತೆಯನ್ನು ಗಳಿಸುವಷ್ಟು ದೀರ್ಘವೂ ಅಲ್ಲ. ಈ ಕಾರಣಗಳಿಂದ ಜ್ಞಾನಯೋಗ ಕ್ಲಿಷ್ಟವಾಗುತ್ತದೆ.

ಕೆಲವರಿಗೆ ಆಪ್ತವಾಕ್ಯದಲ್ಲಿ ನಂಬಿಕೆಯಿಲ್ಲ. ಪ್ರತ್ಯಕ್ಷ ಪ್ರಮಾಣವೊಂದನ್ನು ಮಾತ್ರಾ ಇವರು ಒಪ್ಪುವ ವೈಜ್ಞಾನಿಕ ದೃಷ್ಟಿಯುಳ್ಳವರು. ಇಂತಹವರಿಗೆ ರಾಜಯೋಗವೇ ಸೂಕ್ತ ಮಾರ್ಗ. ಇದರಲ್ಲಿ ಪೂಜಾದಿಗಳನ್ನು ಮಾಡಬೇಕಾಗಿಲ್ಲ. ಮನಸ್ಸಿನ ಏಕಾಗ್ರತೆಯ ಮೂಲಕ ಯಾರು ಬೇಕಾದರೂ ಬ್ರಹ್ಮಜ್ಞಾನ ಪಡೆಯಲು ಅವಕಾಶವೀಯುವುದ ರಿಂದಲೇ ಇದು ರಾಜಯೋಗವೆನಿಸಿದೆ. ಈ ಮಾರ್ಗದಲ್ಲಿ ಎಂಟು ಸೋಪಾನಗಳಿರುವು ದರಿಂದ ಇದನ್ನು 'ಅಷ್ಟಾಂಗಯೋಗ' ವೆಂದೂ ಕರೆಯುವುದುಂಟು. ಈ ಅಷ್ಟಾಂಗ ಸೋಪಾನಗಳು ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ ಮತ್ತು ಸಮಾಧಿ. ಈ ಹಂತಗಳನ್ನು ಹತ್ತುತ್ತಿರುವಾಗಲೇ ಸಾಧನೆಯ ಪ್ರಯೋಜನವನ್ನೂ ಪರೀಕ್ಷಿಸುತ್ತಾ ಹೋಗಬಹುದು. ನಿತ್ಯಾನಂದದ ಸಂಪಾದನೆಗೆ ರಾಜಯೋಗಮಾರ್ಗ ಅನುಸರಿಸಿದವರು ಮಾರ್ಗಮಧ್ಯೆ ಪ್ರಾಪ್ತವಾಗುವ ಸಿದ್ಧಿಗಳಿಂದ ಮೋಸಹೋಗುವ ಸಾಧ್ಯತೆ ಇಲ್ಲುಂಟು. ಪರರನ್ನು ಮೋಸಗೊಳಿಸುವಿಕೆ, ಪರರ ಮನಸ್ಸನ್ನು ಅರಿಯುವಿಕೆ, ಅತೀಂದ್ರಿಯ ಶ್ರವಣ ಹಾಗೂ ದೃಷ್ಟಿ ಇವೇ ಮೊದಲಾದ ಅದ್ಭುತ ಕಾರ್ಯಗಳನ್ನು ಎಸಗುತ್ತಾ ಸಾಕ್ಷಾತ್ಕಾರದ ಹಾದಿಗಾಗಿ ಬಂದ ಯೋಗಿಯನ್ನು ಬೇರೆ ಹಾದಿಗೆ ತಿರುಗಿಸಬಹುದು. ಐಶ್ವರ್ಯ, ಕೀರ್ತಿ, ಇವುಗಳ ಸಂಪಾದನೆಗಾಗಿ ಈ ಸಿದ್ಧಿಗಳನ್ನು ಉಪಯೋಗಿಸುವ ಆಸೆಯುಂಟಾಗಿ ಆತ ಮತ್ತೆ ಸಂಸಾರದ ಬಲೆಯಲ್ಲಿ ಸಿಕ್ಕಿ ನರಳಬೇಕಾಗಬಹುದು.[೫] ಈ ಕಾರಣಗಳಿಂದ ಕತ್ತಿಯ ಅಲುಗಿನ ಮೇಲೆ ನಡೆಯು ವಷ್ಟು ಕಠಿಣತರ ಮಾರ್ಗವಿದು ಎನಿಸುತ್ತದೆ.

ಆದ್ದರಿಂದ ಈ ಕಲಿಗಾಲದಲ್ಲಿ ಅತ್ಯಂತ ಪ್ರಾಯೋಗಿಕವಾದ ವಿಧಾನವೆಂದರೆ 'ಭಕ್ತಿಯೋಗ'. ಶ್ರೀ ರಾಮಕೃಷ್ಣರು ಹೇಳುವಂತೆ ಮನುಷ್ಯನು 'ಭಕ್ತಿ' ಎಂಬ ತೈಲ ದಿಂದ ಮಾತ್ರ 'ಬಂಧನ' ವೆಂಬ ಹಲಸನ್ನು ಬಿಡಿಸಬಲ್ಲ. ಭಕ್ತಿಯೆಂಬ ರಾಸಾಯನಿಕ ವಸ್ತುವಿನ ಲೇಪನದಿಂದ ಮಾತ್ರಾ ಹೃದಯವೆಂಬ ಗಾಜಿನ ಮೇಲೆ ಈಶ್ವರನ ದಿವ್ಯ ಸಾಕಾರವನ್ನು ಆಳವಾಗಿ ಮೂಡಿಸಬಲ್ಲ.[೬]

ಭಕ್ತಿ ಎಂದರೇನು ? ಅದೊಂದು ಜ್ಞಾನದ ಪ್ರಕಾರ. ಆಚಾರ್ಯ ಶಂಕರರ ಪ್ರಕಾರ ಪರಮಾರ್ಥಜ್ಞಾನ ಸ್ವರೂಪದಿಂದ ಕೂಡಿರುವುದೇ ಭಕ್ತಿ. ಉತ್ತಮವೂ ಮತ್ತು ಪರ ಮಾರ್ಥಜ್ಞಾನದಿಂದ ಕೂಡಿರುವುದೂ ಆದ ಭಕ್ತಿಯನ್ನು ಯಾರು ಆಶ್ರಯಿಸುವರೋ ಅವರೇ ಭಕ್ತರು.[೭] ಭಕ್ತಿಗೆ 'ಭಕ್ತಿರ್ಮಹನೀಯ ವಿಷಯೇ ಪ್ರೀತಿಃ' ಎಂಬ ವ್ಯಾಖ್ಯೆ ಯೊಂದುಂಟು. ಎಂದರೆ ಶ್ರೇಷ್ಠ ವಸ್ತುವನ್ನು ಕುರಿತ ಪ್ರೀತಿಯೇ ಭಕ್ತಿ ಎಂಬ ಅರ್ಥ. ಮತ್ತೊಂದು ವ್ಯಾಖ್ಯೆಯಂತೆ ಭಕ್ತಿ ಎಂಬುದು 'ಸ್ನೇಹಪೂರ್ವಕಮನುಧ್ಯಾನಂ ಭಕ್ತಿ ರಿತ್ಯಭಿಧೀಯತೇ' ಎಂಬುದಾಗಿದೆ.[೮] ಎಂದರೆ ಪ್ರೀತಿಪೂರ್ವಕವಾದ ಧ್ಯಾನವೇ ಭಕ್ತಿ.

ಒಟ್ಟಾರೆ ಭಕ್ತಿಯ ಅಂಶಗಳು ಮೂರು. ಒಂದು, ಅದರ ವಿಷಯವು ಸಾಧಾರಣ ವಾಗಿರದೆ ಅಸಾಧಾರಣವಾಗಿದೆ. ಎರಡು, ಅದರಲ್ಲಿ ಧ್ಯಾನ ಇಲ್ಲವೇ ಏಕಾಗ್ರತೆಯಿರು ತ್ತದೆ. ಮೂರು, ಎಲ್ಲಕ್ಕಿಂತಲೂ ಹೆಚ್ಚಾಗಿ ಅದರಲ್ಲಿ 'ಪ್ರೀತಿ' ಇರುತ್ತದೆ. ಸಾಮಾನ್ಯ ವಾಗಿ ನಾವು ವಸ್ತುವೊಂದನ್ನು ಅದನ್ನು ಪ್ರೀತಿಸುವ ಮೂಲಕವೇ ತಿಳಿಯುವುದು. ಪ್ರೀತಿಯಿಲ್ಲದೆ ವಸ್ತುವಿನ ಅರಿವು ಸಾಧ್ಯವಿಲ್ಲ. ಆದರೆ ಶುಷ್ಕ ಏಕಾಗ್ರತೆಯಾಗಲೀ ಅಥವಾ ಭಾವೋದ್ವೇಗವಾಗಲೀ ಭಕ್ತಿಯಲ್ಲ. ಪ್ರೀತಿ ಏಕಾಗ್ರತೆಗಳ ಸಮರಸ ಮಿಳಿತವೇ ಭಕ್ತಿ.

**ಭಕ್ತಿಮಾರ್ಗದ ಹಿರಿಮೆ** : ತ್ಯಾಗರಾಜರು ತಮ್ಮ ಕೃತಿಗಳಲ್ಲಿ ಈ ಮೂಲ ಸಾಧನ ಗಳೆಲ್ಲದರ ಬಗ್ಗೆಯೂ ಪ್ರಸ್ತಾಪಿಸುವರಾದರೂ, ಅವರು ಅತ್ಯಂತ ಹೆಚ್ಚಿನ ಮಹತ್ವ ವನ್ನು ನೀಡುವುದು 'ಭಕ್ತಿಪಥ' ಕ್ಕೆ ಮಾತ್ರ. ಮೂಲತಃ ಭಾಗವತ ಶ್ರೇಷ್ಠರಾದ ಅವರಿಗೆ ಇದು ಸಹಜವೇ. ಅವರ ಇಡೀ ಜೀವನವು ಭಕ್ತಿಯ ಒಂದು ಪ್ರಾಯೋಗಿಕ ಅಭಿವ್ಯಕ್ತಿ. ಅವರ ಸಾಹಿತ್ಯದ ಒಳಹೊರಗೂ ಈ ಗಾಢಭಕ್ತಿಯ ಪರಿಮಳವೇ ಪಸರಿಸಿರುವುದು. ಅವರ ಪ್ರಕಾರ ಭಕ್ತಿಯು ಒಂದು ರಾಜಮಾರ್ಗ. ಇದು ಉಪಲಬ್ಧವಾಗಿರಲು ಸಂದಿತೂರಲೇಕೆಂಬುದು ಅವರ ಪ್ರಶ್ನೆ.

**ಭಕ್ತಿಯನೇ ಚಕ್ಕನಿ**
**ಮಾರ್ಗಮುಲುಂಡಗ**
**ಸಂದುಲತೂರನೇಲ ?**

**(ಚಕ್ಕನಿ ರಾಜ ಮಾರ್ಗಮು)**

ಇಲ್ಲಿ ಭಕ್ತಿಮಾರ್ಗಕ್ಕೆ ಅವರು ನೀಡಿರುವ ಬಹುವಚನ ಸಂಬೋಧನೆಯೂ ಅವರು ಈ ಪಥಕ್ಕೆ ಅಂಟಿಸುವ ಮಹತ್ವವನ್ನು ಸೂಚಿಸುತ್ತದೆ. ಭಕ್ತಿ ಎಂಬ ಅಂತರ್‌ಪ್ರವಾಹವು ಅವರನ್ನು ಒಂದು ಘಳಿಗೆಯೂ ಸುಮ್ಮನಿರಗೊಡದೆ ರಾಮಸಂಕೀರ್ತನೆ ಮಾಡಿಸಿದೆ. ಸ್ವಾನುಭವದಿಂದ ಅವರು ರಾಮಭಕ್ತಿಯೇ ಅವರ್ಣನೀಯ ಸಾಮ್ರಾಜ್ಯವೆಂದೂ, ಆ ಭಕ್ತಿಸಾಗರದಲ್ಲಿ ಈಜುವುದೇ ನಿಜವಾದ ಜನ್ಮವೆಂದೂ ಹಾಡುತ್ತಾರೆ.

**"ರಾಮಭಕ್ತಿ ಸಾಮ್ರಾಜ್ಯ"**

**"ನೀ ಭಕ್ತಿಭಾಗ್ಯಸುಧಾನಿಧಿ ನೀದೇದೇ ಜನ್ಮಮು"**

ಅವರ ಪ್ರಕಾರ ಪರಮಾತ್ಮನಲ್ಲಿ ದೃಢವಾದ ಭಕ್ತಿಪ್ರೀತಿಗಳನ್ನು ಇರಿಸಿದವರ ಭಾಗ್ಯ ಕ್ಕಿಂತ ಮಿಗಿಲಾದುದಿಲ್ಲ.

**"ಆಶನೀಯೆಡ ಕೇಶಭಕ್ತಿಯು ಜೇಸಿನವಾರಿ**
**ಇದೇ ಭಾಗ್ಯಮುಗಾಕ ಯೇಮಿಯುನ್ನದಿ ರಾಮ"**

**(ಇದೇ ಭಾಗ್ಯಮು)**

ಅದರಲ್ಲೂ ಭಕ್ತಿಯಲ್ಲಿ ಶ್ರೇಷ್ಠವಾದುದು ಶ್ರೀರಾಮಭಕ್ತಿ. ಈ ಪಥವನ್ನು ಶಿವನೂ ಅನುಸರಿಸಿದನಲ್ಲದೇ (ಇದೇ ಭಾಗ್ಯಮು) ಅದನ್ನು ವಿರಕ್ತಿಯಿಂದ ಪಾರ್ವತಿಗೂ ಬೋಧಿಸಿದ. ಇದರ ಅಮೋಘ ಶಕ್ತಿಯನ್ನು ನೈಜಭಕ್ತರು ಹೊಗಳುವುದನ್ನು ಕಂಡು ತಾವೂ ಅದರೆಡೆಗೆ ಆಕರ್ಷಿತರಾಗಿದ್ದಾರೆಂಬುದೇ ತ್ಯಾಗರಾಜರ ಮಾತು.

ಭಕ್ತಿಲೋ ಶ್ರೀರಾಮಭಕ್ತಿಮೇಲನಿ ಶಿವ
ಶಕ್ತಿ ಸಂತತಮು ವಿರಕ್ತಿತೋ ನುತಿಜೇಯ
ಶಕ್ತಿ ಜೂಚಿ ನಿಜಭಕ್ತುಲು ಬೊಗಡಗ
ವ್ಯಕ್ತಿನಿ ಜೂಚಿ ನಾಸಕ್ತಿ ಗಲಿಗೆನು

(ನೀವೇ ನನ್ನೆಡಜೇಸಿತೆ)

ಭಕ್ತಿಯು ವಾಸ್ತವವಾಗಿ ಎರಡು ಅರ್ಥಗಳಲ್ಲಿ ರಾಜಮಾರ್ಗ. ಒಂದು, ಅದು ಮನುಷ್ಯನನ್ನು ಸಂಸಾರದಿಂದ ರಕ್ಷಿಸಿ ಅವನಿಗೆ ಮೋಕ್ಷವನ್ನು ದೊರಕಿಸಿಕೊಡುತ್ತದೆ. ಅದರ ಕಾರ್ಯವು ದುಃಖ ನಿವೃತ್ತಿಯ ಜೊತೆಗೆ ಪರಮಸುಖ ಪ್ರಾಪ್ತಿಯೂ ಹೌದು. ತ್ಯಾಗರಾಜರಿಗೆ ಈ ಬಗ್ಗೆ ಎಳ್ಳಷ್ಟೂ ಸಂದೇಹವಿಲ್ಲ. ಏಕೆಂದರೆ ಅವರಿಗೆ ಸ್ವಂತ ಅನುಭವವೇ ಇದಕ್ಕೆ ಪ್ರಮಾಣ. ಅವರೊಬ್ಬ ಸ್ವತಃ ಪ್ರಾಮಾಣ್ಯವಾದಿ. ಈ ಬಗ್ಗೆ ಅವರು ದೇವರ ಸನ್ನಿಧಿಯಲ್ಲೇ ಹೀಗೆ ಪ್ರಮಾಣೀಕರಿಸುತ್ತಾರೆ.

ಪಾವನ ನೀಭಕ್ತಿ ಸದಾಪಾಲಿಂತುನು ಮೋಕ್ಷಮೊಸಗು
ಮಾವರ ನೀಸನ್ನಿಧಿನಿ ಪ್ರಮಾಣಮು ಜೇಸಿ ಬಲ್ಕೆದ

(ರಾಮಾ ನಿನ್ನುವಿನಾ)

ಎರಡನೆಯದಾಗಿ, ಭಕ್ತಿಮಾರ್ಗವು ಹಲವು ಅರ್ಥಗಳಲ್ಲಿ ಸುಲಭ. (ಅ) ಭಕ್ತನ ಭಾವನೆಯೆಲ್ಲವೂ ದೇವರೆಡೆಗೇ ಹರಿದು ಅಲ್ಲಿಯೇ ತನ್ಮಯವಾಗಿ ನಿಗ್ರಹವು ತಾನಾಗಿಯೇ ಸಿದ್ಧಿಸುತ್ತದೆ. ಇಲ್ಲಿ ಸಂಬಂಧ ಮತ್ತು ಭಾವನೆಗಳು ತ್ಯಾಜ್ಯವಲ್ಲ. ಭಕ್ತನು ದೇವರನ್ನು ಯಾವುದೇ ರೀತಿಯ ಸಂಬಂಧದಿಂದ ಕಲ್ಪಿಸಿಕೊಂಡು ಆರಾಧಿಸಬಹುದು. (ಆ) ಭಕ್ತಿಮಾರ್ಗದ ಪಾಲನೆ ಯಾವುದೇ ನಿರ್ದಿಷ್ಟ ವರ್ಗ ಅಥವಾ ಲಿಂಗ ಅಥವಾ ಪ್ರದೇಶಕ್ಕೆ ಸೀಮಿತವಲ್ಲ. ಇಲ್ಲಿ ಮೇಲು-ಕೀಳು, ಸ್ತ್ರೀ-ಪುರುಷ, ಬಡವ-ಬಲ್ಲಿದನೆಂಬ ಭೇದವಿಲ್ಲ. ಭಗವದ್ಗೀತೆಯ ಹೇಳಿಕೆಯಂತೆ ಅತ್ಯಂತ ದುರಾಚಾರಿಯೂ ಇದರಿಂದ ಧನ್ಯನಾಗಬಲ್ಲ.[೯] (ಇ) ಇಲ್ಲಿ ದೇವರನ್ನು ಯಾವುದೇ ಆಕಾರದಲ್ಲಿ ಪೂಜಿಸಬಹುದು.[೧೦] ಒಬ್ಬನ ದೇವರು ಮತ್ತೊಬ್ಬನ ದೃಷ್ಟಿಯಲ್ಲಿ ಕೀಳು ಎಂಬ ಭಾವನೆಗೆ ಇಲ್ಲಿ ಆಸ್ಪದವಿಲ್ಲ. ಈ ಅಂಶಕ್ಕೆ ಸ್ವತಃ ತ್ಯಾಗರಾಜರ ಜೀವನವೇ ಒಂದು ಉದಾತ್ತ ನಿದರ್ಶನ. ಅವರು ಮೂಲತಃ ಶ್ರೀರಾಮಭಕ್ತರಾದರೂ ಇತರ ದೇವತೆಗಳಿಗೂ ಅವರ ಕೃತಿಗಳಲ್ಲಿ ಸ್ಥಾನವಿದೆ. ಅಲ್ಲದೆ ಈ ಕೃತಿಗಳಲ್ಲಿನ ಭಕ್ತಿಗೂ ಶ್ರೀರಾಮನನ್ನು ಕುರಿತ ಅವರ ಭಕ್ತಿಗೂ ಯಾವುದೇ ತಾರತಮ್ಯವಿಲ್ಲ. (ಈ) ಭಕ್ತನು ದೇವರಿಗೆ ಯಾವ ವಸ್ತುವನ್ನಾದರೂ ಅರ್ಪಿಸಬಹುದು. ಇಂತಹುದೇ ನೈವೇದ್ಯವನ್ನು ಅರ್ಪಿಸಬೇಕೆಂದೇನಿಲ್ಲ. ಭಕ್ತಿಯಿಂದ

ಅರ್ಪಿಸಿದ ಎಲೆ, ಹೂವು, ಹಣ್ಣು ಕೊನೆಗೆ ನೀರು ಕೂಡ ದೇವರಿಂದ ಸ್ವೀಕರಿಸಲ್ಪಡುತ್ತದೆ.[೧೧]

ಈಗಾಗಲೇ ತಿಳಿಸಿರುವಂತೆ ಭಕ್ತಿಯು ತ್ಯಾಗರಾಜರ ಪ್ರಕಾರ ರಾಜಮಾರ್ಗ. ಇತರ ಮಾರ್ಗಗಳು ವ್ಯರ್ಥವಷ್ಟೇ ಅಲ್ಲ, ಅಪಾಯಕಾರಿಯೂ ಹೌದು. ತ್ಯಾಗರಾಜರು ಇದಕ್ಕೆ ಒಂದು ಉಪಮೆಯನ್ನು ನೀಡುತ್ತಾರೆ. ಕುಡಿಯಲು ಒಳ್ಳೆಯ ಕೆನೆಹಾಲಿರುವಾಗ ಗಂಗಾ ಸಾಗರವೇಕೆಂಬುದು ಅವರ ಪ್ರಶ್ನೆ.

**"ಚಿಕ್ಕನಿ ಪಾಲುಮೀಗಡಯುಂಡಗ ಛೀಯನು ಗಂಗಾಸಾಗರಮೇಲೆ ?"**

**(ಚಕ್ಕನಿರಾಜಮಾರ್ಗಮು)**

ಸ್ಥೂಲವಾಗಿ ಹೇಳಬೇಕೆಂದರೆ ಭಕ್ತಿಯೆಂಬುದು ಭಗವಂತನನ್ನು ಸೇರುವ ಮನುಷ್ಯನ ತೀವ್ರ ಹಂಬಲವಷ್ಟೇ. 'ಜನರು ನಿನ್ನ ದರ್ಶನಕ್ಕಾಗಿ ಹಂಬಲಿಸುವರೆ' ಎಂದು ತ್ಯಾಗರಾಜರು ವಿಷಾದಪಡುವಾಗ ಭಕ್ತಿಯನ್ನು ಕುರಿತ ಈ ಸ್ಥೂಲವ್ಯಾಖ್ಯೆಯೇ ಅಡಗಿರುವುದು.

**"ನಿನು ಕನುಲ ಕನಕೋರುದುರೆ ?"**

**(ಕರುಣಾಜಲಧೇ)**

ತ್ಯಾಗರಾಜರು 'ತಂದೆತಾಯಿಗಳಿಲ್ಲದ ಅನಾಥೆಯು ತನ್ನ ಪತಿಯನ್ನೇ ಆಶ್ರಯಿಸುವಂತೆ' ಎಂಬ ಉಪಮೆಯೊಂದನ್ನು ಇನ್ನೊಂದೆಡೆ ನೀಡುತ್ತಾರೆ.

**"ತಲ್ಲಿತಂಡ್ರಿಲೇನಿ ಬಾಲ ತನನಾಥಗೋರುರೀತಿ"**

**(ಚೇರರಾವದೇಮಿರಾ)**

ಹೀಗೆ ಭಕ್ತನು ಭಗವಂತನೊಬ್ಬನನ್ನೇ ಆಶ್ರಯಿಸುವುದು ಭಕ್ತಿ. ಇಲ್ಲಿ ಆಂತರಿಕ ಬಯಕೆಯು ಒಂದೇ. ಆದರೆ ಅದರ ವಸ್ತುವು ಲೌಕಿಕವಾಗಿರದೆ ಅಲೌಕಿಕನಾದ ಭಗವಂತನಾಗಿರುತ್ತಾನೆ. ನಮ್ಮ ಆಸಕ್ತಿಯು ಲೌಕಿಕ ವಿಷಯಗಳೆಡೆಗೆ ಹರಿದಾಗ ಅದು 'ರಾಗ' ವಾಗುತ್ತದೆ. ಹಾಗಿಲ್ಲದೇ ಭಗವಂತನೆಡೆಗೆ ಹರಿದಾಗ ಭಕ್ತಿಯಾಗಿ ನಮ್ಮನ್ನು ಅಧ್ಯಾತ್ಮಿಕ ಉನ್ನತಿಗೆ ಏರಿಸುತ್ತದೆ.

ತ್ಯಾಗರಾಜರು '**ತಪಮು ಯೋಗಫಲಮು ನೀವೆ**' ಎಂದು (ನಿನುವಿನಾ ನಾಮದೆಂದುನಿಲ್ವದೇ) ಹೇಳುವಾಗ ಶ್ರೀಹರಿಯು ಅವರಿಗೆ ಅವರ ತಪಸ್ಸು ಮತ್ತು ಏಕಾಗ್ರತೆಗಳ ವಸ್ತುವಷ್ಟೇ ಅಲ್ಲ, ಅವುಗಳ ಫಲವೂ ಆಗಿದ್ದಾನೆ. ಹಾಗೆಯೇ ಅವರು '**ನಿನುವಿನಾ ನಾಮದೆಂದು ನಿಲ್ವದೇ**' ಎನ್ನುವಾಗ (ನಿನುವಿನಾ) ಅವರ ಮನಸ್ಸು ಹರಿಯಲ್ಲಲ್ಲದೇ ಇತರ ವಸ್ತುಗಳಲ್ಲಿ ಇಲ್ಲ ಎಂಬುದು ನಿಖರವಾಗಿದೆ. ಹಾಗೆಯೇ

**"ಅನುರಾಗಮುಲೇನಿ ಮನಸುಕು ಸುಜ್ಞಾನಮುರಾದು"**

**(ಅನುರಾಗಮು)**

**"ವಲಚುಚುನೇನು ನೀದು ವದನಾರವಿಂದಮುನು ದಲಚಿ ಕರಗಗ"**

**(ಚೇರರಾವದೇಮಿರಾ)**

ಎಂಬ ಈ ಮಾತುಗಳಲ್ಲಿ ಅವರ ಭಕ್ತಿಯ ವಿಷಯ ಅಸಾಧಾರಣವಾದು ದೆಂದೂ, ಅದರಲ್ಲಿ ಧ್ಯಾನ ಇಲ್ಲವೇ ಏಕಾಗ್ರತೆಯಿದೆಯೆಂದೂ ಇವೆರಡಕ್ಕಿಂತ ಮಿಗಿ ಲಾಗಿ ಅದರಲ್ಲಿ ವಿಶೇಷ ಪ್ರೀತಿ ಅವರಿಗಿತ್ತೆಂಬುದು ಸ್ಪಷ್ಟವಾಗುತ್ತದೆ. ಮೇಲೆ ಉಲ್ಲೇಖವಾಗಿರುವ 'ಚೇರರಾವದೇಮಿರಾ' ರಚನೆಯ ಸಾಲಿನಲ್ಲಿರುವ '**ವಲಚುಚು**' ಮತ್ತು '**ಕರಗಗ**' ಎಂಬೀ ಶಬ್ದಗಳು ಪ್ರೀತಿಯನ್ನೂ, '**ತಲಚಿ**' ಎಂಬ ಶಬ್ದವು ಧ್ಯಾನ ಅಥವಾ ಏಕಾಗ್ರತೆಯನ್ನೂ ಸೂಚಿಸುತ್ತವೆ.

ಆದರೆ ಭಕ್ತಿಯ ಈ ಮೂರು ಅಂಶಗಳು ಬಹುಸುಂದರವಾಗಿ ವ್ಯಕ್ತವಾಗುವುದು ತ್ಯಾಗರಾಜರ ಮತ್ತೊಂದು ಹೇಳಿಕೆಯಲ್ಲಿ. ಅವರು ಹೀಗೆನ್ನುತ್ತಾರೆ.

**"ಯೋಗಮು ನೀವ್ಯೆ ಯನುರಾಗಮು ಬಾಡೆದ"**

(**ರಾರಾ ಸೀತಾರಾಮ**)

ಇಲ್ಲಿ 'ನೀವ್ಯೆ' ಎಂಬ ಶಬ್ದವು ಭಗವಂತನನ್ನು ಸೂಚಿಸುವುದೆಂಬುದು ಸ್ಪಷ್ಟ. ಎಂದರೆ ತ್ಯಾಗರಾಜರ ಭಕ್ತಿಯ ವಸ್ತು ಶ್ರೀರಾಮನ ದಿವ್ಯ ಸಾಕಾರವೆಂದರ್ಥ. ಹಾಗೆಯೇ 'ಯೋಗ' ಶಬ್ದವು ಏಕಾಗ್ರತೆಯನ್ನು ಸೂಚಿಸುತ್ತದೆ. 'ಅನುರಾಗ'ವೆಂಬ ಶಬ್ದವು ಪ್ರೀತಿಯನ್ನು ಸೂಚಿಸುತ್ತದೆ. ಎಂದರೆ ಮನಸ್ಸನ್ನು ದೇವರಲ್ಲಿ ಸ್ಥಿರವಾಗಿ ನಿಲ್ಲಿಸಿ, ಆತನನ್ನು ಪ್ರೀತಿಯಿಂದ ಸ್ತುತಿಸುವುದೇ ಭಕ್ತಿ. ಭಕ್ತಿಯ ಈ ರಹಸ್ಯವು ಶ್ರೇಷ್ಠರಾದ ಅಂತರ್‌ಜ್ಞಾನಿಗಳಿಗೆ ಮಾತ್ರ ತಿಳಿದಿರುವುದೆಂಬುದು ತ್ಯಾಗರಾಜರ ನುಡಿ.

**"ಘನುಲ್ಯೆನ ಯಂತರ್ಜ್ಞಾನುಲ ಕೆರುಕೇಗಾನಿ"**

(**ಅನುರಾಗಮುಲೇನಿ ಮನಸುನ**)

### ಭಕ್ತಿಯಿಲ್ಲದ ಶುಷ್ಕವಿದ್ಯೆ ವ್ಯರ್ಥ

ಭಕ್ತಿಯಿಲ್ಲದ ಶುಷ್ಕ ಶಾಸ್ತ್ರಜ್ಞಾನವು ವ್ಯರ್ಥವೆಂಬುದು ತ್ಯಾಗರಾಜರ ಬೋಧನೆ. ಅಂಥವರಿಗೆ ದೇವರು ಲಭ್ಯನಲ್ಲವೆನ್ನುತ್ತಾರೆ. ಅವರು,

**"ಭಕ್ತಿರಹಿತ ಶಾಸ್ತ್ರವಿದತಿದೂರ"**

(**ಮಾಮವ ಸತತಂ**)

ಈ ಪ್ರಪಂಚದಲ್ಲಿ ವೇದಶಾಸ್ತ್ರಪುರಾಣಾಗಮಗಳಲ್ಲಿ ನುರಿತ ಜಾಣರಿರಬಹುದು. ಇತರರಿಗೆ ಬೋಧಿಸುವ ಕಲೆಯೂ ಅವರಿಗಿರಬಹುದು. ಅವರು ಜಪಾನುಷ್ಠಾನ ತತ್ಪರರೂ ಆಗಿರಬಹುದು. ಆದರೆ ಭಕ್ತಿಯಿಲ್ಲದ ಅವರ ಜೀವನ ವ್ಯರ್ಥವಷ್ಟೇ ಅಲ್ಲ, ಅವರು ಈ ಪ್ರಪಂಚದಲ್ಲಿ ಜೀವನ್ಮೃತರಂತೆ ಎಂಬುದು ತ್ಯಾಗರಾಜರ ಮಾತು.

**"ಪ್ರಾಣಮುಲೇನಿವಾನಿಕಿ ಬಂಗಾರು ಪೂಗ ಚುಟ್ಟಿ**
**ಅಣಿ ವಜ್ರಭೂಷಣ ಮುರಮಂದು ಬೆಟ್ಟುರೀತಿ"**

(**ಭಕ್ತಿಬಿಚ್ಚಮೀಯವೇ**)

ಎಂದರೆ ಭಕ್ತಿ ಇಲ್ಲದ ವಿದ್ಯೆಯು ಶವಕ್ಕೆ ಬಂಗಾರದ ಪೇಟಸುತ್ತಿ ಅದರ ಎದೆಯನ್ನು

ವಜ್ರಮುತ್ತುಗಳಿಂದ ಕೂಡಿದ ಆಭರಣಗಳಿಂದ ಅಲಂಕರಿಸಿದಂತೆ. ತ್ಯಾಗರಾಜರ ಪ್ರಕಾರ ಸಂಸ್ಕೃತ, ವೇದ, ಪುರಾಣ, ನಾಟಕ, ಅಲಂಕಾರ ಇವುಗಳ ಪರಿಣತಿಯ ಹೆಗ್ಗಳಿಕೆ ತಾತ್ಕಾಲಿಕವಷ್ಟೇ. ಅದರಿಂದ ಸಾಧಿಸಹೊರಟವನಿಗೆ ಪುನರ್ಜನ್ಮವು ತಪ್ಪಿದ್ದಲ್ಲ (ಕ್ಷೀಣಮೈ ತಿರುಗ).

ಭಕ್ತಿಯಲ್ಲಿ ತಾಮಸ, ರಾಜಸ ಮತ್ತು ಸಾತ್ವಿಕಗಳೆಂಬ ಮೂರು ವಿಧಗಳುಂಟು. ದೇವರನ್ನು ರಕ್ತಮಾಂಸಗಳಿಂದ ಪೂಜಿಸುವುದು ತಾಮಸಭಕ್ತಿ. ಡಂಭಾಹಂಕಾರ ಗಳಿಂದ ಐಹಿಕ ವಸ್ತುಗಳಿಗಾಗಿ ಪೂಜಿಸುವುದು ರಾಜಸಭಕ್ತಿ. ತ್ಯಾಗರಾಜರಿಗೆ ಇವೆರಡ ರಲ್ಲೂ ಆಸಕ್ತಿಯಿಲ್ಲ. ಅವರದು ಉಂಛವೃತ್ತಿಯೇನೋ ಹೌದು. ಆದರೆ ಅವರಿಲ್ಲಿ ಬೇಡುವುದು ಲೌಕಿಕ ವಸ್ತುಗಳನ್ನಲ್ಲ, ಶುದ್ಧ ಹಾಗೂ ಸಾತ್ತ್ವಿಕಭಕ್ತಿಯನ್ನು. ಹೀಗೆ ಅವರು 'ಭಕ್ತಿಬಿಚ್ಚಮಿಯ್ಯವೇ' ಎಂದು ಶ್ರೀರಾಮನಲ್ಲಿ ಬೇಡುವಾಗ ಭಕ್ತಿಯಲ್ಲಿ ಶುದ್ಧತೆ ಹಾಗೂ ಸಾತ್ತ್ವಿಕತೆಯ ಅಗತ್ಯವನ್ನು ಒತ್ತಿ ನುಡಿಯುತ್ತಾರೆ. ನಮ್ಮ ಭಕ್ತಿಯು ರಾಜಸವೂ ತಾಮಸವೂ ಆಗಿಲ್ಲದೆ ಸಾತ್ತ್ವಿಕವಾಗಿರಬೇಕೆಂಬುದು ಅವರ ಬೋಧನೆ.

**ಭಕ್ತಿ ಬಿಚ್ಚಮೀಯವೇ ಭಾವುಕಮಗು ಸಾತ್ತ್ವಿಕ**
**ಮುಕ್ತಿಕಖಿಲಶಕ್ತಿಕಿ ತ್ರಿಮೂರ್ತುಲಕತಿ ಮೇಲ್ಮಿರಾಮ**

(ಭಕ್ತಿ ಬಿಚ್ಚಮೀಯ್ಯವೇ)

ಮತ್ತೊಂದು ರಚನೆಯಲ್ಲಿ ತ್ಯಾಗರಾಜರು '**ತ್ಯಾಗರಾಜುನಿ ಮದಿಕೆಪ್ಪುಡು ರಾಜಪದ ಮುಲ್ಕೈತೇ ಜಯಮೌಗಾನಿ**' ಎನ್ನುತ್ತಾರೆ (ಏವರಮಡುಗುಡುರಾ). ಇಲ್ಲಿ ಭಕ್ತಿ ಶಬ್ದದ ಪ್ರಯೋಗವಿಲ್ಲದಿದ್ದರೂ ಅದು ಅಂತರ್ಗತವಾಗಿದೆ. ಅವರಿಗೆ ಐಹಿಕ ಸುಖವಾಗಲೀ, ಇಂದ್ರಸ್ಥಾನವಾಗಲೀ ಬೇಡ. ರಾಜಪಥವಾದ ಭಕ್ತಿಯೊಂದಿದ್ದರೆ ಸಾಕು. ಅದರಿಂದಲೇ ಅವರ ಜೀವನ ಸಾರ್ಥಕ. ಭಕ್ತಿಯೇ ಅವರ ಅಂತಿಮ ಧ್ಯೇಯ. ತಮಗೆ ಸದ್ಭಕ್ತಿಯನ್ನು ನೀಡಿ ಸಲಹಬೇಕೆಂದು ಅವರು ಅನೇಕ ರಚನೆಗಳಲ್ಲಿ ಪ್ರಾರ್ಥಿಸಿರುವರೆಂಬುದನ್ನು ನಾವು ಗಮನಿಸಬಹುದು.

"**ನೀ ಪಾದಮುಲಭಕ್ತಿ ನಿಂಡಾರುಗ ನೊಸಗಿ ಕಾಪಾಡು**" (ಶ್ರೀರಾಮರಾಮರಾಮ ಸೀತಾ)

"**ನೀಪಾದಮುಲ ಭಕ್ತಿ ನಿಂಡಾರಗನಿಚ್ಚಿ ಕಾಪಾಡು**" (ಮಾಪಾಲವೆಲಸಿಕ)

"**ನಾಮನಸು ಸುಭಕ್ತಿನೇ ಕೋರಿಯುಂಡಗ**" (ವರಾಲಂದುಕೊಮ್ಮನಿ)

ಹೀಗಾಗಿ ಭಕ್ತಿಗಾಗಿ ಭಕ್ತಿಯೇ ಹೊರತು, ದೇವರನ್ನು ದೇವರಿಗೆಂದೇ ಪ್ರಾರ್ಥಿಸು ವುದೇ ಹೊರತು ಲೌಕಿಕವಾದ ವರಗಳಿಗಾಗಿ ಭಕ್ತಿಮಾರ್ಗ ಅನುಸರಣೆಯಲ್ಲ. ತಮ್ಮ ನಿದರ್ಶನದ ಮೂಲಕ ತ್ಯಾಗರಾಜರು ಇದನ್ನು ಸಾರ್ಥಕಗೊಳಿಸಿದ್ದಾರೆ.

## ಟಿಪ್ಪಣಿಗಳು

೧ ಹಿಂದೂ ಧರ್ಮದ ಪರಿಚಯ, ಎದುರ್ಕಳ ಕೆ. ಶಂಕರನಾರಾಯಣ ಭಟ್, ಶ್ರೀರಾಮಕೃಷ್ಣ ಪ್ರಕಾಶನ, ಕೊಡಗು ಜಿಲ್ಲೆ, ೧೯೬೮, ಪು. ೨೧೪.

೨ ಶ್ರೀಮದ್ ಭಗವದ್ಗೀತೆ, ಅಧ್ಯಾಯ ೨, ಶ್ಲೋಕ ೪೭ ಹಾಗೂ ಅಧ್ಯಾಯ ೫, ಶ್ಲೋಕ ೧೦.

೩ - ಅದೇ -, ಅಧ್ಯಾಯ ೯, ಶ್ಲೋಕ ೨೮.

೪ Outlines of Indian Philosophy, M. Hiriyanna, George Allen and Unwin Private Limited, Bombay, 1976, ಪು. ೧೨೧.

೫ ಮಿಂಚುನೋಟಕೆ ಹಿಂದೂಧರ್ಮ, ಸ್ವಾಮಿ ನಿರ್ವೇದಾನಂದ, ಶ್ರೀರಾಮಕೃಷ್ಣಾಶ್ರಮ, ಮೈಸೂರು, ೧೯೭೨, ಪು. ೪೩-೫೦.

೬ Sayings of Sri Ramakrishna, Sri Ramakrishna Math, Madras ಮತ್ತು The Gospel of Sri Ramakrishna, ಪು. ೬.

೭ ಗೀತಾಭಾಷ್ಯ, ೧೨-೨೦.

೮ Outlines of Indian Philosophy, M. Hiriyanna, Bombay, George Allen and Unwin, 1976, ಪು. ೪೧೧ ರಲ್ಲಿ ಅಡಿಟಿಪ್ಪಣಿ; ಜೊತೆಗೆ ನೋಡಿ ಅಡಿಟಿಪ್ಪಣಿ The Philosophy of Sadhana in Vishistadwaita, N.S. Anantharangachar, Prasaranga, University of Mysore, Mysore, 1967, ಪು. ೧೦೦.

೯ ಭಗವದ್ಗೀತೆ, ಅಧ್ಯಾಯ ೯, ಶ್ಲೋಕಗಳು ೩೦-೩೨.

೧೦ - ಅದೇ -, ಅಧ್ಯಾಯ ೯, ಶ್ಲೋಕಗಳು ೨೩-೨೪.

೧೧ - ಅದೇ -, ಶ್ಲೋಕ ೨೬.

# ನವವಿಧಭಕ್ತಿ

'ಸಾ ತು ಅಸ್ಮಿನ್ ಪರಮಪ್ರೇಮರೂಪಾ'[೧]—ಎಂಬುದು ನಾರದರ ವಾಕ್ಯ. ಯಾರೊಬ್ಬರ ಬಗ್ಗೆಯಾಗಲೀ ನಮಗಿರುವ ಪರಮ ಪ್ರೀತಿಯೇ ಭಕ್ತಿ. ಶಾಂಡಿಲ್ಯ ಸೂತ್ರವು 'ಸಾ ಭಕ್ತಿಃ ಪರಾನುರಕ್ತಿರೀಶ್ವರೀ' ಎನ್ನುತ್ತದೆ. ಈ ಪ್ರಕಾರ ಈಶ್ವರನಲ್ಲಿ ಪರಮ ಅನುರಕ್ತಿಯನ್ನಿಡುವುದೇ ಭಕ್ತಿ. ಇಂತಹ ಭಕ್ತಿ ಅಥವಾ ಅನುರಕ್ತಿ (ಪ್ರೇಮ) ಬ್ರಹ್ಮಾನಂದವನ್ನು ನೀಡುತ್ತದೆ. ಭಕ್ತಿ ಮಾರ್ಗದಲ್ಲಿ ನಡೆದು ಅದಕ್ಕೆ ಅಭಿವ್ಯಕ್ತಿಯನ್ನು ನೀಡಿದ ಗುಂಪಿಗೆ ಭಕ್ತಿಪಂಥವೆಂದು ಹೆಸರು. ಭಕ್ತಿಪಂಥದ ಗುರಿ ಆತ್ಮೋದ್ಧಾರ ಹಾಗೂ ನೈತಿಕಬುನಾದಿಯ ಮೇಲೆ ವ್ಯವಸ್ಥಿತ ಸಮಾಜವನ್ನು ರೂಪಿಸುವುದು. ಭಕ್ತಿಯು ವೇದಕಾಲದಷ್ಟೇ ಪ್ರಾಚೀನವಾದರೂ[೨] ಅದು ಇತಿಹಾಸದ ನಿರ್ದಿಷ್ಟವಾದ ಒಂದು ಅವಧಿಯಲ್ಲಿ ದೇಶಾದ್ಯಂತ ಭಕ್ತಿಕ್ರಾಂತಿಯನ್ನೇ ಉಂಟುಮಾಡಿತು. ಈ ಅವಧಿಯಲ್ಲಿ ಭಕ್ತರು ಪ್ರಾಂತೀಯ ಭಾಷೆಗಳಲ್ಲಿ ಭಕ್ತಿ ಸಾಹಿತ್ಯದ ಮೂಲಕ ಪ್ರತಿಯೊಬ್ಬ ಜನಸಾಮಾನ್ಯನ ಹೃದಯವನ್ನು ತಣಿಸಿ ಸಮಾಜದ ಉದ್ಧಾರ ಮಾಡಿದರು. ಭಕ್ತಿಪಂಥ ದಲ್ಲಿ ಪ್ರಸಿದ್ಧರಾದ ಕೆಲವರೆಂದರೆ ಚೈತನ್ಯ ಮಹಾಪ್ರಭು, ಕಬೀರದಾಸ್, ಗುರುನಾನಕ್, ರೂಪಾಗೋಸ್ವಾಮಿ, ತುಳಸೀದಾಸ್, ಸೂರದಾಸ್, ಮೀರಾಬಾಯಿ, ಬಸವಣ್ಣ, ಪುರಂದರದಾಸ, ಕನಕದಾಸ, ಅನ್ನಮಯ್ಯ, ಕ್ಷೇತ್ರಯ್ಯ, ಭದ್ರಾಚಲ ರಾಮದಾಸ್, ಶ್ಯಾಮಾಶಾಸ್ತ್ರಿ, ಮುತ್ತುಸ್ವಾಮಿ ದೀಕ್ಷಿತರು, ಸ್ವಾತಿ ತಿರುನಾಳ್ ಮೊದಲಾದವರು. ಇದೇ ಸಾಲಿನಲ್ಲಿ ಬರುವ ಮತ್ತೊಬ್ಬ ಮಹಾಭಕ್ತರೇ ಶ್ರೀ ತ್ಯಾಗರಾಜರು.

ಮೂಲತಃ ಭಕ್ತಿಯು ಒಂದೇ ಆದರೂ ಅದು ಹಲವು ಬಗೆಯಲ್ಲಿ ಅಭಿವ್ಯಕ್ತಗೊಳ್ಳು ತ್ತದೆ. ನಾರದರು ತಮ್ಮ ಭಕ್ತಿಸೂತ್ರದಲ್ಲಿ ಭಕ್ತಿಯ ಈ ಎಳೆಯನ್ನು ಸೂಕ್ಷ್ಮವಾಗಿ ಬಿಡಿಸಿ, ಹನ್ನೊಂದು ವಿಧಗಳನ್ನು ಗುರುತಿಸಿದ್ದಾರೆ. ಅವು, (೧) ಗುಣಮಹಾತ್ಮ್ಯಾಸಕ್ತಿ, (೨) ರೂಪಾಸಕ್ತಿ, (೩) ಪೂಜಾಸಕ್ತಿ, (೪) ಸ್ಮರಣಾಸಕ್ತಿ, (೫) ದಾಸ್ಯಾಸಕ್ತಿ, (೬) ಸಖ್ಯಾ ಸಕ್ತಿ, (೭) ವಾತ್ಸಲ್ಯಾಸಕ್ತಿ, (೮) ಕಾಂತಾಸಕ್ತಿ, (೯) ಆತ್ಮನಿವೇದನಾಸಕ್ತಿ, (೧೦) ತನ್ಮಯತಾಸಕ್ತಿ, (೧೧) ಪರಮ ವಿರಹಾಸಕ್ತಿ.[೩] ಈ ಹನ್ನೊಂದು ವಿಧಗಳಿಗೆ ಅನುಗುಣ ವಾಗಿ ಹನ್ನೊಂದು ವಿಧದ ಭಕ್ತರನ್ನೂ ಕಾಣಬಹುದು. ಅಥವಾ ಒಬ್ಬನೇ ಭಕ್ತನಲ್ಲಿ ಈ ಎಲ್ಲಾ ವಿಧದ ಆಸಕ್ತಿಗಳೂ ಒಳಗೊಂಡಿರಬಹುದು.

ನಾರದರು ಹೇಳುವ ಭಕ್ತಿಯ ಹನ್ನೊಂದು ವಿಧಗಳ ಸ್ಥೂಲವಿವರ ಹೀಗಿದೆ. ಗುಣಮಹಾತ್ಮ್ಯಾಸಕ್ತಿಯೆಂದರೆ, ಭಕ್ತನು ಎಲ್ಲೆಲ್ಲೂ, ಎಲ್ಲ ಸಮಯದಲ್ಲೂ ದೇವರ ಗುಣ ಮಹಾತ್ಮೆಗಳನ್ನೇ ಎಂದರೆ ಕಾರುಣ್ಯ ರೂಪವನ್ನೇ ಕಾಣುತ್ತಾನೆ. ಅವುಗಳನ್ನು ಕೊಂಡಾಡುವುದರಲ್ಲೇ ಆತನಿಗೆ ಸಂತೋಷ. ದೇವರ ರೂಪಕ್ಕೆ ಮನಸೋತು ಧ್ಯಾನಿಸು

ವುದು ರೂಪಾಸಕ್ತಿ. ಪೂಜೆಯಿಂದಲೇ ದೇವರನ್ನು ತೃಪ್ತಿಪಡಿಸಿ ತಾವೂ ಸಂತೋಷಿಸುವ ಭಕ್ತರು ಕೆಲವರು. ಇಲ್ಲಿ ಭಕ್ತ ಬಾಹ್ಯ ಮತ್ತು ಆಂತರಿಕ ಪರಿಕರಗಳಿಂದ ಆತನನ್ನು ಪೂಜಿಸುತ್ತಾನೆ. ಈ ಗುಂಪಿನ ಮಂದಿ ಪೂಜಾಸಕ್ತರು. ನಾಮಸ್ಮರಣೆಯಿಂದಲೇ ಆನಂದಿಸುವುದು ಸ್ಮರಣಾಸಕ್ತಿ. ಮತ್ತೆ ಕೆಲವು ಭಕ್ತರಿಗೆ ದೇವರು ತಮ್ಮ ಒಡೆಯ ನೆಂದೂ ತಾವು ಅವನ ದಾಸರೆಂದೂ ಭಾವಿಸಿ ಸೇವಾಕಾರ್ಯಗಳಲ್ಲಿ ತೃಪ್ತರಾಗುವ ಬಯಕೆ ಇವರು ದಾಸ್ಯಾಸಕ್ತರು. ದೇವರನ್ನು ಸಖನಂತೆ ಕಾಣುವ ಹಂಬಲ ಕೆಲವರದು. ಇವರು ದೇವರನ್ನು ತಮ್ಮ ಸಮಾನನೆಂದು ತಿಳಿಯುತ್ತಾರೆ. ಭಕ್ತನು ಪುರುಷನೇ ಆಗಿರಲಿ ಅಥವಾ ಸ್ತ್ರೀಯೇ ಆಗಿರಲಿ ತನ್ನಲ್ಲಿ ತಾಯ್ತನವನ್ನು ಆರೋಪಿಸಿಕೊಂಡು ದೇವರನ್ನು ಮಗುವಾಗಿ ಪರಿಭಾವಿಸುವುದು ವಾತ್ಸಲ್ಯಾಸಕ್ತಿ. ಇಲ್ಲಿ ಸರ್ವಶಕ್ತನಾದ ದೇವರು ಭಕ್ತನ ದೃಷ್ಟಿಯಲ್ಲಿ ಮಗುವಾಗಿ ನಿಲ್ಲುತ್ತಾನೆ. ಇದರಂತೆಯೇ ದೇವರನ್ನು ಪ್ರಿಯೆ ಅಥವಾ ಪ್ರಿಯಕರನೆಂದು ಕಾಣುವುದು ಕಾಂತಾಸಕ್ತಿ. ಇದೇ ಭಾರ್ಯಾಭರ್ತ ಭಾವ, ಸತಿ-ಪತಿ ಭಾವ ಎನಿಸುತ್ತದೆ. ಭಕ್ತ ತನ್ನ ಅಲ್ಪತ್ವ, ಅಶಕ್ತತೆಗಳನ್ನು ಅರಿತು, ಗೀತೆ ಹೇಳುವಂತೆ ತನ್ನ ದಾದ ಎಲ್ಲವನ್ನೂ ಆತನಲ್ಲಿ ಅರ್ಪಿಸಿ ಶರಣಾಗುವುದು ಆತ್ಮಸಮರ್ಪಣೆ. ಇದು ಆತ್ಮ ನಿವೇದನಾಸಕ್ತಿ. ತನ್ಮಯಾಸಕ್ತಿ ಎಂಬುದು ಸದಾಕಾಲ ದೇವರನ್ನೇ ಚಿಂತಿಸುತ್ತಾ ಅವನಲ್ಲೇ ಐಕ್ಯವಾಗಲಿಚ್ಛಿಸುವುದು. ತಪೋನಿರತರಾಗಿ ತನ್ಮಯತೆಯನ್ನು ಸಾಧಿಸುವ ಈ ಭಕ್ತರು ತನ್ಮಯಾಸಕ್ತರು. ಮೇಲಿನ ಹತ್ತು ವಿಧಗಳೂ ಭಕ್ತ-ಭಗವಂತರು ಸಮೀಪ ದಲ್ಲಿರುವಾಗಿನದಾದರೆ, ಹನ್ನೊಂದನೆಯದಾದ ವಿರಹಾಸಕ್ತಿಯು ಅವರಿಬ್ಬರೂ ದೂರ ವಿರುವ ಅಥವಾ ಬೇರ್ಪಟ್ಟಿರುವ ಹಂತ. ಭಕ್ತನಿಲ್ಲಿ ದೂರವಿರುವ ತನ್ನ ದೇವರನ್ನು ಕಾಣಬೇಕು, ಆತನೊಂದಿಗೆ ಮಾತನಾಡಬೇಕು, ಆತನ ಆದೇಶದಂತೆ ಹಾಡಬೇಕು, ಆತನನ್ನು ಸೇವಿಸಬೇಕು ಎಂದು ಹಂಬಲಿಸುತ್ತಾನೆ. ಈ ರೀತಿ ಪರಿತಪಿಸುವ ಭಕ್ತರು ಪರಮವಿರಹಾಸಕ್ತರು.

ಮೇಲಿನ ಹನ್ನೊಂದು ವಿಧದ ಭಕ್ತಿಯನ್ನು ಬೇರೊಂದು ರೀತಿಯಲ್ಲೂ ವಿಂಗಡಿಸು ವುದುಂಟು. ಅವು ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ ಮತ್ತು ಆತ್ಮನಿವೇದನೆಗಳು. ಪ್ರಹ್ಲಾದನು ಭಾಗವತದ ದಶಮಸ್ಕಂದದಲ್ಲಿ ಹೀಗೆ ಹೇಳುತ್ತಾನೆ.

**ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।**
**ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥** [೪]

ನಾರದರು ಹೇಳುವ ಸೂಕ್ಷ್ಮಾತಿಸೂಕ್ಷ್ಮವಾದ ಹನ್ನೊಂದು ಭಾವಗಳೂ ಹೆಚ್ಚೂ ಕಡಿಮೆ ಈ ನವವಿಧ ಭಕ್ತಿಗಳಲ್ಲೇ ಸಂಗ್ರಹರೂಪದಲ್ಲಿ ಅಡಗಿವೆ. ಹೇಗೆಂದರೆ : ಗುಣ ಮಹಾತ್ಮ್ಯಾಸಕ್ತಿಯು ಶ್ರವಣ ಮತ್ತು ಕೀರ್ತನಗಳಲ್ಲೂ, ರೂಪಾಸಕ್ತಿ ಹಾಗೂ ಸ್ಮರಣಾ ಸಕ್ತಿಗಳು ಸ್ಮರಣ ಭಕ್ತಿಯಲ್ಲೂ, ಪೂಜಾಸಕ್ತಿಯು ಅರ್ಚನಭಕ್ತಿಯಲ್ಲೂ, ದಾಸ್ಯಾಸಕ್ತಿ ಹಾಗೂ ಪಂಚಭಾವಗಳಲ್ಲಿ ಒಂದಾದ ದಾಸ್ಯಭಾವವು ದಾಸ್ಯಭಕ್ತಿಯಲ್ಲೂ, ಸಖ್ಯಾಸಕ್ತಿ

ಮತ್ತು ಪಂಚಭಾವಗಳಲ್ಲಿ ಮತ್ತೊಂದಾದ ಸಖ್ಯಭಾವವು ಸಖ್ಯಭಕ್ತಿಯಲ್ಲೂ ಮತ್ತು ಆತ್ಮನಿವೇದನಾಸಕ್ತಿ ಮತ್ತು ಪ್ರಪತ್ತಿ ಅಥವಾ ಶರಣಾಗತಿಗಳು ಆತ್ಮನಿವೇದನ ಭಕ್ತಿಯಲ್ಲೂ ಅಡಕವಾಗಿವೆ. ಇನ್ನು ವಾತ್ಸಲ್ಯಾಸಕ್ತಿಯೂ ಪಂಚಭಾವಗಳಲ್ಲಿ ಒಂದಾದ ವಾತ್ಸಲ್ಯಭಾವದಲ್ಲಿ ಮತ್ತು ಕಾಂತಾಸಕ್ತಿಯು ಪಂಚಭಾವಗಳಲ್ಲಿ ಮತ್ತೊಂದು ಭಾವವಾದ ಮಧುರ ಅಥವಾ ಶೃಂಗಾರ ಭಾವದಲ್ಲೂ ಅಡಕವಾಗಿವೆ. ಇವುಗಳನ್ನು ಪಂಚಭಾವಗಳ ಅಧ್ಯಾಯದಲ್ಲಿ ಚರ್ಚಿಸಲಾಗುತ್ತದೆ. ಹಾಗೆಯೇ ಪರಮವಿರಹಾಸಕ್ತಿ ಮತ್ತು ತನ್ಮಯತಾಸಕ್ತಿಗಳು ಭಕ್ತನ ವಿರಹ ಹಾಗೂ ಧನ್ಯತೆಗಳಿಗೆ ಸಂಬಂಧಿಸಿದವು. ಇವುಗಳನ್ನು ವಿರಹ ಮತ್ತು ಧನ್ಯತೆ ಎಂಬ ಅಧ್ಯಾಯದಲ್ಲಿ ಚರ್ಚಿಸಲಾಗುತ್ತದೆ. ವಿರಹವಿಲ್ಲದ ಸಂಭೋಗವು ಅಪೂರ್ಣ ಎಂಬ ಭಾವನೆ ಕವಿಭಕ್ತರದು. ಆದ್ದರಿಂದಲೇ ಸಾಮಾನ್ಯವಾಗಿ ಅವರು ವಿರಹಭಕ್ತಿಯನ್ನು ಪ್ರತ್ಯೇಕವಾಗಿ ಗುರುತಿಸುವುದುಂಟು. ಪ್ರಸ್ತುತ ತ್ಯಾಗರಾಜರ ರಚನೆಗಳಲ್ಲಿ ಕಾಣಬರುವ ನವವಿಧ ಭಕ್ತಿಗಳನ್ನು ವಿವರಿಸುವುದು ಇಲ್ಲಿನ ಉದ್ದೇಶ.

ನವವಿಧ ಭಕ್ತಿಗಳಲ್ಲಿ ಒಂದು ಮತ್ತೊಂದಕ್ಕೆ ಪೂರಕ ಎಂಬುದನ್ನು ಹೀಗೆ ಹೇಳಬಹುದು. ಶ್ರವಣದಿಂದ ಆರಂಭವಾದ ಭಕ್ತಿಯು ಹರಿಸಂಬಂಧ ವಿಷಯಗಳನ್ನೇ ಕೇಳುತ್ತಾ, ಭಕ್ತ ತನಗರಿವಿಲ್ಲದಂತೆಯೇ ಅವುಗಳನ್ನು ಹಾಡಬಹುದು (ಕೀರ್ತಿಸಬಹುದು). ತಾನು ಯಾಂತ್ರಿಕವಾಗಿ ಕೀರ್ತಿಸಿದುದರ ಬಗೆಗೆ ಆತನಲ್ಲಿ ಸ್ಮರಣೆ ಮೂಡಬಹುದು. ನಂತರ ದೇವರ ಸೇವೆ ಮಾಡುವ ಹಂಬಲ ಮೂಡಿ ತಾನು ಮೆಚ್ಚಿದ ದೇವರ ರೂಪವು ಪೂಜಿಸಲ್ಪಡಬಹುದು (ವಿಗ್ರಹಾರಾಧನೆ). ಪೂಜೆಯ ನಂತರ ದೇವರಿಗೆ ವಂದಿಸಿ ಆತನ ದಾಸನಾಗುವ ಆಸೆ ಮೂಡಬಹುದು. ತನ್ನ ದಾಸ್ಯತ್ವವನ್ನು ಸ್ವೀಕರಿಸಿದರೂ ತನ್ನನ್ನು ಅನುಗ್ರಹಿಸದ ದೇವರಲ್ಲಿ ಅಸಮಾಧಾನವಾದರೂ ಸಲಿಗೆಯಿಂದ ತನ್ನ ಸರಿಸಮನೆಂದೇ ಭಾವಿಸಿ, ಆತನನ್ನು ಪ್ರಶ್ನಿಸುವ ಅಥವಾ ನಿಂದಿಸುವ ಭಾವ ಮೂಡಬಹುದು. ಕೊನೆಗೆ ದೇವರ ಸರ್ವಶಕ್ತಿಯ ಜ್ಞಾಪಕ ಬಂದು ತನ್ನನ್ನೇ ಸಮರ್ಪಿಸಿಕೊಳ್ಳುವಂತಾಗಬಹುದು.

ಪ್ರಸ್ತುತ ತ್ಯಾಗರಾಜರು ಈ ಎಲ್ಲ ಹಂತಗಳನ್ನೂ ಒಳಗೊಂಡಂತೆ ನವವಿಧ ಭಕ್ತಿಗೆ ಹೀಗೆ ಅಭಿವ್ಯಕ್ತಿ ನೀಡಿದ್ದಾರೆ.

**ಶ್ರವಣ** : ದೇವರ ಅನಂತ ಗುಣಗಳನ್ನಾಗಲೀ, ಚೆಲುವನ್ನಾಗಲೀ, ನಾಮಗಳನ್ನಾಗಲೀ ಅಥವಾ ಭಗವದ್ಭಕ್ತರ ಚರಿತ್ರೆಯನ್ನಾಗಲೀ ಮತ್ತೆ ಮತ್ತೆ ಕೇಳುವುದೇ ಶ್ರವಣ ಭಕ್ತಿ. ತ್ಯಾಗರಾಜರಿಗೆ ಯಾವ ಪುಣ್ಯದ ಫಲದಿಂದಲೋ ವೆಂಕಟೇಶನೆಂಬ ನಾಮಾಮೃತವು ದೊರೆತಿದೆ.

**ಏನಾಟಿ ನೋಮು ಫಲವೋ ನೀ ನಾಮಾಮೃತ**
**ಪಾನಮು ಅನು ಸೋಪಾನಮು ದೊರಿಕೆನು**

(ವೆಂಕಟೇಶನಿನ್ನು)

ರಾಮಚಂದ್ರನಾದ ಆ ದೇವರ ಮಹಿಮೆಯನ್ನು ಈಗಾಗಲೇ ತ್ಯಾಗರಾಜರು ಶ್ರವಣ ಮಾಡಿರುವ ಕಾರಣದಿಂದಲೇ ಆತನನ್ನು ಪೂರ್ಣವಾಗಿ ನಂಬಿದ್ದಾರೆ.

**ಮುನ್ನು ನೀ ಮಹಿಮ ನೇ ವಿನ್ನದೇಗಾನಿ**

(ಮುನ್ನುರಾವಣ)

**ನೀ ಮಹಿಮಲು ವಿನಿವಿನಿ ನೇನೆಂತೋ ನೆರನಮ್ಮಿತಿ**

(ನಾಮೊರಾಲಗಿಂಪವೇಮಿ)

ಹೀಗೆ ಶ್ರವಣ ಮಾಡಿರುವ ಶ್ರೀಹರಿಯ ಕಥೆಗಳು ಅವರ ಕಿವಿದುಂಬಿವೆ.

**ನೀದು ಕಥಲು ವೀನುಲಂದು ನಿಂಡಿಯುನ್ನವಿ**

(ನಿನ್ನುವಿನಾ ನಾಮದೆಂದು ನಿಲುವದೇ)

ಅಮೃತಮಯವಾದ ಹರಿಯ ಕಥೆಗಳು ಕಿವಿದುಂಬಿರುವುದಷ್ಟೇ ಅಲ್ಲ, ಅದರಿಂದ ಬಹುಕಾಲದ ಅವರ ಆಧ್ಯಾತ್ಮಿಕ ಹಸಿವು ಕೂಡ ಹಿಂಗಿದೆ.

**ಕಥಾಮೃತಮುಚೇ ಬಹುಕಾಲಮು ಆಕಲಿದೀರಿಯುನ್ನಾನು**

(ಸುಧಾಮಾಧುರ್ಯ ಭಾಷಣ)

ಇಂತಹ ಶ್ರವಣದಿಂದಾಗಿ ಶ್ರೀರಾಮನ ನಾಮರೂಪಗಳು ಮನದುಂಬಿ ಆತನಲ್ಲಿ ಪ್ರೀತಿಹುಟ್ಟಿಸಿದೆ.

**ರಾಮನಾಮ ಶ್ರವಣಮುವಲ್ಲ**
**ನಾಮರೂಪಮೆ ಹೃದಯಮುನಿಂಡಿ**
**ಪ್ರೇಮಪುಟ್ಟಿ ಸೇಯಗಲೇದಾ ?**

(ಸ್ಮರಣೇ ಸುಖಮು)

ತ್ಯಾಗರಾಜರಿಗೆ ಶ್ರೀರಾಮನಲ್ಲಿ ಪ್ರೀತಿ ಮೂಡಲು ಕಾರಣವೂ ಉಂಟು. ಅದೆಂದರೆ ಈ ಮುನ್ನ ಶ್ರೀರಾಮನು ದಾಸರಕ್ಷಕನಾಗಿದ್ದುದನ್ನು ಕೇಳಿ ವಿಶೇಷವಾಗಿ ಅವರೂ ರಾಮಚರಣಗಳನ್ನು ಆಶ್ರಯಿಸಿದ್ದಾರೆ.

**ಮುನುದಾಸುಲ ಬ್ರೋಚಿನದೆಲ್ಲ ಚಾಲ**
**ವಿನಿ ನೀ ಚರಣಾಶ್ರಿತುಡೈತಿನಯ್ಯ**

(ಕಮಲಾಪ್ತಕುಲ)

ರಾಮಕಥೆಗಳ ಶ್ರವಣದಿಂದ ಘೋರಪಾತಕಗಳೂ ಪರಿಹಾರವಾಗುತ್ತವೆ.

**ವೀನುಲು ನೀ ಕಥಲು ವಿನ್ನ ಬಲುಪಾಪಮುಲು ಪೋನು**

(ನಿನ್ನನ ವಲಸಿನದೇಮಿ)

ಈ ಎಲ್ಲಕ್ಕಿಂತಲೂ ಮಿಗಿಲಾಗಿ ರಾಮಕಥೆ ಎಂಬ ಅಮೃತಪಾನ ವಿಶಿಷ್ಟವಾದ ಸಾಮ್ರಾಜ್ಯವೊಂದನ್ನೇ ಉಂಟುಮಾಡುತ್ತದೆ. ಸೀತಾ, ಸೌಮಿತ್ರಿ ಮತ್ತು ಭರತಾದಿಗಳೊಂದಿಗೆ ಧರೆಗಿಳಿದ ಶ್ರೀರಾಮನ ಕಥೆಯು ಚತುರ್ವಿಧ ಪುರುಷಾರ್ಥಗಳನ್ನೂ ನೀಡುತ್ತದೆ. ಅದು ಧೈರ್ಯ, ಆನಂದ ಮತ್ತು ಸುಖಗಳ ತವರು. ಸಂಸಾರವೆಂಬ ಸಮುದ್ರವನ್ನು

ದಾಟಲು ಸಾಧನವೂ ಹೌದು. ಹೀಗೆ ಐಹಿಕ ಮತ್ತು ಆಮುಷ್ಮಿಕ ಫಲಗಳೆರಡನ್ನೂ ನೀಡುತ್ತದೆ ರಾಮಕಥೆ, ಎಂಬುದು ತ್ಯಾಗರಾಜರ ನುಡಿ. ಹೀಗೆ ನುಡಿಯುವ ಮೂಲಕ ಅವರು ಶ್ರವಣ ಭಕ್ತಿಯ ಹಿರಿಮೆಯನ್ನು ಸಾರುತ್ತಾರೆ.

**ರಾಮಕಥಾ ಸುಧಾರಸ ಪಾನಮೊಕ ರಾಜ್ಯಮುಚೇಸುನೇ**
**ಭಾಮಾಮಣಿ ಜಾನಕಿ ಸೌಮಿತ್ರಿ**
**ಭರತಾದುಲತೋ ಭೂಮಿವೆಲಯುಶ್ರೀ**
**ಧರ್ಮಾದ್ಯಖಿಲ ಫಲದಮೆ ಮನಸಾ**
**ಧೈರ್ಯಾನಂದ ಸೌಖ್ಯ ನಿಕೇತನಮೇ**
**ಕರ್ಮಬಂಧಜ್ವಲನಾಬ್ಧಿ ನಾವಮೆ**
**ಕಲಿಹರಮೇ ತ್ಯಾಗರಾಜನುತುಡಗು**

**(ರಾಮಕಥಾ ಸುಧಾರಸ)**

**ಕೀರ್ತನ** : 'ಕೃತಯುಗದಲ್ಲಿ ಧ್ಯಾನದಿಂದಲೂ, ದ್ವಾಪರದಲ್ಲಿ ಅರ್ಚನೆಯಿಂದಲೂ, ತ್ರೇತಾಯುಗದಲ್ಲಿ ಯಜ್ಞಗಳ ಮೂಲಕ ಪೂಜಿಸುವುದರಿಂದಲೂ ಒಬ್ಬನು ಯಾವ ಫಲವನ್ನು ಪಡೆಯುತ್ತಾನೋ, ಆ ಫಲವನ್ನು ಕಲಿಯುಗದಲ್ಲಿ ಕೇಶವನ ನಾಮ ಸಂಕೀರ್ತನೆ ಮಾಡುವುದರಿಂದಲೇ ಪಡೆಯುತ್ತಾನೆ' ಎಂಬುದು ವಿಷ್ಣುಪುರಾಣದ ವಾಕ್ಯ.[೫] ವಿಷ್ಣು ಸಹಸ್ರನಾಮದಲ್ಲಿ ಯುಧಿಷ್ಠಿರನ ಪ್ರಶ್ನೆಗೆ ಉತ್ತರಿಸುತ್ತಾ ಭೀಷ್ಮನು, 'ದೇಶಕಾಲಾತೀತನಾಗಿರುವ ಪುರುಷೋತ್ತಮನ ಗುಣಕೀರ್ತನೆ ಮಾಡುತ್ತಿದ್ದರೆ ಮನುಷ್ಯ ಎಲ್ಲ ದುಃಖಗಳನ್ನೂ ದಾಟಿದವನಾಗುತ್ತಾನೆ' ಎನ್ನುತ್ತಾನೆ.[೬] ಭೀಷ್ಮನೇ ವಿಷ್ಣುಸಹಸ್ರನಾಮವನ್ನು ಈ ಜಗತ್ತಿಗೆ ಕೊಟ್ಟುದಾಗಿ ಪ್ರತೀತಿಯುಂಟು. ದ್ವಾಪರ ಯುಗಾಂತ್ಯದಲ್ಲಿ ಕಲಿಯುಗಾರಂಭದಲ್ಲಿ ನಾರದರ ಪ್ರಶ್ನೆಗೆ ಉತ್ತರಿಸುತ್ತಾ ಬ್ರಹ್ಮನು, ನಾರಾಯಣ ನಾಮೋಚ್ಚಾರಣೆಯ ಹಿರಿಮೆಯನ್ನು ತಿಳಿಸುತ್ತಾನೆ. ಇದೇ ಜಪಯಜ್ಞ, ಯಜ್ಞಗಳೊಳಗೆ ತಾನು ಜಪಯಜ್ಞನಾಗಿರುವನೆಂಬುದು ಶ್ರೀಕೃಷ್ಣನ ವಚನ.[೭] ಮಹಾಭಾರತದಲ್ಲಿ ಜಪಯಜ್ಞದ ಶ್ರೇಷ್ಠತೆಯನ್ನು ಹೀಗೆ ಸಾರಲಾಗಿದೆ. 'ಜಪಯಜ್ಞವು ಸರ್ವಧರ್ಮಗಳಿಗಿಂತಲೂ ಶ್ರೇಷ್ಠವಾದ ಧರ್ಮ'. ಏಕೆಂದರೆ ಅದು ಪ್ರಾಣಿ ಹಿಂಸೆಯಿಲ್ಲದೆ ಸಾಗುತ್ತದೆ.[೮] ಹೀಗೆ ಪುರಾಣಾದಿ ಗ್ರಂಥಗಳು ಕೀರ್ತನ ಭಕ್ತಿ-ಜಪಯಜ್ಞವನ್ನು ಎತ್ತಿ ಹಿಡಿಯುತ್ತವೆ.

ನಾಮ ಸಂಕೀರ್ತನೆಯಲ್ಲಿ ಹಲವು ಪ್ರಕಾರಗಳುಂಟು. ಅವೆಂದರೆ,

೧ (ಅ) ದೇವರ ಒಂದೇ ನಾಮವನ್ನು ಪುನರುಚ್ಚರಿಸುವುದು.

(ಆ) ದೇವರ ಬೇರೆ ಬೇರೆ ನಾಮಗಳನ್ನು ಅಥವಾ ವಿಶೇಷಣಗಳನ್ನು ಸ್ತುತಿಸುವುದು. ಉದಾಹರಣೆಗೆ ರಾಮ, ಕೃಷ್ಣ, ನಾರಾಯಣ ಮುಂತಾಗಿ ಅಥವಾ ಅಷ್ಟೋತ್ತರಶತ, ಸಹಸ್ರನಾಮ ಉಚ್ಚಾರಣೆ.

೨ (ಅ) ಜಪಯಜ್ಞವನ್ನು ಇತರರೂ ಕೇಳುವಂತೆ ಗಟ್ಟಿಯಾಗಿ ಆಚರಿಸುವುದು.

(ಆ) ತುಟಿಚಲನೆಯೊಂದಿಗೆ ತನಗೆ ಮಾತ್ರ ಕೇಳುವಂತೆ ಉಚ್ಚರಿಸುವುದು. ಇದನ್ನು ಉಪಾಂಶು ವಿಧಾನವೆನ್ನುತ್ತಾರೆ. ಇದನ್ನು ಸ್ಮರಣ, ಕೀರ್ತನ ಭಕ್ತಿಗಳೆರಡರಲ್ಲೂ ಕಾಣಬಹುದು. ತ್ಯಾಗರಾಜರು ಈ ಜಪಯಜ್ಞದಿಂದಲೇ ಶ್ರೀರಾಮನ ದರ್ಶನ ಪಡೆದುದು. ಅವರು ೯೬ ಕೋಟಿ ರಾಮನಾಮಜಪ ಪೂರ್ಣಗೊಳಿಸಿದ ನಂತರ ಅವರಿಗೆ ಶ್ರೀರಾಮನ ದಿವ್ಯಮಂಗಳ ವಿಗ್ರಹದ ಕಡೆಯ ದರ್ಶನವಾದಂತೆ ಪ್ರತೀತಿ.

(ಇ) ಸಂಗೀತ ಮತ್ತು ನಾಟ್ಯಗಳೊಂದಿಗೆ ಕೀರ್ತಿಸುವುದು ಮೂರನೆಯ ವಿಧ. ಈ ಎಲ್ಲ ವಿಧಗಳನ್ನೂ ತ್ಯಾಗರಾಜರು ಸಮರ್ಥಿಸುತ್ತಾರೆ. ಅವರು 'ದೀನ ಜನಾವನ ಶ್ರೀರಾಮ' ಮತ್ತು 'ರಾಮ ಕೋದಂಡರಾಮ' ರಚನೆಗಳಲ್ಲಿ ರಾಮನಾಮವನ್ನು ಕ್ರಮವಾಗಿ ೪೨ ಮತ್ತು ೨೬ ಬಾರಿ ಉಚ್ಚರಿಸುತ್ತಾರೆ. 'ಸಾರಮೇಗಾನಿ' —ರಚನೆಯಲ್ಲಿ

**ನಾರಾಯಣ ನಾರಾಯಣಯನುಚುನು,**
**ಹರಿ ಹರಿ ಹರಿಯನುಚುನು,**
**ರಾಮ ರಾಮ ರಾಮಯನುಚುನು**

—ಎಂದು ದೇವರ ಬೇರೆ ಬೇರೆ ನಾಮ ಉಚ್ಚರಿಸುವುದನ್ನು ಕಾಣುತ್ತೇವೆ. ಮತ್ತೊಂದು ರಚನೆಯಲ್ಲಿ 'ಶಿವ ಶಿವ ಶಿವ'–ಎನಬಾರದೇ ? ಎಂಬುದವರ ಪ್ರಶ್ನೆ. 'ಹರಿದಾಸುಲು ವೆಡಲೆ'–ರಚನೆಯಲ್ಲಿ 'ಹರಿಗೋವಿಂದ ನರಹರಿ ರಾಮಕೃಷ್ಣಾ' ಎಂದು ಒಂದರ ನಂತರ ಮತ್ತೊಂದನ್ನು ಉಚ್ಚರಿಸುತ್ತಾ ಹರಿದಾಸರು ಹೊರಟಿರುವುದನ್ನು ಮನಗಾಣಿಸುತ್ತಾರೆ. ಇವುಗಳಂತೆಯೇ 'ಇನ್ನಾಳ್ಳವಲೆ'–ರಚನೆಯಲ್ಲಿ ಧರ್ಮಾಂಬಿಕೆಯ ನಾಮ ಅಳವಟ್ಟಿದೆ. ಹೀಗೆ ದೇವರ ಯಾವುದೇ ನಾಮವನ್ನೂ ಅಥವಾ ವಿವಿಧ ನಾಮಗಳನ್ನೂ ಕೀರ್ತಿಸಬಹುದೆಂಬುದು ತ್ಯಾಗರಾಜರ ಅಭಿಪ್ರಾಯವಾಗಿದೆ.

ತ್ಯಾಗರಾಜರ ಮಾತಿನಂತೆ, ಸತತವೂ ದೇವರ ಗುಣಭಜನೆಯನ್ನು ಮಾಡುವವರು ಮಹಾನುಭಾವರು.

**ಸಂತತಂಬುನನು ಗುಣಭಜನಾನಂದ ಕೀರ್ತನಮು ಸೇಯುವಾರು**
**(ಎಂದರೋಮಹಾನುಭಾವುಲು)**

ಏಕೆಂದರೆ ಜಪಯಜ್ಞದ ಈ ವೇಳೆಯಲ್ಲಿ ಭಜಕನಿಗೆ ಜಗತ್ತೆಲ್ಲವೂ ದೈವಮಯವಾಗಿರುತ್ತದೆ.

**ನೀ ಜಪಮುಲ ವೇಳ ಈ ಜಗಮುಲು ನೀವ್ಯೆ ರಾಜಿಲ್ಲುನಯ್ಯ**
**(ಇಂತಕನ್ನಾನಂದ)**

ಆತ ಪರರ ಭಯವಿಲ್ಲದೆ ತುಂಬುರನಂತೆ ತನ್ನ ತಂಬೂರಿ ಹಿಡಿದು ದೈವ ಸನ್ನಿಧಿ

ಯಲ್ಲಿ ನರ್ತಿಸುತ್ತಾ ಕೀರ್ತಿಸುತ್ತಾ ಮೈಮರೆಯುತ್ತಾನೆ, ಧನ್ಯನೆನಿಸುತ್ತಾನೆ.

**ವೆನುಕದೀಕ ತನ ಮನಸು ರಂಜಿಲ್ಲಗ,**
**ತುಂಬುರುವಲೆ ತನ ತಂಬೂರಿಬಟ್ಟಿ ದ-**
**ಯಾಂಬುಧಿ ಸನ್ನಿಧಾನಂಬುನ ನಟಿಯಂಚು**

**(ಅತಡೇಧನ್ಯುಡು)**

ತ್ಯಾಗರಾಜನುತನ ನಾಮಗಳನ್ನು ಕೀರ್ತಿಸುವವನಿಗೆ ಸರಿಸಾಟಿ ಯಾರೂ ಇಲ್ಲ.

**"ಹರಿಯನುವಾನಿಕಿ ಸರಿಯೆವ್ವರೇ ?"**

**(ಹರಿಯನುವಾನಿಕಿ ಸರಿಯೆವ್ವರೇ)**

ಹರಿನಾಮ ಭಜನೆಯಿಂದ ಆನಂದ ಹೊಂದದ, ಅರಸಿಕರನ್ನು ತ್ಯಾಗರಾಜರು ಕಂಡೇ ಇಲ್ಲ.

**"ನೀ ಭಜನಗಾನ ರಸಿಕುಲ ನೇನೆಂದು ಗಾನರ"**

**(ನೀ ಭಜನಗಾನ)**

ಅವರ ಪ್ರಕಾರ ರಾಮನಾಮದಲ್ಲಿ ಪ್ರೇಮವಿಲ್ಲದವರು, ರಾಮನಾಮ ಚಿಂತನೆಯಿಲ್ಲದವರು ಅಸುರರೇ ಸರಿ. ಅಂತಹವರ ಬದುಕು ನಿರರ್ಥಕ.

**ರಾಮಚಂದ್ರ ನೀ ನಾಮಮಂದು ನಿಜ**
**ಪ್ರೇಮಲೇನಿ ಬ್ರತುಕೇಮಿ ?**
**ದೊರಕರಾನಿ ನೀ ಚರಣಭಕ್ತಿ ಯೇ-**
**ಮರಿನ ಮಾನವುಡಸುರುಡೇ**

**(ಪಾಹಿಪರಮಾತ್ಮ)**

ಮೇಲಿನ ಸಾಲಿನಲ್ಲಿ 'ಅಲಭ್ಯವಾದ ಚರಣಭಕ್ತಿ' (ದೊರಕರಾನಿ ನೀ ಚರಣಭಕ್ತಿ) ಎಂಬ ಮಾತು ಗಮನಾರ್ಹ. ದೇವರಲ್ಲಿನ ಭಕ್ತಿ ಒಬ್ಬನಿಗೆ ಅಷ್ಟು ಸುಲಭವಾಗಿ ಲಭ್ಯವಲ್ಲ. ಈಶ್ವರನ ಅದ್ಭುತಾಕೃತಿಯನ್ನು ನೋಡುತ್ತಾ (ಮನಸ್ಸಿನಲ್ಲಿಯೇ) ಮೈಮರೆಯುವುದೇನೂ ಮಕ್ಕಳಾಟಿಕೆಯಲ್ಲ. ಇದಕ್ಕೆ ದೈವಕೃಪೆಯೂ ಇರಬೇಕು. ಅದರಿಂದಲೇ ತ್ಯಾಗರಾಜರು ದೇವರ ಜಪ, ಸ್ಮರಣೆ, ಪದಪೂಜೆಗಳನ್ನು ಆತನೇ ದಯಪಾಲಿಸಬೇಕೆಂದು ಪ್ರಾರ್ಥಿಸುತ್ತಾರೆ.

(ಅ) **ಹಾಟಕ ಸಮಂಬೈನ ಯದ್ಭುತಾಕೃತಿನಿ ನೇ**
**ನಾಟ ಜೇಸುಕೊನಿ ಹೃನ್ನಾಳೀಕಮುನನು ಮಾಟಿ**
**ಮಾಟಿಕಿ ಜೂಚಿ ಮೈಮರಚಿಯುಂಡುನದಿ ಆಟಲಾ !**

**(ದರ್ಶನಮುಸೇಯ)**

(ಆ) **ಮಾ ರಸನಮುನ ನೀ ನಾಮಮು ಮಾರುಮಾರು**
**ಬಲ್ಕನು ದಯಚೇಯುಮು**

**(ಶ್ರೀರಘುವರ)**

**ನೀಜಪಮು ನೀಸ್ಮರಣ ನೀಪದ**
**ಪೂಜ . . . . . . . . . . ಯೊಸಗಿ**
**ರಾಜಿಗಾ ದಯಚೇಯು . . . . . .**

**(ನರಸಿಂಹಾ ನನ್ನು ಬ್ರೋವವೇ)**

**ಸದ್ಭಜನಸೇಯು ಮಾರ್ಗಮುನು ಜೂಪವೇ**

**(ಭಜನಸೇಯು ಮಾರ್ಗಮುನು ಜೂಪವೇ)**

(ಇ) ಸಂಗೀತ ಮಿಳಿತವಾದ ಸಂಕೀರ್ತನೆ ವಿಶಿಷ್ಟವಾದುದು. ತ್ಯಾಗರಾಜರ ಮಾತಿನಂತೆ ಭಾಗವತರು ಸಂಗೀತದೊಂದಿಗೆ ಮಾಡಿದ ಸ್ತುತಿಯು ಶಿವನನ್ನು ಪ್ರೀತಿಗೊಳಿಸುತ್ತದೆ. ಹಾಗೆ ಸ್ತುತಿಸುವ ಭಾಗವತರನ್ನು ಕರುಣಾನಿಧಿಯಾದ ನಾಗಭೂಷಣನು ರಕ್ಷಿಸಿ, ಅವರ ಅಭೀಷ್ಟಗಳನ್ನು ನೆರವೇರಿಸುತ್ತಾನೆ.

**ಭಾಗವತುಲು ಹರಿನಾಮ ಕೀರ್ತನಮು**
**ಬಾಗುಗ ಸುಸ್ವರಮುಲತೋ ವಿಂತ**
**ರಾಗಮುಲನು ಯಾಲಾಪಮು ಜೇಯು ವೈ**
**ಭೋಗಮುಲನು ಜೂಚಿ**
**ನಾಗಭೂಷಣುಡು ಕರುಣಾನಿಧಿಯೈ**
**ವೇಗಮು ಸಕಲ ಸುಜನ ರಕ್ಷಣಮುನ**
**ಜಾಗರೂಕುಡೈ ಕೋರ್ಕೆಲನೊಸಗು .......**

**(ಮುಚ್ಚಟ ಬ್ರಹ್ಮಾದುಲಕುದೊರಕುನಾ)**

ಇದನ್ನು ತಿಳಿದೇ ತ್ಯಾಗರಾಜರು ರಾಗಲಯಾದಿಗಳೊಂದಿಗೆ ಭಜಿಸುತ್ತಿದ್ದಾರೆ (ಆನಂದಸಾಗರ). ಏಕೆಂದರೆ ದೇವರು ಸಂಗೀತಲೋಲ (ಶ್ರೀರಘುವರಾಪ್ರಮೇಯ), ಗಾನಲೋಲ (ಜಾನಕೀರಮಣ). ಆದ್ದರಿಂದಲೇ ತ್ಯಾಗರಾಜರು ಶತರಾಗರತ್ನಮಾಲಿಕೆಗಳನ್ನು ರಚಿಸಿ ಹಾಡಿದ್ದಾರೆ. ಇವುಗಳಿಂದ ರಾಮ ರಂಜಿಸಲ್ಪಟ್ಟಿದ್ದಾನೆ.

**ಕೀರ್ತನ ಸುಶತಕ ಮೊನರ್ಚುಕೊನ್ನ ತ್ಯಾಗರಾಜನುತುನಿ**

**(ಅಪರಾಧಮುಲನೋರ್ವ)**

**"ರಾಗರತ್ನ ಮಾಲಿಕಚೇ ರಂಜಿಲ್ಲುನಟ ಹರಿ ಶತ"**

**(ರಾಗರತ್ನಮಾಲಿಕಚೇ)**

ಭಗವಂತನ ರೂಪ, ಗುಣ, ಮಹಿಮೆ, ಇತ್ಯಾದಿ ಭಗವತ್ಪರವಾದ ವಿಷಯಗಳನ್ನು ಪ್ರಶಂಸಿಸುವ ಕೀರ್ತನ ಭಕ್ತಿಯು ಕೇವಲ ಬಾಹ್ಯಾಡಂಬರವಲ್ಲ. ಇಂತಹ ಸಂಕೀರ್ತನೆಯನ್ನು ಹೇಗೆ ಆಚರಿಸಬೇಕೆಂಬುದನ್ನೂ ತ್ಯಾಗರಾಜರೇ ನಿರ್ದೇಶಿಸುತ್ತಾರೆ. ಈ ಪ್ರಕಾರ,

(ಅ) ಅರೆನಿಮಿಷವಾದರೂ ಇಂದ್ರಿಯಗಳೆಂಬ ಬಾಗಿಲನ್ನು ಮುಚ್ಚಿ ಶ್ರೀರಾಮನ ನಿಜಮರ್ಮವನ್ನು ತಿಳಿದು ರಾಮಚಿಂತನೆಯೊಂದಿಗೆ ನಾಮಸಂಕೀರ್ತನೆ ಮಾಡಬೇಕು.

**ತೆಲಿಸಿ ರಾಮ ಚಿಂತನತೋ ನಾಮಮು**
**ಸೇಯವೇ.**
**ತಲಪುಲನ್ನಿ ನಿಲಿಪಿ ನಿಮಿಷಮ್ಮೈನ**
**ತಾರಕ ರೂಪುನಿ ನಿಜತತ್ವಮುಲನು**

**(ತೆಲಿಸಿರಾಮಚಿಂತನತೋ)**

(ಆ) ಹಗಲು-ರಾತ್ರಿಯೆನ್ನದೆ ಶ್ರೀಹರಿಯ ರೂಪಾಲಂಕಾರಗಳನ್ನು ಚಿಂತಿಸುತ್ತಾ ಭಜಿಸಬೇಕು.

**"ರಾಮರಾಮ ಕೃಷ್ಣಾಯನರೇ ರಾತಿರಿ ಪಗಲು"**

**(ರಾಮರಾಮಕೃಷ್ಣಾಯನರೇ)**

**"................ ಮೊಗಮುನ ಚಿಂತಿಂಚಿ ಚಿಂತಿಂಚಿ**
**................ ನಿರತಮುನನು ದಲಚಿ ದಲಚಿ"**

**(ಭಜನಸೇಯರಾದಾ)**

(ಇ) ಎಲ್ಲಿದ್ದರೂ ಹರಿ ಒಬ್ಬನೇ ಎಂದು ಸತತವೂ ತನ್ನಲ್ಲೇ ಅಂತರ್ಯಾಮಿಯಾಗಿರುವ ಶ್ರೀರಾಮನನ್ನು ವೈದೇಹೀಭಾಗ್ಯವೇ 'ದೇಹಿದೇಹಿ' ಎನ್ನುತ್ತಾ ರಾಮನಾಮ ಭಜಿಸಬೇಕು (ರಾಮನಾಮಂ ಭಜರೇ).

(ಈ) ಆತ್ಮಾರ್ಪಣ ಭಾವದಿಂದ ನಿಜಜ್ಞಾನ ಹೊಂದಿ ರಾಮಧ್ಯಾನ ಮಾಡಬೇಕು ಎಂದು ಹರಿದಾಸರ ನಿದರ್ಶನದೊಂದಿಗೆ ಸ್ಪಷ್ಟಪಡಿಸುತ್ತಾರೆ.

**"ಜ್ಞಾನಮುತೋ ರಾಮಧ್ಯಾನಮುತೋ ಮೇನುದಾನ ಮೊಸಂಗುಚು"**

**(ಹರಿದಾಸುಲುವೆಡಲೆ)**

ಹೀಗೆ ದೇಹ-ಇಂದ್ರಿಯಗಳನ್ನು ಮರೆತು ಹಗಲು-ರಾತ್ರಿಯೆನ್ನದೆ ಆತ್ಮಾರ್ಪಣಭಾವದಿಂದ ದೇಹಿ ದೇಹಿ ಎಂದು ಭಜಿಸಿರುವುದರಿಂದ ಸತ್ಪದವಿ ಪಡೆಯಬಹುದು. ಕೀರ್ತನ ಭಕ್ತಿಗೆ ಸಮನಾದುದು ಮತ್ತೊಂದಿಲ್ಲ. ಏಕೆಂದರೆ ಸಂಸ್ಕೃತಿ, ನಾಟಕಾಲಂಕಾರ, ವೇದ ಪುರಾಣ ಯಜ್ಞ ಜಪಾದಿಗಳ ಫಲವು ಕ್ಷೀಣಿಸುತ್ತಿದ್ದಂತೆ ಮಾನವನು ಭುವಿಯಲ್ಲಿ ಮತ್ತೆ ಹುಟ್ಟಬೇಕಾಗುತ್ತದೆ. ಆದರೆ ತ್ಯಾಗರಾಜನುತನ ಭಜನೆ ಹೀಗಲ್ಲ. ಅದು ಸತ್ಪದವನ್ನು ನೀಡುವ ಅತ್ಯುತ್ತಮ ಮಾರ್ಗವಾಗಿದೆ.

**ಸತ್ಪದಮು ನೊಸಂಗೇ ಬಾಟ**
**ತ್ಯಾಗರಾಜನುತುನಿ <u>ಭಜನರಾ</u>**

**(ಕ್ಷೀಣಮ್ಮೈ ತಿರುಗ ಜನ್ಮಿಂಚೇ)**

ಒಂದು ಹಂತದಲ್ಲಿ ತ್ಯಾಗರಾಜರಿಗೆ ಸಂದೇಹವೊಂದು ಮೂಡಿದೆ. ಅದೆಂದರೆ ಸೀತಾಮಾತೆ ಮತ್ತು ಲಕ್ಷ್ಮಣರು ಶ್ರೀರಾಮನ ಅಕ್ಕಪಕ್ಕಗಳಲ್ಲಿ ನಿಂತು ಸೇವಿಸುವ ಭಾಗ್ಯ ಪಡೆದುದು ವಂದನ ಭಕ್ತಿಯಿಂದಲೋ ಅಥವಾ ನಾಮಸಂಕೀರ್ತನ ಭಕ್ತಿಯಿಂದಲೋ ಎಂಬುದು. ತಮ್ಮ ಈ ಸಂದೇಹವನ್ನು ಪರಿಹರಿಸುವಂತೆ ಅವರು ದೇವರನ್ನೇ

ಕೇಳುತ್ತಾರೆ.

ಪಕ್ಕಲ ನಿಲಬಡಿ ಗೊಲಿಚೇ ಮುಚ್ಚಟ
ಬಾಗ ತೆಲ್ಪರಾದಾ
ಸುದತಿ ಸೀತಮ್ಮ ಸೌಮಿತ್ರಿ ರಾಮುನಿ ಕಿರು
ತನುವುಚೇ ವಂದನ ಮೊನರಿಂಚುಚುನ್ನಾರಾ
ಚನುವುನ ನಾಮ ಕೀರ್ತನ ಸೇಯುಚುನ್ನಾರಾ

(ಪಕ್ಕಲ ನಿಲಬಡಿ)

ವಾಸ್ತವವಾಗಿ ತ್ಯಾಗರಾಜರೇ ಕೀರ್ತನಭಕ್ತಿಗೊಂದು ಆದರ್ಶ. ತಮ್ಮ ಜೀವಿತದ ಆದ್ಯಂತಗಳನ್ನೂ ಅವರು ನಾಮಸಂಕೀರ್ತನೆಯಲ್ಲೇ ಕಳೆದಿದ್ದಾರೆ. ಇದರಿಂದ ಅವರ ದೇಹಾದಿ ಇಂದ್ರಿಯ ಸಮೂಹವೆಲ್ಲವನ್ನೂ ಮರೆತು 'ಸೋಹಂ' ಸ್ಥಿತಿಯನ್ನು ಅನುಭವಿಸಿದ್ದಾರೆ. ಇದು ಅವರಿಗೆ ಪೂರ್ಣ ತೃಪ್ತಿ ನೀಡಿದೆ.

ಶ್ರೀಹರಿಕೀರ್ತನಚೇ ದೇಹಾದಿ ಇಂದ್ರಿಯಸ ।
ಮೂಹಮುಲು ಮರಚಿ ಸೋಹಮ್ಮನದೇಚಾಲು ।

(ಇಂತಕನ್ನಾನಂದ)

ವಾಸ್ತವವಾಗಿ ನಾಮ ಸಂಕೀರ್ತನೆ ಅವರ ಉಸಿರೇ ಆಗಿದೆ. 'ಪಾಹಿರಾಮ' ಎನ್ನುತ್ತಲೇ ಅವರು ಈ ಭುವಿಯಲ್ಲಿ ಹುಟ್ಟಿದ್ದಾರೆ.

"ಪಾಹಿರಾಮಯನುಚು ಭುವಿನಿ ಬಾಗಬುಟ್ಟಿತಿ"

(ಪಾಹಿಮಾಂಹರೇ)

ಅತಿಶಯವಾದ ರಾಮನಾಮವನ್ನೇ ಅವರು ತಮ್ಮ ಜೀವನವೆಂದೂ ತಿಳಿದಿದ್ದಾರೆ.

"........ ನೀದು ನಾಮಾತಿಶಯಂಬೇ ಜೀವ-
ನಮನೇಯುನ್ನಾನು ..........."

(ಪರುಲನುವೇಡನು)

ಅಸಮಾನವಾದ ರಾಮನಾಮವನ್ನು ಸತತವೂ ಕೀರ್ತಿಸುವ ವ್ರತವನ್ನು ಅಪೇಕ್ಷಿಸಿದ್ದಾರೆ. ಇದು ತ್ರಿನೇತ್ರನಾದ ಪರಮೇಶ್ವರನಿಂದಲೂ ಪಠಿಸಲ್ಪಡುತ್ತಿದೆ.

"ಸಮರಹಿತ ರಾಮನಾಮಮು
ಸತತಮುಸೇಯ ನೀ ವ್ರತಮು ಕೋರಿತಿ ......."

(ನೀವೇ ನನ್ನೆಡಜೇಸಿತೇ)

"ಮುಕ್ಕಂಟಿ ನೋಟ ಚೆಲಿಗೇನಾಮಮೆ"

(ಚಕ್ಕನಿ ರಾಜಮಾರ್ಗಮು)

ಅವರ ನಿಲುವಿಗೆ ಕಾರಣಗಳನ್ನು ಹೀಗೆ ಹೇಳಬಹುದು. (ಅ) ತ್ಯಾಗರಾಜರಿಗೆ ಬಾಲ್ಯದಲ್ಲೇ ಶ್ರೀರಾಮ ಭಕ್ತಿಯನ್ನು ತಾಯಿತಂದೆಯರು ಬೋಧಿಸಿದ್ದಾರೆ, (ಆ) ಭಕ್ತಿಯಿಂದ ಸ್ತುತಿಸಿದರೆ ಶ್ರೀಹರಿ ಅವರೆಡೆಗೆ ಬರುತ್ತಾನೆಂದು ಗುರೂಪದೇಶವಾಗಿದೆ,

(ಇ) ಕೀರ್ತನ ಭಕ್ತಿಯಿಂದ ಸತ್ಪದವನ್ನು ಪಡೆದ ಭಕ್ತರ ಹಲವು ಕಥೆಗಳು ಅವರಿಗೆ ತಿಳಿದಿದೆ, (ಈ) ಭಕ್ತರಾದ ಅವರ ಮನೆಯಲ್ಲಿ ನರೋತ್ತಮನಾದ ಶ್ರೀರಾಮನು ವಿರಾಜಿಸಿದ್ದಾನೆ.

ಈ ಕಾರಣಗಳಿಂದ ಅವರು ಶ್ರೀರಾಮನ ಜಪ ಮತ್ತು ಪೂಜೆಗಳನ್ನು ಕೈಬಿಡ ಲಾರರು. ಅವರ ಬಾಯಲ್ಲಿ ಶ್ರೀರಾಮನ ನಾಮವು (ಅನವರತ) ರಂಜಿಸುತ್ತಿದೆ.

**ನೀ ನಾಮಮು ನೋಟ ಚೆಲಗಿಯುನ್ನದಿ**

(ನಿನ್ನುವಿನಾ)

ಸತ್ಸ್ವರೂಪನಾದ ಶ್ರೀರಾಮನ ಸನ್ನುತಿ ತತ್ತ್ವವನ್ನು ಅವರು ತಿಳಿದಿದ್ದಾರೆ. ರಾಮ ಸ್ತುತಿಯೇ ನಿಜವಾದ ಹಾಡೆಂದು ತಿಳಿದಿದ್ದಾರೆ (ರಾಮಕೋದಂಡರಾಮ). ಅದರಿಂದ ಅಂತಹ ಹಾಡನ್ನೇ ಹಾಡಿದ್ದಾರೆ (ಪಾಹಿಮಾಂ ಹರೇ). ಆಡಿದರೂ ಹಾಡಿದರೂ ಶ್ರೀರಾಮನನ್ನೇ ಹಾಡಬೇಕು ಎನಿಸಿದೆ. ಏಕೆಂದರೆ ರಾಮನಂಥ ಮತ್ತೊಂದು ದೈವ ವನ್ನು ಅವರು ಕಂಡೇ ಇಲ್ಲ.

**ಆಡಿನ ನಿನ್ನಾಡವಲೆ ಗಾ**
**ಪಾಡಿನ ನಿನ್ನು ಪಾಡವಲೆಗಾ . . . . . .**
**ನೀವಂಟಿ ದೈವಮು ನೇಗಾನ, ನೀರಜಾಕ್ಷ ಶ್ರೀರಾಮಯ್ಯ**

(ನೀವಂಟಿದೈವಮು)

ರಾಮನನ್ನೇ ಭಜನೆ ಮಾಡುವವರು ತಾವೆಂದು, ಅವನಲ್ಲಿ ಅರಿಕೆ ಮಾಡಿಕೊಂಡಿ ದ್ದಾರೆ.

**ನಿನ್ನೇ ಭಜನ ಸೇಯುವಾಡನು**

(ನಿನ್ನೇ ಭಜನ)

ದೇವರನ್ನು ಕೀರ್ತಿಸದೆ ತ್ಯಾಗರಾಜರ ದಾಹ ಹಿಂಗುವುದಿಲ್ಲ.

**ನೀ ಕೀರ್ತಿ ರಾಜಿಗಾ ಪೊಗಡಕನು**
**ತೀರುನಾ ನಾಲೋನಿ ದುಗ್ಧ ?**

(ತೀರುನಾ)

ಅವನ ಗುಣಕಥನವಲ್ಲದೆ ಸ್ನಾನಾದಿ ಸುಕರ್ಮಗಳನ್ನಾಗಲೀ ವೇದಾಧ್ಯಯನವನ್ನಾ ಗಲೀ ಅವರು ತಿಳಿಯರು.

**ಸುಗುಣಮುಲೇ ಚೆಪ್ಪುಕೊಂಟಿ ಸುಂದರ ರಘುರಾಮ ॥**
**ಸ್ನಾನಾದಿ ಸುಕರ್ಮಂಬುಲು ವೇದಾಧ್ಯಯ* ನಂಬುಲೆರುಗ**

(ಸುಗುಣಮುಲೆ)

---

* ದಾನಾಧ್ಯಯನಂಬುಲೆರುಗ ಎಂಬ ಪಾಠವೂ ಉಂಟು. ನೋಡಿ ಕಲ್ಲೂರಿ ವೀರಭದ್ರಶಾಸ್ತ್ರಿ ಸಂ. ಪುಟ ೨೩೯

ಸಂಕೀರ್ತನೆಯಿಂದ ಜಯಶಾಲಿಗಳಾಗಿ ರಾಮನ ಸನಿಹದಲ್ಲಿದ್ದುಕೊಂಡು ಆತನನ್ನು ಉಪಚರಿಸುತ್ತಿರುವವರ ಬಗೆಗೆ ತ್ಯಾಗರಾಜರಿಗೆ ತಿಳಿದಿದೆ. ಇಂತಹ ಭಕ್ತರ ಉಪಚಾರ ಗಳಿಂದ, ತ್ಯಾಗರಾಜರನ್ನು ರಾಮನು ಮರೆಯಬಾರದೆಂಬುದು ಅವರ ಬಿನ್ನಹ. ತ್ಯಾಗ ರಾಜರಿಗೆ ಶ್ರೀರಾಮನ ಕೃಪೆ ಬೇಕಾಗಿದೆ. ಅದಕ್ಕಾಗಿ ಅವರು ದೇವರನ್ನು ಕೀರ್ತಿಸುತ್ತಿದ್ದಾರೆ.

**"ಕೃಪಗಾವಲೆನನಿ ನೇ ನೀ ಕೀರ್ತಿನಿ ಬಲ್ಕುಚುನುಂಡಗ "**

(ಉಪಚಾರಮುಜೇಸೇವಾರು)

ಸತತವೂ ನಾಮಸಂಕೀರ್ತನೆ ಮರೆಯದೆ ಮಾಡುವ ಭಕ್ತರಿಗೆ, ಅಭೀಷ್ಟಗಳನ್ನು ನೀಡುವಾತನೆಂಬುದು ಅವರಿಗೆ ತಿಳಿದಿದೆ.

**ಸಂತತಮು ನಾಮಕೀರ್ತನಮು**
**ಯೇಮರಕನುಯತಿನೇಮಮುಜೇ-**
**ಸೇ ಮಹಾತ್ಮುಲಕು ಕಾಮಿತಫಲದ**

(ರಾಮಸಮಯಮು)

ಹೀಗೆ ನಾಮಸಂಕೀರ್ತನೆಯನ್ನು ನಂಬಿ ಆಚರಿಸಿರುವುದಕ್ಕೆ ತ್ಯಾಗರಾಜರೇ ಒಂದು ನಿದರ್ಶನ. ಬಾಲ್ಯದಿಂದಲೂ ರಾಮಸಂಕೀರ್ತನೆಯನ್ನು ಮಾಡಿದುದರಿಂದ ರಾಮ ಅವತರಿಸಿದುದೇ ಶತರಾಗರತ್ನಮಾಲಿಕೆಗಳನ್ನು ರಚಿಸಿದ ತಮಗೆ ವರನೀಡುವ ಸಲುವಾಗಿರಬಹುದೇ ಎಂದು ಸಂತೋಷಗೊಳ್ಳುತ್ತಾರೆ.

**ಶತ ರಾಗರತ್ನಮಾಲಿಕಲು ರಚಿಂಚಿನ**
**ತ್ಯಾಗರಾಜುಕು ವರಮೊಸಗುಟಂದುಕಾ ?**

(ಏಲಾವತಾರ ಮೆತ್ತುಕೊಂಟಿವೋ)

ತ್ಯಾಗರಾಜರಂತಹ ನಾಮಜಪ ಸಂಕೀರ್ತನಕಾರರಿಗೆ ಭಾಗವತವೇ ಶ್ರೇಷ್ಠ ಪುರಾಣ. ಈ ಪುರಾಣದ ಪ್ರಕಾರ ಜ್ಞಾನಿಗಳು ಸಂಕೀರ್ತನೆಯನ್ನು ಆಧ್ಯಾತ್ಮ ಸಾಧನೆಗಲ್ಲದೆ ಲೌಕಿಕ ಲಾಭಕ್ಕಾಗಿ ಆಚರಿಸುವುದಿಲ್ಲ. ಆಚಾರ್ಯ ಶಂಕರರಿಂದ ಮೊದಲ್ಗೊಂಡು ಎಲ್ಲ ಭಕ್ತರೂ ಅನೇಕ ಸ್ತೋತ್ರ ಕೃತಿಗಳನ್ನು ರಚಿಸಿದ್ದಾರೆ. ಇದರ ಆಧಾರದ ಮೇಲೆ ಪಂಡಿತರೂ, ಸನ್ಯಾಸಿಗಳನೇಕರೂ ನಾಮ ಸಿದ್ಧಾಂತದ ಈ ಮಾದರಿಗೆ ೧೭-೧೮ನೇ ಶತಮಾನಗಳಲ್ಲಿ, ಚೋಳದೇಶದಲ್ಲಿ ನೂತನ ಆಯಾಮವೊಂದನ್ನೇ ಕಲ್ಪಿಸಿದರು. ಇದನ್ನು ಪ್ರಚುರ ಪಡಿಸಿದ ಪ್ರಮುಖರಲ್ಲಿ 'ಶ್ರೀಧರ ವೆಂಕಟೇಶರು' ಅಥವಾ 'ಅಯ್ಯಾವಾಳ್' ಒಬ್ಬರು. ಇವರು 'ಆಖ್ಯಾಷಷ್ಠಿ' (ಅರುವತ್ತು ಶ್ಲೋಕ ಅಥವಾ ಪದ್ಯಗಳು) ಮತ್ತು 'ಭಗವನ್ ನಾಮಭೂಷಣ' ಎಂಬ ಗ್ರಂಥಗಳನ್ನು ಬರೆದಿದ್ದಾರೆ. ಇವರ ನಂತರ 'ಶ್ರೀಬೋಧೇಂದ್ರ'ರೆಂಬ ಸನ್ಯಾಸಿಗಳು ಈ ಸಿದ್ಧಾಂತ ಕುರಿತಂತೆ 'ನಾಮಾಮೃತ ರಸಾಯನ', 'ನಾಮಾಮೃತ ರಸೋದಯ', 'ನಾಮಾಮೃತ ಸೂರ್ಯೋದಯ' ಮತ್ತು 'ಭಗವನ್ನಾಮಾಮೃತಾರ್ಣವ' ಎಂಬ ನಾಲ್ಕು ಗ್ರಂಥಗಳನ್ನು ಬರೆದರು. ತ್ಯಾಗರಾಜರ

ಗುರುಗಳಾದ 'ಶ್ರೀ ರಾಮಕೃಷ್ಣಾನಂದ'ರೂ ಈ ಸಿದ್ಧಾಂತಕ್ಕೆ ಸೇರಿದವರೇ. ಇವರೆಲ್ಲರ ಪ್ರತ್ಯಕ್ಷ ಹಾಗೂ ಪರೋಕ್ಷ ಪ್ರಭಾವದಿಂದ ತ್ಯಾಗರಾಜರೂ 'ದೇವತಾನಾಮಮಹಾತ್ಮೆ' ಎಂಬ ಕೃತಿಯನ್ನೇ ಅಲ್ಲದೆ ನೂರಾರು ಸಂಕೀರ್ತನಾರೂಪದ ಕೃತಿಗಳನ್ನೂ ರಚಿಸಿದ್ದಾರೆ.[೨೦] ಈ ಪ್ರಕಾರ ಅವರಿಗೆ ಶ್ರೀರಾಮನಾಮ ಸಂಕೀರ್ತನೆಯೇ ಜೀವಿತದ ಸಾರವಾಗಿದೆ. ಹೀಗಾಗಿ ತ್ಯಾಗರಾಜರು ರಾಮನನ್ನು ಭಜಿಸುವಂತೆ ಜನಸಂಬೋಧಿತವಾಗಿ ಹಾಗೂ ಮನಸ್ಸಂಬೋಧಿತವಾಗಿ ಹಲವು ಕೃತಿಗಳನ್ನು* ರಚಿಸಿದ್ದಾರೆ.

ತ್ಯಾಗರಾಜರ ದೃಷ್ಟಿಯಲ್ಲಿ ಕೀರ್ತನ ಭಕ್ತಿಯು ಜನನಾದಿಗಳು, ರೋಗ, ದುರಾಸೆ ಮತ್ತು ಬಂಧು ಭ್ರಮೆಗಳಿಂದ ಒಬ್ಬನನ್ನು ಮುಕ್ತಗೊಳಿಸುತ್ತದೆ.

**ಪರಲೋಕ ಸಾಧನಮೇ . . . ಶ್ರೀರಾಮಭಜನ ॥**
**ಜನನಾದಿ ರೋಗ ಭಯಾದುಲಚೇ**
**ಜಗಮಂದು ಗಲ್ಗು ದುರಾಸಲಚೇ**
**ತನಯಾದಿ ಬಾಂಧವುಲ ಭ್ರಮಚೇ**
**ತಗಲನೀದು ತ್ಯಾಗರಾಜನುತುನಿ ಭಜನ ॥**

**(ಪರಲೋಕ ಸಾಧನಮೇ)**

ಅದು ಜನ್ಮವನ್ನು ರಕ್ಷಿಸುವ ದಿವ್ಯಮಂತ್ರವೂ ಹೌದು. ಆದ್ದರಿಂದ ತಡಮಾಡದೆ ರಾಮನಾಮವನ್ನು ಭಜಿಸಬೇಕಾಗಿದೆ.

**ರಾಮನಾಮಮು ಜನ್ಮರಕ್ಷಕಮಂತ್ರಂ**
**ತಾಮಸಮು ಸೇಯಕ ಭಜಿಂಪವೇ ಮನಸಾ**

**(ರಾಮನಾಮಮು)**

ಹೀಗೆ ನಿಧಾನಿಸದೆ ರಾಮನಾಮವನ್ನು ಭಜಿಸಬೇಕೆಂದು ತ್ಯಾಗರಾಜರು ಮನಸ್ಸಂಬೋಧನೆ ಮಾಡಿಕೊಳ್ಳುತ್ತಾರೆ. ಏಕೆಂದರೆ, ರಾಮನಾಮವೇ ಪರಮ ಶ್ರೇಷ್ಠವೆಂದೂ, ಅದೇ ಅವರ ಜೀವನವೆಂದೂ ತ್ಯಾಗರಾಜರು ನಂಬಿದ್ದಾರೆ. ವಾಸ್ತವವಾಗಿ ರಾಮನಾಮವು ಹರಿಹರರ ಅಭೇದವನ್ನು ಪ್ರತಿನಿಧಿಸುತ್ತದೆ. 'ಓಂ ನಮೋ ನಾರಾಯಣಾಯ' ಎಂಬ ನಾರಾಯಣ ಅಷ್ಟಾಕ್ಷರೀ, 'ಓಂ ನಮಃ ಶಿವಾಯ' ಎಂಬ ಶಿವ ಪಂಚಾಕ್ಷರಿಗಳ ಸಾರವನ್ನು ಇದು ಒಳಗೊಂಡಿದೆ. ಅಷ್ಟಾಕ್ಷರಿಯಲ್ಲಿ 'ರಾ' ಎಂಬುದು ಜೀವ. ಈ ಅಕ್ಷರ ಲೋಪವಾದಾಗ 'ನಾರಾಯಣಾಯ' ಎಂಬುದಕ್ಕೆ ಬದಲಾಗಿ 'ನಾಯಣಾಯ' ಎಂದರೆ ಮನುಷ್ಯನಿಗೆ 'ಮಾರ್ಗ' ಅಥವಾ 'ದಿಕ್ಕೆ' ಇಲ್ಲ ಎಂದಾಗುತ್ತದೆ. ಇದರಂತೆಯೆ ಪಂಚಾಕ್ಷರಿಯಲ್ಲಿ 'ಮ' ಎಂಬುದು ಜೀವ. ಇಲ್ಲಿ ಈ ಅಕ್ಷರ ಲೋಪವಾದಾಗ 'ನಮಃ ಶಿವಾಯ' ಎಂಬುದಕ್ಕೆ ಬದಲಾಗಿ 'ನಶಿವಾಯ' ಎಂದರೆ 'ಶಿವನಿಲ್ಲ' ಅಥವಾ 'ಮಂಗಳಕರವಲ್ಲ' ಎಂದು ಅರ್ಥವಾಗುತ್ತದೆ. ಅಷ್ಟಾಕ್ಷರಿಯ ಜೀವಸ್ವರ 'ರಾ', ಪಂಚಾಕ್ಷರಿಯ

---

* ನೋಡಿ—ರಾಮ ರಾಮಕೃಷ್ಣಾ ಏನರೇ; ಭಜನಸೇಯರಾದಾ; ಭಜನಸೇಯವೇ; ಭಜರಾಮಂ ಸತತಂ; ಭಜರೇ ಭಜಮಾನಸ; ರೇ ಮಾನಸ ಚಿಂತಯಾ; ವಿನವೇ ಓಮನಸಾ ಮುಂತಾದವು.

ಜೀವಸ್ವರ 'ಮ' ಗಳು ಸೇರಿ ರಾಮನಾಮ ಉಂಟಾಗಿದೆ. ಹೀಗಾಗಿ ಶಿವ, ಮಾಧವ, ಬ್ರಹ್ಮ, ಪರಬ್ರಹ್ಮರೆಲ್ಲರೂ ಇಲ್ಲಿ ಅಂತರ್ಗತರೇ ಆಗಿದ್ದಾರೆ. ಈ ಅಂಶವನ್ನು ಸೂಚಿಸುವ ಸಲುವಾಗಿಯೇ ತ್ಯಾಗರಾಜರು ದೇವರನ್ನು ಶಿವ, ಮಾಧವ, ಕಮಲಭವ ಅಥವಾ ಪರಬ್ರಹ್ಮ—ಇವರಲ್ಲಿ ರಾಮನು ಯಾರೆಂದು ನಿರ್ಧರಿಸುವುದೆನ್ನುತ್ತಾರೆ.

**ಎವರನಿ ನಿರ್ಣಯಿಂಚಿರಿರಾ ನಿನ್ನೆಟ್ಲಾರಾಧಿಂಚಿರಿರಾ ನರವರು**
**ಶಿವುಡನೋ ? ಮಾಧವುಡನೋ ? ಕಮಲಭವುಡನೋ ?**
**ಪರಬ್ರಹ್ಮನೋ ?**
**ಶಿವಮಂತ್ರಮುನಕು 'ಮ' ಜೀವಮು ಮಾ**
**ಧವ ಮಂತ್ರಮುನಕು 'ರಾ' ಜೀವಮು ......**

(ಎವರನಿ)

ಹೀಗೆ ರಾಮನು ವೈಷ್ಣವ-ಶೈವ ಮಹಾಸಮನ್ವಯದ ಪ್ರತೀಕನಾಗಿದ್ದಾನೆ. ಸಾಧಾರಣ ಅರ್ಥದಲ್ಲಾದರೂ ರಾಮನು ಯಾವುದೇ ಒಂದು ನಿರ್ದಿಷ್ಟ ಜಾತಿ, ಪಂಥ, ಪಂಗಡಕ್ಕೆ ಸೀಮಿತನಲ್ಲ. ಆತ ಎಲ್ಲ ದೇವರೂ ಹೌದು. ಈ ದೃಷ್ಟಿಯಿಂದಲೇ ತ್ಯಾಗರಾಜರು ರಾಮನನ್ನು ಆರಾಧಿಸುವುದು.

ಉಪನಿಷದ್‌ಬ್ರಹ್ಮರ 'ಉಪೇಯನಾಮ ವಿವೇಕ'ದಲ್ಲಿ ರಾಮನಾಮವು ಅಷ್ಟಾಕ್ಷರೀ ಮತ್ತು ಪಂಚಾಕ್ಷರಿಗಳ ಸತ್ವವೆಂಬುದು ಸಾಕಷ್ಟು ಧೀರ್ಘವಾಗಿ ಪ್ರಸ್ತಾಪಗೊಂಡಿದೆ. ತ್ಯಾಗರಾಜರು ಮೇಲಿನ ಕೃತಿಯ ಚರಣದಲ್ಲಿ ರಾಮ ಎಂದು ಕ್ರಮವಾಗಿ ಹೇಳದೆ 'ಮರಾ' ಎಂದಿದ್ದಾರೆ. ಬೇಡನಾಗಿದ್ದ ವಾಲ್ಮೀಕಿಗೆ ಲಭ್ಯವಾದ ಉಪದೇಶ ಇದೇ ರೀತಿ ಇದ್ದಿತೆಂಬುದನ್ನು ಇಲ್ಲಿ ಸ್ಮರಿಸಬಹುದು.

ಶ್ರೇಷ್ಠವಾದ ಇಂತಹ ರಾಮನಾಮವು ಭಕ್ತರಿಗೆ ಇಹ-ಪರಗಳನ್ನು ನೀಡಿರುವುದಕ್ಕೆ ಧ್ರುವ, ಅಜಾಮಿಳ, ಅಜಗರ ಅಥವಾ ಸುದರ್ಶನ (ಪಾಮು) ಗಜೇಂದ್ರಾದಿಗಳೇ ಸಾಕ್ಷಿ. ಜಾತಿ ಧರ್ಮವನ್ನು ತೊರೆದು ಜಾತಿಹೀನರಂತೆ ಆದವರೂ, ಪ್ರಾಣಿಗಳೂ, ಪಾತಕಿಗಳೂ, ನಾಮಸಂಕೀರ್ತನೆ ಮಾಡಿ ಸರ್ವದೋಷಗಳಿಂದ ಮುಕ್ತರಾಗಿದ್ದಾರೆ.

**ಜಾತಿಹೀನುಲೈನವಾರು ಜಾಣುಲೈನಾರದೇ ಸಾಕ್ಷಿ**
**ಪಾಮುಪಂದಿ ಗಜ ಪಿಶಾಚ ಪಾತಕಾಗ್ರೇಸರುಲೇ ಸಾಕ್ಷಿ**

(ರಾಮರಾಮಕೃಷ್ಣಾಯನರೇ)

ಈ ಕಾರಣಗಳಿಂದ ರಾಮನಾಮ ಸಂಕೀರ್ತನೆಯು ಇಹಪರ ಸಾಧನವಾಗಿದೆ. ತ್ಯಾಗರಾಜರು ಶ್ರೀರಾಮನ ಭಜನೆ ಪರಲೋಕಕ್ಕೆ ಸಾಧನವೆಂದೂ ಇಹಪರಗಳೆರಡಕ್ಕೂ ಸಾಧನವೆಂದೂ ಸಾರುತ್ತಾರೆ.

**ತ್ಯಾಗರಾಜು ತೆಲಿಸಿಕೊನ್ನ**
**ತಾರಕ ಮಿಹಪರ ಸಾಧನಮು**

(ರಾಮರಾಮಕೃಷ್ಣಾಯನರೇ)

ಕೀರ್ತನ ಭಕ್ತಿಯು ಯಮನನ್ನೂ ಜಯಿಸಬಲ್ಲುದೆಂಬುದು ತ್ಯಾಗರಾಜರ ನುಡಿ. ಇದನ್ನು ಅವರು ಬಲು ಸ್ವಾರಸ್ಯವಾಗಿ ಹೀಗೆನ್ನುತ್ತಾರೆ. ಭೂಲೋಕದ ಜನರು ಸದ್ಭಜನೆ ಮಾಡುವುದನ್ನು ಕಂಡು ಯಮನು ಚಿಂತೆಗೊಳಗಾದನಂತೆ. ಶೂಲ ಪಾಶಗಳನ್ನು ಹಿಡಿದು ನಿಂತ ತನ್ನ ಭಟಸಮೂಹದ ಕೋಲಾಹಲವು ಉಡುಗುವ ಕಾಲಬಂದಿತೆಂದೂ, ದಾರಿ ತಿಳಿಯದವರಾದರೂ ತನ್ನ ಲೋಕಕ್ಕೆ ಬರುವರೆಂದು ಕಾಯ್ದರೆ, ಅವರೂ ಸಹ ಸಂಕೀರ್ತನೆಯಲ್ಲಿ ತೊಡಗಿದ್ದಾರಂತೆ.

**ಚಿಂತಿಸ್ತುನ್ನಾಡೆ ಯಮುಡು**
**ಸಂತತಂಬು ಸುಜನುಲೆಲ್ಲ**
**ಸದ್ಭಜನ ಜೇಯುಟಜೂಚಿ**
**ಶೂಲಪಾಶಧರ ಭಟ ಜಾಲಮುಲ ಜೂಚಿ ಮರಿ ಮೀ**
**ಕೋಲಾಹಲಮುಲುಡಿಗೇ ಕಾಲಮಾಯೆನೇ ಯನುಚು**
**ದಾರಿತೆಲಿಯಲೇಕ ತಿರಿಗೇವಾರಲೈನ ಚಾಲುನಂಟೇ**
**ಸಾರಮನಿ ತ್ಯಾಗರಾಜ ಸಂಕೀರ್ತನಮು ಪಾಡೇರನುಚು**

(ಚಿಂತಿಸ್ತುನ್ನಾಡೇ)

ಭಜನಪರರಿಗೆ ಯಮನ ಭಯವಷ್ಟೇ ಅಲ್ಲ, ಗ್ರಹಗಳೂ ಏನನ್ನೂ ಮಾಡಲಾರವೆಂದು ತ್ಯಾಗರಾಜರು ಘೋಷಿಸುತ್ತಾರೆ. ಆದರೆ ಅವರು ಕಾಮಾದಿ ಅರಿಷಡ್ವರ್ಗಗಳನ್ನು ನಿಗ್ರಹಿಸಿ ಹರಿಯನ್ನು ಭಜಿಸಬೇಕೆಂಬುದನ್ನು ಖಚಿತವಾಗಿ ನುಡಿಯುತ್ತಾರೆ.

**ಕಾಮಾದಿ ರಿಪುಲ ನಿಗ್ರಹಮುಚೇಯು ಹರಿನಿಭಜಿಂಚು**
**ತ್ಯಾಗರಾಜುನಿಕಿ, ರಸಿಕಾಗ್ರೇಸರುಲಕು**
**ಗ್ರಹಬಲಮೇಮಿ ?**

(ಗ್ರಹಬಲಮೇಮಿ)

ದೇವಾಧಿದೇವತೆಗಳಿಗೆ ಅವರವರ ಸ್ಥಾನವನ್ನು ಗಳಿಸಿಕೊಟ್ಟಿರುವುದೂ ರಾಮ ಭಜನೆಯೇ.

**ಅಜ ರುದ್ರ ಸುರೇಶುಲಕು ಆಸ್ಥಾನಮೊಸಗು ರಾಮ**

(ಭಜನಪರುಲಕೇಲ)

ಹೀಗೆ ಮನುಷ್ಯರಿಗಷ್ಟೇ ಅಲ್ಲ—ದೇವತೆಗಳಿಗೂ ಸತ್ಫಲಗಳನ್ನು ನೀಡಿರುವ ರಾಮ ನಾಮವನ್ನೂ ಅದರ ಜಪದ ಮಹಿಮೆಯನ್ನೂ ತ್ಯಾಗರಾಜರು ಒತ್ತಿ ನುಡಿದಿದ್ದಾರೆ. ಅವರು ಮಾನವ ಕುಲಕ್ಕೆ ನೀಡುವ ಸಂದೇಶವಾದರೂ ಏನೆಂದರೆ, ಸಂಸಾರಿಗಳಾಗಿದ್ದರೂ ಚಿಂತೆಯಿಲ್ಲ, ಧ್ಯಾನಯೋಗಯುತರಾಗಿ ರಾಮನಾಮವನ್ನು ಭಜಿಸಿರಿ. ಈ ಶರೀರ ಲಭ್ಯವಾದುದಕ್ಕೆ ಸೀತಾರಾಮನಾಮವನ್ನೇ ನುಡಿಯಬೇಕು ಎಂಬುದೇ ಆಗಿದೆ.

**ಸದಾ ಧ್ಯಾನಯೋಗಯುತುಡೈ ನೀ ನಾಮಮು ಬಲ್ಕುಚು**

(ಸಂಸಾರುಲೈತೇ)

**ಈ ಮೇನು ಗಲ್ಗಿನಂದುಕು ಸೀತಾರಾಮ**
**ನಾಮಮೆ ಬಲ್ಕವಲೆನು**

(**ಈ ಮೇನು ಗಲ್ಗಿನಂದುಕು**)

ನಾಮಗಳೆಂಬ ವಿವಿಧ ಪುಷ್ಪಗಳಿಂದ ಪೂಜಿಸುವ ನರಜನ್ಮವೇ ಸಫಲವಾದುದು.

**ನಾಮಕುಸುಮಮುಲಚೇ ಪೂಜಿಂಚೇ**
**ನರಜನ್ಮಮೇ ಜನ್ಮಮು**

(**ನಾಮಕುಸುಮ**)

ಜಾತಿ ಕುಲ ಬಡವಬಲ್ಲಿದನೆಂಬ ಭೇದಭಾವವಿಲ್ಲದೆ ಎಲ್ಲರೂ ಸೇರಿ ಎಲ್ಲ ಕಾಲದಲ್ಲಿಯೂ ಮಾಡಬಹುದಾದ ಕೀರ್ತನೆಯು ಅತಿಶಯವಾದುದು. ಇದು ಅನ್ನಮಯ್ಯ ಹೇಳುವಂತೆ 'ಕಡಿಮೆಬೆಲೆಯದಾದರೂ ಅಧಿಕಫಲವುಳ್ಳದ್ದು'.[೧೧] ಹೀಗೆಂದೇ ಭಕ್ತರು ನಾಮಸಂಕೀರ್ತನೆಯನ್ನು ವಿಶೇಷವಾಗಿ ಮಾನ್ಯಮಾಡಿದ್ದಾರೆ. ಸಂಕೀರ್ತನ ಭಕ್ತಿಯ ಮಹತ್ವವೇ ಹರಿಕಥೆ, ಕಥಾಕಾಲಕ್ಷೇಪ ಅಥವಾ ಕೀರ್ತನ ಕಲೆಯೆಂಬ ಮತ್ತೊಂದು ಪರಂಪರೆಯ ಸೃಷ್ಟಿಗೂ ಕಾರಣವಾಗಿದೆ. ಕೀರ್ತನಕಾರರು (ದಾಸರು) ಭಗವತ್ಸಂಬಂಧಿತವಾದ ಕಥಾಭಾಗಗಳನ್ನು ಆಯ್ದುಕೊಂಡು ಗದ್ಯ, ಪದ್ಯ, ಶ್ಲೋಕ, ಅಭಿನಯ, ಉಪಕಥೆ ಮುಂತಾದವುಗಳೊಂದಿಗೆ ಹರಿಕಥೆ ಮಾಡುವುದನ್ನು ನಾವಿಲ್ಲಿ ಸ್ಮರಿಸಿದರೆ ತಪ್ಪಾಗಲಾರದು.

**ಸ್ಮರಣ** : ಶ್ರವಣ, ಕೀರ್ತನ ಭಕ್ತಿಗಳಲ್ಲಿ ಸಂಗ್ರಹಿಸಿದ ದೇವರ ನಾಮರೂಪಗಳನ್ನು ಮನಸ್ಸಿನಲ್ಲೇ ಸತತವಾಗಿ ಜ್ಞಾಪಿಸಿಕೊಳ್ಳುತ್ತಿರುವುದೇ ಸ್ಮರಣಭಕ್ತಿ. ಇದೇ ಧ್ಯಾನ ಎನಿಸುತ್ತದೆ. ತ್ಯಾಗರಾಜರಿಗೆ ಶ್ರೀರಾಮನ ನಾಮ ರೂಪಗಳು ಮನದಲ್ಲಿ ನೆಲೆಸಿ, ಅವುಗಳ ಬಗೆಗೆ ಪ್ರೀತಿ ಹುಟ್ಟುವಂತೆ ಮಾಡಿವೆ. (ಸ್ಮರಣೇ ಸುಖಮು) ಆದ್ದರಿಂದ ತ್ಯಾಗರಾಜರು ಪಾಹಿರಾಮ ಎನ್ನುತ್ತಾ ಧ್ಯಾನಪರರಾಗಿದ್ದಾರೆ.

**ಪಾಹಿರಾಮಯನುಚು ಧ್ಯಾನಪರುಡನೈತಿನಿ**

(**ಪಾಹಿಮಾಂಹರೇ**)

ಅನುದಿನವೂ ಮಾಡಿದ ಧ್ಯಾನದಿಂದ ಮನದಲ್ಲೇ ರಘುವೀರನನ್ನು ಕಂಡು ಅವರು ಆನಂದಿಸಿದ್ದಾರೆ.

**ಅನುದಿನಮುನು ನಿನು ಮನಸುನ ಕನುಗೊನಿ**
**ಆನಂದ ಮಾಯೆ**

(**ರಾರಾ ರಘುವೀರ**)

ವೇದಸಾರನಾದ ಆತನ ನಾಮಗಳನ್ನು ಸ್ಮರಿಸಿದೊಡನೆ ಅವರ ಮೈ ಪುಳಕಗೊಂಡಿದೆ.

**ವೇದಸಾರಮೌ ನೀ ನಾಮಧೇಯಮುನು**
**ತಲಚಿನಂತನೆ ನಾ ತನುವೇಮೋ ಝಲ್ಲುಝಲ್ಲನೇರಾ**

(**ತಲಚಿನಂತನೇ**)

ಎಂದರೆ ಭಗವಂತನ ಧ್ಯಾನವು ಯಾಂತ್ರಿಕ ಕ್ರಿಯೆಯಾಗದೆ, ಪ್ರೀತಿಪೂರ್ವಕವಾದಾಗ ಮಾತ್ರ ಇಂತಹ ಆನಂದವು ಲಭ್ಯವೆಂಬುದು ಸಾರಾಂಶ. 'ತ್ಯಾಗರಾಜರು ಪಾಹಿರಾಮ ರಾಮಯನುಚು' ಎಂಬ ರಚನೆಯಲ್ಲಿ ಶತ್ರುಘ್ನನ ಅಖಂಡ ವೃತ್ತಿಯಿಂದ ಕೋದಂಡ ರಾಮನು ಸಂತಸಪಟ್ಟನೆಂದು ಹೇಳುತ್ತಾರೆ.

**ಚಂಡ ಶತ್ರುಘ್ನುಡಪ್ಪುಡು ಅಖಂಡ ವೃತ್ತಿತೋ**
**ನುಂಡ ಸಂತಸಿಲ್ಲೆ ಕೋದಂಡರಾಮುಡು**

ಇಲ್ಲಿ 'ವೃತ್ತಿ' ಎಂದರೆ ಮನದಲ್ಲಿ ಏಳುವ ಆಲೋಚನಾತರಂಗ. ಶತ್ರುಘ್ನನ ವೃತ್ತಿ ಯಾದರೋ ಸೀಮಿತವಸ್ತುವನ್ನು ಕುರಿತದ್ದಾಗಿರಲಿಲ್ಲ. ಅದು ಪರಬ್ರಹ್ಮವಸ್ತುವಿನ ಸಾಕಾರನಾಗಿದ್ದ ಶ್ರೀರಾಮನನ್ನೇ ಕುರಿತುದಾಗಿದ್ದಿತು. ಇದರಿಂದ ಸಂತಸವುಂಟಾದುದು ಭಕ್ತನಿಗೆ ಮಾತ್ರವಲ್ಲ, ಭಗವಂತನಿಗೂ ಕೂಡ. ಹೀಗೆ ಪ್ರಸ್ತಾಪಿಸುವ ಮೂಲಕ ತ್ಯಾಗ ರಾಜರು ಭಕ್ತಿಗೆ 'ಪರಮಾತ್ಮನನ್ನೇ ಸಂತೋಷಗೊಳಿಸುವ ಶಕ್ತಿಯಿದೆ' ಎಂಬುದನ್ನು ತಿಳಿಸುತ್ತಾರೆ. ಅಲ್ಲದೆ ಇಲ್ಲಿ ಧ್ಯಾನದಲ್ಲಿರಬೇಕಾದ ಏಕಾಗ್ರತೆಯನ್ನು ಸೂಚಿಸಿದಂತಾ ಗಿದೆ. ನಾರದರ ಪ್ರಕಾರ ದೇವರಲ್ಲಿನ ವಿಸ್ಮರಣೆ ಪರಮ ವ್ಯಾಕುಲತೆಯೇ ಆಗಿದೆ.[೨೨] ಹೀಗೆ ನಾರದರ ಹೇಳಿಕೆಯಂತೆಯೂ ಭಗವಂತನ ಸ್ಮರಣೆ ಆನಂದದಾಯಕವೇ ಹೌದು.

ತ್ಯಾಗರಾಜರು ಧ್ಯಾನವನ್ನು ಶ್ರೇಷ್ಠವಾದ ಗಂಗಾಸ್ನಾನಕ್ಕೆ ಹೋಲಿಸುತ್ತಾರೆ. ರಘು ನಾಥನ ಸುಪದ ಧ್ಯಾನವು ಗಂಗಾಜಲವೇ. ವಾಸ್ತವವಾಗಿ 'ಗಂಗಾ' ಶಬ್ದವು ಜ್ಞಾನಾರ್ಥಕ ವಾದುದು. ಇಂತಹ ನಾಮದಿಂದ ತ್ಯಾಗರಾಜರ ಮನಸ್ಸು ನಿರ್ಮಲವಾಗಿದೆ.

**ಧ್ಯಾನಮೇ ವರಮೈನ ಗಂಗಾಸ್ನಾನಮೇ**
**(ಧ್ಯಾನಮೇ)**

**ಸುಪದ ಧ್ಯಾನಮು ಗಂಗಾಜಲಮೌರಾ ರಘುನಾಥಾ**
**(ಪರಿಪಾಲಯ)**

**ನೀ ನಾಮಮುಚೇ ನಾಮದಿ ನಿರ್ಮಲಮ್ಮೆಯುನ್ನದಿ**
**(ಜ್ಞಾನಮೊಸಗರಾದಾ)**

ದಶರಥನಂದನನನ್ನು ಹೃದಯಾರವಿಂದದಲ್ಲಿ ಸ್ಥಾಪಿಸಿ, ಆತನಲ್ಲೇ ಮನಸ್ಸು ನಿಲ್ಲಿಸಿ, ಬ್ರಹ್ಮಾನಂದವನ್ನು ಹೊಂದುವುದು ಭಾಗ್ಯವಲ್ಲದೆ ಅದಕ್ಕಿಂತ ಮಿಗಿಲಾದ ಭಾಗ್ಯವಿನ್ನೇನಿದೆ ಎಂಬುದನ್ನು ತ್ಯಾಗರಾಜರು ಸ್ವಾನುಭವದಿಂದ ನುಡಿಯುತ್ತಾರೆ. ಧ್ಯಾನದ ಪರಿಪೂರ್ಣತೆ ಅವರಿಗಿದ್ದುದಕ್ಕೆ ಅವರ ಈ ಮಾತುಗಳೇ ನಿದರ್ಶನ. ತ್ಯಾಗ ರಾಜರ ಸ್ಮರಣಭಕ್ತಿಯ ಸಾಧನೆಗೆ ಬುನಾದಿ ನೀತಿ. ಅವರು ಪರಧನ, ಪರನಾರಿಯರನ್ನು ದೂರ ಮಾಡಿದ್ದಾರೆ. ಪರನಿಂದೆ, ಪರಹಿಂಸೆಗಳನ್ನು ತ್ಯಜಿಸಿದ್ದಾರೆ. ಧರೆಯಲ್ಲಿ ವಿಜೃಂಭಿಸಿದ ಶ್ರೀರಾಮನನ್ನೇ ಬಯಸಿದ್ದಾರೆ.

**ಪರಧನ ಪರನಾರೀಮಣುಲನು ದೂರಿ**
**ಪರನಿಂದಲ ಪರಹಿಂಸಲ ಮೀರಿ**
**ಧರನುವೆಲಯು ಶ್ರೀರಾಮುನಿಗೋರಿ**
**ತ್ಯಾಗರಾಜು ತೆಲಿಸಿಕೊನ್ನ ..........**

(ಧ್ಯಾನಮೇ)

ಮನಸ್ಸಿನಲ್ಲೊಂದು, ಮಾತಿನಲ್ಲಿ ಇನ್ನೊಂದು ಎಂಬುದು ಅವರ ನೀತಿಯಲ್ಲ.

**ಮನಸುನಯೊಕಟಿ ವಚನಮುನ ವೇರೈ**
**ವಿನಯಮು ಲಾಡುಕೊನಿನಾನಾ ?**

(ಪಾಹಿಪರಮಾತ್ಮಾ)

ಅವರು ಬಾಹ್ಯ-ಅಂತರಂಗಗಳೆರಡರಲ್ಲೂ ರಾಮ ಸ್ಮರಣೆಯನ್ನೇ ಮಾಡಿ ಆನಂದ ಹೊಂದಿದ್ದಾರೆ. ಮುದ್ದಾದ ಶ್ರೀರಾಮನ ರೂಪವನ್ನು ಸಂತೋಷದಿಂದ ಸ್ತುತಿಸುತ್ತಾ ಹೊತ್ತು ಕಳೆದಿದ್ದಾರೆ.

**ಮುದ್ದುಗಾರು ನೀ ರೂಪಮುನು ಮೋದಮುತೋ ಧ್ಯಾನಿಂಚುಚು ನೇ**
**ಪ್ರೊದ್ದು ಪೊಗಡಿನಾಮುಗಾನಿ**

(ರಾಮಾ ನೀವಾದುಕೊಂದುವೋ)

ಭಕ್ತಿಯು ಪಕ್ವವಾಗುತ್ತಿದ್ದಂತೆ ಸಾಧಕನು ದೇವರನ್ನು ತನ್ನೊಳಗೇ ಕಂಡು ಧ್ಯಾನಿಸಲಾರಂಭಿಸುತ್ತಾನೆ. ಹೃದಯಾಕಾಶದಲ್ಲಿ ಸೂಕ್ಷ್ಮವಾಗಿ ಇರುವ ಈ ತತ್ವವೇ ಅಂತರ್ಯಾಮಿ ತತ್ತ್ವ. ಇದನ್ನು ಸಮರ್ಥಿಸುವಂತೆ ತ್ಯಾಗರಾಜರು ರಾಘವನನ್ನು ಚಿತ್ತದಲ್ಲಿ ಕಾಣುವುದೇ ಉತ್ತಮವಾದುದೆಂದು ಸಂತೋಷದಿಂದ ಸತ್ತಾಮಾತ್ರನಾದ ಆತನನ್ನು ಕಂಡಿದ್ದಾರೆ.

**ಚಿತ್ತಮಂದು ನಿನ್ನು ಜೂಚು ಸೌಖ್ಯಮೇ**
**ಯುಕ್ತಮಂಬನುಚು ನುಪ್ಪೊಂಗುಚುನು**
**ಸತ್ತ ಮಾತ್ರಮಾ ಚಾಲನಮ್ಮಿತಿ**

(ಎಂತವೇಡುಕೊಂದೋ)

ಹೀಗೆ ಅನುದಿನವೂ ಅಂತರ್ಯದಲ್ಲೇ ದಯಾಳುವಾದ ದೇವರನ್ನು ಕಂಡುದರಿಂದ ಅವರಿಗೆ ಆನಂದವಾಗಿದೆ.

**ಅನುದಿನಮುನು ನಿನು ಮನಸುನ ಕನುಗೊನಿ ಆನಂದಮಾಯೆದಯಾಳೋ**

(ರಾರಾ ರಘುವೀರ)

ಸ್ಮರಣ ಭಕ್ತಿಯಲ್ಲಿ ದೇವರ ದಿವ್ಯಮಂಗಳ ವಿಗ್ರಹಕ್ಕೆ ನೀಡಿರುವ ಪ್ರಾಧಾನ್ಯವನ್ನೇ ಆತನ ಚರಣಗಳ ಸ್ಮರಣೆಗೂ ನೀಡಿರುವುದು ಗಮನಾರ್ಹ. ವಾಸ್ತವವಾಗಿ ಧ್ಯಾನವನ್ನು ಆಪಾದಮಸ್ತಕವಾಗಿಯೇ ಮಾಡಬೇಕು. ಆದ್ದರಿಂದ ಅವರು ಶ್ರೀರಾಮನ ಪಾದಗಳನ್ನು ತಮ್ಮ ಚಿತ್ತಕ್ಕೆ ಆಹ್ವಾನಿಸುತ್ತಾರೆ.

**ಚಿತ್ತಾನಿಕಿರಾವೇ**

(ಶ್ರೀರಾಮಪಾದಮಾ)

ಈ ಪಾದಗಳನ್ನು ಹೃದಯದಲ್ಲಿರಿಸಿ ಧ್ಯಾನಿಸಿದಾಗ ಅವರಿಗೆ ಮಹದಾನಂದವಾಗಿದೆ.

**ನೀ ಪಾದ ಮುರಮುನನುಂಚಿ ಧ್ಯಾನಿಂಚಗ ಆನಂದಮಾನಂದಮಾಯೆನು**

(ಆನಂದಮಾನಂದ)

ಇಂತಹ ಆನಂದದಿಂದ ದೂರಾಗಲು ಅವರ ಮನಸ್ಸು ಸರ್ವಥಾ ಸಿದ್ಧವಿಲ್ಲ. ದೇವರನ್ನು ಹೊಂದುವ ಅದಮ್ಯವಾದ ತ್ಯಾಗರಾಜರ ಆಸೆ ದುರಾಸೆಯೆ ಆಗಿರಬಹುದು. ಅದರಿಂದಾಗಿ ತ್ಯಾಗರಾಜರಿಗೆಷ್ಟೇ ಕಷ್ಟವಾದರೂ ಶ್ರೀರಾಮನ ಪಾದಗಳನ್ನು ಮಾತ್ರ ಅವರು ಬಿಡುವುದಿಲ್ಲ.

**ವಿಡಜಾಲದುರಾ ನಾ ಮನಸು ವಿನರಾ**
**ಅಡಿಯಾಸಲಚೇ ದಗಿಲಿ ನೇ**
**ನಾರ್ತಿ ಬಡಿನ ಪದಂಬುಲನು**

(ವಿಡಜಾಲದುರಾ)

ಶ್ರೀಪತಿಯ ಪಾದಚಿಂತನೆಯೇ ಅವರ ಜೀವನವಾಗಿದೆ. ಆತನ ಪೂಜೆ, ಜಪಗಳನ್ನು ಅವರು ಬಿಡಲಾರರು.

**ಶ್ರೀಪತೇ ನೀ ಪದ ಚಿಂತನೇ ಜೀವನಮು**

(ಶ್ರೀಪತೇ)

**ನೀಜಪಮುನು ನೀದುಪೂಜಲ ವಿಡುವಜಾಲ**

(ರಮಾರಮಣಭಾರಮಾ)

ಸೀತಾ ಸೌಮಿತ್ರಿಯರಿಗೆ ಶ್ರೀರಾಮನ ಸಾಮೀಪ್ಯ, ಕೈಂಕರ್ಯಗಳು ಲಭ್ಯವಾಗಿರಲು ಸ್ಮರಣ ಭಕ್ತಿಯೇ ಕಾರಣವಿರಬಹುದೇ ಎಂಬ ಆಲೋಚನೆ ಒಂದು ಘಟ್ಟದಲ್ಲಿ ತ್ಯಾಗ ರಾಜರಿಗೆ ಮೂಡಿದೆ.

**ಮನಸುನ ದಲಚಿ ಮೈಮರಚಿಯುನ್ನಾರಾ ?**

(ಪಕ್ಕಲನಿಲಬಡಿ)

ಏಕೆಂದರೆ ದೇವರನ್ನು ಮನಸಾರ ಸ್ಮರಿಸಿದರೆ ಸುಮನಸತ್ವವು ಪ್ರಾಪ್ತವಾಗುತ್ತ ದೆಂದು ಅವರೇ ಮತ್ತೊಂದು ರಚನೆಯಲ್ಲಿ ಸಾರುತ್ತಾರೆ.

**ಮನುಸುಚೇತ ಸೇವ್ಯುನಿ ದಲಚಿತೇ ಸು-**
**ಮನಸತ್ವಮು ನೊಸಗುನೇ**

(ಮೋಸಬೋಕು ವಿನವೇ)

ಈ ಅಂಶ ಅವರಿಗೆ ತಿಳಿದಿದ್ದರೂ, ಅವರ ಅಭಿಪ್ರಾಯದಲ್ಲಿ ರಾಮಭಕ್ತಿ ಮೂಡು ವುದು ಅಷ್ಟೇನೂ ಸುಲಭವಲ್ಲ. ಎಲ್ಲವೂ ಹರಿಯೇ ಎಂದು ಮನದಲ್ಲಿ ಪೂಜಿಸುವವರಿ ಗಲ್ಲದೆ, ತ್ಯಾಗರಾಜರ ನಾಲಿಗೆಯ ಮೇಲೆ ರಾರಾಜಿಸುವ ಶ್ರೇಷ್ಠ ಮಂತ್ರವನ್ನು ಸದಾ

ಜಪಿಸುವ ಮಹಾರಾಜರಿಗಲ್ಲದೆ ಎಲ್ಲರಿಗೂ ರಾಮಭಕ್ತಿ ಲಭ್ಯವಾಗುವುದಿಲ್ಲ.

**ಊರಕೆ ಗಲ್ಗುನಾ ರಾಮುನಿ ಭಕ್ತಿ**
**......... ಸರ್ವಮು ಹರಿಯಂಚುದೆಲಿಸಿ ಭಾ-**
**ವಿಂಚಿ ಮದಿನಿ ಪೂಜಿಂಚುವಾರಿಕಿ**
**.............. ತ್ಯಾಗರಾಜುನಿ ಜಿಹ್ವಪೈ**
**ರಾಜಿಲ್ಲು ವರಮಂತ್ರ ರಾಜಸಮುನನು ಸದಾ**
**ಜಪಿಂಚು ಮಹಾರಾಜುಲಕು ಗಾಕ**

(**ಊರಕೆ ಗಲ್ಗುನಾ**)

ತ್ಯಾಗರಾಜರು ಹೇಳುವ ಈ ಮಹಾರಾಜರು ಲೌಕಿಕವಾದ ಧನಾದಿ ಸಂಪತ್ತಿನಿಂದ ರಾಜರೆನಿಸಿದವರಲ್ಲ. ಸ್ಮರಣಭಕ್ತಿಯಿಂದ ಸಿರಿವಂತರಾದವರು. ತ್ಯಾಗರಾಜರ ದೃಷ್ಟಿಯಲ್ಲಿ ಪರಮಭಕ್ತರೆಲ್ಲ ಮಹಾರಾಜರೇ ಎಂಬುದನ್ನು ನಾವು ಮರೆಯುವಂತಿಲ್ಲ. ಈ ಅರ್ಥದಲ್ಲಿ ತ್ಯಾಗರಾಜರೂ ಒಬ್ಬ ರಾಜರೇ ಸರಿ.

ತ್ಯಾಗರಾಜರಿಗೆ ಇನ್ನೊಂದು ಘಟ್ಟದಲ್ಲಿ ಇನ್ನೂ ದೈವಕೃಪೆ ತಮಗೆ ಲಭ್ಯವಾಗಿಲ್ಲವೆಂದು ದುಃಖವಾಗಿದೆ ಅವರು ತಮ್ಮ ಈ ದುಸ್ಥಿತಿಗೆ ತಮ್ಮನ್ನೇ ಹೊಣೆಯಾಗಿಸಿಕೊಂಡು ತಾವು ದೇವರನ್ನು ಮನದಲ್ಲಿ ಸ್ಮರಿಸಿದ್ದೇನೆಯೇ ಎಂದು ತಮ್ಮನ್ನೇ ಪ್ರಶ್ನಿಸಿಕೊಳ್ಳುತ್ತಾ, ಸ್ಮರಣಭಕ್ತಿಯ ಮಹತ್ವ ಸಾರುತ್ತಾರೆ.

**ಮನಸುನ ನೆನರುನ ಜೂಚಿನಾನಾ ?**

(**ನಿನ್ನನವಲಸಿನದೇಮಿ**)

ಈ ಮಾತಿನಿಂದ ಸ್ಮರಣ ಭಕ್ತಿಯ ಮೂಲಕ ದೈವಕೃಪೆ ಪಡೆಯಲು ಸಾಧ್ಯವೆಂಬುದನ್ನು ಮನಗಾಣಿಸುತ್ತಾರೆ.

ತ್ಯಾಗರಾಜರು ಇತರ ಸಂದರ್ಭಗಳಲ್ಲಿ ಅನುಸರಿಸಿದಂತೆಯೇ ಸ್ಮರಣಭಕ್ತಿ ಆಚರಣೆಯ ಬೋಧನೆಯಲ್ಲೂ ಮನಸ್ಸಂಬೋಧಿತವಾಗಿ ಮತ್ತು ಇತರರನ್ನು ಸಂಬೋಧಿಸಿದಂತೆ ಮಾತುಗಳನ್ನಾಡುತ್ತಾರೆ. ಇವು ನೇರವಾಗಿ ತಮಗೇ ಅನ್ವಯವಾಗುವುದಕ್ಕಿಂತ ಇತರರನ್ನು ಈ ಮಾರ್ಗಕ್ಕೆ ಹಚ್ಚುವ ಪ್ರಯತ್ನ ಇಲ್ಲಿದೆ. ಈ ಮೂಲಕ ತ್ಯಾಗರಾಜರ ಸಾಮಾಜಿಕ ಕಳಕಳಿ ಎದ್ದುಕಾಣುತ್ತದೆ.

**ಪಾದಸೇವನ** : ಶ್ರೀಹರಿಯ ಪಾದಸೇವೆಯೇ ಪಾದಸೇವನ ಭಕ್ತಿ. ದೇವರ ಪಾದಗಳನ್ನು ಪೂಜಿಸುವ ಮತ್ತು ಕೊಂಡಾಡುವ ಭಕ್ತಿರೂಪವು ಹಿಂದೂಧರ್ಮದಲ್ಲಿ ಚಿರಪರಿಚಿತವಾದುದು. ಪ್ರಾಚೀನ ಭಾರತದಲ್ಲೂ ಪಾದಸೇವೆಯು ವ್ಯಾಪಕವಾಗಿ ರೂಢಿಯಲ್ಲಿದ್ದುದಕ್ಕೆ ವಿಷ್ಣುಪಾದ, ಬುದ್ಧಪಾದ, ರಾಮಪಾದ, ಶಿವಪಾದಗಳೇ ನಿದರ್ಶನ. ಇವು ಕ್ಷೇತ್ರದೇವಸ್ಥಾನಗಳಲ್ಲಿ ಪೂಜಿಸಲ್ಪಡುತ್ತಿದ್ದವು. ಹರಿಚರಣಗಳಲ್ಲಿ ಧೂಳಿನ ಕಣವಾಗುವ, ಹರಿಚರಣಕಮಲಗಳಲ್ಲಿ ದುಂಬಿಯಾಗುವ ಭಕ್ತರ ಹಂಬಲ ಇಂದಿನದಲ್ಲ. ಆದರೆ ತ್ಯಾಗರಾಜರದು ಇದಕ್ಕಿಂತ ಸ್ವಲ್ಪ ವಿಭಿನ್ನವಾದ ಆಶಯ. ಅವರಿಗೆ ಪಾದ

ಸೇವೆಯಿಂದ ಬ್ರಹ್ಮಾನಂದ ಪಡೆದ ಭರತ ಮತ್ತು ಇತರ ಮುನಿಶ್ರೇಷ್ಠರು ಆದರ್ಶ. ಇದಕ್ಕೆ ಕಾರಣ, ಮುನಿಗಳು ಶ್ರೀರಾಮ ಪಾದ ಸೇವೆಯಿಂದ ಸತ್ವದವನ್ನು ಪಡೆದರೆ, ಭರತನು ಪಾದುಕಾಸೇವೆಯಿಂದ ಶ್ರೀರಾಮನನ್ನೇ ಪಡೆದಿದ್ದಾನೆ. ಇದು ತ್ಯಾಗರಾಜರನ್ನು ವಿಶೇಷವಾಗಿ ಆಕರ್ಷಿಸಿದೆ.

**ವರಮೌನುಲೆಲ್ಲ ಚರಣಮ್ಮುಲನು**
**ಸ್ಮರಿಯಿಂಪ ನೀದು ಪದಮೊಸಂಗೆನೇ**
**ಭರತಾರ್ಚನಚೇ ಪಾದುಕಲು**
**ಧರ ನಿನ್ನೊಸಂಗೆ .............**

(ಸಂದೇಹಮುನು)

ಈ ಹಿನ್ನೆಲೆಯಲ್ಲಿ ತ್ಯಾಗರಾಜರು ಪಾದಸೇವನ ಭಕ್ತಿಯಲ್ಲಿ ವಿಶೇಷವಾಗಿ ಆಸಕ್ತ ರಾಗಿದ್ದಾರೆ. ಹೀಗಾಗಿ ತ್ಯಾಗರಾಜರು ಹರಿಯ ಪದಭಕ್ತಿಯನ್ನು ಬಿಡುವುದಿಲ್ಲ. ಮತ್ತೆಲ್ಲೂ ಹೋಗುವುದಿಲ್ಲ.

**ಪದಭಕ್ತಿ ವದಲನು ಎಂದೂ ಕದಲನು**

(ಶ್ರೀರಾಮರಾಮ)

ದೇವರನ್ನೇ ಹೊಂದಬೇಕೆಂಬ ತಮ್ಮ ಈ ದುರಾಸೆಯಿಂದ ಎಷ್ಟೇ ಕಷ್ಟಗಳುಂಟಾದರೂ ಅವರ ಮನಸ್ಸು ಶ್ರೀರಾಮನ ಪಾದಗಳನ್ನು ಬಿಡಲು ಸಿದ್ಧವಿಲ್ಲ (ವಿಡಜಾಲ ದುರಾ). ಏಕೆಂದರೆ ದೇವರ ಪದಸೇವಾ ಫಲವು ಅವರನ್ನು ರಕ್ಷಿಸುತ್ತದೆ.

**ನೀದು ಪದಸೇವಾ ಫಲಮು ಮಮುಗಾವುನೇ**

(ರಾಮಾ ನಿನ್ನುನಮ್ಮಿನ)

ಅಚಲವಾದ ಈ ನಂಬಿಕೆಯಿಂದ ತ್ಯಾಗರಾಜರು ಹರಿಯ ಪದಚಿಂತನೆಯನ್ನೇ ಮಾಡುತ್ತಿದ್ದಾರೆ. ಅದೇ ಅವರ ಜೀವನವಾಗಿದೆ.

**ಶ್ರೀಪತೇ ನೀ ಪದಚಿಂತನಮೇ ಜೀವನಮು**

(ಶ್ರೀಪತೇ)

ಹರಿಪಾದ ಸೇವೆಯನ್ನೇ ಮತ್ತೆ ಮತ್ತೆ ಮಾಡಬಯಸಿ ತ್ಯಾಗರಾಜರು ಹರಿಯಲ್ಲೇ ಮರುಳಾಗಿದ್ದಾರೆ.

**ಕೋರಿ ನೀ ಪದಸೇವ ಸಾರೆಕು ಸೇಯ ದಲಚಿ**
**ಮಾರಮಣ ನಾಲೋನೆ ಮರುಲುಗೊನ್ನಾನು**

(ನಾಪಾಲಿ ಶ್ರೀರಾಮ)

ಪದಪಂಕಜಗಳ ಸೇವೆ ಮಾಡುವುದಕ್ಕಿಂತ ಮಿಗಿಲಾದ ಭಾಗ್ಯವಿನ್ನೇನು ಎಂದು ಅವರು ಭಾವಿಸುತ್ತಾರೆ.

**ಸದಾ ನೀ ಪದಪಂಕಜಮುಲನು**
**ಸಮ್ಮತಮುಗ ಸೇವಿಂಚುವಾರಿ**

**ಇದೇ ಭಾಗ್ಯಮು ಕಾಕೇಮಿಯುನ್ನದಿರಾ**

(ಇದೇ ಭಾಗ್ಯಮು)

ತಮಗಿರುವ ಪಾದಭಕ್ತಿಯನ್ನು ಇನ್ನೂ ತೀವ್ರವಾಗುವಂತೆ ಅನುಗ್ರಹಿಸಬೇಕೆಂದು ಅವರು ದೇವರಲ್ಲಿ ಪ್ರಾರ್ಥಿಸುತ್ತಾರೆ.

**ನೀ ಪಾದಮುಲಭಕ್ತಿ ನಿಂಡಾರಗಾನೊಸಗಿ ಕಾಪಾಡು**

(ಶ್ರೀರಾಮರಾಮರಾಮ)

ಇದನ್ನು ನೀಡುವ ಶಕ್ತಿಯೂ ದೇವರ ಕೈಗಳಿಗಿದೆಯೆಂಬುದನ್ನು ತ್ಯಾಗರಾಜರು ಬಲ್ಲರು.

**ನೀ ಪಾದಮುಲಭಕ್ತಿ ನಿಂಡಾರಗಾನೊಸಗಿ**
**ಕಾಪಾಡು ಶಕ್ತಿ ನೀ ಕರಮುನನುಂಡಗ**

(ಮಾಪಾಲವೆಲಸಿ)

ದೈವಾನುಗ್ರಹವಿಲ್ಲದೆ ಕೇವಲ ಮನುಷ್ಯಪ್ರಯತ್ನದಿಂದ ಭಕ್ತಿಸಾಧನೆ ಸಾಧ್ಯವಿಲ್ಲ ವೆಂಬುದು ಇಲ್ಲಿ ವಿದಿತವಾಗುತ್ತದೆ.

ತ್ಯಾಗರಾಜರಿಗೆ ಶ್ರೀರಾಮನ ಸಹೋದರರನ್ನೂ, ಆಂಜನೇಯನನ್ನೂ ಕಂಡರೆ ವಿಶೇಷ ಪ್ರೀತಿ. ಇದಕ್ಕೆ ಕಾರಣವಿಲ್ಲದಿಲ್ಲ. ಇವರೆಲ್ಲರೂ ರಾಮನ ಅಂತರಂಗಭಕ್ತ ರಾಗಿ ರಾಮಸಾಮೀಪ್ಯ ಹೊಂದಿರುವರು. ಶ್ರೀಮಂತರಾದ ರಾಮನ ಸಹೋದರರು ರಾಮಕೈಂಕರ್ಯದಲ್ಲಿ ನಿಷ್ಣಾತರಾಗಿದ್ದಾರೆ. ಹನುಮಂತನಾದರೋ ರಾಮಪಾದಗಳಡಿ ಯಲ್ಲೇ ಅಂಜಲೀಬದ್ಧನಾಗಿ ಕುಳಿತಿದ್ದಾನೆ. ತ್ಯಾಗರಾಜರ ಹೆಬ್ಬಯಕೆ ಹನುಮನ ಸ್ಥಾನ ದಲ್ಲಿ ತಾವು ಇರಬೇಕು ಅಥವಾ ಶ್ರೀಮಂತರಾದ ರಾಮಸಹೋದರರಂತೆ ಕೈಂಕರ್ಯದಲ್ಲಿ ತೊಡಗಬೇಕೆಂಬುದು. ಅವರ ಚಿರಕಾಲದ ಏಕೈಕ ಆಸೆ ಇದೊಂದೆ. ಆದರೆ ಇದಕ್ಕೆ ಅವರಿಗೆ ದಾರಿಯೇ ಕಾಣುತ್ತಿಲ್ಲ.

**ಪಾವನವೌ ನೀ ಪಾದಭಜನ ಸೇಯುಟಕ್ಕೆ ದೋವಲೇ ಬರಮ್ಮೆನದಿ**

(ಏವರ ಮಡುಗುದುರಾ)

ರಾಮನ ಸಹೋದರರು ಮಾಡುವಂಥ ಪಾದಸೇವೆಯೇ ಅವರ ಏಕಮಾತ್ರ ಹಂಬಲ. ಅದನ್ನು ಮತ್ತೆ ಮತ್ತೆ ಹೇಳಲಾಗದು.

**ಶ್ರೀಮಾನಿನೀ ಮನೋಹರ ಚಿರಕಾಲಮುಮಾಟ**
**ಯೊಕಟೇರಾ, ವೇಮಾರು ಬಲ್ಕಜಾಲರಾ**
**ಶ್ರೀಮಂತುಲೌ ನೀ ಸೋದರುಲು ಸೇಯುರೀತಿ ಪಾದಸೇವ ಕೋರಿತಿನಿ**

(ಶ್ರೀಮಾನಿನೀ ಮನೋಹರ)

ತ್ಯಾಗರಾಜರ ಉತ್ಕಟವಾದ ಈ ಅಪೇಕ್ಷೆಯನ್ನು ಶ್ರೀರಾಮನು ತಾನಾಗಿಯೇ ಅರಿತು ಕೊಳ್ಳುವನೆಂದು ಭಾವಿಸಿ ಅವರು ಆತನ ಪದಸೇವೆಯನ್ನು ಮಾಡಿದ್ದಾರೆ. ಈ ಮೂಲಕ ತಾವೂ ರಾಮನ ಅಂತರಂಗ ಭಕ್ತರಲ್ಲಿ ಒಬ್ಬರಾಗಬಹುದೆಂಬ ಮಹದಾಸೆ ಅವರಿಗಿದೆ.

ನೀವೇ ತೆಲುಸುಕೊಂದು ವನುಚುನು
ಭಾವಿಂಚುಚುನು ನೇನು ನೀ ಪದ
ಸೇವ ಜೇಸಿತಿ . . . . . . . . . . .

(ರಾಕಾಶಶಿವದನ)

ಆದರೆ ಇನ್ನೂ ದೈವಕೃಪೆ ಅವರ ಮೇಲೆ ಉಂಟಾಗಿಲ್ಲವಾಗಿ ತ್ಯಾಗರಾಜರು ತಾವು ಮಾಡಿದ ಪಾದಪೂಜೆಯು ಶುದ್ಧಾಂತರಂಗದಿಂದ ಆಚರಿಸಿದ್ದಲ್ಲವೇನೋ ಎಂದು ತಮ್ಮನ್ನೇ ಹೊಣೆಯಾಗಿಸಿಕೊಳ್ಳುತ್ತಾರೆ.

. . . . . .ಮನಸನು ವನಜಮುನ ನತಿವೇ
ಗನ ಪಾದಮುನ ಪೂಜ ನೊನರಿಂಚಿನಾನಾ ?

(ನಿನ್ನನವಲಸಿನದೇಮಿ)

ಒಮ್ಮೆ ತ್ಯಾಗರಾಜರಿಗೆ ಶ್ರೀರಾಮನ ಪಾದಗಳು ಶ್ರೇಷ್ಠವೋ ಅಥವಾ ಆತನ ಪಾದುಕೆಗಳು ಶ್ರೇಷ್ಠವೋ ಎಂಬ ಅನುಮಾನ ಉಂಟಾಗಿದೆ. ಈ ಸಂಶಯ ನಿವಾರಣೆಗೆ ಅವರು ದೇವರಲ್ಲೇ ಪ್ರಾರ್ಥಿಸುತ್ತಾರೆ.

ಸಂದೇಹಮುನು ದೀರ್ಪವಯ್ಯ
ನಂದಾರ್ಚಿತ ಪಾದಯುಗಮು ಮೇಲೋ
ನಾಗರೀಕಮಗು ಪಾದುಕಾಯುಗಂಬುಲು ಮೇಲೋ ?

(ಸಂದೇಹಮುನು ದೀರ್ಪವಯ್ಯ)

ಆದರೆ ತ್ಯಾಗರಾಜರ ಮಾತಿನಂತೆ ಶ್ರೀರಾಮಪಾದಗಳೇ ಶ್ರೇಷ್ಠ. ಅವುಗಳ ಸೇವೆಯನ್ನು ಅವರು ಅಪೇಕ್ಷಿಸಿ ದೇವರಲ್ಲಿ ಬೇಡುವುದು.

ನೀ ಪದ ಸೇವನು ಕೋರಿತಿ

(ಏವಿಧಮುನ ನೈನಗಾನಿ)

ಅನುದಿನವೂ ಶ್ರೀರಾಮನ ಪಾದಾಬ್ಜಗಳನ್ನು ಒತ್ತುತ್ತಾ ಕಾಲಕಳೆಯದಿದ್ದರೆ ಅವರ ದಾಹ ಹಿಂಗುವುದಿಲ್ಲ.

ಅನುದಿನಮು ನೀದು ಪಾದಾಬ್ಜಮುಲ
ನೊತ್ತುಚುನು ಕಾಲಮುಲ ಗಡಪಕನು
ತೀರುನಾ ನಾಲೋನಿ ದುಗ್ಧ ?

(ತೀರುನಾ)

ಉಪಾಸನಾ ಸಂಪ್ರದಾಯದಲ್ಲಿ ದೇವರ ಪಾದಗಳಲ್ಲೇ ದೇವರನ್ನು ಕಾಣುವುದುಂಟು. 'ಪಾದುಕಾಂತ ದೀಕ್ಷಾ' ಎಂಬ ಸಂಕೇತವು ಮಂತ್ರಶಾಸ್ತ್ರದಲ್ಲಿ ಪ್ರಸಿದ್ಧಿ. ಆದ್ದರಿಂದ ತ್ಯಾಗರಾಜರು ಭಕ್ತರ ಶಾಪ ವಿಮೋಚನೆ ಮಾಡಿದ, ರಾಜ್ಯವಾಳಿದ ದಿವ್ಯಪಾದಗಳ ಹಿರಿಮೆ-ಗರಿಮೆಗಳನ್ನರಿತು ಪಾದಸೇವನ ಭಕ್ತಿಗಾಗಿ ಮೇಲಿನಂತೆ ವಿಧವಿಧವಾಗಿ ಯಾಚಿಸುತ್ತಾರೆ.

**ಅರ್ಚನ** : ದೇವರನ್ನು ಪೂಜಿಸುವುದೇ ಅರ್ಚನ ಭಕ್ತಿ. ಅರ್ಚನೆಯನ್ನು ಧ್ಯಾನಾವಾಹನಾದಿ ಷೋಡಶೋಪಚಾರಗಳಿಂದ ಆಚರಿಸುವುದು ಸಂಪ್ರದಾಯ. ಇಂಥ ಅರ್ಚನೆಯಲ್ಲಿ ಎರಡು ವಿಧಗಳು. (ಅ) ಇಷ್ಟದೇವತಾಮೂರ್ತಿಯನ್ನು ಬಾಹ್ಯ ಪರಿಕರಗಳೊಂದಿಗೆ (ಎಂದರೆ ಹೂವು ಗಂಧ ಅಕ್ಷತೆ ಮೊದಲಾದವು) ಅರ್ಚಿಸುವುದು. (ಆ) ಬಾಹ್ಯ ಸಾಮಗ್ರಿಗಳಿಲ್ಲದೆ ಚಿತ್ತವೆಂಬ ಪೀಠದಲ್ಲಿ ದೇವರನ್ನು ಪ್ರತಿಷ್ಠಾಪಿಸಿ ಮನಸ್ಸಿನಲ್ಲೇ ಪೂಜಿಸುವುದು. ಮಾನಸಿಕಪೂಜೆ ಸಾಧಕನಿಗೆ ಮೇಲಿನ ಹಂತದಲ್ಲಿ ಎಂದರೆ ಭಕ್ತಿ ಪಕ್ವಗೊಂಡಂತೆ ಮಾತ್ರ ಸಾಧ್ಯ. ಆರಂಭದ ಹಂತದಲ್ಲಿ ಬಾಹ್ಯವಾದ ಪೂಜಾ ಸಾಮಗ್ರಿಗಳೊಂದಿಗೆ ಆತ ಏಕಾಗ್ರತೆಯನ್ನು ಬೆಳೆಸಿಕೊಳ್ಳಬೇಕಾಗುತ್ತದೆ. ಆದರೆ ಈ ಎರಡೂ ವಿಧದ ಅರ್ಚನೆಯಲ್ಲಿ ಭಕ್ತನಿಗೆ ಶುದ್ಧಾಂತರಂಗ, ಏಕಾಗ್ರತೆ ಹಾಗೂ ಇನ್ನಿತರ ನೈತಿಕಾಂಶಗಳು ಮೂಲಭೂತವಾಗಿ ಇರಬೇಕು. ಆತ ಸೊಂಪಾದ ಮನಸ್ಸಿನಿಂದ ಸಂತೋಷವಾಗಿ ಅರ್ಚಿಸಬೇಕು. ತ್ಯಾಗರಾಜರು ಬಾಹ್ಯ ಮತ್ತು ಮಾನಸಿಕ ಪೂಜೆಗಳೆರಡನ್ನೂ ಪ್ರಸ್ತಾಪಿಸುವುದು ಗಮನಾರ್ಹ.

ಸಂಸಾರವೆಂಬ ವಿಷಯ ತಟಾಕದಿಂದ ತಪ್ಪಿಸಿಕೊಳ್ಳಲು ತ್ಯಾಗರಾಜರು ಜನರಿಗೆ ಬೋಧಿಸುವುದು ಅರ್ಚನಭಕ್ತಿ. ಜಾಜಿ, ಮಲ್ಲೆ, ಮಂದಾರ, ಸರೋಜ (ಪುಷ್ಪ)ಗಳಿಂದ ಮನಸಾರ ಶ್ರೀರಾಮನನ್ನು ಅರ್ಚಿಸದಿದ್ದರೆ ಕಲಿಪ್ರಭಾವದಿಂದ ತಪ್ಪಿಸಿಕೊಳ್ಳಲಾಗದು ಎನ್ನುತ್ತಾರೆ, ಅವರು. ಅವರ ಪ್ರಕಾರ ಇದೊಂದು ರಾಜಪಥ.

**ಜಾಜಿ ಮಲ್ಲೆ ಮಂದಾರ ಸರೋಜಮುಲನು ಮನಸಾರ**
**ರಾಜಪಥಮುಚೇ ತ್ಯಾಗರಾಜನುತುನಿ ಪೂಜಿಂಚಕ** ||
**ತಪ್ಪಿ ಬ್ರತಿಕಿಪೋವ ತರಮಾ** ?

**(ತಪ್ಪಿಬ್ರತಿಕಿ)**

ಅರ್ಚನ ಭಕ್ತಿಯಿಂದ ಸಂಸಾರಸಾಗರವನ್ನು ದಾಟುವುದಷ್ಟೇ ಅಲ್ಲ, ಪ್ರೀತಿಯಿಂದ ಅರ್ಚನೆ ಮಾಡುವ ಭಕ್ತರನ್ನು (ತಮ್ಮನ್ನೂ ಒಳಗೊಂಡಂತೆ) ದೇವರು ರಕ್ಷಿಸಬೇಕೆಂದು ತ್ಯಾಗರಾಜರು ಪ್ರಾರ್ಥಿಸುತ್ತಾರೆ.

**ಈ ಜಗತಿಲೋ ನಿನ್ನು ಪೂಜಿಂಚುವಾರಿನ-**
**ವ್ಯಾಜಮುನ ಬ್ರೋಚು ಸುರಾಜ**

**(ನಾದುಪೈ ಬಲಿಕೇರು)**

ವಾಸ್ತವವಾಗಿ ತ್ಯಾಗರಾಜರು ದೇವರ ಪಾದಗಳೆಡೆ ಯಥೇಚ್ಛವಾಗಿ ಮಲ್ಲಿಗೆ ಹೂಗಳನ್ನು ಚೆಲ್ಲಿದ್ದಾರೆ.

............ **ಮೊಲ್ಲೆ ಸುಮಮುಲ ನೀ**
**ಚಲ್ಲನಿ ಪದಮು ಕೊಲ್ಲಲಾಡುಚು ವೇದ**
**ಚಲ್ಲಿತಿ** ................

**(ಇನ್ನಾಳ್ಳು ದಯರಾಕುನ್ನ)**

ಅರ್ಚನೆಗಾಗಿ ತ್ಯಾಗರಾಜರು ಹೆಸರಿಸುವ ಇತರ ಪತ್ರಪುಷ್ಪಗಳೆಂದರೆ* ತುಳಸಿ, ಬಿಲ್ವಪತ್ರೆ, ಕಮಲ, ಪುನ್ನಾಗ, ಚಂಪಕ, ಪಾಟಲ, ಕುರವಕ, ಕರವೀರ, ಸುಗಂಧರಾಜ, ಪಾರಿಜಾತ, ದವನ ಮೊದಲಾದವು. ಇವುಗಳಲ್ಲೂ ಪೂಜಾರ್ಹವಾದ ಎಂದರೆ ಶುದ್ಧ ವಾದ ಹೂಗಳನ್ನು ಮಾತ್ರ ಆಯ್ದು ಪೂಜಿಸಬೇಕೆಂದು ಅವರು ಸ್ಪಷ್ಟವಾಗಿ ನುಡಿಯು ತ್ತಾರೆ.

ಪಾಮರಮುಲು ಮಾನಿ ನೇಮಮುತೋನು ರ
ಮಾ ಮನೋಹರುನಿ ಪೈ ............

(ಚೆಲ್ಲರೆ)

ತ್ಯಾಗರಾಜರ ಅರ್ಚನ ಭಕ್ತಿಯ ಕೃತಿಗಳು ಎರಡು ದೃಷ್ಟಿಯಿಂದ ಗಮನಾರ್ಹ. (ಅ)ಅವರು ಪ್ರತ್ಯೇಕವಾಗಿ ನಡೆಸುತ್ತಿದ್ದ ದೈನಂದಿನ ಪೂಜೆ, (ಆ) ಸಾಮೂಹಿಕವಾಗಿ ನಡೆಸುತ್ತಿದ್ದ ಉತ್ಸವಾದಿ ಪೂಜೆಗಳು. ಉತ್ಸವಾದಿ ಸಂಪ್ರದಾಯದ ರಚನೆಗಳು ಉತ್ಸವ ಸಂಪ್ರದಾಯ ಕೀರ್ತನೆಗಳೆಂದೇ ಪ್ರಸಿದ್ಧಿ. ಇದನ್ನು ಪ್ರತ್ಯೇಕವಾಗಿ ಈ ಮೊದಲೇ ಪ್ರಸ್ತಾಪಿಸಲಾಗಿದೆ. ಈ ಸಾಲಿನಲ್ಲಿ ಸುಪ್ರಭಾತ, ಲಾಲಿ, ನೈವೇದ್ಯ, ತಾಂಬೂಲ, ಆರತಿ ಮೊದಲಾದವು ಒಳಗೊಳ್ಳುತ್ತವೆ.

ತ್ಯಾಗರಾಜರ ಅಭಿಪ್ರಾಯದಲ್ಲಿ ಮನುಷ್ಯನ ಕರಗಳು ಸಾರ್ಥಕಗೊಳ್ಳುವುದು ಹರಿ ಪೂಜೆಯಿಂದ ಮಾತ್ರ. ಅವುಗಳನ್ನು ದುರ್ದಾನಗಳಿಗೆ ಚಾಚಬಾರದು. ಅವರು ತಮ್ಮ ಶ್ರೇಷ್ಠವಾದ ಕರಗಳಿಂದ ದೇವರ ವಿವಿಧ ಅವಯವಗಳನ್ನು ಅರ್ಚಿಸುತ್ತಾರೆ (ತುಲಸೀ ಬಿಲ್ವ).

ಭಕ್ತಿ ಸಾಧನೆಯಲ್ಲಿ ಮೇಲೇರಿದ ಸಾಧಕನ ಅರ್ಚನೆಯಲ್ಲಿ ಆತನ ದೇಹವೇ ದೇವರಿಗೆ ಆವಾಸಸ್ಥಾನವಾಗಿರುತ್ತದೆ. ಇಲ್ಲಿ ಭಕ್ತನ ಸ್ಥಿರಮನಸ್ಸೇ ದೇವರಿಗೆ ಸ್ವರ್ಣ ಪೀಠ. ಚಂಚಲಚಿತ್ತ ದೇವರಿಗೆ ಪೀಠವಾಗಲಾರದೆಂಬ ಸೂಚನೆಯಿಲ್ಲಿದೆ. ಮನಸ್ಸೆಂಬ ಕನಕಪೀಠದಲ್ಲಿ ಉತ್ತಮೋತ್ತಮನನ್ನು ಕುಳ್ಳಿರಿಸಿ ಆತನ ಚರಣವನ್ನು ಧ್ಯಾನಿಸುವುದೇ ಅಮೃತಾಭಿಷೇಕ. ದೇವರಲ್ಲಿನ ಪ್ರೀತಿಯೇ ಶುಭವಸ್ತ್ರ. ಆತನ ಘನಕೀರ್ತಿಯನ್ನು ಕೊಂಡಾಡುವುದೇ ದಿವ್ಯಪರಿಮಳಗಂಧಧಾರಣೆ. ಆತನ ನಾಮಸ್ಮರಣೆಯೇ ಪುಷ್ಪ ಪೂಜೆ. ಪೂರ್ವಕರ್ಮಗಳ ಫಲಾರ್ಪಣೆಯೇ ಧೂಪಾರಾಧನೆ. ಪಾದಭಕ್ತಿಯೇ ದೀಪಾ ರಾಧನೆ. ಸತ್ಪೂಜೆಗಳ ಫಲಾರ್ಪಣೆಯೇ ನೈವೇದ್ಯ. ಇದರಿಂದ ಬರುವ ಶಾಶ್ವತ ಸುಖವೇ ತಾಂಬೂಲ. ಆತನ ಪ್ರತ್ಯಕ್ಷದರ್ಶನವೇ ಮಹಾಮಂಗಳಾರತಿ. ಇದು ತ್ಯಾಗ ರಾಜರು ಮಾಡುವ ಮಾನಸಿಕ ಪೂಜೆ(ಪರಿಪಾಲಯ)ಯ ವಿವರ.

ತ್ಯಾಗರಾಜರು ಅರ್ಚನ ಭಕ್ತಿಯ ಶ್ರೇಷ್ಠತೆಯನ್ನು ಉಲ್ಲೇಖಿಸುತ್ತಾ ಇಂದ್ರಾದಿಗಳು

* ನೋಡಿ—ತುಳಸೀ ಬಿಲ್ವ, ತುಳಸೀದಳಮುಲಚೇ, ತಪ್ಪಿ ಬ್ರತಿಕಪೋವ, ಚೇತುಲಾರ, ಚೆಲ್ಲರೆ ಕೃತಿಗಳು.

ದಿಗ್ರಾಜರಾಗಿ ಮೆರೆದಿರುವುದು ಶ್ರೀರಾಮನನ್ನು ಅರ್ಚಿಸಿದುದರಿಂದಲೇ ಎಂದು ಸಾರುತ್ತಾರೆ.

**ಪೂಜಿಂಚಿ ನಿನ್ನಿಂದ್ರಾದುಲು ದಿಗ್ರಾಜುಲೈ ವೆಲಯಲೇದಾ**

**(ಶ್ರೀಪತೇ)**

ಅಜ, ರುದ್ರ, ಸುರೇಶರಿಗೆ ಕೀರ್ತನಭಕ್ತಿಯಿಂದ, ಇಂದ್ರಾದಿಗಳಿಗೆ ಅರ್ಚನಭಕ್ತಿಯಿಂದ ಸ್ಥಾನ ಲಭ್ಯವಾಯಿತೆಂದಿರುವುದು ಕೀರ್ತನ ಮತ್ತು ಅರ್ಚನ ಭಕ್ತಿಯ ಹಿರಿಮೆಯನ್ನು ಸಾರುತ್ತದೆ. ತ್ಯಾಗರಾಜರು ಅರ್ಚನೆಗಾಗಿ ಹಲವು ಪುಷ್ಪಗಳನ್ನು ಹೆಸರಿಸಿದರೂ, ಅರ್ಚನೆಗೆ ನಿಜವಾದ ಹೂಗಳೇ ಅಲ್ಲದೆ ದೇವರ ಹೆಸರೆಂಬ (ನಾಮಾವಳಿ) ಪುಷ್ಪಗಳಿಂದಲೂ ಅರ್ಚಿಸಬಹುದು. ನಾಮವೆಂಬ ಕುಸುಮಗಳಿಂದ ದೇವರನ್ನು ಅರ್ಚಿಸುವ ಜನುಮದ ಸಾರ್ಥಕತೆಯನ್ನು ಅವರು ಹೀಗೆ ನುಡಿಯುತ್ತಾರೆ.

**ನಾಮಕುಸುಮಮುಲಚೇ ಪೂಜಿಂಚೇ**
**ನರಜನ್ಮಮೇ ಜನ್ಮಮು**

**(ನಾಮಕುಸುಮ)**

**ವಂದನ** : ದೇವರಿಗೆ ನಮಸ್ಕರಿಸುವುದೇ ವಂದನಭಕ್ತಿ. ಇದು ಭಕ್ತಿ-ಗೌರವಗಳ ಬಾಹ್ಯಪ್ರಕಟನೆ. ದೇವರಿಗೇ ಅಲ್ಲದೆ ಗುರುಹಿರಿಯರಿಗೂ, ಮಹಾನುಭಾವರಿಗೂ ವಂದನೆ ಸಲ್ಲಿಸುವುದುಂಟು. ಹೀಗೆ ಮಾಡುವ ನಮಸ್ಕಾರವು ಅವರಲ್ಲಿ ಅಂತರ್ಗತನಾಗಿರುವ ದೇವರಿಗೇ ಸಲ್ಲುವುದೆಂಬುದು ಒಂದು ನಂಬುಗೆ. ಇಲ್ಲಿ ನಮಸ್ಕರಿಸುವಾತನಿಗೆ ಹಿರಿಯರ ಸಾಧನೆಯ ಔನ್ನತ್ಯದ ಮನವರಿಕೆಯಾಗಿರುತ್ತದೆ. ದೇವರಿಗೆ ಮಾಡುವ ಪ್ರದಕ್ಷಿಣ ನಮಸ್ಕಾರವು ಪಾಪ ಪರಿಹಾರಕವೆಂಬ ನಂಬುಗೆಯೂ ಉಂಟು. ಈ ದೃಷ್ಟಿಯಿಂದಲೇ ತ್ಯಾಗರಾಜರು ದೇವರಿಗೂ, ಮಹಾನುಭಾವರಿಗೂ ಹಲವು ರಚನೆಗಳಲ್ಲಿ ವಂದಿಸುತ್ತಾರೆ. ಉದಾಗೆ :

(ಅ) ನಮೋನಮೋ ರಾಘವಾಯನಮೋನಮೋ ಅನಿಶಂ
(ಆ) ವಂದನಮು ರಘುನಂದನ
(ಇ) ದಂಡಮು ಪೆಟ್ಟೇನುರಾ ಕೋದಂಡಪಾಣಿ
(ಈ) ಎಂದರೋ ಮಹಾನುಭಾವುಲು
(ಉ) ವಿದುಲಕು ಮ್ರೊಕ್ಕೆದ

ತ್ಯಾಗರಾಜರ ಮಾತಿನಂತೆ ರಾಮನು ಅದ್ಭುತಗುಣಗಣನೂ, ಅಪಾರ ಮಹಿಮಾನ್ವಿತನೂ, ಕರುಣಾಪಾರಾವಾರನೂ, ಕರುಣಾಸಾಗರನೂ, ನಿಜಭಕ್ತನೂ ಆದ್ದರಿಂದ ತ್ಯಾಗರಾಜರು ರಾಮನಿಗೆ ನಮಸ್ಕರಿಸಿದ್ದಾರೆ. ಆತ ಅತ್ಯುತ್ತಮ ಮಾರ್ಗದರ್ಶಿಯಾದ್ದರಿಂದ ತಮ್ಮನ್ನು ಮಾರ್ಗಮಧ್ಯೆ ಕೈಹಿಡಿದು ರಕ್ಷಿಸುವಂತೆ ಬೇಡಿ ನಮಸ್ಕರಿಸಿದ್ದಾರೆ.

**ದಾರಿನಿ ಚೈಪಟ್ಟಿ ಬ್ರೋವುಮು**
**ತ್ಯಾಗರಾಜಾರ್ಚಿತ ನೀಕು**

**ದಂಡಮು ಪೆಟ್ಟೇನುರಾ**

(ದಂಡಮುಪೆಟ್ಟೇನುರಾ)

ತ್ಯಾಗರಾಜರ ಕೋರಿಕೆ ಈಡೇರಿದೆ. ಪಟ್ಟಾಭಿರಾಮನ ಪೂರ್ಣವೈಭವದ ದರ್ಶನವನ್ನು ಆತ ಅವರಿಗೆ ನೀಡಿದ್ದಾನೆ. ಅಲ್ಲಿ ಶ್ರೀರಾಮನೊಂದಿಗೆ ಸೀತ, ಭರತ, ಆಂಜನೇಯ, ವಾನರವೀರರಾದ ಗವಯಗವಾಕ್ಷರು, ಅಗಸ್ತ್ಯ, ವಶಿಷ್ಠ, ಮಾರ್ಕಂಡೇಯ, ಗೌತಮಾದಿಗಳೂ ಇದ್ದಾರೆ. ಇಂಥ ದಿವ್ಯದರ್ಶನದಿಂದ ತ್ಯಾಗರಾಜರು ಸುಂದರ ದಶರಥನಂದನನಿಗೆ ವಂದಿಸುತ್ತಾರೆ (ಸುಂದರ ದಶರಥನಂದನ **ವಂದನಮೊನರಿಂಚೆದ**).

ನಮಸ್ಕರಿಸಬೇಕಾದ ವಿಧಾನವನ್ನು ತಿಳಿಸುವ ತ್ಯಾಗರಾಜರ ರೀತಿ ಬಲು ಆಕರ್ಷಕ. ಕೈ, ಕಾಲ್ಗಳು, ಹಣೆ ಹಾಗೂ ಭುಜಗಳು ನೆಲ ತಾಗುವಂತೆ ನಮಸ್ಕರಿಸಬೇಕೆಂಬ ಸೂಚನೆಯನ್ನು ಅವರು ಪರೋಕ್ಷವಾಗಿ ಇಲ್ಲಿ ನೀಡುತ್ತಾರೆ.

**ಕರ ಚರಣಮುಲು ನೊಸಲು ಭುಜಮುಲು**
**ಧರಣಿ ಸೋಕ ಮ್ರೊಕ್ಕಗಲೇದಾ** ?

(ಇಲಲೋ)

ಅಲ್ಲದೆ ಮೂವತ್ತೆರಡು ಶುಭಲಕ್ಷಣಗಳನ್ನು ಹೊಂದಿರುವ ಶ್ರೀರಾಮನಿಗೆ[೧] ಲಕ್ಷಣಕ್ಕೊಂದರಂತೆ ಮೂವತ್ತೆರಡು ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಲು ಇತರರನ್ನೂ ತಮ್ಮೊಡನೆ ಸೇರುವಂತೆ ಆಹ್ವಾನಿಸುತ್ತಾರೆ.

**ಲಕ್ಷಣಮುಲು ಗಲ ಶ್ರೀರಾಮುನಿಕಿ ಪ್ರ-**
**ದಕ್ಷಿಣ ಮೊನರಿಂತಮು ರಾರೇ ಮುಪ್ಪದಿರೆಂಡು-**

(ಲಕ್ಷಣಮುಲುಗಲ)

ಮತ್ತೊಂದು ಶಿವಸ್ತುತಿಯಲ್ಲಿ ತ್ಯಾಗರಾಜರು ಹದಿನಾರು ಪ್ರದಕ್ಷಿಣೆಯೆಂದು ಸಂಖ್ಯೆ ಹೇಳುತ್ತಾರೆ.

**ತರಲಿ ಪದಿಯಾರು ಪ್ರದಕ್ಷಿಣಮುಲೊನರಿಂಚಿ**

(ದರ್ಶನಮು)

**ಹಿರಿಯರಿಗೆ ವಂದನೆ** : ನಾರದಸ್ತುತಿಯಾಗಿ ಪ್ರತ್ಯೇಕ ರಚನೆಗಳನ್ನು ರಚಿಸುವ ಮೂಲಕ ತ್ಯಾಗರಾಜರು ನಾರದರಿಗೆ ವಂದಿಸಿದ್ದಾರೆ. ಅಷ್ಟಲ್ಲದೆ ಅವರು ತಮ್ಮ ಗೀತ ನಾಟಕಗಳಲ್ಲಿ ವಂದಿಸುವ ಇತರ ಭಕ್ತರೆಂದರೆ ತುಲಸೀದಾಸ, ಪುರಂದರದಾಸ, ಭದ್ರಾಚಲ ರಾಮದಾಸ, ಪಾಂಡುರಂಗ, ನಾಮದೇವ, ಜ್ಞಾನದೇವ, ಸಹದೇವ, ಜಯದೇವ, ತುಕಾರಾಮ, ನಾರಾಯಣತೀರ್ಥ, ರಾಮಕೃಷ್ಣಮೋದಾಖ್ಯರು.

**ತುಲಸೀದಾಸ ವರು ಸನ್ನುತುಲು ಸೇತುಮದಿನ್**
**ಪುರಂದರದಾಸುನಿ ಮಹಿಮಮುಲನು ದಲಚೆದಮದಿಲೋ**
**ಶ್ರೀರಾಮದಾಸು ವಿನುತಿಂತು ಮದಿನ್**

**(ಪ್ರಹ್ಲಾದ ಭಕ್ತಿವಿಜಯದ ಮೊದಲಲ್ಲಿರುವ ಕಂದ ಪದ್ಯಗಳು)**

ದಿಗ್ರಾಜರಾಗಿ ಮೆರೆದಿರುವುದು ಶ್ರೀರಾಮನನ್ನು ಅರ್ಚಿಸಿದುದರಿಂದಲೇ ಎಂದು ಸಾರುತ್ತಾರೆ.

**ಪೂಜಿಂಚಿ ನಿನ್ನಿಂದ್ರಾದುಲು ದಿಗ್ರಾಜುಲ್ಕೆ ವೆಲಯಲೇದಾ**

(ಶ್ರೀಪತೇ)

ಅಜ, ರುದ್ರ, ಸುರೇಶರಿಗೆ ಕೀರ್ತನಭಕ್ತಿಯಿಂದ, ಇಂದ್ರಾದಿಗಳಿಗೆ ಅರ್ಚನಭಕ್ತಿಯಿಂದ ಸ್ಥಾನ ಲಭ್ಯವಾಯಿತೆಂದಿರುವುದು ಕೀರ್ತನ ಮತ್ತು ಅರ್ಚನ ಭಕ್ತಿಯ ಹಿರಿಮೆಯನ್ನು ಸಾರುತ್ತದೆ. ತ್ಯಾಗರಾಜರು ಅರ್ಚನೆಗಾಗಿ ಹಲವು ಪುಷ್ಪಗಳನ್ನು ಹೆಸರಿಸಿದರೂ, ಅರ್ಚನೆಗೆ ನಿಜವಾದ ಹೂಗಳೇ ಅಲ್ಲದೆ ದೇವರ ಹೆಸರೆಂಬ (ನಾಮಾವಳಿ) ಪುಷ್ಪಗಳಿಂದಲೂ ಅರ್ಚಿಸಬಹುದು. ನಾಮವೆಂಬ ಕುಸುಮಗಳಿಂದ ದೇವರನ್ನು ಅರ್ಚಿಸುವ ಜನುಮದ ಸಾರ್ಥಕತೆಯನ್ನು ಅವರು ಹೀಗೆ ನುಡಿಯುತ್ತಾರೆ.

**ನಾಮಕುಸುಮಮುಲಚೇ ಪೂಜಿಂಚೇ**
**ನರಜನ್ಮಮೇ ಜನ್ಮಮು**

(ನಾಮಕುಸುಮ)

**ವಂದನ** : ದೇವರಿಗೆ ನಮಸ್ಕರಿಸುವುದೇ ವಂದನಭಕ್ತಿ. ಇದು ಭಕ್ತಿ-ಗೌರವಗಳ ಬಾಹ್ಯಪ್ರಕಟನೆ. ದೇವರಿಗೇ ಅಲ್ಲದೆ ಗುರುಹಿರಿಯರಿಗೂ, ಮಹಾನುಭಾವರಿಗೂ ವಂದನೆ ಸಲ್ಲಿಸುವುದುಂಟು. ಹೀಗೆ ಮಾಡುವ ನಮಸ್ಕಾರವು ಅವರಲ್ಲಿ ಅಂತರ್ಗತನಾಗಿರುವ ದೇವರಿಗೇ ಸಲ್ಲುವುದೆಂಬುದು ಒಂದು ನಂಬುಗೆ. ಇಲ್ಲಿ ನಮಸ್ಕರಿಸುವಾತನಿಗೆ ಹಿರಿಯರ ಸಾಧನೆಯ ಔನ್ನತ್ಯದ ಮನವರಿಕೆಯಾಗಿರುತ್ತದೆ. ದೇವರಿಗೆ ಮಾಡುವ ಪ್ರದಕ್ಷಿಣ ನಮಸ್ಕಾರವು ಪಾಪ ಪರಿಹಾರಕವೆಂಬ ನಂಬುಗೆಯೂ ಉಂಟು. ಈ ದೃಷ್ಟಿಯಿಂದಲೇ ತ್ಯಾಗರಾಜರು ದೇವರಿಗೂ, ಮಹಾನುಭಾವರಿಗೂ ಹಲವು ರಚನೆಗಳಲ್ಲಿ ವಂದಿಸುತ್ತಾರೆ. ಉದಾಗೆ :

(ಅ) ನಮೋನಮೋ ರಾಘವಾಯನಮೋನಮೋ ಅನಿಶಂ
(ಆ) ವಂದನಮು ರಘುನಂದನ
(ಇ) ದಂಡಮು ಪೆಟ್ಟೇನುರಾ ಕೋದಂಡಪಾಣಿ
(ಈ) ಎಂದರೋ ಮಹಾನುಭಾವುಲು
(ಉ) ವಿದುಲಕು ಮ್ರೊಕ್ಕೆದ

ತ್ಯಾಗರಾಜರ ಮಾತಿನಂತೆ ರಾಮನು ಅದ್ಭುತಗುಣಗಣನೂ, ಅಪಾರ ಮಹಿಮಾನ್ವಿತನೂ, ಕರುಣಾಪಾರಾವಾರನೂ, ಕರುಣಾಸಾಗರನೂ, ನಿಜಭಕ್ತನೂ ಆದ್ದರಿಂದ ತ್ಯಾಗರಾಜರು ರಾಮನಿಗೆ ನಮಸ್ಕರಿಸಿದ್ದಾರೆ. ಆತ ಅತ್ಯುತ್ತಮ ಮಾರ್ಗದರ್ಶಿಯಾದ್ದರಿಂದ ತಮ್ಮನ್ನು ಮಾರ್ಗಮಧ್ಯೆ ಕೈಹಿಡಿದು ರಕ್ಷಿಸುವಂತೆ ಬೇಡಿ ನಮಸ್ಕರಿಸಿದ್ದಾರೆ.

**ದಾರಿನಿ ಚೈಪಟ್ಟಿ ಬ್ರೋವುಮು**
**ತ್ಯಾಗರಾಜಾರ್ಚಿತ ನೀಕು**

**ದಂಡಮು ಪೆಟ್ಟೇನುರಾ**

(ದಂಡಮುಪೆಟ್ಟೇನುರಾ)

ತ್ಯಾಗರಾಜರ ಕೋರಿಕೆ ಈಡೇರಿದೆ. ಪಟ್ಟಾಭಿರಾಮನ ಪೂರ್ಣವೈಭವದ ದರ್ಶನವನ್ನು ಆತ ಅವರಿಗೆ ನೀಡಿದ್ದಾನೆ. ಅಲ್ಲಿ ಶ್ರೀರಾಮನೊಂದಿಗೆ ಸೀತ, ಭರತ, ಆಂಜನೇಯ, ವಾನರವೀರರಾದ ಗವಯಗವಾಕ್ಷರು, ಅಗಸ್ತ್ಯ, ವಶಿಷ್ಠ, ಮಾರ್ಕಂಡೇಯ, ಗೌತಮಾದಿಗಳೂ ಇದ್ದಾರೆ. ಇಂಥ ದಿವ್ಯದರ್ಶನದಿಂದ ತ್ಯಾಗರಾಜರು ಸುಂದರ ದಶರಥನಂದನನಿಗೆ ವಂದಿಸುತ್ತಾರೆ (ಸುಂದರ ದಶರಥನಂದನ **ವಂದನಮೊನರಿಂಚೆದ**).

ನಮಸ್ಕರಿಸಬೇಕಾದ ವಿಧಾನವನ್ನು ತಿಳಿಸುವ ತ್ಯಾಗರಾಜರ ರೀತಿ ಬಲು ಆಕರ್ಷಕ. ಕೈ, ಕಾಲ್ಗಳು, ಹಣೆ ಹಾಗೂ ಭುಜಗಳು ನೆಲ ತಾಗುವಂತೆ ನಮಸ್ಕರಿಸಬೇಕೆಂಬ ಸೂಚನೆಯನ್ನು ಅವರು ಪರೋಕ್ಷವಾಗಿ ಇಲ್ಲಿ ನೀಡುತ್ತಾರೆ.

**ಕರ ಚರಣಮುಲು ನೊಸಲು ಭುಜಮುಲು**
**ಧರಣಿ ಸೋಕ ಮ್ರೊಕ್ಕಗಲೇದಾ** ?

(ಇಲಲೋ)

ಅಲ್ಲದೆ ಮೂವತ್ತೆರಡು ಶುಭಲಕ್ಷಣಗಳನ್ನು ಹೊಂದಿರುವ ಶ್ರೀರಾಮನಿಗೆ[೩] ಲಕ್ಷಣಕ್ಕೊಂದರಂತೆ ಮೂವತ್ತೆರಡು ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಲು ಇತರರನ್ನೂ ತಮ್ಮೊಡನೆ ಸೇರುವಂತೆ ಆಹ್ವಾನಿಸುತ್ತಾರೆ.

**ಲಕ್ಷಣಮುಲು ಗಲ ಶ್ರೀರಾಮುನಿಕಿ ಪ್ರ-**
**ದಕ್ಷಿಣ ಮೊನರಿಂತಮು ರಾರೇ ಮುಪ್ಪದಿರೆಂಡು-**

(ಲಕ್ಷಣಮುಲುಗಲ)

ಮತ್ತೊಂದು ಶಿವಸ್ತುತಿಯಲ್ಲಿ ತ್ಯಾಗರಾಜರು ಹದಿನಾರು ಪ್ರದಕ್ಷಿಣೆಯೆಂದು ಸಂಖ್ಯೆ ಹೇಳುತ್ತಾರೆ.

**ತರಲಿ ಪದಿಯಾರು ಪ್ರದಕ್ಷಿಣಮುಲೊನರಿಂಚಿ**

(ದರ್ಶನಮು)

**ಹಿರಿಯರಿಗೆ ವಂದನೆ** : ನಾರದಸ್ತುತಿಯಾಗಿ ಪ್ರತ್ಯೇಕ ರಚನೆಗಳನ್ನು ರಚಿಸುವ ಮೂಲಕ ತ್ಯಾಗರಾಜರು ನಾರದರಿಗೆ ವಂದಿಸಿದ್ದಾರೆ. ಅಷ್ಟಲ್ಲದೆ ಅವರು ತಮ್ಮ ಗೀತ ನಾಟಕಗಳಲ್ಲಿ ವಂದಿಸುವ ಇತರ ಭಕ್ತರೆಂದರೆ ತುಲಸೀದಾಸ, ಪುರಂದರದಾಸ, ಭದ್ರಾಚಲ ರಾಮದಾಸ, ಪಾಂಡುರಂಗ, ನಾಮದೇವ, ಜ್ಞಾನದೇವ, ಸಹದೇವ, ಜಯದೇವ, ತುಕಾರಾಮ, ನಾರಾಯಣತೀರ್ಥ, ರಾಮಕೃಷ್ಣಮೋದಾಖ್ಯರು.

**ತುಲಸೀದಾಸ ವರು ಸನ್ನುತುಲು ಸೇತುಮದಿನ್**
**ಪುರಂದರದಾಸುನಿ ಮಹಿಮಮುಲನು ದಲಚೆದಮದಿಲೋ**
**ಶ್ರೀರಾಮದಾಸು ವಿನುತಿಂತು ಮದಿನ್**

(ಪ್ರಹ್ಲಾದ ಭಕ್ತಿವಿಜಯದ ಮೊದಲಲ್ಲಿರುವ ಕಂದ ಪದ್ಯಗಳು)

**ಪಾಂಡುರಂಗ, ನಾಮದೇವ, ಜ್ಞಾನದೇವ, ಸಹದೇವ, ಜಯದೇವ, ತುಕಾರಾಮ, ಶ್ರೀನಾರಾಯಣ ತೀರ್ಥಾದಿ ಭಗವದ್ದಾಸುಲನೆಲ್ಲ ಪ್ರಣಮಿಲ್ಲಿ ................**
**(ಪ್ರಹ್ಲಾದ ಭಕ್ತಿ ವಿಜಯದ ಆರಂಭದಲ್ಲಿರುವ ವಚನ ಭಾಗ)**

**ಮ್ರೊಕ್ಕೆದ ಶ್ರೀರಾಮಕೃಷ್ಣ ಮೋದಾಖ್ಯುನರ್ಕು**
**(ನೌಕಾ ಚರಿತ್ರೆಯ ಆರಂಭದಲ್ಲಿರುವ ಕಂದ ಪದ್ಯ)**

ಹೀಗೆ ತ್ಯಾಗರಾಜರು ಶ್ರೀರಾಮ ಮತ್ತು ಆತನ ಭಕ್ತರಾದವರ ಔನ್ನತ್ಯವನ್ನು ತಿಳಿದು ನಮಸ್ಕರಿಸುವ ಮೂಲಕ ವಂದನ ಭಕ್ತಿಗೆ ಅಭಿವ್ಯಕ್ತಿ ನೀಡಿದ್ದಾರೆ.

**ದಾಸ್ಯ** : ದೇವರ ಸೇವಕನಂತಿದ್ದು ಆತನನ್ನು ಸೇವಿಸುವುದೇ ದಾಸ್ಯಭಕ್ತಿ. ತ್ಯಾಗ ರಾಜರು ದಾಸ, ಬಂಟ, ಕಿಂಕರ ಎಂಬ ಪದಗಳಿಂದ ದಾಸತ್ವವನ್ನು ಗುರುತಿಸಿದ್ದಾರೆ. 'ಊಡಿಗ' ಎಂಬ ಪದವನ್ನೂ ಅವರು ಬಳಸುತ್ತಾರೆ (ಮೇಲುಕೋವಯ್ಯ, ಚಿನ್ನ ನಾಡೆನಾ) ಅನ್ನಮಾಚಾರ್ಯರು ಒಂದೆಡೆ 'ಕೈವಲ್ಯಮುನಕಂಟೆ ಕೈಂಕರ್ಯಮೆಕ್ಕುಡು' ಎಂದರೆ ಕೈವಲ್ಯಕ್ಕಿಂತಲೂ ಕೈಂಕರ್ಯವೇ ಮಿಗಿಲಾದುದು ಎನ್ನುತ್ತಾರೆ. ಈ ದೃಷ್ಟಿಯಿಂದಲೇ ತ್ಯಾಗ ರಾಜರು ರಾಮನ ಸಾನ್ನಿಧ್ಯಕ್ಕಾಗಿ ಹಲುಬುವುದು.

ಪ್ರಥಮ ಹಂತಗಳಲ್ಲಿ ದೇವರ ಶಕ್ತಿಸಾಮರ್ಥ್ಯ, ಕರುಣಾಪರತೆ ಹಾಗೂ ಸೌಂದರ್ಯದ ಲಕ್ಷಣಗಳನ್ನು ಭಯ ಗೌರವಗಳಿಂದ ಕಾಣುತ್ತಾ ಬಂದ ಭಕ್ತ ಮುಂದೆ ಆತನ ಭೃತ್ಯ ನಾಗಲು ತವಕಿಸುತ್ತಾನೆ. ದಾಸ್ಯಭಾವದ ಈ ಪರಮಾವಧಿಯು ಕೈಂಕರ್ಯದಲ್ಲಿ ಮುಕ್ತಾಯಗೊಳ್ಳುತ್ತದೆ. ದೇವರ ಸೇವೆಯು ಮೋಕ್ಷಕ್ಕೆ ಎಡೆಮಾಡಿ, ಮೋಕ್ಷ ಸ್ಥಿತಿ ಯಲ್ಲಿ ಅದು ಕೈಂಕರ್ಯವಾಗುತ್ತದೆ. ವಿಶಿಷ್ಟಾದ್ವೈತದ ಪ್ರಕಾರ ಮೋಕ್ಷವು ನಿಷ್ಕ್ರಿಯ ವಾದ ಒಂದು ಸ್ಥಿತಿಯಲ್ಲ. ಅದೊಂದು ಕ್ರಿಯಾಶೀಲ ಸ್ಥಿತಿ. ಈ ಸ್ಥಿತಿಯಲ್ಲಿ ಜೀವನು ಭಗವದ್ ಕೈಂಕರ್ಯವನ್ನು ನಡೆಸುತ್ತಾನೆ. ದೇವರ ಆಳಾಗಿ ಸೇವೆ ಸಲ್ಲಿಸುವ ಮತ್ತು ಅವನ ಸ್ವತ್ತಾಗುವ ಹಂಬಲ ಭಕ್ತರಲ್ಲಿ ಇಂದಿನದಲ್ಲ. ಈ ಭಕ್ತರು ದೇವರಿಗಷ್ಟೇ ದಾಸರಾಗು ವುದಿಲ್ಲ. ದೇವರ ದಾಸರಾಗಿ ಯಶಸ್ವಿಯಾದವರಿಗೂ ದಾಸರಾಗಬಯಸುತ್ತಾರೆ. ಎಂದರೆ ಭಕ್ತರಿಗೆ ದೇವರ ದಾಸನಾಗುವುದರಲ್ಲಿ ಇರುವಷ್ಟೇ ಆಸೆ ಆತನ ದಾಸರಿಗೆ ದಾಸನಾಗುವುದರಲ್ಲೂ ಇರುತ್ತದೆ. ಹೀಗೆ ದಾಸರಾಗುವ, ದಾಸರ ದಾಸನಾಗುವ ಈ ಭಕ್ತಿಯು ವಿಶಿಷ್ಟವಾದುದು. ಮುಕುಂದಮಾಲಾಸ್ತೋತ್ರದಲ್ಲಿ 'ತ್ವದ್ಭೃತ್ಯ ಭೃತ್ಯ ಪರಿಚಾರಕ ಭೃತ್ಯಭೃತ್ಯ ಭೃತ್ಯಸ್ಯ ಭೃತ್ಯ ಇತಿಮಾಂ ಸ್ಮರಲೋಕನಾಥ' ಎಂಬ ಉಲ್ಲೇಖ ವುಂಟು.[೨೪] ಶ್ರೀಪಾದರು '*ನಿನ್ನ ದಾಸರ ದಾಸರ ದಾಸರ ದಾಸ್ಯವ ಕೊಡು*' ಎಂದೂ,[೨೫] ಪುರಂದರರು 'ಹರಿದಾಸರ ದಾಸತ್ವವ ಪಡೆದ ನರ ಜೀವನ್ಮುಕ್ತನೆನಿಸಿ ಕೀರ್ತಿಪಡೆದ ನೆಂದೂ', ಕನಕದಾಸರು 'ದಾಸದಾಸರ ಮನೆಯ ದಾಸಿಯರ ಮಗ ನಾನು' ಎಂದೂ, ದಾಸ್ಯ ಭಕ್ತಿಭಾವವನ್ನು ಅಭಿವ್ಯಕ್ತಿಸುತ್ತಾರೆ. ಇವರೆಲ್ಲರ ನಂಬಿಕೆ ಭಗವದ್ಭಕ್ತರ ಸೇವೆಯ ಮೂಲಕ ಭಗವಂತನ ಸೇವೆ ಸಲ್ಲಿಸಬಹುದೆಂಬುದೇ ಆಗಿದೆ. ತ್ಯಾಗರಾಜರೂ

ಈ ಭಾವಾಭಿವ್ಯಕ್ತಿಯಿಂದ ಹೊರತಾಗಿಲ್ಲ. ಅವರು 'ಶ್ರೀರಾಮದಾಸ ದಾಸೋಹಂ' ಎಂದೇ ಕೀರ್ತನೆಯೊಂದನ್ನು ಆರಂಭಿಸುತ್ತಾರೆ. ಅಲ್ಲದೆ ತಮ್ಮನ್ನು 'ರಾಮದಾಸದಾಸ' ನೆಂದೂ ಕರೆದುಕೊಳ್ಳುತ್ತಾರೆ (ಬೃಂದಾವನ ಲೋಲ). ಶ್ರೀರಾಮನಲ್ಲೇ ಅವರು ವಿನೀತ ರಾಗಿ ದಾಸ್ಯವನ್ನು ಘೋಷಿಸಿಕೊಳ್ಳುವ ರೀತಿ ಹೀಗಿದೆ.

(ಅ) **ತವದಾಸೋಹಂ ತವದಾಸೋಹಂ ತವದಾಸೋಹಂ ದಾಶರಥೇ** (ತವ **ದಾಸೋಹಂ**)

(ಆ) **ನೀ ದಾಸುಡನಿ ನೇನು (ನೆನರುಂಚಿನಾನು)**

ತ್ಯಾಗರಾಜರು ತಮ್ಮನ್ನು ದಾಸಜನರಲ್ಲಿ ಅಗ್ರೇಸರರೆಂದು ಕರೆದುಕೊಳ್ಳುತ್ತಾರೆ.

**ದಾಸಜನಾಗ್ರೇಸರ ತ್ಯಾಗರಾಜ**

(**ವರದಾ ನವನೀತಾಶಪಾಹಿ**)

ದಾಸ್ಯಭಾವಕ್ಕೆ ಸಂಬಂಧಿಸಿದಂತೆ ತ್ಯಾಗರಾಜರ ಸಾಹಿತ್ಯವನ್ನು ಅಭ್ಯಸಿಸಿದಾಗ, ಈ ಕೆಳಗಿನ ಅಂಶಗಳು ಕಂಡುಬರುತ್ತವೆ.

(ಅ) ದಾಸರಾಗಿ ಶ್ರೀರಾಮನಿಗೆ ಕೈಂಕರ್ಯ ನಡೆಸಬೇಕೆಂಬ ತೀವ್ರ ಹಂಬಲ ಅವರಿಗಿದೆ.

(ಆ) ಶ್ರೀರಾಮ ತಮಗೆ ಒಡೆಯ. ತಮ್ಮ ಸರ್ವಸ್ವವೂ ಆತನ ಒಡೆತನಕ್ಕೆ ಸೇರಿದುದು ಎಂಬ ನಂಬಿಕೆಯಿದೆ.

(ಇ) ದಾಸ್ಯ ಭಕ್ತಿಯಿಂದ ಶ್ರೀರಾಮನ ಸಾಮೀಪ್ಯ ಹೊಂದಿ ತ್ಯಾಗರಾಜರಿಗೆ ಆದರ್ಶರಾದ ಪೌರಾಣಿಕ ವ್ಯಕ್ತಿಗಳು ಹೆಸರಿಸಲ್ಪಟ್ಟಿದ್ದಾರೆ. ಅವರಂತೆಯೇ ತಾವೂ ಸೇವೆ ಸಲ್ಲಿಸಬೇಕೆಂಬ ಅತೀವ ಬಯಕೆಯಿದೆ.

(ಈ) ಹರಿದಾಸರ ವಿವರಣೆ ಇದೆ. ಹರಿದಾಸರ ಸಂಗಕ್ಕಾಗಿ ತವಕ ಇದೆ.

ತ್ಯಾಗರಾಜರು ಶ್ರೀರಾಮನಲ್ಲಿ ಹೀಗೆ ಪ್ರಾರ್ಥಿಸುತ್ತಾರೆ. ಬಂಟನಾಗುವಂತೆ ಅನುಗ್ರಹಿಸು.

**ಬಂಟು ರೀತಿ ಕೊಲುವೀಯವಯ್ಯ**

ಏಕೆಂದರೆ ಶ್ರೀರಾಮನ ಸೇವೆ ಮಾಡುವುದೇ ಅವರ ಜೀವನದ ಧ್ಯೇಯವೆಂದು ಅವರು ತಿಳಿದಿದ್ದಾರೆ.

**ಸೇವಜೇಯುಟೇ ಜೀವನಮನಿಯುಂಟಿ**

(**ಎಂತ ಪಾಪಿನೈತಿ**)

ಶ್ರೀರಾಮನಿಗೆ ಸೇವೆಸಲ್ಲಿಸಬೇಕೆಂಬ ಆಸೆಯಿಂದ ತಮ್ಮನ್ನು ಶ್ರೀರಾಮನು ತನ್ನ ಬಳಿಯಲ್ಲೇ ಇರಿಸಿಕೊಳ್ಳಬೇಕೆಂದು ಪ್ರಾರ್ಥಿಸುತ್ತಾರೆ.

**ಚೆಂತನೇ ಸದಾಯುಂಚುಕೋವಯ್ಯ**

(**ಚೆಂತನೇ**)

ಇಂತಹ ಸೌಭಾಗ್ಯ ತ್ಯಾಗರಾಜರಿಗೆ ದೊರೆತರೆ ಅವರು ಶ್ರೀರಾಮನ ಇಂಗಿತವನ್ನು

ಅರಿತು, ಆತನ ಆಜ್ಞೆಗಳನ್ನು ತಲೆಯ ಮೇಲೆ ಹೊತ್ತು ಅದರಂತೆ ನಡೆದುಕೊಳ್ಳುತ್ತಾರೆ.

**ಕನ್ನುಲ ಜಾಡಲನು ದೆಲಿಸಿ ನಡತುರಾಮಾ**

**(ರಾಮರಾಮರಾಮರಾಮ)**

**ತಲಚಿನ ಪನುಲನು ನೇತೆಲಸಿ**
**ತಲತೋ ನಡಚಿ ಸಂತಸಿಲ್ಲುದುರಾ**

**(ಚೆಂತನೇ)**

ರಾಮನಾಜ್ಞೆಯನ್ನು ಪಾಲಿಸುವುದರಲ್ಲಿ ತ್ಯಾಗರಾಜರಿಗೆ ವಿಶೇಷ ಸಂತೋಷವಿದೆ. ಇಂತಹ ಸಂತೋಷವನ್ನು ಹೊಂದುವುದೇ ಪರಮಭಾಗ್ಯವಾಗಿ ತ್ಯಾಗರಾಜರು ಪರಿಗಣಿಸುತ್ತಾರೆ. ಏಕೆಂದರೆ, ದೇವರು ಅವರ ಚಿಕ್ಕಂದಿನಲ್ಲೇ ಮಾತು ನೀಡಿದ್ದಾನೆ, ತ್ಯಾಗರಾಜರ ಸೇವೆಯನ್ನು ಸ್ವೀಕರಿಸಿ ಅವರನ್ನು ತಾನು ರಕ್ಷಿಸುವಂತೆ. ಈ ಮಾತನ್ನು ಅವರು ರಾಮನಿಗೆ ಜ್ಞಾಪಿಸುತ್ತಾ ದಾಸ್ಯಕ್ಕಾಗಿ ಯಾಚಿಸುತ್ತಾರೆ.

**ಎನ್ನರಾನಿ ಯೂಡಿಗಮು ಗೈಕೊನಿ**
**ಯೆಂತೋ ನನ್ನು ಪಾಲನಮು ಸೇತುನನಿ**

**(ಚಿನ್ನನಾಡೆ)**

ತ್ಯಾಗರಾಜರ ದೃಷ್ಟಿಯಲ್ಲಿ ದಾಸ್ಯಭಕ್ತಿಗೆ ಆದರ್ಶರಾದ ಪೌರಾಣಿಕ ವ್ಯಕ್ತಿಗಳು ಲಕ್ಷ್ಮಣ, ಹನುಮಂತ, ಸೀತೆ, ಭರತ ಹಾಗೂ ಗರುಡ. ಲಕ್ಷ್ಮಣ ಮತ್ತು ಹನುಮಂತರಲ್ಲಿ ದಾಸ್ಯಭಾವದ ಪರಾಕಾಷ್ಠೆಯನ್ನು ತಲುಪಿದವರಾರೆಂದು ಹೇಳುವುದು ಕಷ್ಟ. ಏಕೆಂದರೆ ಇಬ್ಬರೂ ದಾಸ್ಯದ ಪರಮಾವಧಿಯಿಂದ ಭಗವಂತನ ಸೇವೆ ನಡೆಸಿದ್ದಾರೆ. ಇವರಿಬ್ಬರಲ್ಲಿ ಕಂಡುಬರುವ ಒಂದೇ ಒಂದು ವ್ಯತ್ಯಾಸವೆಂದರೆ, ಲಕ್ಷ್ಮಣ ರಾಮನಿಗೆ '**ರಕ್ತ ಸಂಬಂಧಿ**', ಆಂಜನೇಯ '**ರಕ್ತ ಸಂಬಂಧಿಯಲ್ಲ**'. ಇವರಿಬ್ಬರ ಕೈಂಕರ್ಯವನ್ನು ತ್ಯಾಗರಾಜರು ವರ್ಣಿಸುವ ರೀತಿ ಸ್ತುತ್ಯರ್ಹವಾಗಿದೆ.

**ಲಕ್ಷ್ಮಣ** : ವಾಲ್ಮೀಕಿ ರಾಮಾಯಣದಲ್ಲಿ ಲಕ್ಷ್ಮಣನನ್ನು 'ಭಾವಜ್ಞ'ನೆಂದು ಪರಿಗಣಿಸಲಾಗಿದೆ.[೧೬] ಸೀತಾರಾಮಲಕ್ಷ್ಮಣರು ಅರಣ್ಯ ತಲುಪಿದೊಡನೆ, ಲಕ್ಷ್ಮಣನು ರಾಮನ ಇಂಗಿತವನ್ನು ಅರಿತು ಆತನ ಮನೋಭೀಷ್ಟಕ್ಕನುಗುಣವಾಗಿ ಪರ್ಣಕುಟೀರವೊಂದನ್ನು ಸಿದ್ಧಪಡಿಸಿದಂತೆ ಪ್ರಸ್ತಾಪವುಂಟು. ಇದರಿಂದ ಆನಂದಿಸಿದ ಶ್ರೀರಾಮನು ಲಕ್ಷ್ಮಣನನ್ನು ಆಲಂಗಿಸಿಕೊಂಡು ಭಾವಜ್ಞನೆಂದು ಸಂಬೋಧಿಸುತ್ತಾನೆ. ಇದರಂತೆಯೇ ತ್ಯಾಗರಾಜರು ಲಕ್ಷ್ಮಣನನ್ನು ಇಂಗಿತಜ್ಞನಾಗಿ ಚಿತ್ರಿಸುತ್ತಾರೆ. ಶ್ರೀರಾಮನ ಕಣ್ಣುಗಳ ಜಾಡನ್ನರಿತು ಸೇವೆ ಸಲ್ಲಿಸುವುದರಲ್ಲೇ ಈತನಿಗೆ ಸುಖ.

**ಸೌಮಿತ್ರಿ ಕನುಲಜಾಡಲ ಸುಖಮು**

**(ಲೇಕನಾ)**

ಸೌಮಿತ್ರಿಯು ಮಾಡಿರುವ ಸೇವೆಗಳಲ್ಲಿ ಮೇಲು-ಕೀಳೆಂಬುದಾವುದೂ ಇಲ್ಲ. ಒಮ್ಮೆ ಆತ ರತ್ನಖಚಿತವಾದ ಪೀಕದಾನಿಯನ್ನು ಹಿಡಿದು ನಿಂತಿದ್ದಾನೆ.

........ ರತನಕಮ್ಮ ಪಡಿಗ ಪಟ್ಟಿ
ತೇಜರಿಲ್ಲ ನಿಲಿಚಿನಾಡು

(ವಿಡೆಮುಸೇಯವೇ)

ಸೀತಾಮಾತೆ ನೀಡಿದ ತಾಂಬೂಲವನ್ನು ಶ್ರೀರಾಮನು ಸೇವಿಸುವುದರಿಂದ, ಆನಂತರದ ಸೇವೆಗಾಗಿ ಲಕ್ಷ್ಮಣನಿಲ್ಲಿ ಪೀಕದಾನಿ ಹಿಡಿದಿದ್ದಾನೆ. ಅನಂತರ ಚಿತ್ರರತ್ನಮಯವಾದ ಶೇಷತಲ್ಪದಲ್ಲಿ ಸೀತಾಪತಿಯನ್ನು ಕುಳ್ಳಿರಿಸಿ ತೂಗುತ್ತಾನೆ. ಸುಂದರ ರಾಗಗಳನ್ನು ಆಲಾಪಿಸುತ್ತಾ ರಾಮತತ್ತ್ವಾರ್ಥವನ್ನು ಕೀರ್ತಿಸಿ ತನ್ಮೂಲಕ ಪುಳಕಗೊಳ್ಳುತ್ತಾನೆ.

ಚಿತ್ರರತ್ನಮಯ ಶೇಷತಲ್ಪಮಂದು
ಸೀತಾಪತಿಯುನಿಚಿ ಜೂಚು ಸೌಮಿತ್ರಿ .....
ಬಾಗುಗ ವಿಂತರಾಗಮುಲ ನಾಲಾಪಮು
ಸೇಯಗ ಮೇನು ಪುಲಕರಿಂಚಗ
ಶ್ರೀತ್ಯಾಗರಾಜನುತುಡಗು ಶ್ರೀರಾಮುನಿ
ತತ್ತ್ವಾರ್ಥಮುನು ಪೊಗಡಿ ಜೂಚು ಸೌಮಿತ್ರಿ .....

(ಮಿತ್ರಿಭಾಗ್ಯಮೇ)

ನಿದ್ರಾಹಾರಗಳನ್ನೂ ಮರೆಸುವಂತಹ ಪರಿಚಾರಕ ಭಾಗ್ಯವು ಸೌಮಿತ್ರಿಯ ಪಾಲಿಗೆ ಲಭ್ಯವಾಗಿದೆ.

ವಾರಮು ನೀದು ಮನಸುದಾರಿನನುಸರಿಂಚುಚು
ನೇರಮುಲೇಕನುಯಾಹಾರ ಸುಷುಪ್ತುಲನು ನಿ-
ವಾರಣಮುಜೇಯು ಪರಿಚಾರಕ ಭಾಗ್ಯಮಲಂ
ಕಾರಿಯಗು ಸುಮಿತ್ರಕುಮಾರುನಿ ಪಾಲ್ಕೆಯುಂಡಗ ......

(ಏವರಮಡುಗುದುರಾ)

ಹೀಗೆ ದಾಸ್ಯಭಕ್ತಿಯ ಒಂದು ಸಾಕಾರನೇ ಆಗಿದ್ದಾನೆ, ಲಕ್ಷ್ಮಣ. ಈತ ಕೈಂಕರ್ಯ ಲಕ್ಷ್ಮೀ ಸಂಪನ್ನನೇ ಹೌದು. ಈ ಚಿತ್ರಗಳನ್ನು ನೀಡುತ್ತಲೇ ತ್ಯಾಗರಾಜರು ಸೌಮಿತ್ರಿಯ ಭಾಗ್ಯವನ್ನು ಹೃತ್ಪೂರ್ವಕವಾಗಿ ಕೊಂಡಾಡುತ್ತಾರೆ.

(ಸೌ) ಮಿತ್ರಿಭಾಗ್ಯಮೇ ಭಾಗ್ಯಮು

ಇನ್ನು ಭರತನು ಕರ್ತವ್ಯನಿಷ್ಠನಾದ ತಪಸ್ವಿ. ರಾಜ್ಯದ ವೈಭವವನ್ನು ತೊರೆದು ರಾಜ್ಯವಾಳುವ ಭಾರವನ್ನು ಮಾತ್ರ ಹೊತ್ತವನು. ಈತ ಸುಖವಾಗಿ ನಡೆಸಬಹುದಾಗಿದ್ದ ಭೋಗಜೀವನವನ್ನು ತ್ಯಜಿಸಿ, ಶ್ರೀರಾಮನನ್ನೇ ಸ್ಮರಿಸುತ್ತಾ ಆತನ ಪಾದುಕೆಗಳನ್ನೇ ರಾಮಲಾಂಛನವಾಗಿರಿಸಿಕೊಂಡು ರಾಜ್ಯವಾಳಿದ ವೈರಾಗ್ಯಮೂರ್ತಿ. ದಾಸ್ಯಭಕ್ತಿಗೆ ಮತ್ತೊಂದು ಆದರ್ಶ. ರಾಮನ ಪ್ರೇಮಾತಿರೇಕಕ್ಕೆ ಪಾತ್ರನಾದ ಈತ ಶ್ರೀರಾಮ

ನಿಗೆ ಶ್ವೇತಛತ್ರಿ ಹಿಡಿದು ನಿಂತಿದ್ದಾನೆ.*

**ಕರಮುನ ಗೊಡುಗಿಡುಕೊನಿ ಸೋ**
**ದರು ಭರತುಡು ..................**

(ಸುಂದರ ದಶರಥನಂದನ)

ಶತ್ರುಘ್ನನು ಶ್ರೀರಾಮನಂತೆಯೇ ಪ್ರಜೆಗಳನ್ನು (ಶ್ರೀರಾಮನ ಭಕ್ತರನ್ನು) ರಕ್ಷಿಸಿದ ನೆನ್ನುತ್ತಾರೆ. ಹೀಗೆ ಭರತ-ಶತ್ರುಘ್ನರ ಸೇವೆಗಳಲ್ಲಿ ವ್ಯತ್ಯಾಸ ಕಾಣಬಂದರೂ, ಇಬ್ಬರೂ ಕೈಂಕರ್ಯ ಭಕ್ತಿಯಲ್ಲಿ ಅಗ್ರಗಣ್ಯರೇ ಆಗಿದ್ದಾರೆ.

ಲಕ್ಷ್ಮಣ, ಭರತ, ಶತ್ರುಘ್ನರು ಸಲ್ಲಿಸಿದ ವಿವಿಧ ಸೇವೆಗಳನ್ನು ಪ್ರಸ್ತಾಪಿಸಿ ತ್ಯಾಗ ರಾಜರು ಮನಮಿಡಿಯುವಂತೆ ಬೇಡಿಕೊಳ್ಳುವುದು ಹೀಗೆ.

**ಶ್ರೀಮಂತುಲೌ ನೀ ಸೋದರುಲು**
**ಸೇಯುರೀತಿ ಪಾದಸೇವ ಕೋರಿತಿನಿ**

(ಶ್ರೀಮಾನಿನೀ ಮನೋಹರ)

ಇಲ್ಲಿ ತ್ಯಾಗರಾಜರು ಶ್ರೀರಾಮನ ಸಹೋದರರನ್ನು '*ಶ್ರೀಮಂತ*'ರೆನ್ನುವುದು ರಾಜ ಮನೆತನದವರೆಂಬ ಕಾರಣದಿಂದಲ್ಲ. ರಾಮಸೇವಾ ಭಾಗ್ಯದಿಂದ ಶ್ರೀಮಂತರಾದವ ರೆಂಬ ಕಾರಣದಿಂದ ಇವರನ್ನು ಶ್ರೀಮಂತರೆಂದು ಸಂಬೋಧಿಸುತ್ತಾರೆ. ತ್ಯಾಗರಾಜರ ಆಶಯ ರಾಮ ಸಹೋದರರಂತೆಯೇ ತಾವೂ ರಾಮಸೇವೆ ಮಾಡಬೇಕೆಂಬುದು. ಈ ಅರ್ಥದಲ್ಲೇ ಅವರು ಕೆಲವು ರಚನೆಗಳಲ್ಲಿ ಶ್ರೀರಾಮನನ್ನು 'ಅಣ್ಣ' ಎಂದು ಸಂಬೋಧಿಸಿ† ತಮ್ಮನ್ನು ರಾಮನ ಸಹೋದರರ ಸ್ಥಾನದಲ್ಲಿ ಭಾವಿಸಿಕೊಳ್ಳುತ್ತಾರೆ.

**ಹನುಮಂತ** : ಮುಂದಿನ ಘಟ್ಟದಲ್ಲಿ ತ್ಯಾಗರಾಜರು, ಲಕ್ಷ್ಮಣ, ಭರತ, ಶತ್ರುಘ್ನ ರಂತಲ್ಲದಿದ್ದರೂ, ನಿಜಜ್ಞಾನದಿಂದ ಶ್ರೀಮಂತನಾದ ಹನುಮಂತನ ರೀತಿಯಲ್ಲಾ

---

* ವಾಲ್ಮೀಕಿ ರಾಮಾಯಣದಲ್ಲಿ, ಪಟ್ಟಾಭಿಷೇಕದ ಸಮಯದಲ್ಲಿ ಛತ್ರಿಯನ್ನು ಶತ್ರುಘ್ನನು ಹಿಡಿದಿರುವಂತೆ ಕಂಡುಬಂದರೂ ತ್ಯಾಗರಾಜರಿಗೆ ಮಾತ್ರ ಅದನ್ನು ಭರತನು ಹಿಡಿದಿರುವಂತೆ ಗೋಚರವಾಗಿದ್ದಾನೆ. ಇಂಥ ಅನುಭವ ವೈವಿಧ್ಯಗಳು ಸಂತರ ಜೀವನದಲ್ಲಿ ಸರ್ವೇಸಾಧಾರಣ. ರಾಮಾಯಣದಲ್ಲಿ ಛತ್ರಿ ಹಿಡಿದು ನಿಲ್ಲುವವ ಭರತನಲ್ಲ, ಶತ್ರುಘ್ನ. 'ಛತ್ರಂತು ತಸ್ಯ ಜಗ್ರಾಹ ಶತ್ರುಘ್ನಃ ಪಾಂಡರಂ ಶುಭಂ'—ನೋಡಿ ವಾಲ್ಮೀಕಿ ರಾಮಾಯಣ, ಯುದ್ಧಕಾಂಡ. ೧೩೧ನೇ ಸರ್ಗ, ಶ್ಲೋಕ ೬೮. 'ಶ್ವೇತಾತಪತ್ರಂ ಶತ್ರುಘ್ನೋ'—ಅಧ್ಯಾತ್ಮರಾಮಾಯಣ, ಯುದ್ಧಕಾಂಡ, ಸರ್ಗ ೧೫, ಶ್ಲೋಕ ೧೮. ಭರತಯೋಗಿಯ ಬಹಿರ್‌ಪ್ರಾಣ ಶತ್ರುಘ್ನ ಎನ್ನುವ ಭಾವನೆಯೂ ಇರುವುದರಿಂದ, ತ್ಯಾಗರಾಜರಿಗೆ ಭರತನೇ ಛತ್ರಿ ಹಿಡಿದಿರುವಂತೆ ದೃಶ್ಯವಾಗಿದೆ. ಈ ಛತ್ರಿಯು ರತ್ನದ ಕೋಲುಳ್ಳ ಬಿಳುಪಾದ ಛತ್ರಿಯಾಗಿದ್ದಿತೆಂಬುದು ಅಧ್ಯಾತ್ಮರಾಮಾಯಣದಲ್ಲಿದೆ. ನೋಡಿ ಯುದ್ಧಕಾಂಡ, ಸರ್ಗ ೧೫, ಶ್ಲೋಕ ೧೮. ಅಪರಿಮಿತ ನವರತ್ನಗಳು ಛತ್ರಿಯಲ್ಲಿ ಹುದುಗಿಸಲ್ಪಟ್ಟಿತ್ತು ಎಂದು ತ್ಯಾಗರಾಜರು 'ಉಪಚಾರಮುಲನು' ಎಂಬ ಕೃತಿಯಲ್ಲಿ ಹಾಡಿದ್ದಾರೆ. 'ಅಪರಿಮಿತ ನವರತ್ನಮುಲು ಪೊದಗಿನ ಅಪರಂಜಿ ಗೊಡುಗು'

† ಅನ್ನ ನೀಕಿಕ ದಯರಾದಾ ? (ಪರಮ ಪಾವನ ಗುಣಶಾಲಿ)

ದರೂ ತಮ್ಮನ್ನು ಬಳಿ ಇರಿಸಿಕೊಳ್ಳಬೇಕೆಂದು ರಾಮನಲ್ಲಿ ಪ್ರಾರ್ಥಿಸುತ್ತಾರೆ.

**ಮಂತುಕೆಕ್ಕು ಶ್ರೀಮಂತುಡೌ ಹನೂ-**
**ಮಂತು ರೀತಿಗಾ ಶ್ರೀಕಾಂತ ॥**

(ಚೆಂತನೇ ಸದಾಯುಂಚುಕೋವಯ್ಯ)

ಹನುಮಂತನು ನಾದಯೋಗ, ರಾಮುಭಕ್ತಿಗಳೆರಡರಲ್ಲೂ ತ್ಯಾಗರಾಜರಿಗೆ ಆದರ್ಶ. ಇವೆರಡು ಅರ್ಹತೆಗಳನ್ನು ತ್ಯಾಗರಾಜರೂ ಹೊಂದಿದ್ದಾರೆ. ಹನುಮಂತನಿಗೆ ಶ್ರೀರಾಮನಲ್ಲಿದ್ದಷ್ಟೇ ತೀವ್ರಭಕ್ತಿ ತ್ಯಾಗರಾಜರಿಗೂ ಇದೆ. ಈ ಗುಣಗಳನ್ನು ಮೆಚ್ಚಿ ರಾಮನು ಆತನಿಗೆ ತನ್ನ ಬಳಿಯಲ್ಲೇ ಸ್ಥಾನ ನೀಡಿರಬಹುದೇ ಎಂದು ಊಹಿಸಿಕೊಂಡು ತಮಗೂ ಅಂತಹ ಸೇವಾಸೌಭಾಗ್ಯ ನೀಡಿ ಸನಿಹ ಇರಿಸಿಕೊಳ್ಳುವಂತೆ ಬೇಡುತ್ತಾರೆ.

ಅಸಮಾನ ಸೇವಕನಾದ ಹನುಮಂತನು ಶ್ರೀರಾಮನನ್ನು ಸುಪ್ರಭಾತದ ವೇಳೆಯಿಂದಲೇ ಸೇವಿಸಲಾರಂಭಿಸುತ್ತಾನೆ. ಆನಂತರ ಶ್ರೀರಾಮನು ಅಮೃತ ಸ್ನಾನಪೂಜಾದಿಗಳನ್ನು ಮಾಡಿ ಕುಲದೈವನಾದ ಶ್ರೀರಂಗೇಶನಿಗೆ ನೈವೇದ್ಯವಿಡುತ್ತಾನೆ. ನಿವೇದನಾನಂತರ ಸೀತೆಯ ಅಮೃತಹಸ್ತದಿಂದ ಪ್ರಸಾದ ಸ್ವೀಕಾರಮಾಡಿ ವಿಶ್ರಮಿಸುವ ವೇಳೆಯಲ್ಲಿ 'ಆಂಜನೇಯಾ ಸಾತ್ವಿಕ ಪುರಾಣ ಪಠನೆ ಮಾಡು' ಎಂದು ಆಜ್ಞಾಪಿಸುತ್ತಾನೆ. ಇಲ್ಲಿ ರಾಮನ ಸುಪ್ರಭಾತದಿಂದ ಮೊದಲ್ಗೊಂಡು ಪುರಾಣ ಪಠಣೆಯವರೆಗೆ ಹನುಮಂತನ ಸೇವೆ ನಡೆಯಲಿದೆ. ಭಾಗ್ಯವಂತನಾದ ಈತ ದಾಸ್ಯಭಕ್ತಿಯಿಂದ ಬ್ರಹ್ಮಾನಂದವನ್ನು ಪಡೆದಿದ್ದಾನೆ. ದೇವರನ್ನು ಭಕ್ತಿಯಿಂದಲೇ ಗೆದ್ದು ಸ್ವಾಧೀನದಲ್ಲಿರಿಸಿಕೊಂಡಿದ್ದಾನೆ.

**ಕಲುಗುನಾ ಪದನೀರಜಸೇವ ಗಂಧವಾಹತನಯ ॥**
**..................... ಬ್ರಹ್ಮಾನಂದುಡೈ**
**ಬರಗೇ ............................ ॥**
**ವೇಕುವ ಜಾಮುನ ನೀಕರಮುನ ನಿಡಿ**
**ಶ್ರೀಕಾಂತುಡಮೃತ ಸ್ನಾನಮುಜೇಸಿ**
**ಪಾಕಮುಲನು ಶ್ರೀರಂಗೇಶುನಿಕ**
**ರ್ಪಣಮುಜೇಸಿ ತಾ ಸೀ**
**ತಾಕರಮುಲಚೇ ಭುಜಿಂಚಿ ನಿನು ಸಾ**
**ತ್ವಿಕ ಪುರಾಣಪಠನ ಸೇಯಮನೇ**
**..................................**
**...................................**

(ಕಲುಗುನಾ)

**ವಾತಾತ್ಮಜುನಿಕಿ ಚೇಯಿ ವಶಮ್ಮೈನ ದೊರಕು .............**

(ರಕ್ಷಪೆಟ್ಟರೇ)

ಹೀಗೆ ನಿಜವಾದ ಅರ್ಥದಲ್ಲಿ ದಾಸರಾಗಲು ತ್ಯಾಗರಾಜರು ಬಯಸುತ್ತಾರೆ.

**ಸೀತೆ** : ಇನ್ನು ಸೀತೆಯಾದರೋ ಅರಣ್ಯವಾಸದಲ್ಲೂ ಶ್ರೀರಾಮನೊಂದಿಗೆ ಇದ್ದು ಅರಣ್ಯವನ್ನೇ ಸ್ವರ್ಗಕ್ಕಿಂತ ಅತಿಶಯವಾದ ರಾಜ್ಯವಾಗಿಸಿದ್ದಾಳೆ. ಪರಮಾತ್ಮನಿಗಾಗಿ ಗಡಿದಾಟಿದ್ದಾಳೆ.

**ಪರಮಾತ್ಮುನಿಕೈ ಗಡಿದೇರಿ ಸದಾ**
**ಸಿರುಲಿಚ್ಚುಟಕು ಚೇರಿ ಗೊಲ್ಚಿನ ..........**

(ಸರಿಯವ್ವರೇ)*

ಈಕೆಯ ಸರಿಸಾಟಿ ಯಾರೆಂದು ತ್ಯಾಗರಾಜರು ಚಕಿತರಾಗುತ್ತಾ, ಈಕೆಯ ದಾಸೀ ಭಕ್ತಿಯನ್ನು ಎತ್ತಿಹಿಡಿಯುತ್ತಾರೆ.

**ಗರುಡ** : ತ್ಯಾಗರಾಜರು 'ಪ್ರಹ್ಲಾದ ಭಕ್ತಿ ವಿಜಯ'ದಲ್ಲಿ 'ವೈನತೇಯುನಿವಲೆ ಭಕ್ತಿನಿಮ್ಮು ಪದಿಮಾರುಲಕುನ್' ಎಂದು ಪ್ರಾರ್ಥಿಸುತ್ತಾರೆ. ಗರುಡನು ಒಂದರ್ಥ ದಲ್ಲಿ ಶ್ರೀಹರಿಗೆ ಸಾರಥಿ ಹಾಗೂ ವಾಹನವೂ ಹೌದು. ಹರಿಯನ್ನು ತನ್ನ ಭುಜಗಳಲ್ಲಿ ಹೊತ್ತು ತಿರುಗುವ ದಾಸನೀತ. ಅದರಿಂದ ಆಕರ್ಷಿತರಾದ ತ್ಯಾಗರಾಜರು ಎಂದೆಂ ದಿಗೂ ಗರುಡನಿಗೆ ಅನುಗ್ರಹಿಸಿದಂತಹ ಭಕ್ತಿಯನ್ನು ತಮಗೂ ನೀಡುವಂತೆ ಬೇಡು ತ್ತಾರೆ.

ಶ್ರೀರಾಮನು ತನ್ನನ್ನು ಸುತ್ತುವರಿದಿರುವ ಅಂತರಂಗಿಕ ಭಕ್ತರಿಗೆಲ್ಲಾ ವಿವಿಧ ರೀತಿಯ ಆನಂದ ನೀಡಿದ್ದಾನೆ. ಅವರ ಉಪಚಾರಗಳಿಂದ ಮೈಮರೆತಿದ್ದಾನೆ. ಹೀಗಾಗಿ ತಮ್ಮನ್ನು ಆತ ಮರೆತುಬಿಡುವನೇನೋ ಎಂಬ ಶಂಕೆಯಿದೆ ತ್ಯಾಗರಾಜರಿಗೆ. ಅದರಿಂ ದಾಗಿ ಅವರು ರಾಮನಿಗೆ ತಮ್ಮ ಇರುವಿಕೆಯನ್ನು ಹೀಗೆ ಜ್ಞಾಪಿಸುತ್ತಾರೆ.

ಬಾಗಿಲಿನಲ್ಲೇ ಕಿಂಕರನಾದ ವಾತಾತ್ಮಜನಿದ್ದಾನೆ. ಶ್ರೇಷ್ಠರಾದ ಸಹೋದರರೂ ಸನಿಹದಲ್ಲೇ ಇದ್ದಾರೆ. ಏಕಾಂತ ಸೇವೆಗೆ ಜಾನಕಿ ಇದ್ದಾಳೆ. ಹೀಗಿರುವಾಗ ನಿನ್ನನ್ನು ಉಪಚರಿಸಲು ಇತರರ ಅವಶ್ಯವಿಲ್ಲೆಂದು ತಿಳಿದು ನನ್ನನ್ನು ಮರೆಯದಿರು. ನಾನು ನಿನ್ನ ದಾಸನಾಗಬೇಕೆಂಬ ಸಲುವಾಗಿಯೇ ನಿನ್ನನ್ನು ಕೀರ್ತಿಸುತ್ತಿದ್ದೇನೆ.

**ಉಪಚಾರಮು ಜೇಸೇವಾರುನ್ನಾರನಿ ಮರವಕುರಾ**
**ಕೃಪಗಾವಲೆನನಿ ನೇ ನೀ ಕೀರ್ತಿನಿ ಬಲ್ಕುಚುನುಂಡಗ**
**ವಾಕಿಟನೇ ಪದಿಲಮುಗಾ ವಾತಾತ್ಮಜುಡುನ್ನಾಡನಿ**
**ಶ್ರೀಕರುಲಗು ನೀ ತಮ್ಮುಲು ಚೇರಿಯುನ್ನಾರನಿ**

---

* ಸೀತಾಮಾತೆಯ ಇನ್ನೊಂದು ರೂಪಳಾದ ಲಕ್ಷ್ಮಿಯು ಹರಿಸೇವೆ ಮಾಡುವುದನ್ನು ಹೇಳುವ ಪುರಂದರರ ಮಾತುಗಳನ್ನಿಲ್ಲಿ ಸ್ಮರಿಸಬಹುದು. 'ಸಾನುರಾಗದಿಂದ ಹರಿಯ ತಾನೆ ಸೇವೆ ಮಾಡು ತಿಹಳೊ । ಏನು ಧನ್ಯಳೋ ಲಕುಮಿ ಎಂಥ ಮಾನ್ಯಳೋ ।'

**ಏಕಾಂತಮುನನು ಜಾನಕಿ ಏರ್ಪಡಿಯ್ಯೆಯುನ್ನದನಿ**
**ಶ್ರೀಕಾಂತ ಪರುಲೇಲನಿ ..................**

**(ಉಪಚಾರಮು)**

ನಿಜದಾಸನ ಲಕ್ಷಣಗಳೆಂದರೆ (ಅ) ತಪ್ಪು ತಂಟೆಗಳನ್ನೆಲ್ಲ ತೊರೆದು ನಿಷ್ಠಾವಂತನಾಗಿರುವುದು (ಆ) ದೇವರ ಆಜ್ಞೆಯನ್ನು ಶಿರಸಾವಹಿಸುವುದು. ಇಲ್ಲಿ ಭಗವಂತನು ತನ್ನ ಆದೇಶಗಳನ್ನು ಮತ್ತೆ ಮತ್ತೆ ಸೂಚಿಸುವ ಅಗತ್ಯವಿಲ್ಲ. (ಇ) ತಾನು ಹರಿಗೆ ಸೇರಿದವನೆಂಬ ಚಿಹ್ನೆಗಳನ್ನು ಹೊಂದಿರುವುದು (ಈ) ಆತ್ಮಾರ್ಪಣೆಯೊಂದಿಗೆ ಸಂಕೀರ್ತನೆಯಲ್ಲಿ ಮೈಮರೆಯುವುದು. ಈ ಲಕ್ಷಣಗಳೆಲ್ಲವನ್ನೂ ತ್ಯಾಗರಾಜರು ಪಡೆದಿದ್ದಾರೆ.

**ಬಂಟುಡೈ ವೆಲಯು ಬಾಗುಗಾನಿ ತಪ್ಪುತಂಟಲೆಲ್ಲ ಮಾನುಕೊನ್ನ**

**(ಕಂಟಜೂಡು)**

**ತಲಚಿನ ಪನುಲನು ನೇ ತೆಲಿಸಿ ತಲತೋ ನಡಚಿ ಸಂತಸಿಲ್ಲುದುರಾ**

**(ಚೆಂತನೇ)**

**ನೇದಾಸುಡನಿ ನೇನು ನೀದುಪೈ ನೆನರುಂಚಿನಾನು**

**(ನೆನರುಂಚಿನಾನು)**

ದಾಸ್ಯಭಕ್ತಿಯು ಪಕ್ವಗೊಂಡಂತೆ ಭಕ್ತ ತಾನು ದೇವರ ಸ್ವತ್ತೆಂದೇ ಭಾವಿಸುತ್ತಾನೆ. ದೇವರ ಇಚ್ಛೆಗನುಗುಣವಾಗಿ ಕೆಲಸ ನಿರ್ವಹಿಸುವುದಷ್ಟೇ ಅವನ ಕರ್ತವ್ಯವಾಗುತ್ತದೆ. ಇಲ್ಲಿ ಆತ ಸ್ವತಂತ್ರನಲ್ಲ. ಆದರೆ ದೇವರ ಆದೇಶದಂತೆ ನಡೆದುಕೊಳ್ಳುವುದರಲ್ಲೇ ಅವನು ಬ್ರಹ್ಮಾನಂದ ಹೊಂದುತ್ತಾನೆ. ಅಂತಹ ಬ್ರಹ್ಮಾನಂದ ಕ್ಕಾಗಿಯೇ ತ್ಯಾಗರಾಜರು ಹೀಗೆ ಹಂಬಲಿಸುತ್ತಾರೆ.

ಅನುದಿನವೂ ಹರಿಯ ಪಾದಾಬ್ಜಗಳನ್ನು ಒತ್ತದೆ, ಬಂಗಾರದ ಬೀಸಣಿಗೆಯಿಂದ ಆತನಿಗೆ ಬೀಸದೆ, ದಿವ್ಯವಾದ ಶೇಷತಲ್ಪವನ್ನು ಹಿಡಿದು ತೂಗುತ್ತಾ ಹಾಡದೆ, ಕಣ್ಣಾರೆ ಹರಿಯನ್ನು ನೋಡುತ್ತಾ, ಸೇವಿಸುತ್ತಾ ಕಾಲಕಳೆಯದಿದ್ದರೆ ನನ್ನ ಬಯಕೆಯು ತೃಪ್ತಿಗೊಳ್ಳುವುದೇ ?

**ಅನುದಿನಮು ನೀದು ಪಾದಾಬ್ಜಮುಲ ನೊತ್ತುಚುನು**
**ಕನಕಮಯಮೌ ಸುರಟಿ ಕರಮುನಿಡಿ ವಿಸರಿ**
**ಘನಮ್ಮೆನ ಫಣಿತಲ್ಪಮುನನುಂಚಿ ಪಾಡುಚುನು**
**ಗನುಲಾರ ಸೇವಿಂಚಿ ಕಾಲಮುಲ ಗಡುಪಕನು**

**(ತೀರುನಾ ನಾಲೋನಿದುಗ್ಧ)**

ಇಂತಹ ದಾಸ್ಯಭಕ್ತಿಯು ಭಕ್ತನ ಸದಭಿರುಚಿಯ ದ್ಯೋತಕ. ಸ್ವಇಚ್ಛೆಯಿಂದ ವಿನಯಶೀಲರಾಗಿ ಭಗವಂತನಿಗೆ ಮಾಡುವ ದಾಸ್ಯವು ಭಕ್ತಿಸಾಧನೆಗೆ ಇರುವ ಅತ್ಯುತ್ತಮ ಸೋಪಾನವೇ ಹೌದು. ಇದನ್ನೇ ತ್ಯಾಗರಾಜರು ಇನ್ನಿತರ ಕೆಲವು ಭಕ್ತರ ಆದರ್ಶದೊಂದಿಗೆ ಪ್ರಾರ್ಥಿಸುತ್ತಾರೆ.

**ಸಖ್ಯ** : ಶುದ್ಧ ಭಕ್ತಿಯು ದಾಸ್ಯರೂಪದಲ್ಲೇ ವ್ಯಕ್ತಗೊಳ್ಳಬೇಕೆಂದಿಲ್ಲ. ಅದು ಯಾವುದೇ ರೂಪವನ್ನೂ ಹೊಂದಬಹುದು. ಭಕ್ತನು ದೇವರನ್ನು ತನ್ನ ಸಖನಂತೆಯೂ ಭಾವಿಸಿ ಆರಾಧಿಸಬಹುದು. ಹೀಗೆ ಸಖನಂತೆ ಕಾಣುವುದೇ ಸಖ್ಯಭಕ್ತಿ. ಭಕ್ತನಿಗೆ ದಾಸ್ಯ ಭಾವದಲ್ಲಿದ್ದ ಭಯ ಇಲ್ಲಿ ಮಾಯವಾಗಿ, ದೇವರು ತನ್ನ ಸಮಾನನೆಂದೇ ಮೇಲ್ನೋಟ ದಲ್ಲಿ ಭಾವಿಸಿರುತ್ತಾನೆ. ಇಲ್ಲಿ ಭಕ್ತನು ಆತನೊಂದಿಗೆ ಹೃದಯ ಬಿಚ್ಚಿ ಮಾತನಾಡು ತ್ತಾನೆ. ಸಲಿಗೆಯಿಂದ ಆತನಿಗೆ ಬುದ್ಧಿಹೇಳುವ, ಟೀಕಿಸುವ, ನಿಂದಿಸುವ ಹಾಸ್ಯ ಮಾಡುವ, ಕೋಪಗೊಳ್ಳುವ ಕಡೆಗೆ ಹಕ್ಕು ಸಾಧಿಸುವ ಮಟ್ಟಕ್ಕೂ ಏರುತ್ತಾನೆ. ಆದರೆ ಅಂತರ್ಯದಲ್ಲಿ ದೇವರ ದೈವತ್ವದ ಬಗೆಗೆ ಆತನಿಗೆ ಅರಿವಿದ್ದು, ಸಲಿಗೆ ಮತ್ತು ಗೌರವಗಳೆ ರಡೂ ಜೊತೆಜೊತೆಯಾಗಿಯೇ ಅವನಲ್ಲಿ ಬೆರೆತಿರುತ್ತದೆ. ತನ್ನೊಂದಿಗೆ ಸಲಿಗೆಯಿಂದ ವರ್ತಿಸುವಂತೆ ದೇವರೇ ಭಕ್ತನಿಗೆ ಇಲ್ಲಿ ಸುಲಭನಾಗಿರುತ್ತಾನೆ. ತನ್ನ ಭಕ್ತ ನಿಂದಿಸಿ ದರೂ, ಹಾಸ್ಯ ಮಾಡಿದರೂ ದೇವರು ಕೋಪಗೊಳ್ಳುವುದಿಲ್ಲ. ಇಲ್ಲಿ ಆತ ಗ್ರಹಿಸು ವುದು ತನ್ನ ಭಕ್ತನ ಅಂತರಂಗ ಭಕ್ತಿಯನ್ನೇ ಹೊರತು ಅದು ವ್ಯಕ್ತಗೊಳ್ಳುವ ರೀತಿ ಅಥವಾ ಕವಚವನ್ನಲ್ಲ.

ಸಖ್ಯಭಾವವೆಂಬುದು ಉಪನಿಷತ್ತುಗಳಷ್ಟೇ ಪ್ರಾಚೀನ. ಮುಂಡಕೋಪನಿಷತ್ತು ಜೀವಾತ್ಮ ಪರಮಾತ್ಮರನ್ನು ಸಖರಿಗೆ ಹೋಲಿಸುತ್ತದೆ.[೧೭] ರಾಮಾಯಣದಲ್ಲಿ ಶ್ರೀರಾಮನು 'ಮಿತ್ರಭಾವೇನ ಸಂಪ್ರಾಪ್ತಮ್' ಎನ್ನುತ್ತಾನೆ.[೧೮] ಮಿತ್ರಭಾವದಿಂದ ತನ್ನನ್ನು ಅನುಸರಿಸುವ ಯಾರಿಗೇ ಆಗಲಿ ತಾನು ಅನುಕೂಲನೆಂದು ಇದರ ಭಾವ. ಸೀತಾಮಾತೆ ರಾವಣನಿಗೆ 'ತೇನ ಮೈತ್ರೀ ಭವತು' ಎಂದು ಉಪದೇಶಿಸುತ್ತಾಳೆ.[೧೯] ರಾಮನ ಬಾಣಗಳಿಗೆ ತುತ್ತಾಗದೆ ಆತನೊಂದಿಗೆ ಮೈತ್ರಿ ಬೆಳೆಸಬೇಕೆಂಬುದು ಆಕೆಯ ಸಲಹೆ. ಅರ್ಜುನ ಮತ್ತು ಕೃಷ್ಣರು ಈ ಭಾವಕ್ಕೆ ಮತ್ತೊಂದು ಉದಾಹರಣೆ. ಮಹಾ ಭಾರತದಲ್ಲೂ ಈ ಬಗೆಯ ಉಲ್ಲೇಖಗಳು ಕಾಣಬರುತ್ತವೆ.

ಸಖ್ಯಭಾವದ ಆರಾಧನೆಯಲ್ಲಿ ತ್ಯಾಗರಾಜರಿಗೆ ದೇವರು ಸರಿಸಾಟಿಯಿಲ್ಲದ ಜೊತೆ ಗಾರನಾಗಿದ್ದಾನೆ.

**ಈಡುಜೋಡುಲೇನಿ ತೋಡುನೀವೇಗಾನಿ**

(ಇನ್ನಾಳ್ಳುನನ್ನೇಲಿ)

ದೇವರಿಗೆ ಸರಿಸಮಾನರು ಯಾರೂ ಇಲ್ಲದಿದ್ದರೂ ತ್ಯಾಗರಾಜರಿಗೆ ಮಾತ್ರ ದೇವರೇ ಜೊತೆಗಾರ. ಅವನನ್ನು ತ್ಯಾಗರಾಜರು ವರಮಿತ್ರ (ಭಜರಾಮಂ ಸತತಂ), ಚೆಲಿಕಾಡು ಎಂದರೆ ಸ್ನೇಹಿತ (ದಯರಾನಿ) ಸಖ (ಚೆಲಿಮಿನಿ) ತ್ಯಾಗರಾಜ ಮಿತ್ರ (ಓರಾಮ ಓರಾಮ) ಮುಂತಾಗಿ ಸಂಬೋಧಿಸುತ್ತಾ ಸಖ್ಯಭಕ್ತಿಗೆ ಅಭಿವ್ಯಕ್ತಿ ನೀಡು ತ್ತಾರೆ. ಭವತಾರಕನಾದ ಶ್ರೀರಾಮನು ಈಗಾಗಲೇ ತ್ಯಾಗರಾಜರೊಂದಿಗೆ ಬಹುವಾಗಿ ಸಂಭಾಷಿಸಿದ್ದಾನೆ. ಅವರು ಆತನನ್ನು ತಮಗಿಷ್ಟಬಂದಂತೆ ಕೂರಿಸಿ, ತಿರುಗಿಸಿ, ಅಲ್ಲಾಡಿಸಿ ಸಂಬೋಧಿಸಿದ್ದಾರೆ. ಹಗುರವಾದ ತಮ್ಮ ವರ್ತನೆಗೆ ಸಖ್ಯಭಾವದ ಚೌಕಟ್ಟಿ

ನಲ್ಲೇ 'ಪರವಲೇಕ ಸರಿಪೋಯಿನಟ್ಟಾಡಿನ' ಎಂದು ಹೇಳಿ ಕ್ಷಮೆ ಯಾಚಿಸುತ್ತಾರೆ.[20] ಇಲ್ಲಿ ಪರುವ ಅಥವಾ ಪರವ ಎಂದರೆ ಲಕ್ಷ್ಯ ಅಥವಾ ಗೌರವ ಎಂದು ಅರ್ಥ. ಮತ್ತೊಂದು ರಚನೆಯಲ್ಲಿ ಭಕ್ತರ ಕೈಯಲ್ಲಿ ಸಿಕ್ಕಿಕೊಂಡರೆ ಹೀಗೆಯೇ ಆಟವಾಡಿಸ ಬಹುದೆಂದು ಅವರಿಂದ ತಪ್ಪಿಸಿಕೊಳ್ಳಲು ದೇವರು ಓಡಿಹೋಗಿರಬಹುದೆಂದು ಊಹಿಸಿ ಆತನನ್ನು ತಿಳಿಹಾಸ್ಯದಿಂದ ಹೀಗೆ ರೇಗಿಸುತ್ತಾರೆ. 'ಭಕ್ತನನ್ನು ದೂರವಿರಿಸುವ ಸಲುವಾಗಿ ಏನೆಲ್ಲ ಚಮತ್ಕಾರದ ಕೆಲಸಗಳನ್ನು ಮಾಡಿದೆ ? ಭಕ್ತರ ಕಾಟ ತಾಳಲಾರದೆ ಸಪ್ತಗಿರಿಯನ್ನೇರಿ ನಿಂತೆಯೋ? ಶ್ರೀರಂಗಕ್ಕೆ ಓಡಿ ಮಲಗಿದೆಯೋ ? ಭಕ್ತರು ನಿನ್ನನ್ನು ಬೇಡುವ ಮುನ್ನ ನೀನೇ ಅವರನ್ನು (ಬಲಿ ಚಕ್ರವರ್ತಿ) ಬೇಡ ಹೊರಟೆಯೋ ? ನಿನ್ನನ್ನು ಸೇರಬಯಸುವವರಿಂದ ತಪ್ಪಿಸಿಕೊಳ್ಳಲು ನೀನೇ ಕಪಿಗಳನ್ನು ಸೇರಿದೆಯೋ ? ದುಃಖ ದಿಂದ ಬಂದ ಕುಚೇಲನನ್ನು (ಹರಿದ ಬಟ್ಟೆಯುಳ್ಳವನು) ಕಂಡು ಅವನು ನಿನ್ನಲ್ಲಿ ಬೇಡು ವನೆಂದು ನೀನೇ ಗೋಪಿಯರ ವಸ್ತ್ರವನ್ನು ಅಪಹರಿಸಿದೆಯೋ ? ನಿನ್ನ ಗುಣಗಳ ಗುಟ್ಟು ಇದೀಗ ಚೆನ್ನಾಗಿ ಗೊತ್ತಾಯಿತು ಬಿಡು' ಎಂದು ಹೇಳುತ್ತಾರೆ.

ನಿರುಪೇದಭಕ್ತುಲ ಕರಿಕೋತ ಬಡಲೇಕ
ಗಿರಿಪೈ ನೆಕ್ಕುಕೊಂಟಿವೋ ?
ಅಂಗಲಾರ್ಚು ಜೂಚಿ ರಂಗಪುರಮುನ
ಚೆಲಂಗಗ ಬಂಡಿತಿವೋ ?
ಕಾಚಿನ ಭಕ್ತುಲಜೂಚಿ ಯಾಬಲಿನೇ
ಯಾಚಿಂಚ ವೆಡಲಿತಿವೋ ?
ಆಸಮಿಂಚಿ ನಿನ್ನಾಶುಚೇರೇರ ನಿ
ಕೀಶುಲ ಚೇರಿತಿವೋ ?
ಜಾಲಿತೋವಚ್ಚು ಕುಚೇಲುನಿಗನಿ
ಗೋಪೀ ಚೇಲಮುಲೆತ್ತಿತಿವೋ ?
.........................................
ನೀ ಗುಣಮುಲಗುಟ್ಟು ಬಾಗುಗದೆಲಿಸೆನು .....

(ಸೀತಾನಾಯಕ)

ನೀನಿನ್ನೂ ನಿನ್ನ ಹಳೆಯ ಭಕ್ತರಿಗೇ ಸೇವೆ ಮಾಡುತ್ತಾ ನನ್ನ ಬಳಿ ಬರಲೇಬಾರದೆಂದು ತೀರ್ಮಾನಿಸಿದ್ದೆಯೋ ? ಬಂದರೆ ನಿನಗೇನು ಹಣ ವ್ಯಯವಾದೀತೆ ?

ತೊಲಿ ಭಕ್ತುಲವದ್ದ ಕೊಲುವೋ ರಾವು
ಕಲುಗು ಧನಮುಲಕು ಸೆಲುವೋ ?

(ಎನ್ನಾಳ್ಳುನೀದೋವಜೂತುರಾಮ)

ನನ್ನನ್ನು ರಕ್ಷಿಸುವ ಮೂಲಕ ನಿನ್ನ ಕುಲಬಿರುದನ್ನು ರಕ್ಷಿಸಿಕೋ.

**ಕುಲಬಿರುದುನು ಬ್ರೋಚುಕೋಮ್ಮು ರಮ್ಮು**

**(ಕುಲಬಿರುದುನು)**

ಶರಣಾಗತ ರಕ್ಷಣೆಯೇ ಸೂರ್ಯವಂಶದ ಖ್ಯಾತಿ. ಅದಲ್ಲದೆ ಶರಣಾಗತರನ್ನು ಕಷ್ಟಕ್ಕೆ ಒಳಪಡಿಸುವ ಕೆಲಸಗಳನ್ನು ಮಾಡಬಾರದೆಂದು ದೇವರಿಗೇ ಬುದ್ಧಿ ಹೇಳುತ್ತಾರೆ. ಇಲ್ಲಿ ತ್ಯಾಗರಾಜರು ತಮ್ಮನ್ನು ಶ್ರೀರಾಮನಿಗಿಂತ ದೊಡ್ಡ ಸ್ಥಾನದಲ್ಲಿ ಭಾವಿಸಿಕೊಂಡು ಬುದ್ಧಿ ಹೇಳುವಷ್ಟು ಸಲಿಗೆಯನ್ನೂ ತೋರಿದ್ದಾರೆ. ಇಷ್ಟಾದರೂ ದೇವರಿಂದ ಪ್ರತ್ಯುತ್ತರ ಬಾರದೆ ಅವರು ಒಳ್ಳೆಯ ಮಾತುಗಳನ್ನಾಡಿ ನನ್ನನ್ನು ಪಾಲಿಸುವೆಯೋ ಇಲ್ಲವೋ ಹೇಳು ಎಂದು ತಮಗೆ ಬೇರಾವುದೋ ದಾರಿಯಿದೆಯೆಂಬಂತೆ ಮಾತನಾಡುತ್ತಾರೆ.

**ಪಾಲಿಂತುವೋ ಪಾಲಿಂಪವೋ**
**ಬಾಗೈನ ಬಲ್ಕು ಬಲ್ಕಿ ನನು ॥**

**(ಪಾಲಿಂತುವೋ)**

ಹೀಗೆ ಪರಮಾತ್ಮನನ್ನು ಸ್ನೇಹದ ಪರಿಧಿಯಲ್ಲಿ ಒಯ್ಯುವ, ಹಾಸ್ಯ ಮಾಡುವ, ಪ್ರಶ್ನಿಸುವ, ಬುದ್ಧಿ ಹೇಳುವ ಸಲಿಗೆಯನ್ನು ಅವರು ವಹಿಸುತ್ತಾರೆ. ಮರುಕ್ಷಣದಲ್ಲೇ ರಾಜಿಯೂ ಆಗುತ್ತಾರೆ. ದೇವರನ್ನು ನಿಂದಿಸುವ ರಚನೆಗಳಲ್ಲೂ, ಹರಿಯನ್ನು ಲಘುವಾಗಿ ಟೀಕಿಸುವ ರಚನೆಗಳಲ್ಲೂ, ಈ ರೀತಿಯ ಸರಸದ ಧಾಟಿಯನ್ನು ಕಾಣಬಹುದು. ಆದ್ದರಿಂದ ಸಖ್ಯಭಾವದ ಹಲವಾರು ರಚನೆಗಳು ನಿಂದಾಸ್ತುತಿಗಳೆಂದೂ ಕರೆಯಲ್ಪಡುತ್ತವೆ. ಪುನಃ ಈ ಭಾವಗಳನ್ನು ಮುಂದೆ 'ವಿರಹವೇದನೆ' ಎಂಬ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗುವುದು.

**ಆತ್ಮನಿವೇದನ** : ಇದನ್ನು ಶರಣಾಗತಿ ಅಥವಾ ಪ್ರಪತ್ತಿ ಎಂದೂ ಗುರುತಿಸುವುದುಂಟು. ಶರಣಾಗತಿ ಎಂದರೆ ಮನುಷ್ಯನು ಅಹಂಕಾರವನ್ನು ತೊರೆದು ತನ್ನೆಲ್ಲವನ್ನೂ ಸಂಪೂರ್ಣವಾಗಿ ದೇವರಿಗೆ ಅರ್ಪಿಸಿಕೊಳ್ಳುವುದು, ತಾನು ದೇವರ ಸ್ವತ್ತೆಂದು ಭಾವಿಸುವುದು. ವಿಶಿಷ್ಟಾದ್ವೈತದ ಪ್ರಕಾರ ಭಕ್ತಿಸಾಧನೆಯು ವೇದೋಪನಿಷತ್ತುಗಳನ್ನು ಅಧ್ಯಯನ ಮಾಡಿದವರಿಗೆ ಮಾತ್ರ ಸಾಧ್ಯ. ವೇದೋಪನಿಷತ್ತುಗಳ ಅಧ್ಯಯನ ಎಲ್ಲರಿಗೂ ಸಾಧ್ಯವಿಲ್ಲ. ಆದ್ದರಿಂದ ಜಾತಿ, ಮತ, ಕುಲ ಅಥವಾ ವಯಸ್ಸು ಇದಾವುದರ ತಾರತಮ್ಯವಿಲ್ಲದೆ ಎಲ್ಲರೂ ಅನುಸರಿಸಬಹುದಾದ ಮಾರ್ಗವೆಂದರೆ ಆತ್ಮನಿವೇದನೆ ಅಥವಾ ಪ್ರಪತ್ತಿ ಎಂದು ಇದನ್ನು ಸಾರ್ವತ್ರಿಕಗೊಳಿಸಲಾಯಿತು. ವಾಸ್ತವವಾಗಿ ಪ್ರಪತ್ತಿ ಎಂಬ ಪದವು ಪ್ರ-ಪದ್ ಎಂಬ ಮೂಲದಿಂದಲೇ ಮೂಡಿದೆ. ದೇವರ ಕೃಪೆಯೊಂದನ್ನೇ ಆಶ್ರಯಿಸುವುದು ಪ್ರಪತ್ತಿ. ವಿಶಿಷ್ಟಾದ್ವೈತದ ಪ್ರಕಾರ ಪ್ರಪತ್ತಿಯು ಪ್ರತ್ಯೇಕ ಮಾರ್ಗವಾಗಿಯೂ ಮಾನ್ಯವಾಗಿದೆ. ದಕ್ಷಿಣ ದೇಶದ ಶ್ರೀವೈಷ್ಣವ ಬೋಧಕರು ಶರಣಾಗತಿಯ ಈ ಮಾರ್ಗವನ್ನು ಸಾಕಷ್ಟು ವ್ಯಾಪಕಗೊಳಿಸಿದರು. ಭಗವದ್ಗೀತೆಯಲ್ಲಿ ಅರ್ಜುನನೂ ಶ್ರೀಕೃಷ್ಣನಿಗೆ ಹೀಗೆನ್ನುತ್ತಾನೆ. 'ನಾನು ನಿನ್ನ ಶಿಷ್ಯ. ನಿನಗೆ ಪ್ರಪನ್ನನಾಗಿರುವ ನನಗೆ ಬೋಧಿಸು'.

**ಶಿಷ್ಯಸ್ತೇಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್**[೨೧]

ತನ್ನಲ್ಲಿ ಶರಣಾದವರನ್ನು ರಕ್ಷಿಸುತ್ತಾನೆ. ಅವರಿಗೆ ಸುಲಭನಾಗುತ್ತಾನೆ ಎಂದೇ ದೇವರಿಗೆ ಶರಣಾಗತ ಜನರಕ್ಷಕ, ಶರಣಾಗತಾಪ್ತಸುಲಭ, ಶರಣಾಗತವತ್ಸಲ ಮುಂತಾದ ಬಿರುದುಗಳಿರುವುದು. ಇವು ಆತ್ಮನಿವೇದನ ಭಕ್ತಿಯ ಹಿರಿಮೆಯನ್ನೇ ಸಾರುತ್ತವೆ.

ಆಹಿರ್ಬುಧ್ನ್ಯ ಸಂಹಿತೆ ಎಂಬ ವೈಷ್ಣವ ಗ್ರಂಥವು ಪ್ರಪತ್ತಿಯಲ್ಲಿ ಆರು ಅಂಶಗಳನ್ನು ಗುರುತಿಸುತ್ತದೆ.[೨೨] ಅವು,

(ಅ) ಆನುಕೂಲಸ್ಯ ಸಂಕಲ್ಪಃ : ಭಗವದಿಚ್ಛೆಗೆ ಅನುಗುಣವಾಗಿ ವರ್ತಿಸುವುದು.

(ಆ) ಪ್ರಾತಿಕೂಲಸ್ಯ ವರ್ಜನಂ : ಭಗವದಿಚ್ಛೆಗೆ ವಿರುದ್ಧವಾದುದೆಲ್ಲವನ್ನೂ ವರ್ಜಿಸುವುದು.

(ಇ) ರಕ್ಷಿಷ್ಯತೀತಿ ವಿಶ್ವಾಸಃ : ಅಥವಾ ಮಹಾವಿಶ್ವಾಸ-ದೈವ ರಕ್ಷಣೆಯ ಶಕ್ತಿಯಲ್ಲಿ ಪೂರ್ಣ ನಂಬಿಕೆಯಿರುವುದು. ದೇವರು ತನ್ನನ್ನು ರಕ್ಷಿಸಲಾರನೆಂಬ ಅನುಮಾನ ಲವಲೇಶವೂ ಇಲ್ಲದಿರುವುದು.

(ಈ) ಗೋಪ್ತೃತ್ವ ವರಣಂ : ತನ್ನ ಇಷ್ಟದೇವರನ್ನು ಮಾತ್ರ ಆಶ್ರಯಿಸುವುದು. ಎಂದರೆ ಇಷ್ಟದೈವವನ್ನು ಕುರಿತ ನಿಷ್ಠೆ ಇದು.

(ಉ) ಆತ್ಮನಿಕ್ಷೇಪ ಅಥವಾ ಭರನ್ಯಾಸ ಅಥವಾ ಭಾರಸಮರ್ಪಣ : ಭಕ್ತನನ್ನು ರಕ್ಷಿಸುವ ಹೊಣೆಗಾರಿಕೆ ದೇವರದೆಂದು ತಿಳಿದು ನಿಶ್ಚಿಂತನಾಗಿರುವುದು. ತಮ್ಮ ರಕ್ಷಣೆಯ ಜವಾಬ್ದಾರಿ ದೇವರದೆಂದೇ ತಿಳಿಯುವ ಇಂತಹ ಸರ್ವ ಸಮರ್ಪಣಾ ಭಾವವೊಂದೇ ಭಕ್ತನಿಗೆ ಮುಕ್ತಿ ನೀಡಬಲ್ಲುದು.

(ಊ) ಕಾರ್ಪಣ್ಯ ಅಥವಾ ಆಕಿಂಚನ್ಯ : ಮುಕ್ತಿ ಸಾಧನೆಯಲ್ಲಿ ತನ್ನ ಅಸಹಾಯಕತೆಯ ಅರಿವು. ಆಕಿಂಚನ್ಯದ ಉತ್ಕಟತೆಯಲ್ಲಿ ಭಕ್ತ ಸ್ವನಿಂದೆ (ನೈಚ್ಯಾನುಸಂಧಾನ ಅಥವ ಆತ್ಮಗರ್ಹಣ) ಮಾಡಿಕೊಳ್ಳುತ್ತಾ ತನ್ನ ತಪ್ಪುಗಳ ಪಟ್ಟಿಯನ್ನೇ ದೇವರಲ್ಲಿ ಬಿನ್ನವಿಸುತ್ತಾನೆ. ಜೊತೆಯಲ್ಲೇ ತನ್ನ ಮಹಾಪಾಪಗಳನ್ನೂ ಹೋಗಲಾಡಿಸಬಲ್ಲ ದೇವರ ಸರ್ವಶಕ್ತಿತ್ವವನ್ನು ಕೀರ್ತಿಸುತ್ತಾನೆ. ತಾನು ದೇವರ ಮುಂದೆ ಅಲ್ಪನೆಂದು ಭಾವಿಸುತ್ತಾನೆ. ಪ್ರಪತ್ತಿಯ ಆರು ಅಂಶಗಳಲ್ಲಿ ಮುಖ್ಯವಾದುದು ಆತ್ಮನಿಕ್ಷೇಪ. ಉಳಿದ ಐದು ಅಂಶಗಳು ಗೌಣ. ಮೇಲಿನ ಈ ಅಂಶಗಳಿಗೆ ಸಂಬಂಧಿಸಿದಂತೆ ತ್ಯಾಗರಾಜರ ರಚನೆಗಳನ್ನು ಅವಲೋಕಿಸಿದರೆ,

**ಸಮ್ಮತಮುನ ನಾಮೇನು ನೀ ಸೊಮ್ಮನಿ ವೇಡುಕೊನ್ನಾನು**

**[ಮನಃಪೂರ್ವಕವಾಗಿ ನನ್ನ ಶರೀರವು ನಿನ್ನ ಸ್ವತ್ತೆಂದೆಣಿಸಿ ಬೇಡಿಕೊಂಡಿದ್ದೇನೆ]**

**(ಜಯಜಯ ಶ್ರೀರಘುರಾಮ)**

ನಿಜಮುಗ ನೇ ನೀ ಸೊಮ್ಮೈತಿನಿ
(ನಿಜವಾಗಿಯೂ ನಾನು ನಿನ್ನ ಸ್ವತ್ತಾಗಿದ್ದೇನೆ)

(ಏನಾಟನೋಮು ಫಲಮೋ)

ತ್ಯಾಗರಾಜು ನೀವಾಡನಿ ಕೀರ್ತಿ
(ತ್ಯಾಗರಾಜ ನಿನ್ನವನೆಂದು ಖ್ಯಾತಿ)

(ಇಂತಕನ್ನದೆಲ್ಪತರಮಾ)

ಈ ತನುವು ನೀದನಿ ವಿನುತಿ ಜೇಸೆದ
(ಈ ಶರೀರ ನಿನ್ನದೆಂದು ವಿನಂತಿಸುತ್ತೇನೆ)

(ಕರುಣಾಜಲಧಿ ದಾಶರಥೇ)

ನೇ ನೀವಾಡನ್ನೈತಿ
(ನಾನು ನಿನ್ನವನಾದೆ)

(ರಾಮರಾಮನೀವಾರಮು)

ನೀಕೇ ಮನಸಿಚ್ಚಿ ನೇನು ನೀ ಮೇನನಿ ಪೆಂಚಿನಾನು
(ನಿನಗೇ ಮನಸ್ಸು ಅರ್ಪಿಸಿ ನನ್ನೀ ದೇಹವನ್ನು ನಿನ್ನದೆಂದು ಘೋಷಿಸಿದ್ದೇನೆ)

(ಎನ್ನಾಳ್ಳು ನೀದೋವ)

ದೇವ ನೀಕು ನಾದು ಮೇನಮ್ಮಿತಿನಿ
(ದೇವರೆ, ನನ್ನ ಶರೀರವನ್ನು ನಿನಗೆ ವಿಕ್ರಯಿಸಿದ್ದೇನೆ)

(ಜಯಜಯಸೀತಾರಾಂ)

ತನುವು ನೀ ಸೊಮ್ಮು
(ಶರೀರವು ನಿನ್ನ ಸ್ವತ್ತು)

(ನನ್ನು ವಿಡಚಿ)

ಹೀಗೆ ಅವರು ಇನ್ನೂ ಅನೇಕ ರಚನೆಗಳಲ್ಲಿ ತಮ್ಮ ದೇಹಮನಸುಗಳೆರಡನ್ನೂ ದೇವರಿಗರ್ಪಿಸಿದ್ದಾರೆ. ನಮ್ಮಲ್ಲಿನ ವಸ್ತುವೊಂದನ್ನು ಪರರಿಗೆ ನೀಡಿದ ನಂತರ, ಆ ವಸ್ತುವಿನ ಒಡೆತನ ನಮಗೆ ಸೇರಿರುವುದಿಲ್ಲ. ತ್ಯಾಗರಾಜರು ತಮ್ಮ ದೇಹ, ಮನಸು ಗಳೆಲ್ಲವನ್ನೂ ದೇವರಿಗೆ ಅರ್ಪಿಸಿ, ಅದು ದೇವರದೆಂದೇ ಭಾವಿಸಿ ಅದನ್ನು ರಕ್ಷಿಸಿ ಕೊಂಡುಬಂದಿದ್ದಾರೆ (ಆತ್ಮನಿವೇದನೆ). ದೇವರ ಇಂಗಿತವನ್ನು ಅರಿತು ಅದರಂತೆ ನಡೆಯುತ್ತಾರೆ (ರಾಮರಾಮರಾಮರಾಮ). ದೇವರ ಅಧೀನರಾಗಿದ್ದಾರೆ [ಪರಮ ಪಾವನ ಗುಣಶಾಲಿ - (ಅ) ಅನುಕೂಲಸ್ಯ ಸಂಕಲ್ಪ]. ದೇವರ ನಿರಂಕುಶ ಸ್ವಾತಂತ್ರ್ಯಕ್ಕೆ ವಿರುದ್ಧವಾದ ಪ್ರಯತ್ನವನ್ನಾಗಲೀ ಅಥವಾ ತಾನೇ ಸಾಧಿಸುವನೆಂಬ ಅಹಂಕಾರವನ್ನಾ ಗಲೀ ಪೂರ್ಣವಾಗಿ ಮರೆಯುವ ಮೂಲಕ ಪ್ರಪತ್ತಿಯ ಮೊದಲಿನೆರಡು ಅಂಶಗಳನ್ನು ಅನುಸರಿಸಿದ್ದಾರೆ. ಅವರು ದೇವರೇ ನೀಡಿದ ಆದೇಶವನ್ನು ಮನಸಾರ ಪೂರ್ಣಗೊಳಿಸಿ ದ್ದಾರೆ (ದಯಜೂಚುಟಕಿದಿವೇಳರಾರಾಮ). ಹೀಗೆ ಹೇಳುವ ಮೂಲಕ ದೇವರು

ಇಚ್ಛಿಸದ ಕೆಲಸಗಳನ್ನು ಅವರು ಮಾಡುವುದಿಲ್ಲ [(ಆ) ಪ್ರಾತಿಕೂಲಸ್ಯ ವರ್ಜನಂ].

(ಇ) **ಮಹಾವಿಶ್ವಾಸ** : ದೇವರೊಬ್ಬನೇ ಸತ್ಯ. ಉಳಿದೆಲ್ಲವೂ ಸುಳ್ಳು ಎಂದರಿತು ಆತ ದೀನದಯಾಪರ ಮೂರ್ತಿಯೆಂದು ತ್ಯಾಗರಾಜರು, ಆತನನ್ನೇ ವಿಶೇಷವಾಗಿ ನಂಬಿದ್ದಾರೆ. ಆತನ ವಿನಹ ಅವರನ್ನು ರಕ್ಷಿಸುವವರು ಇನ್ನೊಬ್ಬರಿಲ್ಲ.

**ರಾಮಾ ನಿನ್ನೇ ನಮ್ಮಿನಾನು ನಿಜಮುಗಾ ಸೀತಾ**

(ರಾಮಾನಿನ್ನೇ)

**ಅನ್ನಿ ಕಲ್ಲಲನಿ ನಿನ್ನೇ ನಿಜಮನುಕೊನ್ನವಾಡನೈತಿನಿ**

(ರಾಮಪಾಹಿಮೇಘಶ್ಯಾಮ)

**ದೀನದಯಾಪರ ಮೂರ್ತಿವಿ ನೀವನಿ ನೇ ನೆರನಮ್ಮಿತಿನಿ**

(ಏವಿಧಮುನ್ನೆನಗಾನಿ)

**ರಾಮಾ ನಿನ್ನುವಿನಾ ನನು ರಕ್ಷಿಂಪ ನೊರುಲಗಾನ**

(ರಾಮಾ ನಿನ್ನುವಿನಾ)

**ನಿನ್ನು ನಮ್ಮಿನ ವಾಡನು**

(ಏಪಾಪಮು ಜೇಸಿತಿರಾ)

**ಬ್ರೋಚೇವಾರೆವರೇ ನಿನ್ನುವಿನಾ**

(ಬ್ರೋಚೇವಾರೆವರೇ)

ನಿನ್ನೇ ನೆರನಮ್ಮಿನಾನು (ಆರಭಿ) ಮತ್ತು ನಿನ್ನೇ ನೆರನಮ್ಮಿನಾನುರಾ (ಪಂತುವರಾಳಿ) ಎಂದು ದೇವರಲ್ಲಿ ತಮಗಿರುವ ಮಹಾವಿಶ್ವಾಸವನ್ನು ಮತ್ತೆಮತ್ತೆ ಸ್ಪಷ್ಟಪಡಿಸುತ್ತಾರೆ. ತಮಗೆ ದೇವರೇ ರಕ್ಷಕನಾಗಿರುವುದರಿಂದ ತಾವೇನೂ ಅನಾಥರಲ್ಲ. ಇಡೀ ಜಗತ್ತಿಗೇ ಆಧಾರನಾದ, ಸಮಘನರಹಿತನಾದ ಭಗವಂತನ ರಕ್ಷೆ ಅವರಿಗಿದೆ. ಅಲ್ಲದೆ ಪ್ರಾಚೀನರ ಮಾತನ್ನೂ ತ್ಯಾಗರಾಜರು ಈಬಗೆಗೆ ಕೇಳಿದ್ದಾರೆ.[೨೩]

**ಅನಾಥುಡನು ಗಾನು ನೇ**
**ಅನಾಥುಡವು ನೀವನಿ ನಿಗಮಜ್ಞುಲ**
**ಸನಾತನುಲ ಮಾಟವಿನ್ನಾನು ನೇ**

(ಅನಾಥುಡನುಗಾನು)

ಎಲ್ಲೆಡೆಯೂ ರಾಮನನ್ನೇ ಕಾಣುವ ಅವರಿಗೆ ರಾಮನೇ ತಂದೆ, ತಾಯಿ, ಅಣ್ಣ, ತಮ್ಮ ಹಾಗೂ ದೈವವೂ ಆಗಿದ್ದಾನೆ (ರಾಮಾನಿನ್ನುವಿನಾ). ತ್ಯಾಗರಾಜರು ದೇವರೊಡನೆ ಹೀಗೆ ಸಂಭಾಷಿಸಿ, ಕೀರ್ತನ ಸುಶತಕವನ್ನು ರಚಿಸಿ ಸ್ತುತಿಸಿರುವ ತಮ್ಮನ್ನು ರಕ್ಷಿಸಬೇಕೆಂದು ಪ್ರಾರ್ಥಿಸುತ್ತಾರೆ. ಮರುಘಳಿಗೆಯಲ್ಲೇ ದೇವರ ನಿರ್ಹೇತುಕ ದಯೆಯ ಅರಿವು ಅವರಿಗುಂಟಾಗಿ ಸಕಲ ಜೀವಿಗಳನ್ನೂ, ಅವರವರ ಯೋಗ್ಯತಾನುಸಾರ ದೇವರು ರಕ್ಷಿಸುತ್ತಿರುವಾಗ ತಾವು ಆತನ ಅನುಗ್ರಹಕ್ಕಾಗಿ ವಿಶೇಷವಾಗಿ ನೂರಾರು ಕೀರ್ತನೆಗಳನ್ನು ಅರ್ಪಿಸುವ ಮೂಲಕ ಮೊರೆಯಿಡುವುದು ವಿಶ್ವಾಸಘಾತಕತನವೆಂದು ಅರಿ

ವಾಗುತ್ತದೆ. ಭಗವಂತನ ರಕ್ಷಕತ್ವದ ಮಹಿಮೆ ತಿಳಿಯದೆ ಚವಲಚಿತ್ತರಾಗಿ ತಾವು ಮಾಡಿದ ಅಪರಾಧವನ್ನು ಮನ್ನಿಸುವಂತೆ ಪ್ರಾರ್ಥಿಸುತ್ತಾರೆ (ಅಪರಾಧಮುಲ ನೋರ್ವ).

**(ಈ) ಗೋಪೃತ್ವ ವರಣ** : ತ್ಯಾಗರಾಜರು ದೇವರ ಹಲವು ನಾಮರೂಪಗಳಲ್ಲೂ ಶ್ರೀರಾಮನನ್ನೇ ಕಂಡವರು. ಅವರ ದೃಷ್ಟಿಯಲ್ಲಿ ರಾಮ, ಕೃಷ್ಣ, ಹರಿ, ನಾರಾಯಣ, ಎಲ್ಲವೂ ಪರ್ಯಾಯ ಪದಗಳೇ—'ಸರ್ವದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ' ಎಂಬ ಉಕ್ತಿಯಂತೆ. ಎಲ್ಲ ದೇವರ ಸ್ತುತಿಯೂ ರಾಮಸ್ತುತಿಯೇ. ತ್ಯಾಗರಾಜರ ಶ್ರೀರಾಮ ಪರಬ್ರಹ್ಮ ಸ್ವರೂಪನು. ರಾಮನೊಬ್ಬನೇ ದೇವರು. ಇದನ್ನು ತಿಳಿಯದೇ ಮನಸ್ಸು ಕೆಡಿಸಿಕೊಳ್ಳುವ ಅವಶ್ಯಕತೆ ಇಲ್ಲ (ಉಂಡೇದಿ ರಾಮುಡೊಕಡು). ಈತನೇ ಶಿವನೂ, ಮಾಧವನೂ, ಬ್ರಹ್ಮನೂ ಹೌದು (ಎವರನಿ ನಿರ್ಣಯಿಂಚಿರಿರಾ). ಪ್ರಪಂಚದ ಅತಿ ಸಣ್ಣ ಜೀವಿಯಿಂದ ಮೊದಲ್ಗೊಂಡು ಎಲ್ಲದರಲ್ಲೂ ಅಡಗಿದ್ದಾನೆ (ರಾಮನನ್ನು ಬ್ರೋವರಾ) ಎಂದು ಅವರು ತಮ್ಮ ಇಷ್ಟದೈವದಲ್ಲಿನ ನಿಷ್ಠೆಯನ್ನು ವ್ಯಕ್ತಪಡಿಸುತ್ತಾರೆ. ಹೀಗೆ ಜಗತ್ತಿನಲ್ಲಿ ಎಲ್ಲವೂ ರಾಮನೇ ಆಗಿರುವುದರಿಂದ ಅವರ ಮನಸ್ಸು ರಾಮನನ್ನಲ್ಲದೇ ಅನ್ಯರನ್ನು ಚಿಂತಿಸದು.

ಅನ್ನಿ ನೀವನುಚು ನಂತರಂಗಮುನ
ದಿನ್ನಗಾ ವೆದಕಿ ತೆಲುಸುಕೊಂಟಿನಯ್ಯ
ನಿನ್ನೆಗಾನಿ ಮದಿ ನೆನ್ನಜಾಲ ನೊರುಲ

(ಮರುಗೇಲರಾ)

ನೀವೇರಾಜೀವನಮು

(ನೀವೇರಾ)

ಎಲ್ಲ ಕಾಲದಲ್ಲೂ ಶ್ರೀರಾಮನೇ ಅವರ ಪಾಲಿನ ದೇವಾಧಿದೇವನೆಂದು ಅವರು ತಿಳಿದಿದ್ದಾರೆ.

ಏವೇಳ ನಾಪಾಲಿ ದೇವಾಧಿದೇವುಡು ನೀವೇಯನುಕೊಂಟಿನಿ

(ರಾಮಪಾಹಿ ಮೇಘಶ್ಯಾಮಪಾಹಿ)

ಶ್ರೀರಾಮನೇ ತ್ಯಾಗರಾಜರ ತವರು.

ತನಕೇ ಪುಟ್ಟಿನಯಿಲ್ಲು ನೀವು

(ಎನ್ನಾಳ್ಳು ನೀತ್ರೋವ)

ಆದ್ದರಿಂದ ಅವರಿಗೆ ರಾಮನಲ್ಲದೆ ಇತರ ರಕ್ಷಕರಿಲ್ಲ.

ಎವರುರಾ ನಿನ್ನುವಿನಾ ಗತಿ ಮಾಕು

(ಎವರುರಾ)

ರಾಮಾ ನೀವೇಗಾನಿ ನನ್ನು ರಕ್ಷಿಂಚುವಾರೆವ್ವರೇ ?

(ರಾಮಾ ನೀವೇಗಾನಿ)

**(ಉ) ಆತ್ಮನಿಕ್ಷೇಪ** : ತ್ಯಾಗರಾಜರು ತಮ್ಮ ರಕ್ಷಣೆಯ ಪೂರ್ಣ ಜವಾಬ್ದಾರಿಯನ್ನು ದೇವರ ಮೇಲೆಯೇ ಹಾಕುತ್ತಾರೆ.* ಈ ಭಾವ ಪ್ರತಿಪಾದಿತವಾಗಿರುವ ರೀತಿಯಿದು.

'ಸದ್ಭಕ್ತ ಮಂದಾರನೂ, ಶ್ರೀಕರನೂ, ಸಾಕೇತರಾಜಕುಮಾರನೂ ನಮ್ಮ ತಂದೆಯಾಗಿರುವಾಗ ನಮಗೇಕೆ ಚಿಂತೆ ? ಲೋಕದ ನಾಟಕ ಸೂತ್ರವನ್ನು ನಿನ್ನ ಕೈಯಲ್ಲಿ ಹಿಡಿದು, ಗತಿ ತಪ್ಪದಂತೆ, ಜಗಮೆಚ್ಚುವಂತೆ ಆಡಿಸುತ್ತಿದ್ದೀಯೆ, ಹೀಗಿರುವಾಗ ಚಿಂತೆಯೇಕಿನ್ನು?'

**ಮಾಕೇಲರಾ ವಿಚಾರಮು ಮಮುಗನ್ನ ಶ್ರೀರಾಮಚಂದ್ರ**
**ಸಾಕೇತ ರಾಜಕುಮಾರ ! ಸದ್ಭಕ್ತ ಮಂದಾರ ! ಶ್ರೀಕರ**
**ಜತಗೂರ್ಚಿ ನಾಟಕಸೂತ್ರಮುನು**
**ಜಗಮೆಲ್ಲ ಮೆಚ್ಚಗ ಕರಮುನನಿಡಿ**
**ಗತಿತಪ್ಪಕಯಾಡಿಂಚೇವು ಸುಮೀ ..........** (ಮಾಕೇಲರಾ)

ಹೀಗಾಗಿ ಒಮ್ಮೆ ಶರಣಾದ ನಂತರ ಅವರು ಇನ್ನು ಯೋಚಿಸಬೇಕಾದ್ದಿಲ್ಲ.

**ಯೋಚಿಂಚಿ ಕಾರ್ಯಮು ಲೇದನುಚು**
**-ನೊಕಪಾರಿ ಶರಣನುಕೊಂಟಿನಯ್ಯ** (ನೀಚಿತ್ತಮು)

**(ಊ) ಕಾರ್ಪಣ್ಯ ಅಥವಾ ಆಕಿಂಚನ್ಯ** : ದೈವ ಸಹಾಯವಿಲ್ಲದೆ ತಾನೊಬ್ಬನೇ ಗುರಿ ಮುಟ್ಟಲಾರೆನೆಂಬ ತಿಳಿವು ಆಕಿಂಚನ್ಯ. ಮುಕ್ತಿ ಸಾಧನೆಗೆ ದೈವ ಸಹಾಯವೂ ಇರಬೇಕೆಂಬುದನ್ನು ತ್ಯಾಗರಾಜರು ಸ್ಪಷ್ಟಪಡಿಸುತ್ತಾರೆ. ಶ್ರೀರಾಮನ ದಯೆ ಇಲ್ಲದೆ ಯಾರು ಬದುಕಿದರು? ಆತನ ದಯೆಯಿಲ್ಲದಿದ್ದರೆ ತ್ಯಾಗರಾಜರು ಮಾಡುವುದಾದರೂ ಏನು ? ಅವರು ಮಾಡುವ ಕೆಲಸಗಳು ಸಫಲವಾದೀತೇ? ದೇವರ ದಯೆ ಬಾರದಿದ್ದರೆ ಅವರ ಸ್ಥಾನವೆಲ್ಲಿಯದು ಎಂದು ದೈವದ ಹಿರಿಮೆಯನ್ನು ಸಾರುತ್ತಾರೆ.

**ನೀದು ಕಟಾಕ್ಷಮುಲೇಕ ಎವರು ಬ್ರತಿಕಿರಿ ಜಗತ್**
**ಸಾಕ್ಷಿಯೈನ ಜೀವನಜದಳಾಯತಾಕ್ಷ** (ಏ ವಿಧಮುನ್ನೈನಗಾನಿ)

**ನೀಕೇ ದಯರಾಕ ನೇಜೇಯು ಪನುಲೆಲ್ಲ ನೆರವೇರುನಾ** ? (ನೀಕೇ ದಯರಾಕ)

**ನೀ ದಯ ರಾವಲೆಗಾಕ ನೇನೆಂತವಾಡನು** ? (ನೀದಯ ರಾವಲೆಗಾಕ)

ಆಕಿಂಚನ್ಯದ ಉತ್ಕಟತೆಯಲ್ಲಿ ತ್ಯಾಗರಾಜರು ನೈಚ್ಯಾನುಸಂಧಾನದ ಅನೇಕ ಕೃತಿಗಳನ್ನು ಹಾಡಿದ್ದಾರೆ. ಉದಾಹರಣೆಗೆ—ದುಡುಕುಗಲ ನನ್ನೇದೊರಕೊಡುಕು ಬ್ರೋಚುರಾ; ಎಟುಲಬ್ರೋಚುವೊ ತೆಲಿಯ ಮುಂತಾದವು.†

---

* 'ಹಡೆದ ಜನನಿಯ ತೆರದಿ ಸ್ವಾಮಿ ಹೊಣೆಗೇಡಾಗಿ ಬಿಡದೇ ರಕ್ಷಿಸುವನಿದಕೆ ಸಂದೇಹ ಬೇಡ'—ಕನಕದಾಸರ ತಲ್ಲಣಿಸದಿರು ಕಂಡ್ಯ ಭಾವವನ್ನು ಹೋಲಿಸಿ.

† ನೈಚ್ಯಾನುಸಂಧಾನದ ಇತರ ರಚನೆಗಳನ್ನು 'ವಿರಹ ಮತ್ತು ಧನ್ಯತೆ' ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗುವುದು.

ತ್ಯಾಗರಾಜರು ಶರಣಾಗತಿಯ ಮೇಲಿನ ಆರು ಅಂಶಗಳನ್ನು ಹೀಗೆ ಪ್ರಸ್ತಾಪಿಸಿ ಕಡೆಗೆ ತಾವು ರಾಮನಲ್ಲಿ ಪೂರ್ಣ ಶರಣಾದುದರಿಂದ ಆತನ ದಯೆ ಅವರಿಗೆ ಲಭ್ಯವಾಗಿ ನಿತ್ಯಾನಂದ ಅನುಭವಿಸಿದಂತೆ ಹಾಡುತ್ತಾರೆ.

**ನೀ ದಯಚೇ ರಾಮ ನಿತ್ಯಾನಂದುಡೈತಿ** **(ನೀ ದಯಚೇ)**

ಹೀಗೆ ಆತ್ಮನಿವೇದನ ಭಕ್ತಿಯ ಮೂಲಕ ಪ್ರಪನ್ನರಾದವರು ನಿತ್ಯಾನಂದ ಅನುಭವಿಸುವರೆಂಬುದನ್ನು ತಮ್ಮ ನಿದರ್ಶನದ ಮೂಲಕ ಇತರರಿಗೂ ಮನದಟ್ಟು ಮಾಡುತ್ತಾರೆ. ಆತ್ಮನಿಕ್ಷೇಪದ ಒಂದೇ ಒಂದು ಕ್ರಿಯೆಯು ಮನುಷ್ಯನನ್ನು ಮುಕ್ತಿಗೆ ಒಯ್ಯುತ್ತದೆ. ಶರಣಾಗತಿ ಮತ್ತು ಇತರ ಉಪಾಯಗಳ ಮೊರೆ ಹೋಗುವುದು—ಇವೆರಡೂ ದೇವರಲ್ಲಿನ ಅವಿಶ್ವಾಸವನ್ನು ಸೂಚಿಸುತ್ತದೆ. ಆತನಲ್ಲಿನ ಪೂರ್ಣ ವಿಶ್ವಾಸವು ಮಾತ್ರ ಆತನ ಕೃಪೆಯನ್ನು ನಮ್ಮೆಡೆಗೆ ಸೆಳೆಯುವುದು. ಈ ವಿಶ್ವಾಸವು ಅಪೂರ್ಣವಾದರೆ ಆತನ ಕೃಪೆಯ ಹರಿವಿಗೆ ಅಡಚಣೆಯುಂಟಾಗುತ್ತದೆ. ಪ್ರಪನ್ನನು ಮಗುವಿನಂತೆ ಮುಗ್ಧ. ಪರಿಪಕ್ವ ಪ್ರಪನ್ನನ ಲಕ್ಷಣವೇನೆಂದರೆ ಅವನು ತನ್ನ ಮನೋಭಾವದಲ್ಲಿ ಮಗುವಾಗಿರುತ್ತಾನೆ. ವರ್ಡ್ಸ್‌ವರ್ತ್ ಕವಿಯು ತನ್ನ 'Ode on intimations of immortality' ಎಂಬ ಕವಿತೆಯಲ್ಲಿ ಹೀಗೆ ಹೇಳುತ್ತಾನೆ. "Heaven lies in our infance. Like trailing clouds of glory do we come from God who is our home." ಹಾಗೆಯೇ ಪುರಂದರರು 'ಸಂಕಲ್ಪ ಸಿದ್ಧಿ ಮನಕೆ ಹಬ್ಬ, ನಿಶ್ಚಿಂತ ಯೋಗಿಗೆ ದಿನದಿನ ಹಬ್ಬ' ಎಂದು ಭರನ್ಯಾಸದ ಮಹಿಮೆಯನ್ನು ಕೊಂಡಾಡುತ್ತಾರೆ. 'ಹರಿ ನಿನ್ನೊಲುಮೆ ಆಗುವ ತನಕ ಅರಿತು ಸುಮ್ಮನಿರುವುದೇ ಲೇಸು' ಎಂಬುದು ಅವರ ಉಕ್ತಿ. ಇಲ್ಲಿ ನಮ್ಮ ನಿಷ್ಕ್ರಿಯತೆಯು ಅಜ್ಞಾನ ಜನ್ಯವಲ್ಲ ಎಂಬುದು '**ಅರಿತು**' ಎಂಬ ಶಬ್ದದಿಂದ ಸ್ಪಷ್ಟವಾಗುತ್ತದೆ.

## ಟಿಪ್ಪಣಿಗಳು

೧ ಭಕ್ತಿ ಸೂತ್ರ, ಸೂತ್ರ ೨.

೨ *Essentials of Indian Philosophy*, M. Hiriyanna, ಪುಟ ೧೪.

೩ ಭಕ್ತಿ ಸೂತ್ರ, ಸೂತ್ರ ೮೨.

೪ *Srimadbhagavata*, ೭-೫-೨೨, V. Ragavan, Natesan & Co., Madras, Page ೧೫೫.

೫ ವಿಷ್ಣು ಪುರಾಣ ೬-೨-೧೭.

೬ ಶ್ಲೋಕ ೪-೬.

೭ ಗೀತೆ ೧೦-೨೫.

೮ ವಿಷ್ಣುಸಹಸ್ರನಾಮ - ಶ್ರೀ ಶಂಕರರ ವ್ಯಾಖ್ಯಾನ, ಶ್ಲೋಕ ೮.

೯ ನೋಡಿ, 'ಸಾಧನೆಯಲ್ಲಿ ಗುರುಹಿರಿಯರ ಪಾತ್ರ.'

೧೦ *The Spiritual Heritage of Tyagaraja*, English Translation by C. Ramanujachari- *An Introductory Thesis* by Dr. V. Raghavan, Sri Ramakrishna Math, Mylapore, Madras ೧೯೬೬ - ವಿ. ರಾಘವನ್‌ರ ಪೀಠಿಕಾ ಪ್ರಬಂಧದಲ್ಲಿ, ಪುಟ ೧೧೬.

೧೧ 'ವೆಲಸುಲಭಮು ಫಲಮಧಿಕಮು', ಅಧ್ಯಾತ್ಮ ಸಂಕೀರ್ತನಲು, ರಾಳ್ಳಪಲ್ಲಿ ಅನಂತಕೃಷ್ಣಶರ್ಮ ಮತ್ತು ಶ್ರೀನಿವಾಸಾಚಾರ್ಯ. (ಸಂ.) ತಿ.ತಿ. ದೇವಸ್ಥಾನ, ತಿರುಪತಿ, ೧೯೫೧,ಸಂಪುಟ ೭, ಕೀರ್ತನೆ ೧೦೪.

೧೨ ನಾರದ ಭಕ್ತಿ ಸೂತ್ರ, ಸೂತ್ರ ೧೯, ತದ್ವಿಸ್ಮರಣೇ ಪರಮ ವ್ಯಾಕುಲತೇತಿ.

೧೩ ಶ್ರೀ ವಾಲ್ಮೀಕಿ ರಾಮಾಯಣದ ಸುಂದರಕಾಂಡದಲ್ಲಿ ಆಂಜನೇಯನು ಶ್ರೀರಾಮನ ದಿವ್ಯ ಲಕ್ಷಣಗಳನ್ನು ವಿವರಿಸುವ ಒಂದು ಅಧ್ಯಾಯವೇ ಇದೆ. ನೋಡಿ, ೧೩೫ನೇ ಸರ್ಗ.

೧೪ ಶ್ಲೋಕ ೨೭.

೧೫ ಶ್ರೀಪಾದರಾಜರ ಕೃತಿಗಳು, ಡಾ. ಜಿ. ವರದರಾಜರಾವ್, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೩, ಹಾಡು ೫.

೧೬ ಅರಣ್ಯಕಾಂಡ, ೧೫ನೇ ಸರ್ಗ.

ಪ್ರೀತೋsಸ್ಮಿ ತೇ ಮಹತ್‌ಕರ್ಮ ತ್ವಯಾ ಕೃತಮಿದಂ ಪ್ರಭೋ ।
ಪ್ರದೇಯೋ ಯನ್ನಿಮಿತ್ತಂ ತೇ ಪರಿಷ್ವಂಗೋ ಮಯಾಕೃತಃ ॥
ಭಾವಜ್ಞೇನ ಕೃತಜ್ಞೇನ ಧರ್ಮಜ್ಞೇನ ಚ ಲಕ್ಷ್ಮಣ ।
ತ್ವಯಾ ಪುತ್ರೇಣ ಧರ್ಮಾತ್ಮಾ ನ ಸಂವೃತ್ತಃ ಪಿತಾ ಮಮ ॥

ಶ್ಲೋಕ ೨೮-೨೯.

೧೭ ದ್ವಾಸುಪರ್ಣಾ ಸಯುಜಾ ಸಖಾಯಾ, ೩-೧-೧.

೧೮ ಶ್ರೀ ವಾಲ್ಮೀಕಿ ರಾಮಾಯಣ ಯುದ್ಧಕಾಂಡ ೧೮ನೇ ಸರ್ಗ, ಶ್ಲೋಕ ೩.

೧೯ ಶ್ರೀ ವಾಲ್ಮೀಕಿ ರಾಮಾಯಣ ಸುಂದರಕಾಂಡ ೨೧ನೇ ಸರ್ಗ, ಶ್ಲೋಕ ೨೧.

೨೦ ಹೋಲಿಸಿ, ಗೀತೆ ೧೧-೧೪ ಮತ್ತು ೪೨.

೨೧ ಗೀತೆ ೨-೭.

೨೨ *The Philosophy of Pancharatra*, Dr. S. R. Bhat, Ganesh and Co., Madras ೧೯೬೮, Page ೯೮.

೨೩ ಉದಾ : ಹೋಲಿಸಿ, ಪುರಂದರರ ಉಗಾಭೋಗ—'ನಿನ್ನಂಥ ಸ್ವಾಮಿ ಎನಗುಂಟು'. ಶ್ರೀ ಕರ್ನಾಟಕ ಹರಿದಾಸ ಕೀರ್ತನ ತರಂಗಿಣಿ, ಸುಬೋಧ ಎಂ. ರಾಮರಾವ್, ಸುಬೋಧ ಪ್ರಕಟನಾಲಯ, ಬೆಂಗಳೂರು, ೧೯೬೪. ಪುಟ ೩೬೯.

# ಪಂಚಭಾವಗಳು

ನವವಿಧ ಭಕ್ತಿಗಳಿಗಿಂತ ಪಂಚಭಾವಗಳು ಹೆಚ್ಚು ಅನುಭವಪ್ರಧಾನವಾದುದು. ಏಕೆಂದರೆ ಇಲ್ಲಿ ಭಕ್ತ-ಭಗವಂತನ ನಡುವೆ ಮಾನವಸಹಜವಾದ ಸಂಬಂಧ ಕಲ್ಪನೆಯಿರುತ್ತದೆ. ಭಕ್ತ ತನ್ನ ಇಷ್ಟದೈವವನ್ನು ಒಡೆಯನನ್ನಾಗಿ, ಗೆಳೆಯನನ್ನಾಗಿ, ಇನಿಯನನ್ನಾಗಿ ಅಥವಾ ಎಳೆಯನನ್ನಾಗಿ ಭಾವಿಸುತ್ತಾನೆ. ಭಕ್ತನ ಕೇಂದ್ರಬಿಂದು ದೇವರೇ ಆಗಿ, ಸ್ತುತಿಸಬೇಕೆನಿಸಿದರೆ, ಆತ ಸ್ತುತಿಸುವುದು ದೇವರನ್ನೇ. ದಾಸನಾಗಿರಬೇಕೆನಿಸಿದರೆ ಆತ ದೇವರಿಗೇ ದಾಸನಾಗುವುದು, ಇನ್ನಾರಿಗೂ ಅಲ್ಲ. ಮುದ್ದಿಸಬೇಕೆನಿಸಿದರೆ ಆತ ಮುದ್ದಿಸುವುದು ದೇವರನ್ನೇ. ಜಗಳವಾಡುವುದೋ, ಹಂಗಿಸುವುದೋ ಅಥವಾ ಬುದ್ಧಿ ಹೇಳಬೇಕೆನಿಸುವುದೋ ಆದರೆ, ಅದರಲ್ಲೂ ಆತನ ವ್ಯವಹಾರ ದೇವರೊಂದಿಗೇ. ಹೀಗೆ ಭಕ್ತನು ದೇವರ ಅದ್ಭುತ ಲೀಲಾವಿನೋದಗಳನ್ನು ಕಂಡು ಸ್ತುತಿಸಬಹುದು, ಆತನಿಗೆ ದಾಸನಾಗಬಹುದು, ತನ್ನನ್ನೇ ತಾಯಿ-ತಂದೆಯ ಸ್ಥಾನದಲ್ಲಿ ಕಲ್ಪಿಸಿಕೊಳ್ಳಬಹುದು ಅಥವಾ ಪ್ರೇಯಸಿಯ ಸ್ಥಾನದಲ್ಲಿ ಭಾವಿಸಿಕೊಳ್ಳಬಹುದು. ಈ ಭಾವಗಳನ್ನು ಗುರುತಿಸಿ ಇವುಗಳಿಗೆ ಶಾಂತ, ದಾಸ್ಯ, ಸಖ್ಯ, ಮಧುರ ಮತ್ತು ವಾತ್ಸಲ್ಯಗಳೆಂದು ಹೆಸರಿಸಲಾಗಿದೆ. ಇವೆಲ್ಲದರ ಗುರಿ ಒಂದೇ ಆಗಿ, ಅಭಿವ್ಯಕ್ತಿಗೊಳ್ಳುವ ರೂಪದಲ್ಲಿ ಮಾತ್ರ ವ್ಯತ್ಯಾಸ ಕಾಣಬರುತ್ತದಷ್ಟೆ. ಭಕ್ತಿಯ ಮೂಲದಿಂದ ದೇವರನ್ನು ಸೇರಬೇಕೆಂಬ ತೀವ್ರ ಹಂಬಲವೇ ಇದರ ಗುರಿಯಾಗಿರುತ್ತದೆ. ಹೀಗಾಗಿ ಇದನ್ನು ನದಿಯೊಂದರ ಐದು ಪಾತ್ರಗಳಿಗೆ ಹೋಲಿಸಬಹುದು.

ಈ ಐದು ಭಾವಗಳಿಗೂ ರಸಾಧಿಕ್ಯತೆಯಲ್ಲಿ ವ್ಯತ್ಯಾಸ ಕಾಣಬರುತ್ತದೆ. ಶಾಂತಭಾವದಲ್ಲಿ ನಿಸ್ವಾರ್ಥ ಪ್ರೇಮದಿಂದ ಭಕ್ತ ಪರಮಾತ್ಮನ ಅಚಿಂತ್ಯ ಮಹಿಮೆಯನ್ನು ಕಂಡು ಭಯಾಶ್ಚರ್ಯಹೊಂದುತ್ತಾನೆ. ದಾಸ್ಯವು ಇನ್ನೊಂದು ಹೆಜ್ಜೆ ಮುಂದಕ್ಕೊಯ್ದು ಭಯ ವಿನಯಾದಿ ಗುಣಗಳಿಂದ ಕೂಡಿದ ಭೃತ್ಯನ ಪ್ರೇಮಭಕ್ತಿಗಳನ್ನು ಭಕ್ತ ಅಭಿವ್ಯಕ್ತಿಸುತ್ತಾನೆ. ದಾಸ್ಯಭಾವಸಾಧಕನು ದೇವರ ಅನಂತ ಮಹಿಮೆಯನ್ನು ಕಂಡು ಭಯಗ್ರಸ್ತನಾಗುತ್ತಾನೆ. ಉಳಿದ ಮೂರು ಭಾವಗಳಲ್ಲಿ ಭಕ್ತ ಭಗವಂತನಿಗೆ ಇನ್ನೂ ಸನಿಹನಾಗುತ್ತಾನೆ. ಹೇಗೆಂದರೆ ಸಖ್ಯಭಾವದಲ್ಲಿ ಸ್ನೇಹಿತರಿಗೆ ಸಹಜವಾದ ಸಮಾನತೆ ಇದ್ದು, ಇಲ್ಲಿ ನಿಜವಾಗಿ ಪ್ರೇಮದಮಟ್ಟ ಮೇಲಾಗಿರುತ್ತದೆ. ವಾತ್ಸಲ್ಯದಲ್ಲಾದರೋ ತಂದೆತಾಯಿಯರಿಗೆ ಮಗುವಿನ ಮೇಲಿನ ಪ್ರೀತಿ ಎದ್ದು ಕಾಣುತ್ತದೆ. ಈ ಭಾವದಲ್ಲಿ ದೇವರ ಶಕ್ತಿ, ಮಹಿಮೆ ಮತ್ತು ಆಕಾರಗಳು ಮರೆಯಾಗಿ ದೇವರು ತನ್ನ ಕೈಯ ಮಗುವೆಂದೇ ಭಕ್ತನಿಲ್ಲಿ ಭಾವಿಸುತ್ತಾನೆ. ದೇವರು ಸರ್ವಶಕ್ತ, ಶಾಶ್ವತ, ಸರ್ವಾಂತರ್ಯಾಮಿ ಎಂದು ಚಿಂತಿಸುವ ಗೋಜಿಗೆ ಹೋಗುವುದಿಲ್ಲ. ಇಲ್ಲಿ ಭಕ್ತನಿಗೆ ವಾತ್ಸಲ್ಯಭಾವದಿಂದ

ಉಂಟಾದ ಪ್ರೇಮವು ಉನ್ಮಾದಾವಸ್ಥೆಯನ್ನೇ ಮುಟ್ಟುತ್ತದೆ. ಇಷ್ಟಾದರೂ ಅತ್ಯಧಿಕ ಪ್ರೇಮದಿಂದ ಒಂದಾಗುವುದು ಮಧುರಭಾವದಲ್ಲಿ ಮಾತ್ರ ಸಾಧ್ಯ. ರಾಧಾಕೃಷ್ಣರ ಪ್ರೇಮ ಇದಕ್ಕೆ ಅತ್ಯುತ್ತಮ ಉದಾಹರಣೆ. ದೇವರು ಭಕ್ತನಿಗೆ ಸುಲಭನಾಗುವ ಕಾರಣದಿಂದಲೇ, ಭಕ್ತ ನಡೆಸುವ ಈ ಎಲ್ಲ ವಿಧದ ಆರಾಧನೆಗೂ ಒಡಂಬಡುತ್ತಾನೆ ಎಂಬುದು ಇಲ್ಲಿ ಗಮನಾರ್ಹ.

**ಶಾಂತಭಾವ**

ಶಾಂತಭಾವದಲ್ಲಿ ಭಕ್ತನ ಮನಸ್ಥಿತಿ ಭಗವಂತನನ್ನು ಕಂಡು ರೋಮಾಂಚನಗೊಳ್ಳುತ್ತದೆ. ಆಶ್ಚರ್ಯದಿಂದ ಮಾರುಹೋಗುತ್ತದೆ. ತನ್ನ ಇಷ್ಟದೈವವನ್ನು ಅದರ ಒಲವು ಚೆಲುವುಗಳನ್ನು, ಹಿರಿಮೆ-ಗರಿಮೆಗಳನ್ನು, ಅದ್ಭುತ ಲೀಲಾವಿನೋದಗಳನ್ನು, ಅಘಟಿತಘಟನಾ ಸಾಮರ್ಥ್ಯವನ್ನು ಎಷ್ಟು ಹೊಗಳಿದರೂ ತೃಪ್ತಿಯಿಲ್ಲ. ದೇವರ ಅಸಮಾನ ಕಾರುಣ್ಯ ಸ್ವಭಾವವನ್ನು ಮುಗ್ಧ ಮತ್ತು ಶಾಂತ ಮನಸ್ಸಿನಿಂದ ಕೊಂಡಾಡುತ್ತಾನೆ. ಇದು ನಿಜಜ್ಞಾನದ ಲಕ್ಷಣವೇ ಸರಿ. ಅರ್ಥಾತ್ ದೇವರ ಸರ್ವಶಕ್ತಿತ್ವ, ಸರ್ವವ್ಯಾಪಿತ್ವ ಮತ್ತು ಅಪಾರ ಕಾರುಣ್ಯಗಳ ವ್ಯಾಪ್ತಿ—ಮಾತಿಗೆ ಮೀರಿದುದೆಂಬ ಅರಿವು ಭಕ್ತನಿಗೆ ಇಲ್ಲಿ ಇರುತ್ತದೆ. ಪ್ರತಿ ಹೆಜ್ಜೆಯಲ್ಲೂ ದೈವದ ಬಗೆಗೆ ಭಕ್ತನಲ್ಲುಂಟಾಗುವ ಆನಂದಾಶ್ಚರ್ಯಗಳೇ ಶಾಂತಭಾವದ ವೈಶಿಷ್ಟ್ಯವೆಂದರೆ ತಪ್ಪಲ್ಲ. ಇಲ್ಲಿ ಭಕ್ತನು ದೇವರೊಂದಿಗೆ ಬಾಂಧವ್ಯದ ಪರಿಧಿಯಿಂದ ಹೊರನಿಂತು (ಇಲ್ಲಿ ಆತ ಭಕ್ತ ಸಂಬಂಧಿಯಷ್ಟೇ) ನೋಡುವಾಗ, ದೇವರ ಹಿರಿಮೆಯ ಬಗೆಗೆ ಆದರ, ಪೂಜ್ಯತೆ, ಭಯಗಳೆಲ್ಲವೂ ಅಡಕವಾಗಿರುತ್ತವೆ. ಭಕ್ತಿಮಾರ್ಗ ಅನುಸರಣೆಯ ಆರಂಭದಲ್ಲಿ ಭಯವು ಅಗತ್ಯವೆಂಬುದನ್ನು ಶ್ರೀ ರಾಮಕೃಷ್ಣ ಪರಮಹಂಸರು ಹೇಳುತ್ತಾರೆ. ಇದು ವೈಧೀ ಭಕ್ತಿ. ಈ ಹಂತದಲ್ಲಿ ಭಕ್ತಿಯಿನ್ನೂ ಅಷ್ಟಾಗಿ ತೀವ್ರಗೊಂಡಿರುವುದಿಲ್ಲ. ವೈಧೀ ಭಕ್ತಿಯು ಪಕ್ವಗೊಂಡಂತೆ ಭಯದ ಸ್ಥಾನದಲ್ಲಿ ಮೈತ್ರಿಯುತವಾದ ಪ್ರೀತಿಯುಂಟಾಗುತ್ತದೆ. ಇದನ್ನೇ ಅವರು ರಾಗಾತ್ಮಿಕ ಅಥವಾ ರಾಗಭಕ್ತಿ ಎನ್ನುತ್ತಾರೆ.[೧] ತ್ಯಾಗರಾಜರಿಗಿಂತ ಮುಂಚಿನವರಾದ ಅನ್ನಮಯ್ಯನವರೂ ಭಕ್ತಿಮಾರ್ಗದಲ್ಲಿ ಭಯವನ್ನು ಗುರುತಿಸುತ್ತಾರೆ.[೨] ತ್ಯಾಗರಾಜರೂ ಅಂತರಂಗದಲ್ಲಿನ ಭಯದ ಮೂಲವನ್ನು ಹೀಗೆ ಗುರುತಿಸುತ್ತಾರೆ.

ಅಂತರಂಗಮುನ ಕಲುಗು ಭಯಮುನ
ಆಂತರಿಕ ಭಕ್ತಿ ಮಾರ್ಗಮು ದೆಲಿಸಿ

(ಸಮಯಮು ಏಮರಕೆ)

ತ್ಯಾಗರಾಜರಲ್ಲಿ ಶಾಂತಭಾವದ ಉಲ್ಲೇಖಗಳ ಪ್ರಕಾರ ದೇವರು ಪುರುಷೋತ್ತಮ, ಪುರುಷರಲ್ಲಿ ಪುರುಷ. ಅಘಟಿತ ಘಟನಾ ಸಾಮರ್ಥ್ಯವುಳ್ಳವನು. ಕೋಟಿ ಸೂರ್ಯ ಪ್ರಕಾಶ, ಜಗದ್ವ್ಯಾಪಿ, ಅಮಿತ ಪರಾಕ್ರಮಿ, ಬ್ರಹ್ಮದೇವನಿಗೂ ತಂದೆ, ತ್ರಿಮೂರ್ತಿ

ಗಳೂ ಇವನಿಗೆ ಸಮರಲ್ಲ.

ಅಲ್ಲದೆ ಸರ್ವಲೋಕದಯಾನಿಧಿ, ಸರ್ವರಲ್ಲೂ ಸಮನಾಗಿ ಪ್ರೀತಿಯುಳ್ಳವನು, ಕರುಣಾಪಾರಾವಾರ, ಅಲ್ಪಫಲಗಳನ್ನು ಯಾಚಿಸಿದವರಿಗೂ ಅದ್ಭುತ ಫಲವನ್ನೇ ನೀಡುವ ಉದಾರಿ.

ರೂಪಿನಲ್ಲೋ ಕೋಟಿ ಮದನರ ಲಾವಣ್ಯವುಳ್ಳವನು. ಮದನಜನಕ, ಮಂದಸ್ಮಿತ, ಬ್ರಹ್ಮೇಂದ್ರಾದಿಗಳೇ ವರ್ಣಿಸಲಾಗದಷ್ಟು ಸುಂದರನಾತ. ಹೀಗೆ ತ್ಯಾಗರಾಜರು ಭಗವಂತನ ಪರತ್ವ, ಸೌಲಭ್ಯ ಹಾಗೂ ಕಲಾತ್ಮಕ ಅಂಶಗಳನ್ನು ಅದ್ವಿತೀಯವಾದು ದೆಂದು ಬಾಯ್ತುಂಬಿ ಹೊಗಳುತ್ತಾರೆ, ಅಚ್ಚರಿಪಡುತ್ತಾರೆ. ಇವುಗಳನ್ನು ಈಗಾಗಲೇ ಸವಿಸ್ತಾರವಾಗಿ 'ಭಗವಂತನ ಸ್ವರೂಪ' ಎಂಬ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿರುವು ದರಿಂದ ಇಲ್ಲಿ ಬಹಳ ಸ್ಥೂಲವಾಗಿ ಆ ಅಂಶಗಳನ್ನು ಮುಂದಿಡಲಾಗಿದೆ.

ಶಾಂತಭಾವದ ರಚನೆಗಳನ್ನು ಸುಲಭ ಅಧ್ಯಯನದ ದೃಷ್ಟಿಯಿಂದ ಹೀಗೆ ವಿಭಾಗಿಸ ಬಹುದು.

೧. ದೇವರ ಸರ್ವೋತ್ತಮತೆಯ ಪ್ರತಿಪಾದನೆ.

೨. ದೇವರ ಗುಣನಿರೂಪಣೆ ಮತ್ತು ಲೀಲಾವಿನೋದಗಳು.

೩. ದೇವರ ಅವಯವ-ಅವಯವಿ ಸೌಂದರ್ಯ (ಭಾಗಶಃ ಮತ್ತು ಸಮಗ್ರ ನಿರೂಪಣೆ).

೪. ದೇವರ ನಾಮದ ಮಹಿಮೆ.

**೧. ದೇವರ ಸರ್ವೋತ್ತಮತೆಯ ಪ್ರತಿಪಾದನೆ** : ತ್ಯಾಗರಾಜರ ಪ್ರಕಾರ ತಮ್ಮ ಇಷ್ಟ ದೈವವಾದ ರಾಮನಿಗೆ ಸರಿಸಮನಾದ ದೇವರೇ ಇಲ್ಲ. ಇತರ ಯಾವ ದೇವತೆಗಳೂ ಈತನಿಗೆ ಸಮರಲ್ಲ. ಈ ದೈವ ಶಿವಲೋಕದಿಂದಾಗಲೀ, ವೈಕುಂಠದಿಂದಾಗಲೀ ಅಥವಾ ಬ್ರಹ್ಮಲೋಕದಿಂದಾಗಲೀ ಬಂದುದಲ್ಲ. ಧರ್ಮ, ಸತ್ಯ ಮತ್ತು ಮೃದುಮಾತುಗಳ ಈ ದೈವ ಬಂದುದಾದರೂ ಎಲ್ಲಿಂದ ಎಂದು ತಿಳಿಯುವ ಕುತೂಹಲ ತ್ಯಾಗರಾಜರಿಗೆ. ಅವರು ಹೀಗೆನ್ನುತ್ತಾರೆ.

**ಎವ್ವರೇ ರಾಮಯ್ಯ ನೀಸರಿ**

**(ಎವ್ವರೇ)**

**ಸಾಮಿಕಿ ಸರಿ ಚೆಪ್ಪಜಾಲ ವೇಲ್ಪುಲ ರಾಮ**

. . . . . . . . . . . . . . . . . . . . . . . .

**ಅನ್ನಿವೇಲ್ಪುಲಲೋನ ನತನಿ ಸರಿಗಾನ . . .**

**(ಸಾಮಿಕಿಸರಿ)**

**ಎಂದುಂಡಿ ವೆಡಲಿತಿವೋ ಏವೂರೋ ನೇ ತೆಲಿಯ**

**ಇಪುಡೈನ ದೆಲುಪವಯ್ಯ**

. . . . . . . . . . . . . . . **ಶಿವಲೋಕಮುಗಾದು**

. . . . . . . . . . . . . . . ವೈಕುಂಠಮುಗಾದು
. . . . . . . . . . . . . ವಿಧಿಲೋಕಮುಗಾದು
ದಿಟಮು ಧರ್ಮಮು ಸತ್ಯಮು ಮೃದು ಭಾಷಲುಗಲುಗು
ದಿವ್ಯರೂಪ . . . . . . . . . . . . . . . . . . . . . .

(ಎಂದುಂಡಿ ವೆಡಲಿತಿವೋ)

ಇಂತಹ ದೇವರಿಗೆ ಕೌಸಲ್ಯ ದಶರಥರು ಹೆಸರಿಗಷ್ಟೆ ತಾಯ್ತಂದೆಯರು (ತಲ್ಲಿ ತಂಡ್ರುಲು). ದೇವರೆಂದರೆ ಈತನೊಬ್ಬನೇ. ಸೂರ್ಯಮಂಡಲದ ಮಧ್ಯೆ ವಿರಾಜಿಸುವ, ಧರ್ಮಾತ್ಮನಾದ, ಸರ್ವರನ್ನೂ ಸಮನಾಗಿ ಕಾಣುವ, ಚಿತ್ತಹಿತನಾದ ಈತ ಜಗತ್ತಿನ ತುಂಬ ವ್ಯಾಪಿಸಿದ್ದಾನೆ.

ಉಂಡೇದಿ ರಾಮುಡೊಕಡು ಊರಕ ಚೆಡಿಪೋಕು ಮನಸ
ಚಂಡ ಮಾರ್ತಾಂಡ ಮಧ್ಯ ಮಂಡಲಮುನನು ಚೆಲಂಗುಚು
ತಾಮಸಾದಿ ಗುಣರಹಿತುಡು, ಧರ್ಮಾತ್ಮುಡು, ಸರ್ವಸಮುಡು
ಕ್ಷೇಮಕರುಡು, ತ್ಯಾಗರಾಜಚಿತ್ತಹಿತುಡು ಜಗಮುನಿಂಡಿ

(ಉಂಡೇದಿ ರಾಮುಡೊಕಡು)

ಇನ್ನಿತರ ದೈವಗಳಿದ್ದರೂ ಅವರಿಗೂ ಶ್ರೀರಾಮನಿಗೂ ಅಜಗಜಾಂತರ. ಹೇಗೆಂದರೆ ಪ್ರಕಾಶಮಾನವಾದ ದೀಪದೆದುರು ದೀವಟಿಗೆಯ ಬೆಳಕಿನಂತೆ, ವ್ಯಾಪಕವಾದ ಕಾವೇರೀ ನದಿಯೆದುರು ಕಾಲುವೆಯಂತೆ, ಚಂದ್ರನ ಬೆಳಕಿನೆದುರು ತಾರೆಹೊಳಪಿನಂತೆ, ಮನ್ಮಥನ ಸೌಂದರ್ಯದೆದುರು ಸಾಮಾನ್ಯ ನರನಂತೆ, ಸಾಗರದೆದುರು ಕೊಳದಂತೆ.

ಕಾರುವೇಲ್ಪುಲು ನೀಕು ಸರಿ
ದೀವಟಿಕಿ ದೀಪಮುರೀತಿ ಕಾವೇಟಿಕಿ ಕಾಲುವಲ ರೀತಿಗಾನಿ
ತಮ್ಮಿವೈರಿಕಿ ತಾರಕಲರೀತಿ ಕಮ್ಮವಿಲ್ತುನಿಕಿ ಕಾಂತಿನರುಲ ರೀತಿಗಾನಿ
ಸಾಗರಾನಿಕಿ ಸರಸುರೀತಿ .........................

(ಕಾರುವೇಲ್ಪುಲು)

ಈ ಪರಿಯಾಗಿ ಇತರ ದೈವಗಳಿಂದ ಈ ಧರೆಯಲ್ಲಿ ಸೌಖ್ಯವುಂಟೇ ಎಂದು ಹರಿಯ ಸರ್ವೋತ್ತಮತೆಯನ್ನು ಕೊಂಡಾಡುತ್ತಾರೆ, ತ್ಯಾಗರಾಜರು.

**೨. ದೇವರ ಗುಣನಿರೂಪಣೆ ಮತ್ತು ಲೀಲಾವಿನೋದಗಳು** : ಮೇರು ಸಮಾನಧೀರನಾದ ಈ ದೈವ ಕರುಣಾಸಮುದ್ರ. ರಾಕ್ಷಸಕುಲ ಭೀಮ, ಭೂಮಂಡಲದ ಸುಜನರನ್ನು ಈತನಂತೆ ಪಾಲಿಸುವವರು ಬೇರಾರೂ ಇಲ್ಲ. ಆಡಿದ ಮಾತಿಗೆ ತಪ್ಪದವನೆಂದು ಆಚಂದ್ರಾರ್ಕವಾಗಿ ಕೀರ್ತಿಗಳಿಸಿದ್ದಾನೆ. ಒಬ್ಬ ದೊರೆಯ ಮಗನಾಗಿ ಇಷ್ಟೆಲ್ಲ ಸುಗುಣಗಳನ್ನು ಆತ ಹೊಂದಿರುವುದರಿಂದ ಚಕಿತರಾಗಿ, ತ್ರಿಮೂರ್ತಿಗಳು ತಮ್ಮೆಲ್ಲ ಗುಣಗಳನ್ನೂ ಒಗ್ಗೂಡಿಸಿ ತ್ರಾಸಿನ ಒಂದು ತಟ್ಟೆಯಲ್ಲೂ, ಶ್ರೀರಾಮನ ಗುಣಗಳನ್ನೇ ಮತ್ತೊಂದು ತಟ್ಟೆಯಲ್ಲೂ ಹಾಕಿ ತೂಗಿದರಂತೆ. ಹೀಗೆ ತೂಕಮಾಡಿದಾಗ ಶ್ರೀರಾಮನ

ಗುಣಗಳಿದ್ದ ತಟ್ಟೆಯೇ ಅಧಿಕ ತೂಕವುಳ್ಳದ್ದಾಯಿತಂತೆ. ಇದನ್ನು ಕಂಡು ತ್ರಿಮೂರ್ತಿಗಳು ಮೂವರೂ ಒಟ್ಟಾಗಿ ಶ್ರೀರಾಮನನ್ನು ಕೊಂಡಾಡಿದರಂತೆ.

**ಮುಮ್ಮೂರ್ತುಲು ಗುಮಿಗೂಡಿ ಪೊಗಡೆ ಮುಚ್ಚಟ ವಿನುಕೊನರೇ**
**ಸಮ್ಮತಿಗ ರಾಜುಕೊಡುಕನಗ ವಿನಿ**
**ಸಂಶಯಮು ದೀರಕ ಶ್ರೀರಾಮುನಿ**
**ರೋಸಮುತೋ ರಘುರಾಮುನಿ ಗುಣಮುಲ**
**ರೂಢಿಗ ದಮಗುಣಮುಲಟುವ್ರಾಸಿ**
**ತ್ರಾಸುನನಿಡಿ ಸರಿನಿಲ್ವಗಲೇದನಿ**
**ತ್ಯಾಗರಾಜನುತುಡೆವಡೋ ಯನುಚುನು**

(ಮುಮ್ಮೂರ್ತುಲು)

ಇಂತಹ ಪರಮಾತ್ಮನು ಜಗತ್ತೆಲ್ಲವೂ ಮೆಚ್ಚುವಂತೆ ನಾಟಕದ ಸೂತ್ರಗಳನ್ನು ಹಿಡಿದು, ಗತಿ ತಪ್ಪದಂತೆ ಆಡಿಸುತ್ತಾನೆ. ಆತನ ಪಾಂಡಿತ್ಯದ ಮುಂದೆ ಹುಲುಮಾನವನದೇನೂ ನಡೆಯದು. ಸತ್ತಾಮಾತ್ರನಾದ ಆತನ ಆಜ್ಞೆಯನ್ನು ಮೀರುವ ಸಾಮರ್ಥ್ಯ ಯಾರಿಗೂ ಇಲ್ಲ.

**ಜತಗೂರ್ಚಿ ನಾಟಕಸೂತ್ರಮುಲನು**
**ಜಗಮೆಲ್ಲ ಮೆಚ್ಚಗ ಕರಮುನಿಡಿ**
**ಗತಿ ತಪ್ಪಕಯಾಡಿಂಚೇವು ಸುಮಿ ............**

(ಮಾಕೇಲರಾ)

**ಮನಸಾ ಮನ ಸಾಮರ್ಥ್ಯಮೇಮಿ ............**

(ಮನಸಾ)

ಆತನ ಕೈವಾಡವಿಲ್ಲದೆ ಯಾವ ಶರೀರವೂ ಚಲಿಸಲಾರದು, ಯಾವ ತರುಗಳೂ ಬೆಳೆಯಲಾರವು, ಮಳೆಯೂ ಬರುವುದಿಲ್ಲ. ಹೀಗೆ ಪ್ರಕೃತಿ ಪ್ರಾಣಿಗಳೆಲ್ಲವೂ ಆತನ ಆಜ್ಞೆಯಂತೆಯೇ ನಡೆಯುವುದು. (ನಾರದಗಾನಲೋಲ)

**೩. ದೇವರ ಅವಯವ—ಅವಿಯುವಿ ಸೌಂದರ್ಯ ನಿರೂಪಣೆ** : ಇನ್ನು ದೇವರ ಸೌಂದರ್ಯವು ಜಗದಾನಂದಕಾರಕವಾದುದು. ಇದರಲ್ಲಿ ಹಿತವೂ ಇದೆ, ಮಾನವನ ಉನ್ನತಿಯೂ ಇದೆ. ಲೌಕಿಕವಾದ ಅನೇಕ ಸೌಂದರ್ಯಗಳಂತೆ ಇದು ಮಾನವನನ್ನು ಅಧೋಗತಿಗೆ ಇಳಿಸುವುದಿಲ್ಲ. ಪಾರಮಾರ್ಥಿಕವಾಗಿ ಅವನನ್ನು ಮೇಲೆತ್ತುತ್ತದೆ. ಅದರಿಂದಲೇ ಇದು'**ಕನಕನ ರುಚಿ**' ಯಾಗಿರುವುದು (ನೋಡಿದಷ್ಟೂ ಅಧಿಕವಾಗುತ್ತಲೇ ಇರುವುದು). ನಂಬಿದ ಸಜ್ಜನರ ಆಸೆಗಳನ್ನು ಸತತವೂ ಈಡೇರಿಸುವ ವಸಂತಕುಮಾರನನ್ನು ಹೇಗೆ ವರ್ಣಿಸುವುದು ? ಬ್ರಹ್ಮೇಂದ್ರಾದಿಗಳಿಗೇ ಅದು ಸಾಧ್ಯವಿಲ್ಲ. ಮನ್ಮಥ ಜನಕನಾದ ಕಲ್ಯಾಣ ರಾಮಚಂದ್ರನ ಸೊಗಸನ್ನು ಇಷ್ಟೆಂದು ವರ್ಣಿಸಲಾದೀತೇ? ಕರುಣಾಮಯವಾದ ಆ ಕಣ್ಣುಗಳ ನೋಟ, ಚಂದ್ರನಿಗಿಂತಲೂ ಸುಂದರವಾದ ಮುಖ,

ಹಿತಕರವಾದ ಮೃದು ಮಾತುಗಳು, ಅಭಯವನ್ನೀಯುವ ಕೈಗಳು, ಇಂತಹ ಸೌಂದರ್ಯವು ಮಾತಿಗೆ ನಿಲುಕುವುದಲ್ಲ, ಎನ್ನುತ್ತಾರೆ ತ್ಯಾಗರಾಜರು.

**ಇಂತನುಚು ವರ್ಣಿಂಪತರಮಾ? ಬ್ರಹ್ಮೇಂದ್ರಾದುಲಕೈನ**
**ಕಂತುನಿಗನ್ನ ಮಾಚಕ್ಕನಿ ಕಲ್ಯಾಣ**
**ರಾಮಚಂದ್ರ । ನೀ ಸೊಗಸು**
**ಚಲ್ಲನಿ ಚೂಪುಲ ಕನ್ನುಲು ಮರಿಜಾ**
**ಬಿಲ್ಲಿ ಕಳಲಗೇರಿನ ಆನನಮು**
**ಮೆಲ್ಲನಿ ಮಾಟಲು ಅಭಯಕರಮುಲಿವಿ**
**ಯೆಲ್ಲ ಸಹಜಮ್ಮೈನ ನೀಗುಣ**

(**ಇಂತನುಚು**)

**ಎಂತಮುದ್ದೋ ಎಂತಸೊಗಸೋ**
**ಎವರಿವಲ್ಲ ವರ್ಣಿಂಪತಗುನೇ**

(**ಎಂತಮುದ್ದೋ**)

ಲಾವಣ್ಯರಾಮನಾದ ಆತನ ಮನಸ್ಸು, ಸೊಗಸು, ರೀತಿಗಳೆಲ್ಲವೂ ವಿಶಿಷ್ಟವಾದುವು. ಇಂಥ ಅದ್ಭುತನಾದ ಮೋಹನ ರಾಮನನ್ನು ನೋಡಲು ಹತ್ತುಸಾವಿರ ಕಣ್ಣುಗಳು ಅವರಿಗೆ ಅಗತ್ಯವಿದೆ. ಹೀಗೆ ದೇವರ ಲೀಲೆಗಳನ್ನು ಮತ್ತು ವರ್ಣನಾತೀತವಾದ ಗುಣರೂಪ ಗಳನ್ನು ನೆನೆಸಿಕೊಂಡೊಡನೆಯೇ ತ್ಯಾಗರಾಜರಿಗೆ ರೋಮಾಂಚನವಾಗುತ್ತದೆ.

**ತಲಚಿನಂತನೇ ನಾ ತನುವೇಮೋ ಝಲ್ಲನೆರಾ**
**ಜಲಜವ್ಮೆರಿ ಧರಾದಿ ವಿಧೀಂದ್ರುಲ**
**ಚೆಲಿಮಿ ಪೂಜಲಂದಿನ ನಿನ್ನು ನೇ**
**ರೋಟಿಕಿ ಕಟ್ಟದಗಿನ ನೀ ಲೀಲಲು**
**ಮಾಟಿಕೆಕ್ಕುವ್ಮೆನ ನೀದು ಗುಣಮ್ಮುಲು**
**ಕೋಟಿ ಮದನ ಲಾವಣ್ಯಮುಲೈನ**
**ಸಾಟಿಗಾನಿ ಈ ದಿವ್ಯರೂಪಮುನು**

(**ತಲಚಿನಂತನೆ**)

**೪. ದೇವರ ನಾಮದ ಮಹಿಮೆ** : ಆದಿದೈವನಾದ ಶ್ರೀರಾಮನ ನಾಮವು ಸರ್ವಮತ ಗಳಿಗೂ ಸಮ್ಮತವಾದುದು.

**ಸರ್ವಮತಮುಲಕು ಸಮ್ಮತಮ್ಮೈನ**

(**ಪೇರಿಡಿ**)

ರಾಮಾಯಣವನ್ನು ಅಂಗೀಕರಿಸದ ಧರ್ಮವಿಲ್ಲ ಎಂಬುದನ್ನಿಲ್ಲಿ ಪ್ರಾಸಂಗಿಕವಾಗಿ ಸ್ಮರಿಸಬಹುದು. ಜನ್ಮರಕ್ಷಕವಾದ ಮಂತ್ರ ರಾಮನಾಮ. ರಾಮನಾಮಸುಖದ ಹಿರಿಮೆ

ಯನ್ನು ತ್ಯಾಗರಾಜರು ಹಲವು ಉಪಮೆಗಳೊಂದಿಗೆ ಹಾಗೂ ಸಾಕ್ಷಿಗಳೊಂದಿಗೆ ಹೀಗೆ ಹೇಳುತ್ತಾರೆ.

ಎಲೈ ಮನಸ್ಸೇ, ಈ ಧರೆಯಲ್ಲಿ ರಾಮನಾಮವೇ ಮಿಗಿಲಾದ ಸುಖವು. ಹರ, ಪಾರ್ವತಿ, ವಾಲ್ಮೀಕಿ, ಹನುಮಂತರ ಸಾಕ್ಷಿಯಾಗಿ ರಾಮನಾಮವು ಸುಖಕರವಾದುದು. ಬಾಯಾರಿ ಬಳಲಿದವನು ನೀರು ಕುಡಿದಾಗ ಉಂಟಾಗುವ ಸುಖಕ್ಕಿಂತ, ದಾರಿದ್ರ್ಯದಲ್ಲಿ ನರಳುತ್ತಿರುವವನಿಗೆ ಧನಭಾಂಡವು ಸಿಕ್ಕಿದಾಗ ಉಂಟಾಗುವ ಸುಖಕ್ಕಿಂತ, ತಾಪತಪ್ತ ಜನರಿಗೆ ಅಮೃತದ ಭಾವಿಯೇ ದೊರಕಿದುದಕ್ಕಿಂತ, ದಾರಿಗಾಣದೆ ವಿಹ್ವಲನಾದಾಗ ಧೈರ್ಯ ಮೂಡಿದುದಕ್ಕಿಂತ, ತೀವ್ರ ಹಸಿವಿನಲ್ಲಿ ಪಂಚಭಕ್ಷ್ಯಪರಮಾನ್ನ ದೊರೆತುದ ಕ್ಕಿಂತ, ಕೋಪದ ಸಮಯದಲ್ಲಿ ಶಾಂತಿ ದೊರೆತುದಕ್ಕಿಂತ, ಮೂಢನಿಗೆ ಸಕಲ ವಿದ್ಯೆ ಗಳೂ ಪ್ರಾಪ್ತವಾದುದಕ್ಕಿಂತ, ರಾಮನಲ್ಲಿ ನಿಜಭಕ್ತಿಯುಂಟಾಗಿ ಗಾನತತ್ತ್ವವನ್ನು ತಿಳಿದು ದಕ್ಕಿಂತ, ಸತ್ಸಹವಾಸದ ಸುಖಕ್ಕಿಂತ, ಅಗತ್ಯವಾದ ವೇದಾಂತದವಿಚಾರಮಾಡಿದು ದಕ್ಕಿಂತ, ನಿರ್ಗುಣಭಾವದ ಪರಬ್ರಹ್ಮಾನುಭವಕ್ಕಿಂತ ರಾಜಸ, ತಾಮಸ ಗುಣಗಳಿಲ್ಲದ ಪೂಜೆ ಸಲ್ಲಿಸಿದುದಕ್ಕಿಂತ 'ಶ್ರೀರಾಮನಾಮ'ವೇ ಅತಿ ಶ್ರೇಷ್ಠವಾದುದು.

**ಮೇಲುಮೇಲು ರಾಮನಾಮ ಸುಖಮೀಧರಲೋ ಮನಸಾ**
**ಫಾಲಲೋಚನ ವಾಲ್ಮೀಕಾದಿ ಬಾಲಾನಿಲಜಾದುಲು ಸಾಕ್ಷಿಗಾ**

**ನಿಂಡುದಾಹಮುಗೊನ್ನ ಮನುಜುಲಕು**
**ನೀರುತ್ರಾಗಿನ ಸುಖಂಬುಕಂಟೇ**
**ಚಂಡ ದಾರಿದ್ರ ಮನುಜುಲಕು ಧನ**
**ಭಾಂಡ ಮಬ್ಬಿನ ಸುಖಂಬುಕಂಟೇ**

**ತಾಪಮು ಸೈರಿಂಚನಿ ಜನುಲಕಮೃತ**
**ವಾಪಿಯಬ್ಬಿನ ಸುಖಂಬುಕಂಟೇ ದರಿ**
**ದಾಪುಲೇಕ ಭಯಮಂದುವೇಳಲ**
**ಧೈರ್ಯಮುಗಲ್ಗು ಸುಖಂಬುಕಂಟೇ**

**ಆಕಲಿವೇಳಲ ಪಂಚಭಕ್ಷ್ಯ ಪರ**
**ಮಾನ್ನ ಮಬ್ಬಿನ ಸುಖಂಬುಕಂಟೇ**
**ಶ್ರೀಕರುಡೌ ಶ್ರೀರಾಮುನಿ ಮನಸುನ**
**ಚಿಂತಿಂಚು ಸುಖಂಬುಕಂಟೇ**

**ಸಾರಹೀನಮೌ ಕ್ರೋಧ ಸಮಯಮುನ**
**ಶಾಂತಮುಗಲ್ಗು ಸುಖಂಬುಕಂಟೇ**
**ನೇರನಿ ಮೂಢುಲಕು ಸಕಲ ವಿದ್ಯಾ**
**ಪಾರಮು ದೆಲಿಯು ಸುಖಂಬುಕಂಟೇ**

ರಾಮುನಿಷ್ಠ ನಿಜಭಕ್ತಿಗಲಿಗಿ ಗಾನ
ರಸಮು ದೆಲಿಸಿನ ಸುಖಿಂಬುಕಂಟೇ
ಪಾಮರ ಚೆಲಿಮಿ ಸೇಯನಿವಾರಿ
ಭಾವಮುಲೋನಿ ಸುಖಿಂಬುಕಂಟೇ

ಚೇಯತಗು ವೇದಾಂತ ವಿಚಾರಣ
ಚೇಯಗ ಗಲ್ಗು ಸುಖಿಂಬುಕಂಟೇ
ಬಾಯಕ ನಿರ್ಗುಣ ಭಾವಮು ಗಲ ಪರ
ಬ್ರಹ್ಮಾನುಭವ ಸುಖಿಂಬುಕಂಟೇ

ರಾಜಸ ತಾಮಸ ಗುಣಮುಲುಲೇನಿ
ಪೂಜಲುಗಲ್ಗು ಸುಖಿಂಬುಕಂಟೇ . . . .

ಈ ಹಾಡಿನಲ್ಲಿ ತ್ಯಾಗರಾಜರು ರಾಮಸ್ಮರಣೆಗಿಂತ, ರಾಮನಾಮ ಮೇಲು ಎಂದು ಹೇಳಿರುವುದು ಅತ್ಯಂತ ಗಮನಾರ್ಹ ಅಂಶವಾಗಿದೆ. ರಾಮನಾಮದ ಔನ್ನತ್ಯವನ್ನೇ ಇನ್ನೂ ಕೆಲವು ರಚನೆಗಳಲ್ಲಿ, ಪೌರಾಣಿಕ ವ್ಯಕ್ತಿಗಳ ಉದಾಹರಣೆಯೊಂದಿಗೆ ತ್ಯಾಗ ರಾಜರು ಹೇಳಿರುವುದುಂಟು. ಹೀಗೆ ಅವರು ಶಾಂತಭಾವದಲ್ಲಿ ದೇವರನ್ನು ಸ್ತುತಿಸು ತ್ತಾರೆ.

ಭಕ್ತನಿಲ್ಲಿ ಒಂದು ರೀತಿಯ ನಿರ್ಲಿಪ್ತಭಾವದಿಂದ ದೇವರನ್ನು ಕೊಂಡಾಡುತ್ತಾನೆ. ಈ ನಿರ್ಲಿಪ್ತತೆಯ ಹಿಂದೆ ಭಕ್ತನಿಗೆ ಸಮಾಧಾನಚಿತ್ತ, ಸಂತೃಪ್ತಿ, ಶಾಂತಿಗಳು ಮೂಡಿ ರುತ್ತವೆ. ಇವಿಲ್ಲದೆ ಸುಖ ಸಾಧ್ಯವಿಲ್ಲೆಂದು ತ್ಯಾಗರಾಜರು ಅಭಿಪ್ರಾಯ ಪಡುತ್ತಾರೆ. ಇಲ್ಲಿ ಮನಸ್ಸು ರಜಸ್, ತಮೋಗುಣಗಳ ಲೇಪವಿಲ್ಲದೆ ಸತ್ವದೆಡೆಗೆ ನಿರಂತರವಾಗಿ ಹರಿಯುತ್ತದೆ. ಅದರಲ್ಲೇ ತಲ್ಲೀನಗೊಳ್ಳುತ್ತದೆ. ಇದೇ ಅಸಂಪ್ರಜ್ಞಾತ ಸಮಾಧಿ ಸ್ಥಿತಿ.[೩] ಈ ಸ್ಥಿತಿಯಲ್ಲಿ ಭಕ್ತನು ಪ್ರಾಪಂಚಿಕ ಗರ್ಹಣ ಮತ್ತು ಇಂದ್ರಿಯ ನಿಗ್ರಹಗಳೆಂಬ ನೈತಿಕ ಪರಿಪೂರ್ಣತೆ ಹೊಂದಿ, ಶಾಂತಚಿತ್ತನಾಗಿರುತ್ತಾನೆ. ಇದರಿಂದಲೇ ಆತ ಸುಖಿ ಯಾಗಲು ಸಾಧ್ಯವಾಗುವುದು. ಈ ಅಂಶವನ್ನು ತ್ಯಾಗರಾಜರು ಹೀಗೆ ನಿರೂಪಿಸುತ್ತಾರೆ.

ಸಾರಸದಳನಯನನೇ, ಶಾಂತಿಯಿಲ್ಲದೆ ಸೌಖ್ಯವಿಲ್ಲ. ಬಹಿರಿಂದ್ರಿಯಗಳನ್ನು ಜಯಿ ಸಿದ ದಾಂತನಾದರೂ, ತತ್ವವನ್ನು ತಿಳಿದ ವೇದಾಂತಿಯಾದರೂ ಚಿತ್ತಶಾಂತಿಯಿಲ್ಲದೆ ಸೌಖ್ಯವಿಲ್ಲ. ಹೆಂಡತಿ, ಮಕ್ಕಳು, ಧನಧಾನ್ಯಗಳನ್ನು ಹೊಂದಿದ್ದರೂ, ಯಜ್ಞಯಾಗಾದಿ ಗಳ ಸತ್ಫಲಗಳನ್ನು ಹೊಂದಿದ್ದರೂ, ಆಗಮಶಾಸ್ತ್ರಗಳನ್ನೆಲ್ಲ ಓದಿ ಭಾಗವತನೆಂದು ಹೆಸರು ಗಳಿಸಿದ್ದರೂ, ಮಾನಸಿಕ ಶಾಂತಿಯಿಲ್ಲದೆ ಸೌಖ್ಯವಿಲ್ಲ.

ಶಾಂತಮುಲೇಕ ಸೌಖ್ಯಮುಲೇದು - ಸಾರಸದಳನಯನ
ದಾಂತುನಿಕೈನ ವೇದಾಂತುನಿಕೈನ

ದಾರಸುತುಲು ಧನ ಧಾನ್ಯಮುಲುಂಡಿನ
ಸಾರೆಕು ಜಪತಪ ಸಂಪದಗಲ್ಗಿನ
ಆಗಮ ಶಾಸ್ತ್ರಮುಲನ್ನಿಯು ಚದಿವಿನ
ಬಾಗುಗ ಸಕಲ ಹೃದ್ಭಾವಮು ದೆಲಿಸಿನ
ಯಾಗಾದಿ ಕರ್ಮಮು ಲನ್ನಿಯು ಜೇಸಿನ
ಭಾಗವತುಲನುಚು ಬಾಗುಗ ಪೇರ್ಕೈನ . . . . .

**ವಾತ್ಸಲ್ಯ ಭಾವ**

ಜಗನ್ನಿಯಾಮಕನಾದ ದೇವರನ್ನೇ ತನ್ನ ಮಗುವೆಂದು ಭಾವಿಸಿದ ಭಕ್ತನು ಸ್ವತಃ ತಾಯಿ ಅಥವಾ ತಂದೆಯ ಸ್ಥಾನದಲ್ಲಿ ನಿಂತು ವಾತ್ಸಲ್ಯದ ಪೂರ ಹರಿಸುವುದೇ ವಾತ್ಸಲ್ಯ ಭಾವ. ಈ ಭಾವದಲ್ಲಿ ದೇವರು ಭಕ್ತನ ಕೈಗಳಲ್ಲಿ ಮಗುವೇ ಆಗುತ್ತಾನೆ. ತಾಯಿ ಮಕ್ಕಳ ಪ್ರೀತಿ ವಿಶ್ವಾಸಗಳು ಎಲ್ಲ ಬಾಂಧವ್ಯಗಳಿಗಿಂತ ಮಿಗಿಲಾದುದು. ಏಕೆಂದರೆ ಭಕ್ತನಿಲ್ಲಿ ಪ್ರತಿಫಲಾಪೇಕ್ಷೆಯ ಪರಿಮಿತಿಯನ್ನು ಮೀರಿ, ತನ್ನ ಮಗುವಿನ ಲಾಲನೆ ಪಾಲನೆಯಲ್ಲಿ ಅಸೀಮ ಶಾಂತಿ ಸುಖಗಳನ್ನು ಪಡೆಯುತ್ತಾನೆ. ಅಂತೆಯೇ ದೇವರೂ ತನ್ನ ಭಕ್ತ ತನಗೆ ಮಾಡುವ ಎಲ್ಲ ರೀತಿಯ ಆರೈಕೆ, ಉಪಚಾರಗಳನ್ನೂ ಮುಗ್ಧನಂತೆ ಸ್ವೀಕರಿಸುತ್ತಾನೆ. ಭಕ್ತ ತನ್ನ ಮುದ್ದು ಮಗುವಿನ ರೂಪದ ದೇವರನ್ನು ಬೆಳಗಾಯಿತೆಂದು ಎಬ್ಬಿಸುತ್ತಾನೆ, ಸ್ನಾನ ಮಾಡಿಸುತ್ತಾನೆ, ಹಾಲೂಡಿಸುತ್ತಾನೆ, ತೂಗಿ ಲಾಲಿ ಹಾಡುತ್ತಾನೆ, ಚೇಷ್ಟೆ ತಡೆಯದಾದಾಗ ಶಿಕ್ಷಿಸುತ್ತಾನೆ. ಅತ್ತಾಗ ಅಳುವಿಗೆ ಕಾರಣವೇನೆಂದು ಕೇಳುತ್ತಾ ಸಂತೈಸುತ್ತಾನೆ. ದೃಷ್ಟಿ ತಾಗಿತೆಂದು ರಕ್ಷೆಯಿಡುತ್ತಾನೆ. ಹೀಗೆ ಒಬ್ಬ ತಾಯಿ ಅಥವಾ ತಂದೆ ತನ್ನ ಮಗುವನ್ನು ಎಷ್ಟೆಷ್ಟು ರೀತಿಯಲ್ಲಿ ಲಾಲಿಸ ಬಲ್ಲರೋ ಅಷ್ಟೇ ಅಚ್ಚುಕಟ್ಟಾಗಿ ಭಕ್ತ ದೇವರನ್ನು ಲಾಲಿಸುತ್ತಾನೆ. ಈ ಹಂತದಲ್ಲಿ ಸ್ವಲ್ಪಮಟ್ಟಿಗೆ ಭಗವಂತನ ಶಕ್ತಿಯು ಭಕ್ತನಿಗೆ ವರ್ಗವಾಗಿರುತ್ತದೆ. ಇಚ್ಛಾಪೂರ್ವಕ ವಾಗಿಯೇ ದೇವರು ಭಕ್ತನಿಗೆ ಇಂಥ ಶಕ್ತಿಯನ್ನು ನೀಡಿ ಆತನಿಗಿಂತ ತಾನು ಕಿರಿಯನೆಂಬಂತೆ ವರ್ತಿಸುತ್ತಾನೆ. ಇದು ದೇವರ ಸೌಲಭ್ಯರೂಪವಲ್ಲದೆ ಬೇರೆಯಲ್ಲ. ಹೀಗೆಂದೇ ಆತನಿಗೆ '**ಸದ್ಭಕ್ತ ಸುಲಭ**'ನೆಂಬ ಕೀರ್ತಿ ಇರುವುದು.

ವಾತ್ಸಲ್ಯವು ಮುಖ್ಯವಾಗಿ ಕೃಷ್ಣಾವತಾರಕ್ಕೆ ಸಂಬಂಧಿಸಿದುದು. ಭಾಗವತದಲ್ಲಿ ಶ್ರೀಕೃಷ್ಣನ ಆಟಪಾಟಗಳನ್ನು ನೋಡಿ ಯಶೋದೆ ಹಿಗ್ಗುತ್ತಾಳೆ. ಚೇಷ್ಟೆ ಗಲಾಟೆಗಳನ್ನು ತಾಳಲಾರದೆ ಶಿಕ್ಷಿಸುತ್ತಾಳೆ, ಮುದ್ದಾದ ಮಗುವಿಗೆ ಇತರರ ದೃಷ್ಟಿ ತಾಗೀತೆಂದು ರಕ್ಷೆಯಿಡುತ್ತಾಳೆ.[೪] ಅದರ ಪೂರ್ಣ ರಕ್ಷಣೆಗೆ ತನ್ನ ಜೀವವನ್ನೇ ನೀಡಲು ಸಿದ್ಧಳಾಗು ತ್ತಾಳೆ. ಹೀಗೆ ಯಶೋದೆ-ಕೃಷ್ಣರು ವಾತ್ಸಲ್ಯಭಾವಕ್ಕೆ ಅತ್ಯುತ್ತಮವಾದ ಒಂದು ಉದಾಹರಣೆ. ದಾಸಸಾಹಿತ್ಯದಲ್ಲಿ ಈ ಭಾವದ ರಚನೆಗಳನ್ನು ಅಧಿಕವಾಗಿ ಕಾಣಬಹುದಾದರೂ ತ್ಯಾಗರಾಜರಲ್ಲಿ ವಿರಳವಾಗಿ ಈ ಭಾವವನ್ನು ಕಾಣಬಹುದು. ಭಾಗವತದಲ್ಲಿ ಕೃಷ್ಣನ

ಬಾಲಲೀಲೆಗಳ ರೀತಿಯಲ್ಲೇ ತ್ಯಾಗರಾಜರು ರಾಮನ ಬಾಲಲೀಲೆಯನ್ನೊಳಗೊಂಡಂತೆ ಹಾಡುತ್ತಾರೆ.

ತ್ಯಾಗರಾಜರ ಕೃತಿ ಭಂಡಾರದಲ್ಲಿ ವಾತ್ಸಲ್ಯಭಾವಕ್ಕೆ ಅತ್ಯುತ್ತಮ ಉದಾಹರಣೆ ಯೆಂದರೆ 'ಶಹನ' ರಾಗದ 'ರಾಮರಾಮರಾಮಲಾಲಿ.' ಇಲ್ಲಿ ತ್ಯಾಗರಾಜರು ತಾವು ಕೌಸಲ್ಯೆಯೋ ಎಂಬ ಭಾವದಿಂದ ಹಾಡುತ್ತಾರೆ. ರಾಮ ಅವರಿಗೆ ಉತ್ತರಿಸುತ್ತಾನೆ.

ಕೌಸಲ್ಯೆ - 'ಅಲಭ್ಯನಾದ ನಿಧಿಯೇ, ದೊರೆಗಳ ದೊರೆಯೇ ತೊಟ್ಟಿಲಿಗೆ ಬಾ. ಶ್ರೇಷ್ಠರಾದ ದೇವತೆಗಳಿಗೂ ಸಿಗಲಾರದ ನೀನು ನನ್ನ ಪೂರ್ವ ಸುಕೃತದ ಫಲವಾಗಿ ದ್ದೀಯೆ. ಈ ಧರೆಯಲ್ಲಿ ರಾರಾಜಿಸುವ ಸೂರ್ಯವಂಶದ ನಿಧಿ ನೀನು. ಕಲಕಲ ನಿನಾದ ದೊಂದಿಗೆ ಸನಿಹ ಬರುತ್ತಿಲ್ಲವೇಕೆ ? ಹಸಿವಾಗಿದೆಯೆ ? ನಿನ್ನೀ ದುಃಖಕ್ಕೆ ಕಾರಣ ವಾದರೂ ಏನು ?'

ರಾಮ - ಗೆಳೆಯರು ಆಟಕ್ಕೆ ಕರೆದು ಅನಂತರ 'ನೀನು ಬೇಡ ಹೋಗು' ಎಂದರು.

ಕೌಸಲ್ಯೆ - ನಿನ್ನಲ್ಲಿನ ಯಾವ ತಪ್ಪಿಗಾಗಿ ನಿನ್ನನ್ನು ಆಟಕ್ಕೆ ಬೇಡವೆಂದರು ಮಗು ?

ರಾಮ - ಕಣ್ಣು ಮುಚ್ಚಾಲೆಯಾಡಿ, ನನ್ನ ಕಣ್ಣುಗಳು ಅವರ ಕೈಗೆ ನಿಲುಕುವುದಿಲ್ಲ ಎಂದು ಗೊಣಗಿದರು. (ದೇವರು ವಿಶಾಲನೇತ್ರನೆಂಬುದು ಇಲ್ಲಿನ ಭಾವ.)

ಕೌಸಲ್ಯೆ - ತಾವರೆ ಎಲೆಯನ್ನು ಹೋಲುವ ಕಣ್ಣುಗಳು ಕ್ಷೋಭೆಗೊಂಡಿವೆ ಏಕೆ ? ಹಣೆಯಲ್ಲಿ ಬೆವರೇಕೆ ? ವಿವರವಾಗಿ ಹೇಳು, ಕಂದಾ.

ರಾಮ - ನೀನು ಯೋಚಿಸಿ ಅವಿತುಕೊಂಡರೂ, ನಿನ್ನ ದೇಹಕಾಂತಿಯಿಂದ ನೀನಿರುವ ಜಾಗ ತಿಳಿಯುತ್ತದೆ ಎಂದು ಟೀಕಿಸಿದರು.

ಕೌಸಲ್ಯೆ - ಸತ್ಯಸಂಧನೇ, ನಿನ್ನ ಮುತ್ತಿನಹಾರಗಳೇಕೆ ಗೋಜಲಾಗಿವೆ ? ಕಾಲಂದುಗೆ ಗಳೇಕೆ ಇರುಕಿವೆ ?

ರಾಮ - ನಾನವರನ್ನು ಹಿಡಿಯುವಾಗ ಗೆಳೆಯರು ನನ್ನೆಡೆಗೆ ಬಂದು ಮತ್ತೆ ಮತ್ತೆ ನನ್ನ ಕಾಲೆಡೆಗೆ ಬಗ್ಗಿದ್ದರು.

ಕೌಸಲ್ಯೆ - ನಿನ್ನನ್ನು ಗೆಳೆಯರು ಏನೆಂದು ಕರೆದರು ? ನೀನು ಯಾರೆಂದು ತಿಳಿದರು?

ರಾಮ - ತ್ಯಾಗರಾಜನಿಂದ ಸ್ತುತಿಸಲ್ಪಡುವ ದೇವರೆಂದು ಕರೆದು ನಾನೇ ಎಲ್ಲಕ್ಕೂ ಸಾಕ್ಷಿಯೆಂದು ಹೇಳಿದರು.

**ರಾಮರಾಮರಾಮ ಲಾಲಿ ಶ್ರೀರಾಮ**
**ರಾಮರಾಮ ಲಾವಣ್ಯ ಲಾಲಿ**
**ದೊರಕರಾನಿ ನಿಧಿರಾರಾ ದೊರಕುದೊರವು ನೀವು ತೊಟ್ಲಲೋರಾರಾ**
**ವರಮೈನಟ್ಟಿ ನಾ ಪಟ್ಟಿರಾರಾ ವರಸುರುಲಕು ಅರುದೈನ ಸುಂದರ ರಾರಾ**
**ತೊಲಿ ಜೇಸಿನ ನೋಮುಫಲಮಾ ರಾಮ ಇಲನುವೆಲಯು ಇನಕುಲಧನಮಾ**
**ಕಲಕಲಮನಿರಾವು ಚೆಂತ ಆಕಲಿಗೊಂಟಿವೋ ಕರುಣಾಸ್ವಾಂತ**
**ಮದಗಜಗಮನ ನಾಸ್ವಾಮಿ ಓ ಸದಯುಡ ನೀಲೋನಿ ಜಾಲಿದೆಲ್ಪುಮೀ**

**ಸರಿಬಾಲಲು ಆಡರಮ್ಮನಿರಿ ಆಡಿ ವರದ ರಾವದ್ದು ಪೊಮ್ಮನಿರಿ**
**ಎವರು ನಿನ್ನು ಏಮನಿರಿ ರಾಘವ ನೀಯೆಡ ತಪ್ಪೇಕನಿ ರಾವದ್ದನಿರಿ**
**ಕನುಲು ಮೂಸಿಯಾಡಿ ನಾರು ಕರಮುನಕಣಗನಿ ನೇತ್ರಮನಿ ಕಸರೆದರು**
**ಕಲುವ ರೇಕುಲನು ಬೋಲುಕನುಲು ಕಲಗನೇಲ ನನ್ನುಕನ್ನದಯಾಳೋ**
**ನುದುಟನು ಶ್ರಮಜಲಮೇಲ ಆ ಕಥಯೇಮಿ ತೆಲುಪವೇ ಕರುಣಾಲವಾಲ**
**ಚಿಂತಿಂಚೇ ದಾಗುದುವೇರೇ ಮೇನಿ ಕಾಂತಿಚೇದಗಿಲಿನ ಕರ್ಮಮನೇರೇ**
**ಮುತ್ಯಾಲ ಸರುಲ ಚಿಕ್ಕೇಮಿ ಓ ಸತ್ಯಸಂಧ ಪಾದಸರುಲ ನೊಕ್ಕೇಮೀ**
**ಮುದಮುನ ನೇ ಪಟ್ಟುವೇಳ ನಾ ಪದಮುನ ವ್ರಾಲೆದರು ಪಲುಮಾರಾವೇಳ**
**ನಿನ್ನೇಮನಿ ಪಿಲ್ಚುಕೊನಿರಿ ರಾಮಾ ಮನ್ನನತೋ ನೇಮನಿ ಯೆಂಚುಕೊನಿರಿ**
**ಬಾಗಸಾಕ್ಷಿ ರಮ್ಮನಿರಿ ವರ ತ್ಯಾಗರಾಜನುತ ದೈವಮಾಯನಿರಿ**

**(ರಾಮರಾಮರಾಮಲಾಲಿ)**

ಇಲ್ಲಿ ಭಕ್ತನೇ ಭಗವಂತನ ದುಃಖವೇನೆಂದು ವಿಚಾರಿಸುತ್ತಿದ್ದಾನೆ ಎಂಬುದು ಮುಖ್ಯಾಂಶ. ಶ್ರೀರಾಮನ ಪರತ್ವಗುಣವು ಆತನನ್ನು ತೊಟ್ಟಿಲಿಗೆ ಕರೆಯುವಲ್ಲಿ, ಕಣ್ಣು ಮುಚ್ಚಾಲೆಯಾಟದ ಕಣ್ಣುಮುಚ್ಚುವಲ್ಲಿ ವ್ಯಕ್ತಗೊಂಡಿವೆ. ಜಗದ್ವ್ಯಾಪಿಯಾದ ದೇವರನ್ನು ಸಣ್ಣತೊಟ್ಟಿಲೊಂದರಲ್ಲಿ ಮಲಗಿಸಲಾದೀತೇ ? ಅದಕ್ಕೆಂದೇ ಭಕ್ತನಿಲ್ಲಿ 'ತೊಟ್ಟಿಲಿಗೆ ಬಾ' (ತೊಟ್ಲಲೋರಾರಾ) ಎಂದು ವಿಶ್ವಾಂತಸ್ಥನನ್ನು ಆಹ್ವಾನಿಸುವಾಗ 'ಸಣ್ಣ ಆಕಾರದಲ್ಲಿ ಬಾ' ಎಂಬ ಸೂಚನೆಯೊಂದಿಗೆ ಕರೆಯುತ್ತಿದ್ದಾನೆ. ಇದರಂತೆಯೇ ಜಗತ್‌ಸಾಕ್ಷಿಯಾದ ದೇವರ ಕಣ್ಣುಗಳನ್ನು ಕಿರಿದಾದ ಕೈಗಳಿಂದ ಮುಚ್ಚಲಾದೀತೇ ? ಅವು ಕರಗಳಿಗೆ ನಿಲುಕದುದು (ಕರಮುನಕಣಗನಿ). ಇವುಗಳ ಹಿನ್ನೆಲೆಯಲ್ಲಿ ದೇವರ ಪರತ್ವದ ಅರಿವು ಭಕ್ತನಿಗಿದೆ.

ವಾತ್ಸಲ್ಯಭಾವದಲ್ಲೇ ತ್ಯಾಗರಾಜರು ಬಾಲಕನಾದ ಶ್ರೀರಾಮನನ್ನು ಒರಳಿಗೆ ಕಟ್ಟಿದ ಸಂದರ್ಭಗಳನ್ನು ಇತರ ಕೃತಿಗಳಲ್ಲಿ ಸ್ಮರಿಸಿದ್ದಾರೆ.

**ರೋಟಿಕಿ ಕಟ್ಟದಗಿನ ನೀ ಲೀಲಲು**

**(ತಲಚಿನಂತನೇ)**

**ಕಲಿಕಿ ರೋಟ ಗಟ್ಟುನಾ**

**(ಅಪ್ಪರಾಮಭಕ್ತಿ)**

**ಉಲೂಖಲ ಬದ್ಧನಿಕಿ ನಿಜದಾಸುಡ್ಕೆ**

**(ಕಡತೇರರಾದ)**

ತ್ಯಾಗರಾಜರಲ್ಲಿ ವಾತ್ಸಲ್ಯದ ಮತ್ತೊಂದು ರೂಪವನ್ನೂ ಕಾಣಬಹುದು. ಎಂದರೆ ದೇವರನ್ನು ಮಗುವಾಗಿ ಭಾವಿಸಿರುವುದು ವಾತ್ಸಲ್ಯದ ಒಂದು ಮುಖವಾದರೆ, ದೇವರೇ ತಾಯಿತಂದೆಯಾಗಿ ತಾವು ಆತನ ಮಗುವಿನ ಸ್ಥಾನದಲ್ಲಿರುವಂತೆ ಕಲ್ಪಿಸಿಕೊಳ್ಳುವುದು. ಅವರು ಒಂದೆಡೆ ಹೀಗೆನ್ನುತ್ತಾರೆ. 'ಬಾಲಕನೊಬ್ಬನನ್ನು ಇತರರು ಗದರಿಸಿದಾಗ

ಬಾಲಕನ ತಾಯ್ತಂದೆಯರು ಮಗುವನ್ನು ಸಂತೈಸಿ ಅಪ್ಪಿಕೊಳ್ಳುವುದಿಲ್ಲವೆ ? ನಾನು ನಿನಗೆ ಬಾಲಕನಲ್ಲವೆ ?

**ವಾದಾಡುಚು ಬಾಲುಡು ಯೆಚ್ಚಟವಾಡವು ? ನಿಲುರಾ ಬುದ್ಧಿ**
**ಲೇದಾ ? ಯನ ತಾಳಿಮಿಗಲವಾರ್ಕೈ ತಲ್ಲಿತಂಡ್ರುಲುಜೂಚಿ**
**ಮೋದಮುತೋ ದನಯುಲನುಚುನು ಮುದ್ದುಪೆಟ್ಟಿ**
**ಕೌಗಿಲಿಗೂರ್ಚಲೇದಾ ? ಯಟುನೇಗಾದಾ ?**

(ನಾಯೆಡವಂಚನ)

ಇನ್ನೊಂದೆಡೆ 'ಯಾವ ವರ್ಗದಲ್ಲೇ ಆಗಲಿ, ಮಗನನ್ನು ಸಂರಕ್ಷಿಸದ ತಾಯಿ ಈ ಪೃಥ್ವಿಯಲ್ಲುಂಟೇ ?' ಎನ್ನುವಾಗ ತ್ಯಾಗರಾಜರ ಪಾಲಿಗೆ ದೇವರು ತಾಯಿಯಾಗಿದ್ದಾನೆ. ಮನುಷ್ಯರಲ್ಲೇ ಆಗಲಿ ಅಥವಾ ಪ್ರಾಣಿಗಳಲ್ಲೇ ಆಗಲಿ, ಮಾತೃವಾತ್ಸಲ್ಯವೆಂಬುದು ಸಹಜವಾದುದು. ಈ ಭಾವದಿಂದ ಯಾರೂ ಹೊರತಲ್ಲ ಎಂಬ ಭಾವವಿದೆ, ಇಲ್ಲಿ.

**ತನಯುನಿ ಏ ಜಾತಿನೈನ ಬ್ರೋವನಿ**
**ತಲ್ಲಿಯು ಭುವಿನಿ ಗಲದಾ ?**

(ರಾಮರಾಮರಾಮ ನಾಪೈ ನೀದಯ)

ಇದರಂತೆಯೇ ಮತ್ತೊಂದೆಡೆ 'ತಾಯಿಯ ಸ್ಥಾನದಲ್ಲಿರುವ ದೇವರು ತಮ್ಮನ್ನು ಶಿಕ್ಷಿಸಿದ ಮಾತ್ರಕ್ಕೆ ಮಗುವಾದ ತಾವು ತಾಯಿಯನ್ನು ಬಿಡುವೆನೇ ?' ಎನ್ನುತ್ತಾರೆ. ಇಲ್ಲಿನ ಈ ಅನುಬಂಧವೇ ಶಿಶು-ಮಾತಾ ಭಾವದ ಸಾರ. ಈ ಕಲ್ಪನೆ ತ್ಯಾಗರಾಜರ ಕೆಳಗಿನ ಮಾತಿನಲ್ಲಿದೆ.

**ತಲ್ಲಿಗೊಟ್ಟಿತೇ ಸರಗುನ ಬಾಲುಡು ಪದ**
**ಪಲ್ಲವಮುಲು ವಿಡುಚುನಾ ?**

(ಶ್ರೀರಾಮಚಂದ್ರ ರಾಘವ)

ಇದೇ ರಚನೆಯಲ್ಲಿ ದೇವರನ್ನು ತಾಯಿ-ತಂದೆ ಎರಡೂ ಸ್ಥಾನಗಳಲ್ಲಿ ಇರಿಸಿ ತಾವಾಡಿದ ಹಗುರವಾದ ಮಾತುಗಳನ್ನು ಕ್ಷಮಿಸುವುದಿಲ್ಲವೇ? ಎನ್ನುತ್ತಾರೆ.

**ಸುತುನಿ ಮಾಟಕು ತಲ್ಲಿತಂಡ್ರುಲು ಯ**
**ಸೂಯ ಬಡುಟಗಲದಾ**

(ರಾಮರಾಮರಾಮ ನಾಪೈನೀದಯ)

ತ್ಯಾಗರಾಜರು ದೇವರಿಗೆ ಹೇಳುವ ಸುಪ್ರಭಾತ, ಲಾಲಿ, ನೈವೇದ್ಯ, ರಕ್ಷೆಹಚ್ಚುವುದು ಮುಂತಾದವುಗಳನ್ನು ವಾತ್ಸಲ್ಯಭಾವದಲ್ಲೂ, ಉತ್ಸವ ಸಂಪ್ರದಾಯ ಕೀರ್ತನೆಗಳ ಸಾಲಿನಲ್ಲೂ ಅಧ್ಯಯನ ಮಾಡಬಹುದು. ಇವುಗಳನ್ನು ಈಗಾಗಲೇ ಸಂಗೀತಭಾಗದಲ್ಲಿ ಅಧ್ಯಯನ ಮಾಡಲಾಗಿರುವುದರಿಂದ ಇಲ್ಲಿ ಕೈಬಿಡಲಾಗಿದೆ.

ತ್ಯಾಗರಾಜರು ನಿರೂಪಿಸಿರುವ ವಾತ್ಸಲ್ಯಭಾವದಲ್ಲಿನ ಮತ್ತೊಂದು ವೈಶಿಷ್ಟ್ಯ. ವೆಂದರೆ, ರಾಮನ ತಾಯಿತಂದೆಯರಾದ ಕೌಸಲ್ಯೆ ಮತ್ತು ದಶರಥರ ಪೂರ್ವಪುಣ್ಯ

ವನ್ನು ಸ್ಮರಿಸಿ ಆನಂದಹೊಂದುವುದು. ಈ ಸಂದರ್ಭದಲ್ಲಿ ತ್ಯಾಗರಾಜರು ಹೀಗೆನ್ನುತ್ತಾರೆ.

'ಶಾಂತಿಯುತವಾದ ಶ್ರೀರಾಮನ ಕೆನ್ನೆಗಳಿಗೆ ಮುದ್ದಿಡಲು ಮಾತೆ ಕೌಸಲ್ಯೆ ಮಾಡಿದ ತಪಸ್ಸು ಯಾವುದು ! ಅಂತೆಯೇ ಸಾಕ್ಷಾತ್ ಪರಮಾತ್ಮನನ್ನು ಪುತ್ರವಾತ್ಸಲ್ಯದಿಂದ 'ಬಾರೋ' ಎಂದು ಕರೆಯಲು ದಶರಥನು ಆಚರಿಸಿದ ತಪಸ್ಸು ಯಾವುದು !'

**ತಳುಕು ಚೆಕ್ಕುಲ ಮುದ್ದುಬೆಟ್ಟ ಕೌಸಲ್ಯ ಮುನು**
**ತಪಮೇಮಿ ಜೇಸೆನೋ .......................**
**ದಶರಥುಡು ಶ್ರೀರಾಮ ರಾರಾಯನಿ ಬಿಲುವ ಮುನು**
**ತಪಮೇಮಿ ಜೇಸೆನೋ .........................**

**(ಶ್ರೀರಾಮ ಜಯರಾಮ ಶೃಂಗಾರರಾಮ)**

ಪ್ರಸ್ತುತ ಸಾಲುಗಳಲ್ಲಿ ಮಾತೃದೇವೋಭವ, ಪಿತೃದೇವೋಭವ ಎಂಬ ಪ್ರಾಚೀನ ಸಂಪ್ರದಾಯದಂತೆ[೫] ತ್ಯಾಗರಾಜರು ಮೊದಲಿಗೆ ಕೌಸಲ್ಯೆಯನ್ನು ನೆನೆದು ಅನಂತರ ದಶರಥನನ್ನು ನೆನೆಯುವುದು ಗಮನಾರ್ಹ.

ಹೀಗೆ ತ್ಯಾಗರಾಜರ ವಾತ್ಸಲ್ಯ ಚಿತ್ರಣದಲ್ಲಿ ತ್ಯಾಗರಾಜರೇ ಮಾತೃಸ್ಥಾನದಲ್ಲಿ ನಿಂತು ದೇವರನ್ನು ಮಗುವಿನ ಸ್ಥಾನದಲ್ಲಿ ಭಾವಿಸುವ ಒಂದು ಮುಖವನ್ನೂ, ತ್ಯಾಗರಾಜರು ಮಗುವಿನ ಸ್ಥಾನದಲ್ಲಿದ್ದು ದೇವರು ತಾಯ್ತಂದೆಯರ ಸ್ಥಾನವಹಿಸಿದ ಇನ್ನೊಂದು ಮುಖವನ್ನೂ ಕಾಣುತ್ತೇವೆ.

**ಮಧುರಭಾವ**

ಆತ್ಮಾರ್ಪಣೆಯ ಪರಾಕಾಷ್ಠೆಯನ್ನು ಮಧುರಭಾವದಲ್ಲಿ ಕಾಣಬಹುದು. ವಾಸ್ತವವಾಗಿ ದೇವರು ಮತ್ತು ಭಕ್ತನ ನಡುವೆ ಸತಿ-ಪತಿ ಭಾವವನ್ನು ಆರೋಪಿಸಿಕೊಂಡು ಮಾಡುವ ಆರಾಧನೆಯೇ 'ಮಧುರಭಾವ.' ಇದನ್ನು ನಾಯಕ-ನಾಯಿಕಾಭಾವ, ಭಾರ್ಯಾ-ಭರ್ತೃಭಾವ ಹಾಗೂ ಮಧುರ ರಸಗಳೆಂದೂ ಗುರುತಿಸುವುದುಂಟು. ಮಧುರ ಭಾವದಲ್ಲಿ ಪ್ರೇಮವು, ಮಾನವರಲ್ಲಿ ಕಾಣುವ ಆಕರ್ಷಣೆ, ಆಸೆ, ಆತುರ, ಆತಂಕ, ಭೀತಿ, ರೋಷ ಮತ್ತು ತೃಪ್ತಿ ಮೊದಲಾದ ವಿವಿಧ ಮುಖಗಳನ್ನು ಉಳ್ಳದ್ದಾದರೂ ಅದು ಅಲೌಕಿಕತೆಯ ಎಲ್ಲೆಯನ್ನು ಪ್ರವೇಶಿಸಿರುತ್ತದೆ. ಲೌಕಿಕ ಮಟ್ಟದಲ್ಲಿರುವುದಿಲ್ಲ. ದೇಹಸಂಬಂಧವೇ ಇಲ್ಲದ ಜೀವಾತ್ಮ ಪರಮಾತ್ಮಗಳ ಮಿಲನದ ಗುರಿ ಇಲ್ಲಿಯದು.

ಮಧುರಭಾವದ ಆರಾಧನೆ ಪ್ರಾಚೀನವಾದುದೇ. ನಾರದರ ಭಕ್ತಿಸೂತ್ರವು ಇದನ್ನು 'ಕಾಂತಾಸಕ್ತಿ' ಎನ್ನುತ್ತದೆ.[೬] ಭಾಗವತದ ದಶಮಸ್ಕಂದದಲ್ಲಿ ಈ ಭಾವದ ಸೊಗಸಾದ ಚಿತ್ರಣವಿದೆ.[೭] ಶ್ರೀಕೃಷ್ಣ ಚೈತನ್ಯರೂ ಮತ್ತು ಅವರ ಅನುಯಾಯಿಗಳೂ ಈ ಭಾವದ ಆರಾಧನೆಗೆ ವಿಶೇಷ ಪ್ರಾಧಾನ್ಯ ನೀಡಿ ಇದನ್ನು ವ್ಯವಸ್ಥೆಗೊಳಿಸಿದ್ದಾರೆ. ಈ ಭಾವದ ಇನ್ನಿತರ ಉದಾಹರಣೆಗಳೆಂದರೆ ನಮ್ಮಾಳ್ವಾರ್, ಆಂಡಾಳ್, ಅಕ್ಕಮಹಾದೇವಿ,

ಮೀರಾಬಾಯಿ ಮೊದಲಾದವರು. ವಾತ್ಸಲ್ಯಭಾವದಂತೆ ಮಧುರಭಾವವೂ ಮುಖ್ಯ ವಾಗಿ ಕೃಷ್ಣಾವತಾರಕ್ಕೆ ಸಂಬಂಧಿಸಿದುದು.

ಕ್ರೈಸ್ತ ಧರ್ಮದಲ್ಲಿ ಚರ್ಚನ್ನು ವಧುವೆಂದೂ, ಕ್ರೈಸ್ತನನ್ನು ವರನೆಂದೂ ಪರಿಗಣಿಸಿರು ವುದುಂಟು. ಸಾಲೋಮನ್ ಗೀತೆಯಲ್ಲಿ ಹಾಗೂ ಸಂತ ಜಾನನ The Dark Night ನಲ್ಲಿ ಈ ಭಾವದ ಪ್ರಸ್ತಾಪವಿದೆ.[೮]

ಮಧುರಭಾವದ ಸಾರವು ಕೆಳಗಿನ ಸಂಸ್ಕೃತ ಶ್ಲೋಕದಲ್ಲಿ ಸುಂದರವಾಗಿ ಅಡಗಿದೆ.

**ಸ ಏವ ವಾಸುದೇವೋ ಸೌ ಸಾಕ್ಷಾತ್ ಪುರುಷ ಉಚ್ಯತೇ ।**
**ಸ್ತ್ರೀ ಪ್ರಾಯಂ ಇತರತ್ ಸರ್ವಂ ಜಗದ್ಬ್ರಹ್ಮ ಪುರುಸ್ಸರಂ ॥**[೯]

ಈ ಮಾತಿನಂತೆ ಸಾಕ್ಷಾತ್ ವಾಸುದೇವನೊಬ್ಬನೇ ಪುರುಷ. ಜಗತ್ತಿನ ಜೀವಿಗಳೆ ಲ್ಲರೂ (ಮಾನವ) ಸ್ಫೂರ್ತಿಯಲ್ಲಿ ಸ್ತ್ರೀಯರೇ ಆಗಿದ್ದಾರೆ. ಜೀವಿಯೊಂದು ಅಧ್ಯಾತ್ಮ ದಲ್ಲಿ ಬ್ರಹ್ಮಾನಂದ ಸ್ಥಿತಿಗೆ ಏರಬೇಕಾದರೆ ಅದು ಸ್ಫೂರ್ತಿಯಲ್ಲಿ ಸ್ತ್ರೀಯಾಗಬೇಕು. ಇದನ್ನೇ ಕಾರ್ಡಿನಲ್ ನ್ಯೂಮನ್ ಎಂಬಾತ ಹೀಗೆನ್ನುತ್ತಾನೆ. 'If the soul is to go on into higher spiritual blessedness, it must become woman.'[೧೦]

ಮಧುರಭಾವದ ಆರಾಧನೆಯ ಹಿರಿಮೆಗೆ ಕಾರಣಗಳು ಎರಡು. (೧) ಇದು ಮಾನವರಲ್ಲಿರುವ ಇತರ ಎಲ್ಲ ಸಂಬಂಧಗಳಿಗಿಂತ ಶಕ್ತಿಯುತವಾದ ಸತಿ-ಪತಿ ಸಂಬಂಧವನ್ನು ಆಧರಿಸಿರುವುದು, ಅದು ದೇವರೆಡೆಗೆ ಸೆಳೆಯಲ್ಪಟ್ಟಿರುವುದು. (೨) ಈ ಭಾವದ ಆರಾಧನೆಯಲ್ಲಿನ ಕ್ಲಿಷ್ಟತೆ ಹಾಗೂ ಅಪಾಯಗಳು. ಎಂದರೆ ಮನುಷ್ಯನಿಲ್ಲಿ ಕೀಳು ಕಾಮಕ್ಕೆ ಬಲಿಯಾಗುವ ಸಂಭವವು ಅಧಿಕ. ಆದ್ದರಿಂದ ಇಲ್ಲಿ ಪರಿಶುದ್ಧ ಮನಸ್ಸು ಮತ್ತು ಪವಿತ್ರ ದೃಷ್ಟಿ ಅತ್ಯಗತ್ಯ. ವಾಸ್ತವವಾಗಿ ಇಲ್ಲಿನ ಕಾಮ-ಪ್ರೇಮಗಳ ಸಮನ್ವಯದಲ್ಲಿ ಯಾವುದೂ ಕೀಳಲ್ಲ. ಸಾಧನವೊಂದರ ಪವಿತ್ರತೆಯು ಅದರ ಗುರಿಯ ಸ್ವರೂಪದಿಂದಲೂ, ಅದನ್ನು ನಾವು ಕಾಣುವ ದೃಷ್ಟಿಯಿಂದಲೂ ನಿರ್ಧಾರ ವಾಗುತ್ತವೆ. ಗುರಿ ಮತ್ತು ಕಾಣುವ ರೀತಿ ಅಶುದ್ಧವಾಗಿದ್ದಲ್ಲಿ ಸಾಧನವೆಷ್ಟೇ ಪವಿತ್ರ ವಾದರೂ ಅದು ಅರ್ಥವನ್ನು ಕಳೆದುಕೊಳ್ಳುತ್ತದೆ. ಆದ್ದರಿಂದ ದೇವರೆಡೆಗೆ ಪರಿವರ್ತಿ ಸಲ್ಪಟ್ಟ ಯಾವುದೇ ಭಾವವೂ ಅಪವಿತ್ರವಲ್ಲ. ಕಾಮತತ್ತ್ವವನ್ನೇ ಆಧರಿಸಿ ಋಷಿಗಳ ಅವತಾರವೆನ್ನಲಾದ ಗೋಪಿಯರು ಮುಕ್ತಿ ಪಡೆದರು. ಪ್ರಾಪಂಚಿಕ ವಿಷಯಗಳಿಗೆ ಸಂಬಂಧಿಸಿದ ಕಾಮವು ಮನುಷ್ಯನನ್ನು ಬಂಧನಕ್ಕೆ ದೂಡಿದರೆ, ದೇವರಿಗೆ ಸಂಬಂಧಿಸಿ ದಂತೆ ಅದು ಅವನನ್ನು ಉನ್ನತಿಗೇರಿಸುತ್ತದೆಂಬುದನ್ನು ಇದು ಮನದಟ್ಟು ಮಾಡು ತ್ತದೆ.

ಇನ್ನು ನಮ್ಮ ಕರ್ನಾಟಕದ ಅನುಭಾವಿಗಳ ಪರಿಭಾಷೆಯಲ್ಲಿ ಮಧುರಭಾವದ ಸೂತ್ರ 'ಲಿಂಗಪತಿ-ಶರಣಸತಿ', 'ಜೀವಸತಿ-ದೇವಪತಿ' ಯಾಗಿದೆ.[೧೧] ಇಡೀ ಜಗತ್ತಿನಲ್ಲಿ ಜೀವರನ್ನು ಸ್ತ್ರೀಯಾಗಿ ದೇವರನ್ನು ಪುರುಷನಾಗಿ ಪ್ರತ್ಯೇಕಿಸುವ ಹಿನ್ನೆಲೆಯಲ್ಲಿ ಅಡಗಿ ರುವ ತತ್ತ್ವ ಸರ್ವಶಕ್ತತೆ ಮತ್ತು ದಯಾಪರತೆ. ಸರ್ವಶಕ್ತಿಯನ್ನು ಹೊಂದಿದವನೂ,

ದಯಾಪರನಾಗಿ ಇತರರೆಲ್ಲರ ದುಃಖಗಳನ್ನು ನಿವಾರಿಸಬಲ್ಲವನೂ ದೇವರೊಬ್ಬನೇ. ಈ ಕಾರಣದಿಂದಲೇ ಇಡೀ ಜಗತ್ತಿನಲ್ಲಿ ಪುರುಷ ಲಕ್ಷಣಗಳನ್ನು ಉಳ್ಳವನು ದೇವರು ಮಾತ್ರ. ಆತನೇ ಇಡೀ ಜಗತ್ತಿನ ಏಕೈಕ ಭೋಗಿ ಆದರೂ ನಿರ್ಲಿಪ್ತಸಾಕ್ಷಿ. ಜೀವರೆಲ್ಲಾ ಅವನ ಭೋಗದ ವಸ್ತುಗಳು. ಸ್ತ್ರೀರೂಪನಾದ ಜೀವ, ಪುರುಷರೂಪನಾದ ದೇವನಲ್ಲಿ ಒಂದುಗೂಡುವುದೇ ಜೀವದ ಮುಕ್ತಿ.

ಸಂಗೀತ ಚರಿತ್ರೆಯಲ್ಲಿ ಮಧುರಭಾವ ಪರಿಪೂರ್ಣವಾಗಿ ಮೊದಲಿಗೆ ಮೂಡಿ ಬಂದಿರುವುದು ಜಯದೇವನ ಗೀತಗೋವಿಂದದಲ್ಲಿ. ಕವಿಯಿಲ್ಲಿ ಪ್ರಣಯ ಪ್ರಪಂಚ ವೊಂದನ್ನೇ ಕಣ್ಣಿಗೆ ಕಟ್ಟುವಂತೆ ನಿರ್ಮಿಸಿದ್ದಾನೆ. ಈ ಕಾವ್ಯದ ನಂತರ ಹದಿನೈದು-ಹದಿನಾರನೇ ಶತಮಾನದಲ್ಲಿ ಅನ್ನಮಾಚಾರರು ಶೃಂಗಾರ ಸಂಕೀರ್ತನೆಗಳನ್ನು ನೂರಾರು ಸಂಖ್ಯೆಯಲ್ಲಿ ರಚಿಸಿದ್ದಾರೆ. ಇವರು ರಚಿಸಿರುವರೆನ್ನಲಾದ ೩೨,೦೦೦ ರಚನೆಗಳಲ್ಲಿ ಕೇವಲ ೨,೨೦೯ ರಚನೆಗಳು ಮಾತ್ರ ಅಧ್ಯಾತ್ಮ ಸಂಕೀರ್ತನೆಗಳೆಂದು (ತಾತ್ವಿಕ ತಾತ್ಪರ್ಯ ಹೊಂದಿದ) ಕರೆಯಲ್ಪಟ್ಟರೆ, ಉಳಿದೆಲ್ಲವೂ ಶೃಂಗಾರ ಭಾವವನ್ನೇ ಒಳಗೊಂಡಿವೆ. ಅನ್ನಮಾಚಾರ್ಯರ ಕಾಲದಲ್ಲೇ ದಾಸವರೇಣ್ಯರೂ, ಅನಂತರ ಪದರಚನಕಾರರೂ ಈ ಭಾವದ ಆರಾಧನೆ ನಡೆಸಿದ್ದಾರೆ. 'ಪದ'* ಎಂದರೆ ಶೃಂಗಾರವಸ್ತುವನ್ನೇ ಸಾಹಿತ್ಯವಾಗಿ ಹೊಂದಿದ ಸಂಗೀತ ರಚನಾ ಪ್ರಕಾರ ಎಂಬ ಭಾವವಿದೆ. ಅನಂತರ ತ್ಯಾಗರಾಜರು ಆದ್ಯಂತವಾಗಿ ಶೃಂಗಾರ ಭಾವವನ್ನು ಒಳಗೊಂಡಂತೆ 'ನೌಕಾಚರಿತ್ರೆ' ಎಂಬ ಸಂಗೀತ ರೂಪಕವನ್ನು ರಚಿಸಿದ್ದಾರಲ್ಲದೆ ಅವರ ಇನ್ನಿತರ ಬಿಡಿ ಕೃತಿಗಳಲ್ಲೂ ಮಧುರಭಾವ ವನ್ನು ಗುರುತಿಸಬಹುದು. ಪ್ರಸ್ತುತ ಭಾಗದಲ್ಲಿ ಅವರ ಬಿಡಿ ಕೃತಿಗಳಲ್ಲಿ ಕಾಣಬರುವ ಮಧುರಭಾವವನ್ನು ಮಾತ್ರ ಅಧ್ಯಯನ ಮಾಡಲಾಗಿದೆ. ನೌಕಾಚರಿತ್ರೆಯನ್ನು ಗೀತ ನಾಟಕಗಳು ಎಂಬ ಶೀರ್ಷಿಕೆಯಡಿ ಪ್ರಸ್ತಾಪಿಸಲಾಗಿದೆ.

ಈ ನಿಟ್ಟಿನ ಆರಾಧನೆಯಲ್ಲಿ ತ್ಯಾಗರಾಜರು ಹೀಗೆನ್ನುತ್ತಾರೆ. ಆದಿ ದೈವನಾದ ಮೋಹನರಾಮನಲ್ಲಿ ಮೋಹವು ಅವರಿಗೆ ನೆಲೆಗೊಂಡಿದೆ. ಅವರನ್ನು ರಘುವರನು ಮರೆಯುವಂತಿಲ್ಲ. ಅವರ ಮನಸ್ಸೆಂಬ ಸ್ತ್ರೀ, ಆತನಲ್ಲಿ ಮರುಳಾಗಿರುವುದರಿಂದ ಪ್ರೀತಿ ಯಿಂದ ಅವರ ಕೈಹಿಡಿದು ಆತ ರಕ್ಷಿಸಬೇಕಾಗಿದೆ.

ಮೋಹನ ರಾಮ ಮೊದಟಿದೈವಮಾ
ಮೋಹಮು ನೀಪೈ ಮೊನಸಿಯುನ್ನದಿರಾ
(ಮೋಹನರಾಮ)

ರಘುವರ ನನ್ನು ಮರುವತಗುನಾ ?
ಮನಸುನ ನೀಕೇ ಮರುಲುಗೊನ್ನಾನು
(ರಘುವರ)

---

* ಪದ ಎಂಬುದು ಸಾಮಾನ್ಯ ಭಾಷೆಯಲ್ಲಿ 'ಹಾಡು' ಅರ್ಥವನ್ನೂ ಸೂಚಿಸುವುದುಂಟು.

**ಮನಸು ಚೆಲಿ ನೀಕೇ ಮರುಲುಗೊನ್ನದಿಗಾನಿ**
**ಚನುವುನ ಚೈಬಟ್ಟಿ ಮಮುಲ ರಕ್ಷಿಂಪವು**

**(ರಾಮಾಭಿರಾಮ)**

ಶ್ರೀರಾಮನು ತ್ಯಾಗರಾಜರ ಕೈ ಹಿಡಿಯದಿರುವುದರಿಂದ ಅವರ ಸ್ಥಿತಿ ಒಂಟಿ ಹೆಣ್ಣಿನಂತಾಗಿದೆ. ಎಂದರೆ ತ್ಯಾಗರಾಜರು ಅವಿವಾಹಿತ ಕನ್ಯೆಯಂತೆ ಭೀತರಾಗಿದ್ದಾರೆ.

**ಚೆಟ್ಟ ಬಟ್ಟನಿ ನಾ ಭೀತಿ ರಾಮ**
**ಬೊಟ್ಟು ಕಟ್ಟನಿ ಕನ್ಯಕ ರೀತಿ**

**(ರಾಮರಾಮ ರಾಮಚಂದ್ರ)**

ಸಂಪ್ರದಾಯಜ್ಞರ ಪ್ರಕಾರ ಸ್ತ್ರೀಗೆ ಪೂರ್ಣ ರಕ್ಷಣೆ ಸಿಗುವುದು ಹಾಗೂ ಅವಳ ಸ್ತ್ರೀತ್ವ ಮತ್ತು ಸೌಂದರ್ಯ ಸಾರ್ಥಕಗೊಳ್ಳುವುದು ಆಕೆ ವಿವಾಹಿತಳಾದಾಗ ಮಾತ್ರ. ಈ ಸಂದರ್ಭದಲ್ಲಿ ಭಕ್ತನು ಭಗವಂತನಲ್ಲಿ ಪೂರ್ಣ ಸಮರ್ಪಣೆ ಮಾಡಿದಾಗ ಮಾತ್ರ ಎಂಬುದು ಇಲ್ಲಿನ ಸಾರ. ಸ್ತ್ರೀಯೊಬ್ಬಳು ತಂದೆ, ತಾಯಿ, ಅಣ್ಣ, ತಮ್ಮ ಮುಂತಾದ ಬಂಧು ಬಾಂಧವರೆಲ್ಲರನ್ನೂ ಹೊಂದಿದ್ದರೂ, ಅವರಾರೂ ಆಕೆಗೆ 'ಪತಿ' ಯೆನಿಸಲು ಸಾಧ್ಯವಿಲ್ಲ ಎಂಬುದನ್ನು ತ್ಯಾಗರಾಜರು ಸಾಮ್ಯವೊಂದರ ಮೂಲಕ ತಿಳಿಸುತ್ತಾರೆ. ಸ್ತ್ರೀಯೊಬ್ಬಳ ಬಳಿ ಹಲವು ರೀತಿಯ ಆಭರಣಗಳಿದ್ದರೂ, ಅವಾವುದೂ 'ಮಾಂಗಲ್ಯ'ಕ್ಕೆ ಸಮನಾದುದಲ್ಲ ಎಂದವರು ಹೇಳುತ್ತಾರೆ.

**ತಲ್ಲಿ ತಂಡ್ರುಲನ್ನದಮ್ಮಲುನ್ನ ಪೊಲತಿಕಿ**
**ಒಕಡು ಪುರುಷುಂಡೌನಾ ?**
**ಬಾಗ ಸೊಮ್ಮುಲು ಸುರನುತ ಮಂಗಳ ಸೂತ್ರಮೌನಾ ?**

**(ರಘುವರ)**

ತ್ಯಾಗರಾಜರಿಗೆ ಶ್ರೀರಾಮನೇ ಪತಿಯಾಗಿದ್ದಾನೆ. ಅವರು 'ಪತಿ' ಎಂಬ ಪದದಿಂದಲೇ ಅಲ್ಲದೆ ಅಂದಗಾಡ (ಸುಂದರಾಂಗನೇ), ಕರಮುಪಟ್ಟು (ಕೈಹಿಡಿ) ಎಂಬ ಪ್ರಯೋಗಗಳ ಮೂಲಕವೂ ದೇವರನ್ನು ಪತಿಸ್ಥಾನದಲ್ಲಿ ಭಾವಿಸಿರುವುದು ಸುಸ್ಪಷ್ಟ. ಅವರು ಇನ್ನಾರೂ ಗತಿಯಿಲ್ಲವೆಂದು ಸಾರುವ ಅನಾಥ ಕನ್ಯೆಯಂತೆ ದೇವರಲ್ಲಿ ಶರಣಾಗಿದ್ದಾರೆ. ಅನೇಕ ಬಾರಿ ಆತನು ತಮ್ಮಲ್ಲಿ ಸೇರುವಂತೆ ಬೇಡಿಕೊಂಡಿದ್ದಾರೆ. 'ಶ್ರೀರಾಮ ಜಯರಾಮ' ಎಂಬ ರಚನೆಯಲ್ಲಿ ಅವರು ಸೀತೆಯನ್ನು ರಕ್ಷಿಸಿದಂತೆ ನನ್ನನ್ನೂ ನೀನು ರಕ್ಷಿಸಿದರೆ ನಿನ್ನ ಮಹಿಮೆಗೆ ಲೋಪಬರುವುದೇ ಎಂದು ಪ್ರಶ್ನಿಸುತ್ತಾರೆ.

**ಗತಿಲೇದನಿ ಪತಿನೀವನಿ ಮತಿನೇ ಶರಣಂಟಿ**

**(ರಘುನಂದನ)**

**ತಲ್ಲಿ ತಂಡ್ರಿ ಲೇನಿ ಬಾಲ ತನ ನಾಥುಗೋರು ರೀತಿ**
**ಪಲುಮಾರು ವೇಡುಕೊಂಟೇ ಪಾಲಿಂಚರಾದಾ ?**

**(ಚೇರರಾವದೇಮಿರಾ)**

**ಮಹಿಜ ರೀತಿ ನನು ಮನ್ನಿಂಚಿನ ನೀದು ಮಹಿಮಕೇಮಿತಕ್ಕುವ**

**(ಶ್ರೀರಾಮ)**

ಒಂದು ವೇಳೆ ತ್ಯಾಗರಾಜರು ಸತಿಯಾಗಿ ದೇವರಿಗೆ ಸರಿಜೋಡಿಯಲ್ಲದಿರಬಹುದು. ಆದರೆ ಸದ್ಗುಣೆಯಾದ ಸತಿ ಹೇಗಿದ್ದರೂ ಆಕೆಯ ಸಹವಾಸವನ್ನು ಪತಿ ಬಿಡುವುದಿಲ್ಲ ವಷ್ಟೆ ? ಹಾಗೆಯೇ ತಮ್ಮನ್ನೂ ಗಮನಿಸಬಾರದೇ ಎಂಬುದು ಅವರ ದೈನ್ಯ ಪ್ರಾರ್ಥನೆ ಯಾಗಿದೆ.

**ರೂಕಲೊಸಗಿ ಕೊನ್ನ ಸತಿ ರೂಪಮುಲೆಟ್ಲುನ್ನ**
**ಶ್ರೀಕರ ಗುಣಮುನ್ನ ಚೆಲಿ ಚೆಲಿಮಿ ವೀಡರನ್ನ**

**(ಗಾರವಿಂಪರಾದಾ)**

ತ್ಯಾಗರಾಜರ ಹೆಬ್ಬಯಕೆಯಾದರೋ ದೇವರು ತಮ್ಮನ್ನು ಓರೆನೋಟದಿಂದ ನೋಡುತ್ತಾ ಕಂಕಣದ ಘಲ್‌ಘಲ್ ಶಬ್ದದೊಂದಿಗೆ ಹಿಡಿದೆತ್ತಬೇಕು. ಪರಸ್ಪರರ ದೃಷ್ಟಿ ಒಂದಾಗಬೇಕು ಎಂಬುದು.

**ಘಲ್ಲು ಘಲ್ಲು ನೀ ಕರಮುಬಟ್ಟಿ ಕೀ**
**ಕನ್ನುಲಗಂಟೇ ಮುನ್ನದಿ ತರಮು ॥**
**ನಾಚೂಪು ನೀಚೂಪು ಸರಿಗಾ ಜೇಸಿತೇ ಜೇಯು**

**(ರಾಮರಾಮರಾಮಚಂದ್ರ)**

ರಾಮನಿಗೇಕೋ ತ್ಯಾಗರಾಜರೆಂದರೆ ಅಸಡ್ಡೆ. ಆದರೆ ಪತಿಯಾದ ಶ್ರೀರಾಮ ಕೋಪಿಸಿಕೊಂಡರೆ ನಿಜಸತಿ ಸೂಕ್ತ ರೀತಿಯಲ್ಲಿ ನಡೆದುಕೊಳ್ಳುವುದಿಲ್ಲವೇ ?

**ಪತಿ ನೀವು ಪರಮಪಾವನ ..............**
**ಪತಿ ಕೋಪಿಂಚಿತೇ ಮಾನವತಿಯ್ಯೆನ ನಿಜ**
**ಸತಿರೀತಿ ನಡಚುಕೋನಾ**

**(ಶ್ರೀ ರಾಮಚಂದ್ರ ರಾಘವ)**

ಹಾಗೆ ಸದ್ಗುಣೆಯಾದ ಸತಿಯು ಪತಿಸೇವೆ ಮಾಡುವಂತೆ ತ್ಯಾಗರಾಜರ ಮನಸ್ಸು ಸೇವಾಭಾಗ್ಯಕ್ಕಾಗಿ ಉತ್ಸುಕವಾಗಿದೆ.

**ಸತ್ಸತಿ ಪತಿಸೇವಜೇಯು ಚೆಂದಮುನ ನಾ ಮನಸು**
**ಉತ್ಸವಮುಲು ಜೇಯುಟ ಕುಪ್ಪೊಂಗೆನು ರಾಮಾ**

**(ರಾಮ ಸೀತಾರಾಮ)**

ತ್ಯಾಗರಾಜರು ಮತ್ತೊಂದು ರಚನೆಯಲ್ಲಿ ಹೀಗೆಂದಿದ್ದಾರೆ.

**ಧರಣಿತನಯಕುನ್ನ ಪ್ರೇಮರಸಮು ತ್ಯಾಗರಾಜುಕೀವನ್ನ**

**(ಮರಕತಮಣಿವರ್ಣ)**

ಈ ಸಾಲನ್ನು ಶೃಂಗಾರ ಮತ್ತು ವಾತ್ಸಲ್ಯ ಎರಡೂ ದೃಷ್ಟಿಗಳಿಂದ ವ್ಯಾಖ್ಯಾನಿಸ

ಬಹುದು. ಒಂದು - ಧರಣಿಸುತೆಯಾದ ಸೀತೆಗೆ ರಾಮನೆಡೆಗಿದ್ದ ಪ್ರೇಮ (ಶೃಂಗಾರ). ಎರಡು - ಸೀತೆಗೆ ತನ್ನ ಕಿರಿಯರೆಡೆಗಿದ್ದ ಪ್ರೀತಿ (ವಾತ್ಸಲ್ಯ). ಈ ಸಾಲಿನಲ್ಲಿ ಸೀತೆಗಿಂತ ಕಿರಿಯರು ಎಂಬ ಉಲ್ಲೇಖ ಕಾಣಬರದಿದ್ದರೂ ಅದಿಲ್ಲಿ ಸೂಚ್ಯವಾಗಿದೆಯೆನ್ನ ಬಹುದು. ಆದರೆ, ಈ ವ್ಯಾಖ್ಯಾನದಲ್ಲಿ ತೊಡಕೊಂದು ಮೂಡುತ್ತದೆ. ತ್ಯಾಗರಾಜರಿಲ್ಲಿ 'ಪ್ರೇಮರಸಮು' ಎನ್ನುತ್ತಾರೆ. ಪ್ರೇಮ ಎಂಬುದು ಶೃಂಗಾರದ ಹಿನ್ನೆಲೆಯಲ್ಲಿ ಮಾತ್ರ ಸಂಗತವಾದರೂ ಪ್ರೀತಿ ಎಂಬುದು ವಾತ್ಸಲ್ಯದ ಹಿನ್ನೆಲೆಯಲ್ಲೂ ಸಂಗತವೆಂಬುದು ನಮಗೆಲ್ಲ ತಿಳಿದ ವಿಷಯವೇ. ಆದ್ದರಿಂದ ಇದು ವಾತ್ಸಲ್ಯವನ್ನೂ, ಶೃಂಗಾರವನ್ನೂ ಸೂಸುತ್ತದೆ ಎನ್ನಬಹುದು.

ಮತ್ತೊಂದು ದೃಷ್ಟಿಯಿಂದ ನೋಡಿದಾಗ ಇದು ಶೃಂಗಾರವನ್ನೇ ಹೊರಸೂಸುತ್ತದೆ. ಇದೀಗ ನಾವು ಶೃಂಗಾರದ ದೃಷ್ಟಿಯಿಂದ ಅಂಗೀಕರಿಸಿದಾಗ, ಪಲ್ಲವಿಯಲ್ಲಿ ದೇವರನ್ನು ಕುರಿತಂತೆ ತ್ಯಾಗರಾಜರು 'ನಾಯನ್ನ' (ನನ್ನ ಸಹೋದರನೇ) ಎಂದು ಸಂಬೋಧಿಸಿ ದ್ದಾರೆ ಎಂದಾಗ ಈ ಭಾವ ವಿರುದ್ಧವಾಗುತ್ತದೆ. ಶ್ರೀರಾಮನನ್ನು ಸೋದರನೆಂದು ತಮ್ಮ ರಚನೆಯನ್ನು ಪ್ರಾರಂಭಿಸುವ ತ್ಯಾಗರಾಜರು ಧಿಡೀರನೇ ಶೃಂಗಾರಭಾವಕ್ಕೆ ಜಿಗಿದಿರುವುದು ವಿಪರ್ಯಾಸವೆನಿಸುತ್ತದೆ. ಆದರೆ ತ್ಯಾಗರಾಜರಲ್ಲಿ ಭಾವವೈವಿಧ್ಯಗಳನ್ನು ಹೊಂದಿರುವ ರಚನೆಗಳು ಇಲ್ಲವೆಂದೂ, ಶೃಂಗಾರಭಾವ ಇಲ್ಲವೆಂದೂ ಇದರ ಅರ್ಥ ವಲ್ಲ. ಅವರಲ್ಲಿ ಅನ್ನಮಾಚಾರ್ಯರ ರಚನೆಗಳಲ್ಲಿ ಹಾಗೂ ಕನಕದಾಸರ ಮೋಹನ ತರಂಗಿಣಿಯಲ್ಲಿ ಕಾಣಬರುವಷ್ಟು ತೀಕ್ಷ್ಣವಾದ ಶೃಂಗಾರ ಕಾಣಬರದಿದ್ದರೂ ಶಾಂತ ಸ್ಥಾಯಿಭಾವದ ಹಿನ್ನೆಲೆಯಿಂದ ಕೂಡಿದ ಶೃಂಗಾರವನ್ನು ನಾವು ಕಾಣಬಹುದು. ಹೀಗಾಗಿ ಪ್ರಸ್ತುತ ಸಾಲು ವಾತ್ಸಲ್ಯದಲ್ಲೂ, ಶೃಂಗಾರದಲ್ಲೂ ಅಧ್ಯಯನ ಮಾಡಬಹು ದಾಗಿದೆ.

ಸಾಂಪ್ರದಾಯಿಕವಾಗಿ ಮುತ್ತೈದೆಯ ಐದು ಅಲಂಕರಣಗಳೆಂದರೆ ಅರಿಶಿನ, ಕುಂಕುಮ, ಮಂಗಳಸೂತ್ರ, ಬಳೆ ಮತ್ತು ಬಿಚ್ಚೋಲೆ.[೧೨] ಇವು ಆಕೆಯ ಸೌಮಾಂಗಲ್ಯದ ಕುರುಹುಗಳು. ತ್ಯಾಗರಾಜರು ರಾಮನನ್ನು ತಮ್ಮ ಕುಂಕುಮವೆಂದೂ, ಮಾಂಗಲ್ಯವೆಂದೂ ಹೇಳುತ್ತಾರೆ (ಶ್ರೀರಾಮಜಯರಾಮ). ತಮ್ಮ ಪತಿಯೆಂದೇ ಭಾವಿಸಿ ಆತನನ್ನು ಅಪ್ಪಿಕೊಳ್ಳಲಾಗದ ತಮ್ಮ ಜನುಮದ ನಿರರ್ಥಕತೆಯನ್ನು ನೆನೆದು ದುಃಖಿಸುತ್ತಾರೆ (ಏಟಿಜನ್ಮಮಿದಿಹಾ). 'ಪ್ರೀಯೇಷು ಸೌಭಾಗ್ಯ ಫಲಾಹಿ ಚಾರುತಾ' ಎಂಬುದು ಕವಿ ಕಾಳಿದಾಸನ ಮಾತು.[೧೩] ಹೆಣ್ಣು ಸೌಭಾಗ್ಯವಂತಳಾಗುವುದು ತನ್ನ ಪತಿಯ ಪ್ರೀತಿಯಿಂದ. ಆದ್ದರಿಂದ ದೇವರಿಂದ ದೂರವಿರುವ ಬೇಗೆಯನ್ನು ತಾಳ ಲಾರದೆ ತ್ಯಾಗರಾಜರು ತಮ್ಮ ಮನವೆಂಬ ದೂತಿಗೆ ಹೀಗೆನ್ನುತ್ತಾರೆ. 'ಎಲೈ ಮನಸ್ಸೇ ಕನಿಕರಿಸಿ ನನ್ನ ಪ್ರಿಯಕರನನ್ನು ಕರೆದು ತಾ. ಚಿರಕಾಲವೂ ಸುಖವನ್ನು ಅನುಭವಿಸಲು ಶೀಘ್ರವಾಗಿ ಹೊರಟು ಪ್ರಿಯನನ್ನು ಕರೆದು ತಾ.'

ಚನಿ ತೋಡಿ ತೇವೇ ಓ ಮನಸಾ
ಕನಿಕರಮ್ಮು ತೋ ಕನಿ ಕರಮಿಡಿ ಚಿರ
ಕಾಲಮು ಸುಖಮನುಭವಿಂಪ ವೇಗಮೇ

(ಚನಿತೋಡಿತೇವೇ)

ತ್ಯಾಗರಾಜರಲ್ಲಿ ಹೀಗೆ ಮಧುರಭಾವದ ಪ್ರತಿಪಾದನೆಯನ್ನು ಕಾಣಬಹುದು. ಈ ವಿಧದ ಆರಾಧನೆಯಲ್ಲಿನ ಪ್ರಧಾನ ಮುಖಗಳಾದ ವಿರಹ ಮತ್ತು ಧನ್ಯತೆಯ ಚಿತ್ರಣ ವನ್ನೊಳಗೊಂಡ ಸಾಹಿತ್ಯವನ್ನು ಮುಂದಿನ ಅಧ್ಯಾಯದಲ್ಲಿ ಪ್ರಸ್ತುತಿಸಲಾಗುತ್ತದೆ. ಅಂತೆಯೇ ಪಂಚಭಾವಗಳ ಸಾಲಿನಲ್ಲಿ ಬರುವ ದಾಸ್ಯ ಮತ್ತು ಸಖ್ಯಗಳನ್ನು ಈಗಾಗಲೇ ನವವಿಧಭಕ್ತಿಗಳಲ್ಲಿ ಅಳವಡಿಸಿರುವುದರಿಂದ ಅವುಗಳನ್ನು ಇಲ್ಲಿ ಕೈಬಿಡಲಾಗಿದೆ.

## ಟಿಪ್ಪಣಿಗಳು

೧ Sayings of Sri Ramakrishna, The President, Sri Ramakrishna Math, Madras, 1971, ಪು. ೨೩೦ - ೨೪೪.

೨ Sri Annamacharya, A Philosophical Study, Dr. H.L. Chandrasekhara, Vidyashankara Prakashana, Mysore, ೧೯೯೦, ಪು. ೧೪೮ರಲ್ಲಿ ಉಲ್ಲೇಖ.

೩ ಧ್ಯಾನವು ಆಳವಾದಾಗ ಅದು ಸಮಾಧಿಯಲ್ಲಿ ಪರ್ಯವಸಾನವಾಗುತ್ತದೆ. ಸಮಾಧಿಯಲ್ಲಿ ಸಂಪ್ರಜ್ಞಾತ ಮತ್ತು ಅಸಂಪ್ರಜ್ಞಾತಗಳೆಂಬ ಎರಡು ಮಜಲುಗಳು. ಸಂಪ್ರಜ್ಞಾತ ಸ್ಥಿತಿಯಲ್ಲಿ ಯೋಗಿಗೆ ಅರಿವಿರುತ್ತದೆ. ಮನಸ್ಸು ಇಲ್ಲಿ ನಿಷ್ಕ್ರಿಯ ಸ್ಥಿತಿಯಲ್ಲಿರುವಂತೆ ತೋರಿದರೂ ವಾಸ್ತವವಾಗಿ ಇದೊಂದು ಕ್ರಿಯಾಶೀಲ ಸ್ಥಿತಿ. ಆದರೆ ನಿಜಯೋಗಿಯ ಗುರಿ ಇಷ್ಟೇ ಅಲ್ಲ. ಆತ ಅಸಂಪ್ರಜ್ಞಾತ ಸ್ಥಿತಿಗೆ ಏರಬೇಕೆಂಬ ಹಂಬಲವುಳ್ಳವನು. ಇದು ಸಮಾಧಿಯ ಸ್ಥಿತಿಯಿಂದ ಕೂಡಿದ ಸ್ಥಿತಿಯೂ ಅಲ್ಲ, ಅಥವಾ ಪ್ರಜ್ಞಾರಹಿತ ಸ್ಥಿತಿಯೂ ಅಲ್ಲ. ಇದೊಂದು ಪ್ರಜ್ಞಾತೀತ ಸ್ಥಿತಿ (Super Conscious State). ಎಂದರೆ ಎಲ್ಲ ರೀತಿಯ ದ್ವಂದ್ವಗಳನ್ನೂ ಮೀರಿದ ಸ್ಥಿತಿಯಿದು.

೪ Srimad Bhagavata Mahapurana, Book 10, Discourse IX, Kalyana Kalpataru Series, ಪು. ೩೯೯ - ೪೦೧.

೫ ತೈತ್ತರೀಯ ಉಪನಿಷತ್, ಅಧ್ಯಾಯ ೧೧, ಶ್ಲೋಕ ೨ (Eight Upanishads, Vol I, (Tr.) Swami Gambhirananda, Advaita Ashrama, Calcutta, ಪು. ೨೬೭).

೬ ಸೂತ್ರ ೮೨.

೭ *Srimad Bhagavata Mahapurana*, Book 10, Discourse ೨೦-೨೧, Kalyana Kalpataru Series, ಪು. ೪೫೯ - ೪೬೬.

೮ Shri Annamacharya - A Philosophical Study, Dr. H.L. Chandrasekhara, ಪು. ೧೫೭ರಲ್ಲಿ ಉಲ್ಲೇಖ.

೯ Indian Philosophy, Vol II, Dr. S. Radhakrishnan, ಪು. ೭೦೭ರಲ್ಲಿರುವ ಅಡಿ ಟಿಪ್ಪಣಿಯಲ್ಲಿನ ಉಲ್ಲೇಖ.

೧೦ Shri Annamacharya - A Philosophical Study, Dr. H.L. Chandrasekhara, ಪು.೧೫೭ರಲ್ಲಿನ ಉಲ್ಲೇಖ.

೧೧ ಆಂಡಾಳ್-ಮಹಾದೇವಿ-ಮೀರ, ಎಸ್. ವಿನೋದಾಬಾಯಿ, ಉಷಾ ಸಾಹಿತ್ಯಮಾಲೆ, ಮೈಸೂರು, ೧೯೬೯, ಪು. ೧೪೪ - ೧೪೫.

೧೨ ತೆಲುಗು ಪಾಠಗಳು (ಸಂ.) ಕೆ. ಸುಬ್ಬರಾಮಪ್ಪ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೫೯, ಟಿಪ್ಪಣಿಯಲ್ಲಿ ಪು. ೪.

೧೩ The Spiritual Heritage of Tyagaraja, C. Ramanujachari & Dr. V. Raghavan, Sri Ṛamakrishna Math, Madras, ೧೯೬೬, ಪು. ೨೧೩ರಲ್ಲಿನ ಉಲ್ಲೇಖ.

# ವಿರಹ ಮತ್ತು ಧನ್ಯತೆ

ಮಧುರ ಭಾವವು ಮುಖ್ಯವಾಗಿ ಎರಡು ಹಂತಗಳನ್ನು ಹೊಂದಿದೆ. (೧) ವಿರಹ ಅಥವಾ ವಿಪ್ರಲಂಬ (೨) ಧನ್ಯತೆ ಅಥವಾ ಸಂಭೋಗ. ವಿಪ್ರಲಂಬ ಎಂದರೆ ಭಗವಂತ ಮತ್ತು ಭಕ್ತ ಬೇರ್ಪಟ್ಟಿರುವುದು. ಸಂಭೋಗ ಎಂದರೆ ಭಕ್ತ-ಭಗವಂತರು ಒಂದು ಗೂಡಿ ತೃಪ್ತರಾಗಿರುವುದು.

ವಿರಹದ ಘಟ್ಟದಲ್ಲಿ ಭಕ್ತನಿಗೆ ತನ್ನ ಸರ್ವಸ್ವವೂ, ಏಕೈಕ ರಕ್ಷಕನೂ ಆದ ದೇವರು ತನ್ನಿಂದ ಅಗಲಿರುವುದರಿಂದ ಭಕ್ತ ತೀವ್ರ ದುಃಖದಲ್ಲಿರುತ್ತಾನೆ. ದುಃಖತಪ್ತನಾದ ಈತ ಜೀವನದ ಪ್ರತಿಕ್ಷಣದಲ್ಲೂ ಅಧ್ಯಾತ್ಮಿಕವಾದ ಬಿಕ್ಕಟ್ಟೊಂದನ್ನು ಎದುರಿಸುತ್ತಿರು ತ್ತಾನೆ. ಈ ಹಂತದಲ್ಲಿ ಅವನು ತನ್ನ ಸಮೀಪಕ್ಕೆ ಬಾರೆಂದು ದೇವರನ್ನು ದೀನನಾಗಿ ಪ್ರಾರ್ಥಿಸುತ್ತಾನೆ, ತನ್ನ ತಪ್ಪನ್ನು ಮನ್ನಿಸಬೇಕೆಂದು ಬೇಡುತ್ತಾನೆ, ದೇವರ ಔದಾರ್ಯ ವನ್ನು ಮೆಚ್ಚಿ ಸ್ತುತಿಸುತ್ತಾನೆ, ದೇವರ ಕೃಪೆ ತನ್ನ ಮೇಲೆ ಉಂಟಾಗಲು ಅಗತ್ಯವೆನ್ನುವ ಕೆಲವು ಅರ್ಹತೆಗಳನ್ನು ತಾನು ಹೊಂದಿರುವುದಾಗಿಯೂ ನಿವೇದಿಸುತ್ತಾನೆ. ಇಷ್ಟಾ ದರೂ ದೇವರು ತನ್ನೆಡೆಗೆ ಬಾರದುದಕ್ಕೆ ಕಾರಣಗಳನ್ನು ಊಹಿಸುತ್ತಾನೆ. ಕೊನೆಗೆ ರೋಷೋಕ್ತಿಗಳಿಂದ ನಿಂದಿಸುತ್ತಾನೆ, ತನ್ನ ಭಕ್ತಿ ಸ್ಥಿರತೆಗೆ ಪಣ ಒಡ್ಡುತ್ತಾನೆ. ಹೀಗೆ ಹತ್ತು ಹಲವು ಭಾವತರಂಗಗಳಲ್ಲಿ ಹೊಯ್ದಾಡುತ್ತಾ, ತನ್ನ ಅನಿಸಿಕೆಗಳಿಗೆಲ್ಲ ಅಭಿವ್ಯಕ್ತಿ ನೀಡುತ್ತಾನೆ. ಈ ಹಂತದಲ್ಲಿ ಹೊರಹೊಮ್ಮಿದ ಅನೇಕ ರಚನೆಗಳ ಭಾವ ಅಥವಾ ಸಾರಾಂಶ, ಒಂದೇ ಆದರೂ ಅವು ಅಭಿವ್ಯಕ್ತಗೊಳ್ಳುವ ರೀತಿಯಲ್ಲಿ ವೈವಿಧ್ಯವಿರುತ್ತದೆ. ಕೆಲವೊಮ್ಮೆ ಅವನ ಮಾತುಗಳು ತರ್ಕದೂರವೆನಿಸಬಹುದು, ಕಾಲ್ಪನಿಕವೆನಿಸಬಹುದು, ಅಸಹಜವೆನಿಸಬಹುದು. ಆದರೂ ಬಹುತೇಕ ರಚನೆಗಳು ಸಹಜ ಅನುಭವದಿಂದ ಮೂಡಿದುದಾಗಿ ದೈನ್ಯ, ಕಾತರ, ಸಂಕಟ, ಸಂದೇಹ,ರೋಷ ಮೊದಲಾದ ಭಾವಗಳನ್ನು ಹೊಂದಿರುತ್ತವೆ. ಇಲ್ಲಿ ಈ ಮೊದಲೇ ಸಮಾಗಮ ಹೊಂದಿದ್ದ ನಾಯಕ-ನಾಯಕಿ ಯರು ಬೇರ್ಪಟ್ಟಿರುತ್ತಾರೆ. ಆದ್ದರಿಂದ ವಿರಹದ ತಾಪ ತೀವ್ರತಮವಾಗಿರುತ್ತದೆ. ಅಲಂಕಾರಿಕರು ಮತ್ತು ಕವಿಗಳ ಅಭಿಪ್ರಾಯದಂತೆ ವಿರಹದ ಚಿತ್ರಣವಿಲ್ಲದೆ ಪ್ರೀತಿಯ ಪರಿಪೂರ್ಣತೆ ಸಾಧ್ಯವಿಲ್ಲ. ವಾಸ್ತವವಾಗಿ ವೈವಿಧ್ಯಮಯ ಚಿತ್ರಣಕ್ಕೆ ವಿರಹವೇ ಸೂಕ್ತ ಮೂಲಸ್ಥಾನ. ಆದ್ದರಿಂದಲೇ ಭಕ್ತಕವಿಗಳು ಮಿಲನ ಅಥವಾ ಸಂಭೋಗ ಶೃಂಗಾರ ಕ್ಕಿಂತ ವಿರಹ ಚಿತ್ರಣದಲ್ಲಿ ಹೆಚ್ಚು ಆಸಕ್ತರಾದಂತೆ ತೋರುತ್ತದೆ. 'ನ ವಿನಾ ವಿಪ್ರಲಂಬೇನ ಸಂಭೋಗಃ ಪುಷ್ಟಿಮಶ್ನುತೇ'[೧] ಎಂಬುದು ಪ್ರಸಿದ್ಧೋಕ್ತಿ. ವಿರಹ ವಿಲ್ಲದೆ ಸಂಭೋಗವು ಪುಷ್ಟಿಗೊಳ್ಳುವುದಿಲ್ಲ ಎಂಬುದು ಇದರ ಭಾವ.

ಭಾಗವತ ಪುರಾಣದಲ್ಲಿ ವಿರಹದ ಪ್ರಸ್ತಾಪವಿದೆ. ಇಲ್ಲಿ ಭಗವಂತನೇ ಉದ್ಧವನಿಗೆ

ಹೀಗೆನ್ನುತ್ತಾನೆ. ನನ್ನ ಭಕ್ತರ ಭಕ್ತಿಯನ್ನು ತೀವ್ರಗೊಳಿಸಲೆಂದೇ ನಾನು ಅವರ ಕಣ್ಣಿಗೆ ಕಾಣದೆ ಅದೃಶ್ಯನಾಗಿರುತ್ತೇನೆ. ಸ್ತ್ರೀಯರ ಮತ್ತು ಇತರರ ಮನಸ್ಸು ತಮ್ಮ ಸಾಮಿಪ್ಯ ದಲ್ಲೇ ಇರುವ ಪ್ರಿಯರ ಮೇಲೆ, ಲೀನವಾಗಿರಲಾಗದು. ಅದು ದೂರದಲ್ಲಿರುವವ ರೆಡೆಗೆ ಮಾತ್ರ ಸುಲಭವಾಗಿ ಲೀನವಾಗಬಲ್ಲದು.[೨] ದಿಟವಾಗಿ ಹೇಳಬೇಕೆಂದರೆ ವಿರಹವು ಸಾಧಕನ ಭಕ್ತಿಯನ್ನು ಅಳೆಯುವ ಮಾನದಂಡವೇ ಸರಿ. ಈ ಆಧಾರದಿಂದಲೇ ರಾಮಾಯಣವನ್ನು ಕುರಿತ ಕೆಲವು ವ್ಯಾಖ್ಯಾನಕಾರರು (ಉದಾ : ಗೋವಿಂದರಾಜರ ಭಾಷ್ಯ ಗೋವಿಂದರಾಜೀಯಂ) ಭರತನ ಭಕ್ತಿ ಶ್ರೇಷ್ಠತೆಯನ್ನು ಅಳೆಯುವುದು. ಒಟ್ಟಾರೆ ನಿಜಭಕ್ತನು ವಿರಹದಲ್ಲಿ ಎಷ್ಟೇ ಕಷ್ಟಗಳನ್ನು ಅನುಭವಿಸಿದ್ದರೂ ಆತ ತನ್ನ ಗುರಿಯನ್ನು ಮಾತ್ರ ಕೈಬಿಡಲು ಸಿದ್ಧನಿರುವುದಿಲ್ಲ. ಇಂಥ ಕಷ್ಟಗಳು ಆತನಿಗೆ ಸತ್ವ ಪರೀಕ್ಷೆಯೇ ಆಗಿರುತ್ತದೆ. ಇವೆಲ್ಲವನ್ನೂ ಸಹಿಸಿಕೊಂಡು ಕಡೆಯಲ್ಲಿ ಆತ ತನ್ನ ಧ್ಯೇಯ ವನ್ನು ಸಾಧಿಸುತ್ತಾನೆ. ಆಗ ಇನ್ನೆಂದೂ ಬೇರ್ಪಡಿಸಲಾಗದಂಥ ಧನ್ಯತಾಸ್ಥಿತಿಯನ್ನು ಮುಟ್ಟುತ್ತಾನೆ.

ತ್ಯಾಗರಾಜರ ಭಕ್ತಿಸಾಧನೆಯ ಮಾರ್ಗದಲ್ಲೂ ಅವರಿಗೆ ತೀವ್ರವಿರಹದ ಅನುಭವ ಉಂಟಾಗಿದೆ. ಈ ಸ್ಥಿತಿಯಲ್ಲಿ ಅವರು ಹಾಡಿರುವ ರಚನೆಗಳು ನೂರಾರು. ಉಪಲಬ್ಧ ವಿರುವ ಅವರ ರಚನೆಗಳಲ್ಲಿ ಹೆಚ್ಚಿನವು ವಿರಹಭಾವ ಉಳ್ಳದ್ದು. ಇವುಗಳನ್ನು ಕೆಳಗಿ ನಂತೆ ಉಪವಿಭಾಗ ಮಾಡಿ ಅಧ್ಯಯನ ಮಾಡಬಹುದು.

೧. ಭಕ್ತಿಯ ಸ್ಥಾಯಿಭಾವ (ಸ್ಥಿರ) ಮತ್ತು ದೈನ್ಯ.
೨. ತಪ್ಪೊಪ್ಪಿಗೆ ಮತ್ತು ನೈಚ್ಯಾನುಸಂಧಾನ.
೩. ಭಕ್ತರಾಗಿ ತಮ್ಮ ಅರ್ಹತೆಗಳನ್ನು ವಿನಂತಿಸಿಕೊಳ್ಳುವುದು.
೪. ವಿರಹದ ಕಾರಣಗಳನ್ನು ಊಹಿಸುವುದು.
೫. ನಿಂದನೆ ಮತ್ತು ರೋಷೋಕ್ತಿ.
೬. ಸ್ತುತಿಯ ಮೂಲಕ ಒಪ್ಪಂದ.

ಇವುಗಳಲ್ಲಿ ಭಕ್ತಿಯು ಸ್ಥಾಯಿಭಾವವೆಂದೂ ಉಳಿದ ರೋಷಾದಿಗಳು ವ್ಯಭಿಚಾರಿ ಭಾವಗಳೆಂದೂ ಪರಿಗಣಿಸಲಾಗಿವೆ. ಭಕ್ತಿಯ ಸ್ಥಿರವಾದ ಹಿನ್ನೆಲೆಯಲ್ಲಿ ಕೆಲವು ತಾತ್ಕಾ ಲಿಕ ಭಾವಗಳು ಭಕ್ತನಲ್ಲಿ ಉಂಟಾಗುತ್ತವೆ. ಇವುಗಳಿಗೆ ಸಂಚಾರಿ ಅಥವಾ ವ್ಯಭಿಚಾರಿ ಭಾವಗಳೆಂದು ಹೆಸರು. ಅನುಮಾನ, ರೋಷ ಇತ್ಯಾದಿ ಭಾವಗಳು ತಾತ್ಕಾಲಿಕ. ಆದರೆ ಭಕ್ತಿಭಾವ ಮಾತ್ರ ಸ್ಥಿರವಾದುದು.

### ೧. ಭಕ್ತಿಯಲ್ಲಿ ಸ್ಥಾಯಿ ಮತ್ತು ದೈನ್ಯ

ತ್ಯಾಗರಾಜರಿಗೆ ತಮ್ಮನ್ನು ರಕ್ಷಿಸುವಲ್ಲಿ ರಾಮನ ವಿನಾ ಇನ್ನಾವ ದೇವತೆಗಳೂ ಇಲ್ಲ. ಇದನ್ನು ಅವರು ರಾಮನ ಸನ್ನಿಧಿಯಲ್ಲೇ ಪ್ರಮಾಣಮಾಡಿ ನುಡಿಯುತ್ತಾರೆ.

ರಾಮಾ ನಿನುವಿನಾ ನನು ರಕ್ಷಿಂಪನೊರುಲಗಾನ ॥

..............................................

ಮಾವರ ನೀಸನ್ನಿಧಿನಿ ಪ್ರಮಾಣಮುಜೇಸಿ ಬಲ್ಕೆದ ॥

(ರಾಮಾನಿನ್ನುವಿನಾ)

ಅವರು ರಾಮಪಾದಗಳ ಭಕ್ತಿಯನ್ನೆಂದೂ ಬಿಡುವುದಿಲ್ಲ. ಇನ್ನೆಲ್ಲಿಗೂ ಕದಲುವುದಿಲ್ಲ.

ಪದಭಕ್ತಿ ವದಲನು ಎಂದೂ ಕದಲನು

(ಶ್ರೀರಾಮರಾಮ ಶ್ರಿತುಲಕುಗಾಮಾ)

ಏಕೆಂದರೆ ಈ ಭುವಿಯಲ್ಲಿ ಹುಟ್ಟಿದೊಡನೆ ಅವರು ರಾಮಪಾದಗಳನ್ನು ಹಿಡಿದು ಅದರಲ್ಲೇ ಆಸೆಯಿಟ್ಟು ಪೂಜಿಸಿದ್ದಾರೆ.

ಪುಟ್ಟಗಾನೇ ನೀ ಪದಮುಲ ಬಟ್ಟುಕೊನ್ನ

(ಕಾಲಹರಣಮೇಲರಾಹರೇ)

ಪಾಹಿರಾಮಯನುಚು ಭುವಿನಿಬಾಗಬುಟ್ಟಿತಿ

(ಪಾಹಿಮಾಂ ಹರೇ ಮಹಾನುಭಾವ)

ಚಿನ್ನ ಪ್ರಾಯಮುನಾಡೇ ಶ್ರೀಹರಿಪೈನಾಸ
ಗೊನ್ನ ಜೀವುಡಗಾನು

(ಎಟ್ಲಕನುಗೊಂದುನೋ)

ಚಿನ್ನನಾಟಿನುಂಡಿ ನಿನ್ನೇಗಾನಿ

(ಇನ್ನಾಳ್ಳು ದಯರಾಕುನ್ನ)

ಚಿನ್ನನಾಡೇ ಯನುಸರಿಂಚುಕೊನ್ನವಾಡನು

(ಪಾಹಿಮಾಂ ಶ್ರೀರಾಮಚಂದ್ರ)

ತಾಯಿ, ತಂದೆ, ಅಣ್ಣ, ತಮ್ಮ ಹಾಗೂ ದೇವರು - ಈ ಎಲ್ಲವೂ ತ್ಯಾಗರಾಜರಿಗೆ ಶ್ರೀರಾಮನೇ ಆಗಿ ಎಲ್ಲೆಡೆಯೂ ಅವರು ರಾಮನನ್ನೇ ಕಾಣುತ್ತಾರೆ.

ತಲ್ಲಿತಂಡ್ರಿ ಅನ್ನದಮ್ಮುಲು ದೈವಮು ನೀವನಿ
ಯುಲ್ಲಮುನನು ಅನ್ನಿಟ ನಿನು
ಚಲ್ಲಗ ಬಾಗುಗ ಜೂಚಿದ

(ರಾಮಾನಿನುವಿನಾ)

ತ್ಯಾಗರಾಜರು ಉಲ್ಲಾಸದಿಂದ ರಾಮನನ್ನು ಮೆಚ್ಚಿ ಮರುಳಾಗಿದ್ದಾರೆ (ಚೆಲ್ಲಗ ನಾತೋ). ಸದಾಕಾಲವೂ ಆತನ ಶುಭಚರಿತೆಯನ್ನೇ ಕೊಂಡಾಡುತ್ತಿರುವ (ಕೊನಿಯಾಡೇ ನಾಯೆಡ) ಅವರಿಗೆ ಶ್ರೀರಾಮನೇ ಇಹಪರಗಳೆರಡೂ ಆಗಿದ್ದಾನೆ. ಮೋಡವನ್ನು ಅರಸುವ ಚಾತಕದಂತೆ ತಮ್ಮ ಪಾತಕಹೃದಯದಿಂದ ಅವರು ರಾಮನಿಗಾಗಿ ಹಂಬಲಿಸುತ್ತಾರೆ. ಚಂದ್ರಮನನ್ನು ಕಂಡ ನೈದಿಲೆಯಂತೆ ರಾಮದರ್ಶನ ಅವರಿಗೆ

ಮುದ ತಂದಿದೆ.

ನೀವೆ ತನಕಿಹಪರಮುರಾಮಾ
ನಿನ್ನು ನಮ್ಮಿನ ಕಾಪುರಮು
ಘನಮುನು ಗೋರು ಚಾತಕಮು ರೀತಿ
ಗಾಚಿತಿ ತನ ಹೃತ್ಪಾತಕಮು
ರಜನೀಶುಜೂಚು ಕುಮುದಮುರೀತಿ
ರಾಜಿಲ್ಲು ನಿನುಚೂಡ ಮುದಮು

(ಇಂತಕನ್ನ ದೆಲ್ಪತರಮಾ)

ಇತರ ಮತಗಳನ್ನು ಅರಸದ (ಕೊನಿಯಾಡೆ) ಅವರು ಇತರವಾದ ಯಾವುದನ್ನೂ ನಂಬದೆ ಎಲ್ಲ ವೇಳೆಯಲ್ಲೂ ತಮ್ಮ ಪಾಲಿನ ದೇವರು ಶ್ರೀರಾಮನೇ ಎಂದು ತಿಳಿದಿದ್ದಾರೆ.

ಲೋಕುಲ ನೆರನಮ್ಮುಕೋಕನೇ ನೀಕೇ
ಲೋಕುವ ನೇನ್ನೈತಿನಿ ಓ ರಾಮ
ಏವೇಳ ನಾಪಾಲಿ ದೇವಾಧಿದೇವುಡು ನೀವೇಯನುಕೊಂಟಿನಿ ರಾಮ
ಅನ್ನಿ ಕಲ್ಲಲನಿ ನಿನ್ನೇ ನಿಜಮನುಕೊನ್ನವಾಡನ್ನೈತಿನಿ ಓ ರಾಮ

(ರಾಮ ಪಾಹಿ ಮೇಘಶ್ಯಾಮ ಪಾಹಿ)

ಇತರರನ್ನು ಅವರು ಬೇಡುವುದಿಲ್ಲ (ಪರುಲನು ವೇಡನು). ರಾಮನಂತೆ ಕರುಣಾ ನಿಧಿಯಾಗಿ ರಕ್ಷಿಸಬಲ್ಲ ದೇವತೆಗಳಿನ್ನಾರೂ ಇಲ್ಲ (ಏವಿಧಮುಲನ್ನೆನಗಾನಿ). ಆದ್ದರಿಂದ ಏಕಮಾತ್ರ ದೈವನಾದ ಶ್ರೀರಾಮನನ್ನು 'ಏಕಾಂತ ರಾಮಯ್ಯ'ನೆಂದೇ ಸಂಭೋಧಿಸಿ ಪ್ರೀತಿಯಿಂದ ತಮ್ಮನ್ನು ರಕ್ಷಿಸುವಂತೆ, ತಮ್ಮ ಮನಸ್ಸಿನ ಆಸೆಯನ್ನು ಅರಿಯುವಂತೆ ಪ್ರಾರ್ಥಿಸುತ್ತಾರೆ.

ಮಮತ ದೆಲಿಸಿ ನನು ಮನ್ನಿಂಚರಾದಾ

(ಶ್ರೀರಘುವರ ಸುಗುಣಾಲಯ)

ಮನಸುಲೋನಿ ಮರ್ಮಮುಲು ತೆಲುಸುಕೋ

(ಮನಸುಲೋನಿ)

ಇಷ್ಟಲ್ಲದೆ ತ್ಯಾಗರಾಜರು ತಮ್ಮ ಸ್ಥಿರಭಕ್ತಿಯನ್ನು 'ಬ್ರೋವಭಾರಮಾ'; 'ಮರುಗೇಲರಾ' ; 'ಎವರುರಾ ನಿನು ವಿನಾ ಗತಿ' ; 'ಎವರಿತೋ ನೇದೆಲ್ಪದು ರಾಮಾ'; 'ವೇರವ್ವರೇ ಗತಿ' ; 'ನಿನ್ನೇ ನೆರನಮ್ಮಿನಾನುರಾ' ; 'ನಿನ್ನೇ ನೆರನಮ್ಮಿನಾನು ನೀರಜಾಕ್ಷ'; 'ನಿನ್ನುವಿನಾ ಸುಖಮುಗಾನ' ; 'ನಿನ್ನೇ ಭಜನಸೇಯುವಾಡನು' ; 'ನೀ ಪದ ಪಂಕಜಮುಲನುನೇ ನೆರನಮ್ಮಿನಾನು' ; 'ಭುವಿನಿದಾಸುಡನೆ ಪೇರಾಸಚೇ' ಮುಂತಾದ ಇನ್ನೂ ಹಲವು ಕೃತಿಗಳಲ್ಲಿ ಪ್ರಕಟಪಡಿಸಿದ್ದಾರೆ.

ತ್ಯಾಗರಾಜರು ಹೀಗೆ ಭಕ್ತಿಸ್ಥಿರತೆಯನ್ನು ರಾಮನಲ್ಲಿ ಅರಿಕೆಮಾಡಿದ್ದಾರೆ. ನಿರ್ಗತಿಕರನ್ನು ದಡಮುಟ್ಟಿಸುವ ಪತಿತಪಾವನ ದೇವರೆಂದು ನಂಬಿ (ಇದಿನೀಕು ಮೇರಗಾದುರಾ) ತಮ್ಮನ್ನು ರಕ್ಷಿಸಿ ಅಭೀಷ್ಟವನ್ನು ನೆರವೇರಿಸುವಂತೆ ಹಲವುಬಾರಿ ಬೇಡಿದ್ದಾರೆ. ಆದರೆ ದೇವರ್ರಿಗೆ ಕರುಣೆ ಬಂದಿಲ್ಲ. ಇದರಿಂದ ಅವರು ದೀನರಾಗಿ ಹೀಗೆ ಪ್ರಾರ್ಥಿಸುತ್ತಾರೆ.

'ಇಷ್ಟಾದರೂ ನನ್ನೆಡೆಗೆ ದಯಬಾರದಿರಲು ನಾನು ಮಾಡಿದ ಪಾಪಗಳೇನು? ನಿನ್ನ ಪಾದದರ್ಶನಕ್ಕಾಗಿ ಮೊರೆಯಿಟ್ಟರೆ ಕೇಳಿಯೂ ಕೇಳಿಸದಂತಿದ್ದೀಯೆ (ಏಪಾಪಮು ಜೇಸಿತಿರಾ). ನನ್ನನ್ನು ರಕ್ಷಿಸಲು ಈ ಗರ್ವವೇಕೆ? (ದಿನಮಣಿ ವಂಶ). ನೀನು ನನ್ನೆಡೆಗೆ ಬರಲು ಇನ್ನೆಷ್ಟು ಬೇಡಿಕೊಳ್ಳಲಿ? (ಎಂತವೇಡುಕೊಂದೋರಾಘವ). ನಿನ್ನ ಪಾದಾರವಿಂದಗಳಿಗೆ ಸಂತೋಷದಿಂದ ವಂದಿಸಲಿಲ್ಲವೇ? ನನ್ನೆಡೆಗೆ ಪರಾಕು ಮಾಡಿದರೆ ನಿನಗಾಗುವ ಲಾಭವಾದರೂ ಏನು? (ಪರಾಕುಜೇಸಿನ ನೀಕೇಮಿ ಫಲಮು). ಕರುಣೆ ತೋರು ಎನ್ನಲಾಗಲೀ, ಕಾಪಾಡಲಾಗಲೀ ನಿನಗೆ ಕಷ್ಟವೇ? (ರಾಮರಾಮರಾಮ ಸೀತಾರಮಣ; ಜೇಜೇಸೀತಾರಾಂ). ನೀನೇ ನನ್ನನ್ನು ಉಪೇಕ್ಷಿಸಿದರೆ ನಾನು ಇನ್ನಾರಲ್ಲಿ ನನ್ನ ಅಳಲನ್ನು ತಿಳಿಸಲಾದೀತು? (ನೀವೇ ನನ್ನಡಜೇಸಿತೇ). ಬೆಣ್ಣೆಯಂಥ ನಿನ್ನ ಮೃದುಮನಸಿಗೆ ನನ್ನ ವ್ಯಥೆ ತಿಳಿಯಲಿಲ್ಲ. ತಂದೆಯಾದ ನೀನೇ ನನ್ನೆಡೆಗೆ ಕರುಣೆದೋರಿಲ್ಲವೆಂದು ತಿಳಿದು ನನ್ನ ಮನಸ್ಸು ತಲ್ಲಣಿಸುತ್ತಿದೆ.'

**ವೆನ್ನವಂಟಿ ಚಿತ್ತಾನಿಕಿ ನಾ ವೆತಲು ತೆಲಿಯಲೇದು**
**ಕನ್ನತಂಡ್ರಿ ತ್ಯಾಗರಾಜುನಿಕಿಕ ಕರುಣಜೂಡಲೇದು ಆನಿದೆಲಿಸಿ**
**ತಲ್ಲಡಿಲ್ಲುಚುನ್ನದಿ ನಾ ಮನಸು ...............**

(ಸಿಗ್ಗುಮಾಲಿ)

ನೀನೇ ಅರಿತುಕೊಳ್ಳುವೆಯೆಂದು ಭಾವಿಸಿ ನಿನ್ನ ಪದಸೇವೆಯನ್ನು ಮಾಡಿದೆ ಮಹಾನುಭಾವನೇ ! (ರಾಕಾಶಶಿವದನ).

ತ್ಯಾಗರಾಜರಿಗೆ ದೈವಕೃಪೆ ಲಭ್ಯವಾಗದೆ ದುಃಖವಾಗಿರುವುದಲ್ಲದೆ, ಅವರು ಇತರರಿಂದ ಅಪಹಾಸ್ಯಕ್ಕೆ ಗುರಿಯಾಗಿರುವುದು ಇನ್ನೂ ಹೆಚ್ಚಿನ ದುಃಖ ತಂದಿದೆ. ಕರುಣಾನಿಧಿಯಾದ ದೇವರು ಅವರನ್ನು ಸರೀಕರೆದುರು ಅವಮಾನಿಸುವುದೇ? (ಮರಿಯಾದಗಾದಯ್ಯ). ಶ್ರೀಪತಿದಾಸರಿಗೆ ಈ ಗತಿ ಬರಬಾರದೆಂದು ಕಾಮಿನಿದಾಸರು, ತ್ಯಾಗರಾಜರ ಮಾತುಗಳನ್ನು ಕೇಳಿ ಈಗ ವ್ಯಂಗ್ಯವಾಗಿ ನುಡಿಯುವಂತಾಗಿದೆ. ಇದರಿಂದ ತ್ಯಾಗರಾಜರು ಮುಖ ಮರೆಸಿಕೊಂಡು ತಿರುಗುವಂತಾಗಿದೆ.

**ಕಾಮಿನಿದಾಸುಲು ನಾ ಪಲ್ಕುಲು ವಿನಿ**
**ಕಾವಲಸಿನಟುಲ ನಾಡನಾಯೆಗದಾ**
**ಕ್ರೊವ್ವುಗಲ ನರುಲು ಕೊನಿಯಾಡಗ ಚಿರು**
**ನವ್ವುಲತೋ ನನು ಜೂಡನಾಯೆಗದಾ**

**ಮತಿಹೀನುಲು ಶ್ರೀಪತಿದಾಸುಲಕೀಗತಿ**
**ರಾರಾದನಿ ಬಲ್ಕನಾಯೆಗದಾ**

(ರಾಮರಾಮ ಗೋವಿಂದ)

ತಾವು ಅವಮಾನಿತರಾಗಿ ತಿರುಗುವ ಈ ಹಂತದಲ್ಲಿ ರಾಮನಿಗೇಕೆ ತಮ್ಮೆಡೆಗೆ ಅಭಿಮಾನ ವಿಲ್ಲ? ತನ್ನವರೆಂಬ ಅಭಿಮಾನವೂ ಇಲ್ಲವಾಯಿತೇ ? (ಮಾನಮುಲೇದಾ; ಸನಾತನ ಪರಮಪಾವನ). ತನ್ನಲ್ಲಿ ಶರಣಾದ ಭಕ್ತರನ್ನೆಲ್ಲಾ ಈ ಹಿಂದೆ ದೇವರು ರಕ್ಷಿಸಿ ರುವುದನ್ನು ತ್ಯಾಗರಾಜರು ತಿಳಿದಿದ್ದಾರೆ (ಕಮಲಾಪ್ತಕುಲ ; ಕ್ಷೀರಸಾಗರಶಯನ). ಆದರೆ ತಮ್ಮನ್ನು ಮಾತ್ರ ಹೀಗೆ ಚಿಂತೆಗೊಳಪಡಿಸುವುದು ಸರಿಯೇ ? ಎನ್ನುತ್ತಾರೆ. ಇದಕ್ಕಿಂತ ಮಿಗಿಲಾಗಿ ರಾಮನಾಡಿಸಿದಂತೆ ಆಡಿದ ತಮ್ಮೊಂದಿಗೆ ಮಾತನಾಡದೆ ಇತರರು ತಮ್ಮೆಡೆಗೆ ಪರಿಹಾಸಮಾಡುವಂತೆ ಸ್ಥಿರಚಿತ್ತನಾಗಿ ದೇವರು ಕುಳಿತಿರುವುದು ನ್ಯಾಯವೇ ಎಂದು ದೈನ್ಯಾತಿರೇಕಕ್ಕೆ ಇಳಿಯುತ್ತಾರೆ.

**ಪಲುಕವೇಮಿ ನಾದೈವಮಾ ?**
**ಪರುಲು ನವ್ವ್ವನದಿ ನ್ಯಾಯಮಾ ?**
**ಅಲುಗ ಕಾರಣಮೇಮಿರಾ ರಾಮ ನೀವಾಡಿಂಚಿನಟು ಯಾಡಿನ ನಾತೋ**

(ಪಲುಕವೇಮಿ)

ದೈನ್ಯದ ಈ ಮಜಲಿನಲ್ಲಿ ಅವರು ದೇವರೊಂದಿಗೆ ಶಿಶುಭಾವವನ್ನೂ, ಸತಿಭಾವ ವನ್ನೂ ಆರೋಪಿಸಿಕೊಂಡು ನುಡಿಯುತ್ತಾರೆ. ಒಂದು ವೇಳೆ ತಮ್ಮ ವಾಕ್ಕುಗಳಲ್ಲಿ ಲೋಪವಿದ್ದರೆ, ಮಗುವಿನ ತೊದಲ್ನುಡಿಗಳು ತಾಯ್ತಂದೆಯರಿಗೆ ಆಟವೇ ಅಲ್ಲವೇ?

**ತನಯುಡಾಡುಮಾಟ ತಲ್ಲಿತಂಡ್ರುಲಕದಿಯಾಟಗಾದಾ ?**

(ಗಾರವಿಂಪರಾದಾ)

ತಾಯಿಯ ಸ್ಥಾನದಲ್ಲಿರುವ ದೇವರು ಒಂದು ವೇಳೆ ತಮ್ಮನ್ನು ಶಿಕ್ಷಿಸಿದರೂ ಮಗು ವಿನಂತೆ ಅವರು ದೇವರನ್ನು ಬಿಡುವುದಿಲ್ಲ.

**ತಲ್ಲಿಗೊಟ್ಟಿತೇ ಸರಗುನ ಬಾಲುಡು ಪದ**
**ಪಲ್ಲವಮುನ ವಿಡುಚುನಾ ?**

(ಶ್ರೀರಾಮಚಂದ್ರ ರಾಘವ)

ಪರಮಪಾವನನಾದ ಶ್ರೀರಾಮ ಕೋಪಿಸಿಕೊಂಡರೆ (ಸತಿಸ್ಥಾನದಲ್ಲಿರುವ) ಮಾನ ವತಿಯಾದ ನಿಜಸತಿ ರೀತಿಯಲ್ಲಿ ತ್ಯಾಗರಾಜರು ನಡೆದುಕೊಳ್ಳುತ್ತಾರೆ (ಶ್ರೀರಾಮ ಚಂದ್ರ ರಾಘವ). ಹೀಗೆ ತ್ಯಾಗರಾಜರು ದೇವರೊಬ್ಬನೇ ತಮಗೆ ರಕ್ಷಕ, ಆತನ ವಿನಹ ಇತರರು ಯಾರೂ ತಮ್ಮನ್ನು ರಕ್ಷಿಸಲಾಗದೆಂದು ಪುನಃ ಪುನಃ ಹೇಳುತ್ತಾರೆ. ಮುಗ್ಧ ಮಗುವಿನಂತೆ, ಸಾಧ್ವೀ ಸತಿಯಂತೆ ನಡೆಯುತ್ತಾರೆ. ತಮ್ಮನ್ನು ಹಾಲಿನಲ್ಲೇ ಮುಳು ಗಿಸಲಿ ಅಥವಾ ನೀರಿನಲ್ಲೇ ಮುಳುಗಿಸಲಿ, ಅವರು ಶ್ರೀರಾಮನೇ ಗತಿಯೆಂದು ದೃಢ ವಾಗಿ ನಂಬಿ, ದೀನರಾಗಿ ಆತನಲ್ಲಿ ಪ್ರಾರ್ಥಿಸಿದ್ದಾರೆ. ತಮ್ಮ ಭಕ್ತಿಯ ಸ್ಥಿರತೆಯನ್ನು

ಹೀಗೆ ನಿವೇದಿಸುತ್ತಾರೆ.

ಪಾಲಮುಂಚಿನ ನೀಟಮುಂಚಿನ
ಪದಮುಲೇ ಗತಿ ತ್ಯಾಗರಾಜನುತ

(ಭುವಿನಿದಾಸುಡನೇ)

**೨. ತಪ್ಪೊಪ್ಪಿಗೆ ಮತ್ತು ನೈಚ್ಯಾನುಸಂಧಾನ**

ಸ್ಥಿರಭಕ್ತಿಯನ್ನು ನಿವೇದಿಸಿ ದೀನರಾಗಿ ಹತ್ತಾರು ವಿಧದಲ್ಲಿ ಮಾಡಿದ ಪ್ರಾರ್ಥನೆಗೆ ದೇವರಿಂದ ಪ್ರತಿಕ್ರಿಯೆ ಬಾರದೆ ತ್ಯಾಗರಾಜರು ಈ ಹಂತದಲ್ಲಿ ನೆನಪಿನ ಆಳಕ್ಕೆ ಇಳಿಯುತ್ತಾರೆ. ಈ ಹಿಂದೆ ತಾವೆಸಗಿದ ತಪ್ಪುಗಳ ಫಲವಾಗಿ ದೇವರು ತಮ್ಮಿಂದ ದೂರವಿರಬಹುದೆಂದು ಊಹಿಸುತ್ತಾರೆ. ತಮ್ಮ ಈ ಪರಿಸ್ಥಿತಿಗೆ ತಾವೇ ಕಾರಣರಲ್ಲದೆ ದೇವರಲ್ಲವೆಂದು ಭಾವಿಸಿ, ದೇವರಲ್ಲಿ ತಮ್ಮ ತಪ್ಪುಗಳನ್ನು ಬಹಿರಂಗಪಡಿಸಿ ಸ್ವನಿಂದೆಯ ಮೂಲಕ ಆತ್ಮ ನಿವೇದನೆ ಮಾಡಿಕೊಳ್ಳುತ್ತಾರೆ.

ಇಲ್ಲಿ ಒಂದು ವಿವರಣೆ ಅಗತ್ಯವೆನಿಸುತ್ತದೆ. ಸಾಮಾನ್ಯವಾಗಿ ಎಲ್ಲ ಭಕ್ತರೂ ದೇವರೊಡನೆ ಕ್ಷಮಾಪಣೆ ಕೇಳಿಕೊಂಡು ನೈಚ್ಯಾನುಸಂಧಾನ ಮಾಡಿರುವುದು ಕಾಣಬರುತ್ತದೆ. ಅವರು ಪಟ್ಟಿಮಾಡಿ ಹೇಳಿಕೊಳ್ಳುವ ತಪ್ಪುಗಳನ್ನೆಲ್ಲಾ ನಿಜವಾಗಿಯೂ ಅವರು ಮಾಡಿದ್ದರೇ ಎಂಬ ಅನುಮಾನ ಬರುವುದು ಸಹಜ. ಇದಕ್ಕೆ ನಾವು ಎರಡು ರೀತಿಯಲ್ಲಿ ಸಮಾಧಾನವನ್ನು ಹೇಳಬಹುದು.

(i) ಭಕ್ತನೂ ಸಮಾಜದ ಒಂದು ಅಂಗವೇ. ಸಮಾಜದ ಪರಿಧಿಯಲ್ಲೇ ಜೀವಿಸುವ ಆತನ ಮೇಲೂ ಸಾಮಾಜಿಕರ ಪ್ರಭಾವ ಸಹಜವಾಗಿರುತ್ತದೆ. ತನ್ನ ಸುತ್ತ ಮುತ್ತ ಇರುವ ಮಂದಿ ಮಾಡಿರುವ ಅಥವಾ ಮಾಡಬಹುದಾದ ತಪ್ಪು ಗಳನ್ನು ಆತ ತನ್ನಮೇಲೆ ಆರೋಪಿಸಿಕೊಂಡು, ಹಾಡಿರಬಹುದು. ಆ ಮೂಲಕ ಇತರರು ಅಂಥ ತಪ್ಪುಗಳನ್ನು ಪುನಃ ಪುನಃ ಮಾಡದಿರಲು ಪ್ರೇರೇಪಿಸಿರಬಹುದು. ಜನ ಸಾಮಾನ್ಯನೊಂದಿಗೆ ತಮ್ಮನ್ನು ಏಕೀಕರಿಸಿಕೊಂಡು ಮಾಡಿದ ಅವರ ಈ ಕಾರ್ಯದಿಂದ ಸಮಾಜದಲ್ಲಿ ನೈತಿಕಮಟ್ಟದ ಉನ್ನತಿ ಸಾಧ್ಯವಾಗಬಹುದು.

(ii) ಭಕ್ತನೂ ಸಮಾಜದ ವ್ಯಾಪ್ತಿಯಲ್ಲೇ ಬರುವನಾದರೂ, ಆತ ಸಾಮಾನ್ಯನಿಗಿಂತ ಅಧ್ಯಾತ್ಮ ಸಾಧನೆಯಿಂದಾಗಿ ಬಹಳ ಮೇಲ್ಮಟ್ಟದಲ್ಲಿರುತ್ತಾನೆ. ಆದ್ದರಿಂದ ಭಕ್ತರನ್ನು ನಾವೆಂದಿಗೂ ಅಳೆಯುವ ಮಾನದಂಡ, ವಿಮರ್ಶಿಸುವ ರೀತಿ ಲೌಕಿಕ ಮಟ್ಟದ್ದಲ್ಲ. ಒಂದು ವೇಳೆ ತಪ್ಪುಗಳನ್ನು ಆತ ಈ ಮುನ್ನ ಮಾಡಿದ್ದರೂ, ಅವುಗಳ ದೋಷವನ್ನು ಬೇರುಸಹಿತ ತೊಡೆದುಹಾಕುವಂಥ ಅಧ್ಯಾತ್ಮ ಸಾಧನೆಯನ್ನು ಆತ ಮುಂದೆ ಮಾಡಿರುತ್ತಾನೆಂಬ ಅಂಶವನ್ನು ನಾವು ಮರೆಯಲಾಗದು.

ಭಕ್ತರ ಈ ಮಾತುಗಳು ನಿಜವೇ ಆಗಿರಲಿ ಅಥವಾ ಕಾಲ್ಪನಿಕವೇ ಆಗಿರಲಿ, ಆತ್ಮ ಗರ್ಹಣದ ಈ ವಾಕ್ಯಗಳು ಅಧ್ಯಾತ್ಮಸಾಧನೆಗೆ ಮುಖ್ಯ ಸೋಪಾನವಾಗುತ್ತವೆ ಎಂಬು ದಂತೂ ನಿಜ. ಮನೋವೈಜ್ಞಾನಿಕವಾಗಿಯೂ (Psychological) ಒಬ್ಬನು ಮಾಡುವ ತಪ್ಪೊಪ್ಪಿಗೆಯಿಂದ ಆತ ಕ್ಷಮಾರ್ಹನಾಗುತ್ತಾನೆ. ಆತನ ಮನಸ್ಸು ಹಗುರಗೊಳ್ಳುತ್ತದೆ. ಈ ಸಂದರ್ಭದಲ್ಲಿ ಅನ್ನಮಾಚಾರ್ಯರ ಮಾತುಗಳು ನೆನಪಿಗೆ ಬರುತ್ತವೆ.[೩] ಅವರು ತಪ್ಪು ಗಳನ್ನು ತಮ್ಮ ಪ್ರಥಮಾಚಾರ್ಯರೆಂದೇ ಭಾವಿಸುತ್ತಾರೆ. ತಾತ್ತ್ವಿಕನಾದ ಕವಿ ಎಮರ್‌ಸನ್ನನು ಹೀಗೆನ್ನುತ್ತಾನೆ.

'Do not judge the Poets life to be sad because of his plaintive verses and confessions of despair because he was able to castoff his sorrows into these writings, therefore went he onward free and serene to new experiences'[೪]

ಪ್ರಕೃತ ತ್ಯಾಗರಾಜರು ಈ ಕೆಳಗಿನ ತಪ್ಪುಗಳನ್ನು ತಾವೆಸಗಿದಂತೆ ಪಟ್ಟಿಮಾಡು ತ್ತಾರೆ.

೧. ಸತಿ ಸುತರು ಮತ್ತು ಧನಕ್ಕಾಗಿ ಜೀವಿತದ ಹಲವು ದಿನಗಳನ್ನು ಅವರು ಕಳೆದಿದ್ದಾರೆ.

**ಸತುಲಕೈ ಕೊನ್ನಾಳ್ಳಾಸ್ತಿಕೈ ಸುತುಲಕೈ ಕೊನ್ನಾಳ್ಳುಧನ**
**ತತುಲಕೈ ತಿರಿಗಿತಿನಯ್ಯ**

(ದುಡುಕುಗಲ)

೨. ದುರ್ಭಾಷಿಯಾಗಿ ದೇವರನ್ನು ಮರೆತಿದ್ದಾರೆ. ಭಕ್ತವೇಷದಿಂದ ನಟಿಸಿದ್ದಾರೆ.

**ಕಲುಷಾತ್ಮುಡೈ ದುಷ್ಕರ್ಮಯುತುಡೈ**
**ಪಲುಮಾರು ದುರ್ಭಾಷಿಯೈ**
**ಇಲಲೋ ಭಕ್ತಾಗ್ರೇಸರುಲಲೋ ವೇಷಿಯೈ**

(ನೇನೆಂದು ವೆದಕುದುರಾ)

೩. ಹುಟ್ಟುಲೋಭಿಗಳನ್ನು ಹೊಟ್ಟೆಪಾಡಿಗಾಗಿ ಹೊಗಳಿದ್ದಾರೆ. ಚೆನ್ನಾಗಿ ಭುಜಿಸಿ ಕೊಂಡು ಅಲೆದಿದ್ದಾರೆ. ದುಷ್ಟರೊಂದಿಗೆ ಸೇರಿ ದುಷ್ಕೃತ್ಯಗಳನ್ನೆಸಗಿದ್ದಾರೆ.

**ಪಟ್ಟಿಗೊಡ್ಡುರೀತಿ ಭಕ್ಷಿಂಚಿ ತಿರಿಗಿತಿ**
**ಪುಟ್ಟುಲೋಭುಲನು ಪೊಟ್ಟಕೈ ಪೊಗಡಿತಿ**
**ದುಷ್ಟುಲತೋಗೂಡಿ ದುಷ್ಕೃತ್ಯಮುಸಲ್ಪಿ**

(ಎಟುಲಬ್ರೋತುವೋ ತೆಲಿಯ)

೪. ಅವರು ವೇದಾಧ್ಯಯನವನ್ನು ಮಾಡಿಲ್ಲ. ಸ್ನಾನಾದಿ ಸತ್ಕರ್ಮಗಳನ್ನು ಆಚರಿ ಸಿಲ್ಲ.

ಸ್ನಾನಾದಿ ಸುಕರ್ಮಂಬುಲು ವೇದಾಧ್ಯಯನಂಬುಲೆರುಗ

(ಸುಗುಣಮುಲೆ)

೫. ದೇವರನ್ನು ಪ್ರೀತಿಯಿಂದ ಪೂಜಿಸಿಲ್ಲ.

ಪಾದಮುನ ಪೂಜನೊನರಿಂಚಿನಾನಾ ?

ಕೆಲವೊಮ್ಮೆ ಮನಸಾರ ಸುಪುಷ್ಪಗಳಿಂದ ಪೂಜಿಸಿದರೆ ಇನ್ನು ಕೆಲವೊಮ್ಮೆ ಕೋಪದಿಂದ ದೇವರನ್ನು ದೂರಿದ್ದಾರೆ.

ಒಕವೇಳ ನಿನು ಪ್ರೇಮಮೀರ ಮದಿ
ನೆಂಚಿ ಮಂಚಿಪೂಲ ಪೂಜಿಂಚುಚು
ನೊಕವೇಳ ಕೋಪಗಿಂಚಿ ನಿನು ದೂರು
ಚುಂಟಿಗಾನಿ ..........................

(ತನಮೀದನೇ)

೬. ಯಾವ ಜನುಮದಲ್ಲೂ ಸತ್ಪಾತ್ರರಿಗೆ ದಾನ ಮಾಡಿಲ್ಲ.

ಏಜನ್ಮಮುನ ಪಾತ್ರಮೆರಿಗಿ ದಾನಂಬೀಕ

(ಮೀವಲ್ಲ ಗುಣದೋಷಮೇಮಿ)

೭. ಮಾನವಜನ್ಮದ ಹಿರಿಮೆಯರಿತು ಬ್ರಹ್ಮಾನಂದ ಹೊಂದಲಿಲ್ಲ.

ಮಾನವತನ ದುರ್ಲಭಮನುಚುನೆಂಚಿ
ಪರಮಾನಂದಮೊಂದಲೇಕ ...........

(ದುಡುಕುಗಲ)

೮. ಮದಮತ್ಸರಾದಿ ಅರಿಷಡ್ವರ್ಗಗಳಿಗೆ ದಾಸರಾಗಿ ವರ್ಣಧರ್ಮಕ್ಕೆ ವಿರುದ್ಧವಾದ ಕೆಲಸಗಳಲ್ಲಿ ತೊಡಗಿದ್ದಾರೆ.

ಮದಮತ್ಸರ ಕಾಮಲೋಭ ಮೋಹುಲಕು ದಾಸುಡೈ
ಮೋಸಬೋತಿಗಾಕ
ಮೊದಟಿ ಕುಲಜುಡಗುಚು ಭುವಿನಿ ಶೂದ್ರುಲ
ಪನುಲು ಸಲ್ಪುಚುನುಂಟಿನಿ

(ದುಡುಕುಗಲ)

ಹೀಗೆ ತಪ್ಪುಗಳ ಸರಮಾಲೆಯನ್ನೇ ಮುಂಡಿಸುವ ಅವರು ತಮ್ಮ ಚರಿತ್ರೆ ಕರ್ಣಕಠೋರವಾಗಿದೆಯೆನ್ನುತ್ತಾರೆ.

ಕಟಕಟ ! ನಾ ಚರಿತಮು ಕರ್ಣ ಕಠೋರಮಯ್ಯ

(ಎಟುಲಬ್ರೋತುವೋ)

ಮೇಲೆ ಸೂಚಿಸಿರುವ ಬಹುತೇಕ ಎಲ್ಲ ತಪ್ಪುಗಳನ್ನೂ ಒಳಗೊಂಡಂತಿದೆ ಅವರ ಈ ರಚನೆ.

ಚದಿವಿನವಾಡನು ಗಾನು ರಾಮ
ಇದಿ ಬುದ್ಧಿಯನುಚು ತೆಲಿಯಲೇನು
ಭಜಿಯಿಂಚುಟಕು ಬುದ್ಧಿಲೇಕ ರಾಮ
ಬತಿಮಾಲಿ ತಿರಿಗಿತಿ ಇಂದಾಕ
ದಿನದಿನಮುದರ ಕೊರಕ್ಕೈ ರಾಮ
ಧನಿಕುಲಗಾಚಿತಿನಿ ಈವರಕು
ಆಲು ಸುತುಲ ಪೈನಿ ಪ್ರೇಮ ನೀ ಪ
ದಾಲನುಂಚನೈತಿ ರಾಮ
ಸಂಸಾರಸುಖಮು ಸತಮನಿ ನಾಮ
ಸಾರಮೆರುಗ ಮರಚಿತಿನಿ
ವಿಷಯ ಸುಖಾದುಲ ರೋಯಲೇಕ
ವಿರ್ರವೀಗಿ ಮೋಸಮಾಯೆ

(ಪಾಹಿ ಕಲ್ಯಾಣ ಸುಂದರ ರಾಮ)

ಮೇಲಿನ ಮಾತುಗಳ ಅರ್ಥವನ್ನು ವಿಶ್ಲೇಷಿಸಿದರೆ ತ್ಯಾಗರಾಜರ ಜೀವಿತಕ್ಕೆ ಇವು ಎಷ್ಟರಮಟ್ಟಿಗೆ ಅನ್ವಯವಾಗಿವೆ ಎಂಬುದು ಅರಿವಾಗುತ್ತದೆ. ಅದಕ್ಕಾಗಿ ಈ ಕೆಳಗೆ ಭಾವಾರ್ಥವನ್ನು ಕೊಡಲಾಗಿದೆ.

'ರಾಮನೇ, ನಾನು ಓದಿದವನಲ್ಲ. ಯಾವುದು ವಿವೇಕ ಎಂಬ ಅರಿವು ನನಗಿಲ್ಲ. ನಿನ್ನನ್ನು ಭಜಿಸಲು ಬುದ್ಧಿಯಿಲ್ಲದೆ, ಈವರೆಗೆ ಅತಿಯಾಚಕನಾಗಿ ಅಲೆದಾಡಿದೆ. ಉದರಂಭರಣಕ್ಕಾಗಿ ಈವರೆಗೂ ಧನಿಕರನ್ನು ಆಶ್ರಯಿಸಿದೆ. ಪತ್ನೀಪುತ್ರರಲ್ಲಿ ಇರಿಸಿದ ಪ್ರೇಮವನ್ನು ನಿನ್ನ ಪಾದಗಳೆಡೆ ಹರಿಸದಾದೆ. ಸಂಸಾರಸುಖವೇ ನಿಜವೆಂದು ಭಾವಿಸಿ ನಿನ್ನ ನಾಮಸಾರವನ್ನು ಮರೆತೆ. ವಿಷಯಸುಖವನ್ನು (ಇಂದ್ರಿಯ, ಮನಸ್ಸುಗಳ) ಬಿಡ ಲಾರದೆ ಮೋಸಹೋದೆ.'

ವಾಸ್ತವವಾಗಿ ತ್ಯಾಗರಾಜರು ವೇದೋಪನಿಷತ್ತುಗಳನ್ನೂ, ಶಾಸ್ತ್ರಗಳನ್ನೂ ಅಧ್ಯ ಯನ ಮಾಡಿದ್ದರೆಂಬುದಕ್ಕೆ ಅವರ ರಚನೆಗಳಲ್ಲೇ ಉಲ್ಲೇಖವಿದೆ (ಅಟುಕಾರಾದನಿ). ಅವರು ಹುಟ್ಟಿದಂದಿನಿಂದಲೇ ರಾಮಭಕ್ತಿ ಮಾರ್ಗದಲ್ಲಿ ನಡೆದಿದ್ದಾರೆ. ನಿತ್ಯಾನಿತ್ಯಗಳ ವಿವೇಕ ಅವರಿಗೆ ಇದ್ದುದರಿಂದಲೇ ಅವರು ಲೌಕಿಕ ಸುಖಗಳನ್ನು ವಿಷಸಮನಾಗಿ ಭಾವಿಸಿದ್ದಾರೆ. ಧನಿಕರ ಆಶ್ರಯವನ್ನು ಅರ್ಥಾತ್ ತಾನಾಗಿ ಒದಗಿದ ರಾಜಾಹ್ವಾನ ಗಳನ್ನೂ ವಿನಯವಾಗಿಯೇ ತಿರಸ್ಕರಿಸಿದ್ದಾರೆ. ಪುತ್ರಪ್ರೇಮ ವಿಶೇಷವಾಗಿದ್ದು ದೇವ ರನ್ನು ಮರೆಯಲು, ಅವರಿಗೆ ಪುತ್ರ ಸಂತತಿಯೇ ಇರಲಿಲ್ಲವೆಂಬುದು ಗಮನಾರ್ಹ. ಹೀಗಾಗಿ ಮೇಲೆ ಹೇಳಿಕೊಂಡಿರುವ ಯಾವ ತಪ್ಪುಗಳೂ ತ್ಯಾಗರಾಜರು ಎಸಗಿಲ್ಲ ವೆಂಬುದು ಮನದಟ್ಟಾಗುತ್ತದೆ.

ಕವಿಗಾಗಲೀ, ಕಲಾವಿದನಿಗಾಗಲೀ, ಕಲಾಸೃಷ್ಟಿ ಮಾಡುವ ಮುನ್ನ ಸ್ವಾನುಭವ

ಅಗತ್ಯವೇ? ಅಥವಾ ಮತ್ತೊಬ್ಬರ ಅನುಭವಗಳಿಗೆ ಸ್ಪಂದಿಸಿ ಸಂವೇದಿಸುವ ಕಲ್ಪನಾ ಶಕ್ತಿಯಿಂದಲೇ ಆತ ಕಲಾಸೃಷ್ಟಿ ಮಾಡಬಲ್ಲನೇ? ಎಂಬುದು ಪರಿಣತರಲ್ಲಿ ಮುಖ್ಯ ವಾದ ಒಂದು ಪ್ರಶ್ನೆ. ಈ ಬಗೆಗೆ ಸೌಂದರ್ಯಶಾಸ್ತ್ರಜ್ಞರಲ್ಲಿ ಅಭಿಪ್ರಾಯ ಭೇದಗಳುಂಟು. ಊಹಾಶಕ್ತಿಯಿದ್ದರೆ ಸಾಕು, ಅಷ್ಟರಿಂದಲೇ ಆತ ಅದ್ಭುತ ಕಲೆಯನ್ನು ಸೃಷ್ಟಿಸಬಲ್ಲ ಎಂಬ ಪಂಗಡದವರು ಶೇಕ್‌ಸ್ಪಿಯರನನ್ನು ಉದಹರಿಸುತ್ತಾರೆ. ವಾಸ್ತವವಾಗಿ ಭೋಗ ಜೀವನವನ್ನೇ ನಡೆಸಿದ ಆತ ಅಮೋಘವಾದ ದುರಂತ ನಾಟಕಗಳನ್ನು ರಚಿಸಿದ್ದಾನೆ ಎಂದು ಅವರು ಹೇಳುತ್ತಾರೆ. ಆದರೆ ಇದಕ್ಕೆ ವಿರುದ್ಧವಾಗಿ ಕಲಾಸೃಷ್ಟಿಗೆ ಮುನ್ನ ಸ್ವಾನುಭವವಿರಲೇಬೇಕೆಂಬ ಪಂಗಡದವರು, ಕಲಾವಿದನಿಗೆ ಅನುಭವವಿದ್ದಷ್ಟೂ ಅವನ ಕಲೆಯ ಪಕ್ವತೆವಡೆದು ಹೆಚ್ಚು ಪರಿಣಾಮಕಾರಿಯಾಗಿರುತ್ತದೆಂದು ವಾದಿಸುತ್ತಾರೆ.

ಪ್ರಸ್ತುತ ತ್ಯಾಗರಾಜರನ್ನು ಇವೆರಡು ಗುಂಪಿಗೂ ಸೇರಿಸಬಹುದು. ಏಕೆಂದರೆ ಮೂಲತಃ ಅವರು ಅನುಭಾವಿಗಳು (Mystic). ತಮ್ಮ ರಚನೆಗಳಲ್ಲಿ ತಮಗುಂಟಾದ ದೈವ ಸಾಕ್ಷಾತ್ಕಾರದ ಅನುಭವಕ್ಕೆ ವಾಗಭಿವ್ಯಕ್ತಿ ನೀಡಿದ್ದಾರೆ. ಈ ದೃಷ್ಟಿಯಿಂದ ನೋಡಿ ದಾಗ ಅವರ ರಚನೆಗಳ ಹಿನ್ನಲೆಯಲ್ಲಿ ಕಾಣಬರುವುದು ಶುಷ್ಕಊಹೆಯೇನೂ ಅಲ್ಲ. ಅವು ವೈಯಕ್ತಿಕ ಅನುಭವದ ಫಲವೇ ಎನ್ನಬಹುದು. ಮತ್ತೊಂದು ದೃಷ್ಟಿಯಿಂದ ನೋಡಿದಾಗ, ಮುಖ್ಯವಾಗಿ ತಪ್ಪೊಪ್ಪಿಗೆ ಅಥವಾ ದುಷ್ಟತನವನ್ನು ತಮ್ಮ ಮೇಲೆ ಆರೋಪಿಸಿಕೊಳ್ಳುವಾಗ ಅವರು ಇತರರ ಅನುಭವಗಳನ್ನು ಕೇವಲ ಕಲ್ಪನಾಶಕ್ತಿ ಯಿಂದ ಪ್ರತಿಧ್ವನಿಸಿದ್ದಾರೆ. ಇವು ಅವರ ವೈಯಕ್ತಿಕ ಅನುಭವವಲ್ಲ ಎನ್ನಬಹುದು. ಈ ಅಭಿಪ್ರಾಯವನ್ನು 'ಪಾಹಿಕಲ್ಯಾಣ ಸುಂದರರಾಮ' ರಚನೆಗೆ ಮೇಲೆ ನೀಡಿರುವ ವಿವರಣೆ ಸ್ಪಷ್ಟಪಡಿಸುತ್ತದೆ.

ಒಟ್ಟಾರೆ ತ್ಯಾಗರಾಜರು ಕ್ಷಮೆಯಾಚನೆಯ ಈ ಮಜಲಿನಲ್ಲಿ ತಮ್ಮ ತಪ್ಪುಗಳನ್ನು ದೇವರು ಲೆಕ್ಕಮಾಡುತ್ತಾ ಹೋದರೆ ಅದಕ್ಕೆ ಕೊನೆಮೊದಲಿಲ್ಲವಾಗುತ್ತದೆ, ತಾವು ದೇವರ ಕೃಪೆಗೆ ಎಂದಿಗೂ ಅರ್ಹರಾಗಲು ಸಾಧ್ಯವಿಲ್ಲವಾಗುತ್ತದೆ, ಆದ್ದರಿಂದ ತಪ್ಪು ಗಳನ್ನು ಎಣಿಸದೆ ಕಣ್ಮುಚ್ಚಿಕೊಂಡು, ದಯಮಾಡಿ ಸಲಹಬೇಕೆಂದು ಪ್ರಾರ್ಥಿಸುತ್ತಾರೆ.

**ತಪ್ಪುಲೆನ್ನಬೋತೇ ಮಾಕು ಗೊಪ್ಪತನಮುರಾದು ಮಾ**
**ಯಪ್ಪ ದಯಜೇಸಿ ಕಂಡ್ಲ ಕಪ್ಪುಗೊನಿ ಪಾಲಿಂಪವೇ ॥**

**(ರಾಮ ಸೀತಾರಾಮರಾಮ)**

### ೩. ಭಕ್ತರಾಗಿ ತಮ್ಮ ಅರ್ಹತೆಗಳ ವಿನಂತಿ

ತ್ಯಾಗರಾಜರ ಸಾಹಿತ್ಯದಲ್ಲಿ ಕೆಲವೊಮ್ಮೆ ಭಾವವೈರುಧ್ಯವು ಕಾಣುವುದುಂಟು. ನೈಚ್ಯಾನುಸಂಧಾನದಲ್ಲಿ ಮಾಡಿಕೊಂಡ ಸ್ವನಿಂದೆಗೆ ವಿರುದ್ಧವಾಗಿ ಇದೀಗ ತಾವು ಯಾವ ಅಪರಾಧವನ್ನೂ ಮಾಡಿಲ್ಲ ಎಂಬಂತೆ ತಮ್ಮ ಭಕ್ತಿಭಾವಕ್ಕೆ ಮತ್ತೊಂದು ಇಂಬು ಕೊಡುತ್ತಾರೆ.

**ಏ ಅಪರಾಧಮು ಜೇಸಿತಿನೋ?**

(ಜಯಜಯ ಶ್ರೀರಘುರಾಮ)

**ತಪ್ಪುಪನುಲು ಲೇಕಯುಂಡೆ**

(ರಾಮನನ್ನು ಬ್ರೋವರಾ)

ಈ ಹಿಂದೆ ಆರೋಪಿಸಿಕೊಂಡ ತಪ್ಪುಗಳಿಗೆ ವಿರುದ್ಧವಾಗಿ ತಮ್ಮ ಅರ್ಹತೆಗಳನ್ನು ಈಗ ಒತ್ತಿ ನುಡಿಯುತ್ತಾರೆ.

ತ್ಯಾಗರಾಜರು ಪ್ರಾಪಂಚಿಕ ಭೋಗಭಾಗ್ಯಗಳೆಲ್ಲವೂ ಅಸತ್ಯವೆಂದರಿತು, ನಿತ್ಯಸತ್ಯನಾದ ಹರಿಯನ್ನೇ (ಪಾದಗಳನ್ನೇ) ಪ್ರಾರ್ಥಿಸುತ್ತಾರೆ.

**ಹರಿಹರಿ ನೀಯೊಕ್ಕ ದಿವ್ಯಪಾದಾರವಿಂದ ಮೀಯ್ಯವೇ**
**ಧರನು ಗಲುಗು ಭೋಗಭಾಗ್ಯಮೆಲ್ಲನು**
**ತಥ್ಯಮುಗಾದು ಸುಮೀ ಶ್ರೀಕೃಷ್ಣಾ**

(ಹರಿಹರಿ ನೀಯೊಕ್ಕ ದಿವ್ಯಪಾದಾರವಿಂದ)

ಲೌಕಿಕವಾದ ಧನಾದಿ ಸಂಪತ್ತುಗಳಿಗಾಗಿ ಅವರು ದೇವರಲ್ಲಿ ಮೊರೆಹೊಕ್ಕವರಲ್ಲ (ಇನ್ನಾಳ್ಳು ದಯರಾಕುನ್ನ; ರಾಮಾ ಕೋದಂಡರಾಮ; ನಾರಾಯಣಹರಿ). ಇವುಗಳನ್ನು ಆಶಿಸುವುದೇ ಮಹಾಪಾಪವೋ ಎಂಬಂತೆ ಅವರು 'ಹರಿಹರಿ' ಎಂದು ಉದ್ಗರಿಸುತ್ತಾರೆ. ಇಹಸುಖಕ್ಕಾಗಲೀ, ಸ್ವರ್ಗಸುಖಕ್ಕಾಗಲೀ ಅವರು ದೇವರನ್ನು ಸ್ತುತಿಸಿದವರಲ್ಲ. ಅವರ ಗುರಿಎಲ್ಲವೂ ಶ್ರೀರಾಮನೇ ಆದ್ದರಿಂದ ಆತನೇ ಅವರ ಪಾಲಿಗೆ ಇಹಪರವೆಲ್ಲವೂ.

**ಕೋರಿಕಲಿಲಲೋ ದಿವಿಲೋ ಕೊಂಚಮ್ಮೈನಲೇನಿ ನಾ ಮನಸು**

(ವದ್ದನೇವಾರು)

**ಆತ್ಮಕ್ಕೆ ಯೊಕಟ್ಮೆನ ಆಸಿಂಚಲೇದು ಪರಮಾತ್ಮಾ**
**.............................. ನೀಕಾಸಿಂಚಿತಿಗಾನಿ**

(ಓರಾಮ)

**ನೀಕಾಸಿಂಚಿತಿಗಾಕ ನೇನನ್ಯಮೆರುಗನು**

(ಲೋಕಾವನ ಚತುರ)

**ನೀವೇ ತನಕಿಹಪರಮು ರಾಮಾ**

(ಇಂತಕನ್ನದೆಲ್ಲ ತರಮಾ)

ವಾಸ್ತವವಾಗಿ ದೇವರೇ ತ್ಯಾಗರಾಜರಿಗೆ ನಿತ್ಯಾನಿತ್ಯಗಳನ್ನು ಬೋಧಿಸಿದ್ದಾನೆ (ಪಟ್ಟಿ ವಿಡುವರಾದು). ಹೀಗಾಗಿ ಅವರು ನಿಧಿ-ಸನ್ನಿಧಿಗಳ ವ್ಯತ್ಯಾಸವನ್ನು ಅರಿತಿದ್ದಾರೆ. ಸ್ವಸಂಬೋಧಿತವಾಗಿ 'ನಿಧಿ ಚಾಲ ಸುಖಮಾ ರಾಮುನಿ ಸನ್ನಿಧಿ ಸೇವ ಸುಖಮಾ ನಿಜಮುಗ ಬಲ್ಕು ಮನಸಾ' ಎಂದು ಹಾಡುತ್ತಾರೆ. ಅವರು ಇಳೆ-ದಿವಿಗಳಲ್ಲಿ ಅನಾಸಕ್ತರಷ್ಟೇ ಅಲ್ಲ, ತಾವು ಮಾಡಿದ ಪುಣ್ಯಕಾರ್ಯಗಳ ಫಲವನ್ನೂ ದೇವರಿಗೇ ಅರ್ಪಿಸಿದ

ವೈರಾಗ್ಯಮೂರ್ತಿ.

**ಅನುದಿನಮೊನರಿಂಚು ಸತ್ಕ್ರಿಯಲ ನೀಕನಿ ಪಲ್ಕಿನ**

(ಕನ್ನತಲ್ಲಿ)

**ಚೇಸಿನ ಪುಣ್ಯಚಯಮು ಬ್ರಹ್ಮಣ್ಯ ಆಸನೊಸಗಿತಿ**

(ರಘುವರನನ್ನು)

ಹೀಗೆ ತ್ಯಾಗರಾಜರು ಲೌಕಿಕ ಪ್ರಪಂಚದಲ್ಲಿದ್ದರೂ ಅವರ ಗಮನವೆಲ್ಲ ಅಧ್ಯಾತ್ಮ ದತ್ತಲೇ. ಅವರು ಭಗವದ್ಗೀತೆಯ ತತ್ತ್ವದಲ್ಲಿರುವಂತೆ ಪ್ರವೃತ್ತಿ-ನಿವೃತ್ತಿ ಮಾರ್ಗಗಳ ಮಧ್ಯೆ ಇರುವ ಸುವರ್ಣಮಾಧ್ಯಮವನ್ನು** ಅನುಸರಿಸಿದವರು. ಎಂದರೆ ಸಂಸಾರಿಯಾಗಿದ್ದೂ ಸನ್ಯಾಸಿಯಾಗಿದ್ದವರು. ಅರ್ಥಾತ್ ನಿಷ್ಕಾಮಕರ್ಮಯೋಗಿಯಾಗಿದ್ದವರು. ಅವರ ಬಾಹ್ಯೇಂದ್ರಿಯಗಳೂ ಅಂತರಿಂದ್ರಿಯವೂ ಭಗವಂತನಿಗಾಗಿಯೇ ಹಂಬಲಿಸಿದ್ದವು. ಚಿತ್ತವನ್ನು ಆಕರ್ಷಿಸುವುದು ಇಂದ್ರಿಯಗಳು. ಈ ಇಂದ್ರಿಯಗಳೂ ದೇವರಲ್ಲೇ ಲೀನವಾಗಿವೆ. ಚಿತ್ತ ಮತ್ತು ಇಂದ್ರಿಯಗಳು ಹಾಗೂ ಇಂದ್ರಿಯಗಳು ಮತ್ತು ದೇವರು - ಈ ಸಂಪರ್ಕದಿಂದ ಅವರಿಗೆ ದೇವರಲ್ಲದೆ ಬೇರೇನೂ ಕಾಣುತ್ತಿಲ್ಲ. ಅವರು ತಮ್ಮ ಮನಸ್ಸನ್ನು ದೇವರಿಗೇ ಅರ್ಪಿಸಿ ಈ ಲೋಕದಲ್ಲಿ ಪ್ರಾಪಂಚಿಕರಂತೆ ತೋರಿಕೆಗಾಗಿ ಬೊಂಬೆಯಾಟವಾಡಿದ್ದಾರಷ್ಟೆ. ಆದರೆ ಆಂತರಿಕವಾಗಿ ಅವರು ರಾಮನ ದಾರಿಯನ್ನೇ ಎದರುನೋಡುತ್ತಿದ್ದರು. ತಮ್ಮ ತನುಮನಗಳೆಲ್ಲವೂ ಶ್ರೀರಾಮನ ಸ್ವತ್ತೆಂದೇ ಅರಿತು ಅವರು ಪೋಷಿಸಿದ್ದರು.

**ಮನಸು ನೀ ಪದಮುಲನೇ ಜೇರ**
**ಕನುಲು ನೀ ರೂಪಮುನೇ ಕೋರ**
**ವೀನು ನೀ ಪೇರುಲಕೇ ನೋರೂರ**

(ರಾಮಾ ನೀಪೈ ತನಕುಪ್ರೇಮಬೋದು)

**ನೀಕೇ ಮನಸಿಚ್ಚಿ ನೇನು ರಾಮ**
**ನೀ ಮೇನನಿ ಪೆಂಚಿನಾನು**
**ಅಂದರಿವಲೆ ನೇನೀಭುವಿಲೋ ಬೊಮ್ಮ**
**ಲಾಟ ಲಾಡುದುಗಾನಿ ಮದಿಲೋ**

(ಎನ್ನಾಳ್ಳು ನೀ ದೋವ ಜೂತು ರಾಮಾ)

ಹೀಗೆ ತ್ಯಾಗರಾಜರು ಆಚಾರ್ಯ ಶಂಕರರು ಹೇಳುವ, ದೈವಸಾಕ್ಷಾತ್ಕಾರಕ್ಕೆ ಮುನ್ನ ಸಾಧಿಸಬೇಕಾದ ಸಾಧನ ಚತುಷ್ಟಯ*ಗಳನ್ನು ಹೊಂದಿದ್ದರು. ಅವರಿಗೆ ಸಂಸಾರ ಬಂಧನದಿಂದ ಮುಕ್ತನಾಗಿ ದೈವಸಾನ್ನಿಧ್ಯ ಹೊಂದುವ ತೀವ್ರ ಹಂಬಲವಿದ್ದಿತು. ದೇವರ

---

* ಆದೌ ನಿತ್ಯಾನಿತ್ಯ ವಸ್ತು ವಿವೇಕಃ ಪರಿಗಣ್ಯತೇ ।
ಇಹಾಮುತ್ರ ಫಲಭೋಗ ವಿರಾಗಸ್ತದನಂತರಮ್ ।
ಶಮಾದಿ ಷಟ್ಕಸಂಪತ್ತಿರ್ಮುಮುಕ್ಷುತ್ವಮಿತಿ ಸ್ಫುಟಮ್ ॥

ಕೈಂಕರ್ಯದಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕೆಂಬ ಆಸೆ ಅವರಲ್ಲಿ ಅತ್ಯಧಿಕವಾಗಿದ್ದಿತು. ಶಾಂತಚಿತ್ತರಾಗಿದ್ದ ಅವರು ಪರರಿಂದ ಉಂಟಾದ ತೊಂದರೆಗಳಿಗೆ ಪ್ರತೀಕಾರ ವೆಸಗಲಿಲ್ಲ.

ತ್ಯಾಗರಾಜರು ಶ್ರುತಪಡಿಸುವ ಮತ್ತೆ ಕೆಲವು ಅರ್ಹತೆಗಳೆಂದರೆ, ಅವರು ವೇದಶಾಸ್ತ್ರ ಉಪನಿಷತ್ತುಗಳನ್ನು ಅಧ್ಯಯನ ಮಾಡಿ, ನಿಜಭಕ್ತಿಮಾರ್ಗವನ್ನು ಅನುಸರಿಸಿದ್ದರು.

**ವೇದಶಾಸ್ತ್ರೋಪನಿಷದ್ವಿದುಡ್ಯೆನ ನಿಜಪುದಾರಿನಿಬಟ್ಟಿದಾಸುಡ್ಯೆನ**

**(ಅಟುಕಾರಾದನಿ)**

---

* ಈ ಪ್ರಕಾರ ಸಾಧನಚತುಷ್ಟಯಗಳು :

(ಅ) ನಿತ್ಯಾನಿತ್ಯ ವಸ್ತುವಿವೇಕ (ಎಂದರೆ ಬ್ರಹ್ಮವೊಂದೇ ಸತ್ಯ—ಜಗತ್ತು ಅಸತ್ಯ ಎಂಬ ಅರಿವು).

(ಆ) ಇಹ ಅಮೂತ್ರ ಫಲಭೋಗ ವಿರಾಗ (ಇಲ್ಲಿ ಮತ್ತು ಪರಲೋಕದಲ್ಲಿ ಅನುಭವಿಸುವ ಕರ್ಮಫಲದ ಭೋಗಗಳಲ್ಲಿ ವೈರಾಗ್ಯ).

(ಇ) ಶಮದಮಾದಿ ಷಟ್ಕಸಂಪತ್ತಿ—ಶಮ, ದಮ, ಉಪರತಿ, ತಿತಿಕ್ಷೆ, ಶ್ರದ್ಧೆ ಮತ್ತು ಸಮಾಧಾನಗಳನ್ನು ಸೇರಿಸಿ ಶಮದಮಾದಿ ಷಟ್ಕಸಂಪತ್ತಿ ಎನ್ನಲಾಗಿದೆ.

(i) **ಶಮ** ಎಂದರೆ ವಿಷಯವಸ್ತುಗಳಲ್ಲಿ ಪುನಃ ಪುನಃ ದೋಷವನ್ನು ನೋಡುತ್ತಾ ಬ್ರಹ್ಮದಲ್ಲಿ ಮನಸ್ಸನ್ನು ನಿಲ್ಲಿಸುವುದು.

(ii) **ದಮ** ಜ್ಞಾನೇಂದ್ರಿಯ ಕರ್ಮೇಂದ್ರಿಯಗಳನ್ನು ವಿಷಯವಸ್ತುಗಳಿಂದ ಹಿಂತಿರುಗಿಸುವುದು.

(iii) **ತಿತಿಕ್ಷೆ**— ಇತರರಿಂದ ಕೇಡು ಸಂಭವಿಸಿದರೂ ಅದಕ್ಕೆ ಪ್ರತೀಕಾರ ಮಾಡದೆ ಕೊರಗದೆ, ಶೋಕಿಸದೆ ದುಃಖವನ್ನು ಸಹಿಸಿಕೊಂಡಿರುವುದು. (ತ್ಯಾಗರಾಜರು ಸಹೋದರನಿಂದ ಉಂಟಾದ ಕಿರುಕುಳಕ್ಕೆ ವ್ಯಥೆಪಡಲಿಲ್ಲ ಅಥವಾ ಅವನೊಂದಿಗೆ ಪ್ರತೀಕಾರ ಮನೋಭಾವ ತಾಳಲಿಲ್ಲವೆಂಬುದಿಲ್ಲಿ ಗಮನಾರ್ಹ).

(vi) **ಉಪರತಿ**—ಹೊರಗಿನ ಇಂದ್ರಿಯಗಳನ್ನು ನಿಗ್ರಹಿಸಿದರೆ ಒಳಗಿನ ಮನಸ್ಸು ಹೊರಆಕಾರವನ್ನು ಪಡೆಯುವುದಿಲ್ಲ. ಇಲ್ಲಿ ಹೊರಗಿನ ಯಾವ ವಸ್ತುವನ್ನೂ ಅವಲಂಬಿಸದಿರುವುದೇ ಉಪರತಿ.

(v) **ಶ್ರದ್ಧೆ**—ಶಾಸ್ತ್ರ ಮತ್ತು ಗುರೂಪದೇಶಗಳನ್ನು ಸತ್ಯವೆಂದು ಸ್ವಬುದ್ಧಿಯಿಂದ ಮನಸ್ಸಿನಲ್ಲಿ ನಿರ್ಧರಿಸಿಕೊಳ್ಳುವುದು. ಇದು ಅಂಧ ಶ್ರದ್ಧೆಯಲ್ಲ. ದೃಢವಾದ ವಿಶ್ವಾಸ.ಇಂಥ ದೃಢ ವಿಶ್ವಾಸವಿಲ್ಲದೆ ಶಾಸ್ತ್ರಾಚಾರ್ಯರ ಉಪದೇಶವನ್ನು ಅನುಷ್ಠಿಸಲು ಸಾಧ್ಯವಾಗುವುದಿಲ್ಲ.

(vi) ಶುದ್ಧಬ್ರಹ್ಮದಲ್ಲಿ ಬುದ್ಧಿಯನ್ನು ಯಾವಾಗಲೂ ಚೆನ್ನಾಗಿ ಸ್ಥಿರಗೊಳಿಸುವುದೇ **ಸಮಾಧಾನ**. ಮನಸ್ಸು ಬಯಸಿದ ವಸ್ತುಗಳನ್ನು ನೀಡಿ ಲಾಲನೆ ಮಾಡುವುದು ಸಮಾಧಾನವಲ್ಲ (ಈ ಅರ್ಥದಲ್ಲೇ ತ್ಯಾಗರಾಜರು ಶಾಂತಿಯಿಲ್ಲದೆ ಸೌಖ್ಯವಿಲ್ಲ ಎನ್ನುವುದು—ಶಾಂತಮುಲೇಕ).

( ಹೆಚ್ಚಿನ ವಿವರಗಳಿಗಾಗಿ ನೋಡಿ ವಿವೇಕಚೂಡಾಮಣಿ—ಮೂಲ ಪ್ರತಿಪದಾರ್ಥ ತಾತ್ಪರ್ಯ ಟಿಪ್ಪಣಿಗಳೊಡನೆ, ಸ್ವಾಮಿ ಆದಿದೇವಾನಂದ, ಶ್ರೀರಾಮಕೃಷ್ಣಾಶ್ರಮ, ಮೈಸೂರು, ೧೯೯೭, ಶ್ಲೋಕ ೧೮ ರಿಂದ ೨೭).

ಹೆಗ್ಗಳಿಕೆಗಾಗಿ ಅವರು ತಾವು ದಾಸರೆಂದು ಸುಳ್ಳನ್ನಾಡಿರಲಿಲ್ಲ (ಭುವಿನಿದಾಸುಡನೇ) ಅಥವಾ ಚೋರಭಜನೆ ಮಾಡಿರಲಿಲ್ಲ (ಮಾರುಬಲ್ಕಕುನ್ನಾವೇಮಿರಾ). ಅಂತರಂಗದಲ್ಲೊಂದು ಬಾಹ್ಯದಲ್ಲಿ ಇನ್ನೊಂದು ಎಂಬಂತೆ ನಡೆದುಕೊಂಡಿಲ್ಲ (ಪಾಹಿಪರಮಾತ್ಮಾ). ಎಂದರೆ ತಮ್ಮ ಬಾಹ್ಯಾಂತರಗಳೆಲ್ಲವೂ ಭಗವತ್ಪರವಾಗಿಯೇ ಇವೆ. ಅಲ್ಲದೆ ಅವರು ಸದ್ಭಕ್ತರಾದ ಮಹಾನುಭಾವರನ್ನೂ ಪೂಜಿಸಿದ್ದಾರೆ (ರಘುನಂದನ ರಾಜಮೋಹನ). ಶಬರಿ ಮತ್ತು ಗುಹರಂತೆ ಅರ್ಪಣಯೋಗ್ಯವಲ್ಲದ (ಕ್ಷುಲ್ಲಕವೆನಿಸುವ) ಏನನ್ನೂ ದೇವರಿಗೆ ಅರ್ಪಿಸಿರಲಿಲ್ಲ.

**ಪುರಾಣ ಶಬರಿಯೊಸಂಗಿನ ಯಟು ನೇ**
**ಭುಜಿಂಚುಕೊನ್ನ ಶೇಷಮಾ ? ರಾಮ**
**ಧರಾತಲಮುನ ಗುಹುನಿವಲೆ ಪತ್ರ**
**ತಲ್ಪ ಮೊನರ್ಚಿತಿನಾ ?**

**(ಪರಾಕು ನೀಕೇಲರಾ)**

ಪರಮಾರ್ಥವಾದ ನಿಜಭಕ್ತಿಮಾರ್ಗವನ್ನು ಗುರೋಪದೇಶದಂತೆ ಅನುಸರಿಸಿದ್ದರು.

**ಪರಮಾರ್ಥಮಗು ನಿಜಮಾರ್ಗಮುನು**
**ವರದೇಶಿಕುಡಾನತಿಯ್ಯಗಾ**
**ಪರಿಪೂರ್ಣಮೌ ಭಕ್ತಿಮಾರ್ಗಮೇಯನಿ**
**ಭಾವಿಂಚಿನ ........................**

**(ಪಾಲಿಂತುವೋ)**

ಅಂತೆಯೇ ದೇವರ ಆಣತಿಯನ್ನೂ ಮನಸಾರೆ ಸಲ್ಲಿಸಿದ್ದರು.

**ಮುನು ನೀವಾಣತಿಚ್ಚಿನ ಪನುಲಾಸಗೊನಿ**
**ನೇ ಮನಸಾರಗ ನಿಧಾನಮುಗ ಸಲ್ಪಿನಾನು**

**(ದಯಜೂಚುಟಕಿದಿ ವೇಳರಾರಾಮ)**

ಹಿರಿಯರು ಈಗಾಗಲೇ ಅನುಸರಿಸಿದ್ದ ಸಾತ್ವಿಕಭಕ್ತಿಯೇ ಆದರ್ಶವಾಗಿ ತಿಳಿದು ತ್ಯಾಗರಾಜರೂ ಅದೇ ರೀತಿ, ಅದೇ ಮಾರ್ಗದಲ್ಲೇ ಆರಾಧಿಸಿದ್ದರು. ಇದರಿಂದ ದೇವರೇ ಭವತರುಣೋಪಾಯನೆಂದು ಅವರಿಗೆ ಅರಿವಾಗಿದ್ದಿತು (ರಾಮಾ ನಿನು ವಿನಾ ನನು ರಕ್ಷಿಂಪನೊರುಲಗಾನ).

ಇವೆಲ್ಲಕ್ಕಿಂತ ತ್ಯಾಗರಾಜರ ವಿಶಿಷ್ಟವಾದ ಮತ್ತೊಂದು ಅರ್ಹತೆಯೆಂದರೆ ತಾವು ಸುಗ್ರೀವರೆಂಬುದು. ಇಲ್ಲಿ 'ಸುಗ್ರೀವ' ಎಂಬ ಪದವು ಶ್ಲೇಷಾರ್ಥದಲ್ಲಿ ಚಮತ್ಕಾರಿಕವಾಗಿ ಬಳಸಲಾಗಿದೆ. ಸು ಎಂದರೆ ಮಧುರ ಅಥವಾ ಸುಶ್ರಾವ್ಯ, ಗ್ರೀವ ಎಂದರೆ ಕೊರಳು ಅಥವಾ ಶಾರೀರ. ಸುಶಾರೀರದಿಂದ ಹಾಡಿದ ಅವರ ಗಾಯನ ದೇವರಿಗೆ ಪ್ರಿಯವಾಗಿರುತ್ತದೆ. ಸಂಗೀತಲೋಲನಾದ ಆತ ತಮ್ಮನ್ನು ದಿಟವಾಗಿಯೂ ರಕ್ಷಿಸುವನೆಂಬ ಭರವಸೆಯಿಂದ 'ಸುಗ್ರೀವಮುಗಾದ' ಎಂದೂ ಮತ್ತು ತಾವೂ ಪೌರಾಣಿಕ

ವ್ಯಕ್ತಿ ಸುಗ್ರೀವನಂತೆಯೇ ಸಹೋದರಬಾಧೆಗೆ ಒಳಪಟ್ಟಿದ್ದರೆಂದೂ ಆದ್ದರಿಂದಲೇ ಅವರು ಸುಗ್ರೀವನೆಂದು ವ್ಯಾಖ್ಯಾನಿಸಿರಬಹುದು. ಈ ಎಲ್ಲ ಆಧಾರಗಳ ಮೇಲೆ ತಮ್ಮನ್ನು ದೇವರು ರಕ್ಷಿಸಲೇಬೇಕೆಂಬಂತೆ ಇದೀಗ ಅವರ ಹಕ್ಕು ಸಾಧಿಸುತ್ತಾರೆ. ತಮ್ಮೆಡೆಗೆ ದಯೆ ತೋರದಿದ್ದರೆ ದೇವರಿಗೆ ಘೃಣಹೀನನೆಂಬ* ಹೆಸರು ಬರುವುದಿಲ್ಲವೇ ? (ಕುವಲಯದಳನಯನ). ತಮ್ಮೆಡೆಗೆ ಹೀಗೆ ಪರಾಕು ತೋರಿದರೆ ಸುರಾಸುರರು ಮೆಚ್ಚುವರೇ ? (ಎದುಟ ನಿಲಚಿತೆ). ಬದಲಾಗಿ ತಮ್ಮನ್ನು ರಕ್ಷಿಸಿದರೆ ದೇವರಿಗೆ ಕೀರ್ತಿಯೂ, ಪುಣ್ಯವೂ ಲಭ್ಯವಾಗುತ್ತದೆ ಎನ್ನುತ್ತಾರೆ.

**ಶ್ರೀಪತೇ ನನು ಮರುವತಗುನಾ: ಇದಿ ಪಾಪಮೇ ಗಾನಿ .......**

**(ರಾಮಾಭಿರಾಮ ರಘುರಾಮ ಓರಾಮ)**

**ಮನ್ನನ ಸೇಯರಾದಾ? ಶ್ರೀರಾಮಾ ನೀಕೆನ್ನರಾನಿ ಪುಣ್ಯಮುರಾದಾ?**

**(ಇದಿನೀಕು ಮೇರಗಾದುರಾ)**

**ಕೃಪಜೂಚಿ ಬ್ರೋಚಿತೇ ಕೀರ್ತಿಕಲದಿಕ ನೀಕು**

**(ಅಪರಾಧ ಮುಲಮಾನ್ಪಿ)**

ಇಲ್ಲಿ ಪಾಪ-ಪುಣ್ಯ, ಕೀರ್ತಿ-ಅಪಕೀರ್ತಿಗಳ ವ್ಯೂಹಕ್ಕೆ ಬದ್ಧನಾಗಬಹುದಾದ ಭಕ್ತನೇ ಅವುಗಳನ್ನು ದೇವರಿಗೆ ಅನ್ವಯಿಸಿ ಹೇಳುತ್ತಿರುವುದು ಗಮನಾರ್ಹ. ವಿರಹವೇದನೆಯಲ್ಲಿ ವಿಶಿಷ್ಟವಾದ ಒಂದು ಘಟ್ಟವಿದು.

**೪. ವಿರಹದ ಕಾರಣಗಳನ್ನು ಊಹಿಸುವುದು**

ಅಗತ್ಯವೆನ್ನುವ ಈ ಎಲ್ಲ ಅರ್ಹತೆಗಳನ್ನು ನಿವೇದಿಸಿದರೂ ವಿರಹದ ತಮ್ಮ ಸ್ಥಿತಿ ಉತ್ತಮಗೊಳ್ಳಲಿಲ್ಲವಾಗಿ ಇದೀಗ ತ್ಯಾಗರಾಜರು ತಮ್ಮ ದುಃಸ್ಥಿತಿಗೆ ಕಾರಣಗಳೇನೆಂದು ಊಹಿಸತೊಡಗಿದ್ದಾರೆ.

ತ್ಯಾಗರಾಜರ ಪಾಪಗಳೆಷ್ಟೇ ಘನವಾಗಿದ್ದರೂ ಅವುಗಳನ್ನು ಹೋಗಲಾಡಿಸಿ ಅವರನ್ನು ಪಾವನಗೊಳಿಸುವ ಶಕ್ತಿ ರಾಮನಿಗಿದೆ (ಕರುಣಾಸಮುದ್ರ; ಈ ವರಕು; ಶರಶರ ಸಮರೈಕ). ಆದರೆ ರಾಮನಿಂದ ಈವರೆಗೆ ಪ್ರತಿಕ್ರಿಯೆ ಬಂದಿಲ್ಲ ಎಂಬುದು ಅವರಿಗೆ ತಿಳಿದಿದೆ. ಹೀಗಾಗಿ ತಾವು ನಂಬಿದ ರಾಮ ಕಾಕಾಸುರಾದಿಗಳನ್ನು ರಕ್ಷಿಸಿದ ರಾಮನೋ ಅಥವಾ ಬೇರೆಯವನೋ? (ಏರಾಮುನಿ ನಮ್ಮಿತಿನೋ). ಆತ ತಮ್ಮನ್ನು ರಕ್ಷಿಸುವನೋ ಇಲ್ಲವೋ? (ರಾಮ ನೀವಾದು ಕೊಂದುವೋ ಕೊನವೋ). ತಮ್ಮ ಮೊರೆಯೆಲ್ಲ ಕಪಟವಾಯಿತೇ ? ಅಥವಾ ರಾಜಸವಾದುದೇ? (ಎಂತನು ಚು ಸೈರಿಂತುನು). ರಾಮನ ಸಮೀಪದಲ್ಲೇ ಇರುವ ಸೀತೆ ಅಥವಾ ಲಕ್ಷ್ಮಣರೇನಾದರೂ ತಮ್ಮನ್ನು ರಕ್ಷಿಸಬೇಡ

* ಗುಣಹೀನುಡನಿ ಎಂಬ ಪಾಠಾಂತರವೂ ಉಂಟು. ನೋಡಿ. Rare and Unpublished Kirtanams of Tyagaraja Ed. by T. V. Subba Rao, ಪುಟ ೧೭೨, ಮತ್ತು ತ್ಯಾಗರಾಜ ಸ್ವಾಮಿ ಕೀರ್ತನಲು, ಕೆ. ವಿ. ಶ್ರೀನಿವಾಸ ಅಯ್ಯಂಗಾರ್. ಪು. ೩೭೩

ವೆಂದು ಹೇಳಿದ್ದರೆ ? ಅಥವಾ ಭರತನನ್ನು ನೋಡುವಾಗ ರಾಮನ ಕಣ್ತುಂಬಿದ ಬಾಷ್ಪ ಗಳಿಂದ, ತಾವಾಗಲೀ ಅಥವಾ ಇತರ ಭಕ್ತರಾಗಲೀ ರಾಮನಿಗೆ ಕಾಣಲಿಲ್ಲವೇ ? ಹನುಮಂತನೇನಾದರೂ ಅತ್ತಿತ್ತ ಕದಲದಂತೆ ರಾಮನಿಗೆ ಅಡ್ಡಿಮಾಡಿರಬಹುದೇ ? ಬ್ರಹ್ಮನೋ, ಆತನ ಸತಿ ಸರಸ್ವತಿಯೋ ಅಥವಾ ರಾಮಸಹೋದರಿ ಧರ್ಮಸಂವರ್ಧಿನಿಯೋ ಅಡ್ಡಿ ಮಾಡಿರಬಹುದೇ? (ಯುಕ್ತಮುಗಾದುನನು ರಕ್ಷಿಂಪಕುಂಡೇದಿ). ಕೌಸಲ್ಯೆ, ಅಹಲ್ಯೆ, ಸೀತೆ, ಶಬರಿ, ಸ್ವಯಂಪ್ರಭೆಯರಲ್ಲಿ ಯಾರಾದರೂ ತಮ್ಮ ಮೇಲೆ ಚಾಡಿ ಮಾತುಗಳನ್ನಾಡಿರಬಹುದೇ? (ಎಂದುಕೀ ಚಲಮು). ಆತ ಯಾರ ಮಾತನ್ನು ಕೇಳಿ ತಮ್ಮೆಡೆಗೆ ಬಾರದಿರಬಹುದು? (ಎವರಿಮಾಟವಿನ್ನಾವೋ ) ತಮ್ಮ ದುಷ್ಕರ್ಮಗಳು ದೇವತಾರೂಪತಾಳಿ ದೈವಸನ್ನಿಧಿಯಲ್ಲಿ ಅಡ್ಡಿಮಾಡಿರಬಹುದೇ? (ಶ್ರೀಜಾನಕೀ ಮನೋಹರ). ವಿಷಯ ಹೀಗಿದ್ದಲ್ಲಿ 'ತ್ಯಾಗರಾಜ ಅಂಥವನಲ್ಲ' ಎಂದು ತಮ್ಮೆಡೆಗೆ ಶಿಫಾರಸು ಮಾಡುವಷ್ಟು ದೇವರಿಗೆ ಮನಸ್ಸಿಲ್ಲವೇ? (ಓ ರಾಜೀವಾಕ್ಷ; ಅಟುಕಾರಾದನಿ). ಈ ಹಿಂದೆ ಭಕ್ತರಕ್ಷಣೆಗಾಗಿ ಅವಿತುಕೊಂಡಿದ್ದಂತೆ ಈಗಲೂ ತಮ್ಮ ರಕ್ಷಣೆಗಾಗಿ ಎಲ್ಲಾದರೂ ಬಚ್ಚಿಟ್ಟುಕೊಂಡಿರಬಹುದೇ ? (ಎಂದು ದಾಗಿನಾಡೋ). ಕೈಕೇಯಿ ಮೇಲಿನ ಕೋಪದಿಂದ ತಮ್ಮನ್ನೂ ಕಾಪಾಡಲು ಬಂದಿಲ್ಲವೇ ? (ರಾಮಚಂದ್ರ ನೀದಯ). ರಾಮನಲ್ಲೇ ಶಕ್ತಿಲೋಪವಾಗಿದೆಯೇ? ಆತ ಸಮುದ್ರ ದಾಟುವಾಗ ಆತನಲ್ಲಿದ್ದ ಕರುಣಗುಣವು ನೀರಿನಲ್ಲಿ ಕೊಚ್ಚಿಹೋಯಿತೇ ? ಶಿಷ್ಟರಕ್ಷಣೆಯ ಕಾರ್ಯವನ್ನು ರಾಮನು ಕಾಡಿನಲ್ಲೇ ತೊರೆದು ಬಂದನೇ ? ಅಥವಾ ರಾಮಾವತಾರದಲ್ಲಿ ಅವತರಿಸುವಾಗ ತನ್ನ ದೈವತ್ವವನ್ನು ಅರಣ್ಯದಲ್ಲಿ ಬಿಟ್ಟುಬಂದಿರಬಹುದೇ ? (ಮಾಮವ ರಘುರಾಮ) ಅಥವಾ ಇವೆಲ್ಲಕ್ಕಿಂತ ಹೆಚ್ಚಾಗಿ ತಾವು ಭಕ್ತವೇಷ ಧರಿಸಿದ ಘಳಿಗೆಯೇ ಸರಿಯಿಲ್ಲವೋ (ತೊಲಿನೇನು) ಎಂದು ಯೋಚಿಸುತ್ತಾರೆ.

ವಾಸ್ತವವಾಗಿ ತ್ಯಾಗರಾಜರು ಕರ್ಮಸಿದ್ಧಾಂತದಲ್ಲಿ ನಂಬುಗೆಯುಳ್ಳವರು. ಆದಕಾರಣ ಅವರ ಮನಸ್ಸು ಈಗ ಪೂರ್ವಕರ್ಮಗಳೆಡೆಗೆ ಹರಿಯುತ್ತದೆ. ವರ್ತಮಾನ ಜನುಮದಲ್ಲೇನೋ ತಾವು ಮನಸಾರ ಭಕ್ತಿಮಾರ್ಗವನ್ನು ಅನುಸರಿಸಿರಬಹುದು. ಆದರೆ ಪೂರ್ವಜನ್ಮಗಳ ಫಲವಾಗಿ ರಾಮ ತಮ್ಮೆಡೆ ಕೃಪೆದೋರಿಲ್ಲವೋ ? ಈ ಜನ್ಮದಲ್ಲಿ ಅರಿತೋ ಅರಿಯದೆಯೋ ಮಾಡಿದ ದುಷ್ಕೃತ್ಯಗಳಿಗಾಗಿ ಕ್ಷಮೆಬೇಡಿದ್ದರೂ ದೇವರ ಮೃದುಹೃದಯ ಕರಗಲಿಲ್ಲ. ಇದಕ್ಕೆ ತಮ್ಮ ಪೂರ್ವಕರ್ಮಗಳೇ ಕಾರಣವೆಂದು ಅವರೀಗ ನಂಬುತ್ತಾರೆ.

ವೇದಾಂತದಲ್ಲಿ ಮೂಲತಃ ಕರ್ಮವು ಮೂರು ಬಗೆ. ಅವು ಸಂಚಿತ, ಪ್ರಾರಬ್ಧ ಮತ್ತು ಆಗಾಮಿ.

**ಸಂಚಿತಕರ್ಮ** : ಪೂರ್ವದ ಅನೇಕ ಜನ್ಮಗಳಲ್ಲಿ ಮಾಡಲ್ಪಟ್ಟ ಕರ್ಮಗಳ ಸಂಚಯವಿದು. ಆದರೆ ಇದು ಇನ್ನೂ ಫಲಕೊಡಲು ಆರಂಭಿಸಿರುವುದಿಲ್ಲ.

**ಪ್ರಾರಬ್ಧಕರ್ಮ** : ಫಲಕೊಡಲು ಪ್ರಾರಂಭವಾದ ಕರ್ಮವೇ ಪ್ರಾರಬ್ಧಕರ್ಮ. ದೇಹದ

ಸ್ಥಿತಿ, ಗತಿ, ರೂಪಾದಿಗಳು ಪ್ರಾರಬ್ಧದ ಫಲ. ಇದನ್ನು ಬದಲಿಸಲು ಸಾಧ್ಯವಿಲ್ಲ. ಆದರೆ ಜೀವನ್ಮುಕ್ತಾವಸ್ಥೆಯಲ್ಲಿ ಜೀವನ್ಮುಕ್ತನು ಪ್ರಾರಬ್ಧಕರ್ಮದ ಪ್ರಭಾವಕ್ಕೆ ಒಳಗಾಗುವುದಿಲ್ಲ. ಎಂದರೆ ಆತ್ಮಸಾಕ್ಷಾತ್ಕಾರಿಗೆ ಪ್ರಾರಬ್ಧ ಜನ್ಯ ಶರೀರವಿದ್ದರೂ ಅವನ ಜ್ಞಾನಸ್ಥಿತಿಗೆ ಅದು ಬಾಧಕವಾಗಲಾರದು. ಜ್ಞಾನವು ಪ್ರಾಪ್ತವಾಯಿತೆಂದರೆ ಪ್ರಾರಬ್ಧವಲ್ಲದಿದ್ದರೂ ಸಂಚಿತ ಮತ್ತು ಆಗಾಮಿ ಕರ್ಮಗಳೂ ಭಸ್ಮವಾಗುತ್ತವೆ. ಪ್ರಾರಬ್ಧವು ತೀರಿದಬಳಿಕ ಅವನಿಗೆ ಪುನರ್ಜನ್ಮವಿಲ್ಲ. ಆದರೆ ಈ ಪ್ರಾರಬ್ಧವಿರುವವರೆಗೆ ಆತ ಕೆಲವು ಕರ್ಮಗಳನ್ನು ಮಾಡುತ್ತಲೇ ಇರುತ್ತಾನೆ. ಆದರೂ ಈ ಕರ್ಮಗಳಿಂದ ಅವನಿಗೆ ಬಂಧನವಿರುವುದಿಲ್ಲ. ಇದನ್ನು ಅದ್ವೈತವು ಪ್ರತಿಪಾದಿಸುತ್ತದೆ.

**ಆಗಾಮಿ ಕರ್ಮ** : ಮುಂದೆ ನಾವು ಅನುಭವಿಸುವ ವರ್ತಮಾನ ಜನ್ಮದ ಕರ್ಮದ ಫಲಗಳೇ ಆಗಾಮಿ.[೬]

ತ್ಯಾಗರಾಜರು ಸಂಚಿತ ಮತ್ತು ಪ್ರಾರಬ್ಧಕರ್ಮಗಳನ್ನು ಮಾತ್ರ ಕೆಲವು ರಚನೆಗಳಲ್ಲಿ ಪ್ರಸ್ತಾಪಿಸುತ್ತಾರೆ. ಅದರಲ್ಲಿ ಒಂದೆರಡು ಉದಾಹರಣೆಗಳನ್ನು ಕೆಳಕಂಡಂತೆ ಉಲ್ಲೇಖಿಸಬಹುದು.

**ಸಂಚಿತ ಕರ್ಮಮು ದೊಲಗಿಂಚಿ**
**(ಸಂಚಿತ ಕರ್ಮಗಳನ್ನು ನಾಶಗೊಳಿಸಿ)**

(ನಿನ್ನೇನಮ್ಮಿನಾನು)

ಪ್ರಾರಬ್ಧಮಿಟ್ಲುಂಡಗಾ ಒರುಲನನ ಪನಿಲೇದು
**(ಪ್ರಾರಬ್ಧಕರ್ಮವೇ ಹೀಗಿರಲು ಇತರರರನ್ನು ನಿಂದಿಸುವಂತಿಲ್ಲ)**

**(ಪ್ರಾರಬ್ಧಮಿಟ್ಲುಂಡಗಾ)**

**ತೊಲಿಕರ್ಮಮಣಗ ಜೂತಾಮುರಾರೆ**
**(ಪೂರ್ವದ ಪಾಪಕರ್ಮಗಳ ನಿವಾರಣೆಗಾಗಿ ನೋಡೋಣ ಬನ್ನಿ)**

**(ಕೊಲುವೈಯುನ್ನಾಡೆ)**

ನೇ ಮುಂದು ರಾನಿ ಜೇಸಿನ ಕರ್ಮಮನುಕೋವಲೆಗಾನಿ
**(ಈಮುನ್ನ ನಾನು ಮಾಡಿದ ಕರ್ಮವೆಂದುಕೊಳ್ಳಬೇಕೇ ಹೊರತು)**

(ಒರುಲನಾಡುಕೋವಲಸಿನದೇಮಿ)

ದೇವರು ಕೃಪಾಕರನಾಗಿದ್ದರೂ ಆತ ಕರ್ಮಫಲ ವಿತರಕನೂ ಹೌದೆಂಬ ಅರಿವು ತ್ಯಾಗರಾಜರಿಗಿದೆ. ಆದ್ದರಿಂದ ತಮ್ಮ ಕರ್ಮಕ್ಕೆ ತಕ್ಕ ಪ್ರತಿಫಲವನ್ನು ದೇವರು ತಮಗೆ ನೀಡಿರುವುದು ಆತನ ತಪ್ಪಲ್ಲ. ತಮ್ಮ ಈ ಸ್ಥಿತಿಗೆ ಇತರರನ್ನು ಗುರಿಮಾಡುವಂತಿಲ್ಲ ಎಂದು ವಿಷಾದದಿಂದ ನುಡಿಯುತ್ತಾರೆ.

**ನಿನ್ನಾಡನೇಲ ನೀರಜಾಕ್ಷ ॥**
**ಕನ್ನವಾರಿಪೈನಿ ಕಾಕಸೇಯನೇಲ ॥**

ಕರ್ಮಾನಿಕಿ ತಗಿನಟ್ಟು ಕಾರ್ಯಮುಲು ನಡಿಚೇನಿ ..........

(ನಿನ್ನಾಡನೇಲ ನೀರಜಾಕ್ಷ)

ತಮ್ಮ ಪ್ರಾರಬ್ಧವೇ ಹೀಗಿರುವಾಗ ಇತರರನ್ನು ದೂಷಿಸುವಂತಿಲ್ಲ (ಒರುಲ ನಾಡು ಕೋವಲಸಿನದೇಮಿ; ನಿನ್ನನವಲಸಿನದೇಮಿ). ಈ ಮುನ್ನ ತಾವು ಮಾಡಿದ ಪೂಜಾ ಫಲವೇ ಇದು (ತೊಲಿನೇನು ಜೇಯು ಪೂಜಾಫಲಮೀಲಾಗೇ). ಅಂಗೈಹುಣ್ಣಿಗೆ ಕನ್ನಡಿಯ ಅವಶ್ಯವಿಲ್ಲದಂತೆ ಇದಕ್ಕೆ ಮತ್ತಾವ ಸಾಕ್ಷಿಯ ಅಗತ್ಯವಿಲ್ಲ. ಮಾಡಿದ ದುಷ್ಕರ್ಮಗಳ ಪರಿಹಾರಕ್ಕಾಗಿ ಪುಣ್ಯವನ್ನು ಹಣಕೊಟ್ಟು ಅಂಗಡಿಯಿಂದ ಕೊಳ್ಳಲಾಗದು.

ತೊಲಿನೇನು ಜೇಸಿನ ಪೂಜಾಫಲಮೀಲಾಗೇ
ವೆಲವೇಸಿ ತೀಯಗವಚ್ಚುನಾ ................

(ತೊಲಿನೇನು)

ಇದೀಗ ಹಿಂದೆ ದುಡುಕಿ ಮಾಡಿದ ಕಾರ್ಯಫಲದ ಅರಿವಾಗಿದೆ.ತಮಗೆ—ಎನ್ನುತ್ತಾರೆ.

ತೊಲಿಜನ್ಮಮುನಜೇಯು ದುಡುಕುದೆಲಿಸೆನುರಾಮ ||
................. ಅರಚೇತಿ ಪುಂಟಿಕದ್ದಮುವಲೆ ನಾ ||

(ತೊಲಿ ಜನ್ಮಮುನಜೇಯು)

ಹೀಗೆ ತ್ಯಾಗರಾಜರು ತಾವು ದೈವಕೃಪೆಗೆ ಪಾತ್ರರಾಗದಿರಲು ತಾವೇ ಸ್ವತಃ ಕಾರಣವಿರಬಹುದು ಅಥವಾ ತಮ್ಮ ಪೂರ್ವಕರ್ಮಗಳ ಕಾರಣವಿರಬಹುದು ಇಲ್ಲವೇ ದೇವರು ಅಥವಾ ಇನ್ನಾರಾದರೂ ಕಾರಣವಿರಬಹುದೆಂದು ಕಲ್ಪಿಸಿಕೊಳ್ಳುತ್ತಾರೆ.

ಮೇಲೆ ತ್ಯಾಗರಾಜರು ಪಟ್ಟಿಮಾಡುವ ಶಂಕೆಗಳಲ್ಲಿ ಕೆಲವು ವಿಶೇಷ ಅಂಶಗಳು ನಮ್ಮ ಗಮನ ಸೆಳೆಯುತ್ತವೆ. 'ಎಂದುಕೀ ಚಲಮು' ರಚನೆಯಲ್ಲಿ ದೇವರೊಂದಿಗೆ ತ್ಯಾಗರಾಜರ ವಿರುದ್ಧ ಚಾಡಿಮಾತುಗಳನ್ನು ಆಡಿರುವವರೆಲ್ಲರೂ ಸ್ತ್ರೀಯರಾಗಿದ್ದಾರೆ. ಇವರ ದುರ್ಬೋಧನೆಯಿಂದ ರಾಮ ತಮ್ಮೆಡೆಗೆ ಬಂದಿಲ್ಲವೇ ಎಂದು ಶಂಕಿಸುವಾಗ ತ್ಯಾಗರಾಜರು ತಮ್ಮನ್ನೂ ಸ್ತ್ರೀಸ್ಥಾನದಲ್ಲೇ ಇರಿಸಿಕೊಂಡಿರಬಹುದು. ಸ್ತ್ರೀಸಹಜ ಸಂಶಯ ಮತ್ತು ಮಾತ್ಸರ್ಯಗಳ ಧ್ವನಿ ಇಲ್ಲಿ ಅಡಗಿದೆ. ಇನ್ನು 'ರಾಮಚಂದ್ರನೀದಯ' ರಚನೆಯಲ್ಲಿ ಕೈಕೇಯಿ ಮೇಲಿನ ಕೋಪದಿಂದ ದಯೆ ತೋರಿಲ್ಲವೆಂದು ಹೇಳುವಾಗ ಸ್ತ್ರೀಯರ ಸ್ವಾರ್ಥಗುಣನಿಂದನೆಯ ಭಾವ ಸೂಚ್ಯವಾಗಿದೆ. ಸ್ವಾರ್ಥಕ್ಕಾಗಿ ಸ್ತ್ರೀಯರು ಇತರರ ಸೌಖ್ಯವನ್ನು ಗಣಿಸದಿರುವ ಬುದ್ಧಿ ಅಡಗಿದೆ. ಹೀಗೆಂದ ಮಾತ್ರಕ್ಕೆ ತ್ಯಾಗರಾಜರಿಗೆ ಸ್ತ್ರೀಯರ ಬಗ್ಗೆ ದ್ವೇಷವಿತ್ತೆಂದು ತಿಳಿಯಲಾಗದು. ಅವರು ಕೌಸಲ್ಯ, ಶಬರಿ ಮೊದಲಾದವರನ್ನು ಕೊಂಡಾಡಿರುವುದನ್ನೂ ನಾವು ಅವರ ರಚನೆಗಳಲ್ಲಿ ಕಾಣಬಹುದು (ನೋಡಿ, ವಿನಯಮುನನು ಮತ್ತು ಎಂತನಿ ನೇ).

### ೫. ದೈವನಿಂದನೆ ಮತ್ತು ರೋಷೋಕ್ತಿ

ಈ ಘಟ್ಟದಲ್ಲಿ ತ್ಯಾಗರಾಜರಿಗೆ ದೇವರ ಮೇಲೇ ಕೋಪ ಬರಲಾರಂಭವಾಗಿದೆ. ಅವರು ದೇವರನ್ನು ತರಾಟೆಗೆ ತೆಗೆದುಕೊಳ್ಳುತ್ತಿದ್ದಾರೆ. ರೋಷೋಕ್ತಿಗಳಿಂದ ದೇವರನ್ನು ನಿಂದಿಸುತ್ತಾರೆ. ವ್ಯಂಗ್ಯವಾಗಿ ಹೀಯಾಳಿಸುತ್ತಾರೆ. ಹಾಸ್ಯ ಮಾಡುತ್ತಾರೆ. ತಾವು ಈ ಲೋಕದಲ್ಲಿ ಶ್ರೀರಾಮನ ದಾಸಾನುದಾಸರಾಗಿ ಫಲವೇನು? ತಮ್ಮಂಥ ಬಡದಾಸರೆಡೆಗೆ ಕರುಣೆ ತೋರಿಲ್ಲದ ಆತ ದಾಸಜನರಕ್ಷಕ ಹೇಗೋ ತಿಳಿಯದಾಗಿದೆ ಎನ್ನುತ್ತಾರೆ.

**ನೀ ದಾಸಾನುದಾಸುಡನನಿ ಪೇರೇ ಯೇಮಿ ಫಲಮು ?**
**ಪೇದಸಾಧುಲಂದು ನೀಕು ಪ್ರೇಮಲೇಕ ಪೋಯೆ**

(ನೀ ದಾಸಾನುದಾಸುಡನನಿ)

ಕೋರಿಕೋರಿ ಆತನನ್ನೇ ಅನುಸರಿಸಿದರೆ, ಆತನ ರೀತಿಯೇ ಬೇರೆಯಾಗಿದೆ (ರಾಮಾಭಿರಾಮ ರಮಣೀಯನಾಮ). ಅತಿ ಶ್ರದ್ಧೆಯಿಂದ ತಾವು ಮಾಡಿದ ಪೂಜೆಗಿಂತ ಇತರರು ಮಾಡಿದ ಅಶ್ರದ್ಧೆಯ ಪೂಜೆಯೇ ಆತನಿಗೆ ತೃಪ್ತಿತಂದಿದೆ (ಸರಿವಾರಿಲೋನ). ತಾವು ನಿರ್ಗತಿಕರಾಗಿ ಬೇಡಿದರೆ ದೇವರಿಗೆ ದಯೆಬರಲಾರದು. ಬಹುಶಃ ತಮ್ಮ ಬಳಿಯೂ ಹಣವಿದ್ದಿದ್ದರೆ ಆತನ ದೃಷ್ಟಿ ತಮ್ಮೆಡೆಗೂ ಬೀಳುತ್ತಿತ್ತೇನೋ ? ರಾಕ್ಷಸರಾಜ ಪುತ್ರನಾದ ಪ್ರಹ್ಲಾದನನ್ನು ರಕ್ಷಿಸಿದ ದೇವರು ತಮ್ಮ ಪೂರ್ಣವಿಶ್ವಾಸದ ಮೊರೆಗೆ ಓಗೊಡಲಿಲ್ಲ. ಬೇರೆ ದಾರಿಯಿಲ್ಲವೆಂದು ರಾಮನಲ್ಲೇ ಬೇಡಿದರೆ ಆತನಿಗೆ ವರ ನೀಡಲು ತೋರಲಿಲ್ಲವೇ ?

**ದರಿದಾಪುಲೇಕ ವೇಡಿತೇ ದಯರಾದೇಮೋ ಶ್ರೀರಾಮ ॥**
**ಕರಿಧನಮುಲು ಗಲಿಗಿತೇ ಕರುಣಿಂಚಿ ಬ್ರೋತುವೇಮೋ ? ॥**
**ಅಲನಾಡು ನಿರ್ಜರವೈರಿ ಬಾಲುನಿಜೂಚಿ ಬ್ರೋಚಿತಿವಿಗಾನಿ**
**ವಲಚಿ ಪದಮುಲ ನಮ್ಮಿತೇ ವರಮೀ ದೋಚೆನಾ? ತ್ಯಾಗರಾಜು ॥**

(ದರಿದಾಪುಲೇಕ)

ಅಥವಾ ಹಿಂದೆ ರಾಮನಿಂದ ರಕ್ಷಿಸಲ್ಪಟ್ಟವರೆಲ್ಲ ಆತನ ಸಂಬಂಧಿಕರಾಗಿದ್ದರೇ ?

**ಮುನು ನೀ ದಾಸುಲಕು ನೀ ಕೇಟಿವಾವುಲೋ ?**

(ಓರಜೂಪು ಜೂಚೇದಿ)

**ನಾಟಿಭಕ್ತುಲು ನೀಕೇಟಿ ವಾವುಲೋ?**

(ರಾಮ ರಾಮ ರಾಮ ರಾಮ ಯನಿನಂತ)

ದ್ರೌಪದಿ ಮಾನರಕ್ಷಣೆ ಮಾಡಿದಾಗ ಆಕೆ ದೇವರಿಗೇನುಕೊಟ್ಟಳು ? ಗಜೇಂದ್ರನು ವಿಶೇಷವಾದ ಲಂಚವನ್ನೇನಾದರೂ ಕೊಟ್ಟನೇ?

**ಇಭರಾಜೇಂದ್ರುಡು ಯೆಕ್ಕುವೈನ ಲಂಚಮಿಚ್ಚಿನದೇಮಿರಾ ?**
**ಸಭಲೋ ಮಾನಮು ಪೋವು ಸಮಯಂಬುನ**

**ಸತಿ ಯೇಮಿಚ್ಚೆನುರಾ ?**

(ನಾಮೊರಲನು ವಿನಿ ಯೇಮರವಲೆನಾ)

ಪ್ರೀತಿ-ಅನುರಾಗಗಳಿಗೆ ದೇವರಲ್ಲಿ ಕೊರತೆಯಿದ್ದು ಅದನ್ನು ತಮ್ಮೆಡೆಗೂ ತೋರುವುದರಿಂದ ಆತನ ಗಂಟೇನಾದರೂ ಹೋದೀತೇ ? (ರಾಮದೈವಮಾ). ರಾಮನ ಈ ರೀತಿಗೆ ಎದುರಾಡುವವರು ಯಾರಿಲ್ಲವಾದರೂ ಹೀಗೆ ಆತ ಮಾತಿನಿಂದ ನುಸುಳಿಕೊಳ್ಳಬಾರದು.

**ಎದುರು ಬಲ್ಕುವಾರೆವರು ಲೇರುರಾ**
**ನೋಟಿಮಾಟ ಜಾರ್ಚಗರಾದುರಾ**

(ಏಟಿ ಯೋಚನಲು ಜೇಸೇವುರಾ)

ರಾಮನು ನಿಜಭಕ್ತರಿಗೆ ನೀಡಿದ ಆಶ್ವಾಸನೆಗೆ ಸಾಕ್ಷಿಯಿಲ್ಲವೆಂದು ಸಾಧಿಸಹೊರಡುವುದು ಸರಿಯಲ್ಲ. ಜಗತ್‌ಸಾಕ್ಷಿಯಾದ ಸೂರ್ಯಕುಲತಿಲಕನಾಗಿ ಜನಿಸಿ ಸರ್ವಜ್ಞನಾದ ಆತನೇ ಸಾಕ್ಷಿಯನ್ನು ಬಯಸಿದರೆ ನಗೆಗೀಡಾಗುವಂತಾಗುತ್ತದಷ್ಟೆ.

**ಸಾಕ್ಷಿ ಲೇದನುಚು ಸಾಧಿಂಪಕೇ .....**
**ವೀಕ್ಷಕಾದುಲೆಲ್ಲ ನವ್ವರಾ ? ಜಗ**
**ತ್ಸಾಕ್ಷಿವಂಶ ...................**

(ಸಾಕ್ಷಿಲೇದನುಚು ಸಾಧಿಂಪಕೇ)

ಇದೀಗ ತಮ್ಮನ್ನು ಸಲಹದಿದ್ದರೆ ಜನರು ತಮ್ಮ ಭಕ್ತಿಯನ್ನು ಮೆಚ್ಚುವರಲ್ಲದೆ ರಾಮನ ಶುಭಚರಿತೆಯನ್ನಲ್ಲ ಎಂಬ ಮಟ್ಟಕ್ಕೆ ಏರಿ, ಪೋಷಿಸುವೆನೆಂದು ಅಭಯ ನೀಡಿ ಇದೀಗ ಕುಂಟುನೆಪವೊಡ್ಡಿದರೆ ದೇವರ ವಚನಭ್ರಷ್ಟತೆಯ ನಡತೆಗೆ ಜನರು ಕೇಕೆ ಹಾಕಿ ನಗುತ್ತಾರಷ್ಟೇ ಎಂದು ರೋಷದಿಂದ ತ್ಯಾಗರಾಜರು ನುಡಿಯುತ್ತಾರೆ.

**ನನ್ನು ವಿಂತಚೇಸಿತೇ ನಿನ್ನೂರಂತ ನವ್ವರಾ?**

(ಇಂತ ತಾಮಸಮ್ಮೈತೇ ಎಂತನಿ ಸೈರಿಂತು)

**ಕೇಕಲು ವೇತುರುರಾ ಕೇಶವ**

(ಸಾಕೇತ ನಿಕೇತನ)

ರಾಮನದು ಇದೆಂಥ ಶೌರ್ಯ ? ಇಂಥ ದುಷ್ಟತನವೇಕೆ ? ನಿಜಭಕ್ತರೆಡೆಗೆ ಆತನ ದಿವ್ಯ ಅಲಕ್ಷ್ಯದ ಈ ಭಾವವನ್ನು ದೇವತೆಗಳಿರಲಿ, ರಾಕ್ಷಸರೂ ಮೆಚ್ಚುವುದಿಲ್ಲ.

**ಇದೇಟಿ ಶೌರ್ಯಮು . . . . . . . .**
**ಪರಾಕು ನಾಯೆಡನು ಜೇಸಿತೇ ಸುರಾಸುರುಲು ಮೆತ್ತುರಾ ?**
**ಇಪುಡು ಈ ಹರಾಮಿತನಮೇಲ ?**

(ಎದುಟನಿಲಚಿತೆ)

ಹೀಗೆ ತ್ಯಾಗರಾಜರು ಇಷ್ಟದೇವರಿಗೆ ದುಷ್ಟತನದ ಆಪಾದನೆ ಹೊರೆಸುತ್ತಾರೆ.

ದೇವರು ಈಗಾಗಲೇ ಮಾಡಿರುವ ಇನ್ನೂ ಕೆಲವು ಕೃತ್ಯಗಳತ್ತ ತ್ಯಾಗರಾಜರ ಗಮನ

ಹರಿಯುತ್ತದೆ. ಇದನ್ನು ನೆನೆಸಿಕೊಂಡು ಅವರು ದೇವರೇನೂ 'ಘನನಲ್ಲ' ಎಂದು ಹೀಯಾಳಿಸುತ್ತಾರೆ. ರಾಮನಾಡಿದ ಕಳ್ಳಾಟಗಳೇನೂ ಒಂದೆರಡಲ್ಲ. ವಿಭೀಷಣನಿಗೆ ಮೋಸದಿಂದ ಪಂಗನಾಮ ಹಾಕಿದ್ದಾನೆ.* ಬೆಣ್ಣೆಯನ್ನು ತಾನೇ ತಿಂದು ಗೋಪಕನ್ನೆಯರ ಮುಖಕ್ಕೆ ಬಳಿದಿದ್ದಾನೆ.

**ಡೊಂಗಜಾಡಲೇಲ ಇಲ್ಲು ಬಂಗಾರಾಯನಾ ?**
**ರಂಗಡಾ ವಿಭೀಷಣುನಿಕಿ ಪಂಗನಾಮಮಿಡಿನರೀತಿ**
**ವೆನ್ನ ತಾ ಭುಜಿಂಚಿ ಗೋಪಿಕನ್ಯ ಮುಖಮುನ**
**ತಿನ್ನಗ ನಲಂದಿನಟ್ಲು . . . . .**

(ರಾಮದೈವಮಾ)

ಭಕ್ತರಿಂದ ತಪ್ಪಿಸಿಕೊಳ್ಳುವ ಸಲುವಾಗಿ ಬೆಟ್ಟದ ಮೇಲೆ ಹೋಗಿ ನಿಂತಿದ್ದಾನೆ. ಶ್ರೀರಂಗಕ್ಕೆ ಹೋಗಿ ಮಲಗಿದ್ದಾನೆ. ಎಲ್ಲಿ ತನ್ನ ಭಕ್ತರು ತನ್ನನ್ನು ಬೇಡಲು ಬರುವರೋ ಎಂದು ತಾನೇ ಅವರಿಗಿಂತ ಮೊದಲೇ ಅವರಲ್ಲಿ ಯಾಚಿಸಿದ್ದಾನೆ. ದುಃಖದಿಂದ ಬಂದ ಕಡುಬಡವ ಕುಚೇಲನನ್ನು ಮೋಸಗೊಳಿಸಲು ಗೋಪಿಯರ ಸೀರೆಗಳನ್ನೇ ಅಪಹರಿಸಿದ್ದಾನೆ (ಸೀತಾನಾಯಕ ಶ್ರಿತಜನಪೋಷತ). ತನ್ನ ಪತ್ನಿ ಸೀತೆಯೂ ಒಬ್ಬ ಭಕ್ತೆ ಎಂಬ ನೆಪವೊಡ್ಡಿ ಸುಗ್ರೀವನೆಂಬ ವಾನರನೊಡನೆ ಸಖ್ಯ ಮಾಡಿದ್ದಾನೆ. ಶತ್ರು ಸಹೋದರನಾದ ವಿಭೀಷಣನಿಗೆ ರಕ್ಷಣೆ ನೀಡುವಂತೆ ತಮ್ಮನಿಗೆ (ಲಕ್ಷ್ಮಣನಿಗೆ) ಆದೇಶಿಸಿದ್ದಾನೆ. ಸೀತೆಯ ಕುಶಲದ ಸುವಾರ್ತೆಯನ್ನು ತಂದ ಆಂಜನೇಯನೆಂಬ ಕಪಿಗೆ ಬ್ರಹ್ಮಪದವಿಯನ್ನಿತ್ತಿದ್ದಾನೆ. ಇಲ್ಲಿ ನರ-ವಾನರ ಮೈತ್ರಿ, ಶತ್ರುಪಕ್ಷದವನ ರಕ್ಷಣೆ (ಭಕ್ತನೆಡೆಗೆ ನಿರ್ಲಕ್ಷ್ಯ) ಯಾವ ರಾಜ್ಯಾಂಗದಲ್ಲೂ ಇಲ್ಲವೆಂಬ ವ್ಯಂಗ್ಯಪೂರಿತ ದೋಷಾರೋಪಣೆ ಇದೆ. ಇನ್ನು ದೇವರಲ್ಲಿ ವರ ಬಯಸಿ ಸುಖಿಸಿದವರು ಯಾರಿದ್ದಾರೆ? ಅನನ್ಯ ಪ್ರೀತಿಯಿಂದ ಆತನನ್ನು ಆಶ್ರಯಿಸಿದ ಸೀತೆ ಅಡವಿಗೆ ಹೋಗುವಂತಾಯ್ತು. ಮೋಹದಿಂದ ಬಯಸಿಬಂದ ಶೂರ್ಪನಖಿಗೆ ಮೂಗೇ ಇಲ್ಲದಂತಾಯ್ತು. ನಾರದನು ಆತನ ಮಾಯಾವಿಲಾಸವನ್ನು ಕಾಣಲು ಅಪೇಕ್ಷಿಸಿದುದಕ್ಕೆ ಆತ ಸ್ತ್ರೀಯಾಗಿ ಸಂಸಾರಿಯಾಗುವಂತಾಯ್ತು. ದೇವಕಿ ಆತನ ಬಾಲಲೀಲೆಗಳನ್ನು ನೋಡಲು ಅಪೇಕ್ಷಿಸಿದರೆ ಅದು ಯಶೋದೆಗೆ ಲಭ್ಯವಾಯಿತು. ಗೋಪಿಯರು ರತಿಭಿಕ್ಷೆ ಕೇಳಲಾಗಿ ಅವರೆಲ್ಲ ತಮ್ಮ ಪತಿಯನ್ನು ಬಿಡುವಂತಾಯ್ತು.

**ಆಶ್ರಯಿಂಚಿ ವರಮಡಿಗಿನ ಸೀತ ಯಡವಿಕಿ ಬೋನಾಯೆ**
**ಆಶರಹರಣ ! ರಕ್ಕಸಿ ಇಷ್ಟಮಡುಗ ನಪುಡೆ ಮುಕ್ಕುಪೋಯೆ . . . .**
**ವಾಸಿಗ ನಾರದಮೌನಿ ವರಮಡುಗ ವನಿತರೂಪುಡಾಯೆ . . . . .**
**ಸುತುನಿ ವೇಡುಕ ಜೂಡ ದೇವಕಿಯಡುಗ ಯಶೋದ ಜೂಡನಾಯೆ . . . .**

---

* ನೋಡಿ ಅಧ್ಯಾಯ ಹದಿನೈದು.

**ಸತುಲೆಲ್ಲ ರತಿಭಿಕ್ಷಮಡುಗ ವಾರಿವಾರಿ ಪತುಲ ವೀಡನಾಯೆ . . . .**
**(ಅಡಿಗಿ ಸುಖಮುಲೆವ್ವರನುಭವಿಂಚಿರಿರಾ)**

ಇತರರಿಗೆ ಹೇಳಿದ್ದು ಒಂದಾದರೆ ಮಾಡಿದ್ದು ಇನ್ನೊಂದು ಎಂಬಂತಾಗಿ ದೇವರು ತನ್ನ ಹಟವನ್ನೇ ಸಾಧಿಸಿದ್ದಾನೆ.

**ಬೋಧಿಂಚಿನ ಸನ್ಮಾರ್ಗವಚನಮುಲ**
**ಬೊಂಕುಜೇಸಿ ತಾ ಪಟ್ಟಿನ ಪಟ್ಟು ಸಾಧಿಂಚೆನೆ**
**(ಸಾಧಿಂಚೆನೆ)**

ದೇವರು ಸರ್ವಶಕ್ತನೆಂದು ನಂಬಿ ಕೋರಿದ ಆತನ ಭಕ್ತಬಂಧುಗಳು ತಮ್ಮಂತೆಯೇ ವ್ಯಸನಾಬ್ಧಿಯಲ್ಲಿದ್ದರೆ? ಆದರೆ ತ್ಯಾಗರಾಜರೀಗ ಆತನನ್ನು ನಂಬಿ ಖಿನ್ನರಾಗುವಂತಾಯ್ತು.

**ಧೀರುಡನುಚು ಕೋರುಕೊನ್ನ ನೀ**
**ವಾರಲೀ ವೆಸನ ವಾರ್ಧಿನುಂಡಿರಾ?**
**ನಿನ್ನು ನಮ್ಮಿ ನೇ ಖಿನ್ನುಡೈತಿ**
**(ಓ ರಮಾರಮಣ ರಾಮ)**

ರಾಮನಿಗೆ ತನ್ನವರೆಂಬ ಅಭಿಮಾನವಿಲ್ಲ (ತನವಾರಿತನಮು; ಸನಾತನ) ಎಂದು ನಿಂದಿಸಿ ಕಡೆಗೆ ಆತನಲ್ಲಿ ಹೀಗೆ ನುಡಿಯುತ್ತಾರೆ. 'ಹೋಗಲಿ, ನಾನಂತೂ ನಿನಗೆ ಲೆಕ್ಕವಿಲ್ಲ. ನಿನ್ನಲ್ಲಿ ನಂಬಿಕೆಯಿರಿಸಿ, ನಿನ್ನ ಪರವಾಗಿ ಪಾಮರರೆದುರು ನಾನಾಡಿದ ಉನ್ನತವಾದ ಮಾತುಗಳನ್ನು ನಿಜಗೊಳಿಸಲಾದರೂ ನನ್ನನ್ನು ರಕ್ಷಿಸಿ ನಿನ್ನ ಗೌರವವನ್ನು ಉಳಿಸಿಕೋ' (ಅಪರಾಧಮುಲ ಮಾನ್ಪಿ).

ತ್ಯಾಗರಾಜರು ತಮ್ಮ ಭಕ್ತಿನಿಷ್ಠೆ ವಿಫಲವಾಗುತ್ತಿದ್ದ ಈ ಸಂದರ್ಭದಲ್ಲಿ ದೇವರೊಡನೆ ಪಣ ಒಡ್ಡುವ ಮಜಲನ್ನು ತಲುಪುತ್ತಾರೆ. 'ನೀನು ಸತ್ಯಸಂಧನೇ ಆಗಿದ್ದರೆ, ಎಲ್ಲರೆದುರು ನನ್ನನ್ನಾದರಿಸು' ಎನ್ನುತ್ತಾರೆ.

**ಸತ್ಯಸಂಧುಡು ನೀವೈತೇ**
**ಅಂದರಿಲೋ ನನ್ನಾದರಿಂಚುಕೊಮ್ಮು**
**(ಇನ್ನಾಳ್ಳುನನ್ನೇಲಿ)**

ಹೀಗೆಯೇ ಅನುಷ್ಠಾನ ಪರರೆಲ್ಲರೂ ತಮ್ಮ ಧರ್ಮ ಅಥವಾ ನಿಷ್ಠೆಗೆ ಆಪತ್ತೊದಗಿದಾಗ ಪಣ ಒಡ್ಡುವುದು ಸ್ವಾಭಾವಿಕ. ವಾಲ್ಮೀಕಿ ರಾಮಾಯಣದಲ್ಲಿ ರಾವಣ ಹನುಮಂತನ ಬಾಲಕ್ಕೆ ಬೆಂಕಿ ಇರಿಸಿದಾಗ, ಸೀತೆ 'ತಾನು ಪತಿವ್ರತೆಯೇ ಆಗಿದ್ದರೆ ಹನುಮಂತನ ಬಾಲ ಸುಡದಿರಲೆಂ'ದು ಪಣ ಒಡ್ಡುತ್ತಾಳೆ.[೭] ಪುರಂದರರು 'ಎನಗೂ ಆಣೆ ರಂಗ ನಿನಗೂ ಆಣೆ ಎನಗೂ ನಿನಗೂ ಇಬ್ಬರಿಗೂ ನಿನ್ನ ಭಕ್ತರಾಣೆ' ಎಂದು ಹಾಡಿದ್ದಾರೆ.[೮] ತ್ಯಾಗರಾಜರೂ ಪ್ರಹ್ಲಾದ ಭಕ್ತಿವಿಜಯದಲ್ಲಿ ಪ್ರಹ್ಲಾದ ತನ್ನಮೇಲೆ ಆಣೆಯಿಟ್ಟು ಹೊರಡುವಂತೆ ಹರಿಗೆ ಹೇಳಿದನೆಂಬಂತೆ ಬಣ್ಣಿಸುತ್ತಾರೆ.[೯]

**೬. ಸ್ತುತಿಯ ಮೂಲಕ ಒಪ್ಪಂದ**

ಭಕ್ತನು ರೋಷೋಕ್ತಿಗಳಿಂದ ದೇವರನ್ನು ನಿಂದಿಸಿದ ನಂತರ ಮುಂದಿನ ಈ ಹಂತದಲ್ಲಿ ಕ್ಷಮೆ ಯಾಚಿಸುವ ಬದಲು ಆತನೊಂದಿಗೆ ರಾಜಿಯಾಗುತ್ತಾನೆ. ನಿಂದಾ ಸ್ತುತಿಯ ನಂತರ ಭಕ್ತನಲ್ಲಿ ಬರುವ ವಿಶಿಷ್ಟವಾದ ಒಂದು ಸ್ಥಿತಿಯಿದು. ಇಲ್ಲಿ ನಿಷ್ಠುರವಾಗಲೀ, ಕ್ಷಮೆಯಾಗಲೀ ಇಲ್ಲದೆ ಒಂದು ರೀತಿ ಸಲಿಗೆಯನ್ನು ಪ್ರತಿನಿಧಿಸುವ ಮೈತ್ರಿ ಕಾಣಬರುತ್ತದೆ. **ತ್ಯಾಗರಾಜರ ಭಾವಲಹರಿ ಯಾವುದೇ ದಿಕ್ಕುಗಳಲ್ಲಿ ತಾತ್ಕಾಲಿಕವಾಗಿ ಚಲಿಸಿದರೂ ಅದು ಅಂತ್ಯಗೊಳ್ಳುವುದು ಪ್ರಪತ್ತಿಯಲ್ಲಿ ಮಾತ್ರ.** ಕರ್ಮ ಸಿದ್ಧಾಂತವನ್ನು ನಂಬಿ ದೇವರು ತಮ್ಮಿಂದ ದೂರವಾಗಿರುವುದಕ್ಕೆ ಪೂರ್ವಕರ್ಮವೇ ಕಾರಣವೆಂದರೂ ಕೂಡಲೇ ಅವರ ಮನ ಎಚ್ಚೆತ್ತು ದೇವರ ಕೃಪಾಗುಣವನ್ನು ಗುರುತಿಸುತ್ತದೆ. ದೇವರು ನಾಶಗೊಳಿಸಲಾಗದಂಥ ಘನಪಾಪವಾದರೂ ಯಾವುದೂ ಇಲ್ಲ. ಅಷ್ಟಲ್ಲದೆ ಪೂರ್ವಪಾಪಸಮೂಹಕ್ಕೂ ದೇವರು ಕುಠಾರಪ್ರಾಯನಾಗಿದ್ದಾನೆ.

**ತೊಲಿಚೇಸಿನ ಪಾಪವನ ಕುಠಾರಮಾ**

**(ಶರಶರ ಸಮರೈಕಶೂರ)**

ಎಂಥ ಪಾಪಗಳನ್ನೂ ಹೋಗಲಾಡಿಸಿ ಮನುಜರಿಗೆ ತನ್ನಲ್ಲಿ ಭಕ್ತಿನೀಡಿ ಅವರನ್ನು ರಕ್ಷಿಸಬಲ್ಲ ಶಕ್ತಿ ಆತನ ಕರಗಳಲ್ಲೇ ಅಡಗಿದೆ ಎಂಬುದನ್ನು ಅವರು ಬಲ್ಲರು. ದೇವರಿಗೆ ತಮ್ಮ ಪರಿತಾಪವನ್ನು ನಾಶಮಾಡಲು ಯಾವ ಕಷ್ಟವೂ ಇಲ್ಲ. ಅವರು ಕಷ್ಟಸುಖಗಳೆರಡರಲ್ಲೂ ದೇವರ ದಾಸಾನುದಾಸರಾಗಿದ್ದಾರೆ. ದಿಕ್ಕುಗಾಣದ ಅವರಿಗೆ ದೇವರಲ್ಲದೆ ಬೇರೆ ಯಾವ ಗತಿಯೂ ಇಲ್ಲ (ಮಾಪಾಲವೆಲಸಿಕಮಮು ಬ್ರೋವಗರಾದಾ; ಶ್ರೀರಾಮರಾಮರಾಮ ಸೀತಾಹೃಜ್ಜಲ ಧಿಸೋಮ). ಅಷ್ಟಲ್ಲದೆ ಈಗಾಗಲೇ ಎಷ್ಟೋ ಅನರ್ಥ ಕಾರ್ಯಗಳೆಸಗಿ ಶರಣೆಂದವರ ದುಃಖವನ್ನೂ ದೇವರು ಪರಿಹರಿಸಿ ರಕ್ಷಿಸಿದುದನ್ನೂ ಅವರು ಸ್ಮರಿಸಿ ದೇವರು ತನ್ನ ಈ ಮಹಿಮೆಯಿಂದ ತಮ್ಮನ್ನೂ ಕಾಪಾಡಿ ತನ್ನ ಮಹಿಮೆಯನ್ನು ದಕ್ಕಿಸಿಕೊಳ್ಳುವಂತೆ ಹೇಳುತ್ತಾರೆ.

**ಮಹಿಮ ದಕ್ಕಿಂಚುಕೋವಯ್ಯ**
**ಪನಿಕಿರಾನಿ ಪನುಲುಚೇಸಿ ಶರಣನು**
**ವಾರಿ ವೆತಲು ದೀರ್ಚಿ ಬ್ರೋಚಿತಿವೇ**

**(ಮಹಿಮ ದಕ್ಕಿಂಚುಕೋವಯ್ಯ)**

**ಕುಲಬಿರುದುನು ಬ್ರೋಚುಕೊಮ್ಮು**

**(ಕುಲಬಿರುದುನು)**

ಮರುಕ್ಷಣದಲ್ಲೇ ದೇವರನ್ನು ರೋಷೋಕ್ತಿಗಳಿಂದ ನಿಂದಿಸಿರುವುದು ನೆನಪಾಗಿ ಹೀಗೆನ್ನುತ್ತಾರೆ. 'ಶ್ರೀರಾಮನೇ, ನಿನ್ನೊಂದಿಗೆ ರಾಜಿಮಾಡಿಕೊಳ್ಳದೆ ಈ ಜನ್ಮದಲ್ಲಿ ಬದುಕಲು ಸಾಧ್ಯವೇ ಇಲ್ಲ.'

**ಈ ಜನ್ಮಮುನ ನಿನ್ನು ರಾಜಿಜೇಸಿಕೊನಲೇಕ ರಾಜಿಲ್ಲರನಿ . . . .**

**(ನಿನ್ನೇನೆರನಮ್ಮಿನಾನುರಾ)**

ನಿನ್ನನ್ನು ಬಿಟ್ಟುಬಿಡುವಷ್ಟು ಧೈರ್ಯ ನನ್ನಲ್ಲಿಲ್ಲ (ಕನ್ನತಂಡ್ರಿನಾಪೈ). ನಿನ್ನ ಚರಣಭಕ್ತಿ ಭವಸಾಗರವನ್ನೂ ದಾಟಿಸುತ್ತದೆಂಬುದು ನನಗೆ ತಿಳಿದಿದೆ (ರಮಾರಮಣರಾರಾ). ನನ್ನ ಸ್ವಪ್ನದಲ್ಲೂ ನೀನೇ ಇದ್ದೀಯೆ (ಅನುಪಮಗುಣಾಂಬುಧಿ). ನಿನ್ನನ್ನು ನಿಂದಿಸಲು ನನ್ನ ಮನವೆಂದಿಗೂ ಖಂಡಿತವಾಗಿ ಸಿದ್ಧವಿರಲಿಲ್ಲ. ಬೆಣ್ಣೆಯಂಥ ನಿನ್ನ ಮೃದು ಹೃದಯಕ್ಕೆ ನನ್ನ ವ್ಯಥೆಯ ಅರಿವಾಗಲಿಲ್ಲವಲ್ಲ ಎಂದು ನನಗೆ ವ್ಯಥೆಯಾಯಿತಷ್ಟೆ ಎನ್ನುತ್ತಾರೆ.

**ನಿನ್ನಾಡನು ನಾ ಮನಸೆಪುಡೈನ**
**ನಿಜಮುಗ ರಾಲೇದು**
**ವೆನ್ನವಂಟಿ ನೀ ಚಿತ್ತಾನಿಕಿ**
**ನಾವೆತಲು ತೆಲಿಯಲೇದು . . . .**

**(ಸಿಗ್ಗುಮಾಲಿ)**

ಓ ಸೀತಾರಾಮನೆ, ಪರಮದಯಾಳು ನೀನೆಂದೂ ಪಾಲಿಸುವೆಯೆಂದೂ ಅನುಸರಿಸಿದ ನನ್ನೆಡೆಗೆ ನಿನಗೆ ಕರುಣೆ ಇಲ್ಲವಲ್ಲ ಎಂದು ಕಣ್ತುಂಬಿತು ಎನ್ನುತ್ತಾರೆ.

**ಪರಮ ದಯಾಳುವನಿ ಪಾಲನ ಸೇತುವನಿ**
**ಸರಗುನ ದೇವರಾಯ ! ಗೊಲ್ಚಿನ ನಾಪೈ**
**ಕರುಣಲೇದನಿ ಕನ್ನೀರಾಯೆ ಓ ಸೀತಾರಾಮ**

**(ಇದಿನೀಕು ಮೇರಗಾದುರಾ)**

ತ್ಯಾಗರಾಜರಿಗೆ ಈಗಾಗಲೇ ದೇವರು ಅನ್ನತಾಂಬೂಲಗಳನ್ನು ಇತ್ತು (ಆದಯ ಶ್ರೀರಘುವರ) ಅವರನ್ನು ಸಾಕುತ್ತೇನೆ ಎಂದು ಭರವಸೆ ನೀಡಿದ್ದಾನೆ (ಸಾಕೇತ ನಿಕೇತನ). ತಾಯಿತಂದೆಯಾಗಿ ತಾನಿರುವಾಗ ಭಯಪಡಬೇಕಿಲ್ಲ ಎಂದಿದ್ದಾನೆ (ಚಾಲಾ ಕಲ್ಲ ಲಾಡುಕೊನ್ನ; ಸೀತಾಪತೇ). ಹೀಗೆ ತಾನಾಡಿದ ಅಂದಿನ ತನ್ನೆಲ್ಲ ವಚನಗಳನ್ನೂ ಆತ ಮರೆಯುವುದು ಸರಿಯಲ್ಲ (ನಾಡಾಡಿನ ಮಾಟನೇಡು ತಪ್ಪವಲದು). ತನ್ನ ಮಾತುಗಳನ್ನು ನಿಜಗೊಳಿಸಿ, ವಚನಭ್ರಷ್ಟನಾಗಬೇಡವೆಂದರೆ ರಾಮನು ಈ ರೀತಿ ಮೌನವಾಗಿರುವುದು ಸರಿಯಲ್ಲ.

**ನಾಟಿವಚನಮುಲೆಲ್ಲ ನಯಮುಸೇಯವೇಯಂಟಿ**
**ಮಾಟಾಡಕುಂಡುನದಿ ಮಂಚಿದೋ?**

**(ಧರ್ಮಾತ್ಮಾ ನನ್ನಿಪುಡು)**

ರಾಮನು ತಮಗಿತ್ತ ಭಾಷೆಯನ್ನು ಮರೆತನೋ ಎಂದು ಮತ್ತೆ ಅವರು ಜ್ಞಾಪಿಸುತ್ತಾರೆ (ನಾಟಿಮಾಟ ಮರಚಿತಿವೋ). ಆತನಿಗೆ ತನ್ನ ಮಾತುಗಳನ್ನು ಉಳಿಸಿಕೊಳ್ಳಲು ಇದೇ ಸೂಕ್ತ ಸಮಯ (ಇದಿ ಸಮಯಮುರಾ) ಎನ್ನುವ ತ್ಯಾಗರಾಜರು ಈ ಹಿಂದೆ

ತಮ್ಮನ್ನು ಹಲವು ಬಾರಿ ಲಾಲಿಸಿ, ಪಾಲಿಸಿ, ಅಪ್ಪಿಕೊಂಡುದನ್ನು ಸ್ಮರಿಸುತ್ತಾರೆ. ತ್ಯಾಗರಾಜರೆಲ್ಲೇ ಇದ್ದರೂ ಅವರನ್ನು ಹಿಂಬಾಲಿಸಿ ತಾನೂ ಬರುವುದಾಗಿ ಶ್ರೀರಾಮ ಹೇಳಿದ್ದಾನೆ.

**ಎಂದುಪೋಯಿನ ವೆಂಟನೇಗಿವತ್ತುನನುಚು**
**ಮುಂದು ಪಲ್ಕಿನ . . . . .**

(**ಇನ್ನಾಳ್ಳು ನನ್ನೇಲಿ ಎಂದುಕೀಗೇಲಿ**)

ತ್ಯಾಗರಾಜರ ಸನ್ನಡತೆಗಳಿಂದ ಸಂತೋಷಿಸಿದ್ದಾನೆ.

**ಆನಾಟಿ ಮಂಚಿ ನಡತನುಜೂಚಿ ನೀ**
**ವತ್ಕಂತ ಕೃಪ ಸೇಯಲೇದಾ?**

(**ಮುನುಪೇ ತೆಲಿಯಕ ಪೋಯೆನಾ**)

ಉದಾರಿಯಾಗಿ ತ್ಯಾಗರಾಜರೆಡೆಗೆ ಪ್ರೇಮದೋರಿ ತನ್ನೆಲ್ಲ ಮಹಿಮೆಗಳನ್ನೂ ತೋರಿದ್ದಾನೆ.

**ಪ್ರೇಮಜೂಚಿ ನಾಪೈ ಪೆದ್ದಮನಸುಜೇಸಿ**
**ನೀ ಮಹಿಮಲೆಲ್ಲ ನಿಂಡಾರ ಜೂಪಿ**

(**ಸೀತಾಪತೇ ನಾಮನಸುನ**)

ಪ್ರೀತಿಪೂರ್ಣ ದೊರೆಯಂತೆ ಆದರಿಸಿ ಇದೀಗ ಕೈಬಿಡುವುದು ದೇವರಿಗೆ ಹಿರಿತನವಲ್ಲ (ಮನಸುಲೋನಿ ಮರ್ಮಮುಲು ದೆಲುಸುಕೋ). ಒಮ್ಮೆ ಕರುಣಿಸಿ ಇನ್ನೊಮ್ಮೆ ತಿರಸ್ಕರಿಸುವಂತೆ ಮಾಡುವ ದೇವರ ಕಣ್ಣುಮುಚ್ಚಾಲೆಯಾಟ ತ್ಯಾಗರಾಜರಿಗೆ ಸರಿದೋರುತ್ತಿಲ್ಲ. ತಮ್ಮನ್ನು ನೋಡಿಯೂ ನೋಡದಂತೆ, ರಕ್ಷಿಸಿಯೂ ರಕ್ಷಿಸದಂತೆ ಬಾಧೆಗೊಳಪಡಿಸಬೇಕೆನಿಸಿತೇ?

**ಬ್ರೋಚಿ ಬ್ರೋವಕನು ಜೂಚಿ ಜೂಡಕನು**
**ಯೇಚುಟಕೇ ತೋಚೆನಾ? ಓರಾಮ**

(**ರಾಮರಾಮ ರಾಮರಾಮ ಯನಿನಂತ**)

ತಮ್ಮೆಲ್ಲ ಕೋರಿಕೆಗಳೂ ನೆರವೇರುವುದೆಂದು ಆರಾಧಿಸಿದ ತಮ್ಮನ್ನು ದುಃಖಕ್ಕೀಡು ಮಾಡುವುದು ತರವಲ್ಲ (ನೀವೇ ನನ್ನೆಡ* ಜೇಸಿತೇ). ಕರುಣಾನಿಧಿಯಾದ ಶ್ರೀರಾಮನು ತಮ್ಮ ಮನವಿಯನ್ನು ಆಲಿಸದೆ ಇನ್ನೂ ಯೋಚಿಸುತ್ತಿದ್ದರೆ ತಾವು ಸುಮ್ಮನಾಗುವುದಿಲ್ಲ ಎನ್ನುತ್ತಾರೆ.

**ಮನವಿನಿ ವಿನಕ ಯೋಚನ ಜೇಸಿತೇ ನೇ ವಿನನಯ್ಯ**

(**ಕರುಣಾಜಲಧೀ**)

---

* ನೀವೇ ಕನ್ನೆಡ ಜೇಸಿತೇ ಎಂಬ ಪಾಠಾಂತರವೂ ಇದೆ. ನೋಡಿ ತ್ಯಾಗರಾಜಸ್ವಾಮಿ ಕೀರ್ತನಲು, ಕೆ. ವಿ. ಶ್ರೀನಿವಾಸ ಅಯ್ಯಂಗಾರ್, ಪು. ೪೪.

ಎಂದರೆ ಭಕ್ತಿ ಅಪಕ್ವವಾಗಿದ್ದ ಹಂತದಲ್ಲೇ ದೇವರು ತಮ್ಮನ್ನು ರಕ್ಷಿಸಿ, ಇದೀಗ ಅದು ಇನ್ನೂ ಪಕ್ವಗೊಂಡಿರುವಾಗ ತಮ್ಮಿಂದ ದೂರವಿರುವ ದೇವರನ್ನು ಕಂಡು ತ್ಯಾಗರಾಜರು ವ್ಯಸನಗೊಂಡಿದ್ದಾರೆ. ದೇವರ ಸಾಮೀಪ್ಯಸುಖದ ಅರಿವು ಈಗಾಗಲೇ ಅವರಿಗಿದೆಯಾಗಿ ಆತನಿಂದ ದೂರವಿರುವ ವಿರಹಬಾಧೆ ಅಸಹನೀಯವಾಗಿದೆ. ದೇವರನ್ನು ಸಮೀಪಿಸಬೇಕೆಂಬ ಅವರ ಆಸೆ ಆಕಾಂಕ್ಷೆಗಳು, ಆತುರಕಾತುರಗಳು ಹೆಪ್ಪುಗಟ್ಟಿ ಹರಿದಿವೆ. ಹೀಗಾಗಿ ಅವರು ದೇವರಲ್ಲಿ ಹೀಗೆ ಮೊರೆಯಿಡುತ್ತಾರೆ. 'ಹಿಂದೆಂದೋ ನೀನು ನನ್ನನ್ನು ರಕ್ಷಿಸಿದ ಮಾತ್ರಕ್ಕೆ ಇದೀಗ ನಾನು (ದೀರ್ಘ ವಿರಹವನುಭವಿಸುತ್ತಾ) ಹೀಗಿರಬೇಕೆ? (ಎನ್ನಡೋ ರಕ್ಷಿಂಚಿತೇ ನೇ ನಿಪುಡೀ ವಗನುಯುಂಡವಲೆನಾ?) ಹಿಂದಿನ ನಿನ್ನ ರಕ್ಷಣೆಯಿಂದ ನನ್ನ ದುಃಖವು ಶಮನಗೊಳ್ಳುವ ಬದಲಾಗಿ ಅದು ಇನ್ನೂ ಅಧಿಕಗೊಂಡಿದೆ ಎಂಬುದು ಅವರ ಹೇಳಿಕೆ. ತ್ಯಾಗರಾಜರು ರಾಮನಿಲ್ಲದೆ ತಮಗೆ ಸುಖವಿಲ್ಲವೆಂಬುದನ್ನು ಪದೇಪದೇ ಸಾರುತ್ತಾರೆ. ಶ್ರೀರಾಮನ ಸಾಕಾರದ ಅನುಭವ ಅವರಿಗಾಗಿರುವುದರಿಂದ, ಈ ಸಾಕಾರದಿಂದ ಬೇರಾಗುವುದು ಅವರಿಗೆ ಇಷ್ಟವಿಲ್ಲ. ಆತನ ನಾಮ, ರೂಪ, ಪ್ರತಾಪ, ಶರಭಾಪ, ಸಲ್ಲಾಪಗಳೆಲ್ಲವೂ ತಮ್ಮನ್ನು ರೋಮಾಂಚಗೊಳಿಸಿವೆ (ನಿನ್ನುವಿನಾ ಸುಖಮುಗಾನ). ಅವರ ಬಾಹ್ಯಾಂತರಗಳೆಲ್ಲವೂ ರಾಮಮಯವಾಗಿದೆ. ರಾಮನಂಥ ದೈವವನ್ನು ಅವರು ಕಂಡೇ ಇಲ್ಲ ಎನ್ನುತ್ತಾರೆ (ನೀವಂಟಿ ದೈವಮು ನೇಗಾನ ನೀರಜಾಕ್ಷರಾಮಯ್ಯ). ಅವರಿಗೆ ರಾಮನ ಮಾತೇ ನಿಜವಾದ ಮಾತು, ರಾಮನ ನೋಟವೇ ಸರಿನೋಟ, ಆತನ ಜಾಣ್ಮೆಯೇ ನಿಜಜಾಣ್ಮೆ (ಎಂದು ಕೌಗಿಲಿಂತುರಾ). ರಾಮನ ಮನಸ್ಸು, ಸೊಗಸು, ರೀತಿ ಎಲ್ಲವೂ ವಿಶಿಷ್ಟವಾದುದು (ಲಾವಣ್ಯರಾಮ ಕನ್ನುಲಾರಜೂಡವೇ). ಆದ್ದರಿಂದ ಆಡಿದರೆ ರಾಮನ ಮಾತುಗಳನ್ನಾಡಬೇಕು. ಹಾಡಿದರೆ ರಾಮಸ್ತುತಿ ಗಾನಮಾಡಬೇಕು. ಕೂಡಿದರೆ ರಾಮನನ್ನೇ ಕೂಡಬೇಕೆಂಬ ಅದಮ್ಯ ಆಸೆಯಿಂದ ರಾಮನೊಂದಿಗೆ ಅವರು ರಾಜಿಯಾಗುತ್ತಾರೆ.

**ಆಡಿನ ನಿನ್ನಾಡವಲೆಗಾ ಪಾಡಿನ ನಿನ್ನು ಪಾಡವಲೆಗಾ**
**ಗೂಡಿನ ನಿನ್ನು ಗೂಡವಲೆ ನೀಜಾಡ ತೆಲಿಸಿನ ತ್ಯಾಗರಾಜುನಿಕಿ**
**(ನೀವಂಟಿ ದೈವಮು ನೇಗಾನ ನೀರಜಾಕ್ಷ)**

ಹೀಗಾಗಿ ರಾಮನನ್ನೇ ಜೀವಿತದಾದ್ಯಂತ ಅವರು ಕೀರ್ತಿಸಿದ್ದಾರೆ.

### ೭. ಧನ್ಯತಾಸ್ಥಿತಿ

ನಾಹಂ ವಸಾಮಿ ವೈಕುಂಠೇ ನಯೋಗಿ ಹೃದಯೇ ರವೌ
ಮದ್ಭಕ್ತಾಯತ್ರ ಗಾಯಂತಿ ತತ್ರತಿಷ್ಠಾಮಿ ನಾರದ[೧೦]

ಎಂಬುದು ಭಗವದ್‌ವಾಕ್ಯ. ದೇವರು ವೈಕುಂಠದಲ್ಲಾಗಲೀ, ಯೋಗಿಗಳ ಹೃದಯದಲ್ಲಾಗಲೀ ನೆಲೆಗೊಂಡಿಲ್ಲ. ತನ್ನ ಭಕ್ತರು ತನ್ನನ್ನು ಗಾಯನ ಮಾಡುವೆಡೆ ತಾನು

ಇರುವೆನೆಂಬುದು ಆತನ ಉಕ್ತಿ. ತ್ಯಾಗರಾಜರು ಅವರ ಜೀವಿತದ ಪ್ರತಿಕ್ಷಣದಲ್ಲೂ ಮಾಡಿದ ಸಂಕೀರ್ತನೆಯಿಂದಾಗಿ ದೇವರು ಅವರಿಗೆ ಅನೇಕ ಬಾರಿ ದರ್ಶನ ನೀಡಿದ್ದಾನೆ. ಅವರು ಒಂದೊಂದು ಕೋಟಿ ರಾಮನಾಮ ಪಾರಾಯಣ ಮುಗಿಸಿದಾಗಲೂ ರಾಮ ಒಂದಲ್ಲ ಒಂದು ರೀತಿ ಅವರಿಗೆ ದರ್ಶನ ನೀಡಿದಂತೆ ಪ್ರತೀತಿ. ಹೀಗೆ ಆಗಾಗ್ಗೆ ಉಂಟಾದ ಆನಂದಾನುಭವದಲ್ಲಿ ತ್ಯಾಗರಾಜರು ತಮ್ಮ ಅಧ್ಯಾತ್ಮಾನುಭವಕ್ಕೆ ಅಭಿವ್ಯಕ್ತಿ ನೀಡುತ್ತಾರೆ. ಹೀಗಾಗಿಯೇ ಅವರಲ್ಲಿ ರಾಮದರ್ಶನವಾದ ಹಲವು ರಚನೆಗಳು ಲಭ್ಯವಾಗಿರುವುದು.

ಒಮ್ಮೆ ಶ್ರೀರಾಮನ ಮಾರಕೋಟಿ ಸೌಂದರ್ಯವನ್ನು ಕಂಡು ಮೈಮರೆತ ಅವರಿಗೆ ಆತನ ಪಾದಗಳನ್ನು ಎದೆಗೆ ಅಪ್ಪಿಕೊಳ್ಳಬೇಕೋ ಅಥವಾ ಕಣ್ಣಿಗೆ ಒತ್ತಿಕೊಳ್ಳಬೇಕೋ ತಿಳಿಯದಾಗಿದೆ.

**ಮಾರಕೋಟಿ ಸೌಂದರ್ಯಮುನುಗನಿ**
**ಮದಿಲೋನ ಸುಂತ ಮೈಮರಚಿ . . . . .**
**ಸಾರಮ್ಮೈನ ಪದಸಾರಸಮುಲ ಬೊಂಗಾರುಜೂಚಿ**
**ಯುರಮುನ ನುಂಚುದಾವೋ ಕನುಲನೊತ್ತುದಾಮೋಯನಿ**
**ಕೂರಿಮಿನಿ ಬ್ರಹ್ಮಾನಂದ ಮಂದುಚುನು**
**ಕೊಂತ ಮೈಮರಚಿಯುಂಟಿನಿಗಾನಿ . . . .**

(ನೇರಮಾ ರಾಮರಾಮಾ ನೀಕಿದಿ)

ತ್ಯಾಗರಾಜರ ಪುತ್ರಿಯ ವಿವಾಹ ಸಂದರ್ಭದಲ್ಲಿ ಅವರ ಶಿಷ್ಯರಾದ ವಾಲಾಜಪೇಟೆ ವೆಂಕಟರಮಣ ಭಾಗವತರು ಕೋದಂಡರಾಮನ ಚಿತ್ರಪಟವೊಂದನ್ನು ಉಡುಗೊರೆಯಾಗಿ ನೀಡಿದಂತೆ ಪ್ರತೀತಿ. ಈ ಚಿತ್ರವನ್ನು ಕಂಡಾಗ ತ್ಯಾಗರಾಜರು ಅಧ್ಯಾತ್ಮ ಅನುಭವ ಹೊಂದಿ ಹೀಗೆ ಹಾಡಿದ್ದಾರೆ.

ಕಮಲದಂತೆ ಕಣ್ಣುಗಳನ್ನು ಹೊಂದಿದ **ನಿನ್ನ ಮುಖದರ್ಶನವೇ ಜೀವನ**ವೆಂದು ತಿಳಿದ ನನ್ನ ಮನಸ್ಸಿನ ರಹಸ್ಯವನ್ನು ಅರಿತು, ನನ್ನನ್ನು ರಕ್ಷಿಸುವ ಸಲುವಾಗಿ ಬಂದೆಯಾ ಪ್ರಾಣನಾಥನೇ !

**ನನ್ನು ಪಾಲಿಂಪ ನಡಚಿ ವಚ್ಚಿತಿವೋ ನಾ ಪ್ರಾಣನಾಥ !**
**ವನಜನಯನ ಮೋಮುನು ಜೂಚುಟ ಜೀ**
**ವನಮನಿ ನೆನರುನ ಮನಸು ಮರ್ಮಮು ದೆಲಿಸಿ**

(ನನ್ನು ಪಾಲಿಂಪ ನಡಚಿವಚ್ಚಿತಿವೋ)

ಇನಕುಲದಲ್ಲಿ ಹುಟ್ಟಿದ ಸೀತಾನಾಯಕನನ್ನು ಮತ್ತೊಂದು ಸುದಿನ ತ್ಯಾಗರಾಜರು ದರ್ಶಿಸಿದ್ದಾರೆ (ಕನುಗೊಂಟಿನಿ). ಸೀತಾಮನೋಹರನಾದ ಶ್ರೀರಾಮನ ರೂಪವು ಅಂದು ಅವರ ಮಾನಸಾಬ್ಜದಲ್ಲಿ ನೆಲೆಗೊಂಡಿದೆ. ಇದರಿಂದ ಅವರು ತಮ್ಮ ಭಾಗ್ಯ

ವನ್ನು ಕೊಂಡಾಡುತ್ತಾರೆ. ಇದು ತಮ್ಮ ಪೂರ್ವಜನ್ಮ ಸುಕೃತವೋ? ಅಥವಾ ದೈವ ಕೃಪೆಯೋ, ಹಿರಿಯರ ಆಶೀರ್ವಾದದ ಫಲವೋ ಅಥವಾ ತಾವು ಆಚರಿಸಿದ ನಾದ ಯೋಗದ ಫಲವೋ ಎಂದು ಚಕಿತರಾಗಿದ್ದಾರೆ (ಸೀತಾಮನೋಹರ; ಎಟ್ಲಾದೊರಕಿ ತಿವೋ). ಶ್ರೀರಾಮನು ತ್ಯಾಗರಾಜರನ್ನು ಸಮೀಪಿಸಿ ಸೌಜನ್ಯದಿಂದ ಮಾತನಾಡಿದ್ದಾನೆ. ಅವರ ಚಿಂತೆಗಳೆಲ್ಲವನ್ನೂ ಪರಿಹರಿಸಿ ರಕ್ಷಿಸಿದ್ದಾನೆ (ಎಂತಭಾಗ್ಯಮು ಮಾ ಪಾಲ ಗಲ್ಗಿತಿವಿ). ಹೀಗೆ ದೇವರು ಒಮ್ಮೆ ಸೌಜನ್ಯ ಮತ್ತು ಪ್ರೀತಿಯಿಂದ, ಇನ್ನೊಮ್ಮೆ ಕೋಪ ದಿಂದ ತ್ಯಾಗರಾಜರೊಡನೆ ಮಾತನಾಡಿದ್ದಾನೆ. ತ್ಯಾಗರಾಜರು ದೇವರ ನಿತ್ಯನೂತನ ವಾದ ಗುಣರೂಪಗಳನ್ನು ಕಂಡು ಆನಂದಿಸಿದ್ದಾರೆ (ರಾಮಪಾಹಿ ಮೇಘಶ್ಯಾಮ; ರಾರಾ ರಘುವೀರ). ಆತನ ಸನ್ನಿಧಿಯಲ್ಲಿ ಸುಜನರೆಲ್ಲ ನೆರೆದಿರುವುದನ್ನು ಕಂಡು ತ್ಯಾಗರಾಜರ ಹೃದಯ ತಣಿದಿದೆ. ಶ್ರೀರಾಮನ ಸುಮುಖದಲ್ಲಿದ್ದ ತಿಲಕವು ಅವರನ್ನು ಭಾವಪರವಶ ರನ್ನಾಗಿ ಮಾಡಿದೆ (ರಾರಾ ರಘುವೀರ). ತ್ಯಾಗರಾಜರಿಗೆ ಮತ್ತೊಮ್ಮೆ ದರ್ಶನ ನೀಡಿ ದಾಗ ಶ್ರೀರಾಮನ ಎಡತೊಡೆಯ ಮೇಲೆ ಸೀತೆ ಕಂಗೊಳಿಸಿದ್ದಾಳೆ. ಸೀತಾರಾಮರಿಗೆ ಛತ್ರಿ ಹಿಡಿದು ಸುಗುಣಿಯಾದ ಭರತ ನಿಂತಿದ್ದಾನೆ. ಆಂಜನೇಯ ಹಾಗೂ ವಾನರ ವೀರರಾದ ಗವಯಗವಾಕ್ಷರು ಸೇವಿಸುತ್ತಿದ್ದಾರೆ. ಅಗಸ್ತ್ಯ, ವಸಿಷ್ಠ, ಮಾರ್ಕಂಡೇಯ, ಗೌತಮಾದಿಗಳು ಸ್ತುತಿಸುತ್ತಿದ್ದಾರೆ (ಸುಂದರ ದಶರಥನಂದನ ವಂದನಮೊನರಿಂ ಚೆದ). ತ್ಯಾಗರಾಜರ ಆಸೆಯನ್ನು ತೀರಿಸುವಂತೆ ಮತ್ತೊಮ್ಮೆ ದರ್ಶನವಿತ್ತಾಗ ಶ್ರೀರಾಮ ಸಂಭಾಷಿಸಿದ್ದಾನೆ.* ಲಕ್ಷ್ಮಣನು ಸೇವೆಗೆ ಸಿದ್ಧನಾಗಿ ನಿಂತಿರುವಾಗ ರಾಮನು ಅವನನ್ನು ಅಕ್ಕರೆಯಿಂದ ನೋಡಿದ್ದಾನೆ. ಭರತನ ಕೈಹಿಡಿದು ಶ್ರೀರಾಮನು ಅವನನ್ನು ಅಪ್ಪಿಕೊಂಡಿದ್ದಾನೆ. ಶತ್ರುಘ್ನನ ಧ್ಯಾನಯೋಗವನ್ನು ಕಂಡ ಕೋದಂಡರಾಮನು ಸಂತಸಪಡುತ್ತಿದ್ದಾನೆ. ತನ್ನ ಮನವರಿತ ಹನುಮಂತನೊಂದಿಗೆ ಸಾರ್ವಭೌಮನಾದ ರಾಮ ಪ್ರೀತಿಯಿಂದ ಮಾತನಾಡುತ್ತಿದ್ದಾನೆ.†

> ಕನಿಕರಂಬು ಕಲ್ಗಿ ಸೀತಾಕಾಂತುನಿ ಕನಗಾ
> ಮನಸು ರಂಜಿಲ್ಲ ಒಲ್ಕೆ ಮದನಜನಕುಡು
> ವಲ್ಲನುದಿದ್ದಿ ಸೌಮಿತ್ರಿ ವಲಚಿ ನಿಲ್ವಗಾ
> ಕಲುವ ರೇಕುಲನುಗೇರು ಕನುಲಜೂಚೆನು
> ಭರತುಡಾವೇಳ ಕರಗಿ ಕರಗಿ ನಿಲ್ವಗಾ

---

* ಯಾರೊಡನೆ ಸಂಭಾಷಿಸಿದನೆಂಬ ಬಗೆಗೆ ಅಭಿಪ್ರಾಯ ಭೇದಗಳಿವೆ. ಕಲ್ಲೂರಿ ವೀರಭದ್ರ ಶಾಸ್ತ್ರಿಯವರು ಸೀತೆಯೊಂದಿಗೆ ಸಂಭಾಷಿಸಿದನೆನ್ನುತ್ತಾರೆ (ತ್ಯಾಗರಾಜ ಕೀರ್ತನಲು ಸಂಪುಟ ೧, ಪು. ೧೩೫). ವಿ ರಾಘವನ್‌ರವರು ತ್ಯಾಗರಾಜರೊಂದಿಗೆ ಸಂಭಾಷಿಸಿದನೆನ್ನುತ್ತಾರೆ (*Spiritual Heritage of Tyagaraja*, ಪು.೪೯೯)

† ಇದಕ್ಕೆ ಹಿನ್ನೆಲೆಯಾಗಿ ರಾಮಾಯಣದ ಕೆಲವು ಸಂದರ್ಭಗಳನ್ನು ನೀಡಲಾಗಿದೆ (ತ್ಯಾಗರಾಜ ಕೀರ್ತನಲು ಸಂಪುಟ ೧, ಕಲ್ಲೂರಿ ವೀರಭದ್ರಶಾಸ್ತ್ರಿ, ಪು. ೧೩೫)

**ಕರಮುಬಟ್ಟಿ ಕೌಗಿಲಿಂಚಿ ವರದುಡಪ್ಪುಡು**
**ಚಂಡ ಶತ್ರುಘ್ನುಡಪುಡು ಅಖಂಡವೃತ್ತಿತೋ**
**ನುಂಡ ಸಂತಸಿಲ್ಲೆ ಕೋದಂಡರಾಮುಡು**
**ಮನಸು ದೆಲಿಸಿ ಕಲಸಿ ಹನುಮಂತುಡುಂಡಗಾ**
**ಚನುವು ಮಾಟಲಾಡುಚುಂಡೆ ಸಾರ್ವಭೌಮುಡು**

**(ಪಾಹಿರಾಮ ರಾಮಯನುಚು ಭಜನಸೇಯವೇ)**

ಹೀಗೆ ಅನೇಕ ಬಾರಿ ತ್ಯಾಗರಾಜರು ರಾಮದರ್ಶನ ಭಾಗ್ಯವನ್ನು ಅನುಭವಿಸಿದ್ದರೂ ಅವರ ಇಹಲೋಕ ಯಾತ್ರೆಯ ಕೊನೆಯ ದಿನಗಳಲ್ಲಿ ರಾಮನು ನೀಡಿದ ದರ್ಶನವು ಇತರ ಸಂದರ್ಭಗಳಲ್ಲಿ ಉಂಟಾದ ಭಗವದನುಭವಕ್ಕಿಂತ ಮಹತ್ತರವಾದುದು. ಏಕೆಂದರೆ ಶ್ರೀರಾಮನು ಈಗ 'ಕೆಲವೇ ದಿನಗಳ ನಂತರ' ತ್ಯಾಗರಾಜರಿಗೆ ಮುಕ್ತಿ ನೀಡುವುದಾಗಿ ಅಭಯ ನೀಡಿದ್ದಾನೆ. 'ಮುಕ್ತಿ' ಎಂಬುದು ತ್ಯಾಗರಾಜರ ಪ್ರಕಾರ ಹುಟ್ಟು ಸಾವುಗಳಿಲ್ಲದ ಪದವಿ (ಪುಟ್ಟು ಚಾವು ಲೇನಿ ತಾವು; ಪುನರಾವೃತ್ತಿ ರಹಿತಪದ). ಗೋದಾವರೀ ತೀರದಲ್ಲಿನ ಭದ್ರಾಚಲದ ಮೇಲೆ ನೆಲೆಸಿದ ರಾಮನು ತ್ಯಾಗರಾಜರ ತಪಸ್ಸಿಗೆ ಮೆಚ್ಚಿ ದರ್ಶನ ನೀಡಿದ ಕೂಡಲೇ ಅವರು ಪುಲಕಿತರಾಗಿದ್ದಾರೆ. ಆನಂದಾಶ್ರು ಅವರ ಕಣ್ಣುಗಳಲ್ಲಿ ತುಂಬಿವೆ. 'ಪದಿಪೂಟಲ ಪೈ ಗಾಚೆದನು' ಎಂದು ಸೀತಾಸಮೇತನಾದ ರಾಮನು ಅವರಿಗೆ ಭಾಷೆ ನೀಡಿದ್ದಾನೆ. ಇಂಥ ಪರಮಾನುಗ್ರಹವನ್ನು ಪ್ರತ್ಯಕ್ಷವಾಗಿ ಅನುಭವಿಸಿದ ಕೂಡಲೇ (ಭದ್ರ)ಗಿರಿಯ ಮೇಲೆ ನೆಲೆಸಿದ ಶ್ರೀರಾಮನನ್ನು ಗುರಿ ತಪ್ಪದೆ ನೋಡಿದೆನೆಂದು ಖಚಿತವಾಗಿ ಹಾಡಿದ್ದಾರೆ. ಈ ದೃಶ್ಯದಲ್ಲಿ ದೇವರಿಗೆ ಪರಿವಾರದವರು ಹೂವಿನ ಬೀಸಣಿಗೆಯಿಂದ ಬೀಸುತ್ತಾ ಸೇವೆ ಮಾಡುತ್ತಿದ್ದಾರೆ. ರೋಮಾಂಚಗೊಂಡು ನೋಡುತ್ತಿರುವ ತ್ಯಾಗರಾಜರ ಕಣ್ಣಳಲ್ಲಿ ಆನಂದಾಶ್ರು ತುಂಬಿದೆ. ಮಾತನಾಡಬೇಕೆಂದು ಹೊರಟರೆ ಕಂಠ ಗದ್ಗದವಾಗಿದೆ. ಆಗ ಶ್ರೀರಾಮನು ತಾನಾಗಿಯೇ ಅಭಯ ನೀಡಿದ್ದಾನೆ.

**ಗಿರಿಪೈ ನೆಲಕೊನ್ನ ರಾಮುನಿ ಗುರಿದಪ್ಪಕ ಕಂಟಿ**
**ಪರಿವಾರುಲು ವಿರಿ ಸುರಟುಲಚೇ ನಿಲ**
**ಬಡಿ ವಿಸರುಚು ಗೊಸರುಚು ಸೇವಿಂಪಗ**
**ಪುಲಕಾಂಗಿತುಡೈ ಯಾನಂದಾಶ್ರು**
**ವುಲ ನಿಂಪುಚು ಮಾಟಲಾಡವಲೆನನಿ**
**ಕಲುವರಿಂಚಗನಿ ಪದಿಪೂಟಲಪೈ**
**ಗಾಚೆದನನು ತ್ಯಾಗರಾಜ ವಿನುತುನಿ**

**(ಗಿರಿಪೈ ನೆಲಕೊನ್ನರಾಮುನಿ)**

ದೀರ್ಘಕಾಲದ ತಮ್ಮ ವಿರಹ ಕೊನೆಗೊಳ್ಳುವಂತೆ ಮಾಡಿದ್ದರಿಂದ ತ್ಯಾಗರಾಜರೀಗ ಧನ್ಯತಾಸ್ಥಿತಿಯ ಪರಾಕಾಷ್ಠೆಯನ್ನು ಮುಟ್ಟಿದ್ದಾರೆ. ಶ್ರೀರಾಮನನ್ನು ದರ್ಶಿಸಿದ ಧನ್ಯತೆ

ಯಲ್ಲಿ ತ್ಯಾಗರಾಜರಲ್ಲಿ ಉಂಟಾದ ವಿಶಿಷ್ಟ ಅನುಭವಗಳು ರೋಮಾಂಚನ, ಆನಂದ ಬಾಷ್ಪ, ಕಂಠ ಗದ್ಗದವಾಗುವುದು. ಇವುಗಳಿಗೆ ಭಾರತೀಯ ಸೌಂದರ್ಯ ಮೀಮಾಂಸೆಯಲ್ಲಿ ಸಾತ್ತ್ವಿಕಭಾವಗಳೆಂದು ಹೆಸರು. ಈ ಅನುಭವಗಳನ್ನು ಇನ್ನಷ್ಟು ವಿವರವಾಗಿ ಭಾಗವತವೂ,[೧೧] ನಾರದರ ಭಕ್ತಿ ಸೂತ್ರವೂ[೧೨] ಉಲ್ಲೇಖಿಸುತ್ತವೆ.

## ಟಿಪ್ಪಣಿಗಳು

೧ *The Spiritual Heritage of Tyagaraja,* C. Ramanujachari & Dr. V. Raghavan, Sri Ramakrishna Math, Madras, ೧೯೬೬, ಪು. ೨೦೨.

೨ ಯತ್ತ್ವಹಂ ಭವತೀಂ ನಾ ವೈ ದೂರೇ ವರ್ತೇ ಪ್ರಿಯೋ ದೃಶಾಮ್ ।
ಮನಸಃ ಸನ್ನಿಕರ್ಷಾರ್ಥಂ ಮದನುಧ್ಯಾನಕಾಮ್ಯಯಾ ॥
ಯಥಾ ದೂರಚರೇ ಪ್ರೇಷ್ಠೇ ಮನ ಆವಿಶ್ಯ ವರ್ತತೇ ।
ಸ್ತ್ರೀಣಾಂ ಚ ತಥಾ ಚೇತಃ ಸನ್ನಿಕೃಷ್ಟೇऽಕ್ಷಿಗೋಚರೇ ॥
(ದಶಮಸ್ಕಂದ, ೪೭ನೇ ಅಧ್ಯಾಯ, ೩೪-೩೫ನೇ ಶ್ಲೋಕಗಳು)

೩ 'ಚೆಪ್ಪಿತೇ ಬಾಸುನಂದುರು ಸೇಸಿನ ದೋಸಮುಲೆಲ್ಲಾ'–ತಾಳ್ಳಪಾಕಂವಾರಿ ಗೇಯರಚನಮುಲು, ಸಂ. ೭, ಅಧ್ಯಾತ್ಮ ಸಂಕೀರ್ತನಲು, ರಾಳ್ಳಪಲ್ಲಿ ಅನಂತಕೃಷ್ಣ ಶರ್ಮ ಮತ್ತು ಉದಯಗಿರಿ ಶ್ರೀನಿವಾಸಚಾರ್ಯ, ತಿರುಮಲ ತಿರುಪತಿ ದೇವಸ್ಥಾನ, ೧೯೫೧, ಕೀರ್ತನ ಸಂಖ್ಯೆ ೭೮, ಮತ್ತು

ಚೆಪ್ಪಿನಂಬಾಯುನು ಸೇಸಿನ ಪಾಪಮು ಅನಿ ಚೆಪ್ಪೆದ ನಾ ದುಷ್ಟಚೇತಲಿವೆ–*The Works of Tallapakam Poets,* Vol. II, Adhyatma Sankirtanalu, Pandit V. Vijayaraghavacharya and G. Adinarayana Naidu, T.T. Devastanams, ೧೯೩೬, ಕೀರ್ತನ ಸಂಖ್ಯೆ ೮.

೪ *Shri Annamacharya–A Philosophical Study*, Dr. H.L. Chandrasekhara, Vidyashankara Prakashana, Mysore, 1990, ಪು. ೧೭೧ ರಲ್ಲಿ ಉಲ್ಲೇಖ.

೫ ನೋಡಿ *Outlines of Indian Philosophy,* M. Hiriyanna, George Allen & Unwin Private Limited, 1976, ಪು. ೧೨೦-೧೨೧.

೬ ಹಿಂದೂ ಧರ್ಮದ ಪರಿಚಯ, ಎದುರ್ಕಳ ಕೆ. ಶಂಕರನಾರಾಯಣ ಭಟ್, ಶ್ರೀರಾಮಕೃಷ್ಣ ಪ್ರಕಾಶನ, ಕೊಡಗು ಜಿಲ್ಲೆ, ೧೯೬೮, ಪು. ೪೦೧-೪೦೩.

೭ ಸುಂದರಕಾಂಡ ಸರ್ಗ ೫೩, ಶ್ಲೋಕಗಳು ೨೭-೩೧.

೮ ಪುರಂದರ ಸಾಹಿತ್ಯದರ್ಶನ, ಸಂ. ೩, ಪ್ರೊ. ಎಸ್.ಕೆ. ರಾಮಚಂದ್ರರಾವ್, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫, ಪದಸಂಖ್ಯೆ ೧೨೮, ಪು. ೨೩೧.

೯ ಪಂಚಮಾಂಕ ದರುಸಂಖ್ಯೆ ೩೩.
*ಅಂದುಂಡಕನೆ ವೇಗ ವಚ್ಚೇದನನಿ ನಾಪ್ಪೆಯಾಣಪೆಟ್ಟಿಪೋರಾ*

೧೦ ತ್ಯಾಗರಾಜರ ಪ್ರಹ್ಲಾದ ಭಕ್ತಿ ವಿಜಯ, ಪಂಚಮಾಂಕದಲ್ಲಿ ಉಲ್ಲೇಖಗೊಂಡಿದೆ. ಅಲ್ಲದೆ

ನೋಡಿ, *The Spiritual Heritage of Tyagaraja*, Introductory Thesis, Dr. V. Raghavan, ಪು. ೫೭.

೧೧ ನೋಡಿ,

ವಾಗ್ಗದ್ಗದಾ ದ್ರವತೇ ಯಸ್ಯಚಿತ್ತಮ್
ರುದತ್ಯ ಭೀಕ್ಷ್ಣಂ ಹಸತಿ ಕ್ವಚಿತ್ ಚ
ವಿಲಜ್ಜ ಉದ್ಗಾಯತಿ ನೃತ್ಯತೇ ಚ
ಮದ್ಭಕ್ತಿಯುಕ್ತೋ ಭುವನಂ ಪುನಾತಿ

೧೨ ನೋಡಿ,

ಯಜ್ಞಾತ್ವಾ ಮತ್ತೋಭವತಿ, ಸ್ತಬ್ಧೋಭವತಿ, ಆತ್ಮಾರಾಮೋಭವತಿ.

೧೪

# ಮುಕ್ತಿ, ದೇವರ ದಯೆ, ಗುರುಹಿರಿಯರು ಮತ್ತು ಸತ್ಸಂಗ

ಹಿಂದಿನ ಅಧ್ಯಾಯದಲ್ಲಿ ತ್ಯಾಗರಾಜರ ಭಕ್ತಿಜೀವನದಲ್ಲಿ ವಿರಹ ಮತ್ತು ಧನ್ಯತೆ ಈ ಎರಡು ಮುಖಗಳನ್ನು ಪ್ರಸ್ತಾಪಿಸಲಾಯಿತು. ಪ್ರಸ್ತುತ ಅಧ್ಯಾಯದಲ್ಲಿ ಮುಕ್ತಿಯ ಸ್ವರೂಪವನ್ನು ಕುರಿತ ಅವರ ಅಭಿಪ್ರಾಯವನ್ನು ಮುಂದಿಡಲು ಪ್ರಯತ್ನಿಸಲಾಗಿದೆ. ಭಕ್ತಿಯ ಗುರಿಯಾದ ಮುಕ್ತಿ ಎಂಬುದು ಮೋಕ್ಷ, ಕೈವಲ್ಯ ಎಂಬ ಹೆಸರುಗಳಿಂದಲೂ ಕರೆಯಲ್ಪಟ್ಟಿವೆ. ಹಿಂದೂ ಮತದರ್ಶನಗಳಾದ ಅದ್ವೈತ, ವಿಶಿಷ್ಟಾದ್ವೈತ ಮತ್ತು ದ್ವೈತ ಗಳು ಮುಕ್ತಿ ಎಂಬುದನ್ನು ಬೇರೆಬೇರೆ ರೀತಿಯಲ್ಲಿ ಅರ್ಥೈಸುತ್ತವೆ. ಅದ್ವೈತದ ಪ್ರಕಾರ ಮೋಕ್ಷ ಎಂದರೆ ಜನ್ಮ-ಮೃತ್ಯುಗಳಿಂದ, ಸುಖ-ದುಃಖಗಳಿಂದ ಪಾರಾಗಿ ಶಾಶ್ವತಾನಂದ ದಲ್ಲಿ ಲೀನವಾಗುವುದು. ಜೀವಬ್ರಹ್ಮರ ಅಭೇದದ ಅನುಭವದಿಂದ ನಿಜಜ್ಞಾನಿಯಾಗು ವುದು. ಅರ್ಥಾತ್ 'ಅಹಂ ಬ್ರಹ್ಮಾಸ್ಮಿ' (ನಾನು ಬ್ರಹ್ಮವಾಗಿದ್ದೇನೆ) ಎಂಬ ಸ್ಥಿತಿಗೆ ಏರುವುದು.

ವಿಶಿಷ್ಟಾದ್ವೈತದ ಪ್ರಕಾರ ಜೀವನು ಸರ್ವವಿಧದ ಪಾಶಗಳಿಂದಲೂ ಮುಕ್ತನಾಗಿ ಸಂಸಾರದಿಂದ ಬಿಡುಗಡೆ ಹೊಂದುವುದು ಮುಕ್ತಿ. ಈ ದರ್ಶನದಲ್ಲಿ, ಮುಕ್ತಿ ಪಡೆದ ಜೀವನು ಭಗವಂತನಲ್ಲಿ ಐಕ್ಯನಾಗುವುದಿಲ್ಲ. 'ಅಹಂ ಬ್ರಹ್ಮಾಸ್ಮಿ' ಸ್ಥಿತಿಗೆ ಏರುವು ದಿಲ್ಲ. ಜೀವ-ದೇವ ಎಂಬ ಪ್ರತ್ಯೇಕತೆ ಇಲ್ಲಿ ಉಳಿದಿದ್ದು, ಜೀವನು ಇಲ್ಲಿ ಸಾರೂಪ್ಯ ಪದವಿ ಹೊಂದಿ ದಿವ್ಯಜ್ಞಾನದಿಂದ ಕೂಡಿರುತ್ತಾನೆ. ಜೀವನು ದೇವರ ನಿತ್ಯಸಾಕ್ಷಾತ್ಕಾರದ ಆನಂದವನ್ನು ಅನುಭವಿಸುತ್ತಿರುತ್ತಾನೆ.

ದ್ವೈತದ ಪ್ರಕಾರ ಜೀವನಿಗೆ ತನ್ನ ಅನಾದಿ ಅಜ್ಞಾನ ಮಾಯವಾಗಿ ಸ್ವಭಾವಜ್ಞಾನ ವಾಗುವುದು, ಸಂಸಾರ ಬಂಧನದಿಂದ ಬಿಡುಗಡೆ ಹೊಂದುವುದು ಮುಕ್ತಿ. ಇಲ್ಲಿ ಮುಕ್ತಿ ಪಡೆದ ಜೀವನು ಭಗವಂತನಿಂದ ಬೇರೆಯೇ ಆಗಿ ಉಳಿಯುತ್ತಾನೆ. ದೇವರಲ್ಲಿ ಲೀನ ನಾಗುವುದಿಲ್ಲ. ಜೀವರ ಗುಣಯೋಗ್ಯತೆಗಳಿಗನುಗುಣವಾಗಿ ಇಲ್ಲಿ ಮುಕ್ತಿ ಪ್ರಾಪ್ತಿ ಎಂಬುದು ಸಿದ್ಧಾಂತ.

ಶಾಸ್ತ್ರಕರ್ತರ ಪ್ರಕಾರ ಮುಕ್ತಿಯು, ಜೀವನ್ಮುಕ್ತಿ ಮತ್ತು ವಿದೇಹಮುಕ್ತಿಗಳೆಂಬ ಎರಡು ಬಗೆ. ಜೀವಿಯು ದೇಹಧಾರಿಯಾಗಿರುವಾಗಲೇ ಬ್ರಹ್ಮಜ್ಞಾನವನ್ನು ಪಡೆದು ಸಂಸಾರದ ಸಕಲ ಸುಖ ದುಃಖಗಳಿಂದ ಮುಕ್ತನಾಗಿ, ಸದಾ ಬ್ರಹ್ಮನಿಷ್ಠನೂ ಬ್ರಹ್ಮಾ ನಂದಯುಕ್ತನೂ ಆಗಿರುವುದು ಜೀವನ್ಮುಕ್ತಿ. ವಿದೇಹಮುಕ್ತಿ ಎಂದರೆ ಸ್ಥೂಲಶರೀರವು ನಾಶವಾದ ಮೇಲೆ ಆತ್ಮನು ಪರಬ್ರಹ್ಮದಲ್ಲಿ ಲೀನವಾಗುವುದು. ಹಾಗೆಂದ ಮಾತ್ರಕ್ಕೆ

ವಿದೇಹಮುಕ್ತಿ ಎಂಬುದು ಜೀವನ್ಮುಕ್ತಿಯ ನಂತರದ ಒಂದು ಹೊಸ ಅವಸ್ಥೆಯಲ್ಲ. ಅಲ್ಲದೆ ಈ ಹಂತದಲ್ಲಿ ಜೀವನ್ಮುಕ್ತನು ಅದಕ್ಕಾಗಿ ಹೊಸ ಸಾಧನೆಯನ್ನೇನೂ ಮಾಡಬೇಕಾದ್ದಿಲ್ಲ.[೧]

ಪ್ರಕೃತ ತ್ಯಾಗರಾಜರು, ಮುಕ್ತಿ ಎಂಬುದು ಅರ್ಥಪೂರ್ಣವಾಗುವುದು ಅದು ಜೀವನ್ಮುಕ್ತಿಯಾದಾಗ ಮಾತ್ರ ಎಂಬಂತೆ ಈ ಭುವಿಯಲ್ಲೇ ಜೀವನ್ಮುಕ್ತಿ ಪಡೆಯದವರಿಗೆ ಮೋಕ್ಷವುಂಟೇ ? ಎಂದು ಜೀವನ್ಮುಕ್ತಿಯನ್ನೂ, ಸಂಗೀತಶಾಸ್ತ್ರಜ್ಞಾನವು ಸಾರೂಪ್ಯ ಸೌಖ್ಯ ಸಮಾನವೆಂದು ಸಾರೂಪ್ಯವನ್ನೂ ಪ್ರತಿಪಾದಿಸುತ್ತಾರೆ.*

**ಮೋಕ್ಷಮುಗಲದಾ ? ಭುವಿಲೋ ಜೀವನ್ಮುಕ್ತುಲು ಗಾನಿ ವಾರಲಕು**
**(ಮೋಕ್ಷಮುಗಲದಾ)**

**ಸಂಗೀತಶಾಸ್ತ್ರಜ್ಞಾನಮು ಸಾರೂಪ್ಯ ಸೌಖ್ಯದಮೇ ಮನಸಾ**
**(ಸಂಗೀತಶಾಸ್ತ್ರಜ್ಞಾನಮು)**

ಅವರ ಪ್ರಕಾರ ಹುಟ್ಟುಸಾವುಗಳಿಲ್ಲದ ಅಥವಾ ಪುನರಾವೃತ್ತಿರಹಿತವಾದ ಪದವಿಯೇ ಮುಕ್ತಿ (ನಡಚಿನಡಚಿ ; ಎಂತನಿ).

'ಮೋಕ್ಷ' ಎಂಬುದು ಮೇಲೆ ಹೇಳಿರುವ ಯಾವುದೇ ಅರ್ಥ ವಿವರ ಹೊಂದಿದ್ದರೂ, ಮೋಕ್ಷಪ್ರಾಪ್ತಿಗೆ ಮನುಷ್ಯ ಪ್ರಯತ್ನ ಮುಖ್ಯವೋ ಅಥವಾ ದೇವರ ದಯೆ ಅಗತ್ಯವೋ ಎಂಬುದು ಮುಖ್ಯವಾದ ಒಂದು ಪ್ರಶ್ನೆ. ಇದಕ್ಕೆ ಉತ್ತರ-ಮುಕ್ತಿ ಸಾಧನೆಗೆ ಮನುಷ್ಯ ಪ್ರಯತ್ನ ಎಷ್ಟೇ ಅಗತ್ಯವಿದ್ದರೂ, ಅದಕ್ಕಿಂತ ಶಕ್ತಿಯುತವಾದದ್ದು ದೇವರ ದಯೆ. ದಯೆಯೆಂಬುದು ಈಗಾಗಲೇ ಸಿದ್ಧವಾಗಿರುವ (ವೈಷ್ಣವರ ಪರಿಭಾಷೆಯಲ್ಲಿ) ಸಿದ್ಧೋಪಾಯ. ಮನುಷ್ಯ ಪ್ರಯತ್ನವು ಸಾಧ್ಯೋಪಾಯ. ಎಂದರೆ ಪೂರ್ವ ನಿರ್ಧಾರಿತವಾಗಿಲ್ಲದ ನೂತನ ಪ್ರಯತ್ನ. ಭಕ್ತಿಯ ಮೊದಲ ಪ್ರಯತ್ನ ಮನುಷ್ಯನಿಂದಲೇ ಆರಂಭವಾಗಬೇಕು. ಆದರೆ, ಆತನನ್ನು ದೇವರೆಡೆಗೆ ಆಕರ್ಷಿಸುವುದು ಮತ್ತು ಅದು ಪಕ್ವಗೊಳ್ಳುವಲ್ಲಿ ಅಡಚಣೆಯಾದರೆ ಅದನ್ನು ನಿವಾರಿಸುವಲ್ಲಿ ದೇವರ ದಯೆ ಅತ್ಯಗತ್ಯ.[೨]

---

* ಮುಕ್ತಿಯಲ್ಲಿ ನಾಲ್ಕು ಮಜಲುಗಳನ್ನು ಹೇಳುವುದುಂಟು (೧) ಸಾಲೋಕ್ಯ—ಇಲ್ಲಿ ಜೀವಿಯು ವೈಕುಂಠ ವಾಸಿಯಾಗುತ್ತಾನಷ್ಟೆ. (೨)ಸಾಮೀಪ್ಯ—ಇಲ್ಲಿ ಆತ ದೇವರ ಸಮೀಪಕ್ಕೆ ಬರುತ್ತಾನೆ. (೩) ಸಾರೂಪ್ಯ—ಇಲ್ಲಿ ಜೀವನು ದೇವರ ಆಕಾರವನ್ನೇ ಪಡೆಯುತ್ತಾನೆ. ಎಂದರೆ ಜೀವ-ದೇವ ಎಂಬ ಎರಡು ಪ್ರತ್ಯೇಕ ಆಕಾರದಲ್ಲೇ ಇರುವುದು. (೪) ಸಾಯುಜ್ಯ—ಇದು ಎರಡು ವಿಧ. ಮೊದಲ ವಿಧದಲ್ಲಿ ಜೀವವು ಪೂರ್ಣವಾಗಿ ಬ್ರಹ್ಮದಲ್ಲಿ ಒಂದಾಗಿರುತ್ತದೆ. ಇಲ್ಲಿ ಭೇದಕ್ಕೆ ಸ್ವಲ್ಪವೂ ಆಸ್ಪದವಿರುವುದಿಲ್ಲ. ಅದ್ವೈತ ಸಿದ್ಧಾಂತವು ಈ ರೀತಿಯ ಸಾಯುಜ್ಯವನ್ನು ಅಂಗೀಕರಿಸುತ್ತದೆ. ಸಮುದ್ರದಲ್ಲಿ ನದಿಯು ಒಂದಾಗಿ ಬೆರೆತು ತನ್ನ ಪ್ರತ್ಯೇಕತೆಯನ್ನು ಮರೆತಂತೆ. ಸಾಯುಜ್ಯದ ಎರಡನೇ ವಿಧದಲ್ಲಿ ಜೀವವು ಬ್ರಹ್ಮದಲ್ಲಿ ಒಂದಾಗುವುದಾದರೂ ತನ್ನ ಪ್ರತ್ಯೇಕತೆಯನ್ನು ಅದು ಉಳಿಸಿಕೊಂಡಿರುತ್ತದೆ. ಸಿಹಿಯು ಸಕ್ಕರೆಯಲ್ಲಿ ಬೆರೆತಿದ್ದರೂ ಸಿಹಿಯೇ ಸಕ್ಕರೆಯಲ್ಲ ಎಂಬುದು ಇದರ ಸಿದ್ಧಾಂತ.

ಶರಣಾಗತಿ ಮತ್ತು ದೇವರ ದಯೆಗೆ ಸಂಬಂಧಿಸಿದಂತೆ ಶ್ರೀವೈಷ್ಣವರಲ್ಲಿ ಎರಡು ಅಭಿಪ್ರಾಯಗಳು ಕಾಣಬರುತ್ತವೆ. ಇವು ಮರ್ಕಟಕಿಶೋರನ್ಯಾಯ ಮತ್ತು ಮಾರ್ಜಾರ ಕಿಶೋರ ನ್ಯಾಯವೆಂದೇ ಪ್ರಸಿದ್ಧವಾಗಿದೆ.[೩] ಮರ್ಕಟಕಿಶೋರನ್ಯಾಯದಲ್ಲಿ ಕಪಿಯು ತನ್ನ ಮರಿಯನ್ನು, ಮರಿಯ ಪ್ರಯತ್ನದಿಂದ ಮಾತ್ರಾ ರಕ್ಷಿಸುವಂತೆ ಭಗವಂತನೂ ಭಕ್ತನ ಪ್ರಯತ್ನವಿದ್ದಲ್ಲಿ ಮಾತ್ರಾ ರಕ್ಷಿಸುತ್ತಾನೆ. ಇಲ್ಲಿ ಸಾಧಕನ ಸ್ವಪ್ರಯತ್ನದ ಮೇಲೆ ಎಂದರೆ ಪುರುಷ ಪ್ರಯತ್ನಕ್ಕೆ ಶರಣಾಗತಿಯು ಪೂರಕ ಸಾಧನವಾಗುತ್ತದೆ. ಭಕ್ತಿ ಸಾಧನೆಗೆ ಇದೊಂದು ಅಂಗವಾದ್ದರಿಂದ ಇದನ್ನು ಅಂಗಪ್ರಪತ್ತಿಯೆಂದೂ ಹೇಳುವುದುಂಟು. ಮರ್ಕಟ ಕಿಶೋರ ನ್ಯಾಯದ ಪ್ರಪತ್ತಿಯನ್ನು ವೇದಾಂತ ದೇಶಿಕರು ಅನುಮೋದಿಸುತ್ತಾರೆ.

ಎರಡನೆಯ ಅಭಿಪ್ರಾಯದ ಪ್ರಕಾರ, ದೇವರ ದಯೆ ಹೊಂದಲು ಪುರುಷ ಪ್ರಯತ್ನದ ಅಗತ್ಯವೇ ಇಲ್ಲ. ಇಲ್ಲಿ ಸಾಧಕನು ತನ್ನೆಲ್ಲ ವೈಯಕ್ತಿಕ ಇಚ್ಛೆಯನ್ನೂ ದೇವರಿಗೇ ಅರ್ಪಿಸಿಬಿಡುತ್ತಾನೆ. ಬೆಕ್ಕು ತನ್ನ ಮರಿಯನ್ನು, ಮರಿಯ ಪ್ರಯತ್ನವೇ ಇಲ್ಲದೆ ಹೇಗೆ ರಕ್ಷಿಸುತ್ತದೋ ಹಾಗೆಯೇ ಭಗವಂತನೂ ಶರಣಾಗತರನ್ನು ರಕ್ಷಿಸುವ ಪೂರ್ಣ ಹೊಣೆಗಾರಿಕೆಯನ್ನು ಹೊತ್ತಿರುತ್ತಾನೆ. ಇದು ಮಾರ್ಜಾರ ಕಿಶೋರ ನ್ಯಾಯ. ಇದನ್ನು ಪಿಳ್ಳೈ ಲೋಕಾಚಾರ್ಯರು ಅನುಮೋದಿಸುತ್ತಾರೆ.

ತ್ಯಾಗರಾಜರು ತಮ್ಮ ಮನಸ್ಸಿನ ಸ್ಥಿತಿ ವ್ಯತ್ಯಾಸಗೊಂಡಂತೆ, ಮರ್ಕಟ ಕಿಶೋರ ನ್ಯಾಯ ಹಾಗೂ ಮಾರ್ಜಾರ ಕಿಶೋರ ನ್ಯಾಯಗಳೆರಡಕ್ಕೂ ಅಭಿವ್ಯಕ್ತಿ ನೀಡುತ್ತಾರೆ. ಅವರು ದಯೆ, ಕಟಾಕ್ಷ, ಕರುಣೆ, ಕೃಪೆ ಎಂಬ ಪದಗಳನ್ನು ಪರ್ಯಾಯವಾಗಿ ಬಳಸುತ್ತಾರೆ.

ಅವರು ಕೆಲವೊಮ್ಮೆ ತಮ್ಮ ಅರ್ಹತೆಗಳನ್ನು ನಿವೇದಿಸಿ ದೇವರ ದಯೆಪ್ರಾಪ್ತಿ ತಮ್ಮ ಹಕ್ಕು ಎಂಬಂತೆ ಸಾಧಿಸಿದರೆ ಮತ್ತೆ ಕೆಲವೊಮ್ಮೆ ತಮ್ಮ ಅಸಹಾಯಕತೆಯನ್ನು ತಿಳಿಸುತ್ತಾ ದಯೆ ತೋರಬೇಕೆಂದು ದೀನರಾಗುತ್ತಾರೆ.

'ಕಲಿಗಿಯುಂಟೆಗದಾ' ಎಂಬ ರಚನೆಯಲ್ಲಿ ಪೂರ್ವದ ಸುಕೃತ ಫಲಗಳನ್ನು ನಾನು ಹೊಂದಿದ್ದರಲ್ಲವೇ ನನಗೆ ನಿನ್ನ ದಯೆ ಲಭ್ಯವಾಗುವುದು ಎಂದು ಪ್ರತಿಪಾದಿಸುತ್ತಾರೆ. ಅಂತೆಯೇ 'ಮೀವಲ್ಲ ಗುಣದೋಷಮೇಮಿ' ಎಂಬ ರಚನೆಯಲ್ಲಿ ತಮ್ಮೆಡೆಗೇ ದೋಷಾರೋಪಣೆ ಮಾಡಿಕೊಂಡು ದಯೆ ಲಭ್ಯವಾಗುವಂಥ ಕಾರ್ಯಗಳೇನನ್ನೂ ತಾವು ಆಚರಿಸಿಲ್ಲವೆನ್ನುತ್ತಾರೆ. ಇಲ್ಲಿ ಮರ್ಕಟ ಕಿಶೋರ ನ್ಯಾಯದ ಪ್ರತಿಪಾದನೆಯಿದೆ.

ಮತ್ತೆ ಕೆಲವು ರಚನೆಗಳಲ್ಲಿ ಮಾರ್ಜಾರ ಕಿಶೋರ ನ್ಯಾಯವು ವ್ಯಕ್ತಗೊಂಡಿದೆ. ಹರಿಯೊಲುಮೆಯು ತಾನಾಗಿಯೇ ಒದಗಬೇಕೇ ವಿನಹ ಮನುಷ್ಯ ಪ್ರಯತ್ನವಿಲ್ಲಿ ಏನೂ ನಡೆಯದು. ಈ ಅಂಶವನ್ನು ಕೆಳಗಿನ ಅವರ ರಚನೆಗಳು ಪ್ರತಿಪಾದಿಸುತ್ತವೆ.

**ನೀ ದಯ ರಾವಲೆಗಾಕ ನೇನೆಂತವಾಡನು ?**

(ನಿನಗೇ ದಯಬಾರದಿದ್ದರೆ ನಾನೆಷ್ಟರವನು?)

**(ನೀದಯರಾವಲೆ)**

**ನೀದಯ ಗಲ್ಗುಟೇ ಭಾಗ್ಯಮನಿ ನಿಜಮುಗ ನೀಕೇಲ ತೋಚದೋ ?**
(ನಿನ್ನ ದಯೆ ಲಭ್ಯವಾಗುವುದೇ ಪರಮೋಚ್ಚ ಭಾಗ್ಯವೆಂಬುದು
ನಿನಗೇ ಏಕೆ ತಿಳಿಯುತ್ತಿಲ್ಲ?)
(ನೀದಯಗಲ್ಗುಟೇ)

**ನೀ ಕಟಾಕ್ಷಂಬುಲೇನಿ ಜನ್ಮಮೇಲರಾ ?**
(ನಿನ್ನ ಕಟಾಕ್ಷವಿಲ್ಲದ ಜನ್ಮವೇಕೆ?)
(ಪಾಹಿರಾಮಚಂದ್ರ ರಾಘವ)

**ಶ್ರೀರಾಮಸ್ವಾಮಿ ಕರುಣ ಲೇನಿ ವಾರಿಲಲೋ ಏಮಿಜೇಸಿತೇನೇಮಿ ?**
(ಶ್ರೀರಾಮನ ಕರುಣೆ ಇಲ್ಲದವರು ಈ ಭುವಿಯಲ್ಲಿ ಏನು ಮಾಡಿದರೇನು?)
(ಏಮಿಜೇಸಿತೇನೇಮಿ)

**ನೀಕೇ ದಯರಾಕ ನೇ ಸೇಯು ಪನುಲೆಲ್ಲ ನೆರವೇರುನಾ ?**
(ನಿನ್ನ ದಯೆಯಿಲ್ಲದೆ ನಾನು ಮಾಡುವ ಕೆಲಸಗಳೆಲ್ಲ ನೆರವೇರುತ್ತದೆಯೇ?)
(ನೀಕೇದಯರಾಕ)

**ದಯಲೇನಿ ಬ್ರತುಕೇಮಿ ?**
(ನಿನ್ನ ದಯೆಯಿಲ್ಲದ ಬದುಕೆಂಥದು?)
(ದಯಲೇನಿ)

**ಮನಸಾ ಮನಸಾಮರ್ಥ್ಯಮೇಮಿ ?**
(ಎಲೈ ಮನಸ್ಸೇ ನಮ್ಮ ಸಾಮರ್ಥ್ಯವೇನು ನಡೆದೀತು?)
(ಮನಸಾ ಮನಸಾಮರ್ಥ್ಯ)

ಅದರಲ್ಲೂ ತನಯುನಿ ಬ್ರೋವ ಕೃತಿಯು ಮಾರ್ಜಾರ ಕಿಶೋರ ನ್ಯಾಯವನ್ನು ಕೆಲವು ಸಾಮ್ಯಗಳೊಂದಿಗೆ ನಿರೂಪಿಸುತ್ತದೆ. ಈ ಕೃತಿಯಲ್ಲಿ ತ್ಯಾಗರಾಜರು ಹೀಗೆಂದಿದ್ದಾರೆ.

'ಮಗುವಿನ ರಕ್ಷಣೆಯಲ್ಲಿ ತಾಯಿಯೇ ಮಗುವಿನ ಬಳಿಗೆ ಹೋಗುವಳೋ ಅಥವಾ ಮಗುವೇ ತಾಯಿ ಬಳಿ ಬರುವುದೋ? ಕರುವಿನ ಹಿಂದೆ ಹಸು ಹೋಗುವುದೋ? ಭೂಮಿಯಲ್ಲಿರುವ ಪೈರುಗಳು ನೀರನ್ನು ಹುಡುಕಿಕೊಂಡು ಮೇಘಗಳೆಡೆಗೆ ತಾವೇ ಹೋಗುವುವೋ? ಪ್ರಿಯಕರನೇ ತನ್ನ ಪ್ರೇಯಸಿಯೆಡೆಗೆ ಹೋಗುವನೋ? ಈ ರಹಸ್ಯವನ್ನು ತಿಳಿಸು, ಶ್ರೀರಾಮನೇ'

**ತನಯುನಿ ಬ್ರೋವ ಜನನಿ ವಚ್ಚುನೋ**
**ತಲ್ಲಿವದ್ದ ಬಾಲುಡು ಬೋನೋ ?**
**ಇನಕುಲೋತ್ತಮಾ ಯೀ ರಹಸ್ಯಮು ಯೆರುಗಿಂಪುಮು . . .**
**ವತ್ಸಮು ವೆಂಟ ಧೇನುವು ಚನುನೋ ?**
**ವಾರಿದಮುನುಗನಿ ಪೈರುಲು ಚನುನೋ ?**

**ಮತ್ಸ್ಯಕಂಟಕಿ ವಿಟುಡು ವೆಡಲುನೋ ?**
**ಮಹಿನಿ ತ್ಯಾಗರಾಜವಿನುತ ! ರಮ್ಮು ದೆಲ್ಪುಮು**

(ತನಯುನಿ ಬ್ರೋವ)

ಮೇಲಿನ ಈ ಉಪಮಾನಗಳ ಮೂಲಕ ಭಗವಂತನ ನಿರ್ಹೇತುಕ ದಯೆ ಮತ್ತು ವಾತ್ಸಲ್ಯಗಳಿಂದ ಆತನೇ ಭಕ್ತರನ್ನು ರಕ್ಷಿಸಬೇಕೆಂಬ ಮಾರ್ಜಾರ ಕಿಶೋರ ನ್ಯಾಯವನ್ನು ತ್ಯಾಗರಾಜರಿಲ್ಲಿ ಸಾರುತ್ತಾರೆ. ಈ ನಿಟ್ಟಿನಲ್ಲಿ ಮನುಷ್ಯ ಪ್ರಯತ್ನ ಅಶಕ್ತವೆಂಬುದನ್ನು ನುಡಿಯುತ್ತಾರೆ. ಆದರೂ ಆತನ ಅನುಗ್ರಹ ಪ್ರಾಪ್ತಿಗಾಗಿ ಒಮ್ಮೆ ಕೀರ್ತನ ಸುಶತಕವನ್ನು ರಚಿಸಿ ಅರ್ಪಿಸುವ ಮೂಲಕ ತಾವು ಮೊರೆಯಿಟ್ಟುದು ವಿಶ್ವಾಸಘಾತಕತನವೆಂಬುದರ ಅರಿವಾಗುತ್ತದೆ ಅವರಿಗೆ. ಭಗವಂತನ ರಕ್ಷಕತ್ವದ ಮಹಿಮೆ ತಿಳಿಯದೆ ಚಪಲಚಿತ್ತರಾಗಿ ತಾವೆಸಗಿದ ಅಪರಾಧವನ್ನು ಮನ್ನಿಸುವಂತೆ ಅವರು ಹಾಡಿರುವುದುಂಟು (ಅಪಾರಾಧ ಮುಲನೋರ್ವ ಸಮಯಮು).

ಮನುಷ್ಯ ಪ್ರಯತ್ನವೇ ಇಲ್ಲದೆ ದೇವರು ಎಲ್ಲರಿಗೂ ಮುಕ್ತಿ ನೀಡಬಲ್ಲಸಮರ್ಥನಾದರೂ ಆತ ಜೀವಿಗಳು ಕ್ರಿಯಾಶೀಲರಾಗಬೇಕೆಂಬ ಸಲುವಾಗಿ ಅವರಿಂದಲೇ ಮುಕ್ತಿ ಸಾಧನೆಗೆ ಮೊದಲ ಪ್ರಯತ್ನವನ್ನು ನಿರೀಕ್ಷಿಸುತ್ತಾನೆ. ಇಲ್ಲಿ ದೇವರ ದೃಷ್ಟಿ ಅವರೆಲ್ಲರನ್ನೂ ಕ್ರಿಯಾರಹಿತರನ್ನಾಗಿಸುವುದಲ್ಲ. ಹಾಗೆ ತಾನಾಗಿಯೇ ಲಭ್ಯವಾಗುವ ಸುಖದಿಂದ ಮನುಷ್ಯ ಅದರ ಬೆಲೆಯನ್ನೇ ತಿಳಿಯದವನಾಗುತ್ತಾನೆ, ಸೋಮಾರಿಯಾಗುತ್ತಾನೆ. ಆದ್ದರಿಂದಲೇ ಮನುಷ್ಯ ಪ್ರಯತ್ನವೂ ಅತ್ಯಗತ್ಯ. ಇಂತಹ ಪ್ರಯತ್ನದಿಂದ ಮನುಷ್ಯನ ನೈತಿಕ ಉನ್ನತಿ ಸಾಧ್ಯವುಂಟು. ಆದರೆ ಪೂರ್ಣಕಾಮಿಯಾದ ದೇವರಿಗೆ ಮನುಷ್ಯನ ಪ್ರಯತ್ನದಿಂದ ಆಗುವ ಲಾಭವೇನೂ ಇಲ್ಲವೆಂಬುದನ್ನು ಗಮನಿಸಬೇಕು.

ವಾಸ್ತವವಾಗಿ ದೇವರ ದಯೆಗೆ ಮುಖ್ಯವಾಗಿ ಎರಡು ವಿಧದ ಶಕ್ತಿಗಳುಂಟು. ಅವು (ಅ) ಮನುಷ್ಯನನ್ನು ನೈತಿಕವಾಗಿ ಪರಿಪೂರ್ಣಗೊಳಿಸುವುದು, ಎಂದರೆ ಲೌಕಿಕವಾದ ರಾಗಲೋಭ ಮದಾದಿಗಳನ್ನು ನಾಶಗೊಳಿಸುವುದು. (ಅ) ಅದಕ್ಕಿಂತಲೂ ಮಿಗಿಲಾಗಿ ಅಧ್ಯಾತ್ಮಿಕವಾಗಿ ಪರಿಪೂರ್ಣಗೊಳಿಸುವುದು. ದೇವರ ದಯೆಯೊಂದು ಪ್ರಾಪ್ತವಾದರೆ ನವಗ್ರಹಗಳು ಕೂಡ ಏನೂ ಮಾಡಲಾರವು.

**ಗ್ರಹಬಲಮೇಮಿ ಶ್ರೀರಾಮಾನುಗ್ರಹ ಬಲಮೇಬಲಮು**

(ಗ್ರಹಬಲಮೇಮಿ)

ಆದ್ದರಿಂದ ತ್ಯಾಗರಾಜರ ದೃಷ್ಟಿಯಲ್ಲಿ ದೇವರ ದಯೆಯೇ ರಾಜಯೋಗವಾಗಿದೆ.

**ನೀ ಕರುಣೇ ರಾಜಯೋಗಮು ಮಾಕು**

(ಇಂತಕನ್ನ ದೆಲ್ಪತರಮಾ)

ಮೇಲಿನ ಈ ಮಾತುಗಳನ್ನು ಗಮನಿಸಿದಾಗ ತ್ಯಾಗರಾಜರು ಮರ್ಕಟ ಕಿಶೋರ ನ್ಯಾಯಕ್ಕಿಂತ ಮಾರ್ಜಾರ ಕಿಶೋರ ನ್ಯಾಯಕ್ಕೆ ಹೆಚ್ಚು ಮಹತ್ವ ನೀಡಿದಂತೆ ಕಾಣುತ್ತದೆ. ಇದು ಅವರ ಈ ಕೆಳಗಿನ ವಾಕ್ಯದಿಂದ ಸ್ಪಷ್ಟವಾಗುತ್ತದೆ.

**ಕೃಪಗಾವಲೆನನಿ ನೇ ನೀ ಕೀರ್ತಿನಿ ಬಲ್ಕುಚುನುಂಡಗ**

(ಇಲ್ಲಿ ತ್ಯಾಗರಾಜರು ದೇವರ ದಯೆಯನ್ನು ಪಡೆಯುವ ಸಲುವಾಗಿ ದೇವರನ್ನು ಕೀರ್ತಿಸುತ್ತಿದ್ದಾರೆ)

(ಉಪಚಾರಮು)

ಒಟ್ಟಾರೆ ತ್ಯಾಗರಾಜರು ಒಮ್ಮೆ ಮರ್ಕಟಕಿಶೋರನ್ಯಾಯವನ್ನು ಅನುಮೋದಿಸಿದರೆ ಮತ್ತೊಮ್ಮೆ ಮಾರ್ಜಾರ ಕಿಶೋರ ನ್ಯಾಯವನ್ನು ಅನುಮೋದಿಸುತ್ತಾರೆ.

**ಗುರುಹಿರಿಯರು** : 'ಗುರು' ಶಬ್ದಕ್ಕೆ ಗುರುಗೀತೆಯು ಹೀಗೆ ವ್ಯಾಖ್ಯಾನಿಸುತ್ತದೆ.

**ಗುಕಾರಶ್ಚಂದಕಾರೋಹಿ ರುಕಾರಸ್ತನ್ನಿರೋಧಕೃತ್**
**ಅಂಧಕಾರ ವಿನಾಶಿತ್ವಾತ್ ಗುರುರಿತ್ಯಭಿಧೀಯತೇ ||**

ಎಂದರೆ 'ಗು' ಅಕ್ಷರವು ಅಂಧಕಾರವನ್ನೂ 'ರು' ಅಕ್ಷರವು ಅದನ್ನು ನಿರೋಧಿಸುವ ಶಕ್ತಿಯುಳ್ಳ ಬೆಳಕನ್ನೂ ಸೂಚಿಸುತ್ತದೆ. ಅಂಧಕಾರವೆಂದರೆ ಪ್ರಾಪಂಚಿಕ ವ್ಯಾಮೋಹ. ಬೆಳಕೆಂದರೆ ನಿತ್ಯಸತ್ಯದ ಜ್ಞಾನ. ಈ ಪ್ರಕಾರ ಪ್ರಾಪಂಚಿಕ ವ್ಯಾಮೋಹವನ್ನು ತೊರೆಸಿ ನಿಜಜ್ಞಾನದ ಬೆಳಕನ್ನು ನೀಡುವವನೇ ಗುರು. ಮನುಷ್ಯನು ಎಷ್ಟೇ ಗುಣವಂತನಾದರೂ, ವಿದ್ಯಾವಂತನಾದರೂ, ಬಹಳ ಸುಲಭವಾಗಿ ಹೆಂಡತಿ, ಮಕ್ಕಳು, ಧನಾದಿ ಸಂಪತ್ತುಗಳೇ ಸ್ಥಿರವೆಂಬ ವ್ಯಾಮೋಹದಲ್ಲಿ ಬಿದ್ದು ತೊಳಲಾಡುತ್ತಾನೆ. ಇದರಿಂದ ಆತ ಹಲವು ಜನುಮಗಳನ್ನು ಪಡೆಯಬೇಕಾಗುತ್ತದೆ. ಆದರೆ, ಆತ ನಿಜಜ್ಞಾನದ ಅರಿವಿನಿಂದ ಮತ್ತೆ ಮತ್ತೆ ಭುವಿಯಲ್ಲಿ ಹುಟ್ಟುವುದನ್ನು ತಪ್ಪಿಸಿಕೊಳ್ಳಬಹುದೆಂಬುದು ಜ್ಞಾನಿಗಳ ಅಭಿಪ್ರಾಯ. ಈ ದಿಸೆಯಲ್ಲಿ ಮಾರ್ಗದರ್ಶಿಯಾದವನೇ ಸದ್ಗುರು. ಗುರುಸ್ತೋತ್ರವೊಂದು 'ಅಜ್ಞಾನವೆಂಬ ತಿಮಿರದಿಂದ ಅಂಧನಾದವನ ಕಣ್ಣನ್ನು ಜ್ಞಾನವೆಂಬ ಅಂಜನ ಶಲಾಕೆಯಿಂದ ಬಿಡಿಸುವವನು' ಎಂದು ಗುರುವನ್ನು ಗುರುತಿಸಿ ಆತನನ್ನು ಬ್ರಹ್ಮ, ವಿಷ್ಣು, ಮಹೇಶ್ವರ, ಸಾಕ್ಷಾತ್ ಪರಬ್ರಹ್ಮನೆಂದು ಕರೆಯುತ್ತದೆ.[೪] ಒಟ್ಟಾರೆ ಆತ್ಮ ಸಾಕ್ಷಾತ್ಕಾರವನ್ನು ಪಡೆದ ಭಗವದ್ರೂಪಿ ಆಚಾರ್ಯನೇ ಗುರು. ಭಗವದ್ಗೀತೆಯಲ್ಲಿ ಶ್ರೀಕೃಷ್ಣನು 'ನನಗೂ ಜ್ಞಾನಿಗೂ ವ್ಯತ್ಯಾಸವೇ ಇಲ್ಲ' ಎನ್ನುತ್ತಾನೆ.[೫] 'ಆಚಾರ್ಯವಾನ್ ಪುರುಷೋ ವೇದಾ' ಎಂಬುದು ಶ್ರುತಿವಾಕ್ಯ.[೬] ಅಲ್ಲದೆ ಈ ಸಂದರ್ಭದಲ್ಲಿ ಆಚಾರ್ಯ ಶಂಕರರ ಮಾತೊಂದನ್ನೂ ಸ್ಮರಿಸಬಹುದು. ಅವರು, 'ಸ್ಪರ್ಶಮಣಿಯು ಗುರುವಿಗೆ ದೃಷ್ಟಾಂತವಾಗಿ ತೋರಬಹುದು'. 'ಆದರೆ ಅದೂ ಕೂಡ ದೃಷ್ಟಾಂತವಷ್ಟೆ'. ಏಕೆಂದರೆ ಅದು ಕಬ್ಬಿಣವನ್ನು ಕನಕವಾಗಿ (ಚಿನ್ನ) ಪರಿವರ್ತಿಸುವುದೇ ಹೊರತು, ತನ್ನಂತೆ ಸ್ಪರ್ಶಮಣಿಯನ್ನೇ ಆಗಿಸಲಾರದು. ಆದರೆ ಗುರುವಾದರೋ ತನ್ನ ಶಿಷ್ಯನನ್ನು ಎಲ್ಲ ವಿಧದಲ್ಲೂ ತನಗೆ ಸರಿಸಮನಾಗಿಸಿ ತನ್ನಂತೆಯೇ ಆಗುವಂತೆ ಮಾಡುತ್ತಾನೆ[೬] ಎನ್ನುತ್ತಾರೆ. ಈ ಶಿಷ್ಯನು ಗುರುವಿನ ಸಮನಾದ (ಜ್ಞಾನಪಡೆದ) ನಂತರ ತನ್ನ ಗುರುವಿನಿಂದ ತಾನು ಪಡೆದ ಜ್ಞಾನವನ್ನು ಇತರರಿಗೆ ನೀಡುವ ಸಾಮರ್ಥ್ಯವನ್ನು ಪಡೆಯುತ್ತಾನೆ. ಎಂದರೆ

ನಿಜ ಗುರು ತನಗೆ ಸದೃಶವಾದ ಸ್ಥಿತಿಯನ್ನೇ ತನ್ನ ಶಿಷ್ಯನಾಗಿದ್ದವನಿಗೂ ನೀಡುತ್ತಾನೆ ಎಂಬುದಿಲ್ಲಿ ಗಮನಾರ್ಹ.

ತ್ಯಾಗರಾಜರು ತಮ್ಮ ಗುರುಗೀತೆಯೊಂದರಲ್ಲಿ ಹೀಗೆಂದಿದ್ದಾರೆ. ಅಜ್ಞಾನಾಂಧಕಾರಗಳನ್ನು ಸದ್ಗುರುವಿಲ್ಲದೆ ಹೋಗಲಾಡಿಸಿಕೊಳ್ಳಲಾಗದು. ಸಾಮಾನ್ಯರಿಗೆ ಪ್ರಿಯವೆನಿಸುವ ಶರೀರ, ಹೆಂಡತಿ, ಮಕ್ಕಳು, ದಾಯಾದಿ ಬಂಧುಗಳು, ಸಂಪತ್ತು ಇವು ಮೋಹದಿಂದ ಮತ್ತಷ್ಟು ಬಂಧನಗಳನ್ನು ಉಂಟುಮಾಡುತ್ತವೆ. ಇವೆಲ್ಲವೂ ಕ್ಷಣಿಕವೆಂಬ ಅರಿವೂ ಇರುವುದಿಲ್ಲ. ಇವೆಲ್ಲವೂ ನಷ್ಟವಾದಾಗ ಭರಿಸಲಾಗದ ದುಃಖದಲ್ಲಿ ಜೀವಿ ಮುಳುಗುತ್ತಾನೆ. ಇಂತಹ ವಿಷಯಗಳ ವ್ಯಾಮೋಹ ಬಿಡಿಸಿ ಸುಸ್ಥಿರವಾದ ತತ್ತ್ವಗಳ ಬೋಧನೆ ಮಾಡುವಂತಹ ಸದ್ಗುರು ಇಲ್ಲದೆ ಒಬ್ಬನಿಗೆ ನಿಜಜ್ಞಾನ ಲಭ್ಯವಾಗದು.

> ಗುರುಲೇಕ ಎಟುವಂಟಿ ಗುಣಿಕಿ ತೆಲಿಯಗಬೋದು (ಸ)
> ಕರುಕೈನ ಹೃದ್ರೋಗ ಗಹನಮುನು ಗೊಟ್ಟಸತ್ ಗುರು . . .
> ತನುವುಸುತ ಧನದಾರ ದಾಯಾದಿ ಬಾಂಧವುಲು
> ಜನಿಯಿಂಚಿ ಚೆದರು ಜಾಲಿನಿ ಕರುಣತೋ
> ಮನಸುನಂಟಕ ಮಂಚಿ ಮಂದನುಚು ತತ್ತ್ವಬೋ
> ಧನಜೇಸಿ ಕಾಪಾಡು ತ್ಯಾಗರಾಜಾಪ್ತುಡಗು

(ಗುರುಲೇಕ ಎಟುವಂಟಿ ಗುಣಿಕಿ)

ತ್ಯಾಗರಾಜರು ಪೌರಾಣಿಕವಾದ ಅನೇಕ ವ್ಯಕ್ತಿಗಳನ್ನೂ, ಚಾರಿತ್ರಿಕ ಸಂತರನ್ನೂ, ಭಕ್ತರನ್ನೂ ಗೌರವಪೂರ್ವಕವಾಗಿ ಸ್ಮರಿಸಿದ್ದಾರೆ. ಅವರೆಲ್ಲರೂ ಆದರ್ಶವೆಂದೂ ಪರಿಗಣಿಸಿದ್ದಾರೆ. ಆದರೆ ಅವರು ಗುರುವೆಂದೇ ನೇರವಾಗಿ ಅಂಗೀಕರಿಸುವುದು ನಾರದರನ್ನು. ನಾರದರು ತ್ಯಾಗರಾಜರಿಗೆ ಭಕ್ತಿ ಸಾಧನೆಯ ರೀತಿಯನ್ನೂ, ಸಂಗೀತ ಮರ್ಮಗಳನ್ನೂ ಅರಿಯುವಲ್ಲಿ ಸಹಾಯಕರಾಗಿದ್ದಾರೆ. ಇನ್ನು ಶ್ರೀರಾಮಕೃಷ್ಣ ಮೋದಾಖ್ಯರು ಅವರಿಗೆ ಮಂತ್ರೋಪದೇಶ ಮಾಡಿದ ಗುರುಗಳಾಗಿದ್ದಾರೆ. ಇವರೀರ್ವರನ್ನೂ ತ್ಯಾಗರಾಜರು ವಿಶೇಷವಾಗಿ ಸ್ಮರಿಸಿರುವುದು ಕಾಣಬರುತ್ತದೆ. ನಾರದರನ್ನು ಕುರಿತಂತೆ ಅವರ ಒಂದು ಕೃತಿಗುಚ್ಛವೇ ಲಭ್ಯವಾಗುತ್ತದೆ.

"ಮ್ರೊಕ್ಕೆದ ಶ್ರೀ ರಾಮಕೃಷ್ಣ ಮೋದಾಖ್ಯುನಕುಃ"[೮]

ಇವಲ್ಲದೆ 'ಶಂಕರಗುರುವರುಲ' ಎಂಬ ತ್ಯಾಗರಾಜಾಂಕಿತದ ಅಪರೂಪ ಕೃತಿಯೊಂದು ಉಪಲಬ್ಧವಿದೆ. ಇದರಲ್ಲಿ ತ್ಯಾಗರಾಜರು ಆಚಾರ್ಯ ಶಂಕರರನ್ನು ಸ್ಮರಿಸಿರಬಹುದು. ಗುರುವರ, ಅಂಗಅನಂಗ ಅದ್ಭುತ ಚರಿತನನ್ನು ಶೃಂಗಾರ ಮಾಡಿ ಜನ್ಮ ಸಾರ್ಥಕಗೊಳಿಸುವಂತಹ ಎಂಬ ಪ್ರಯೋಗಗಳು ಈ ಊಹೆಗೆ ಅವಕಾಶ ನೀಡುತ್ತವೆ. ಆದರೆ ಕೃತಿಯ ಚರಣದಲ್ಲಿರುವ ಪ್ರಣತಾರ್ತಿಹರುನಿ ಎಂಬ ಪದಪ್ರಯೋಗ ತಿರುವೈಯಾರಿನ ಪಂಚನದೀಶನ ಸ್ತುತಿ ಇದಾಗಿರಬಹುದೆಂಬ ಅನುಮಾನವನ್ನೂ ತರುತ್ತದೆ. ಒಟ್ಟಾರೆ ಯಾರನ್ನು ಕುರಿತ ಸ್ತುತಿಯೇ ಇದಾಗಿದ್ದರೂ ಸಾರಾಂಶ ಮಾತ್ರ ಸಾತ್ತ್ವಿಕ

ಭಜನೆ, ಚಿತ್ತಶುದ್ಧಿ ಮತ್ತು ಸದ್ಭಕ್ತರ ಸಹವಾಸಕ್ಕಾಗಿ ಕೋರಿಕೆಯೇ. ಈಗಾಗಲೇ **ತಿಳಿಸಿರುವಂತೆ ಶಿವಬೇರೆಯಲ್ಲ**, ಗುರು ಬೇರೆಯಲ್ಲ ಎಂಬುದು ಗಮನಾರ್ಹ.

ತ್ಯಾಗರಾಜರ '**ನಾರದ* ಕೃತಿಗುಚ್ಛ**'ವೆಂದೇ ಪರಿಗಣಿಸಲ್ಪಟ್ಟಿರುವ ಈ ಸಮೂಹ ದಲ್ಲಿನ ರಚನೆಗಳೆಂದರೆ,

೧ ವರನಾರದ ನಾರಾಯಣ ಸ್ಮರಣಾನಂದಾನುಭವಮುಗಲ

೨ ನಾರದ ಗುರುಸ್ವಾಮಿ

೩ ಶ್ರೀನಾರದ ನಾದ ಸರಸೀರುಹಭೃಂಗ

೪ ಶ್ರೀನಾರದಮುನಿ ಗುರುರಾಯ

೫ ನಾರದಮುನಿ ವೆಡಲಿನ

ಇವುಗಳಲ್ಲಿ ಐದನೆಯ ರಚನೆ ಪ್ರಹ್ಲಾದ ಭಕ್ತಿವಿಜಯ ಗೀತನಾಟಕದಲ್ಲಿ ಕಾಣಬರು ತ್ತದೆ. ಉಳಿದವು ಬಿಡಿಕೃತಿಗಳ ಸಾಲಿನಲ್ಲಿ ಕಾಣಬರುವ ರಚನೆಗಳಾಗಿವೆ. ಈ ರಚನೆಗಳೇ ಅಲ್ಲದೇ ತ್ಯಾಗರಾಜರು ತಮ್ಮ ಗೀತನಾಟಕಗಳಲ್ಲೂ ಇನ್ನಿತರ ಕೆಲವು ರಚನೆಗಳಲ್ಲೂ ಪ್ರಾಸಂಗಿಕವಾಗಿ ನಾರದರನ್ನು ಸ್ಮರಿಸಿದ್ದಾರೆ (ನೋಡಿ, ಅಡಿಗಿ ಸುಖಮು, ಪಾಲಿಂ ತುವೋ).

ತ್ಯಾಗರಾಜರ ಹೇಳಿಕೆಯಂತೆ ನಾರದರು ಶ್ರೀಕರ, ಶುಭಾಂಗ, ಮುನಿವರ, ತಾಪ ತ್ರಯಹರ, ದೀನಮಾನವರ ರಕ್ಷಕ. ಇತಿಹಾಸ ಪುರಾಣ ಆಗಮಗಳು ನಾರದರ ಮೂಲಕವೇ ಬಂದುದು. ನಾರದರ ರಾಯಭಾರ ಬಹಳ ಫಲಕಾರಿ. ಇವರು ಯತಿಮುನಿ ಗಳಿಗೆ ಸಹಾಯಕರಾಗಿದ್ದಾರೆ. ಪ್ರಹ್ಲಾದನಿಗೆ ಶುಭವಾರ್ತೆ ತಿಳಿಸಿದ್ದಾರೆ. ಪತಿದಾನವೆಂಬ ವಿಶೇಷ ವ್ರತವನ್ನು ಸತ್ಯಭಾಮೆ ಆಚರಿಸಲು ನಾರದರೇ ಕಾರಣರಾಗಿದ್ದಾರೆ. ಸದಾಕಾಲ ನಾರಾಯಣನ ನಾಮಸ್ಮರಣೆಯನ್ನು ಸಂತೋಷದಿಂದ ತಾವು ಆಚರಿಸುತ್ತಾ ಶ್ರೀ ಹರಿಯ ಮರ್ಮಗಳನ್ನು ಅರಿತವರಿಗೇ ಜಯ ಎಂಬುದನ್ನು ಸಾರಿದ್ದಾರೆ.

ಸಂಗೀತ ಸಂಪ್ರದಾಯದಲ್ಲಿ ನಾರದರ ಪಾತ್ರ ಮಹತ್ವದ್ದು. ನಾದವನ್ನು ಬ್ರಹ್ಮಾ

---

* ನಾರದ ಪದಕ್ಕೆ ನಾರ–ಹರಿಯ ಜ್ಞಾನ, ದ–ನೀಡುವಾತನೆಂದೂ ; ಅರದ–ದೋಷಪ್ರದ, ನ–ಇಲ್ಲದವನು (ದೋಷರಹಿತನಾದವನು) ಎಂದೂ ; ನಾರಂ–ಜ್ಞಾನ ತಂ ದದಾತೀತಿ ನಾರದಃ ಎಂದೂ ವ್ಯಾಖ್ಯಾನಿಸಿರುವುದುಂಟು. ನಾರದರನ್ನು ತನ್ನ ಪುತ್ರನಾಗಿ ಪಡೆದ ಭಾಗ್ಯವನ್ನು ಬ್ರಹ್ಮ, ವಾಯುಪುರಾಣದಲ್ಲಿ ಹೀಗೆ ಹೇಳಿಕೊಂಡಂತೆ ಉಲ್ಲೇಖವುಂಟು.

ಕಿಂ ವರ್ಣಯಾಮಿ ಮಮಭಾಗ್ಯಂ ಮಹಾತ್ಮಾ
ಭಾವಾದ್ಯಶೋ ಭಾಗವಸ್ತನೂಭವಃ
ತ ಏವ ಧನ್ಯಾಃ ಖಲು ಪುಣ್ಯಶೀಲಾ
ಏಷಾಂಸುತಾ ಭಾಗವತಾಹಿಲೋಕೇ

ಶ್ರೀಹರಿಯು ನಾರದರಿಗೆ ವಿಶ್ವರೂಪ ತೋರಿ, ನಾರದರು ಭಕ್ತರಿಗೆ ನೀಡುವ ಎಲ್ಲ ವರಗಳನ್ನೂ ನಡೆಸಿಕೊಡುವುದಾಗಿ ಹೇಳಿದಂತೆ ಪ್ರತೀತಿಯುಂಟು (ನೋಡಿ, ಶ್ರೀಪುರಂದರದಾಸರು, ಟಿ. ಕೆ. ವೇಣು ಗೋಪಾಲ ದಾಸರು, ಗುರುರಾಜ ಪ್ರಕಾಶನ, ಬೆಂಗಳೂರು, ೧೯೮೫, ಪು.೩-೪ರಲ್ಲಿನ ಉಲ್ಲೇಖ.)

ನಂದಸ್ವರೂಪವಾಗಿ ಅನುಭವಿಸುವ ಮಹಾನುಭಾವರೀತ. ನಾರದರು ಸಂಗೀತಯೋಗ ನೈಗಮಪಾರಂಗತರು. ನಾದಸರಸ್ಸಿಗೆ ಭೃಂಗದಂತಿರುವವರು. ವೇದಜನಿತವಾದ ವೀಣಾ ವಾದನ ತತ್ವಜ್ಞರು.

ಶ್ರೀನಾರದ ನಾದ ಸರಸೀರುಹಭೃಂಗ

(ಶ್ರೀನಾರದ)

ಸಂಗೀತಯೋಗ ನೈಗಮ ಪಾರಂಗತುಡೈನ

(ನಾರದಗುರುಸ್ವಾಮಿ)

ಅಕಳಂಕರಾಗಿ, ಶರತ್ಕಾಲದ ಚಂದ್ರನಂತಿರುವ ನಾರದರನ್ನು ಸಕಲಲೋಕಗಳಿಗೂ ಸದ್ಗುರುವೆಂದು ಶ್ರೀಹರಿಯೇ ಬೋಧಿಸಿದ್ದಾನೆ. ನಾರದರಲ್ಲೂ ತಾನೇ ಅಂತರ್ಗತನಾಗಿ ರುವುದಾಗಿ ನುಡಿದಿದ್ದಾನೆ.

ಸಕಲ ಲೋಕಮುಲಕು ಸದ್ಗುರುವನುಚು
ಸದಾ ನೇ ನತಡನುಚುನು ಹರಿಯು
ಪ್ರಕಟಂಬುಗ ಕೀರ್ತಿನೊಸಂಗೆನೆ

(ವರನಾರದ)

ತ್ಯಾಗರಾಜರಿಗೆ ನಾರದರು 'ನಾರದೀಯ' ಮತ್ತು 'ಸ್ವರಾರ್ಣವ' ಎಂಬ ಗ್ರಂಥ ಗಳನ್ನು ನೀಡಿದಂತೆ ಪ್ರತೀತಿಯುಂಟು. ನಾರದೀಯದ ವಿಷಯ ಅವರ ರಚನೆಗಳಲ್ಲಿ ಪ್ರಸ್ತಾಪವಿಲ್ಲದಿದ್ದರೂ ಸ್ವರಾರ್ಣವದ ಮರ್ಮವನ್ನು ತಾವು ಅರಿತಂತೆ ತ್ಯಾಗರಾಜರು ಉಲ್ಲೇಖಿಸುತ್ತಾರೆ.

ಸ್ವರಾರ್ಣವ ಮರ್ಮಮುಲು
ವಿಜಯಮುಗಲ ತ್ಯಾಗರಾಜುಡೆರಿಗೆ

(ಸ್ವರರಾಗ ಸುಧಾರಸಯುತಭಕ್ತಿ)

ಭಕ್ತಿಮಾರ್ಗವೇ ಪರಿಪೂರ್ಣವಾದುದೆಂದು ಹೇಳಿದ ನಾರದರ ಆದೇಶವನ್ನು ತ್ಯಾಗ ರಾಜರು ನಂಬಿದಂತೆ ಹೇಳಿಕೊಳ್ಳುತ್ತಾರೆ (ಪಾಲಿಂತುವೋ ಪಾಲಿಂಪವೋ).

ನಾರದರ ಮತ್ತೊಂದು ವೈಶಿಷ್ಟ್ಯವೆಂದರೆ ಅವರು ತಮ್ಮ ನಿದರ್ಶನದ ಮೂಲಕ ಇಡೀ ಜಗತ್ತಿಗೆ ಮಾಯೆಯ ನಿಗೂಢತೆಯನ್ನು ಮನಗಾಣಿಸಿದ್ದಾರೆ. ಈ ವಿಷಯವನ್ನು ತ್ಯಾಗರಾಜರು ನಿಂದಾಸ್ತುತಿಯೊಂದರಲ್ಲಿ ಸ್ಥೂಲವಾಗಿ ಪ್ರಸ್ತಾಪಿಸಿದ್ದಾರೆ. ನಾರದರು ಭಗವಂತನ ಮಾಯಾವಿಲಾಸವನ್ನು ಕಾಣಲು ಅಪೇಕ್ಷಿಸಿದರಂತೆ. ಹರಿಯು ಹಾಗೇ ಆಗಲೆಂದು 'ಕಾನ್ಯಕುಬ್ಜ' ಎಂಬ ಸರೋವರವೊಂದರಲ್ಲಿ ಸ್ನಾನಮಾಡಿ ಬರುವಂತೆ ಆಣತಿಯಿತ್ತನಂತೆ. ಅಂತೆಯೇ ನಾರದರು ಮೀಯುವಾಗ ಸ್ತ್ರೀರೂಪ ತಾಳಿ ತಾಳಧ್ವಜ ನೆಂಬ ಸುಂದರ ಪುರುಷನನ್ನು ಕಂಡು ಮೋಹಕ್ಕೆ ಒಳಗಾಗಿ, ಆತನೊಂದಿಗೆ ವಿವಾಹ ವಾಗಿ ಮಕ್ಕಳನ್ನು ಪಡೆದು, ಭಗವಂತನ ಮಾಯಾವಿಲಾಸ ನೋಡಬೇಕೆಂದಿದ್ದ ತಮ್ಮ ಅಪೇಕ್ಷೆಯನ್ನೇ ಸಂಪೂರ್ಣವಾಗಿ ಮರೆತರಂತೆ. ಈ ಕಥೆ ದೇವೀಭಾಗವತದ ಷಷ್ಠ

ಸ್ಯಂದದಲ್ಲಿದೆ.[8] ಹೀಗೆ ಸಂಸಾರ ಜಾಲದಲ್ಲಿ ತೊಡಗಿದರೆ ಭಗವತ್ ಸ್ಮರಣೆ ಪೂರ್ಣ ವಾಗಿ ಮರೆಯುವಂತಾಗುವುದೆಂಬುದನ್ನು ಸ್ವನಿದರ್ಶನದ ಮೂಲಕ ಬೋಧಿಸಿದ ಮಹಾನುಭಾವರಾಗಿದ್ದಾರೆ.

**ವಾಸಿಗ ನಾರದಮೌನಿ ವರಮಡುಗ ವನಿತರೂಪುಡಾಯೆ**

**(ಅಡಿಗಿ ಸುಖಮು)**

ಮೇಲಿನ ರಚನೆಯಲ್ಲಿ ತ್ಯಾಗರಾಜರು ದೇವರ ಮಾಯಾಜಾಲದ ಆಧಾರದಲ್ಲಿ ಆತ ನನ್ನು ಹಂಗಿಸುವ ಭಾವ ಮುಖ್ಯವಾದರೂ, ನಾರದರ ಈ ಪ್ರಸಂಗವನ್ನು ಪ್ರಸ್ತಾಪಿ ಸಿರುವುದು ಗಮನಾರ್ಹ.

ಮಹಿಮಾನ್ವಿತರಾದ ಇಂತಹ ನಾರದರನ್ನು ತ್ಯಾಗರಾಜರು ದರ್ಶಿಸಿ ಧನ್ಯರಾಗಿದ್ದಾರೆ. ಈ ಸೌಭಾಗ್ಯ ತಮಗೆ ಲಭ್ಯವಾಗಲು ಎಂದಿನ ತಮ್ಮ ತಪಃಫಲ ಕಾರಣವೋ ಎಂದು ಆಶ್ಚರ್ಯಗೊಂಡಿದ್ದಾರೆ. ನಾರದರ ಸೇವಾಭಾಗ್ಯ ತ್ಯಾಗರಾಜರಿಗೆ ದೊರೆತು ಅವರಿಗೆ ಭವಪಾಶ ತೊಲಗಿದೆ. ಸುಜ್ಞಾನ ಸುಖಿಯೂ, ಅಜ್ಞಾನ ಶಿಖಿಯೂ ಆದ ನಾರದಗುರು ವನ್ನು ಕಂಡ ತ್ಯಾಗರಾಜರು ಹೀಗೆ ಹಾಡುತ್ತಾರೆ.

**ಶ್ರೀ ನಾರದಮುನಿ ಗುರುರಾಯ ಕಂಟಿ-ಮೇನಾಟಿ ತಪಮೋ ಗುರುರಾಯ**
**ಮನಸಾರ ಗೋರಿತಿ ಗುರುರಾಯ ನೇಡು**
**ಕನುಲಾರ ಕನುಗೊಂಟಿಮಿ ಗುರುರಾಯ**
**ಮೀಸೇವ ದೊರಕೆನು ಗುರುರಾಯ ಭವ**
**ಪಾಶಮು ದೊಲಿಗೆನು ಗುರುರಾಯ**
**ನೀವೇ ಸುಜ್ಞಾನ ಸುಖಿ ಗುರುರಾಯ**
**ನೀವೇ ಯಜ್ಞಾನ ಶಿಖಿ ಗುರುರಾಯ**
**ರಾಜಿಲ್ಲು ವೀಣೆಗಲ ಗುರುರಾಯ . . . .**

**(ಶ್ರೀನಾರದಮುನಿ ಗುರುರಾಯ)**

ಭಕ್ತಿಯ ಯುಕ್ತಾಯುಕ್ತತೆಯನ್ನು ನಿರ್ಧರಿಸುವವರು ಭಕ್ತಶ್ರೇಷ್ಠರೇ. ಇವರೇ ನೈಜಭಕ್ತಿಗೆ ಒಂದು ಮಾನದಂಡ.[20] ತ್ಯಾಗರಾಜರು ಇವರನ್ನು 'ರಸಿಕಜನಮಿತ್ರರು' ಹಾಗೂ 'ಸತ್ಪುರುಷರು' ಎಂಬುದಾಗಿ ಸಂಬೋಧಿಸುತ್ತಾರೆ. ಇವರು ವಯಸ್ಸಿನಲ್ಲಿ ಕಿರಿಯರೇ ಆಗಿದ್ದರೂ ಭಕ್ತಿಸಾಧನೆಯಲ್ಲಿ ಹಿರಿಯರಾಗಿರುತ್ತಾರೆ. ಈ ಮೂಲಕ ದೇವರ ಅಂತರಂಗ ಭಕ್ತರಾಗಿರುತ್ತಾರೆ. ಸತ್ಪುರುಷರು ಶುದ್ಧಾತ್ಮರಾಗಿ ಎಲ್ಲೆಡೆಯೂ, ಎಲ್ಲ ರಲ್ಲೂ ದೇವರನ್ನೇ ಕಾಣುತ್ತಾರೆ. ತನ್ಮೂಲಕ ತಾವು ಮಾತ್ರ ಬ್ರಹ್ಮಾನಂದ ಹೊಂದದೆ ಇತರರಿಗೂ ಹಾದಿ ತೋರುತ್ತಾರೆ. ಈ ಬಗೆಗೆ ತ್ಯಾಗರಾಜರು ಹೀಗೆ ಹೇಳುತ್ತಾರೆ.

**ವರಭಕ್ತುಲು ಸೇಯುಭಕ್ತಿ ಚೆಲಗು ಸಕಲಜನುಲಕೆಲ್ಲ ಚೆಲ್ಲಿನ ಕಾಸೌನುಗಾ**

**(ಬಲಮುಕುಲಮು)**

ಇಂತಹವರು ಸಾಮಾನ್ಯರ ಪ್ರಾರ್ಥನೆಯನ್ನೂ, ಸಾಮಾನ್ಯರ ಪರವಾಗಿ ದೇವರಲ್ಲಿ ಬಿನ್ನವಿಸುತ್ತಾರೆ. ಈ ನಂಬಿಕೆಯಿಂದಲೇ ತ್ಯಾಗರಾಜರು ವಿರಹದ ಒಂದು ಘಟ್ಟದಲ್ಲಿ ತಮ್ಮ ದೀನ ಮೊರೆಯನ್ನು ರಾಮನೊಂದಿಗೆ ತಿಳಿಸುವಂತಹ ಹಿರಿಯರು ಯಾರೂ ಇಲ್ಲವೇ ಎಂದು ದುಃಖಿಸುತ್ತಾರೆ (ಎವರ್ಯೆನ ಲೇರಾ ಪೆದ್ದಲು). ಏಕೆಂದರೆ ಸಿದ್ಧರಾದ ಇವರ ಮಾತನ್ನು ದೇವರು ಆದರಿಸುತ್ತಾನೆ. ಇವರ ಮಾತಿಗೆ ಕಟ್ಟುಬೀಳುತ್ತಾನೆ. ಇದನ್ನೇ ತ್ಯಾಗರಾಜರು 'ಹನುಮಂತನಿಗೆ ಕೈವಶನಾದ ಹರಿ' ಎಂದು ಕೆಳಗಿನ ಈ ಸಾಲಿನಲ್ಲಿ ಪ್ರತಿಧ್ವನಿಸುವುದು.

**ವಾತಾತ್ಮಜುನಿಕಿ ಚೇಯಿ ವಶಮ್ಮೈನ* ದೊರಕು**

**(ರಕ್ಷಪೆಟ್ಟರೇ)**

ತ್ಯಾಗರಾಜರ ಮೇಲಿನ ಸಾಲಿನಲ್ಲಿ ವಿಶೇಷವೊಂದುಂಟು. ಇಲ್ಲಿ ದಾಸಭಕ್ತಿಯ ಪ್ರತೀಕನಾದ ಹನುಮಂತನಿಗೆ ಕೈವಶನಾದ ಶ್ರೀರಾಮನ ಪ್ರಸ್ತಾಪವಿದೆ. ದೇವರು ದೊರೆಯೇ ಆದರೂ ಕಿಂಕರನೊಬ್ಬನಿಗೆ ಅಧೀನನಾಗಿರುವುದು ಗಮನಾರ್ಹ. ಹೀಗೆಯೇ ಹರಿಯು ತನ್ನ ಸತಿಯೆನಿಸುವ ಲಕ್ಷ್ಮಿಗೂ ನೀಡದಂತಹ ಮಹತ್ವದ ಸ್ಥಾನವನ್ನು, ಭಕ್ತನಿಗಿತ್ತು ಆದರಿಸುತ್ತಾನೆ ಎಂಬುದು ತ್ಯಾಗರಾಜರ ನುಡಿ.

**ಶ್ರೀ ಲಕ್ಷ್ಮಿಕೈನನು ಚಿಕ್ಕನಿಯಂಕಂಬು ಹರಿಯುಭಕ್ತುನಿಕಿಚ್ಚಿ ಆದರಿಂಚೆ**[10]

ತ್ಯಾಗರಾಜರು ವಿರಹವೇದನೆಯ ಒಂದು ಘಟ್ಟದಲ್ಲಿ ಹರಿಯ ಅಂತರಂಗ ಭಕ್ತರಲ್ಲಿ ಯಾರಾದರೂ ತಮ್ಮ ವಿರುದ್ಧ ಚಾಡಿ ಮಾತುಗಳನ್ನು ದೇವರೊಂದಿಗೆ ಹೇಳಿರಬಹುದೇ ಎಂಬ ಭಾವವನ್ನೂ ವ್ಯಕ್ತಪಡಿಸುತ್ತಾರೆ (ಎಂದುಕೀಚಲಮು). ಇಲ್ಲಿ ಹರಿ ತನ್ನ ಅಂತರಂಗಭಕ್ತರ ಹೇಳಿಕೆಯನ್ನು ಆದರಿಸುವನೆಂಬುದು ಮುಖ್ಯ ಅಂಶ.

ತ್ಯಾಗರಾಜರು ಮಹಾನುಭಾವರ ಲಕ್ಷಣಗಳನ್ನು ಹೀಗೆ ಪಟ್ಟಿಮಾಡುತ್ತಾರೆ.

**ಸಂತತಂಬುನನು ಗುಣಭಜನಾನಂದ ಕೀರ್ತನಮು ಸೇಯುವಾರು**
**(ಸತತವೂ ಹರಿಯ ಗುಣಕೀರ್ತನೆ ಮಾಡುವವರು)**

**(ಎಂದರೋ ಮಹಾನುಭಾವುಲು)**

**ಚಂದುರುವದನುನಿ ಅಂದಚಂದಮುನ ಹೃದಯಾರ**
**ವಿಂದಮುನ ಜೂಚಿ ಬ್ರಹ್ಮಾನಂದಮನುಭವಿಂಚುವಾರು**

(ಚಂದ್ರವದನನ ಅಂದಚಂದಗಳನ್ನು ಹೃದಯಾರವಿಂದದಲ್ಲಿ
ನೋಡುತ್ತಾ ಬ್ರಹ್ಮಾನಂದ ಅನುಭವಿಸುವವರು)

**(ಎಂದರೋ ಮಹಾನುಭಾವುಲು)**

---

* ಈ ಸಂದರ್ಭದಲ್ಲಿ 'ನೀನೇ ಬಲ್ಲಿದನೋ ನಿನ್ನ ದಾಸರು ಬಲ್ಲಿದರೋ' ಎಂಬ ದಾಸರ ಸಾಲು ಮತ್ತು 'ಯಿಂತಟಿದ್ಯೆವಮವು ನಿಸ್ಸಿಂಕನೆಂದು ವೆದಿಕೇನು | ಚಿಂತ ಶರಣಾಗತುಲಚೇತಿವಾಡವು' ಎಂಬ ಅನ್ನಮಯ್ಯನವರ ಸಾಲನ್ನೂ ಸ್ಮರಿಸಬಹುದು.

**ಚಲಚಿತ್ತಮು ಲೇನಿವಾರು**
(ಚಿತ್ತಚಾಂಚಲ್ಯವಿಲ್ಲದವರು)
(ಎವರ್ರೈನಲೇರಾ)

**ಸ್ವಾಂತಮನು ಸರೋಜಮನು ಸಮರ್ಪಣಮು ಸೇಯುವಾರು**
(ಮನವೆಂಬ ಕಮಲವನ್ನು ಸಮರ್ಪಿಸುವವರು)
(ಎಂದರೋ ಮಹಾನುಭಾವುಲು)

**ನಾನಾ ಕರ್ಮಫಲಮು ದಾನಮು ಸೇಯುವಾರು**
(ಪುಣ್ಯಕರ್ಮ ಫಲಗಳನ್ನು ದಾನ ಮಾಡುವವರು)
(ಸಂಸಾರುಲ್ಕೈತೇಯೇಮಯ್ಯ)

**ಜಗಮೆಲ್ಲನು ಸುಧಾದೃಷ್ಟಿಚೇ ಬ್ರೋಚುವಾರು**
(ಜಗತ್ತನ್ನು ತಮ್ಮ ಅಮೃತದೃಷ್ಟಿಯಿಂದ ರಕ್ಷಿಸುವವರು)
(ಎಂದರೋ ಮಹಾನುಭಾವುಲು)

**ಚಿರಾಯುವುಲ್ ಗಲಿಗಿ ನಿರವಧಿ ಸುಖಾತ್ಮುಲೈನವಾರು**
(ಸದಾ ಸುಖಿಗಳಾಗಿ ಚಿರಂಜೀವಿಯಾಗಿರುವವರು)
(ಎಂದರೋ ಮಹಾನುಭಾವುಲು)

**ತ್ಯಾಗರಾಜಾಪ್ತುಲೈನವಾರು**
(ಶಿವಪ್ರಿಯರಾದವರು ಇವರು ತ್ಯಾಗರಾಜರಿಗೂ ಪ್ರಿಯರೇ ಎಂಬುದೂ ಮತ್ತೊಂದು ಅರ್ಥ)
(ಎಂದರೋ ಮಹಾನುಭಾವುಲು)

ಬ್ರಹ್ಮಾನಂದ ಹೊಂದಲು ಸ್ಥಿರಚಿತ್ತ, ನಿಷ್ಕಾಮ ಕರ್ಮಯೋಗ, ಸ್ಥಿರಭಕ್ತಿ, ಇತರರೆಡೆಗೆ ಕರುಣೆ ಮುಂತಾದ ಅಂಶಗಳು ಅಗತ್ಯ ಎಂಬುದನ್ನು ಹಿರಿಯರ ಲಕ್ಷಣಗಳ ವಿವರದ ಮೂಲಕ ತ್ಯಾಗರಾಜರು ಸ್ಪಷ್ಟಪಡಿಸಿದ್ದಾರೆ. ಇಂತಹ ಸುಜನರನ್ನು ಪೂಜಿಸುವ, ಸೇವಿಸುವವರ ಭಾಗ್ಯಕ್ಕೆ ಎಣೆಯಿಲ್ಲ ಎಂಬ ಅವರ ಅಭಿಪ್ರಾಯ ಪ್ರಹ್ಲಾದ ಭಕ್ತಿವಿಜಯದ ಪ್ರಥಮಾಂಕದಲ್ಲಿ ಇನ್ನೂ ಸ್ಪಷ್ಟವಾಗಿದೆ. ಕರ್ಮಮಾರ್ಗನಿರತರಾದರೂ ಹರಿಯ ಮರ್ಮವರಿಯದೆ ಧರ್ಮರಹಿತರಾದವರು ಕೂಡ ಭಗವದ್ಭಕ್ತರನ್ನು ಸ್ಮರಿಸಿ ಭಾಗ್ಯವಂತರಾಗಬಹುದೆಂಬುದು ತ್ಯಾಗರಾಜರ ಅಭಿಪ್ರಾಯ. ಇವರ 'ಭಾಗ್ಯವನ್ನು ಅಳತೆ ಮಾಡಲು ಬ್ರಹ್ಮೇಂದ್ರಾದಿಗಳಿಗಾದರೂ ಸಾಧ್ಯವೇ' ಎಂಬುದು ಅವರ ಪ್ರಶ್ನೆ.

**ನಿನುಮದಿ ಚಿಂತಿಂಚು ಸುಜನುಲ ಪೂಜಿಂಚುವಾರಿ**
**ನಿಮ್ಮ ಮನಸಾರ ನಮ್ಮಿನ ಸುಧಾಪೂರ ಚಿತ್ತುಲ ಸೇವಕೋರಿನವಾರಿ**
(ಇಂತ ಭಾಗ್ಯಮನಿ ನಿರ್ಣಯಿಂಪ ಬ್ರಹ್ಮೇಂದ್ರಾದುಲತರಮಾ?)

ಏಕೆಂದರೆ ಆತನನ್ನು ಅರ್ಚಿಸುವ, ಕಣ್ಣಾರೆ ಸೇವಿಸುವ ಧೀರರಲ್ಲೂ, ಸಿಂಗರಿಸಿ ಹಾಲ್ಬೆಣ್ಣೆಗಳನ್ನು ಉಣಿಸುವ ನಿರ್ಮಲಾತ್ಮರಲ್ಲೂ, ತಾಂಬೂಲ ನೀಡಿ ಆಲಂಗಿಸ ಬಯಸುವ ತನ್ನ ಭಕ್ತರಲ್ಲೂ ಶ್ರೀಹರಿ ಅಂತರ್ಗತನಾಗಿದ್ದಾನೆ. ಆದ್ದರಿಂದ ಇಂತಹ ಹಿರಿಯರ ವಿಷಯಗಳ ಶ್ರವಣ ಮಾಡದಿದ್ದರೆ ಸುಜ್ಞಾನ ಲಭ್ಯವಾಗದು (ಬುದ್ಧಿರಾದು) ಎನ್ನುತ್ತಾರೆ. 'ಮಹತ್ಸೇವಾಂ ದ್ವಾರಮಾಹುರ್ವಿಮುಕ್ತೇಃ'[೧೨] ಎಂಬ ಉಕ್ತಿಯಂತೆ ಮಹಾತ್ಮರ ಸೇವೆಯೇ ಮುಕ್ತಿಗೆ ದ್ವಾರ. ಅದು ಲಭ್ಯವಾಗುವುದೇ ಮಹಾಭಾಗ್ಯವಾದ್ದರಿಂದ ತ್ಯಾಗರಾಜರು ಕುಲಶೀಲರಾದವರ ಸಂಗವನ್ನೇ ಬಯಸುತ್ತಾರೆ '**ಲೀಲಗಾನುಜೂಚಿ ಕುಲಶೀಲುಲ ನಾಪಾಲ ಗಲ್ಗಜೇಸಿ ಪಾಲಿಂಪವಯ್ಯ**' (ಲೀಲಗಾನು).

ತ್ಯಾಗರಾಜರು ತಾವು ಮಾತ್ರ ಸಜ್ಜನ ಸಂಗವನ್ನು ಬಯಸದೆ ಮನಸ್ಸಂಬೋಧಿತವಾಗಿ ಹಾಗೂ ಇತರರನ್ನುದ್ದೇಶಿಸಿದಂತೆಯೂ ಸತ್ಸಂಗದ ಅಂಶವನ್ನು ಹಲವು ರಚನೆಗಳಲ್ಲಿ ಒತ್ತಿ ನುಡಿಯುತ್ತಾರೆ.

**ಸತ್ಸಹವಾಸಮು ವಿಡವಕವೇ**
(ಸತ್ಸಹವಾಸವನ್ನು ಬಿಡಬೇಡ)

**(ಮೋಸಬೋಕುವಿನವೇ)**

**ಸುಮತುಲೌ ನರುಲನುಜೇರಿ ನಿಜಸುಖಮನುಭವಿಂಚುಟಕು**
**ನೀಕಿದೇಸಮಯಮು**
(ಸುಮತಿಗಳಾದ ನರರನ್ನು ಸೇರಿ ನಿಜಸುಖವನುಭವಿಸಲು
ನಿನಗಿದೇ ಸೂಕ್ತ ಸಮಯ)

**(ಸಮಯಮು ಏಮರಕೇ)**

**ಹಂಸಾದುಲಗೂಡಿ . . .**
(ಸಜ್ಜನರನ್ನು ಕೂಡಿ)

**(ಸಂಸಾರುಲೈತೇ ಏಮಯ್ಯ)**

**ದುರಾತ್ಮುಲಗು ಭೂಕಿರಾತಕುಲ ಜೇರರಾದು**
(ದುರಾತ್ಮರಾದ ಭೂಕಿರಾತಕರನ್ನು ಸೇರಬಾರದು)

**(ಸುಧಾಮಾಧುರ್ಯಭಾಷಣ)**

ಮತಿಹೀನರೂ, ಅತಿಪಾಪಿಗಳೂ, ಸಂಸಾರಿಗಳೂ ಮಹಾತ್ಮರ ಸಂಗದಿಂದ ಸದ್ಗತಿ ಹೊಂದಬಹುದೆನ್ನುತ್ತಾರೆ, ತ್ಯಾಗರಾಜರು. ಒಬ್ಬನು ಸತ್ಸಂಗ ಮಾಡಿಯೂ ಅನೈತಿಕತೆಯಲ್ಲಿ ಅಥವಾ ಸಂಸಾರ ಬಂಧನದಲ್ಲಿ ಮುಂದುವರಿಯಬಹುದೆಂಬುದು ಇದರ ಅರ್ಥವಲ್ಲ. ಇಲ್ಲಿ ತ್ಯಾಗರಾಜರು ಸತ್ಸಹವಾಸ ಮತ್ತು ಅನೈತಿಕತೆಗಳೆಂಬ ಎರಡು ವಿರೋಧಗಳನ್ನು ಎತ್ತಿಹಿಡಿಯುತ್ತಿಲ್ಲ. ಸತ್ಸಹವಾಸದಿಂದ ಒಬ್ಬನು ಸನ್ಮಾರ್ಗಕ್ಕೆ ಬಂದು ಧನ್ಯನಾಗುತ್ತಾನೆಂದೇ ಅವರ ನಿಲುವು. ಈ ಸಂದರ್ಭದಲ್ಲಿ ಗೀತೆಯ ಎರಡು

ಶ್ಲೋಕಗಳು ಉಲ್ಲೇಖಾರ್ಹ.

> ಅಪಿಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್
> ಸಾಧುರೇವ ಸಮಂತವ್ಯಃ ಸಮಗ್ವ್ಯವಸಿತೋಹಿಸಃ ||
> ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ
> ಕೌಂತೇಯ ಪ್ರತಿಜಾನೀಹಿ ನಮೇಭಕ್ತಃ ಪ್ರಣಶ್ಯತಿ || [೧೩]

ಅತ್ಯಂತ ದುರಾಚಾರಿಯಾಗಿದ್ದರೂ, ಅನನ್ಯಭಕ್ತಿಯಿಂದ ನನ್ನನ್ನು ಭಜಿಸಿದರೆ ಮನುಷ್ಯನು ಸಾಧುವೆಂದೇ ತಿಳಿಯತಕ್ಕದ್ದು. ಏಕೆಂದರೆ ಆತ ನಿಶ್ಚಯಬುದ್ಧಿ ಉಳ್ಳವನಾಗಿರುತ್ತಾನೆ. ಎಲೈ ಅರ್ಜುನ, ಅವನು ಬೇಗನೇ ಧರ್ಮಾತ್ಮನಾಗುತ್ತಾನೆ ಮತ್ತು ಶಾಶ್ವತ ಶಾಂತಿಯನ್ನು ಹೊಂದುತ್ತಾನೆ. ನನ್ನ ಭಕ್ತನು ನಾಶವಾಗುವುದಿಲ್ಲವೆಂದು ತಿಳಿದುಕೋ, ಎಂದು ಗೀತಾಕಾರನು ಹೇಳಿದರೆ, ತ್ಯಾಗರಾಜರು ಅದೇ ಮಾತನ್ನು ದೈವಭಕ್ತರಿಗೂ ಅನ್ವಯಿಸುತ್ತಿದ್ದಾರೆ.

ತ್ಯಾಗರಾಜರು ಹೆಸರಿಸುವ ಮಹಾನುಭಾವರೆಂದರೆ, ಆಂಜನೇಯ, ಗರುಡ, ಲಕ್ಷ್ಮಣ, ಭರತ, ಶತ್ರುಘ್ನ, ಪ್ರಹ್ಲಾದ, ತುಂಬುರು, ವಾಲ್ಮೀಕಿ, ತುಳಸೀದಾಸ, ಪುರಂದರದಾಸ, ಪಾಂಡುರಂಗ, ನಾಮದೇವ, ಸಹದೇವ, ಜಯದೇವ, ಜ್ಞಾನದೇವ, ತುಕಾರಾಮ, ನಾರಾಯಣತೀರ್ಥ, ಭದ್ರಾಚಲ ರಾಮದಾಸ್, ಭರತ, ಸಾರಂಗದೇವ, ಸೋಮೇಶ್ವರ ಮೊದಲಾದವರು. ಇವರ ಈ ಪಟ್ಟಿಯಲ್ಲಿ ಪೌರಾಣಿಕ ವ್ಯಕ್ತಿಗಳೂ, ಸಂತಭಕ್ತರೂ, ಸಂಗೀತಜ್ಞರೂ ಸೇರಿದ್ದಾರೆ. ತ್ಯಾಗರಾಜರ ದೃಷ್ಟಿಯಲ್ಲಿ ಇವರೆಲ್ಲರೂ ಹಿರಿಯರೇ. ಇಂತಹ ಹಿರಿಯರನ್ನು ವಂದಿಸುವುದರಲ್ಲೇ ತ್ಯಾಗರಾಜರಿಗೆ ವಿಶೇಷ ಆನಂದ. ಅವರು ಒಂದೆಡೆ ಭಕ್ತರಾದ ಸೀತಾ, ಸೌಮಿತ್ರಿ, ಶಬರಿ, ಹನುಮಾದಿಗಳ ಕೃಪೆ ತಮ್ಮೆಡೆಗೆ ಉಂಟಾಗುವುದೆಂದಿಗೋ ಎಂದು ಹಂಬಲಿಸುತ್ತಾರೆ (ಪಾಹಿರಾಮ ರಾಮ ಎನುಚು). **ಇವರೆಲ್ಲರೂ ತ್ಯಾಗರಾಜರಿಗೆ ಆದರ್ಶ ಮೂರ್ತಿಗಳಾದರೆ ನಮಗೆ ಭಕ್ತಿ ಮತ್ತು ಸಂಗೀತದ ಮೂಲಕ ಸನ್ಮಾರ್ಗವೊಂದನ್ನು ತೋರಿರುವ ತ್ಯಾಗರಾಜರೇ ಆದರ್ಶರಾಗುತ್ತಾರೆ.**

ಭಗವಂತ ಮತ್ತು ಭಗವದ್ಭಕ್ತರ ನಡುವೆ ಭೇದಭಾವವಿಲ್ಲ ಎಂಬುದು ನಾರದರ ಹೇಳಿಕೆ. ಇವರು ಹಲವು ಸೂತ್ರಗಳ ಮೂಲಕ ಸತ್ಸಂಗದ ಹಿರಿಮೆಯನ್ನು ಸ್ಪಷ್ಟಪಡಿಸುತ್ತಾರೆ.[೧೪] ಭಾಗವತದಲ್ಲಿ ಸತ್ಸಂಗದ ಆವಶ್ಯಕತೆಯನ್ನು ಪುನಃಪುನಃ ಹೇಳಲಾಗಿದೆ. ಕಪಿಲಮುನಿಯು ತನ್ನ ತಾಯಿ ದೇವಹೂತಿಗೆ ನೀಡಿದ ಬೋಧನೆಯಲ್ಲಿ ಸತ್ಸಂಗವನ್ನು ಎತ್ತಿ ಹಿಡಿಯುತ್ತಾನೆ. ಉದ್ಧವನಿಗೆ ಭಗವಂತನೇ ಮಾಡಿದ ಉಪದೇಶದಲ್ಲಿ ಸತ್ಸಂಗಕ್ಕೆ ಸಮನಾದುದು ಬೇರೊಂದಿಲ್ಲವೆನ್ನುತ್ತಾನೆ. ಶಂಕರರ ಪ್ರಕಾರ ಮನುಷ್ಯ ಸತ್ಸಂಗದಿಂದ ನಿಸ್ಸಂಗನಾಗುತ್ತಾನೆ. ಎಂದರೆ ನಿರ್ಲಿಪ್ತನಾಗುತ್ತಾನೆ. ಇಂತಹ ನಿರ್ಮೋಹಭಾವದಿಂದ ಆತನ ಬುದ್ಧಿ **ಸತ್ಯ**ದಲ್ಲಿ ಸ್ಥಿರಗೊಳ್ಳುತ್ತದೆ. ಕ್ರಮೇಣ ಅವನಿಗೆ ಸಮಾಧಿಸ್ಥಿತಿಯುಂಟಾಗಿ ಆತ ಜೀವನ್ಮುಕ್ತನಾಗುತ್ತಾನೆ. ಈ ಕಾರಣದಿಂದ ಆತ ಪೂಜಾರ್ಹ. ಈ

ನಿಲುವಿನಿಂದಲೇ ತ್ಯಾಗರಾಜರೂ ಇತರ ಮಹಾನುಭಾವರಂತೆ ಸಜ್ಜನರ ಸಂಗದ ಹಿರಿಮೆಯನ್ನು ಕೊಂಡಾಡುತ್ತಾರೆ. ಹೀಗೆ ಮುಕ್ತಿಯ ಮುಖ್ಯದ್ವಾರಕ್ಕೆ ಕರೆದೊಯ್ಯುವಲ್ಲಿ ಗುರು-ಸತ್ಸಂಗಗಳು ಪ್ರಧಾನವಾಗಿ, ಆ ಮೂಲಕ ಒಬ್ಬನು ಸುಲಭವಾಗಿ ಮುಕ್ತಿ ಪಡೆಯಬಹುದಾಗಿದೆ. ಅರ್ಥಾತ್ ತ್ಯಾಗರಾಜರು ಹೇಳುವಂತೆ ಹುಟ್ಟುಸಾವುಗಳಿಲ್ಲದ ತಾಣವನ್ನು ಸೇರಿ ಬ್ರಹ್ಮಾನಂದವನ್ನು ಅನುಭವಿಸಬಹುದಾಗಿದೆ. ಪುರಂದರರು 'ವರ ಗುರು ಉಪದೇಶವಾಗಿ, ಹರಿದಾಸರ ಸಂಗ ದೊರೆತಾಕ್ಷಣವೇ ಕರಿರಾಜವರದನ ಕರುಣ ಸ್ಥಿರವಾಯಿತು' ಎಂದೂ ವ್ಯಾಸರಾಯಸ್ವಾಮಿಗಳಿಂದ 'ದೀಕ್ಷೆ ಪಡೆದ ನಂತರ ಮುಕ್ತಿ ಮಾರ್ಗಕ್ಕೆ ತಾವು ಯೋಗ್ಯರಾದರೆಂದೂ' ಹೇಳಿಕೊಂಡಿರುವುದನ್ನು ನಾವಿಲ್ಲಿ ಸ್ಮರಿಸಬಹುದು.[೧೫]

## ಟಿಪ್ಪಣಿಗಳು

೧ ಹಿಂದೂಧರ್ಮದ ಪರಿಚಯ, ಎದುರ್ಕಳ ಕೆ. ಶಂಕರನಾರಾಯಣ ಭಟ್, ಶ್ರೀರಾಮಕೃಷ್ಣ ಪ್ರಕಾಶನ, ಕೊಡಗು ಜಿಲ್ಲೆ, ಮೈಸೂರು ರಾಜ್ಯ, ೧೯೬೮, ಪು. ೧೫೪ ರಿಂದ ೧೮೦.

೨ *The Philosophy of Sadhana in Visistadwaita,* N.S. Anantarangachar, Prasaranga, University of Mysore, ೧೯೬೭, ಪು. ೧೦೧-೧೦೨.

೩ *The Spiritual Heritage of Tyagaraja,* C. Ramanujachari & Dr. V. Raghavan, Sri Ramakrishna Math, Madras, ೧೯೬೬, ಪು. ೧೭೭.

೪ ಸ್ತವಕುಸುಮಾಂಜಲಿ, ಗುರುಸ್ತೋತ್ರಮ್, ಶ್ರೀರಾಮಕೃಷ್ಣಾಶ್ರಮ, ಮೈಸೂರು, ಪು. ೧೦-೧೧.

ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ ।
ಚಕ್ಷುರುನ್ಮೀಲಿತಂ ಯೇನ ...॥
ಗುರುಬ್ರಹ್ಮ ಗುರುರ್ವಿಷ್ಣು ರ್ಗುರುರ್ದೇವೋ ಮಹೇಶ್ವರಃ ।
ಗುರುರೇವ ಪರಂಬ್ರಹ್ಮ ...॥

೫ ಅಧ್ಯಾಯ ೭, ಶ್ಲೋಕ ೧೮.

೬ ತ್ಯಾಗರಾಜ ಕೀರ್ತನಲು, ವಿಶೇಷ ವಿವರಣಮು, ಸಂ. ೧, ಕಲ್ಲೂರಿ ವೀರಭದ್ರಶಾಸ್ತ್ರಿ, ಸ್ವಧರ್ಮ ಸ್ವಾರಾಜ್ಯ ಸಂಘಮು, ಮದರಾಸು, ೧೯೭೫, ಪು. ೩೯೬ ರಲ್ಲಿ ಉಲ್ಲೇಖ.

೭ *The Call of the Jagadguru,* R. Krishnaswamy Iyer, Ganesh & Co. Private Limited, Madras, ೧೯೬೧, ಪು. ೮-೯.

೮ ತ್ಯಾಗರಾಜರ ನೌಕಾಚರಿತ್ರೆ ಗೀತನಾಟಕ ಆರಂಭದ ಮೂರನೆಯ ಕಂದಪದ್ಯ. ಇಲ್ಲಿ ಅವರು ರಾಮಕೃಷ್ಣಮೋದಾಖ್ಯರನ್ನು ತಮ್ಮ ಗುರುವೆಂದು ನೇರವಾಗಿ ಹೇಳಿಲ್ಲದಿದ್ದರೂ ಇವರು ತ್ಯಾಗರಾಜರಿಗೆ ಮಂತ್ರೋಪದೇಶ ಮಾಡಿದಂತೆ ಪ್ರತೀತಿಯುಂಟು. ಇದನ್ನು ಸಮರ್ಥಿಸಲೋ ಎಂಬಂತೆ ತ್ಯಾಗರಾಜರು ರಾಮಕೃಷ್ಣಮೋದಾಖ್ಯರಿಗೆ ನಮಸ್ಕರಿಸಿದ್ದಾರೆ. ಈ ಆಧಾರದ ಮೇಲೆ ಇದನ್ನು ಈ ಸಂದರ್ಭದಲ್ಲಿ ಪ್ರಸ್ತಾಪಿಸಲಾಗಿದೆ.

೯ ತ್ಯಾಗರಾಜ ಕೀರ್ತನಲು, ವಿಶೇಷ ವಿವರಣಮು, ಸಂ. ೧, ಕಲ್ಲೂರಿ ವೀರಭದ್ರಶಾಸ್ತ್ರಿ, ಪು. ೨೫೧ರಲ್ಲಿ ಉಲ್ಲೇಖ.

೧೦ ಹೋಲಿಸಿ, ತೈತ್ತರೀಯ ಉಪನಿಷತ್ ಶಿಕ್ಷಾವಲ್ಲಿ ಅನುವಾಕ ೧೧ ಮತ್ತು ಭಗವದ್ಗೀತೆ ೩-೨೧.

೧೧ ತ್ಯಾಗರಾಜರ ಪ್ರಹ್ಲಾದ ಭಕ್ತಿವಿಜಯದ ಮೂರನೇ ಅಂಕದಲ್ಲಿರುವ ಸೀಸಪದ್ಯ.

೧೨ ತ್ಯಾಗರಾಜ ಕೀರ್ತನಲು ವಿಶೇಷ ವಿವರಣಮು, ಸಂ. ೧, ಕಲ್ಲೂರಿ ವೀರಭದ್ರಶಾಸ್ತ್ರಿ, ಪು.೨೬೮ರಲ್ಲಿ ಉಲ್ಲೇಖ.

೧೩ ಅಧ್ಯಾಯ ೯, ಶ್ಲೋಕಗಳು ೩೦-೩೧.

೧೪ ನಾರದರ ಭಕ್ತಿಸೂತ್ರ, ೩೮-೪೫.

೧೫ ನೋಡಿ, ಪುರಂದರ ಸಾಹಿತ್ಯ ದರ್ಶನ, ಸಂ. ೧, (ಸಂ.) ಪ್ರೊ. ಸಾ. ಕೃ ರಾಮಚಂದ್ರರಾವ್, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫, ಪದಸಂಖ್ಯೆಗಳು ೧೪ ಮತ್ತು ೧೬, ಪು. ೧೦೦ ಮತ್ತು ೧೦೪.

೧೫

# ತ್ಯಾಗರಾಜರ ರಚನೆಗಳಲ್ಲಿ ಪೌರಾಣಿಕ ಅಂಶಗಳು

ತ್ಯಾಗರಾಜರು ತಮ್ಮ ಭಕ್ತಿ ಸಿದ್ಧಾಂತಕ್ಕೆ ಪೋಷಕವಾಗಿ ಭಾರತೀಯರಿಗೆ ಮಹಾ ಮೇರುಕೃತಿಗಳೆಂದು ಮಾನ್ಯವಾದ ರಾಮಾಯಣ, ಮಹಾಭಾರತ, ಭಾಗವತ ಮುಂತಾದವುಗಳಿಂದ ವಿಷಯಗಳನ್ನು ತೆಗೆದು ಉಲ್ಲೇಖಿಸುತ್ತಾರೆ. ಈ ಕೃತಿಗಳ ಸೂಕ್ಷ್ಮಾತಿ ಸೂಕ್ಷ್ಮ ವಿಷಯಗಳ ಪರಿಚಯವಿಲ್ಲದಿದ್ದರೂ, ಒಟ್ಟಾರೆ ಕಥಾಪ್ರಸಂಗವನ್ನು ಸ್ಥೂಲವಾಗಿ ಅರಿಯದ ಭಾರತೀಯನೇ ಇಲ್ಲವೆಂದರೆ ತಪ್ಪಿಲ್ಲ. ಇವುಗಳನ್ನು ಸವಿಸ್ತಾರವಾಗಿ ಅರಿತಿದ್ದ ತ್ಯಾಗರಾಜರು ದೇವರ ಅವತಾರಗಳನ್ನು, ಪುರಾಣ ಪ್ರಸಂಗಗಳನ್ನು ಅಲ್ಲಲ್ಲಿ ಪ್ರಸ್ತಾಪಿಸುತ್ತಾರೆ. ಅಪ್ಪಟ ವೈದಿಕ ವಂಶದಲ್ಲಿ ಜನಿಸಿದ ಅವರು ಅದ್ವೈತಭಾವ ಪ್ರತಿಪಾದಕರು. 'ಅಹಂ ಬ್ರಹ್ಮಾಸ್ಮಿ' ಎಂಬ ಅವರ ಅದ್ವೈತ ಭಾವಕ್ಕೆ ಉಪನಿಷತ್ತುಗಳೇ ಆಧಾರ.[೧] ಅವರ ಕೃತಿಗಳಲ್ಲಿ ಉಪನಿಷತ್ತು ಅಥವಾ ಶ್ರುತಿಮಂತ್ರದ ಹಲವಾರು ಉಲ್ಲೇಖಗಳು ಪ್ರತಿಧ್ವನಿಸಿವೆ.[೨] ಹೀಗಾಗಿ ಅವರ ರಚನೆಗಳನ್ನು ಒಗ್ಗೂಡಿಸಿ 'ತ್ಯಾಗೋಪನಿಷತ್' ಎಂದಿರುವುದು ಸೂಕ್ತವಾಗಿಯೇ ಇದೆ. ರಾಮಾಯಣಗಳಲ್ಲಿ ವಾಲ್ಮೀಕಿ ರಾಮಾಯಣವೇ ಅವರ ಕೇಂದ್ರಬಿಂದುವಾದರೂ ಅಧ್ಯಾತ್ಮ ರಾಮಾಯಣ, ಅದ್ಭುತ ರಾಮಾಯಣ, ಆನಂದ ರಾಮಾಯಣ, ಅಧ್ಯಾತ್ಮ ರಾಮಾಯಣಕ್ಕಿಂತ ಹಳೆಯದಾದ ಭುಸುಂಡಿ ರಾಮಾಯಣಗಳ ಪ್ರಸಂಗಗಳೂ ಅಲ್ಲಲ್ಲಿ ಪ್ರಸ್ತಾಪಿತವಾಗಿವೆ. ಅಗಸ್ತ್ಯ ಸಂಹಿತೆ, ಪದ್ಮಪುರಾಣ ಮುಂತಾದವು ಹಾಗೂ ರಾಮಭಕ್ತಿ ಸಾಹಿತ್ಯದ ಇನ್ನಿತರ ವಿಷಯಗಳೂ ಅವರ ರಚನೆಗಳಲ್ಲಿ ಅಡಕಗೊಂಡಿವೆ. ವಾಲ್ಮೀಕಿ ರಾಮಾಯಣದಂತೆ ಪುರಾಣಗಳಲ್ಲಿ ಭಾಗವತವು ತ್ಯಾಗರಾಜರಿಗೆ ಪ್ರಧಾನವಾಗಿದೆ. ಇದು ವಿಷ್ಣು ಮತ್ತು ಕೃಷ್ಣಲೀಲೆಗಳ ದೃಷ್ಟಿಯಿಂದಷ್ಟೇ ಅಲ್ಲ, ನವವಿಧ ಭಕ್ತಿಸಿದ್ಧಾಂತಗಳ ದೃಷ್ಟಿಯಿಂದಲೂ ಪ್ರಧಾನವಾದುದು. ಭಗವದ್ಗೀತೆಯ ತತ್ವದಲ್ಲಿ ಪೂರ್ಣನಂಬಿಕೆಯಿದ್ದ ಅವರು, ಇದು ವೇದಜ್ಞಾನಕ್ಕೆ ಸಮನಾದುದು ಎನ್ನುತ್ತಾರೆ. ಇವೇ ಅಲ್ಲದೆ ರಾಮಭಕ್ತಿ ಸಂಪ್ರದಾಯದ ಇನ್ನೂ ಅನೇಕ ಕಥೆಗಳೂ, ಕುಲಶೇಖರರ ಮುಕುಂದಮಾಲಾ ಸ್ತೋತ್ರಭಾಗಗಳೂ ಅವರಿಗೆ ಪ್ರೇರಣೆ ನೀಡಿವೆ. ಹೀಗಾಗಿ ಅಧಿಕ ಸಂಖ್ಯೆಯಲ್ಲಿ ರಾಮಸ್ತುತಿಗಳು ತ್ಯಾಗರಾಜರಿಂದ ಮೂಡಿಬಂದಿವೆ. ಒಬ್ಬನೇ ವಾಗ್ಗೇಯಕಾರನಿಂದ ರಚಿತವಾಗಿ ಗುಣ-ಗಾತ್ರಗಳಲ್ಲಿ (Qualitative-Quantitative) ಹಿರಿದೆಂದು ಗುರುತಿಸಲ್ಪಡಬಹುದಾದ ಸಾಹಿತ್ಯ ಸಮುಚ್ಚಯ ತ್ಯಾಗರಾಜರದೆಂದು ದಿಟವಾಗಿ ಹೇಳಬಹುದು.

ಆದಿಕವಿ ವಾಲ್ಮೀಕಿಯು ೨೪,೦೦೦ ಶ್ಲೋಕಗಳಲ್ಲಿ ರಾಮಾಯಣವನ್ನು ವಿಸ್ತರಿಸಿದಂತೆ ತ್ಯಾಗರಾಜರೂ ಅದಕ್ಕೆ ಸರಿಸಮನಾಗಿ ಅಷ್ಟೇ ಕೃತಿಗಳನ್ನು ರಚಿಸಿದಂತೆ ಹೇಳುವುದುಂಟು. ಆದರೆ ಇವೆಲ್ಲ ಕೃತಿಗಳೂ ಉಪಲಬ್ಧವಿಲ್ಲ. ಉಪಲಬ್ಧವಿರುವ ಕೃತಿಗಳಲ್ಲಿ

ಬಹುತೇಕ ರಾಮಸ್ತುತಿಗಳಾಗಿವೆ. ಶ್ರೀರಾಮನ ಮೇಲ್ಮೆಯನ್ನು ಎತ್ತಿ ಹಿಡಿಯುವಲ್ಲಿ ಇತರ ಕೃತಿಗಳೂ ಪೂರಕವಾಗಿವೆ. ಇವುಗಳಲ್ಲಿ ಪೌರಾಣಿಕವಾದ ಪ್ರಸಂಗಗಳನ್ನೂ, ಪಾತ್ರಗಳನ್ನೂ ಅವರು ಪ್ರಸ್ತಾಪಿಸಿದ್ದಾರೆ. ವಿಶದವಾಗಿ ಅಥವಾ ಸಂಗ್ರಹರೂಪದಲ್ಲಿ ಪ್ರಸ್ತಾಪಗೊಂಡ ಅಂತಹ ವಿಷಯಗಳನ್ನು ಈ ಮುಂದೆ ಪ್ರಸ್ತುತಪಡಿಸಲಾಗಿದೆ.

೧. **ವಾಲ್ಮೀಕಿ** : ತ್ಯಾಗರಾಜರಿಗೆ ಕವಿ ವಾಲ್ಮೀಕಿಯಲ್ಲಿ ವಿಶೇಷ ಗೌರವ. ಅವರು ಆತನನ್ನು ನಾಲ್ಕಾರು ಕೃತಿಗಳಲ್ಲಿ ಹೀಗೆ ಸ್ಮರಿಸಿದ್ದಾರೆ.

**ಕವಿರಾಜ** (ಎಂತನುಚು)

**ಕವೀನ ಬಿಲಜಮೌನಿ** (ಜಗದಾನಂದಕಾರಕ)

**ವಾಲ್ಮೀಕಾದಿ ಮುನುಲು ನರುಲು ನಿನು ಪೊಗಡಿನ ನಾಯಾಶದೀರುನಾ ?**
(ಏಪನಿಕೋ ಜನ್ಮಿಂಚಿತಿನನಿ ನೀವೆಂಚವಲದು)

**ಸಂಸಾರಮುನ ಬ್ರೋವದಾರಿನಿ ಪರ**
**ಹಿಂಸಚೇಯು ಕಿರಾತುಡು**
**ಹಂಸರೂಪುಲ ಗತಿನಡುಗ ರಾಮನಾಮಪ್ರ**
**ಶಂಸಚೇಸಿ ಉಪದೇಶಿಂಚ** (ಈಮೇನು)

**ನಾರದಮುನಿ ವಲ್ಮೀಕ ಜಾತುನಿಕಿ ಕೂರಿಮಿ ಉಪದೇಶಿಂಚಲೇದಾ ?**
(ಸಾರಮೇಗಾನಿ)

**ಮುನು ಪುಟ್ಟನು ಪುಟ್ಟಿನ ಮುನಿಕೃತಮುನ**
**ಮೂಡುನ್ನಾರಾಧ್ಯಾಯಮುಲ ಜೂಚುಕೋ** (ಮನಸಾ ಶ್ರೀರಾಮಚಂದ್ರುನಿ)

ಮೇಲಿನ ಸಾಲುಗಳಲ್ಲಿ ವಾಲ್ಮೀಕಿ ಸ್ಮರಣೆಯೊಂದಿಗೆ ಮತ್ತೆ ಕೆಲವು ಅಂಶಗಳು ವ್ಯಕ್ತವಾಗಿವೆ.

(ಅ) 'ವಾಲ್ಮೀಕಿ ಕವಿ ಹುತ್ತದಿಂದ ಮೂಡಿದವ' (ವಲ್ಮೀಕ ಎಂದರೆ ಹುತ್ತ).

(ಆ) ವಾಲ್ಮೀಕಿಯು ರಾಮನನ್ನು ಪ್ರಶಂಸಿಸಿದ್ದರೂ, ಅದರಿಂದ ತ್ಯಾಗರಾಜರಿಗೆ ತೃಪ್ತಿಯಿಲ್ಲ. ಅವರು ತಾವು ಜನಿಸಿರುವುದೇ ರಾಮ ಸಂಕೀರ್ತನೆಗಾಗಲ್ಲದೆ ಬೇರೆಯಲ್ಲ ಎನ್ನುತ್ತಾರೆ.

(ಇ) ವಾಲ್ಮೀಕಿಕೃತವಾದ ರಾಮಾಯಣದ ಮೂರು ಮತ್ತು ಆರನೇ ಅಧ್ಯಾಯಗಳ ಮಹತ್ವವರಿಯಬೇಕು.

(ಈ) ವಾಲ್ಮೀಕಿಯು ಪೂರ್ವದಲ್ಲಿ ಪರಹಿಂಸೆಯಲ್ಲೇ ತೊಡಗಿದ್ದವನು (ಕಿರಾತನಾಗಿದ್ದವನು). ಈತ ನಾರದರಂತಹ ಮಹಾನುಭಾವರನ್ನು ಸದ್ಗತಿಮಾರ್ಗವನ್ನು ತೋರಬೇಕೆಂದು ಪ್ರಾರ್ಥಿಸಿದನು. ಆಗ ಅವರು ಅವನಿಗೆ ಪ್ರೀತಿಯಿಂದ ರಾಮನಾಮವನ್ನು ಉಪದೇಶಿಸಿದರು.

ತ್ಯಾಗರಾಜರು ವಾಲ್ಮೀಕಿಸ್ಮರಣೆಯ ಈ ಸಂದರ್ಭದಲ್ಲಿ ವಾಲ್ಮೀಕಿ ರಾಮಾಯಣದ ಅಂಶಗಳನ್ನೇ ಅಲ್ಲದೆ ಅಧ್ಯಾತ್ಮ ರಾಮಾಯಣದಲ್ಲಿ ಕಾಣಬರುವ ಅಂಶಗಳನ್ನೂ ಪ್ರಸ್ತಾಪಿಸಿದ್ದಾರೆ. ಅಧ್ಯಾತ್ಮ ರಾಮಾಯಣದ ಬಾಲಕಾಂಡದ ಮೂರು ಮತ್ತು ಆರನೇ ಸರ್ಗಗಳು ಮಹತ್ತ್ವವಾದವು. ಏಕೆಂದರೆ ಮೂರನೇ ಸರ್ಗವು ಶ್ರೀರಾಮನ ಜನನ ಮತ್ತು ಬಾಲ್ಯವನ್ನೂ, ಆರನೇ ಸರ್ಗವು ಸೀತಾರಾಮರ ಭೇಟಿ ಹಾಗೂ ಅವರ ವಿವಾಹವನ್ನೂ ವಿಶದಪಡಿಸುತ್ತವೆ. ಅಲ್ಲದೆ ಆರನೇ ಸರ್ಗದಲ್ಲೇ ನಾರದರು ಸೀತೆ 'ಯೋಗಮಾಯೆ' ಎಂದು ತಿಳಿಸಿದ್ದರಿಂದ ಜನಕನು ಆಕೆಯನ್ನು ಲಕ್ಷ್ಮಿಯೆಂದೇ ಭಾವಿಸಿದ್ದ ಅಂಶಗಳೂ ಪ್ರಸ್ತುತಗೊಂಡಿವೆ. ರಾಮಜನನವಾಗದಿದ್ದಲ್ಲಿ, ಸೀತಾರಾಮರ ಕಲ್ಯಾಣವಾಗದಿದ್ದಲ್ಲಿ ರಾಮಾಯಣ ಕಥೆಯ ಸೃಷ್ಟಿಯೇ ಸಾಧ್ಯವಿರುತ್ತಿರಲಿಲ್ಲ ಎಂಬ ಹಿನ್ನೆಲೆಯಿಂದ ತ್ಯಾಗರಾಜರು ಹೀಗೆ ೩ ಮತ್ತು ೬ ನೇ ಅಧ್ಯಾಯಗಳಿಗೆ ಪ್ರಾಶಸ್ತ್ಯ ನೀಡಿರಬಹುದು. 'ಮೂಡುನ್ನಾರಾಧ್ಯಾಯಮು' ಎಂಬುದನ್ನು ಕಲ್ಲೂರಿ ವೀರಭದ್ರ ಶಾಸ್ತ್ರಿಗಳು ೩ x ೬ = ೧೮ ಎಂಬುದಾಗಿ ಅರ್ಥೈಸಿ ಅದು ಭಗವದ್ಗೀತೆಯನ್ನೂ ಸೂಚಿಸುತ್ತದೆ ಎನ್ನುತ್ತಾರೆ.[೩]

ಇನ್ನು ವಾಲ್ಮೀಕಿ ರಾಮಾಯಣದಲ್ಲಿ ನಾರದರು ಉಪದೇಶಿಸುವುದು ಶ್ರೀರಾಮನ ದಿವ್ಯ ಚರಿತ್ರೆಯನ್ನೇ ಹೊರತು ರಾಮನಾಮವನ್ನಲ್ಲ.[೪] ಆದರೆ ತ್ಯಾಗರಾಜರ ಪ್ರಕಾರ ನಾರದರು ವಾಲ್ಮೀಕಿಗೆ ಉಪದೇಶಿಸುವುದು ಶ್ರೀರಾಮನಾಮ. ಅಧ್ಯಾತ್ಮ ರಾಮಾಯಣದಲ್ಲಿ ವಾಲ್ಮೀಕಿಯು ರಾಮೋಪದೇಶವನ್ನು ಪಡೆಯುವನಾದರೂ ಆತನು ಆ ಉಪದೇಶವನ್ನು ಪಡೆಯುವುದು ನಾರದರಿಂದಲ್ಲ, ಸಪ್ತರ್ಷಿಗಳಿಂದ.[೫] ಒಟ್ಟಾರೆ ತ್ಯಾಗರಾಜರು ವಾಲ್ಮೀಕಿಯನ್ನು 'ಕವಿರಾಜ' ನೆಂದು ಸಂಬೋಧಿಸಿ ಗೌರವಿಸುತ್ತಾರೆ.

**೨. ರಾಮಾಯಣದ ಪ್ರಸಂಗಗಳುಳ್ಳ ಕೃತಿಗಳು** : ಬಾಲಕಾಂಡದ ಪ್ರಥಮ ಅಧ್ಯಾಯಕ್ಕೆ ಸಂಕ್ಷೇಪ ರಾಮಾಯಣವೆಂದು ಹೆಸರು. ಇಲ್ಲಿ ನಾರದರು ವಾಲ್ಮೀಕಿಗಳಿಗೆ ರಾಮನ ಇಡೀ ಚರಿತ್ರೆಯನ್ನು ಸಂಕ್ಷಿಪ್ತವಾಗಿ ಉಪದೇಶಿಸಿ ಅದನ್ನು ವಿಸ್ತರಿಸಲು ಹೇಳುತ್ತಾರೆ. ಇದೇ ರೀತಿ ಸಂಗ್ರಹ ರೂಪದಲ್ಲಿ ರಾಮಾಯಣದ ಪ್ರಮುಖ ಘಟ್ಟಗಳನ್ನು ಚಿತ್ರಿಸುವ ತ್ಯಾಗರಾಜರ ರಚನೆಗಳೆಂದರೆ,

(ಅ) **ಶ್ರೀರಘುಕುಲಮಂದು ಪುಟ್ಟಿ ನೀವು ಸೀತನು ಚೇಯಿಕೊನಿನ ರಾಮಚಂದ್ರ**

(ಆ) **ಶ್ರೀರಾಮ ಜಯರಾಮ ಶೃಂಗಾರ ರಾಮಾಯನಿ ಚಿಂತಿಂಪರಾದೇ**

(ಇ) **ವಿನಯಮುಸನು ಕೌಶಿಕುನಿ ವೆಂಟಚನಿಸಂಘಾ್ರಲನು**

(ಈ) **ನಾಥಾ ಬ್ರೋವವೇ**

ತ್ಯಾಗರಾಜರಿಗೆ ರಾಮಾಯಣದ ಪ್ರಸಂಗಗಳನ್ನು ಮತ್ತೆ ಮತ್ತೆ ಕಾಣುವ-ಹಾಡುವ ಹಂಬಲ. ಆದ್ದರಿಂದಲೇ ಅವರು, ರಚನೆಗಳಲ್ಲಿ ಇಡಿಯಾಗಿಯೂ, ಬಿಡಿಯಾಗಿಯೂ ಪ್ರಸಂಗಗಳನ್ನು ಅಳವಡಿಸಿದ್ದಾರೆ. ಹೀಗಾಗಿ ಅನಿವಾರ್ಯವಾಗಿ ಈ ಪ್ರಸಂಗಗಳು ಪುನರುಕ್ತಿಯಾಗಿವೆ. ತ್ಯಾಗರಾಜರ ಮಾತುಗಳು ರಾಮಾಯಣದ ಚಿತ್ರವನ್ನು ಶ್ರೋತೃವಿನ

ಕಣ್ಮುಂದೆ ನಿಲ್ಲಿಸುತ್ತವೆ.

(ಅ) **ಶ್ರೀರಘುಕುಲಮಂದು** : ಪರಮಭಕ್ತರ ಪಾಲನೆಯೇ ರಾಮಾವತಾರದ ಉದ್ದೇಶ. ಆತ ಉತ್ತಮವಾದ ರಘುವಂಶದಲ್ಲಿ ಹುಟ್ಟಿ ಸೀತೆಯನ್ನು ವಿವಾಹವಾಗಿ, ಮುನಿಗಳ ಕೋರಿಕೆಯನ್ನು ಈಡೇರಿಸಿ, ಪಟ್ಟಾಭಿಷಿಕ್ತನಾಗಿ ಭಕ್ತ ಪರಿಪಾಲನೆ ಮಾಡಿದ ಅಂಶಗಳು ಈ ರಚನೆಯಲ್ಲಿವೆ.

**ಶ್ರೀರಘುಕುಲಮಂದು ಪುಟ್ಟನೀವು ಸೀತನುಚೇಯಿಕೊನಿನ ರಾಮಚಂದ್ರ**
**ಆರಾಮಮಂದು ಮುನುಲ ಕೋರಿಕಲೀಡೇರಸೇಯ ಪೂನುಕೊನ್ನರಾಮ**
**ವರರತ್ನ ಪೀಠಮಂದು ಮಜ್ಜನಮು ಪುಡಮಿ ಸುರಲಚೇತ ಗೈಕೊನ್ನರಾಮ**
**ಪರಮಭಕ್ತುಲನು ಪಾಲನಮು ಸೇಯು ಸಾಕೇತವಾಸ ತ್ಯಾಗರಾಜನುತ**

(ಆ) **ಶ್ರೀರಾಮಜಯರಾಮ** : ಕೌಸಲ್ಯೆ, ದಶರಥ, ಲಕ್ಷ್ಮಣ, ಕೌಶಿಕ (ವಿಶ್ವಾಮಿತ್ರ), ಅಹಲ್ಯೆ, ಜನಕಮಹಾರಾಜ, ಜಾನಕಿ ಹಾಗೂ ಶಿವಧನುಸ್ಸುಗಳ ಸೌಭಾಗ್ಯವನ್ನು ಕೊಂಡಾಡುವ ಮೂಲಕ ರಾಮಾಯಣದ ಅಂಶಗಳನ್ನು ತ್ಯಾಗರಾಜರು ಇಲ್ಲಿ ಗುರುತಿಸಿದ್ದಾರೆ.

ಕೌಸಲ್ಯ ದಶರಥರು ಶ್ರೀರಾಮನೊಂದಿಗೆ ಪುತ್ರವಾತ್ಸಲ್ಯವನ್ನು ಅನುಭವಿಸಲು ಅವರು ಆಚರಿಸಿದ ಅದ್ಭುತ ತಪಸ್ಸು ಯಾವುದೆಂದು ತ್ಯಾಗರಾಜರು ಆಶ್ಚರ್ಯಗೊಂಡಿದ್ದಾರೆ. 'ಮಾತೃದೇವೋಭವ' ಎಂಬ ಪ್ರಾಚೀನ ಸಂಪ್ರದಾಯದಂತೆ ತ್ಯಾಗರಾಜರಿಲ್ಲಿ ಮೊದಲಿಗೆ ಕೌಸಲ್ಯೆಯನ್ನು ಹೆಸರಿಸುವುದು ಗಮನಾರ್ಹ. ಕೌಸಲ್ಯೆ ದಶರಥರು ಶ್ರೀರಾಮನನ್ನು ಮುದ್ದಿಸಿ ಮಾತನಾಡಿಸುವಲ್ಲಿನ ಇವರ ಸೌಭಾಗ್ಯವನ್ನು ತ್ಯಾಗರಾಜರು ಕೊಂಡಾಡಿದ್ದಾರೆ. ಶ್ರೀರಾಮನ ಪರಿಚಾರಿಕೆಯಲ್ಲಿರಲು ಸೌಮಿತ್ರಿ, ರಾಮ-ಲಕ್ಷ್ಮಣರಿಬ್ಬರನ್ನೂ ತನ್ನೊಂದಿಗೆ ಕರೆದೊಯ್ಯುವಲ್ಲಿ ವಿಶ್ವಾಮಿತ್ರ, ಈ ಮಾರ್ಗ ಮಧ್ಯೆ ಶ್ರೀರಾಮನ ಪಾದಸ್ಪರ್ಶ ಪಡೆದ ಅಹಲ್ಯೆ, ಧರ್ಮಾತ್ಮನ ಚರಣಸ್ಪರ್ಶವಾಗಲು ಶಿವ ಧನುಸ್ಸು, ತನ್ನ ಪ್ರೀತಿಯ ಮಗಳನ್ನು ರಾಮನಿಗೆ ಧಾರೆಯೆರೆದು ಸೀತಾರಾಮರನ್ನು ಕಣ್ಣಾರೆ ಕಾಣುವಲ್ಲಿ ಜನಕ ಮಹಾರಾಜ, ಶ್ರೀರಾಮನನ್ನು ವಿವಾಹವಾಗಲು ಜಾನಕಿ ಮಾಡಿದ ತಪಸ್ಸು ಯಾವುದೆಂದು ಅವರಿಗೆ ತಿಳಿಯದಾಗಿದೆ. ಒಟ್ಟಾರೆ, ಈ ರಚನೆಯಲ್ಲಿ ಶ್ರೀರಾಮನ ಬಾಲ್ಯ, ವಿದ್ಯಾಭ್ಯಾಸ, ಅರಣ್ಯವಾಸ, ಭಕ್ತಸಂರಕ್ಷಣೆ, ಕಲ್ಯಾಣ ಈ ಪ್ರಸಂಗಗಳ ಪ್ರಸ್ತಾಪವಿದೆ.

**ತಳುಕು ಚೆಕ್ಕುಲ ಮುದ್ದುಪೆಟ್ಟ ಕೌಸಲ್ಯ ಮುನು**
**ತಪಮೇಮಿ ಜೇಸೆನೋ ತೆಲಿಯ . . . . .**
**ದಶರಥುಡು ಶ್ರೀರಾಮ ರಾರಾಯನಿ ಪಿಲುವ ಮುನು**
**ತಪಮೇಮಿ ಜೇಸೆನೋ . . . .**
**ತನಿವಾರ ಪರಿಚರ್ಯ ಸೇಯ ಸೌಮಿತ್ರಿ ಮುನು**
**ತಪಮೇಮಿ ಚೇಸೆನೋ . . . .**

**ತನವೆಂಟ ಚನಿ ಜೂಚಿ ಯುಪ್ಪೊಂಗು ಕೌಶಿಕುಡು**
**ತಪಮೇಮಿ ಜೇಸೆನೋ . . . .**
**ತಾಪಂಬಣಗಿ ರೂಪವತಿಯೌಟಕಹಲ್ಯ**
**ತಪಮೇಮಿ ಜೇಸೆನೋ . . . .**
**ಧರ್ಮಾತ್ಮ ಚರಣಂಬು ಸೋಕ ಶಿವಚಾಪಮುನು**
**ತಪಮೇಮಿ ಜೇಸೆನೋ . . . .**
**ತನ ತನಯನೊಸಗಿ ಕನುಲಾರಗನ ಜನಕುಡು**
**ತಪಮೇಮಿ ಜೇಸೆನೋ . . . .**
**ದಹರಂಬು ಕರುಗಕರಮುನು ಬಟ್ಟ ಜಾನಕಿ**
**ತಪಮೇಮಿ ಜೇಸೆನೋ . . . .**

ಹೀಗೆ ರಾಮಜನನದಿಂದ ಸೀತಾ ಕಲ್ಯಾಣದವರೆಗಿನ ಘಟ್ಟಗಳಿಲ್ಲಿ ಅಡಕಗೊಂಡಿವೆ.

(೯) **ವಿನಯಮುನನು** : ಶ್ರೀರಾಮನ ದಿವ್ಯಾಂಗಗಳನ್ನೂ ಆಯುಧಗಳನ್ನೂ ಎಂದಿಗೆ ನೋಡುವೆನೋ ಎಂಬ ತವಕದೊಂದಿಗೆ ತ್ಯಾಗರಾಜರು ರಾಮಾಯಣದ ಘಟನೆಗಳನ್ನು ಇಲ್ಲಿ ಹೆಣೆದಿದ್ದಾರೆ.

ವಿನಯವಾಗಿ ಕೌಶಿಕನ ಹಿಂದೆ ನಡೆದ, ಅಹಲ್ಯೆಯ ಶಾಪ ವಿಮೋಚಿಸಿದ, ಶಿವಧನುಸ್ಸನ್ನು ಸ್ಪರ್ಶಿಸಿದ, ಜನಕನು ಹಾಲಿನಿಂದ ತೊಳೆದ **ಪಾದ**ಗಳನ್ನು; ಪ್ರೀತಿಯಿಂದ ಸೀತೆಗೆ ಮಾಂಗಲ್ಯ ಕಟ್ಟಿದ, ಕೋಪದಿಂದ ಪರಶುರಾಮನ **ಧನು**ರ್ಭಂಗ ಮಾಡಿದ, ಅರಣ್ಯದಲ್ಲಿ ವಿರಾಧನನ್ನು ಕೊಂದು ಮುನಿಜನರಿಗೆ ಅಭಯ ನೀಡಿದ **ಕರ**ಗಳನ್ನು; ತನ್ನಿಂದ ತಾನೇ ಕಾಕಾಸುರನನ್ನು ರಕ್ಷಿಸಿ, ಕ್ಷಣಮಾತ್ರದಲ್ಲಿ ಹಲವು ರಥಗಳನ್ನು ನುಚ್ಚುನೂರಾಗಿಸಿ, ವಾಲಿಯನ್ನು ಕೊಂದು, ಸಮುದ್ರನ ಮದವನ್ನು ಅಡಗಿಸಿದ **ಬಾಣ**ಗಳನ್ನು; ಕನಿಕರದಿಂದ ವಿಭೀಷಣನನ್ನೂ ಸಾಧುಕಪಿಗಳನ್ನೂ, ಸುಗ್ರೀವನನ್ನೂ, ಲಂಕೆಯನ್ನೂ ನೋಡಿದ ಶ್ರೀರಾಮನ **ಕಣ್ಣ**ಳು ಮತ್ತು ಅದರ **ನೋಟ**ವನ್ನು; ಶ್ರೀರಾಮನು ಪುಷ್ಪಕ ವಿಮಾನದಲ್ಲಿ ರಾರಾಜಿಸುತ್ತಾ ಬಂದು ಭರತನನ್ನು ಕೈಹಿಡಿದುದನ್ನು, ಮತ್ತು ಆನಂತರ ಪಟ್ಟಾಭಿಷಿಕ್ತನಾಗಿ ಸಿಂಹಾಸನವೇರಲು ಶ್ರೇಷ್ಠರಾಜರು ಮಾಡುವ ಅಲಂಕಾರಗಳನ್ನು ನಾನೆಂದು ನೋಡುವೆನೋ ಎಂಬ ತೀವ್ರವಾದ ತಮ್ಮ ಹಂಬಲದೊಂದಿಗೆ ಸಂಪೂರ್ಣ ರಾಮಾಯಣವನ್ನು ಚಿತ್ರಿಸಿದ್ದಾರೆ.

'ಏಕೈಕಾವಯವಂ ಧ್ಯಾಯೇ ದವ್ಯುಚ್ಛಿನ್ನೇನ ಚೇತಸಾ'[೭] ಎಂಬ ಉಕ್ತಿಯಂತೆ ಭಗವಂತನ ವಿವಿಧ ಅಂಗಗಳ ಮಹಿಮೆಯೊಂದಿಗೆ ಪುಷ್ಪಕ ವಿಮಾನದಲ್ಲಿ, ಪ್ರಯಾಣ ಮತ್ತು ಪಟ್ಟಾಭಿಷೇಕಗಳವರೆಗಿನ ರಾಮಾಯಣದ ಪ್ರಸಂಗಗಳನ್ನು ಪ್ರಸ್ತಾಪಿಸಲಾಗಿದೆ.

**ವಿನಯಮುನನು ಕೌಶಿಕುನಿ ವೆಂಟ ಚನುಸಂಘ್ರುಲನು ಜೂಚೇದೆನ್ನಟಿಕೋ-ಅಂದು**
**ವೆನುಕ ರಾತಿನಿ ನಾತಿಜೇಸಿನ ಚರಣಮುಲನು ಜೂಚೇದೆನ್ನಟಿಕೋ !**

ಘನಮ್ಮೈನ ಶಿವುನಿ ಚಾಪಮುನು ದ್ರುಂಚಿನ ಪಾದಮುನು ಜೂಚೇದೆನ್ನಟಿಕೋ
ಜನಕರಾಜು ಪಾಲಗಡಿಗಿನ ಯಾ ಕಾಳ್ಳನು ಜೂಚೇದೆನ್ನಟಿಕೋ !
ಚನುವುನ ಸೀತಕು ಬೊಟ್ಟುಕಟ್ಟಿನ ಕರಮುನು ಜೂಚೇದೆನ್ನಟಿಕೋ ಕೋಪ
ಮುನ ಭೃಗುಸುತ ಚಾಪ ಬಲಮಂದುಕೊನ್ನ ಬಾಹುನು ಜೂಚೇದೆನ್ನಟಿಕೋ !
ವನಮುನ ಚನಿ ವಿರಾಧುನಿ ಜಂಪಿನ ಚೇತುಲನು ಜೂಚೇದೆನ್ನಟಿಕೋ ಅಲ್ಲ
ಮುನಿಜನುಲನು ಗನಿ ಯಭಯಮಿಚ್ಚಿನ ಹಸ್ತಮುನು ಜೂಚೇದೆನ್ನಟಿಕೋ !
ತನಕುತಾನೇ ಕಾಕಾಸುರುನಿ ಗಾಚಿನ ಶರಮುನು ಜೂಚೇದೆನ್ನಟಿಕೋ ಕ್ಷಣ
ಮುನ ಬಹುರಥಮುಲ ಬೋಡಿಜೇಸಿನ ಯಸ್ತ್ರಮುನು ಜೂಚೇದೆನ್ನಟಿಕೋ !
ಘನ ಬಲುಡೈನವಾಲಿನಿ ಜಂಪಿನ ಬಾಣಮುನು ಜೂಚೇದೆನ್ನಟಿಕೋ ಆ
ವನನಿಧಿ ಮದಗರ್ವಮಣಚಿನ ಸಾಯಕಮುನು ಜೂಚೇದೆನ್ನಟಿಕೋ !
ಕನಿಕರಮುನು ವಿಭೀಷಣುನಿ ಜೂಚಿನ ಕನ್ನುಲನು ಜೂಚೇದೆನ್ನಟಿಕೋ ರಾವ
ಣುನಿ ಗೊಟ್ಟಿ ಪೇದಕಪುಲು ಲೇವಜೂಚು ದೃಷ್ಟಿನಿ ಜೂಚೇದೆನ್ನಟಿಕೋ !
ವನಚರಾಧಿಪುನಿ ಚಲ್ಲಗ ಜೂಚಿನ ನೇತ್ರಮುನು ಜೂಚೇದೆನ್ನಟಿಕೋ ಅನು
ದಿನಮು ಲಂಕವರ್ಧಿಲ್ಲನು ಜೂಚು ಲೋಚನಮುನು ಜೂಚೇದೆನ್ನಟಿಕೋ !
ಘನಮ್ಮೈನ ಪುಷ್ಪಕಮುನು ರಾಜಿಲ್ಲಿನ ಸೊಗಸುನು ಜೂಚೇದೆನ್ನಟಿಕೋ ಭರ
ತುನಿಗನಿ ಚೇಯಿ ಪಟ್ಟುಕೊನಿವಚ್ಚಿನ ವೇಡುಕನು ಜೂಚೇದನ್ನಟಿಕೋ
ಕನಕ ಸಿಂಹಾಸನಮುನ ನೆಲಕೊನ್ನ ಠೀವಿನಿ ಜೂಚೇದೆನ್ನಟಿಕೋ ವರ
ಮುನುಲು ರಾಜುಲುಗೂಡಿ ಸೇಯಸಲಂಕಾರಮುನು ಜೂಚೇದೆನ್ನಟಿಕೋ !

. . . . . . . . . . . . . . . . . .

. . . . . . . . . . . . . . . . . .

ಈ ಕೃತಿ ತ್ಯಾಗರಾಜರ ಅದ್ಭುತ ರಚನಾ ಕೌಶಲ್ಯಕ್ಕೆ ಮತ್ತೊಂದು ನಿದರ್ಶನ. ಏಕೆಂದರೆ 'ಕಾಲು' ಎಂಬ ಶಬ್ದಕ್ಕೆ ಅಂಘ್ರಿ, ಚರಣ, ಪಾದ ಮತ್ತು ಕಾಳ್ಳು ಎಂಬಂತೆಯೂ 'ಕೈ' ಎಂಬ ಶಬ್ದಕ್ಕೆ ಕರ, ಬಾಹು, ಚೇತುಲು ಮತ್ತು ಹಸ್ತ ಎಂಬಂತೆಯೂ, 'ಬಾಣ' ಎಂಬ ಶಬ್ದಕ್ಕೆ ಸ್ಥೂಲವಾಗಿ ಶರ, ಅಸ್ತ್ರ ಮತ್ತು ಸಾಯಕ ಎಂಬ ಪರ್ಯಾಯಗಳನ್ನು ಬಳಸುತ್ತಾರೆ. ಅಂತೆಯೇ 'ಕಣ್ಣು' ಎಂಬ ಶಬ್ದಕ್ಕೆ ಕನ್ನು, ದೃಷ್ಟಿ, ನೇತ್ರ ಮತ್ತು ಲೋಚನ ಎಂಬಂತೆಯೂ, ಸೊಗಸು, ಠೀವಿ, ವೇಡುಕ ಮತ್ತು ಅಲಂಕಾರ ಎಂಬ ಪದಗಳನ್ನೂ ಪರ್ಯಾಯವಾಗಿ ಬಳಸುತ್ತಾರೆ. ಒಂದೇ ಅರ್ಥವುಳ್ಳ ಬೇರೆಬೇರೆ ಪದಗಳಿರುವುದು ಇಲ್ಲಿನ ಸ್ವಾರಸ್ಯ.

(ಈ) **ನಾಥಾಬ್ರೋವವೇ** : ಈ ರಚನೆಯಲ್ಲಿ ರಾಮಾಯಣದ ಪೂರ್ಣ ಪ್ರಸಂಗ ಗಳಿಲ್ಲದಿದ್ದರೂ ಅರಣ್ಯಕಾಂಡದ ಕಥಾಘಟ್ಟದಿಂದಾರಂಭಿಸಿ ಪಟ್ಟಾಭಿಷೇಕದವರೆಗಿನ ರಸವತ್ತಾದ ಕೆಲವು ಪ್ರಸಂಗಗಳು ಅಡಕಗೊಂಡಿವೆ. ಭಯಾವಿಷ್ಟರಾದ ಮುನಿವೃಂದಕ್ಕೆ

ಅಭಯ ನೀಡಿದ್ದು (ಅರಣ್ಯದಲ್ಲಿ), ಅಸಂಖ್ಯಾತ ಶತ್ರುಗಳ ಸಂಹಾರ ಮಾಡಿ ಸ್ವಪುರವ ನ್ನಾಳಲು (ಅಯೋಧ್ಯೆ) ರಾಮ ಹಿಂತಿರುಗಿದುದು, ಶ್ರೀರಾಮನನ್ನು ಆಶಿಸಿ ಬಂದ ಪುರಸ್ತ್ರೀಯರನ್ನು ಮಾತೃವಾತ್ಸಲ್ಯದಿಂದ ನೋಡಿದುದು,[6] ಭರತನನ್ನು ಕಂಡು ಪ್ರೀತಿ ಯಿಂದ ಆಲಂಗಿಸಿದ ವಿಷಯಗಳಿಲ್ಲಿವೆ.

> ಭಯಮುಲುಗಲ ಮುನಿಚಯಮುಲ ಜೂಚಿ ಹೃ
> ದಯಮು ಕರಗಗ ಅಭಯಮೊಸಂಗಿನ . . . . .
> ಅಗಣಿತ ರಿಪುಲಕು ಪಗಲೊನರಿಂಚಿ ಸ್ವ
> ನಗರಮುನು ನೇಲವಚ್ಚೇ ಸೊಗಸುನು ಜೂಪು . . . .
> ಕಳಕಳಮನು ಮುಖ ಕಳಗನಿ ಪುರಭಾ
> ಮಲು ವಲಚಗನು ತಲ್ಲುಲವಲೆ ಜೂಚಿ
> ಭರತುನಿ ಮದಿ ಕರಗಗ ವಾನಿ
> ಯುರಮುನ ಜೇರ್ಚಿ ಕರಮುಲ ಜೂಪು . . . .

ಹೀಗೆ ಮೇಲಿನ ರಚನೆಗಳಲ್ಲಿ ಕಥಾ ಸಂದರ್ಭಗಳು ಕೆಲವು ಅನಿವಾರ್ಯವಾಗಿ ಪುನರುಕ್ತವಾಗಿವೆ. ರಾಮಾಯಣದ ಇನ್ನೂ ಕೆಲವು ಘಟನೆಗಳನ್ನು ಇನ್ನಿತರ ರಚನೆ ಗಳಲ್ಲಿ ಕಾಣಬಹುದು. ಅವುಗಳನ್ನು ಪ್ರಾಸಂಗಿಕವಾಗಿ ಬೇರೆಡೆಗಳಲ್ಲಿ ಪ್ರಸ್ತಾಪಿಸ ಲಾಗಿದೆ.

**೩. ಭಗವದ್ಗೀತೆ** : ಶ್ರೀಮದ್ ಭಗವದ್ಗೀತೆಯ ಭಾವಗಳು ತ್ಯಾಗರಾಜ ಸಾಹಿತ್ಯದಲ್ಲಿ ಯಥಾವತ್ತಾಗಿ ನಿರೂಪಿತವಾಗಿರುವುದನ್ನು ಕಾಣಬಹುದು. ಇದಕ್ಕೆ ಕೆಲವು ಉದಾ ಹರಣೆಗಳೆಂದರೆ

> ಸಂಭವಿಂಚಿ ಯುಗಯುಗಮುನ
> (ಯುಗಯುಗಗಳಲ್ಲೂ ಅವತರಿಸಿ)

(ವಲ್ಲಗಾದನಕ)

> ಸಂಭವಾಮಿ ಯುಗೇಯುಗೇ[7]

> ಅಲನಾಡು ಕೌರವುಲನಣಚಮನ ಅಲರಿದೋಸಮನೇ ನರುನಿ ಜೂಚಿ ಪಾಪ
> ಫಲಮು ನೀಕು ತನಕು ಲೇದನಿ ಚಕ್ಕಗ ಪಾಲನಮು ಸೇಯಲೇದಾ ?

(ಬಾಗಾಯನಯ್ಯ)

ಭಗವದ್ಗೀತೆಯ ಮೊದಲೆರಡು ಅಧ್ಯಾಯಗಳ ಸಾರವೇ ಮೇಲಿನ ಮಾತುಗಳಲ್ಲಿ ಅಡಗಿವೆ. ಯುದ್ಧವೆಂಬ ಕರ್ಮವನ್ನು ಅರ್ಜುನನು ಫಲಾಪೇಕ್ಷೆಯಿಂದಾಗಲೀ, ಅಹಂ ಕಾರದಿಂದಾಗಲೀ ಮಾಡುತ್ತಿಲ್ಲವಾದ್ದರಿಂದ **ಪಾಪಫಲ ತಟ್ಟುವುದಿಲ್ಲವೆಂಬ ಗೀತೆಯ ತತ್ವವನ್ನೇ** ತ್ಯಾಗರಾಜರ ಮೇಲಿನ ಸಾಲುಗಳು ಹೇಳಿದಂತಿದೆ. ಕೌರವರ ಹುಟ್ಟಡಗಿ

ಸುವುದು ಪಾಪಕರವೆಂದು ಅಂದು ಹೆದರಿದ ಅರ್ಜುನನಿಗೆ ಪಾಪಫಲ ತಗುಲದೆಂದು ಹೇಳಿ ಆತನನ್ನು ಕರ್ತವ್ಯಕ್ಕೆ ಪ್ರೇರೇಪಿಸಿ ಸಂರಕ್ಷಿಸಲಿಲ್ಲವೇ ಎಂದು ಹೇಳುವ ಮೂಲಕ ತ್ಯಾಗರಾಜರು ಗೀತೆಯ ಭಾವವನ್ನು ಪ್ರತಿಧ್ವನಿಸಿದ್ದಾರೆ. ಕರ್ಮಾಚರಣೆಯಲ್ಲಿ ಕಾಣ ಬರುವ ಎರಡು ದೋಷಗಳೆಂದರೆ ನಾನೊಬ್ಬನೇ ಕರ್ಮನಿಷ್ಠನೆಂಬ ಕೀಳು ಅಹಂಭಾವ ಮತ್ತು ಪ್ರಾಪಂಚಿಕ ಫಲಾಪೇಕ್ಷೆ.[೧೦]

**ಶಾಂತಮುಲೇಕ ಸೌಖ್ಯಮುಲೇದು** (ಶಾಂತಮುಲೇಕ)

ಶಾಂತಿಯಿಲ್ಲದೆ ಸೌಖ್ಯವಿಲ್ಲ ಎಂಬೀ ಮಾತು 'ಅಶಾಂತಸ್ಯ ಕುತಃ ಸುಖಮ್'[೧೧] ಎಂಬ ಗೀತೆಯ ಸಾಲನ್ನು ಹೋಲಿದೆ.

**ವಾಸುದೇವ ಸರ್ವಮನುಚು** (ಬಿಡೇಬುದ್ಧಿ)

ವಾಸುದೇವನೇ ಸರ್ವಸ್ವವೆಂಬ ಈ ಮಾತು 'ವಾಸುದೇವಸ್ಸರ್ವಮಿತಿ' ಎಂಬ ಗೀತೆಯ ಸಾಲನ್ನು ಹೋಲುತ್ತದೆ.[೧೨]

ನಿಷ್ಕಾಮಕರ್ಮಯೋಗಕ್ಕೆ ಸನ್ಯಾಸಯೋಗವೆಂದು ಹೆಸರು. ಕರ್ಮಫಲದ ಬಗ್ಗೆ ಅನಾ ಸಕ್ತನಾಗಿರುವುದೇ ಸನ್ಯಾಸಯೋಗ. ವಾಸ್ತವವಾಗಿ ಸನ್ಯಾಸಯೋಗ ಸಿದ್ಧಾಂತದಲ್ಲೇ ನಿಷ್ಕಾಮಕರ್ಮಯೋಗವು ಪೂರ್ಣಗೊಳ್ಳುವುದು. ಇಲ್ಲಿ ಯೋಗಿಯು ಕರ್ಮಫಲವನ್ನು ಅಸಡ್ಡೆಯಿಂದ ಕಾಣದೆ ಅದನ್ನು ದೇವರಿಗೆ ಹೃತ್ಪೂರ್ವಕವಾಗಿ ಸಮರ್ಪಿಸುತ್ತಾನೆ.

**ಅನುದಿನಮೊನರಿಂಚು ಸತ್ಕ್ರಿಯಲ ನೀಕನಿ ಪಲ್ಕಿನ ತ್ಯಾಗರಾಜ** (ಕನ್ನತಲ್ಲಿ)

ಈ ವಾಕ್ಯಕ್ಕೆ ಗೀತೆಯ ಹೋಲಿಕೆ ಇಂತಿದೆ.

> ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿಯತ್ ।
> ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ ॥[೧೩]

**ನನ್ನೇ ಧ್ಯಾನಮು ಸೇಯುಚು . . . . . . .**
**ಭಜಿಂಪುಡು ಪನ್ನುಗ ಮೀಪಾಲಿವೇಲ್ಪು ಫಲಮಿಚ್ಚುದಯನ್**

(ನೌಕಾಚರಿತ್ರೆಯ ಕಂದಪದ್ಯ)

ತನ್ನನ್ನೇ ಧ್ಯಾನಿಸುತ್ತಾ ಭಜಿಸಿದರೆ ನಿಮ್ಮ ಪಾಲಿನ ದೇವರು ಫಲ ನೀಡುತ್ತಾನೆಂದು ಶ್ರೀಕೃಷ್ಣ ಗೋಪಿಯರಿಗೆ ಹೇಳಿರುವ ಮೇಲಿನ ವಾಕ್ಯವು ಗೀತೆಯ

> ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ
> ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ॥[೧೪]

ಎಂಬ ಶ್ಲೋಕದ ಭಾವವೇ ಆಗಿದೆ.

**೪. ಕೆಲವು ಭಗವದವತಾರಗಳು** : ಸಾಧುಗಳ ರಕ್ಷಣೆಗಾಗಿಯೂ, ದುಷ್ಟರ ವಿನಾಶ ಕ್ಕಾಗಿಯೂ ಮತ್ತು ಧರ್ಮಸಂಸ್ಥಾಪನೆಗಾಗಿಯೂ ಪ್ರತಿಯುಗದಲ್ಲೂ ಅವತರಿಸುತ್ತೇನೆ ಎಂಬುದು ಭಗವದ್‌ವಾಕ್ಯ.[೧೫]

ಅವತಾರ ಎಂಬ ಸಂಸ್ಕೃತ ಶಬ್ದಕ್ಕೆ ಇಳಿಯುವಿಕೆ ಎಂದು ಅರ್ಥ. ಸರ್ವವ್ಯಾಪಿಯಾದ ಹರಿಗೆ ಸೃಷ್ಟಿಯಂತೆ, ಪಾಲನೆಯೂ ಆತನದೇ ಹೊಣೆ. ಹೀಗಾಗಿ ಬೇರೆಬೇರೆ ಯುಗಗಳಲ್ಲಿ ಬೇರೆಬೇರೆ ರೂಪದಲ್ಲಿ ಹರಿ ಅವತರಿಸಿದ್ದಾನೆ. ಹಾಗಾದರೆ ದೇವರ ಅವತಾರಗಳ ಒಟ್ಟು ಸಂಖ್ಯೆ ಎಷ್ಟು ಎಂದರೆ, ಇದಕ್ಕೆ ಉತ್ತರ ಲೆಕ್ಕವಿಲ್ಲದಷ್ಟು ಎಂಬುದೇ. ಅಹಿರ್ಬುಧ್ನ್ಯ ಸಂಹಿತೆ, ಭಾಗವತ ಪುರಾಣಗಳು ದೇವರ ಹಲವು ಅವತಾರಗಳನ್ನು ಹೇಳುವುದಾದರೂ ಸಾಮಾನ್ಯವಾಗಿ ಹತ್ತು ಅವತಾರಗಳನ್ನು ಮಾತ್ರ ಪ್ರಧಾನವಾಗಿ ಗಣಿಸಿರುವುದು. ಇವು ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಘುರಾಮ, ಕೃಷ್ಣ, ಬುದ್ಧ (ಬುದ್ಧನಿಗೆ ಬದಲಾಗಿ ಬಲರಾಮನನ್ನು ಸೇರಿಸಿರುವುದೂ ಉಂಟು) ಮತ್ತು ಕಲ್ಕಿ. ಈ ಹತ್ತೂ ಯುಗಾವತಾರಗಳೆಂದೇ ಹೇಳಿಕೆಯುಂಟು. ಇವಲ್ಲದೆ ಇನ್ನೂ ಕೆಲವು ಅವತಾರಗಳು ಅರ್ಚನೆಗೆ ಹೊಂದಿಕೊಂಡಿರುವುದುಂಟು.

ದೈವಾವತಾರವು ಸ್ವಇಚ್ಛೆಯಿಂದ ನಿರ್ಧಾರವಾದುದು. ಆತ ಕರ್ಮಾಧೀನನಲ್ಲ. ತನ್ನ ಅವತಾರದ ಕಾಲದಲ್ಲಿ ಆತ ಮಾಡುವ ಯಾವ ಕೆಲಸವೂ ಆತನನ್ನು ಬಂಧಿಸುವುದಿಲ್ಲ. ಆದರೆ ಸಾಮಾನ್ಯ ಜಂತುಗಳ ಹುಟ್ಟಾದರೋ ಇದಕ್ಕೆ ವಿರುದ್ಧವಾದುದು. ಸಾಮಾನ್ಯರು ಸ್ವಇಚ್ಛೆಯಿಂದ ಅಲ್ಲದಿದ್ದರೂ ಪೂರ್ವಕರ್ಮಾನುಸಾರ ಹುಟ್ಟಿ ಅದರ ಫಲಗಳನ್ನು (ಸತ್ಫಲವಾಗಲೀ ಅಥವಾ ದುಷ್ಫಲವಾಗಲೀ) ಅನುಭವಿಸುತ್ತಾರೆ.[೧೩]

ತ್ಯಾಗರಾಜರು ಅವತಾರ ಕಲ್ಪನೆಯಲ್ಲಿ ನಂಬಿಕೆಯುಳ್ಳವರು. ಅವರು ತಮ್ಮ ಕೃತಿಗಳಲ್ಲಿ, ದೇವರ ವಿವಿಧ ಅವತಾರಗಳಲ್ಲಿ ಕೆಲವನ್ನು ಪ್ರಧಾನವಾಗಿಯೂ ಮತ್ತೆ ಕೆಲವನ್ನು ಸ್ಥೂಲವಾಗಿಯೂ ಪ್ರಸ್ತಾಪಿಸಿದ್ದಾರೆ. 'ದೀನಜನಾವನ ಶ್ರೀರಾಮ' - ಎಂಬೀ ರಚನೆಯಲ್ಲಿ ತ್ಯಾಗರಾಜರು ದೇವರ ಅವತಾರಗಳನ್ನು ಹೆಸರಿಸುತ್ತಾರೆ. ಮತ್ಸ್ಯ, ಕೂರ್ಮ, ವರಾಹಾದಿ ಅವತಾರಗಳೆಲ್ಲವೂ ಶ್ರೀರಾಮನವೇ ಎಂಬ ಭಕ್ತ್ಯಾವೇಶವಿಲ್ಲಿ ಸುಂದರವಾಗಿ ಮೂಡಿಬಂದಿದೆ. ಅವರು ಪ್ರಧಾನವಾಗಿ ಸ್ತುತಿಸುವ ದೈವ ರೂಪಗಳಲ್ಲಿ ಶ್ರೀರಾಮನಲ್ಲದೆ ನೃಸಿಂಹ, ಶ್ರೀಕೃಷ್ಣಾದಿ ಅವತಾರಗಳೂ ಸೇರುತ್ತವೆ. ಉಳಿದವು ಪ್ರಾಸಂಗಿಕವಾಗಿಯಷ್ಟೆ ಉಲ್ಲೇಖಗೊಂಡಿವೆ.[೧೪] ಇಷ್ಟಲ್ಲದೆ ಗಣಪತಿ, ಸುಬ್ರಹ್ಮಣ್ಯ, ವೆಂಕಟೇಶ್ವರ ಸ್ತುತಿಗಳೂ ಕ್ಷೇತ್ರದೇವತಾ ಸ್ತುತಿಗಳೂ ಅವರ ಕೃತಿಭಂಡಾರದಲ್ಲಿ ಅಡಕವಾಗಿವೆ.

**ಶ್ರೀರಾಮಾವತಾರ** : ತ್ಯಾಗರಾಜರ ಕೃತಿಗಳ ಕೇಂದ್ರಬಿಂದು ಶ್ರೀರಾಮನೇ. ಆದ್ದರಿಂದ ಅವರು ಶ್ರೀರಾಮನ ಬಗ್ಗೆ ಹೇರಳವಾಗಿ ಉಲ್ಲೇಖಿಸುವರೆಂದು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಅವರ ಇಡೀ ಬದುಕು ಶ್ರೀರಾಮನೇ ಆಗಿದ್ದರಿಂದ, ಸಹಜವಾಗಿಯೇ ಅವರ ಕೃತಿಗಳ ಆದ್ಯಂತವೂ ಆತನೇ ವ್ಯಾಪಿಸಿದ್ದಾನೆ. ಶ್ರೀರಾಮನನ್ನು ಕುರಿತು ತಾತ್ವಿಕವಾಗಿ ತ್ಯಾಗರಾಜರು ಏನು ಹೇಳುವರೆಂಬುದನ್ನು 'ದೈವಸ್ವರೂಪ' ಎಂಬ ಅಧ್ಯಾಯದಲ್ಲಿ ವಿವರಿಸಲಾಗಿದೆ. ಇಲ್ಲಿ ಶ್ರೀರಾಮನ **ಅವತಾರದ ದೃಷ್ಟಿಯಿಂದ** ತ್ಯಾಗರಾಜರ ನಿಲುವು ಏನೆಂಬುದನ್ನು ಸಂಗ್ರಹಿಸಲು ಯತ್ನಿಸಲಾಗಿದೆ.

ತ್ಯಾಗರಾಜರಿಗೆ ರಾಮನು ಲೋಕಾಭಿರಾಮ, ಜಗದಭಿರಾಮ, ಕಲ್ಯಾಣರಾಮ, ಮೋಹನರಾಮ ; ಶ್ರೀರಾಮನ ಅವತಾರವೇ ತ್ಯಾಗರಾಜರಿಗೊಂದು ಅದ್ಭುತ ರಹಸ್ಯ. ಈ ಭುವಿಯಲ್ಲಿ ರಾಮನನ್ನು ಅವತರಿಸುವಂತೆ ಕರೆದ ಮಹಾರಾಜನಾರು? ಈ ಕರೆ ನೀಡಿದ ಮಹಾರಾಜನಿಗೆ ಪೂರ್ಣಭಕ್ತಿಯಿಂದ ಅವರು ನಮಿಸುತ್ತಾರೆ. ಯಾರಿಗಾಗಿ ಶ್ರೀರಾಮನು ಅವತರಿಸಿದನೆಂಬ ರಹಸ್ಯವು ಅವರನ್ನು ಪದೇಪದೇ ಕಾಡುತ್ತಿರುವುದ ರಿಂದ ಇದರ ಉತ್ತರಕ್ಕಾಗಿ ಶ್ರೀರಾಮನಲ್ಲೇ ಅವರು ಮೊರೆ ಹೋಗುತ್ತಾರೆ.

**ಎವರಿಕ್ಕೈ ಅವತಾರಮೆತ್ತಿತಿವೋ**
**ಇಪುಡೈನ ದೆಲ್ಪವಯ್ಯಾ**
**ಅವನಿಕಿ ರಮ್ಮನಿ ಪಿಲಚಿನ ಮಹಾರಾಜೆವ್ವಡೋ ವಾನಿಕಿ ಮ್ರೊಕ್ಕೆನು**

**(ಎವರಿಕ್ಕೈ)**

ತ್ಯಾಗರಾಜರು ರಾಮಾವತಾರದ ಹಿನ್ನೆಲೆಯ ಬಗ್ಗೆ ಕಾರಣಗಳನ್ನು ಹೀಗೆ ಊಹಿಸು ತ್ತಾರೆ. ಆತನ ಅವತಾರಕ್ಕೆ ಮುಖ್ಯ ಕಾರಣ ಯುದ್ಧವೇ? ಅಯೋಧ್ಯೆಯ ಪಾಲನೆಯೇ? ಕಾಡಿನಲ್ಲಿ ಯೋಗಿಗಳಿಗೆ ದರ್ಶನ ನೀಡುವುದಿರಬಹುದೇ? ಸಂಸಾರವೆಂಬ ರೋಗ ದಿಂದ ನರಳುತ್ತಿರುವವರನ್ನು ಸಂರಕ್ಷಿಸುವುದೇ? ಅಥವಾ ಶತರಾಗರತ್ನಮಾಲಿಕೆಯನ್ನು ರಚಿಸಿದ ತಮಗೆ ವರ ನೀಡುವುದೇ? ಎಂದರೆ ರಾಮಾವತಾರದ ಹಿನ್ನೆಲೆಯಲ್ಲಿ ಈ ಎಲ್ಲ ಉದ್ದೇಶಗಳೂ ಇವೆಯೆಂಬುದನ್ನು ಸೂಚಿಸಿದ್ದಾರೆ.

**ಏಲಾವತಾರ ಮೆತ್ತುಕೊಂಟಿವೋ**
**ಏಮಿಕಾರಣಮೋ ರಾಮುಡೈ ?**
**ಆಲಮು ಸೇಯುಟಕಾ ? ಅಯೋಧ್ಯಾ**
**ಪಾಲನ ಸೇಯುಟಕಾ ? ಓ ರಾಘವ**
**ಯೋಗುಲನು ಬ್ರೋಚುಟಕಾ ? ಭವ**
**ರೋಗುಲನು ಬ್ರೋಚುಟಕಾ ? ಶತ**
**ರಾಗ ರತ್ನ ಮಾಲಿಕನು ರಚಿಂಚಿನ**
**ತ್ಯಾಗರಾಜುನಕು ವರಮೊಸಗುಟಕಾ ?** **(ಏಲಾವತಾರ)**

ಮುಂದಿನ ಹಂತದಲ್ಲಿ ತ್ಯಾಗರಾಜರು ರಾಮಾವತಾರಕ್ಕೆ ಕಾರಣಗಳನ್ನು ಊಹಿಸುವ ಮಟ್ಟ ಮೀರುತ್ತಾರೆ. ಇದೀಗ ಆತನು ಭೂಮಂಡಲದಲ್ಲಿ ಅವತರಿಸಿರುವುದು ದುಷ್ಟ ಶಿಕ್ಷೆ-ಶಿಷ್ಟರಕ್ಷಣೆಗಾಗಿಯೇ ಎಂದು ಖಚಿತಪಡಿಸುತ್ತಾರೆ. ರಾಕ್ಷಸೀವೃತ್ತಿಯುಳ್ಳ ಮಂದಿಯ ಮದವನ್ನು ಅಡಗಿಸಿ ಸಜ್ಜನರನ್ನು ಪಾಲಿಸಲು ಕೋದಂಡಪಾಣಿಯ ರೂಪದಲ್ಲಿ ರಾಮನು ಅವತರಿಸಿದ್ದಾನೆ. ಸಜ್ಜನರಾದರೂ ಗಹನವಾದ ಭವಸಾಗರದಲ್ಲಿ ಈಜುತ್ತಾ ಅದನ್ನು ದಾಟಲಾಗದೆ ಕಷ್ಟಪಡುತ್ತಿದ್ದಾರೆ. ಶ್ರೀರಾಮ ಅವರಿಗಾಗಿ ತಾರಕ ನಾಮದಿಂದ ಇಳಿದಿದ್ದಾನೆ.

**ದಂಡಿರಕ್ಕಸುಲ ಮದಮಣಚನು ಆ**
**ಖಂಡಲಾದಿ ಸುರಕೋಟುಲನು ಭೂ**
**ಮಂಡಲ ಸುಜನುಲ ಪಾಲಿಂಪನು ಕೋ**
**ದಂಡಪಾಣಿ ರೂಪಮುತೋ . . . . .**
**ದಾರಿ ತೆಲಿಯಲೇನಿ ಅಜ್ಞುಲಕು ಭವ**
**ನೀರಧಿ ದಾಟಿ ಮೋಕ್ಷಮಂದುಟಕು**
. . . . . . . . . . . . .
**ತಾರಕನಾಮಮುತೋ . . . . . .** **(ವಾಡೇರಾದ್ಯೆವಮು)**

**ಕರ್ಮಕಾಂಡಮತಾಕೃಷ್ಟುಲೈ ಭವ**
**ಗಹನ ಚಾರುಲೈ ಗಾಸಿ ಚೆಂದಗ**
**ಕನಿ ಮಾನವಾವತಾರುಡೈ**
**ಕನಿಪಂಚಿನಾಡೆ . . . . . . .** **(ಮನವ್ಯಾಲಗಿಂಚರಾದಟೇ)**

ದೈವದ ಅವತಾರಕ್ಕೆ ಮುಖ್ಯ ಕಾರಣ ಸಾಧು ಸಂರಕ್ಷಣೆ, ದುಷ್ಟವಿನಾಶ ಎಂದರೂ, ದುಷ್ಟ ಶಿಕ್ಷಣವೆಂಬುದು ಗೌಣ ಎಂಬುದನ್ನು ಶ್ರೀ ರಾಮಾನುಜಾಚಾರ್ಯರು ಶ್ರೀಭಾಷ್ಯ ದಲ್ಲಿ ಹೇಳುತ್ತಾರೆ.[೧೮] ದೇವರು ದುಷ್ಟನಿಗೆ ನೀಡುವ ಶಿಕ್ಷೆಯೂ ಕೂಡ ಆತನ ದಯಾಶೀಲತೆಯ ಅಭಿವ್ಯಕ್ತಿಯ ಒಂದು ರೂಪ. ಏಕೆಂದರೆ ಆ ಮೂಲಕ ದುಷ್ಟನು ತನ್ನ ದುಷ್ಟತನವನ್ನು ಕಳೆದುಕೊಂಡು ಶಿಷ್ಟನಾಗಿ ಪರಿವರ್ತಿತನಾಗುತ್ತಾನೆ. ಇದಕ್ಕೆ ಕಾಕಾಸುರ, ರಾವಣಾದಿಗಳನ್ನು ಉದಹರಿಸಬಹುದು. ಹೀಗೆ ಈ ದಿಶೆಯಲ್ಲಿ ಶಿಕ್ಷೆ ಯೆಂಬುದು ಈಶ್ವರನು, ದುಷ್ಟನಿಗೆ ನೀಡುವ ಒಂದು ಸದವಕಾಶವಲ್ಲದೆ ಬೇರಲ್ಲ.

ತ್ಯಾಗರಾಜರ ಸಾಹಿತ್ಯದಂತೆ, ಶ್ರೀರಾಮನದು ಸುಂದರ ರೂಪ, ಸದ್ಗುಣಗಳ ಖನಿ ಆತ. ಸಾಮ, ದಾನ, ಭೇದ, ದಂಡ, ಚತುರ, ಮನುಜಾವತಾರದ ರಾಜ. ದಕ್ಷ ಆಡಳಿತಗಾರ, ದಯಾನಿಧಿ, ಪರಮನೀತಿವಂತ, ಅಖಿಲಾಂಡಕೋಟಿ ನಾಯಕ, ಪರ ಬ್ರಹ್ಮ ಸ್ವರೂಪ. ಈ ಕಾರಣಗಳಿಂದ ತ್ಯಾಗರಾಜರಿಗೆ ಮಾತ್ರವಲ್ಲ, ಬೃಂದಾರಕ, ಶುಕ, ಸನಕ, ಸನಂದನ, ಶ್ರೀನಾರದ, ಬ್ರಹ್ಮ, ಶಿವ, ಇಂದ್ರಾದಿಗಳಿಗೂ ಶ್ರೀರಾಮನೇ ಗತಿ. ಆತನಲ್ಲದೆ ಬೇರಾರೂ ದಿಕ್ಕಿಲ್ಲ.

**ವೇರೆವ್ವರೇ ಗತಿ ? ವೇಮಾರುಲಕು ಸೀತಾಪತಿ**
**ಈರೇಡು ಲೋಕಮುಲಕಾಧಾರುಡವಗು ನಿನುವಿನಾ**
**ಬೃಂದಾರಕಾದಿ ಮುನಿಬೃಂದ ಶುಕಸನಕ ಸ**
**ನಂದನ ಶ್ರೀ ನಾರದಾರವಿಂದೋದ್ಭವಭವ ಪು**
**ರಂದರುಲಕು ಶ್ರೀ ತ್ಯಾಗರಾಜುನಿಕಿ ನಿನು ವಿನಾ**

**(ವೇರೆವ್ವರೇ ಗತಿ)**

ಇವೆಲ್ಲಕ್ಕಿಂತ ಮಿಗಿಲಾದ ಮತ್ತೊಂದು ವೈಶಿಷ್ಟ್ಯವೆಂದರೆ ಶ್ರೀರಾಮನು ಮುನಿವೇಷ ಧಾರಿಯಾಗಿದ್ದು, ಅನಂತರ ರಾಜವೇಷಧಾರಿಯಾದುದು. ಅದಕ್ಕೆಂದೇ ತ್ಯಾಗರಾಜರು 'ಮುನಿರಾಜ ವೇಷಿಯ್ಯೆ' ಎನ್ನುತ್ತಾರೆ. ಸಾಮಾನ್ಯವಾಗಿ ರಾಜರು ಮೊದಲಿಗೆ ರಾಜ್ಯ ಪರಿಪಾಲನೆಯ ತಮ್ಮ ಕರ್ತವ್ಯವನ್ನು ನೆರವೇರಿಸಿ ಅನಂತರ ಋಷಿಗಳಾಗುವುದು ಪುರಾಣಗಳಲ್ಲಿ ಕಾಣಬರುವ ಅಂಶ. ಆದರೆ ರಾಮಾವತಾರದಲ್ಲಿ ಇದಕ್ಕೆ ವಿರುದ್ಧವಾಗಿ ರಾಮನು ಮೊದಲು ಕಾಷಾಯವಸ್ತ್ರಧಾರಿಯಾಗಿ ಅರಣ್ಯದಲ್ಲಿದ್ದು ಅನಂತರ ಅಯೋಧ್ಯೆಗೆ ಹಿಂತಿರುಗಿ ರಾಜನಾಗಿ ಮೆರೆದಿದ್ದಾನೆ.

ಇನ್ನು ತ್ರಿಮೂರ್ತಿಗಳಿಗಿಂತ ಮೇಲಾದುದು ಶ್ರೀರಾಮನ ಅವತಾರ. ಈ ಮಾತನ್ನು ತ್ಯಾಗರಾಜರು ಪದೇಪದೇ ನುಡಿಯುತ್ತಾ ಒಂದು ಪ್ರಸಂಗದ ಮೂಲಕ ಇದನ್ನು ಚಮತ್ಕಾರವಾಗಿ ಮನದಟ್ಟು ಮಾಡುತ್ತಾರೆ. ಒಮ್ಮೆ ತ್ರಿಮೂರ್ತಿಗಳು ಒಂದುಗೂಡಿ ತಮ್ಮೆಲ್ಲ ಗುಣಗಳನ್ನೂ ಒಗ್ಗೂಡಿಸಿ, ಶ್ರೀರಾಮನ ಗುಣಗಳನ್ನೇ ಪ್ರತ್ಯೇಕವಾಗಿರಿಸಿ ತಕ್ಕಡಿಯಲ್ಲಿ ತೂಗಿದರಂತೆ. ಆದರೆ ತಕ್ಕಡಿಯ ಎರಡು ತಟ್ಟೆಗಳೂ ಸರಿನಿಲ್ಲಲಾರದೆ, ಶ್ರೀರಾಮನ ಗುಣಗಳಿದ್ದ ತಟ್ಟೆಯೇ ಅಧಿಕ ತೂಕವಾಯಿತಂತೆ. ಇಂತಹ ಸದ್ಗುಣಗಳ ನಿಧಿ ಶ್ರೀರಾಮನೆಂದು ಅರಿತು ತ್ರಿಮೂರ್ತಿಗಳೂ ಸೇರಿ ಆತನನ್ನು ಸ್ತುತಿಸಿದರಂತೆ.

. . . . ರಘುರಾಮುನಿ ಗುಣಮುಲು
ರೂಢಿಗ ತಮಗುಣಮುಲ ನಟುವ್ರಾಸಿ
ತ್ರಾಸುನನಿಡಿ ಸರಿನಿಲ್ವಲೇದನಿ
ತ್ಯಾಗರಾಜನುತುಡೆವಡೋ ! ಅನುಚುನು ।
ಮುಮ್ಮೂರ್ರುಲು ಗುಮಿಗೂಡಿ ಪೊಗಡೆ ಮುಚ್ಚಟ . . . .

(ಮುಮ್ಮೂರ್ರುಲು)

ತ್ರಿಮೂರ್ತಿಗಳಷ್ಟೆ ಅಲ್ಲ, ಮನುಜಾವತಾರನಾದ ಶ್ರೀರಾಮನ ಮಹಿಮೆಯನ್ನು ಕೇಳಿ ಸುರ, ಕಿನ್ನರ, ಕಿಂಪುರುಷ ವಿದ್ಯಾಧರರೂ, ಸೂರ್ಯಚಂದ್ರರೂ ಇತರ ದೇವತೆಗಳೂ ಪ್ರೀತಿಯಿಂದ ಧರೆಗಿಳಿದು ಬಂದು ಮೃಗ, ಪಕ್ಷಿ, ವಾನರ ರೂಪಗಳೆತ್ತಿ ಗಿರಿನಿವಾಸನಾದ ಸೀತಾವರನನ್ನು ಸೇವಿಸುತ್ತಾ ಮೈ ಮರೆತಿದ್ದಾರೆ.

ಧರ ಮನುಜಾವತಾರ ! ಮಹಿಮವಿನಿ
ಸುರಕಿನ್ನರ ಕಿಂಪುರುಷ ವಿದ್ಯಾಧರ
ಸುರಪತಿ ವಿಧಿ ವಿಭಾಕರ ಚಂದ್ರಾದುಲು
ಕರಗುಚು ಪ್ರೇಮತೋ !
ವರ ಮೃಗ ಪಕ್ಷಿ ವಾನರ ತನುವುಲಚೇ'
ಗಿರಿನಿ ವೆಲಯು ಸೀತಾವರ ಚಿರಕಾಲಮು
ಗುರಿ ತಪ್ಪಕ ಮೈ ಮರಚಿ ಸೇವಿಂಚಿರಿ . . . . (ಮೋಹನರಾಮ)

ಶ್ರೀರಾಮನು ಪಂಚಭೂತಗಳಿಗೆ ಒಡೆಯನೆಂದು ಸೂಚಿಸುವಲ್ಲಿ ರಾಮನ ಹಿರಿಮೆಯೂ ತ್ಯಾಗರಾಜರ ಕೌಶಲವೂ ಎದ್ದು ಕಾಣುತ್ತದೆ. ರಾಮ ಭೂಸುತೆಯಾದ ಸೀತೆಯ ಕರಹಿಡಿದು ಭೂಮಿಯಲ್ಲಿ ಬೆಳಗುವ ಮೂಲಕ **ಪೃಥ್ವಿಗೆ** ಒಡೆಯ. ಜಲರಾಶಿಯ ಮೇಲೆ ಯೋಗನಿದ್ರೆಯಲ್ಲಿರುವುದರಿಂದ '**ಅಪ್**'ನ ಒಡೆಯ. ರವಿವಂಶದಲ್ಲಿ ಹುಟ್ಟಿ ಆ ವಂಶವನ್ನೇ ಉದ್ಧರಿಸಿರುವುದರಿಂದ **ತೇಜಸ್ಸಿನ** ಒಡೆಯ. ವಾಯುಪುತ್ರನಾದ ಹನುಮಂತನೇ ದಾಸನಾಗಿರುವುದರಿಂದ **ವಾಯುವಿನ** ಒಡೆಯ. ಇನ್ನು ಅಂತರಿಕ್ಷ ಕೇಶಿಯಾದ (ವ್ಯೋಮಕೇಶಿ) ಶಿವನಿಂದಲೇ ಸ್ತುತಿಸಲ್ಪಟ್ಟವನಾದ್ದರಿಂದ **ಆಕಾಶದ** ಒಡೆಯ.

> **ಪಂಚಭೂತಮುಲಕು ನಾಥುಡಂಚು . . . . . .**
> **ಭೂಸುತಾ ಕರಮುನು ಬಟ್ಟಿ ಭೂಮಿ ವೆಲಯುವಾಡು ನೀವು ।**
> **ನೀರಧಿಪೈ ಬಾಗ ಯೋಗನಿದ್ರ ಸೇಯುವಾಡು ನೀವು ।**
> **ಕಮಲಬಂಧು ಕುಲಜ ವರುಲ ಗಡತೇರ್ಚಿನವಾಡು ನೀವು ।**
> **ಪವಮಾನ ಕುಮಾರುಂಡು ಬಂಟೈನ ವಾಡು ನೀವು ।**
> **ಅಂತರಿಕ್ಷ ಕೇಶನುತಾನಂತ . . . .** (ಸರ್ವಲೋಕ ದಯಾನಿಧೇ)

ಈ ಕಾರಣಗಳಿಂದ ತ್ಯಾಗರಾಜರು ತ್ರಿಮೂರ್ತಿಗಳಿಗಿಂತ ಮೇಲಾದ ಶ್ರೀರಾಮಾವತಾರವು ಹರಿಯ ಹತ್ತು ಅವತಾರಗಳಲ್ಲಿ ಮಿಗಿಲಾದುದೆಂದು ಸಾರುತ್ತಾರೆ.

> **ಮುಗ್ಗುರಿಲೋ ಮೇಲೈನ** (ಸಿಗ್ಗುಮಾಲಿ)
> **ವಿಧಿ ರುದ್ರುಲಕು ಮೇಲ್ಮಿಯಗುರೂಪ** (ಎವರಿಕೈ)
> **ಪದಿವೇಸಮುಲಲೋ ರಾಮವೇಸಮೇ ಬಹುಬಾಗ**
> (ಮದಿಲೋನಯೋಚನ)

ತ್ಯಾಗರಾಜರಿಗೆ ರಾಮನು ಅತಿಶಯನಾದಂತೆಯೇ ಆತನ ಅಸ್ತ್ರಗಳು, ಅಂಗಗಳು, ಮಾತು, ನಡಿಗೆ, ಆಳ್ವಿಕೆ ಎಲ್ಲವೂ ಮೆಚ್ಚುಗೆಯೇ. ಅವರು ಇವುಗಳನ್ನು ಹಾಡುವಾಗ ಆಶ್ಚರ್ಯವನ್ನೂ, ಆನಂದವನ್ನೂ ಅನುಭವಿಸಿದ್ದಾರೆ. ಕಾಂತಿಯುತವಾದ ಕಪೋಲಯುಗಗಳಿಂದ ಕೂಡಿದ ಮುಖ, ಅಧರ, ತಿಳಿಗಣ್ಣು, ಕಿರುನಗೆ, ವಕ್ಷಸ್ಥಳ, ಅಭಯಕರಗಳು, ಇಂದ್ರಾರ್ಚಿತವಾದ ಪಾದಗಳು, ಮುಂಗುರುಳಿನ ಸೌಂದರ್ಯವು 'ಸೊಗಸುಜೂಡತರಮಾ' ರಚನೆಯಲ್ಲಿ ಪ್ರಸ್ತಾಪ ಗೊಂಡರೆ, ಶ್ರೀರಾಮನ ಗಜಗಂಭೀರ ನಡಿಗೆ, ಠೀವಿ, ತಿಲಕ, ಕಂಠಾಭರಣಗಳ ಬಗೆಗೆ 'ಮೇರುಸಮಾನ' ರಚನೆಯಲ್ಲಿ ಪ್ರಸ್ತಾಪವಾಗಿವೆ. ರಾಮನ ಮುಂಗುರುಳಿನ ವಿಷಯ ತ್ಯಾಗರಾಜರಿಗೆ ಬಲು ಮೆಚ್ಚಿಕೆಯದು. ಶ್ರೀರಾಮ ಮಾರೀಚನ ಮದವಡಗಿಸುವಾಗ, ಶಿವಧನುಸ್ಸನ್ನು ಮುರಿಯುವಾಗ ಮುಂಗುರುಳು ಅಲ್ಲಾಡಿ, ಶ್ರೀರಾಮನ ಪೂರ್ಣಮುಖದ ದರ್ಶನ ವಿಶ್ವಾಮಿತ್ರರಿಗೆ ಉಂಟಾಯಿತು. ಇದನ್ನು ತ್ಯಾಗರಾಜರು ತಾವು ಸ್ಮರಿಸಿಕೊಂಡು ಅನುಭವಿಸಿ ನೀಡುವ ಚಿತ್ರಣ ಬಲು

ಮನೋಜ್ಞವಾಗಿದೆ (ಅಲಕಲಲ್ಲಾಡಗ ಕನಿ).

ರಾಮ ಬಾಣದ ಶೌರ್ಯವನ್ನಂತೂ ಅವರು ಹೀಗೆ ನೆನೆದಿದ್ದಾರೆ. ಶ್ರೀರಾಮನ ಬಾಣ ಬಹಳ ಶಕ್ತಿಯುತವಾದುದು. ಇದು ಕಾಮುಕನಾದ ರಾವಣನ ಮೂಲಬಲವನ್ನು ನಾಶ ಮಾಡಿದೆ. ಜ್ಯಾ ಶಬ್ದಮಾತ್ರದಿಂದಲೇ ಮೂರ್ಛಿತನಾಗಿದ್ದ ಲಕ್ಷ್ಮಣನನ್ನು ಎಚ್ಚರಿಸಿದೆ (ರಾಮಬಾಣತ್ರಾಣ ಶೌರ್ಯ). ಕಾಕಾಸುರನು ಶರಣಾದಾಗ ಅವನನ್ನು ರಕ್ಷಿಸಿದೆ (ರಾಮ ಲೋಭಮೇಲ) ಚಮರೀ ಮೃಗದ ಮಾನಪ್ರಾಣಗಳನ್ನು ಕಾಪಾಡಿದೆ (ವಾಚಾಮ ಗೋಚರಮೇ). ಸಾಧಾರಣವಾಗಿ ವೀರರು ಪ್ರಯೋಗಿಸಿದ ಬಾಣಗಳು ಶತ್ರುಸಂಹಾರ ಮಾಡುವುದು ಸಹಜವೇ. ಆದರೆ ರಾಮಬಾಣದ ವಿಶೇಷತೆಯೆಂದರೆ ಅದು ಶತ್ರು ಸಂಹಾರ ಮಾಡಿದರೂ, ಅವರಿಗೆ ಉತ್ತಮ ಗತಿ ಅಥವಾ ರಕ್ಷಣೆಯನ್ನೂ ನೀಡುವ ಅಮಿತಶಕ್ತಿ ಹೊಂದಿದೆ ಎಂಬ ಕಾರಣದಿಂದಲೇ ತ್ಯಾಗರಾಜರು ರಾಮಬಾಣದ ಶಕ್ತಿ ಯನ್ನು ಏನೆಂದು ಹೊಗಳಲಿ ಎಂದು ಹಾಡುತ್ತಾರೆ.

**ರಾಮಬಾಣ ತ್ರಾಣ ಶೌರ್ಯಮೇಮನಿ ಪೊಗಡುದುರಾ** (ರಾಮಬಾಣ)

**ನರಸಿಂಹ** : ತ್ಯಾಗರಾಜರು ನೂರಾರು ಕೃತಿಗಳಲ್ಲಿ ತಮ್ಮ ಇಷ್ಟದೈವ ಶ್ರೀರಾಮನನ್ನೇ ಸ್ತುತಿಸುತ್ತಾರೆ. ರಾಮನ ಹಿರಿಮೆಯನ್ನು ಕೊಂಡಾಡುತ್ತಾರೆ. ಆದರೂ ಹರಿಯ ಇನ್ನಿತರ ಅವತಾರಗಳನ್ನೂ ಪ್ರಾಸಂಗಿಕವಾಗಿ ಅವರು ಪ್ರಸ್ತಾಪಿಸದೆ ಇಲ್ಲ. ಕ್ಷೇತ್ರಯಾತ್ರೆಯ ಸಂದರ್ಭದಲ್ಲಿ ಅವರು ಅಲ್ಲಿನ ದೇವತಾಮೂರ್ತಿಗಳನ್ನು ಕೀರ್ತಿಸಿದರೂ ಈ ದೇವತೆ ಗಳಿಗೂ ಶ್ರೀರಾಮನಿಗೂ ಸಂಬಂಧ ಕಲ್ಪಿಸಿರುವುದುಂಟು. ಉದಾಹರಣೆಗೆ 'ಶ್ರೀರಘು ವೀರ ಭಾಗಿನೇಯಾಪ್ತ' ಎಂದರೆ ಶ್ರೀರಾಮನ ಸೋದರಳಿಯನೆಂದು ಅರ್ಥ (ವರಶಿಖಿ ವಾಹನ). ಮತ್ತೆ ಕೆಲವೆಡೆ ರಾಮನ ಗುಣಲಕ್ಷಣಗಳನ್ನೇ ಇತರ ದೇವತೆಗಳಿಗೂ ಅನ್ವಯಿಸಿ ಸ್ತುತಿಸುವ ಮೂಲಕ ದೈವಭೇದ ದೋಷ ನಿವಾರಿಸಿಕೊಂಡಿದ್ದಾರೆ.

ಪ್ರಸ್ತುತ ವಿಷ್ಣುವಿನ ಅವತಾರಗಳಲ್ಲಿ ಒಂದಾದ ನೃಸಿಂಹನನ್ನು ಅವರು ಪ್ರತ್ಯೇಕ ವಾದ ಎರಡು ಕೃತಿಗಳ ಮೂಲಕ ಸ್ತುತಿಸಿದ್ದಾರೆ. ಈ ಕೃತಿಗಳನ್ನು ಈಗಾಗಲೇ ಕ್ಷೇತ್ರಕೃತಿಗಳು ಮತ್ತು ಸಮುದಾಯ ಕೃತಿಗಳು ಎಂಬ ಅಧ್ಯಾಯದಲ್ಲಿ ಪ್ರಸ್ತಾಪಿಸ ಲಾಗಿದೆ.

**ಶ್ರೀಕೃಷ್ಣ** : ದೇವರು ಕೃಷ್ಣಾವತಾರದಲ್ಲಿ ಮಾಡಿದ ಕೆಲಸಗಳು ನೂರಾರು. ಆದರೆ ತ್ಯಾಗರಾಜರು ಇವೆಲ್ಲವನ್ನು ಪ್ರಸ್ತಾಪಿಸುವುದಿಲ್ಲ. ಆತನ ಜನನ, ಬಾಲ್ಯ, ಭಕ್ತ ರಕ್ಷಣೆಯ ಕಾರ್ಯ, ಅರ್ಜುನನಿಗೆ ನೀಡಿದ ಗೀತೋಪದೇಶದ ಕೆಲವು ಘಟ್ಟಗಳನ್ನು ಮಾತ್ರ ಪ್ರಸ್ತಾಪಿಸುತ್ತಾರೆ. ಇವುಗಳಲ್ಲೂ ಕೆಲವು ಸ್ಥೂಲವಾಗಿಯಷ್ಟೇ ನಿರೂಪಣೆ ಗೊಂಡಿವೆ. ಕೃಷ್ಣನಲ್ಲಿ ಗೋಪಿಯರ ಪೂರ್ಣ ಶರಣಾಗತಿಯನ್ನೂ, ಅವರನ್ನು ರಕ್ಷಿಸಿದ ಅಂಶವನ್ನೂ ಒಳಗೊಂಡಂತೆ ನೌಕಾಚರಿತ್ರೆ ಎಂಬ ಪ್ರತ್ಯೇಕವಾದ ಸಂಗೀತ ನಾಟಕ ವನ್ನೇ ರಚಿಸಿರುವುದನ್ನು ಕಾಣುತ್ತೇವೆ. ಅದನ್ನು ಈಗಾಗಲೇ ಪ್ರತ್ಯೇಕವಾಗಿ ಅಧ್ಯಯನ

ಮಾಡಲಾಗಿದೆ.

ತ್ಯಾಗರಾಜರ ಸಾಹಿತ್ಯ ಭಂಡಾರದಲ್ಲಿ ಕೃಷ್ಣಸ್ತುತಿಗಳಾಗಿ ಕೆಲವು ರಚನೆಗಳು ಮಾತ್ರ ಲಭ್ಯವಾಗಿವೆ. ಉದಾಹರಣೆಗೆ 'ಪ್ರಾಣನಾಥ ಬಿರಾನ ಬ್ರೋವವೇ', 'ವೇಣುಗಾನ ಲೋಲುನಿಗನ' ಮುಂತಾದವು. ಇದಲ್ಲದೆ ಇತರ ಕೆಲವು ರಚನೆಗಳಲ್ಲಿ ಮಧ್ಯೆಮಧ್ಯೆ ಕೃಷ್ಣನ ಪ್ರಸ್ತಾಪವಿರುವುದುಂಟು. ಉದಾಹರಣೆಗೆ 'ಸೀತಾನಾಯಕ' ಎಂದು ಆರಂಭ ವಾಗುವ ರಾಮಸ್ತುತಿಯಲ್ಲಿ ಬಲಿ ಮತ್ತು ಕುಚೇಲನ ಪ್ರಸಂಗಗಳೂ, 'ಬ್ರೋವ ಭಾರಮಾ' ಎಂದು ಆರಂಭವಾಗುವ ರಚನೆಯಲ್ಲಿ ಗೋವರ್ಧನೋದ್ಧರಣ ಪ್ರಸಂಗವೂ ಕಾಣಬರುತ್ತದೆ.

**ಕಾಚಿನ ಭಕ್ತುಲ ಜೂಚಿ ಯಾಬಲಿನೇ**
**ಯಾಚಿಂಚ ವೆಡಲಿತಿವೋ !**
**ಜಾಲಿತೋವಚ್ಚು ಕುಚೇಲುನಿಗನಿ**
**ಗೋಪೀ ಚೇಲಮುಲೆತ್ತಿತಿವೋ !** (ಸೀತಾನಾಯಕ)

**ಗೋಪಿಕಲಕ್ಕೆ ಕೊಂಡಲೆತ್ತಲೇದಾ** (ಬ್ರೋವಭಾರಮಾ)

ತ್ಯಾಗರಾಜರಲ್ಲಿ ಕಾಣಬರುವ ಇನ್ನು ಕೆಲವು ಕೃಷ್ಣ ಸಂಬಂಧ ಪ್ರಸ್ತಾಪಗಳೆಂದರೆ :

**ಸುತುನಿ ವೇಡುಕಜೂಡ ದೇವಕಿಯಡುಗ ಯಶೋದ ಜೂಡನಾಯೆ**
(ಅಡಿಗಿಸುಖಮು)

(ಬಾಲಲೀಲೆಗಳನ್ನು ನೋಡಲು ದೇವಕಿ ಅಪೇಕ್ಷಿಸಿದರೆ ಅದು ಯಶೋದೆಗೆ ಲಭ್ಯ ವಾಯಿತು)

**ಕಲಿಕಿ ರೋಟಗಟ್ಟುನಾ** (ಅಪ್ಪರಾಮಭಕ್ತಿ)

**ರೋಟಿಕಿ ಕಟ್ಟದಗಿನ ನೀ ಲೀಲಲು** (ತಲಚಿನಂತನೇ)

**ಉಲೂಖಲ ಬದ್ಧ** (ಕಡತೇರರಾದಾ)

ಒರಳಿಗೆ ಕಟ್ಟಲ್ಪಟ್ಟ ಕೃಷ್ಣನ ಪ್ರಸ್ತಾಪವಿಲ್ಲಿದೆ.

**ಅಲನಾಡು ಕೌರವುಲನಣಚಮನ**
**ಅಲರಿದೋಸಮನೇ ನರುನಿಜೂಚಿ ಪಾಪ**
**ಫಲಮು ನೀಕು ತನಕು ಲೇದನಿ**

(ಅರ್ಜುನನಿಗೆ ನೀಡಿದ ನಿಷ್ಕಾಮ ಕರ್ಮಯೋಗ ಉಪದೇಶದ ಪ್ರಸ್ತಾಪವಿಲ್ಲಿದೆ)
(ಬಾಗಾಯನಯ್ಯ)

ಕೃಷ್ಣನು ತಾನೇ ಬೋಧಿಸಿದ ಮಾತುಗಳು ಸುಳ್ಳೆನಿಸುವಂತೆ ನಡೆದುಕೊಂಡ ರೀತಿ 'ಸಾಧಿಂಚೆನೆ' ಕೃತಿಯಲ್ಲಿ ಅಡಗಿದೆ. ಒಟ್ಟಾರೆ ತ್ಯಾಗರಾಜರು ತಮ್ಮ ಕೃಷ್ಣ ಸ್ತುತಿಗಳಲ್ಲಿ ವೇಣುಗಾನದಿಂದ ೧೬,೦೦೦ ಗೋಪಿಯರನ್ನು[೧೯] ಆಕರ್ಷಿಸಿ, ಸಂರಕ್ಷಿಸಿದ, ಬೃಂದಾವನ

ಲೋಲನಾದ (ಬೃಂದಾವನಲೋಲ), ಹಾಲ್ಬೆಣ್ಣೆಗಳನ್ನು ಗೆಳೆಯರಿಗೂ ಉಣಬಡಿಸಿದ ಕಥಾಘಟ್ಟಗಳನ್ನು(ಪ್ರಾಣನಾಥಬಿರಾನ) ಪ್ರಸ್ತಾಪಿಸುವ ಮೂಲಕ ಕೃಷ್ಣನನ್ನು ಹಾಡುತ್ತಾರೆ. ಭಾಗವತದ ದಶಮಸ್ಕಂದದಲ್ಲಿ ಕೃಷ್ಣಾವತಾರವಾಗುತ್ತದೆಂಬುದನ್ನು ನಾವಿಲ್ಲಿ ನೆನೆಸಬಹುದು.

**೫. ಶಿವ** : ತಾತ್ವಿಕ ಹಂತ (Philosophicallevel), ಮತಧಾರ್ಮಿಕ ಹಂತ (Religious level)ಗಳೆಂಬ ಎರಡು ಹಂತಗಳಲ್ಲೂ ತ್ಯಾಗರಾಜರಲ್ಲಿ ಸಮನ್ವಯವನ್ನು ನಾವು ಕಾಣಬಹುದು. ತಾತ್ವಿಕ ಹಂತದಲ್ಲಿ ಅವರು ದೇವರನ್ನು ಸಗುಣ-ನಿರ್ಗುಣ ಎರಡು ರೀತಿಯಲ್ಲೂ ವಿವರಿಸುವುದನ್ನು ನಾವು ಈಗಾಗಲೇ ಕಂಡಿದ್ದೇವೆ.[೧೯] ಮತಧಾರ್ಮಿಕ ಹಂತದಲ್ಲಿ ರಾಮ ಮತ್ತು ಇತರ ವೈಷ್ಣವ ದೇವತೆಗಳಲ್ಲದೆ ಶೈವ ದೇವತೆಗಳನ್ನೂ ಅಷ್ಟೇ ತೀವ್ರ ಭಕ್ತಿಯಿಂದ ಅವರು ಸ್ತುತಿಸಿದ್ದಾರೆ. ಹೀಗಾಗಿ ಅವರು ವೈಷ್ಣವರಷ್ಟೇ ಅಲ್ಲ, ಶೈವರೂ, ಶಾಕ್ತರೂ, ಗಾಣಪತ್ಯರೂ ಹೌದು. ಶಿವ, ವಿಷ್ಣು, ಶಕ್ತಿ, ಗಣಪತಿ, ಸುಬ್ರಹ್ಮಣ್ಯ—ಈ ಎಲ್ಲ ದೇವತೆಗಳನ್ನೂ ಅವರು ಒಂದೇ ರೀತಿಯಾಗಿ ಪ್ರಾರ್ಥಿಸುತ್ತಾರೆ.* ಈ ದೃಷ್ಟಿಯಿಂದ ಅವರನ್ನು ನಾವು ಆದಿಶಂಕರರ ಕಟ್ಟಾ ಅನುಯಾಯಿಗಳೆಂದರೆ ತಪ್ಪಿಲ್ಲ. ಆದಿಶಂಕರರಲ್ಲೂ ಈ ಎರಡೂ ರೀತಿಯ ಸಮನ್ವಯತೆಯನ್ನು ನಾವು ಕಾಣಬಹುದು.

ಆದರೆ ತ್ಯಾಗರಾಜರ ಕೃತಿಗಳನ್ನು ವಿಷ್ಣುಸ್ತುತಿ, ಶಿವಸ್ತುತಿಗಳೆಂದು ವಿಭಾಗಿಸಿದರೆ, ವಿಷ್ಣುಪರ ಕೃತಿಗಳ ಸಂಖ್ಯೆಯೇ ಅಧಿಕ, ಶಿವಸ್ತುತಿಗಳು ಕಡಿಮೆ. ಇವುಗಳಲ್ಲಿ 'ನಾದತನುಮನಿಶಂ' ನಂತಹ ಬಿಡಿಕೃತಿಗಳೂ, ಕೋವೂರು ಪಂಚರತ್ನದಂತಹ ಕೃತಿಗುಚ್ಛಗಳೂ ಸೇರಿವೆ. ಅಲ್ಲದೆ ಶಿವಸ್ತುತಿಯೆಂದೇ ಆರಂಭಿಸಿ, ಶಿವನಲ್ಲೂ ರಾಮನನ್ನೇ ಕಾಣುತ್ತಾ, ಇಬ್ಬರಿಗೂ ಒಂದೇ ರೀತಿಯ ವಿಶೇಷಣಗಳನ್ನು ಅನ್ವಯಿಸಿರುವುದೂ ಉಂಟು.

ಒಟ್ಟಾರೆ ಹೇಳಬೇಕೆಂದರೆ ತ್ಯಾಗರಾಜರು ನೀಡುವ ಶಿವನ ಚಿತ್ರಣ ಹೀಗಿದೆ. ಈತ ಒಂದೆಡೆ ಸೂರ್ಯ, ಚಂದ್ರ, ಅಗ್ನಿಗಳನ್ನೇ ಕಣ್ಣುಗಳಾಗಿ ಹೊಂದಿದ್ದರೆ, ಇನ್ನೊಂದೆಡೆ ಅಂಬೋರುಹನಯನನಾಗಿದ್ದಾನೆ. ಗಿರಿಜಾರಮಣನೂ, ನೀಲಕಂಠನೂ, ದರಹಾಸವದನನೂ, ಪ್ರೇಮಾವತಾರನೂ ಆದ ಈತ ಪಾಪನಿವಾರಕ, ಚಂದ್ರಕಳಾಧರ, ನಾರದಗಾನ ಪ್ರಿಯ. ಆನಂದ ಸ್ವರೂಪಿಯಾದ ಶಿವನಲ್ಲಿ ತ್ಯಾಗರಾಜರು ಭಕ್ತಿಯನ್ನು ಅನುಗ್ರಹಿಸುವಂತೆಯೂ, ಪರಾಮರ್ಶಿಸಿ ತಮ್ಮನ್ನು ಮನ್ನಿಸುವಂತೆಯೂ ಪ್ರಾರ್ಥಿಸುತ್ತಾರೆ.

---

* ಇಂದು ಬಳಕೆಯಲ್ಲಿರುವ ಶಿವಕೀರ್ತನೆಗಳು ತ್ಯಾಗರಾಜರ ರಚನೆಗಳೇ ಅಲ್ಲ ಎಂಬ ಅಭಿಪ್ರಾಯವೊಂದು ಕಾಣಬರುತ್ತದೆ (ನೋಡಿ, ಶ್ರೀ ತ್ಯಾಗರಾಜಸ್ವಾಮಿ ಕೀರ್ತನಲು, ಕೆ. ವಿ. ಶ್ರೀನಿವಾಸ ಅಯ್ಯಂಗಾರ್ ಪುಸ್ತಕದ ಪೀಠಿಕೆ, ಪು.೬-೭). ಆದರೆ ಈ ಹೇಳಿಕೆ ಸಮಂಜಸವಲ್ಲ ಎಂಬುದನ್ನು ಪ್ರಬಂಧದ ಇದೇ ಅಧ್ಯಾಯದಲ್ಲೇ ಸಮರ್ಥಿಸಲಾಗಿದೆ.

**ತವಪಾದಭಕ್ತಿಂ ದೇಹಿ ದೀನಬಂಧೋ !** (ದೇವಾದಿದೇವ ಸದಾಶಿವ)

**ಪರಾಮರ್ಶಿಂಚಿ ನೀವು ನನ್ನು ಮನ್ನಿಂಪವಲೆನು** (ದರ್ಶನಮುಸೇಯ)

ಮೇರುಪರ್ವತವನ್ನೇ ಧನುಸ್ಸಾಗಿ ಹೊಂದಿದ ಈಶ್ವರನು ಮತಭೇದ ಮಾಡುವ ಪತಿತರ ಮದವನ್ನು ನಾಶಗೊಳಿಸುವವನು. ಭವಭಯಬಾಧೆಯ ನಿವಾರಣೆಗಾಗಿ ಶಿವ ಸ್ಮರಣೆ ಮಾಡಬೇಕೆಂಬುದು ತ್ಯಾಗರಾಜರ ಹಿತನುಡಿ. ಆದರೆ ಅವರು ಹೇಳುವ ಶಿವನಾಮ ಸಂಕೀರ್ತನೆ ಸ್ಮರಣಪೂರ್ವಕವಾಗಿರಬೇಕು. ಶಿವನನ್ನು ಬಿಲ್ವಪತ್ರೆಯಿಂದ ತಿ ನೇಮವಾಗಿ ಪೂಜಿಸಬೇಕು (ಬಿಲ್ವಪತ್ರೆಯು ಶಿವನಿಗೆ ಅತಿ ಪ್ರಿಯವೆಂಬ ಪ್ರತೀತಿ ಯುಂಟು). ಶಿವನು ತ್ರಿಲೋಕಗಳಿಗೂ ಒಡೆಯನೆಂದು ವೇದೋಕ್ತವಾಗಿ ಈತನನ್ನು ಸ್ತುತಿಸಬೇಕು.

**ಶಿವಶಿವಶಿವ ಎನರಾದ ಓರಿ ಭವಭಯ ಬಾಧಲನಣಚುಕೊರಾದಾ ?**
**ಅತಿನೇಮಮುತೋ ಬಿಲ್ವಾರ್ಚನಜೇಸಿ . . . . . .**

**ತನ ಹೃಜ್ಜಲಜಮುನನು ಪೂಜಿಂಚಿ**
**ಆಗಮಮುಲ ನುತಿಯಿಂಚಿ** (ಶಿವಶಿವಶಿವ ಎನರಾದಾ)

ಆದರೆ ಶಿವನನ್ನೂ, ಶಿವಕ್ಷೇತ್ರವನ್ನೂ ದರ್ಶಿಸುವುದು ಆಟದ ಮಾತೇನಲ್ಲ. ಹೀಗೆಂದೇ ತ್ಯಾಗರಾಜರು, ಹಾಟಕ ಸಮನಾದ ಈಶ್ವರನ ಅದ್ಭುತಾಕೃತಿಯನ್ನು ಹೃನ್ನಾ ಳೀಕದಲ್ಲಿರಿಸಿಕೊಂಡು ಮತ್ತೆಮತ್ತೆ ದರ್ಶಿಸುತ್ತಾ, ಮೈಮರೆಯುವುದು ಹುಡುಗಾ ಟಿಕೆಯೇ ಎನ್ನುತ್ತಾರೆ.

**ಹಾಟಕ ಸಮಂಬೈನ ಅದ್ಭುತಾಕೃತಿನಿ ನೇ**
**ನಾಟ ಜೇಸಿಕೊನಿ ಹೃನ್ನಾಳೀಕಮುನನು**
**ಮಾಟಿ ಮಾಟಿಕಿಜೂಚಿ ಮೈ ಮರಚಿಯುಂಡೇದಿ**
**ಆಟಲಾ ?** (ದರ್ಶನಮುಸೇಯ)

ಪುರಾಣಗಳಲ್ಲಿ ಶಿವನಿಗೇ ನಿರ್ದಿಷ್ಟವಾದ ಕೆಲವು ಲಕ್ಷಣಗಳನ್ನು ಹೇಳಿದ್ದರೂ 'ಶಂಭೋ ಶಿವಶಂಕರಾ' ಎಂದು ಆರಂಭವಾಗುವ ರಚನೆಯೊಂದರಲ್ಲಿ ತ್ಯಾಗರಾಜರು ತಮ್ಮ ಇಷ್ಟದೇವತೆ ಶ್ರೀರಾಮನಿಗೆ ಅನ್ವಯಿಸಿರುವ ವಿಶೇಷಣಗಳನ್ನು ಶಿವನಿಗೂ ಬಳಸಿರುವುದು ಗಮನಾರ್ಹ. ಇದು ಶಿವ-ರಾಮರಲ್ಲಿನ ಅಭೇದವನ್ನು ತೋರುವ ಇನ್ನೊಂದು ನಿದರ್ಶನ. ಈ ಕೃತಿಯಲ್ಲಿ ಈಶ್ವರನು ಗಜಚರ್ಮಾಂಬರಧಾರಿಯಾಗಲೀ, ಭಸ್ಮಧೂಳಿತ ಸರ್ವಾಂಗನಾಗಲೀ ಅಲ್ಲ–ಈತನಿಲ್ಲಿ ಸುಮಲಂಕೃತ ಕಮಲ, ವಿಮಲಾಂಗ, ಹಿತಕರ, ಕಮನೀಯ. ಇವೆಲ್ಲವೂ ಈಶ್ವರನ ಸುಲಕ್ಷಣ ರೂಪವೇ ಆಗಿದೆ.

ತ್ಯಾಗರಾಜಾಂಕಿತ ಶಿವಪರ ಸ್ತುತಿಗಳಲ್ಲಿ ಕೆಲವೆಂದರೆ, ತಿರುವೈಯಾರಿನ ಪಂಚ ನದೀಶ, ಕೋವೂರಿನ ಸುಂದರೇಶ, ತಿರುವಾರೂರಿನ ತ್ಯಾಗೇಶ, ಶ್ರೀ ತಪಸ್ತೀರ್ಥಪುರದ

ಪರಮೇಶ್ವರನೇನ್ನು* ಕುರಿತ ರಚನೆಗಳು. ಇವಲ್ಲದೆ ಬಿಡಿಕೃತಿಗಳ ಮಾದರಿಯ ಶಿವ ಸ್ತುತಿಗಳೂ ಇವರ ಕೃತಿಭಂಡಾರದಲ್ಲಿ ಇವೆ. ತ್ಯಾಗರಾಜಾಂಕಿತ ಶಿವಪರ ಸ್ತುತಿಗಳಲ್ಲಿ ಕೆಲವೆಂದರೆ :

೧ ದೇವಾದಿ ದೇವ ಸದಾಶಿವ
೨ ನಾದ ತನುಮನಿಶಂ
೩ ಶಂಭೋ ಶಿವಶಂಕರಾ
೪ ಶಂಭೋ ಮಹಾದೇವ
೫ ದರ್ಶನಮು ಸೇಯ ನಾತರಮಾ
೬ ಶಿವಶಿವಶಿವ ಎನರಾದಾ
೭ ಸದಾ ಭಜಿಂಪವೇ ಸದಾಶಿವುನಿ
೮ ಸದಾಮದಿನಿ ದಲತುಗದರಾ
೯ ಇಲಲೋ ಪ್ರಣತಾರ್ಥಿಹರುಡನುಚು
೧೦ ಈಶಪಾಹಿಮಾಂ
೧೧ ಏಹಿ ತ್ರಿಜಗದೀಶ
೧೨ ಸುಂದರೇಶ್ವರುನಿ ಜೂಚಿ
೧೩ ಕೋರಿ ಸೇವಿಂಪರಾರೆ
೧೪ ಈ ವಸುದಾ ನೀವಂಟಿ ದೈವಮು

ತ್ಯಾಗರಾಜರು ಈ ಶಿವಸ್ತುತಿಗಳಲ್ಲಿ ಅಂಧಕಾಸುರನನ್ನು ಸಂಹರಿಸಿದ (ಸದಾ ಮದಿನಿ), ಮಾರ್ಕಂಡೇಯನನ್ನು ಸಂರಕ್ಷಿಸಿದ (ಸದಾ ಭಜಿಂಪವೇ), ಹಾಗೂ ಅಗಸ್ತ್ಯ ನಿಂದ ಸ್ತುತಿಸಲ್ಪಟ್ಟ (ಏಹಿ ತ್ರಿಜಗದೀಶ) ಕೆಲವು ಪ್ರಸಂಗಗಳನ್ನು ಅಳವಡಿಸಿದ್ದಾರೆ.

**೬. ಹರಿಹರರ ಅಭೇದ** : ತಿರುಪತಿ ಕ್ಷೇತ್ರದ ದೇವರನ್ನು ಸ್ಮರಿಸುತ್ತಾ 'ಪೇಯ್ ಆಳ್ವಾರರು' ಹೀಗೆನ್ನುತ್ತಾರೆ. 'ಈ ಪವಿತ್ರವಾದ ಬೆಟ್ಟದ ಮೇಲೆ ಈ ಎರಡು ರೂಪ ಗಳೂ (ವಿಷ್ಣು ಮತ್ತು ಶಿವ) ಒಂದಾಗಿವೆ. ಪರ್ವತ ಸರಣಿಗಳಿಂದ ಸುತ್ತುವರಿಯ ಲ್ಪಟ್ಟಿರುವ ವಿಷ್ಣುವು (ಮಾಲ್) ಸರ್ಪದಿಂದ ಸುತ್ತುವರಿಯಲ್ಪಟ್ಟು, ಜಟಾಮಕುಟ ಗಳಿಂದಲೂ, ಹೊಳೆಯುವ ಗಂಡುಗೊಡಲಿಯಿಂದಲೂ, ಚಕ್ರದಿಂದಲೂ ಕಂಗೊಳಿಸು ತ್ತಾನೆ.' ಇದೇ ರೀತಿ 'ಪೊಯ್‌ಗೆಯ್ ಆಳ್ವಾರರು' ಇವರಿಬ್ಬರೂ ತಂತಮ್ಮ ಅಂಗ ಗಳನ್ನು ಬದಲಿಸಿಕೊಳ್ಳುತ್ತಾರೆ, ಸದಾ ಒಬ್ಬನು ಮತ್ತೊಬ್ಬನ ಅಂಗಗಳಲ್ಲಿ ಇರುತ್ತಾನೆ, ಎನ್ನುತ್ತಾರೆ.[೨೦] ವಾಸ್ತವವಾಗಿ ಶಿವಪೂಜೆಯು ವಿಷ್ಣು ಪೂಜೆಯಲ್ಲದೆ ಬೇರಲ್ಲ ಎನ್ನುವ ಪಾಶುರಗಳಿಗೆ ಆಳ್ವಾರರಲ್ಲಿ ಕೊರತೆಯಿಲ್ಲ. ನಮ್ಮಾಳ್ವಾರರು 'ತಿರುವಾಯ್‌ಮೊಳಿ' ಯಲ್ಲಿ ಹೀಗೆನ್ನುತ್ತಾರೆ. 'ಮಾಯಾಮಯನೂ, ಮೋಕ್ಷಾನಂದಕ್ಕೆಂದು ಎಲ್ಲ ಲೋಕ

* ಕೋವೂರು ಪಂಚರತ್ನದಂತಹ ಕೃತಿಗುಚ್ಛವನ್ನು ಏಳನೇ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿದೆ.

ಗಳನ್ನೂ ಸೃಷ್ಟಿಸಿದವನೂ, ಜಗತ್ತು ಕೊಂಡಾಡುತ್ತಿರಲು ಸುಂದರ ತುಲಸಿಯನ್ನು ಧರಿಸಿದವನೂ ಆದ ನನ್ನ ದೇವರನ್ನು ಹೊಳೆಯುವ ಮುತ್ತಿನ ವರ್ಣದವನೆಂದು ಹೇಳಲೇ ? ಅಪೂರ್ವನೆಂದು ಕೊಂಡಾಡಲ್ಪಡುವ ಜಟೆಯನ್ನೂ, ಶೀತಲನಾದ ಅರ್ಧ ಚಂದ್ರನನ್ನೂ ಧರಿಸಿದವನೆಂದು ಹೇಳಲೇ ? ಅಥವಾ ಚತುರ್ಮುಖದವನೆಂದು ಹೇಳಲೇ ?'[೨೧]

ಇದೇ ರೀತಿ ತ್ಯಾಗರಾಜರು ದೇವರನ್ನು ಶಿವ, ಮಾಧವ, ಬ್ರಹ್ಮ ಅಥವಾ ಪರಬ್ರಹ್ಮರಲ್ಲಿ ಯಾರೆಂದು ನಿರ್ಣಯಿಸಲೆನ್ನುತ್ತಾರೆ. ಶಿವಸ್ತುತಿಯಲ್ಲಿ ರಾಮನನ್ನು, ಕೃಷ್ಣಸ್ತುತಿಯಲ್ಲಿ ವೆಂಕಟೇಶ್ವರನನ್ನು ಸಂಬೋಧಿಸುವಲ್ಲಿ ಅವರಿಗೆ ಪ್ರಾಚೀನ ಭಕ್ತಿಸಾಹಿತ್ಯಗಳೂ ಪ್ರಭಾವ ಬೀರಿರುವುದೆಂಬುದು ಖಚಿತಗೊಳ್ಳುತ್ತದೆ.

ತ್ಯಾಗರಾಜರ ಸಾಹಿತ್ಯದಲ್ಲಿ ಹರಿಹರರ ಅಭೇದವನ್ನು ಹೀಗೆ ಗುರುತಿಸಬಹುದು. 'ಶಶಿವದನ ಭಕ್ತಜನಾವನ' ಕೃತಿಯಲ್ಲಿ 'ಶಂಕರ ನೇ ತಾಳಗಲನಾ ಪಸಿತನಮಂದೇ ಮುನಿಯಾಗಮುನ ನೀ ಬಾಹು ಪರಾಕ್ರಮಮುನು' ಎನ್ನುವಾಗ ಮೊದಲಲ್ಲಿ ಶಂಕರನೆಂದು ಸಂಬೋಧಿಸುತ್ತಾರೆ. ಅನಂತರ ಬಾಲ್ಯದಲ್ಲೇ ಮುನಿಯ ಯಾಗಸಂರಕ್ಷಣೆ ಮಾಡಿದವನನ್ನು ಸ್ಮರಿಸುತ್ತಾರೆ. ವಾಸ್ತವವಾಗಿ ಬಾಲ್ಯದಲ್ಲೇ ಮುನಿಯ ಯಾಗರಕ್ಷಣೆ ಮಾಡಿದಾತ ಶ್ರೀರಾಮ. ಶಂಕರ ಎಂಬ ಸಂಬೋಧನೆ ಹರನದು. ಒಂದರ್ಥದಲ್ಲಿ ರಾಮನೂ ಶಂಕರನೇ ಹೌದು. ಶಂ ಎಂದರೆ ಮಂಗಳ ಅಥವಾ ಸುಖ, ಕರ ಎಂದರೆ ಉಂಟುಮಾಡುವವನು. ಯಾರು ಮಂಗಳಪ್ರದನೋ ಆತನೇ ಶಂಕರ. ವಿಷ್ಣು ಸಹಸ್ರನಾಮದ ೧೭-೧೮ನೇ ಶ್ಲೋಕಗಳಲ್ಲಿ ವಿಷ್ಣುವನ್ನು ಶಿವ, ಈಶ್ವರ, ಶಂಭು ಎಂದೆಲ್ಲ ಸಂಬೋಧಿಸಿರುವುದು ಈ ಸಂದರ್ಭದಲ್ಲಿ ಉಲ್ಲೇಖಾರ್ಹ. ವಾಸ್ತವವಾಗಿ ನಾರಾಯಣ ಅಷ್ಟಾಕ್ಷರೀ ಮತ್ತು ಶಿವ ಪಂಚಾಕ್ಷರೀ ಮಂತ್ರಗಳ ಸಾರವೇ ರಾಮನಾಮ. ಇದನ್ನು ತ್ಯಾಗರಾಜರೂ 'ಎವರನಿ' ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.* ಹೀಗೆ ರಾಮನಾಮವು ಶೈವ-ವೈಷ್ಣವ ಸಮನ್ವಯದ ಪ್ರತೀಕವಾಗಿದೆ. ಆದ್ದರಿಂದಲೇ ತ್ಯಾಗರಾಜರು ಹರಿ-ಹರರಲ್ಲಿ ಭೇದ ಕಾಣುವುದಿಲ್ಲ.

> **ದೇವರಾಮರಾಮ ಮಹಾದೇವ ರಾಘವ**
> **ಭಾವಚಾರಿರೂಪ . . . . . . . .**
> **. . . . . . . . . ಕರಧೃತಶರ** (ದೇವರಾಮರಾಮ)

ಇಲ್ಲಿ ಮತ್ತೆ ರಾಮನ ಗುಣರೂಪಗಳನ್ನು ಶಂಕರನಿಗೂ, ಶಂಕರನ ಗುಣರೂಪಗಳನ್ನು ರಾಮನಿಗೂ ಅನ್ವಯಿಸುತ್ತಾರೆ. ಶಿವರಾಮರಿಬ್ಬರೂ ಆಕಾರದಲ್ಲಿ ಬೇರೆಯಾದರೂ ಅಂತರ್ಯದಲ್ಲಿ ಒಂದೇ ಆಗಿದ್ದಾರೆ. ಇಲ್ಲಿ ಮತ್ತೊಂದು ಮಾತು. ತ್ಯಾಗರಾಜರದು ಸ್ಮಾರ್ತ ಸಂಪ್ರದಾಯ. ಆದ್ದರಿಂದ ಅವರು ಹರಿಹರರಲ್ಲಿ ಅಭೇದವನ್ನು ಎತ್ತಿ

---

* ಈ ಬಗ್ಗೆ ನವವಿಧ ಭಕ್ತಿ ಎಂಬ ಅಧ್ಯಾಯದಲ್ಲಿ ವಿವರವಾಗಿ ಪ್ರಸ್ತಾಪಿಸಲಾಗಿದೆ.

ಹಿಡಿಯುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಪ್ರಸಿದ್ಧ ಶ್ಲೋಕವೊಂದನ್ನು ನಾವಿಲ್ಲಿ ನೆನೆಯಬಹುದು.

ಶಿವಶ್ಚ ಹೃದಯಗಂ ವಿಷ್ಣೋ ವಿಷ್ಣೋಶ್ಚ ಹೃದಯಗಂ ಶಿವಃ ।
ಯಥಾ ಶಿವಮಯೋ ವಿಷ್ಣುಃ ಏವಂ ವಿಷ್ಣುರ್ಮಯಃ ಶಿವಃ ।
ಯಥಾಂತರ ನಪಶ್ಯಾಮಿ ತಥಾಮೇ ಸ್ವಸ್ತಿರಾಯುಷೀ ॥

ಹರಿಹರರನ್ನು ಪೂಜಿಸಿದ ಅವರ ಸಮಾಧಿಯಲ್ಲಿನ ಲಿಂಗಕ್ಕೆ ಇಂದಿಗೂ ರುದ್ರ-ಪುರುಷಸೂಕ್ತಗಳ ಮೂಲಕ ಅಭಿಷೇಕ ನಡೆಯುವುದು ಗಮನಾರ್ಹ.

**೭. ರಾಮತಾರಕ ಮಂತ್ರೋಪದೇಶ** : ತ್ಯಾಗರಾಜರು ಒಮ್ಮೆ ಶಿವ-ರಾಮರು ಬೇರೆಯಲ್ಲವೆಂದೂ, ಇನ್ನೊಮ್ಮೆ ತ್ರಿಮೂರ್ತಿಗಳಲ್ಲಿ ಶ್ರೀರಾಮನೇ ಮೇಲಾದವನೆಂದೂ, ಮತ್ತೊಮ್ಮೆ ರಾಮನೊಂದಿಗೆ ಇತರ ದೇವತೆಗಳನ್ನು ಸಂಬಂಧ ಕಲ್ಪಿಸಿ ಹೇಳುವುದನ್ನೂ ಈಗಾಗಲೇ ವಿಶದಪಡಿಸಲಾಗಿದೆ. ಇಷ್ಟಲ್ಲದೆ ಅವರು ಶಿವನಿಂದ ಶ್ರೀರಾಮನ ನಾಮವು ಕಾಶೀಕ್ಷೇತ್ರದಲ್ಲಿ ತಮ್ಮ ಜೀವಿತದ ಅಂತ್ಯಕ್ಷಣಗಳನ್ನು ಕಳೆಯುವವರ ಕಿವಿಯಲ್ಲಿ ಉಸುರಲ್ಪಡುವುದೆಂಬುದನ್ನು ಸ್ಪಷ್ಟವಾಗಿ ನುಡಿಯುತ್ತಾರೆ. ಇದಕ್ಕೆ ಅಧ್ಯಾತ್ಮ ರಾಮಾಯಣದ ಆಧಾರವುಂಟು.[೨೨] ಅಲ್ಲದೆ ಕೆಳಕಂಡ ಮಂತ್ರವನ್ನು ಶಿವನು ಪಾರ್ವತಿಗೆ ಉಪದೇಶಿಸಿದಂತೆ ಪ್ರತೀತಿಯುಂಟು.

ಶ್ರೀರಾಮ ರಾಮ ರಾಮೇತಿ ರಮೇ ರಾಮೇ ಮನೋರಮೇ ।
ಸಹಸ್ರನಾಮ ತತ್ತುಲ್ಯಂ ರಾಮನಾಮ ವರಾನನೇ ॥

ಇನ್ನೂ ಕೆಲವು ರಚನೆಗಳಲ್ಲಿ ತ್ಯಾಗರಾಜರು, ಶಿವನು ರಾಮನಾಮ ಉಪದೇಶಿಸಿದುದನ್ನು(ಕಾಶೀಕ್ಷೇತ್ರದಲ್ಲೇ ಅಲ್ಲದೆ) ಪ್ರಸ್ತಾಪಿಸಿದ್ದಾರೆ. ಅವುಗಳಲ್ಲಿ ಒಂದೆರಡನ್ನು ಮಾತ್ರ ಈ ಕೆಳಗೆ ಉದಾಹರಿಸಿದೆ.

**ವೀನುಲಂದು ಕಾಶೀಪತಿ ನೀ ನಾಮಮು ಬಲ್ಕಡಾ ?** (ನಿತ್ಯರೂಪ)

ಜ್ಞಾನಬೋಧಕವಾದ ರಾಮತಾರಕವನ್ನು ಕ್ಷೇತ್ರಾಧಿಪತಿಯೇ ಉಪದೇಶಿಸುವನೆಂಬುದಿಲ್ಲಿ ಗಮನಾರ್ಹ.

**ಕಲಿಯುಗ ಮನುಜುಲಕು ನೀ ತಾರಕಮು ನಿಟಲನೇತ್ರುನಿ ಚೇತನು**
**ವೀನುಲು ಬಲ್ಕನುಗಾ ಜೇಸಿನ** (ರಾಮಾ ರಘುಕುಲ ಜಲನಿಧಿಸೋಮ)

ಹೀಗೆ ಉಪದೇಶಿಸುವ ಮುನ್ನ ಶಿವನು ನೇಮದಿಂದ ಸ್ವತಃ ರಾಮಾಮೃತ ಪಾನ ಮಾಡಿ, ರಾಮನಾಮವನ್ನು ತಪ್ಪದೆ ಜಪಿಸಿ ಅನಂತರ ರಾಮತಾರಕದ ರಹಸ್ಯ ಮತ್ತು ಮಹಿಮೆಗಳನ್ನು ಪ್ರೀತಿಯಿಂದ ತನ್ನ ಸತಿಯಾದ ಗೌರಿಗೆ ಉಪದೇಶಿಸಿದ ಅಂಶವನ್ನು ತ್ಯಾಗರಾಜರು ಹೀಗೆ ಬಣ್ಣಿಸುತ್ತಾರೆ.

**ಶಿವುಡತಿ ನೇಮಮುತೋ ನಾಮಾಮೃತಪಾನಮು**
**ಏಮರಕನು ಜೇಸಿ ರಾಮರಾಮ ರಾಮಯನುಚು**

**ಸತತಮು ಶ್ರೀಮದಾದಿ ಗೌರಿಕಿ ಶೃಂಗಾರಿಕಿ**
**ಯಾ ಮಹಿಮಲನಾ ರಹಸ್ಯಮುಲ ಅತಿ ಪ್ರೇಮನು ಉಪದೇಶಿಂಚಲೇದಾ ?**
**(ಸಾರಮೇಗಾನಿ)**

ಈ ಹಿನ್ನೆಲೆಯಲ್ಲಿ ನೈತಿಕಾಂಶವೊಂದುಂಟು. ಉಪದೇಶ ನೀಡುವ ಮೊದಲು ಒಬ್ಬನು ಸ್ವತಃ ತಿಳಿದವನಾಗಿರಬೇಕು. ಮತ್ತು ಉಪದೇಶವೆಂಬುದು ಪ್ರೀತಿಪೂರ್ವಕ ವಾಗಿರಬೇಕು. ಪ್ರೀತಿಪೂರ್ವಕ ಬೋಧನೆ ಮಾತ್ರ ಪರಿಣಾಮಕಾರಿ ಎಂಬ ಮನೋ ವೈಜ್ಞಾನಿಕ ಅಂಶವೂ ಇಲ್ಲಿ ಕಾಣಬರುತ್ತದೆ. ಇದೇ ರಚನೆಯಲ್ಲೇ ನಾರದಮುನಿ ವಾಲ್ಮೀಕಿಗೆ ಮತ್ತು ಶುಕನು ಪರೀಕ್ಷಿತನಿಗೆ ಪ್ರೀತಿ ಪರವಶತೆಗಳಿಂದ ಉಪದೇಶಿಸಿದಂತೆ ತ್ಯಾಗರಾಜರು ಉಲ್ಲೇಖಿಸುತ್ತಾರೆ. ಮಂತ್ರೋಪದೇಶ ಪಡೆಯುವಲ್ಲಿ ಅಥವಾ ಬೋಧಿ ಸುವಲ್ಲಿ ಒಬ್ಬನ ಜಾತಿ ಮುಖ್ಯವಲ್ಲ, ಶ್ರದ್ಧೆಯೇ ಮುಖ್ಯ ಎಂಬುದು ವಾಲ್ಮೀಕಿಯ ಪ್ರಸ್ತಾಪದಿಂದಲೂ ವಿದಿತವಾಗುತ್ತದೆ.

ವಾಸ್ತವವಾಗಿ ಶಿವಕ್ಷೇತ್ರವಾದ ಕಾಶಿಯು ಬ್ರಾಹ್ಮಣ, ಉಪನಿಷತ್, ಮಹಾಕಾವ್ಯ ಹಾಗೂ ಪುರಾಣಗಳಲ್ಲಿ ಮತ್ತೆಮತ್ತೆ ಉಲ್ಲೇಖಗೊಂಡಿದೆ. ಶಂಕರರು ಕಾಶೀ ಪಂಚಕ ವೆಂಬ ಸ್ತೋತ್ರವೊಂದನ್ನೇ ರಚಿಸಿದ್ದಾರೆ. ಶಂಕರನು ಶಾಶ್ವತವಾಗಿ ನೆಲೆಸಲು ಈ ಕ್ಷೇತ್ರವನ್ನು ಆಯ್ದುಕೊಂಡಂತೆ ಪ್ರತೀತಿಯುಂಟು. ಕಾಶೀಕ್ಷೇತ್ರಕ್ಕೆ ವಾರಣಾಸಿ, ಮಹಾ ಸ್ಮಶಾನ, ಅವಿಮುಕ್ತಕ್ಷೇತ್ರ ಮುಂತಾದ ಹೆಸರುಗಳೂ ಇವೆ. ಇಲ್ಲಿ ಜ್ಞಾನಬೋಧೆಯಾಗಿ ನಿರ್ವಾಣಕ್ಕೆ ದಾರಿ ತೋರುವುದೆಂಬ ಕಾರಣದಿಂದ ಇದನ್ನು ಕಾಶಿಯೆಂದೂ, ಪಾಪ ಲೇಪವಿಲ್ಲದಂತೆ ಮಾಡುವ ಹಾಗೂ ಶಿವನು ಸ್ಥಿರವಾಗಿ ನೆಲೆಸಿರುವ ಕಾರಣ ಅವಿಮುಕ್ತ ಕ್ಷೇತ್ರವೆಂದೂ ಹೇಳುವುದುಂಟು.[೨೩]

**ಆ. ಗಣಪತಿ** : ತ್ಯಾಗರಾಜಾಂಕಿತದಲ್ಲಿ ಉಪಲಬ್ಧವಿರುವ ಗಣಪತಿ ಸ್ತುತಿಗಳು ಬೆರಳೆಣಿಕೆಯಷ್ಟು ಮಾತ್ರ. ಇವು :

೧ ಶ್ರೀಗಣಪತಿನಿ ಸೇವಿಂಪರಾರೆ
೨ ಗಿರಿರಾಜಸುತಾ ತನಯ
೩ ಅಭೀಷ್ಟವರದ
೪ ಶ್ರೀ ಗಣನಾಥಂ ಭಜಾಮ್ಯಹಂ

ಇದರಲ್ಲೂ ಮೊದಲಿನ ರಚನೆ 'ಪ್ರಹ್ಲಾದ ಭಕ್ತಿ ವಿಜಯ'ವೆಂಬ ಗೀತನಾಟಕ ದಲ್ಲಿನದು. ಎರಡನೆಯ ಕೃತಿಯಲ್ಲಿ ಅವರು ತಮ್ಮ ಪೂರ್ವಜರ ವಿಷಯವನ್ನು ಸ್ಮರಿಸಿದ್ದಾರೆನ್ನುವುದುಂಟು. ಆದರೆ ಫಣಿರಾಜ ಕಂಕಣ, ವಿಘ್ನನಿವಾರಣ, ಇಭರಾಜ ಮುಖ ಎಂಬ ಪ್ರಯೋಗಗಳು ವಿನಾಯಕಸ್ತುತಿ ಎಂಬುದನ್ನು ದೃಢಪಡಿಸುತ್ತದೆ. ಇನ್ನುಳಿದ ಎರಡು ರಚನೆಗಳಲ್ಲಿ 'ಶ್ರೀಗಣನಾಥಂ' ಎಂಬ ರಚನೆ ವಾಲಾಜಪೇಟೆ ವೆಂಕಟರಮಣ ಭಾಗವತರ ಸಂಪ್ರದಾಯದಲ್ಲಿ ಅಮುದ್ರಿತ ಕೃತಿಗಳ ಪಟ್ಟಿಯಲ್ಲಿದೆ. 'ಅಭೀಷ್ಟವರದ' ಕೃತಿಯು ಇತ್ತೀಚೆಗೆ ಬೆಳಕಿಗೆ ಬಂದ ಕೃತಿ ಎನ್ನುತ್ತಾರೆ.

ಒಟ್ಟಾರೆ ತ್ಯಾಗರಾಜರು ವಿನಾಯಕನನ್ನು ಹೀಗೆ ಭಜಿಸುತ್ತಾರೆ. ತ್ಯಾಗರಾಜರ ಪ್ರಕಾರವೂ ಈತ ಅಗ್ರಪೂಜ್ಯನು, ಶ್ರೀಕಂಠಾತ್ಮಜನೂ, ಗುರುಗುಹಾಗ್ರಜನೂ ಆಗಿದ್ದಾನೆ (ಶ್ರೀ ಗಣನಾಥಂ). ಅಲ್ಲದೆ ಇಭರಾಜಮುಖನೂ,* ಪ್ರಮಥಾದಿ ಗಣಗಳ ಒಡೆಯನೂ ಆದ ಈತ ಮುಕ್ತಿ ಮಾರ್ಗಕ್ಕೆ ಮೊದಲದೈವ. ಈತನ ದಿವ್ಯಚರಣಗಳನ್ನು ತ್ಯಾಗರಾಜರು ನಂಬಿದ್ದಾರೆ (ಗಿರಿರಾಜಸುತಾತನಯ, ಅಭೀಷ್ಟವರದ). ಗಣಪತಿಯ ವಿಭೇದಗಳಲ್ಲಿ ಒಂದಾದ ನರ್ತನಗಣಪತಿಯನ್ನು ತ್ಯಾಗರಾಜರು ವಿಶೇಷವಾಗಿ ವರ್ಣಿಸುತ್ತಾರೆ (ಶ್ರೀಗಣಪತಿನಿ). ಆಂಜನೇಯನು ಶಂಕರಾಂಶನಾದ್ದರಿಂದ, ಆಂಜನೇಯ ಅವತಾರವು ಗಣನಾಥನ ಅವತಾರವೇ ಎಂಬುದು ಸಂಗ್ರಹ ರಾಮಾಯಣದ ಪ್ರಮಾಣ.[೨೪] ವಿಶಿಷ್ಟವಾದ ಈ ಅಂಶವನ್ನು 'ಶ್ರೀಗಣನಾಥಂ' ಕೃತಿಯಲ್ಲಿ ಕಾಣುತ್ತೇವೆ.

ಸಾಂಪ್ರದಾಯಿಕವಾಗಿ ಇಂದು ನಮ್ಮಲ್ಲಿ ಗಣಪತಿಗೆ ವಿಶೇಷ ಪ್ರಾಧಾನ್ಯವಿದೆ. ಈತನ ಪ್ರಾರ್ಥನೆಯಿಲ್ಲದೆ ಮಾಡಹೊರಟ ಯಾವುದೇ ಶುಭಕಾರ್ಯಗಳು ವಿಫಲಗೊಳ್ಳುವುದೆಂಬುದನ್ನು ತ್ಯಾಗರಾಜರ ಪೂರ್ವಜರಾದ ಪುರಂದರರೂ ಹೇಳುತ್ತಾರೆ (ವಂದಿಸುವುದಾದಿಯಲಿ). ತ್ಯಾಗರಾಜರು ಆರಂಭದಲ್ಲೇ ಗಣಪತಿಯನ್ನು ಸ್ತುತಿಸಿದ್ದಿರಬಹುದು. 'ಗಿರಿರಾಜಸುತಾತನಯ' ಅವರ ಮೊದಲ ಕೃತಿ ಎಂಬ ಅಭಿಪ್ರಾಯವೂ ಉಂಟು. ಆದರೆ ಅವರು ನೂರಾರು ಸಂಖ್ಯೆಯಲ್ಲಿ ರಾಮಸ್ತುತಿ ಮಾಡಿ ಕೆಲವೇ ರಚನೆಗಳಲ್ಲಿ ಗಣಪತಿಯನ್ನು ಸ್ತುತಿಸಿರುವುದು ಸೋಜಿಗವೆನಿಸುತ್ತದೆ. ಇದೇನೇ ಇದ್ದರೂ ಶಂಕರಾಚಾರ್ಯರು ಪುನರ್ವ್ಯವಸ್ಥೆಗೊಳಿಸಿದ ಷಣ್ಮತಗಳ ಆರಾಧನೆಯಲ್ಲಿ ಗಣಪತಿ ಆರಾಧನೆಯೂ ಒಂದು.[೨೫] ತ್ಯಾಗರಾಜರು ಗಣಪತಿಯನ್ನು ವಿರಳವಾಗಿಯಾದರೂ ಸ್ತುತಿಸಿರುವುದರಿಂದ ಅವರನ್ನು ಷಣ್ಮತಾರಾಧಕರ ಪಟ್ಟಿಯಲ್ಲಿ ಸೇರಿಸಲು ಅಡ್ಡಿಯಿಲ್ಲ.

ಕೆಲವರ ಪ್ರಕಾರ ಗಣಪತಿಯೆಂಬ ದೇವತೆಯು ಬಹುಪ್ರಾಚೀನ ದೇವತೆಯಲ್ಲ. ಅತಿ ಪ್ರಾಚೀನವಾದ ಋಗ್ವೇದ, ಯಜುರ್ವೇದಗಳಲ್ಲಿ ಗಣಪತಿಯ ಮೂಲ ಇಲ್ಲ. ಋಗ್ವೇದದಲ್ಲಿ 'ಗಣಪತಿ' ಎಂಬ ಮಾತಿದ್ದರೂ ಅದು ಒಬ್ಬ ದೇವತೆಯ ಹೆಸರಲ್ಲ. ಅನಂತರ ಮೂಡಿಬಂದ ಈ ದೇವತೆ ಕಾಲಕ್ರಮೇಣ ಎಲ್ಲ ದೇಶಗಳಲ್ಲೂ, ಎಲ್ಲ ಜಾತಿಯವರಿಂದಲೂ ಪೂಜಿಸಲ್ಪಟ್ಟು ಇಂದು ಪ್ರತಿ ಕಾರ್ಯಾರಂಭದಲ್ಲಿ ಪ್ರಾರ್ಥಿಸಲ್ಪಡುವ ದೇವನಾಗಿದ್ದಾನೆ. ಹಾಗೆಯೇ ಗಣಪತಿಯ ರೂಪು ಆಕಾರಗಳಲ್ಲೂ ವ್ಯತ್ಯಾಸಗಳು ಕಾಣಬರುತ್ತವಾದರೂ ನೃತ್ಯ ಗಣಪತಿಯ ಹಿನ್ನೆಲೆ ಸುಮಾರು ಆರನೇ ಶತಮಾನದಷ್ಟು ಪ್ರಾಚೀನವಾದುದು.[೨೬] ತ್ಯಾಗರಾಜರು ನೃತ್ಯ ಗಣಪತಿಯನ್ನೂ ಸ್ತುತಿಸಿರುವುದು ಗಮನಾರ್ಹ.

---

* ಗಣಪತಿಯು ಇಭರಾಜಮುಖನಾಗಲು (ಆನೆಮುಖ) ಹಲವು ಕಾರಣಗಳನ್ನು ನೀಡುವುದುಂಟು. ಅವುಗಳಲ್ಲಿ ಪಾರ್ವತಿಯ ಶಾಪವೂ ಒಂದು. ಕಥೆಯೊಂದರ ಪ್ರಕಾರ ಪಾರ್ವತಿಯ ಸಂಪರ್ಕವಿಲ್ಲದೆ, ಈಶ್ವರನ ಮುಖದಿಂದಲೇ ಗಣಪತಿ ಜನಿಸಿದ್ದಾನೆ. ಇದರಿಂದ ಕೋಪಗೊಂಡ ಪಾರ್ವತಿ 'ನಿನ್ನ ಮೋರೆ ಆನೆಯದಾಗಲಿ' ಎಂದು ಶಪಿಸಿದಳಂತೆ.

ನಿರ್ದಿಷ್ಟವಾದ ಈ ಕೃತಿಗಳಲ್ಲೇ ಅಲ್ಲದೆ ತಮ್ಮ ಗೀತನಾಟಕಗಳ ಪದ್ಯಗಳಲ್ಲೂ ಈ ದೇವತೆಯನ್ನು ತ್ಯಾಗರಾಜರು ಸ್ತುತಿಸಿರುವುದನ್ನು ಕಾಣಬಹುದು.

**೯. ಸುಬ್ರಹ್ಮಣ್ಯ :**

**ನೀವಂಟಿ ದೈವಮುನು ಷಡಾನನ ನೇನೆಂದುಗಾನರಾ**

**ಮತ್ತು**

**ವರಶಿಖಿವಾಹನ ವಾರಿಜಲೋಚನ**

ಮೇಲೆ ಸೂಚಿಸಲಾಗಿರುವ ಎರಡು ರಚನೆಗಳು ತ್ಯಾಗರಾಜಾಂಕಿತ ಷಣ್ಮುಖಸ್ವಾಮಿ ಸ್ತುತಿಗಳು. ಈ ರಚನೆಗಳ ವರ್ಣನೆಯಂತೆ ಸುಬ್ರಹ್ಮಣ್ಯನು ಅತಿ ಲಾವಣ್ಯವಂತ. ನವಿಲನ್ನೇ ವಾಹನವಾಗಿ ಹೊಂದಿರುವ ಈತ ಶುಭಕಾರಕನೂ, ದಯಾಪರನೂ, ನೀರಜಲೋಚನನೂ ಆಗಿದ್ದಾನೆ. ಕೋಟಿ ಮನ್ಮಥರ ಸೌಂದರ್ಯವೂ ಸುಬ್ರಹ್ಮಣ್ಯನ ಕಾಲಿನ ಉಗುರಿಗೆ ಸಮ. ನಿರಂತರ ತಾರುಣ್ಯ ಹೊಂದಿದ ಈತ ಚಂದ್ರಕಲಾಧರನಾದ ಪರಮಶಿವನಿಂದಲೂ ನಮಸ್ಕರಿಸಲ್ಪಟ್ಟಿದ್ದಾನೆ. ಇಂತಹ ಸುಬ್ರಹ್ಮಣ್ಯನ ದರ್ಶನ ತ್ಯಾಗರಾಜರಿಗೆ ಲಭ್ಯವಾಗಿ ಅವರು ಧನ್ಯರಾಗಿದ್ದಾರೆ.

ತ್ಯಾಗರಾಜರು ಈ ರಚನೆಗಳಲ್ಲಿ ಸುಬ್ರಹ್ಮಣ್ಯನಿಗೆ ಸಂಬಂಧಿಸಿದ ಪುರಾಣ ಪ್ರಸಂಗ ಗಳನ್ನು ಪ್ರಸ್ತಾಪಿಸಿದ್ದಾರೆ. ಅವುಗಳೆಂದರೆ, ಸುಬ್ರಹ್ಮಣ್ಯ ಬ್ರಹ್ಮನನ್ನು ಶಿಕ್ಷಿಸಿದುದು, ಶೂರ ಪದ್ಮಾಸುರನ ಮದವನ್ನು ಅಡಗಿಸಿದುದು ಹಾಗೂ ಶೂರ ಪದ್ಮಾಸುರನ ಸಹೋದರ ತಾರಕನನ್ನು ನಾಶಗೊಳಿಸಿದುದು.

ಒಮ್ಮೆ ಕೈಲಾಸದಲ್ಲಿ ಸುಬ್ರಹ್ಮಣ್ಯನು ತನ್ನ ಓರಗೆಯವರೊಂದಿಗೆ ಆಟವಾಡುತ್ತಿದ್ದ. ಆಗ ಬ್ರಹ್ಮನು, ಪ್ರಣವಾರ್ಥವು ತಾನೇ ಎಂದು ಹೇಳಿದ. ಇದನ್ನು ಕೇಳಿದ ಸುಬ್ರಹ್ಮಣ್ಯ ಬ್ರಹ್ಮನ ಮೇಲೆ ಕೋಪಗೊಂಡು, ಅವನಿಂದ ಸೃಷ್ಟಿ ಶಕ್ತಿಯನ್ನೇ ಕಸಿದುಕೊಂಡು, ತನ್ನ ಒಂಭತ್ತು ಸೇವಕರಲ್ಲಿ ಒಬ್ಬನಿಗೆ ಅದನ್ನು ನೀಡುವ ಮೂಲಕ ಬ್ರಹ್ಮನನ್ನು ಶಿಕ್ಷಿಸಿದ.

ಶೂರಪದ್ಮ ಮತ್ತು ತಾರಕರು ಲೋಕಕಂಟಕರಾಗಿದ್ದವರು. ಇವರೊಂದಿಗೆ ಸೆಣ ಸಾಡುವಾಗ ತಾರಕನು ಕ್ರೌಂಚ ಪರ್ವತದಲ್ಲಿ ಅಡಗಿಕೊಳ್ಳಲು, ಕುಮಾರನು ವಜ್ರಾ ಯುಧದಿಂದ ಬೆಟ್ಟವನ್ನೇ ಸೀಳಿ ತಾರಕನನ್ನು ಕೊಂದನು. ತಮ್ಮನನ್ನು ಕೊಂದ ಕುಮಾರನ ಮೇಲೆ ಶೂರಪದ್ಮನು ಎರಗಿ ಬರಲು ದೊಡ್ಡ ಯುದ್ಧವೇ ನಡೆಯಿತು. ಸಮುದ್ರದಡಿಯಲ್ಲಿ ಮಾವಿನಮರದ ರೂಪತಳೆದು ಅಡಗಿಕೊಂಡ ಶೂರಪದ್ಮನನ್ನು ಸುಬ್ರಹ್ಮಣ್ಯನು ತನ್ನ ವೇಲಾಯುಧದಿಂದಲೇ ಸೀಳಿ ಇಬ್ಭಾಗ ಮಾಡಿದನು. ಈ ಎರಡು ಭಾಗಗಳಲ್ಲಿ ಒಂದು ನವಿಲಿನಂತೆಯೂ ಮತ್ತೊಂದು ಕೋಳಿಯಂತೆಯೂ ಕಾಣಿಸಿ ಕೊಂಡಿತು. ಕುಮಾರನು ನವಿಲನ್ನು ವಾಹನವಾಗಿಯೂ, ಕೋಳಿಯನ್ನು ಧ್ವಜವ ನ್ನಾಗಿಯೂ ಮಾಡಿಕೊಂಡನು. ಹೀಗೆ ಅವನು ವರಶಿಖಿವಾಹನನಾದನು. ಈ ಪ್ರಸಂಗ ಗಳನ್ನು ತ್ಯಾಗರಾಜರು ಸುಬ್ರಹ್ಮಣ್ಯ ಸ್ತುತಿಯಲ್ಲಿ ಉಲ್ಲೇಖಿಸುತ್ತಾರೆ.

೧೦. **ಆಗಮಗಳು** : ವೇದ, ಉಪನಿಷತ್ತು, ಆಗಮ, ಪುರಾಣಗಳು ವೈದಿಕ

ಮತಗಳಿಗೂ, ಧರ್ಮಗಳಿಗೂ ಮೂಲವೆಂದು ಗೌರವಾನ್ವಿತವಾಗಿವೆ. 'ವೇದೋ ಧರ್ಮ ಮೂಲಂ', 'ವೇದೋ ಖಿಲಂ ಧರ್ಮ ಮೂಲಂ' ಎಂಬುದು ಆರ್ಯ ಋಷಿಗಳ ಉಕ್ತಿ. ಅಲ್ಲದೆ ಇನ್ನೊಂದೆಡೆ

ಪರ್ವೈಃ ಶೈವಾದಿಭಿರ್ದಿವ್ಯೈರಾಗಮೈಃ ಪಾಶಮೋಚಕೈಃ
ವಿಶಿಷ್ಟ ಭೋಗ ವಿಭವ ಶಿವತ್ವ ಫಲದಾಯಿಭಿಃ

ಎಂದು ವೇದಗಳಿಗೂ ಆಗಮಗಳಿಗೂ ಮಹತ್ವ ನೀಡಲಾಗಿದೆ. ಪ್ರಸ್ತುತ 'ಆಗಮ' ಎಂಬ ಶಬ್ದಕ್ಕೆ ವೇದ, ಶಾಸ್ತ್ರ, ತಂತ್ರ, ದೇವತಾಪರವಾದ ಸಂಪ್ರದಾಯ, ಹಾಗೂ ಪೂಜಾವಿಧಿಗಳನ್ನು ತಿಳಿಸುವಂತಹುದೆಂದು ಅರ್ಥಗಳುಂಟು. ತ್ಯಾಗರಾಜರು ವೇದಾಗಮಗಳೆಂದು ಉಲ್ಲೇಖಿಸುವಾಗ ಈ ಎಲ್ಲ ಅರ್ಥದಲ್ಲೂ ಬಳಸುತ್ತಾರೆ. ಅವರಿಗೆ ಆಗಮಗಳಲ್ಲಿದ್ದ ನಂಬುಗೆಯು 'ಆಗಮೋಕ್ತವಾಗಿ ತಾವು ರಚಿಸಿರುವ ಶಯ್ಯೆಯನ್ನೂ ಇತರ ಪೂಜಾದಿಗಳನ್ನೂ ನಿಜವೆಂದು ತಿಳಿದು ಅಂಗೀಕರಿಸಬೇಕೆಂದು' ದೇವರಲ್ಲಿ ಪ್ರಾರ್ಥಿಸುವ ಮಾತುಗಳಿಂದ ಸ್ಪಷ್ಟಪಡುತ್ತದೆ.

ಆಗಮೋಕ್ತಮ್ಮೈನ ಶಯ್ಯನಂಗೀಕರಿಂಚಿ
ತ್ಯಾಗರಾಜ ಕೃತಮುಲೆಲ್ಲ ತಥ್ಯಮನಿ ಸಂತೋಷಿಂಚಿ (ಪೂಲಪಾನ್ಪು)

ಆಗಮಗಳಲ್ಲಿ ಮುಖ್ಯವಾಗಿ ಶೈವಾಗಮ (ಶಿವ ಪರವಾದವು), ಶಾಕ್ತಾಗಮ (ದೇವೀ ಪರವಾದವು), ವೈಷ್ಣವಾಗಮ (ವಿಷ್ಣು ಪರವಾದವು) ಎಂದು ಮೂರು ಬಗೆ. ದೇವತಾ ಪ್ರಸಂಗದಿಂದ, ಸಿದ್ಧಾಂತದ ದೃಷ್ಟಿಯಲ್ಲಿ ಇವುಗಳ ನಡುವೆ ಭೇದ ಕಾಣಬಂದರೂ, ಇವುಗಳೆಲ್ಲದರ ನೆಲೆ ಪೂಜೆಯೇ. ಆಗಮಗಳಲ್ಲಿ ನಂಬಿಕೆಯಿದ್ದವರು ಅಗ್ನಿಹೋತ್ರ ಮತ್ತು ಯಜ್ಞಗಳಿಗಿಂತ ಆಗಮೋಕ್ತ ವಿಷ್ಣುಪೂಜೆ ಕೋಟಿ ಪಾಲು ಉತ್ಕೃಷ್ಟವೆನ್ನುತ್ತಾರೆ. ತ್ಯಾಗರಾಜರ ಅಭಿಪ್ರಾಯವೂ ಇದೇ ಆಗಿದೆ.

ಆಗಮಗಳಿಗೆ ಸಂಬಂಧಿಸಿದಂತೆ ತ್ಯಾಗರಾಜರ ರಚನೆಗಳಲ್ಲಿ ಕಾಣಬರುವ ಕೆಲವು ಉಲ್ಲೇಖಗಳು ಹೀಗಿವೆ.

ಆಗಮ ವಿನುತುನಿ ಆನಂದಕಂದುನಿ
(ಆಗಮಗಳಿಂದ ಸ್ತುತಿಸಲ್ಪಟ್ಟ ಆನಂದಕಂದನನ್ನು)

(ವಿನಯಮುನನು)

ಆಗಮ ವೇದಮುಲನು ದಾನವುಡು ಗೊಂಪೋವಗ
(ವೇದಾಗಮಗಳನ್ನು ರಾಕ್ಷಸನು ಕೊಂಡೊಯ್ಯಲು)

(ಈ ಮೇನು)

ವೇದಾಗಮ ಶಾಸ್ತ್ರಮುಲಕು ಗನಗೂಡನಿ
(ವೇದಾಗಮ ಶಾಸ್ತ್ರಗಳಿಗೆ ನಿಲುಕದ)

(ಇಂತನುಚು)

**ನಿಗಮಾಗಮಚರ ನೀಕು ನಿತ್ಯಮಂಗಳಮುಗಲ್ಗು**

(ನಿಗಮಾಗಮಗಳಲ್ಲಿ ಸಂಚರಿಸುವ ನಿನಗೆ ನಿತ್ಯಮಂಗಳವುಂಟಾಗುತ್ತದೆ)

(ಕುಲಬಿರುದುನು)

**ಆಗಮ ನಿಗಮ ಚಯಾರ್ಥಮು ನೀವನಿ**

(ನಿಗಮಾಗಮಗಳ ಸಾರವೇ ನೀನೆಂದು)

(ನನ್ನು ಬ್ರೋವಕನು)

**ಆಗಮ ನಿಗಮ ಪುರಾಣಾಚಾರುಡನಿ**

(ಆಗಮ ನಿಗಮ ಪುರಾಣಗಳ ಸಾರನೆಂದು)

(ಪೆರುಗುಪಾಲು)

**ಆಗಮಶಾಸ್ತ್ರಮುಲನ್ನಿಯು ಚದಿವಿನ**

(ಆಗಮ ಶಾಸ್ತ್ರಗಳೆಲ್ಲವನ್ನೂ ಅಧ್ಯಯನ ಮಾಡಿದರೂ)

(ಶಾಂತಮುಲೇಕ)

**ಆಗಮ ಮೂಲ**

(ಆಗಮಗಳ ಮೂಲನಾಗಿರುವಾತ)

(ಶ್ರೀರಘುವರ ಸುಗುಣಾಲಯ)

**ನೈಗಮ ಷಟ್‌ಶಾಸ್ತ್ರ ಪುರಾಣ ಆಗಮಾರ್ಥ ಸಹಿತಮಟ**

(ನಿಗಮ, ಆಗಮ, ಪುರಾಣ, ಷಟ್ ಶಾಸ್ತ್ರಗಳನ್ನು ಒಳಗೊಂಡಿರುವುದು—ಷಟ್ ಶಾಸ್ತ್ರಗಳೆಂದರೆ ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವಮೀಮಾಂಸಾ ಮತ್ತು ಉತ್ತರಮೀಮಾಂಸಾ ಅಥವಾ ವೇದಾಂತ)

ತ್ಯಾಗರಾಜರು ಸಾಮವೇದವನ್ನುಳಿದು (ನಾದತನುಮನಿಶಂ) ಇತರ ವೇದಗಳನ್ನಾಗಲೀ, ನಿರ್ದಿಷ್ಟವಾದ ಆಗಮವನ್ನಾಗಲೀ ಅಥವಾ ಶಾಸ್ತ್ರ ಪುರಾಣಗಳನ್ನಾಗಲೀ ಹೆಸರಿಸಿದಂತೆ ಕಂಡುಬರುವುದಿಲ್ಲ.

**೧೧. ಸೀತಾಮಾತೆ** : ನವರಸ ನಾಯಕನಾದ ಶ್ರೀರಾಮನು ಪೂರ್ಣನೆನಿಸಬೇಕಾದರೆ ಆತ ದಯಾಪ್ರತೀಕಳಾದ ಸೀತಾಸಮೇತನಾಗಿದ್ದಾಗ ಮಾತ್ರ. ಸೀತಾಪಹರಣದ ಸಮಯದಲ್ಲೂ (ರಾಮನು ವಿರಹವನ್ನು ಅನುಭವಿಸಿದಾಗಲೂ) ಶ್ರೀರಾಮನು ಸೀತೆಯಲ್ಲಿ ಒಂದು ಅದ್ವೈತ ಭಾವವನ್ನೇ ಪಡೆದಿದ್ದನೆಂಬುದು ವಾಲ್ಮೀಕಿ ರಾಮಾಯಣದಿಂದ ವೇದ್ಯವಾಗುತ್ತದೆ. ಹೀಗೆಯೇ ಸೀತೆಗಾದರೋ ರಾಮನಲ್ಲಿ ಸೋಹಂಭಾವವೇ ಪ್ರಾಪ್ತವಾಗಿರುತ್ತದೆ. ತ್ಯಾಗರಾಜರು ವೈದೇಹಿಯ ಈ ಭಾಗ್ಯವನ್ನು ಹೀಗೆ ಹೇಳುತ್ತಾರೆ.

**ಸದಾನಿನು ಹೃದ್ಗೇಹಮುನನು ಗನಿ ದುರ್ದಾಹಮುಲನುರೋಸಿ**

**ವಿವಾಹಮುಂಡ, ನೀವನು ಮೋಹಂಬುನನು ಮರಚಿ**

**'ಸೋಹಂ' ಅನು ಸುಖಮು ವೈದೇಹಿ ಪಾಲ್ಕೆಯುಂಡಗ**

(ಏವರಮಡುಗುದುರಾ)

ಶಾಕ್ತಮತದ ಶಿವ-ಶಕ್ತಿಯರಂತೆಯೇ, ವೈಷ್ಣವ ಮತದ ಲಕ್ಷ್ಮೀನಾರಾಯಣ ರಂತೆಯೇ ಸೀತಾರಾಮರ ಅವತಾರ. ಇವರು ಅಭಿನ್ನರೂ, ಅಭೇದ್ಯಸ್ವರೂಪರೂ, ಸಾಕ್ಷಾತ್ ಪರಬ್ರಹ್ಮ ವಸ್ತುವೂ ಆಗಿದ್ದಾರೆ. ರಾಮನು ಸೀತೆಯಲ್ಲಿ ಅದ್ವೈತ ಭಾವ ವನ್ನೂ, ಸೀತೆಯು ರಾಮನಲ್ಲಿ 'ಸೋಹಂ' ಭಾವವನ್ನು ತಳೆದಿದ್ದರೂ ಭಕ್ತನು ದಯೆ ವಾತ್ಸಲ್ಯಗಳನ್ನು ಬೇಡಿ ಮಾತೃವನ್ನು ಆಶ್ರಯಿಸುವುದು ಸಹಜವಾಗಿಯೂ ಕಲಾತ್ಮಕ ವಾಗಿಯೂ ಇದೆ. ಈ ಮಾತೆ ದಯಾಸಾಗರ ಸ್ವರೂಪಳಲ್ಲದೆ ಬೇರೆಯಲ್ಲ.

ತ್ರಿಪುರಸುಂದರಿ, ತುಳಸಿ, ಧರ್ಮಾಂಬಿಕೆ ಎಂದು ಸಂಬೋಧಿಸಿ ಅನೇಕ ದೇವೀ ಸ್ತುತಿ ಗಳನ್ನುತ್ಯಾಗರಾಜರು ರಚಿಸಿದ್ದಾರಾದರೂ ಸೀತಾಸ್ತುತಿಯಾಗಿಯೆ ರಚಿತವಾದ ಅವರ ಕೃತಿಗಳು ನಾಲ್ಕು ಮಾತ್ರ. ಅವು :

೧. ದೇಹಿತವ ಪದಭಕ್ತಿಂ (ಸಂಸ್ಕೃತ)
೨. ಶ್ರೀ ಜನಕತನಯೇ (ಸಂಸ್ಕೃತ)
೩. ಸರಿಯೆವ್ವರೇ (ತೆಲುಗು)
೪. ಮಾಜಾನಕಿ (ತೆಲುಗು)

ಇವುಗಳಲ್ಲದೆ ಮತ್ತೆ ಕೆಲವು ರಚನೆಗಳಲ್ಲಿ ಸೀತೆಯನ್ನು ಆನುಷಂಗಿಕವಾಗಿ ಪ್ರಸ್ತಾಪಿ ಸಿರುವುದುಂಟು. ತ್ಯಾಗರಾಜರ ಪ್ರಕಾರ ಸೀತೆಯು ಕಲಶವಾರಾಶಿ ಜನಿತೆಯೂ (ಲಕ್ಷ್ಮಿ), ಐಹಿಕ ಆಮುಷ್ಮಿಕ ಫಲದಾಯಕಿಯೂ, ಅಖಿಲಾಂಡ ರೂಪಿಣಿಯೂ, ಶರಣಾಗತ ಪಾಲಿ ನಿಯೂ ಆದವಳು. ಈಕೆಯ ಸರಿಸಮರಿಲ್ಲ. ಸೀತೆಯ ಸೌಂದರ್ಯ ಎರಡು ರೀತಿಯವು.

೧. ಬಾಹ್ಯ ಅಥವಾ ಶರೀರ ಸೌಂದರ್ಯ
೨. ಆಂತರಿಕ ಅಥವಾ ಹೃದಯ ಸೌಂದರ್ಯ

ಈಕೆ ಬಾಹ್ಯದಲ್ಲೆಷ್ಟು ಸುಂದರಳೋ ಆಂತರ್ಯದಲ್ಲೂ ಭಕ್ತಿಯಿಂದಾಗಿ ಅಷ್ಟೇ ಸುಂದರಳೆಂದೇ ತ್ಯಾಗರಾಜರು 'ಪೂರ್ಣ ಭಕ್ತಳಾದ, ವರ್ಣಿಸಲಸದಳಲಾದ ಹೊಂಬಣ್ಣದ ದೇಹದ ಸೀತೆ' ಎಂದು ವರ್ಣಿಸುವುದು.

**ವರ್ಣಿಂಪ ತರಮುಗಾನಿ ಸ್ವರ್ಣಂಪು ಮೇನು ಸೀತ ಪೂರ್ಣಮೌ ಭಕ್ತಿತೋನು**
**(ಶ್ರೀರಾಮರಾಮರಾಮ ಶ್ರೀಮಾನಸಾಬ್ಧಿಸೋಮ)**

ಸೀತಾಮಾತೆ ಹಿಂದೂ ಧರ್ಮದ ಆದರ್ಶ ಸ್ತ್ರೀಯ ಪ್ರತೀಕ. ಹರ ಧನುರ್ಭಂಗಕ್ಕೆ ಮೊದಲೇ ಸೀತಾರಾಮರು ಪರಸ್ಪರ ವೀಕ್ಷಣೆಯ ಮೂಲಕ ಪ್ರೇಮತರಂಗಿತ ಹೃದಯ ರಾಗಿದ್ದಂತೆ ಕಂಬರಾಮಾಯಣದಲ್ಲಿ ವರ್ಣಿಸಲಾಗಿದೆ.[೨೬] ಸ್ವಯಂವರಕ್ಕಾಗಿ ಅನೇಕ ರಾಜರು ಬಂದರೂ ಸೀತೆ ರಾಮನಲ್ಲಿ ಅನುರಕ್ತಳಾಗಿದ್ದುದರಿಂದ ಸಾಕೇತಪತಿ ಇನ್ನೂ ಬರಲಿಲ್ಲವಲ್ಲಾ ಎಂದು ಆಕೆ ಆತಂಕಗೊಳ್ಳುತ್ತಾಳೆ. ಅನಂತರ ಬಂದ ಶ್ರೀರಾಮನನ್ನು ಕಂಡು ಶಿವಧನುಸ್ಸನ್ನು ಬಗ್ಗಿಸಲು ಆತನಿಗೆ ಸಾಧ್ಯವಾಗುವುದೋ ಇಲ್ಲವೋ ಎಂದು ತವಕಿಸುತ್ತಾಳೆ. ಸ್ವಯಂವರದ ಈ ಸನ್ನಿವೇಶ ತ್ಯಾಗರಾಜರಲ್ಲಿ ಹೀಗೆ ಮೂಡಿದೆ.

**ಕ್ಷಿತಿನಾಥುಲು ರಾಕಯು ಸಮ್ಮತಿಲೇಕ ಶ್ರೀಸಾಕೇತ**
**ಪತಿ ರಾಡೇ ಯನ ವಚ್ಚುನನಿನ ...................**
**ಕೊಂಚಮೀ ರೂಪ ಮೀವಿಲ್ಲು ವಂಚಕೂಡಕ ಪೋನೋಯನಿ**
**ಎಂಚಿ ಜಾಲಿಚೆಂದ ....................................**

(ದಯಸೇಯವಯ್ಯ)

ವಿವಾಹದ ನಂತರ ಕಾಡಿಗೆ ಹೊರಟ ಪತಿಯನ್ನು ಅನುಸರಿಸಿ ಅವನೊಂದಿಗೇ ಇದ್ದು ರಾಜಸುಖವನ್ನು ನೀಡಲು ಆಕೆ ಸಂಕಲ್ಪಿಸುತ್ತಾಳೆ.

**ವನಮಂದು ಭಯಂಕರಮ್ಮೆನ ತಾ**
**ವುನ ನಿಲ್ಚುನನಿ ಮನಸುದಲಿಸಿ**
**ಕನಕಾಂಗಿಯಂದಂದುನ ರಾಜ ಸುಖಂ**
**ಬುನು ಗಲ್ಗಜೇಸಿತಿವಿ ..................**

(ಸರಿಯೆವ್ವರೇ)

ದುಷ್ಟ ರಾವಣನನ್ನು ತನ್ನ ಶಕ್ತಿಸಾಮರ್ಥ್ಯದಿಂದಲೇ ಸಂಹರಿಸಬಹುದಾಗಿದ್ದರೂ, ದುಷ್ಟಸಂಹಾರದ ಯಶಸ್ಸು ತನ್ನ ಪತಿಗೇ ಸಲ್ಲಲಿ ಎಂದು ಆಕೆ ತನ್ನ ಯಶಸ್ಸನ್ನು ತ್ಯಾಗ ಮಾಡುತ್ತಾಳೆ. ಆ ಮೂಲಕ ಶ್ರೀರಾಮನಿಗೆ **ರಾವಣಾರಿ** ಎಂಬ ಕೀರ್ತಿ ಬರಲು ಕಾರಣಳಾಗುತ್ತಾಳೆ.

**ರಾವಣಾರಿಯನಿ ರಾಜಿಲ್ಲು ಕೀರ್ತಿ**
**ವಧಿಯಿಂಚಕನೇಯುಂಡಿ**
**ಶ್ರೀ ನಾಯಕ ಯಶಮು ನೀಕೆ ಗಲ್ಗ ಜೇಯಲೇದಾ**

(ಮಾಜಾನಕಿ)

ಅನಂತರ ಲಂಕೆಯಿಂದ ಅಯೋಧ್ಯೆಗೆ ಹಿಂತಿರುಗುವಾಗ ಶತಮುಖರಾವಣನ ಮದವಡಗಿಸಿದಂತೆಯೂ ತ್ಯಾಗರಾಜರು ಹೇಳುವುದುಂಟು (ಶತಮುಖ ಮದ ದಮನೇ -ದೇಹಿ ತವಪದಭಕ್ತಿಂ; ಶತವದನಾದ್ಯಾಶರ ಜಲಧರ ಅನಿಲೇ-ಶ್ರೀ ಜನಕತನಯೇ). ಶತಮುಖ ರಾವಣನ ಪ್ರಸ್ತಾಪ ವಾಲ್ಮೀಕಿ ರಾಮಾಯಣದಲ್ಲಿಲ್ಲ. ಆನಂದ ರಾಮಾಯಣದಲ್ಲಿದೆ.[೨೮]

ಈ ಕಾರಣಗಳಿಂದ ತ್ಯಾಗರಾಜರ ದೃಷ್ಟಿಯಲ್ಲಿ ಸೀತೆಯ ಹಿರಿಮೆ ಮಿಗಿಲಾದುದು. ಅದ್ವಿತೀಯಳಾದ ಸೀತಾಮಾತೆಯನ್ನು ವಿವಾಹವಾದುದರಿಂದಲೇ ಶ್ರೀರಾಮ ಮಹಾರಾಜನಾಗಿ ಭೂಮಿಯಲ್ಲಿ ವಿಜೃಂಭಿಸಿದುದು ಎನ್ನುತ್ತಾರೆ ಅವರು. ಅದ್ಭುತ ರಾಮಾಯಣವು ಸೀತೆಯ ಹಿರಿಮೆಯನ್ನು ವಿಶೇಷವಾಗಿ ಕೊಂಡಾಡುತ್ತದೆ.

ದಯಾಪ್ರತೀಕಳಾದ ದೇವಿಯ ಮಧ್ಯವರ್ತಿತ್ವದ ಮೂಲಕ ಭಗವಂತನ ದಯೆಗಾಗಿ ಪ್ರಾರ್ಥಿಸುವುದನ್ನು ಬಹುತೇಕ ಎಲ್ಲ ಭಕ್ತರಲ್ಲೂ ಕಾಣುತ್ತೇವೆ. ವೈಷ್ಣವ ಸಂಪ್ರದಾಯದಲ್ಲಿ ಇದನ್ನು 'ಪುರುಷಕಾರ' ಎನ್ನುತ್ತಾರೆ.

'ಮಾಜಾನಕಿ' ಕೃತಿಯಲ್ಲಿ ತ್ಯಾಗರಾಜರು ಮಾಯಾಸೀತೆಯ ವಿಶಿಷ್ಟವಾದ ಪ್ರಸಂಗ ವೊಂದನ್ನು ಪ್ರಸ್ತುತ ಪಡಿಸಿದ್ದಾರೆ. ಇದು ಅಧ್ಯಾತ್ಮ ರಾಮಾಯಣದ ಅರಣ್ಯಕಾಂಡ ದಲ್ಲಿದೆ. ವಾಲ್ಮೀಕಿ ರಾಮಾಯಣದಲ್ಲಿದು ಕಂಡುಬರುವುದಿಲ್ಲ. ಈ ಪ್ರಕಾರ ರಾವಣನು ಅಪಹರಿಸುವುದು ನಿಜವಾದ ಸೀತೆಯನ್ನಲ್ಲ, ಮಾಯಾಸೀತೆಯನ್ನು ಆತ ಅಪಹರಿ ಸುತ್ತಾನೆ. ಸೀತೆಯು ಶ್ರೀರಾಮನ ಆಜ್ಞೆಯಂತೆ ಕೆಲವುಕಾಲ ಅಗ್ನಿದೇವನಲ್ಲಿ ಮರೆಯಾಗಿ ರುತ್ತಾಳೆ. ರಾವಣನೊಂದಿಗೆ ಅಶೋಕವನಕ್ಕೆ ಆಕೆ ತೆರಳುವುದು ಮಾಯಾಕಾರದಲ್ಲಿ.[೨೯] ಇದನ್ನೇ ತ್ಯಾಗರಾಜರು ಹೀಗೆ ಹೇಳುವುದು.

**ಕಾನಕೇಗಿ ಯಾಜ್ಞಮೀರಕ ಮಾಯಾ**
**ಕಾರಮುನಿಚಿ ಶಿಖಿ ಚೆಂತನೆಯುಂಡಿ**
**ದಾನವುನಿ ವೆಂಟನೆ ಚನಿ ಯಶೋಕ ತರುಮುಲನುಂಡಿ**

**(ಮಾಜಾನಕಿ)**

ಇನ್ನು, ಶ್ರೀರಾಮನನ್ನೇ ಆಶ್ರಯಿಸಿ ವರಬೇಡಿದ ಸೀತೆಗೆ ಅರಣ್ಯವಾಸ ಪ್ರಾಪ್ತ ವಾದುದಕ್ಕೆ ತ್ಯಾಗರಾಜರು ಒಂದೆಡೆ ಶ್ರೀರಾಮನನ್ನು ನಿಂದಿಸುತ್ತಾ ಸೀತೆಯೆಡೆಗೆ ಸಹಾನುಭೂತಿ ತೋರುತ್ತಾರೆ.

**ಆಶ್ರಯಿಂಚಿ ವರಮಡಿಗಿನ ಸೀತ ಅಡವಿಪೋನಾಯೆ**

**(ಅಡಿಗಿ ಸುಖಮುಲೆವ್ವರನುಭವಿಂಚಿರಿರಾ)**

ಇಲ್ಲಿ ರಾಮನೆಡೆಗೆ ಕೋಪವೂ ಸೀತೆಯೆಡೆಗೆ ಸಹಾನುಭೂತಿಯೂ ಅಡಗಿದೆ.

ಇನ್ನು ಸೀತೆಯನ್ನು ಸಂಕಷ್ಟಕ್ಕೆ ಒಳಪಡಿಸಿದ ಮತ್ತೊಂದು ಘಟನೆಯೆಂದರೆ ಜನಸಾಮಾನ್ಯರ ಮಾತಿಗೆ ಬೆಲೆನೀಡಿ ಆಕೆಯನ್ನು ಅಗ್ನಿಪರೀಕ್ಷೆಗೆ ಗುರಿಮಾಡಿದುದು. ಇದರ ಸರಿತಪ್ಪುಗಳ ಬಗೆಗೆ ಸಾಕಷ್ಟು ಚರ್ಚೆಗಳಾಗಿವೆ.[೩೦] ಈ ಚರ್ಚೆಯ ಸೂಕ್ಷ್ಮಾವ ಲೋಕನ ಇಲ್ಲಿ ಮುಖ್ಯವಲ್ಲ. ತ್ಯಾಗರಾಜರು ಇದನ್ನು ಪ್ರಸ್ತಾಪಿಸುವುದೂ ಇಲ್ಲ. ಆದರೆ ವಿರಹದ ಈ ಹಂತದಲ್ಲಿ ಶ್ರೀರಾಮನು ಸರ್ವರಿಗೂ ಏಕರೀತಿಯ ನಿರ್ಣಯ ನೀಡುವವ ನೆಂಬುದನ್ನು ಗಮನಿಸುವ ಸಲುವಾಗಿಯಷ್ಟೇ ಇದನ್ನಿಲ್ಲಿ ಪ್ರಸ್ತಾಪಿಸಲಾಗಿದೆ. ಸೀತೆಯು ನಿಷ್ಕಳಂಕಳೆಂಬ ಪೂರ್ಣವಿಶ್ವಾಸ ರಾಮನಿಗೆ ಇದ್ದಿತಾದರೂ, ಅವನು ರಾಜಾರಾಮನೂ ಆಗಿದ್ದುದರಿಂದ ಪ್ರಜೆಗಳ ಅಭಿಪ್ರಾಯವನ್ನೂ ಮಾನ್ಯಮಾಡಬೇಕಾಗಿದ್ದಿತು. ಸರ್ವ ರನ್ನೂ ಸಮಭಾವದಲ್ಲಿ ಕಾಣಬೇಕಿದ್ದಿತು. ಹೀಗಾಗಿ ಆತ ಸೀತೆಯನ್ನು ಕೆಲಕಾಲ ದೂರ ವಿರಿಸಿ ಅಗ್ನಿಪರೀಕ್ಷೆಯ ನಂತರ ಒಂದಾಗುವುದನ್ನು, ಈ ದೃಷ್ಟಿಕೋನದಿಂದ ನೋಡಿ ದಾಗ, ಶ್ರೀರಾಮನ ಈ ವರ್ತನೆ ಸೂಕ್ತವೆನ್ನದೆ ವಿಧಿಇಲ್ಲವಾಗುತ್ತದೆ. ಪ್ರಜಾಪ್ರಭು ತ್ವದ ರಾಜ್ಯದಲ್ಲಿ ರಾಜನು ಸರ್ವಾಧಿಕಾರಿಯಲ್ಲವಷ್ಟೆ ? ತನ್ನ ಪ್ರಜೆಗಳ ಬಹು ಮತಾಭಿಪ್ರಾಯವನ್ನು ಅಮೂಲ್ಯವೆಂದು ಗಣಿಸಿಯೇ ಆತ ಈ ನಿರ್ಧಾರ ತಳೆಯ ಬೇಕಾಯಿತು, ಹೀಗಾಗಿ ಸೀತೆ ವಿರಹವನ್ನು ಅನುಭವಿಸಬೇಕಾಯಿತು.

ಒಟ್ಟಾರೆ ರಾಮಾಯಣವು ರಾಮನ ಕಥೆಯಷ್ಟೇ ಅಲ್ಲ, ಸೀತೆಯೆಂಬ

ಪರದೇವತೆಯ ಕಥೆಯೂ ಹೌದು. ಸೀತೆಯಿಲ್ಲದೆ ರಾಮನು ಅಪೂರ್ಣನೆನಿಸಿದಂತೆ, ರಾಮನಿಲ್ಲದೆ ಸೀತೆಯೂ ಅಪೂರ್ಣಳೇ. ರುಕ್ಮಿಣೀ ಕೃಷ್ಣ, ಪಾರ್ವತೀ ಪರಮೇಶ್ವರ ಎಂಬಂತೆ ಸೀತೆಯನ್ನೂ ರಾಮನೊಡನೆ ಸೇರಿಸಿ ಪೂಜಿಸುವುದು ವಾಡಿಕೆಯೆಂದೇ ತ್ಯಾಗ ರಾಜರು ಸೀತಾಮಾತೆಯನ್ನು ವಿಶೇಷವಾಗಿ ಸ್ತುತಿಸಿದ್ದಾರೆ. ಸೀತಾಮಾತೆಯ ಔನ್ನತ್ಯ ವನ್ನು ಮನಗಾಣುವಾಗ ಸ್ವಾಮಿ ವಿವೇಕಾನಂದರ ಮಾತೊಂದು ಇಲ್ಲಿ ಉಲ್ಲೇಖಾರ್ಹ. 'ಜಗತ್ತಿನಲ್ಲಿ ಸಾವಿರಾರು ರಾಮರು ಹುಟ್ಟಬಹುದು. ಆದರೆ ಒಬ್ಬ ಸೀತೆ ಹುಟ್ಟುವುದು ದುರ್ಲಭ' ಎಂಬುದು ಅವರ ನುಡಿ. ಅಂತೆಯೇ ತ್ಯಾಗರಾಜ ವಿರಚಿತ ನೂರಾರು ರಾಮ ಸ್ತುತಿಗಳೂ ಒಂದೆ, ಸೀತಾಮಾತೆಯನ್ನು ಕುರಿತ ಮೇಲಿನ ಅವರ ನಾಲ್ಕು ಕೃತಿಗಳೂ ಒಂದೇ ಎನ್ನಬಹುದು.

೧೨. **ಆಂಜನೇಯ** : ಸೀತಾರಾಮರ ಸಂಕೀರ್ತನೆ ನಡೆಯುವಲ್ಲೆಲ್ಲಾ ಆಂಜನೇ ಯನು ಅಂಜಲೀಬದ್ಧನಾಗಿ ಉಪಸ್ಥಿತನಿರುವನೆಂಬುದು ಪುರಾಣದ ನಂಬುಗೆ. ದಾಸ್ಯ ಭಾವದ ಪ್ರತೀಕನಾಗಿರುವ, ಸೀತಾರಾಮರ ಆತ್ಮೀಯನೆನಿಸುವ ಹನುಮಂತನ ಪ್ರಸ್ತಾಪವಿಲ್ಲದೆ ಸೀತಾರಾಮರ ಸ್ಮರಣೆ ಫಲಕಾರಿಯಲ್ಲ. ಇದಕ್ಕೆ ಕಾರಣ ಸೀತಾ ರಾಮರ ಚರಣಸೇವೆಯಲ್ಲೇ ಪರಮಸುಖ ಹೊಂದಿದ ಆಂಜನೇಯ ಪ್ರಾತಃ ಸ್ಮರಣೀ ಯನೇ ಹೌದು. ಈ ದೃಷ್ಟಿಯಿಂದಲೇ ಆಂಜನೇಯನು ದಾಸ್ಯಭಕ್ತಿಯಲ್ಲಿ (ನವವಿಧ ಭಕ್ತಿ) ಪ್ರಸ್ತಾಪಿಸಲ್ಪಟ್ಟಿದ್ದರೂ, ಇಲ್ಲಿ ಮತ್ತೊಮ್ಮೆ ಬೇರೆ ಆಯಾಮದಿಂದ ಅಧ್ಯಯನ ಮಾಡಲಾಗಿದೆ.

'**ಕಲುಗುನಾ ಪದ ನೀರಜ ಸೇವ**' ಮತ್ತು '**ಪಾಹಿ ರಾಮದೂತ**' - ಇವು ತ್ಯಾಗರಾಜ ವಿರಚಿತ ಮಾರುತಿ ಸ್ತುತಿಗಳು. ಆದರೆ ಇತರ ಕೃತಿಗಳಲ್ಲೂ (ಅಲ್ಲಲ್ಲಿ) ತ್ಯಾಗರಾಜರು ಆಂಜನೇಯನನ್ನು ಸ್ಮರಿಸುತ್ತಾರೆ. ಉದಾಹರಣೆಗೆ 'ಸೀತಾಪತೇ', 'ಏವರಮಡುಗು ದುರಾ', 'ಚೆಂತನೇ ಸದಾಯುಂಚುಕೋ', 'ಗೀತಾರ್ಥಮು,' 'ಲೇಕನಾ' ಮುಂತಾದವು.

ಶ್ರೀರಾಮ ಸ್ಮರಣೆ ಮತ್ತು ಪಾದ ಸೇವೆಯಲ್ಲೇ ನಿರಂತರ ಸುಖಿಯಾದ ಆಂಜ ನೇಯನ ಕೈಂಕರ್ಯದ ಒಂದೆರಡು ಘಟ್ಟಗಳನ್ನು ಸ್ವಕಲ್ಪಿತವಾಗಿ ತ್ಯಾಗರಾಜರು ಚಿತ್ರಿಸು ತ್ತಾರೆ. 'ಅನವರತವೂ ಶ್ರೀರಾಮನ ದರ್ಶನ ಮಾಡುತ್ತಾ ಬ್ರಹ್ಮಾನಂದಾನುಭವವನ್ನು ಪಡೆಯುವ ಭಕ್ತಾಗ್ರೇಸರನೇ, ನಿನ್ನಂತೆ ಧನ್ಯರಾಗುವ ಭಾಗ್ಯ ಲಭ್ಯವಾಗುತ್ತದೆಯೇ ? ಏಕೆಂದರೆ ಮುಂಜಾನೆ ಸುಪ್ರಭಾತವಾಗುತ್ತಲೇ ಸ್ವಾಮಿಯು ನಿನ್ನ ಕೈಯಾರ ಅಮೃತ ಸ್ನಾನವನ್ನು ಸ್ವೀಕರಿಸುತ್ತಾನೆ. ಕುಲದೈವನಾದ ರಂಗೇಶನಿಗೆ ನೈವೇದ್ಯ ನೀಡಿ ಸೀತಾ ಮಾತೆಯ ಅಮೃತಹಸ್ತದಿಂದ ಪ್ರಸಾದವನ್ನು ಸ್ವೀಕರಿಸುತ್ತಾನೆ. ಅನಂತರ ಸಾತ್ವಿಕವಾದ ಪುರಾಣ ಪಠಿಸಬೇಕೆಂದು ನಿನಗೇ ಆದೇಶಿಸುತ್ತಾನೆ. ಇಂತಹ ಎಲ್ಲ ಸನ್ನಿವೇಶಗಳಲ್ಲೂ ಸ್ವಾಮಿಯ ದರ್ಶನ ಮಾಡುತ್ತಿರುವ ಪರಮಭಾಗವತವರೇಣ್ಯ, ರಾಮದೂತನೇ ನನ್ನನ್ನು ರಕ್ಷಿಸು' ಎಂಬುದು ತ್ಯಾಗರಾಜರ ಪ್ರಾರ್ಥನೆ.

ತ್ಯಾಗರಾಜರು ಹನುಮಂತನನ್ನು ಅಸಮಾನ ದಾಸ ಮತ್ತು ಅದ್ವಿತೀಯ ಶೂರ

ನೆಂದು ಅವನ ಗುಣವಿಶೇಷಣಗಳನ್ನೇ ಅಳವಡಿಸಿ 'ಪಾಹಿರಾಮದೂತ' ರಚನೆಯಲ್ಲಿ ಹೀಗೆ ಬಣ್ಣಿಸುತ್ತಾರೆ.

'ವಾಯುಪುತ್ರನೇ, ಸಮುದ್ರೋಲ್ಲಂಘನ ಮಾಡಿ ಅಕ್ಷಯಕುಮಾರನನ್ನು ವಧಿಸಿದವನೇ, ಸೂರ್ಯನಂತೆ ತೇಜೋಮಯನೇ, ರಘುವರನ ಸುಚರಣಗಳನ್ನು ಕರಗಳಲ್ಲಿ ಹಿಡಿದವನೇ, ಕಲಿಯುಗದ ಪಾಪಗಳನ್ನು ತೇಲಿಸುವವನೇ, ರಾಕ್ಷಸರೆಂಬ ಸಮುದ್ರಕ್ಕೆ ಅಗಸ್ತ್ಯನಂತಿರುವವನೇ,* ಪಾರಿಜಾತ ತರು ನಿವಾಸಿಯೇ, ಗಾಳಿಯಷ್ಟು ವೇಗವಾಗಿ ಚಲಿಸುವವನೇ, ದುಷ್ಟಗ್ರಹಗಳನ್ನು ಪಾದಗಳಿಂದ ಮೆಟ್ಟಿ ಗೆಲ್ಲುವ ಪತಿತಲೋಕ ಪಾವನನೇ, ವೇದಶಾಸ್ತ್ರ ನಿಪುಣನೇ, ವಿಮಲಚಿತ್ತನೇ, ಕರುಣಾರಸ ಪರಿಪೂರ್ಣನೇ, ಮೇರು ಪರ್ವತಕ್ಕೆ ಸಮಾನವಾದ ದೇಹ ಉಳ್ಳವನೇ, ಪರಮಭಾಗವತ ವರೇಣ್ಯನೇ ನನ್ನನ್ನು ರಕ್ಷಿಸು.'

ತ್ಯಾಗರಾಜರು ಇತರ ಕೆಲವು ರಚನೆಗಳಲ್ಲಿ ಆಂಜನೇಯನ ಬಗೆಗೆ ಹೇಳುವ ಮಾತುಗಳೆಂದರೆ,(ಅ) ಗೀತಾರ್ಥ ಸಂಗೀತಾರ್ಥಗಳೆರಡೂ ವಾತಾತ್ಮಜನಿಗೆ ಚೆನ್ನಾಗಿ ತಿಳಿದಿದೆ (ಗೀತಾರ್ಥಮು), (ಆ) ಶ್ರೀರಾಮನ ಮನದಿಚ್ಛೆಗಳನ್ನರಿತು ಚಾಚೂತಪ್ಪದೆ ಪಾಲಿಸುತ್ತಾ ರಾಮನ ಪಾದಪದ್ಮಗಳನ್ನು ಸೇವಿಸುವ ಭಾಗ್ಯವು ಸತತಗತಿ ಕುಮಾರನ ಪಾಲಿಗೆ ಸೇರಿದೆ (ಏವರಮಡುಗುದುರಾ), (ಇ) ಶ್ರೀರಾಮನ ಪಾದದ್ವಯಗಳಲ್ಲೇ ಆಂಜನೇಯನಿಗೆ ಸುಖ (ಲೇಕನಾ), (ಈ) ವಾತಾತ್ಮಜಾದಿಗಳಿಂದಲೇ ವರ್ಣಿಸಲ್ಪಟ್ಟ ರಾಮನ ಮಾತುಗಳೆಲ್ಲವನ್ನೂ ಸಿದ್ಧಾಂತವೆಂದು ತ್ಯಾಗರಾಜರು ನಂಬಿದ್ದಾರೆ (ಸೀತಾಪತೇ), (ಉ) ಶ್ರೀಮಂತ ಭಕ್ತಿಯಿಂದ ಮನಸೋತು ಹನುಮಂತನನ್ನು ಸದಾಕಾಲ ಸನಿಹದಲ್ಲೇ ಇರಿಸಿಕೊಂಡಂತೆ, ತಮ್ಮನ್ನೂ ಇರಿಸಿಕೊಳ್ಳಬೇಕೆಂದು ಬೇಡುತ್ತಾರೆ (ಚೆಂತನೇ), (ಊ) ಸೀತಾಸಂದೇಶವನ್ನು ತಂದ ಹನುಮಂತನಿಗೆ ಬ್ರಹ್ಮಪದವಿ ಅನುಗ್ರಹವಾಯಿತು (ಚೇಸಿನದೆಲ್ಲ). ಈ ಕಾರಣಗಳಿಂದ ಶ್ರೀರಾಮ ವಾತಾತ್ಮಜನ ಅಧೀನನಾಗಿದ್ದಾನೆ.

ತ್ಯಾಗರಾಜರ ಹೇಳಿಕೆಯಂತೆ ಹನುಮಂತನು ಗೀತೆ ಮತ್ತು ಸಂಗೀತಗಳ ಮರ್ಮಗಳನ್ನೆಲ್ಲ ಅರಿತ ಪ್ರಾಜ್ಞ, ರಾಮಾಯಣ ಕಾಲದ ಆಂಜನೇಯ ದ್ವಾಪರ ಯುಗದ ಗೀತೆಯ ಸಾರವನ್ನು ಮೈಗೂಡಿಸಿಕೊಂಡುದಾದರೂ ಹೇಗೆ ಎಂಬುದಕ್ಕೆ ಸಮಾಧಾನವೊಂದುಂಟು. ಮೊದಲಾಗಿ ಆಂಜನೇಯನು ಚಿರಂಜೀವಿ. ಈತ ಕೃಷ್ಣನು ಅರ್ಜುನನಿಗೆ ನೀಡಿದ ಗೀತೋಪದೇಶದ ಕಾಲದಲ್ಲಿ, ಅರ್ಜುನನ ರಥಧ್ವಜದಲ್ಲಿ ಅಡಗಿದ್ದನು. ಹೀಗಾಗಿ ಕೃಷ್ಣನ ಗೀತೋಪದೇಶವನ್ನು ಅರ್ಜುನನಿಗಿಂತಲೂ ಚೆನ್ನಾಗಿ ತಿಳಿದು ಭಾಷ್ಯವೊಂದನ್ನು ಬರೆದಂತೆ ಪ್ರತೀತಿಯುಂಟು[೩೧] (ಗೀತಾರ್ಥಮು). ತ್ಯಾಗರಾಜರ ಆಂಜನೇಯ ಸ್ತುತಿಯಲ್ಲಿ ಪಾರಿಜಾತ ತರುನಿವಾಸ, ಕಾಂಚನಾದ್ರಿ ಸಮದೇಹ ಮೊದಲಾದ

* ಅಗಸ್ತ್ಯನು ರಾಕ್ಷಸರ ನಾಶಕ್ಕಾಗಿ ಸಮುದ್ರದ ಜಲವನ್ನು ಪಾನಮಾಡಿ ಅದನ್ನು ಜೀರ್ಣಿಸಿಕೊಂಡವನು.

ವಾಲ್ಮೀಕಿ ರಾಮಾಯಣದ ಪದ ಪ್ರಯೋಗಗಳೇ ಮೂಡಿಬಂದಿರುವುದನ್ನು ನಾವು ಗಮನಿಸಬಹುದು.*

ವಾಲ್ಮೀಕಿ ರಾಮಾಯಣ ರಚಿತವಾದ ನಂತರ ಅದೇ ರಾಮಾಯಣವನ್ನು ಇತರ ಹಲವಾರು ಕವಿಗಳು ತಮ್ಮದೇ ಆದ ಭಾಷೆ, ಶೈಲಿ, ಕಲ್ಪನೆಗಳಿಗನುಗುಣವಾಗಿ ರಚಿಸಿದರು. ಇವುಗಳಲ್ಲಿ ಮೂಲವಾದ ವಾಲ್ಮೀಕಿ ರಾಮಾಯಣದ ಕೆಲವು ಅಂಶಗಳು ವಿಭಿನ್ನವಾಗಿ, ವಿಶೇಷವಾಗಿ ಗೋಚರಿಸುವುದುಂಟು. ಪೌರಾಣಿಕ ಪಾತ್ರಗಳಾದ ದೇವಕಿ, ಯಶೋದ, ದ್ರೌಪದಿ, ಧ್ರುವ, ಪ್ರಹ್ಲಾದ, ಅಕ್ರೂರ, ಕಾಕಾಸುರ ಮೊದಲಾದವರಿಗೆ ಭಗವದನುಗ್ರಹ ಬೇರೆ ಬೇರೆ ರೀತಿಯಲ್ಲಿ ಉಂಟಾದಂತೆಯೇ ಭಕ್ತ ಕವಿಗಳೂ ತಮ್ಮದೇ ಆದ ರೀತಿಯಲ್ಲಿ ರಾಮಾಯಣದ ಕಥೆಗೆ ಅಭಿವ್ಯಕ್ತಿ ನೀಡಿದ್ದಾರೆ.

**೧೩. ಪೌರಾಣಿಕವಾದ ಇತರ ವ್ಯಕ್ತಿಗಳು ಮತ್ತು ಪ್ರಸಂಗಗಳು** : ತ್ಯಾಗರಾಜರು ರಾಮಾಯಣ, ಮಹಾಭಾರತ, ಭಾಗವತ ಮತ್ತು ಇತರ ಪುರಾಣಗಳಲ್ಲಿನ ಕೆಲವು ಪೌರಾಣಿಕ ವ್ಯಕ್ತಿಗಳನ್ನೂ, ಪ್ರಸಂಗಗಳನ್ನೂ ಪ್ರಸ್ತಾಪಿಸಿರುವುದುಂಟು. ಇದರ ಹಿನ್ನೆಲೆ ಭಕ್ತಿ ಮತ್ತು ದೇವರ ಔನ್ನತ್ಯಗಳು. ತ್ಯಾಗರಾಜರು ಗಜೇಂದ್ರ, ಪ್ರಹ್ಲಾದ, ಶಬರಿ, ವಿಭೀಷಣ, ಅಹಲ್ಯೆ, ಲಕ್ಷ್ಮಣ ಮುಂತಾದ ಪರಮಭಕ್ತರನ್ನು ಮತ್ತೆಮತ್ತೆ ಉಲ್ಲೇಖಿಸುತ್ತಾ ನಮ್ಮ ಗಮನವನ್ನು ಸೆಳೆಯುತ್ತಾರೆ. ಈ ಮೂಲಕ ಭಗವದ್ಭಕ್ತಿಯ ಪರಿಣಾಮವನ್ನು ಅವರು ಮನದಟ್ಟು ಮಾಡುತ್ತಾರೆ.

**ಅಹಲ್ಯೆ** : ಅಹಲ್ಯಾ ವೃತ್ತಾಂತ ರಾಮಾಯಣದ ಬಾಲಕಾಂಡದಲ್ಲಿನದು. ಇದನ್ನು ತ್ಯಾಗರಾಜರು ಹಲವು ಕೃತಿಗಳಲ್ಲಿ ಪ್ರಸ್ತಾಪಿಸುತ್ತಾರೆ. ಈಕೆ ಗೌತಮನ ಶಾಪದಿಂದ ಆಕಾರ ಕಳೆದುಕೊಂಡು ಬೂದಿಯಲ್ಲಿ ಅದೃಶ್ಯಳಾಗಿದ್ದಂತೆ ವಾಲ್ಮೀಕಿ ರಾಮಾಯಣ ಹೇಳುತ್ತದೆ.[೩೨] ಆದರೆ ಅಧ್ಯಾತ್ಮ ರಾಮಾಯಣದ ಪ್ರಕಾರ ಈಕೆ ಶಿಲಾರೂಪದಲ್ಲಿರುತ್ತಾಳೆ.[೩೩] ಎಂದರೆ ಅಹಲ್ಯೆ ಕಲ್ಲಾಗಿರುವ ವೃತ್ತಾಂತ ಅಧ್ಯಾತ್ಮ ರಾಮಾಯಣದಲ್ಲಿ ಬರುವುದು, ವಾಲ್ಮೀಕಿ ರಾಮಾಯಣದಲ್ಲಿ ಅಲ್ಲ. ತ್ಯಾಗರಾಜರಲ್ಲಿ ಅಹಲ್ಯೆಯ ಪ್ರಸ್ತಾಪ ಹೀಗಿದೆ.

**ನೀ ಚರಣಮು ಶಿಲನು ವರನಾರಿಗ ಜೇಸಿನದಿ**

**(ಭವಸನ್ನುತ)**

**ದಾರಿನಿ ಶಿಲಯೈ ತಾಪಮು ತಾಳಕ**

**(ಶ್ರೀರಾಮಪಾದಮಾ)**

---

* ಕಂಬ ರಾಮಾಯಣದ ಸುಂದರಕಾಂಡದಲ್ಲಿ ಹನುಮಂತ ಮಾಡಿದ ಸಾಹಸಗಳನ್ನು ಬಹಳ ಚಮತ್ಕಾರಿಕವಾಗಿ ಬಣ್ಣಿಸಲಾಗಿದೆ. ಐದರಲ್ಲಿ ಒಂದರಲ್ಲಿ ಜನಿಸಿ (ಪಂಚಭೂತಗಳಲ್ಲಿ ಒಂದಾದ ವಾಯುಪುತ್ರನಾಗಿ), ಐದರಲ್ಲಿ ಒಂದರಲ್ಲಿ ಹಾರಿ (ಆಕಾಶದಲ್ಲಿ ಹಾರಿ), ಐದರಲ್ಲಿ ಒಂದರಲ್ಲಿ ಹುಟ್ಟಿದುದನ್ನು ಭೇಟಿಯಾಗಿ (ಪೃಥ್ವಿಸುತೆ—ಸೀತೆ), ಐದರಲ್ಲಿ ಒಂದನ್ನು ದಾಟಿ (ಅಪ್ಪು—ನೀರು), ಐದರಲ್ಲಿ ಒಂದನ್ನು ಇಟ್ಟು ಬಂದಿತು (ತೇಜ–ಬೆಂಕಿ). ಇದನ್ನಿಲ್ಲಿ ಪ್ರಾಸಂಗಿಕವಾಗಿಯಷ್ಟೆ ಹೇಳಲಾಗಿದೆ.

**ಶಾಪಂಬಣಗಿ ರೂಪವತಿಯೌಟಕು ಅಹಲ್ಯ**

(ಶ್ರೀರಾಮಜಯರಾಮ)

**ಪಾದವಿಜಿತಮುನಿ ತರುಣಿಶಾಪ**

(ತಲಚಿನಂತನೇ)

ಮೇಲಿನ ಹೇಳಿಕೆಗಳಲ್ಲಿ ಮೊದಲಿನ ಎರಡು ಅಹಲ್ಯೆ ಶಿಲಾರೂಪಿಯಾಗಿದ್ದನ್ನು ಖಚಿತಪಡಿಸಿದರೆ ಕಡೆಯ ಎರಡು ಆಕೆ ಶಾಪಮುಕ್ತಳಾದುದನ್ನು ಮಾತ್ರ ಸೂಚಿಸುತ್ತವೆ. ಎಂದರೆ ಮೂರು ಮತ್ತು ನಾಲ್ಕನೇ ಸಾಲುಗಳ ಪ್ರಕಾರ ಅಹಲ್ಯೆ ಬೂದಿಯಲ್ಲಿ ಅಡಗಿದ್ದ ಅಥವಾ ಕಲ್ಲಾಗಿದ್ದ ವಿಷಯ ಸ್ಪಷ್ಟವಾಗಿ ಉಲ್ಲೇಖಗೊಂಡಿಲ್ಲವೆಂಬುದಿಲ್ಲಿ ಮುಖ್ಯ ಅಂಶ.

ಪುರಾಣದ ಪ್ರಕಾರ ಅಹಲ್ಯೆ ಗೌತಮರ ಶಾಪಕ್ಕೆ ಒಳಗಾಗಿರುತ್ತಾಳೆ. ಗೌತಮರು ಒಮ್ಮೆ ಆಶ್ರಮದಲ್ಲಿ ಇಲ್ಲದ ಸಮಯದಲ್ಲಿ ಇಂದ್ರನು ಕಪಟವೇಷದಲ್ಲಿ ಬಂದು ಅಹಲ್ಯೆಯ ಪಾತಿವ್ರತ್ಯವನ್ನು ನಾಶಗೊಳಿಸುತ್ತಾನೆ. ಇದರಿಂದ ಕೋಪಗೊಂಡ ಗೌತಮರು ಅಹಲ್ಯೆ ಮತ್ತು ಇಂದ್ರ ಈ ಇಬ್ಬರಿಗೂ ಶಾಪ ನೀಡುತ್ತಾರೆ. ಅಹಲ್ಯೆಯ ಈ ಶಾಪವು ವಿಮೋಚಿತವಾಗುವುದು ಶ್ರೀರಾಮನ ಪಾದಸ್ಪರ್ಶವಾದ ನಂತರ.

**ಶಬರಿ** : ಶಬರಿ ಮತ್ತು ಶ್ರೀರಾಮರ ಭೇಟಿಯ ಪ್ರಸಂಗ ರಾಮಾಯಣದಲ್ಲಿ ಬಹಳ ಹೃದಯಸ್ಪರ್ಶಿಯಾದುದು. ಭಕ್ತಿ ಮತ್ತು ವಾತ್ಸಲ್ಯದ ಪ್ರತೀಕಳಾದ ಈಕೆಯನ್ನು ಬಹುಮಟ್ಟಿಗೆ ಎಲ್ಲ ಭಕ್ತರೂ ಕೊಂಡಾಡುತ್ತಾರೆ. ತ್ಯಾಗರಾಜರಿಗಂತೂ ಶಬರಿಯ ಭಾಗ್ಯವನ್ನು ವರ್ಣಿಸಲು ಮಾತುಗಳೇ ಸಾಲದು. ಜಗತ್ತಿನಲ್ಲಿ ಶ್ರೇಷ್ಠರೆಷ್ಟೋ ಮಂದಿ ಇದ್ದರೂ, ಅವರಾರಿಗೂ ಲಭ್ಯವಾಗದ ಭಾಗ್ಯ ಪಡೆದ ಮಹಾಭಾಗ್ಯವಂತಳಾದ ಶಬರಿಯನ್ನು ಕುರಿತಂತೆ ಪ್ರತ್ಯೇಕ ಕೃತಿಯೊಂದನ್ನೇ ತ್ಯಾಗರಾಜರು ಹಾಡುತ್ತಾರೆ (ಎಂತನಿನೇ ವರ್ಣಿಂತುನು). ಈ ಪ್ರಕಾರ ಶಬರಿಯು ಶ್ರೀರಾಮನನ್ನು ಕಣ್ಣಾರೆ ಕಂಡಿದ್ದಾಳೆ. ಅದಕ್ಕಿಂತ ಮಿಗಿಲಾಗಿ ಸಿಹಿಯಾದ ಹಣ್ಣುಗಳನ್ನು ತನ್ನಲ್ಲಿಗೆ ಬಂದ ಶ್ರೀರಾಮನಿಗೆ ನೀಡಿದ್ದಾಳೆ. ರಾಮ ಇದನ್ನು ಸ್ವೀಕರಿಸಿದ್ದಾನೆ. ಪುಲಕಿತಳಾದ ಶಬರಿ ಆತನ ಪಾದಗಳಿಗೆರಗಿ ಪುನರ್ಜನ್ಮರಹಿತವಾದ ಮೋಕ್ಷವನ್ನು ಪಡೆದಿದ್ದಾಳೆ. ಈ ಪ್ರಸಂಗವನ್ನು ಸ್ಮರಿಸಿಕೊಂಡು ತ್ಯಾಗರಾಜರು ಸ್ವತಃ ರೋಮಾಂಚಿತರಾಗಿ ಶಬರಿಯ ಅದೃಷ್ಟವನ್ನು ನೆನೆಯುತ್ತಾ ಅದನ್ನು ವರ್ಣಿಸುವಲ್ಲಿ ಮಾತುಗಳು ಸಾಲದೆ ಅಸಮರ್ಥರಾಗಿದ್ದಾರೆ.

ಮೇಲಿನ ಕೃತಿಯಲ್ಲೇ ಅಲ್ಲದೆ ತ್ಯಾಗರಾಜರು ಇನ್ನೂ ಕೆಲವು ರಚನೆಗಳಲ್ಲಿ ಈಕೆಯನ್ನು ಕುರಿತಂತೆ ಹೀಗೆನ್ನುತ್ತಾರೆ.

**ಶಬರಿ ಎಂಗಿಲಿಚ್ಚುನಾ**

(ಅಪ್ಪರಾಮ ಭಕ್ತಿ)

**ಪುರಾಣ ಶಬರಿಯೊಸಗಿನಯಟುನೇ ಭುಜಿಂಚು ಕೊನ್ನ ಶೇಷಮಾ ?**

(ಪರಾಕು ನೀಕೇಲರಾ)

ಮೇಲಿನ ಈ ಎರಡು ಹೇಳಿಕೆಗಳಲ್ಲಿ ಶಬರಿಯ ಪ್ರಸ್ತಾಪವಿರುವುದೇನೋ ಸರಿ. ಆದರೆ ಅದಕ್ಕಿಂತ ಹೆಚ್ಚಾಗಿ ಆಕೆ ತಾನು 'ರುಚಿನೋಡಿದ ಹಣ್ಣುಗಳನ್ನು ಶ್ರೀರಾಮನಿಗೆ ಅರ್ಪಿಸುವುದು' ನಮ್ಮ ಗಮನ ಸೆಳೆಯುವ ಅಂಶವಾಗಿದೆ. 'ಎಂತನಿ' ಕೃತಿಯಲ್ಲಿ ಶಬರಿ ಫಲಗಳನ್ನು ನೀಡುವ ಅಂಶ ಪ್ರಸ್ತಾಪವಾಗಿದೆಯಾದರೂ ಅವು ಆಕೆ ರುಚಿನೋಡಿದ ನಂತರ ಸಮರ್ಪಿಸಿದಳೆಂಬ ನಿಖರತೆ ಇಲ್ಲ. ಆದರೆ ಇನ್ನೆರಡು ಉಲ್ಲೇಖಗಳಲ್ಲಿ ಈ ವಿಷಯ ಸ್ಪಷ್ಟವಾಗಿದೆ. ಇದಕ್ಕೆ ಬಹುಶಃ ಪದ್ಮಪುರಾಣದ ಹಿನ್ನೆಲೆಯಿರಬಹುದು. ಪದ್ಮಪುರಾಣದಲ್ಲಿ ತಾನು ರುಚಿನೋಡಿದ ನಂತರ ಹಣ್ಣನ್ನು ರಾಮನಿಗಿತ್ತುದಾಗಿ ಉಲ್ಲೇಖವಿದೆ.[೩೪]

ಶಬರಿ ಹೀಗೆ ಮಾಡುವುದು ತಾನು ಪ್ರೀತಿಯಿಂದ ಅರ್ಪಿಸಲಿರುವ ಹಣ್ಣುಗಳು ಅರ್ಪಣಯೋಗ್ಯವಾಗಿದೆಯೇ ಎಂದು ತಿಳಿಯುವ ಉದ್ದೇಶದಿಂದ ಮಾತ್ರ. ಇದು ಸರಿ ಅಥವಾ ತಪ್ಪು ಎಂಬುದು ಮುಖ್ಯವಲ್ಲ. ಶಬರಿಯ ತಪೋನಿಷ್ಠೆಯೇ ಇಲ್ಲಿ ಮುಖ್ಯ. ಭಕ್ತಿನಿಷ್ಠೆಯಿಂದ ಅರ್ಪಿಸಿದ ಇಂತಹ ಏನನ್ನೇ ಆದರೂ ದೇವರು ಪ್ರೀತಿಯಿಂದ ಸ್ವೀಕರಿಸುವನೆಂಬ ಭಗವದ್ ವಾಕ್ಯವೇ ಉಂಟು.[೩೫]

ರಾಮಾಯಣದ ಪ್ರಕಾರ ಶಬರಿಯು ದಂಡಕಾರಣ್ಯದಲ್ಲಿ ಪಂಪಾ ಸರೋವರ ತೀರದಲ್ಲಿದ್ದ ಮತಂಗಾಶ್ರಮದಲ್ಲಿರುತ್ತಾಳೆ. ವೃದ್ಧೆಯಾದ ಈಕೆ ಸೀತೆಯನ್ನು ಹುಡುಕುತ್ತಾ ಬಂದ ಶ್ರೀರಾಮನನ್ನು ಉಪಚರಿಸಿ ಸಶರೀರಳಾಗಿಯೇ ಮುಕ್ತಿ ಪಡೆಯುತ್ತಾಳೆ. ಅರಣ್ಯಕಾಂಡದ ಎಪ್ಪತ್ನಾಲ್ಕನೇ ಸರ್ಗದಲ್ಲಿ ಶಬರಿ ವೃತ್ತಾಂತ ಕಾಣಬರುತ್ತದೆ.

**ಸ್ವಯಂಪ್ರಭೆ** : ತ್ಯಾಗರಾಜರು ಎರಡು ರಚನೆಗಳಲ್ಲಿ ಸ್ವಯಂಪ್ರಭೆಯ ವಿಷಯ ಪ್ರಸ್ತಾಪಿಸುತ್ತಾರೆ. ಅವು '**ಅಪ್ಪರಾಮಭಕ್ತಿ:**' ಮತ್ತು '**ಎಂದುಕೀಚಲಮು**'. ತ್ಯಾಗರಾಜರು ಈ ಕೃತಿಗಳಲ್ಲಿ ಸ್ವಯಂಪ್ರಭೆಯ ವಿಷಯವಾಗಿ ಹೀಗೆನ್ನುತ್ತಾರೆ.

**ಅಬಲ ಸ್ವಯಂಪ್ರಭಕು ದೈವಮಚಲಪದವಿ ಇತ್ತುನಾ ?**
(ಅಬಲೆಯಾದ ಸ್ವಯಂಪ್ರಭೆಗೆ ದೈವವು ಅಚಲಪದವಿ ನೀಡಲಾಗುತ್ತಿದ್ದಿತೇ?)
(**ಅಪ್ಪರಾಮಭಕ್ತಿ**)

**ಬಾಲಯೌ ಸ್ವಯಂಪ್ರಭ ಚೆಪ್ಪೆನೋ ?**
(ಬಾಲೆಯಾದ ಸ್ವಯಂಪ್ರಭೆ ಹೇಳಿದಳೇ)
(**ಎಂದುಕೀಚಲಮು**)

ಭಕ್ತಿಯಿಂದ ಅಚಲಪದವಿ ಹೊಂದಿದವರಲ್ಲಿ ಸ್ವಯಂಪ್ರಭೆಯೂ ಒಬ್ಬಳು. ಸೀತಾನ್ವೇಷಕರಾಗಿ ಬಂದ ವಾನರೋತ್ತಮರನ್ನು ಸತ್ಕರಿಸಿದ ತಪಸ್ವಿನಿ ಈಕೆ. ಇವಳ ನಿಷ್ಕಾಮ ಭಕ್ತಿಗೆ ಶ್ರೀರಾಮ ತೃಪ್ತನಾಗಿದ್ದಾನೆ. ಈ ಅಂಶ ತ್ಯಾಗರಾಜರಿಗೆ ತಿಳಿದಿದೆ. ತಮ್ಮ ಹಾಗೂ ಶ್ರೀರಾಮನ ನಡುವೆ ಏರ್ಪಟ್ಟಿದ್ದ ವಿರಹದ ಘಟ್ಟವೊಂದರಲ್ಲಿ ಅವರು ಸ್ವಯಂಪ್ರಭೆಯೇನಾದರೂ ತಮ್ಮ ವಿರುದ್ಧವಾಗಿ ಚಾಡಿ ಮಾತುಗಳನ್ನು ಶ್ರೀರಾಮನಲ್ಲಿ ಹೇಳಿರಬಹುದೇ ಎಂದು ಅನುಮಾನಿಸುತ್ತಾರೆ (ಎಂದುಕೀಚಲಮು).

ಸ್ವಯಂಪ್ರಭೆಯು ರಾಮಾಯಣ, ಮಹಾಭಾರತಗಳೆರಡರಲ್ಲೂ ಪ್ರಸ್ತಾಪಗೊಂಡಿದ್ದಾಳೆ.[೩೬] ಈಕೆ ಶಾಂಡಿಲ್ಯನ ಮಗಳು. ಗುಹೆಯೊಂದರಲ್ಲಿ ವಾಸಮಾಡುತ್ತಿರುತ್ತಾಳೆ. ಹಾರೀತನು ಹೇಳುವ ಎರಡು ವರ್ಗದ ಸ್ತ್ರೀಯರಲ್ಲಿ ಈಕೆ ಬ್ರಹ್ಮವಾದಿನಿಯರ ಗುಂಪಿಗೆ ಸೇರಿದವಳು. ಬ್ರಹ್ಮವಾದಿನಿಯರು ತಮ್ಮ ಇಡೀ ಜೀವಿತವನ್ನು ಬ್ರಹ್ಮಜ್ಞಾನಾರ್ಜನೆಗಾಗಿಯೇ ಮುಡಿಪಾಗಿರಿಸಿದವರು.[೩೭]

**ಶೂರ್ಪಣಖಿ** : ರಾಕ್ಷಸರ ಗುಂಪಿಗೆ ಸೇರಿದ ರಾವಣ, ವಿಭೀಷಣ, ಹಿರಣ್ಯಕಶಿಪು ಮುಂತಾದ ಕೆಲವೇ ಮಂದಿ ರಾಕ್ಷಸರನ್ನು ತ್ಯಾಗರಾಜರು ಪ್ರಸ್ತಾಪಿಸಿದ್ದಾರೆ. ಅದರಲ್ಲೂ ರಾಕ್ಷಸಸ್ತ್ರೀಯರ (ರಾಕ್ಷಸಿಯರ) ಉಲ್ಲೇಖವಂತೂ ಅತಿ ವಿರಳ. ಹಾಗೆ ಪ್ರಸ್ತಾಪಗೊಂಡವರಲ್ಲಿ ಶೂರ್ಪಣಖಿ ಒಬ್ಬಳು. ಒಂದರ್ಥದಲ್ಲಿ ರಾಮಾಯಣ ಕಥೆಗೆ ರಾವಣ ಸಂಹಾರಕ್ಕೆ ಶೂರ್ಪಣಖಿಯೇ ಕಾರಣ ಎನ್ನಬಹುದು. ಈಕೆ ಸೀತಾಲಕ್ಷ್ಮಣರೊಡನಿದ್ದ ರಾಮನನ್ನು ಪಂಚವಟಿಯಲ್ಲಿ ಕಂಡು ಮೋಹಿಸುತ್ತಾಳೆ. ರಾಮನನ್ನು ವಿವಾಹವಾಗಲು ಬಯಸುತ್ತಾಳೆ. ರಾಮ-ಲಕ್ಷ್ಮಣರು ಒಬ್ಬರನ್ನೊಬ್ಬರು ತೋರಿಸುತ್ತಾ ವಿನೋದ ಮಾಡುತ್ತಾರೆ. ಇದರಿಂದ ಕೋಪಗೊಂಡ ರಾಕ್ಷಸಿ, ರಾಮ ತನ್ನನ್ನು ನಿರಾಕರಿಸಲು ಸೀತೆಯೇ ಕಾರಣವೆಂದು ಆಕೆಯನ್ನು ನುಂಗಲು ಮುಂದಾದಾಗ, ರಾಮನಾಜ್ಞೆಯಂತೆ ಲಕ್ಷ್ಮಣನು ಈಕೆಯ ಕಿವಿ, ಮೂಗುಗಳನ್ನು ಕತ್ತರಿಸುತ್ತಾನೆ.[೩೮] ಶೂರ್ಪಣಖಿಯನ್ನು ಶಿಕ್ಷಿಸಿದುದಿಲ್ಲಿ ಪ್ರಸ್ತುತಗೊಂಡಿದ್ದರೂ ರಾಮನನ್ನು ಬಯಸಿ ಬಂದವರಾರೂ ಸಂತೋಷಿಸಲಾಗಲಿಲ್ಲವೆಂಬ ನಿಂದೆಯಿಲ್ಲಿದೆ. ಹೀಗೆ ನಿಂದಾಸ್ತುತಿಯೊಂದರಲ್ಲಿ ತ್ಯಾಗರಾಜರು ಶೂರ್ಪಣಖಿಯ ಪ್ರಸಂಗವನ್ನು ಅಳವಡಿಸಿದ್ದಾರೆ.

**ಆಶಹರಣ ರಕ್ಕಸಿ ಇಷ್ಟಮಡುಗ**
**ಅಪುಡೇ ಮುಕ್ಕುಪೋಯೆ**

(**ಅಡಿಗಿಸುಖಮು**)

**ಕೈಕೇಯಿ** : ಕೈಕೇಯಿಯೆಂದೊಡನೆ ಅಸೂಯಾಪರಳು ಹಾಗೂ ರಾಮನನ್ನು ಕಾಡಿಗೆ ಅಟ್ಟಲು ಕಾರಣಳಾದವಳೆಂದೇ ಪ್ರಸಿದ್ಧಿಯಾಗಿರುವುದು ದುರ್ದೈವವೇ ಸರಿ. ವಾಸ್ತವವಾಗಿ ಈಕೆ ರಾಮನಲ್ಲಿ ಪುತ್ರವಾತ್ಸಲ್ಯ ಹೊಂದಿದ್ದವಳು. ವಸಿಷ್ಠಾದಿಗಳು ಶ್ರೀರಾಮನಿಗೆ ಪಟ್ಟಾಭಿಷೇಕ ನಡೆಸಲಿರುವ ಸುದ್ದಿ ತಂದ ಮಂಥರೆಗೆ ಸಿಹಿವಾರ್ತೆ ತಂದುದಕ್ಕಾಗಿ ಬಳುವಳಿ ನೀಡಿದವಳು.[೩೯] ಆದರೆ ಇದೇ ಕೈಕೇಯಿ ಮುಂದೆ ತನ್ನ ಸ್ವಂತ ಮಗನ ಹಿತ ಬಯಸಿ ರಾಮನ ಅರಣ್ಯವಾಸಕ್ಕೆ ಕಾರಣಳಾಗುವುದು ದೈವದ ಮಾಯೆಯ ಬಲೆಯ ಕಾರಣದಿಂದಷ್ಟೇ. ಹೀಗೆ ಮಾಯೆಯ ಬಲೆಯಲ್ಲಿ ಸೆಳೆದ ದೈವದ ಸಾಮರ್ಥ್ಯವನ್ನು ಸಾರುವಾಗ ತ್ಯಾಗರಾಜರು ಕೈಕೇಯಿಯನ್ನು ಸ್ಮರಿಸುತ್ತಾರೆ.

**ಅಲನಾಡು ವಸಿಷ್ಠಾದುಲು ಪಟ್ಟಮುಗಟ್ಟೇ ಪಲು**
**ಕುಲ ವಿನಿ ವೇಗಮೇ ಭೂಷಣಮುಲ ನೊಸಗಿನ ಕೈಕನು**
. . . . . . . . . . . . . . . **ಮಾಯ**

ವಲವೇಸಿ ತ್ಯಾಗರಾಜ ವರದುಡು ತಾ ಜನಗಲೇದಾ ?"

(ಮನಸಾ ಮನ ಸಾಮರ್ಥ್ಯಮೇಮಿ)

**ದ್ರೌಪದಿ** : ದ್ರೌಪದೀ ರಕ್ಷಣೆಯು ವಿಷ್ಣುಭಕ್ತರೆಲ್ಲರನ್ನೂ ವಿಶೇಷವಾಗಿ ಆಕರ್ಷಿಸಿದೆ. ಸಾಮಾನ್ಯವಾಗಿ ಎಲ್ಲ ಭಕ್ತರೂ ದ್ರೌಪದಿಯ ವಸ್ತ್ರಾಪಹರಣ ಪ್ರಸಂಗವನ್ನು ಸ್ಮರಿಸಿ ದೇವರು ಆರ್ತತ್ರಾಣಪರಾಯಣನೆಂದು ದೈವದ ಹಿರಿಮೆಯನ್ನು ಸಾರುತ್ತಾರೆ. ತ್ಯಾಗರಾಜರು ದ್ರೌಪದೀ ಮಾನಸಂರಕ್ಷಣೆಯ ಎರಡು ಪ್ರಸಂಗಗಳನ್ನು ನೆನೆಸುತ್ತಾರೆ. ಅವೆಂದರೆ ದ್ರೌಪದಿ, ದೂರ್ವಾಸಮುನಿಯ ಕೋಪಕ್ಕೀಡಾಗದೆ ಪಾರಾದುದು ಮತ್ತು ದ್ರೌಪದಿಯ ಮಾನಸಂರಕ್ಷಣೆ.

ಒಕ ಮುನಿಕ್ಕೆ ದ್ರೌಪದಿ ದ್ವಾರಕನಿಲಯಾ ಶರಣನಗ

. . . . . . . . . . . . . . . .

ಹಿತಕರುಡೈ ಬ್ರೋಚಿತಿವೇ

(ಪರಿಯಾಚಕಮಾ)

ಆಶಿಂಚಿ ದೂರ್ವಾಸಮನ್ನಮಡುಗ ಅಪುಡೇ ಮಂದಮಾಯ

(ಅಡಗಿ ಸುಖಮು)

ಗತಿಲೇನಿವೇಳ ದ್ರೌಪದಿ ವೇಗಮೆ ಕೃಷ್ಣಾಯನ
ಅತಿ ಪ್ರೇಮತೋ ವೇಂಚೇಸಿನ

(ರಾಮ ಲೋಭಮೇಲ)

ನಾರೀಮಣಿಕಿ ಚೀರಲಿಚ್ಚಿನದಿ ನಾಡೇ ವಿನ್ನಾನುರಾ

(ಕ್ಷೀರಸಾಗರ ಶಯನ)

ಪುರಾಣ ಪ್ರಕಾರ ಧರ್ಮರಾಜನು ದ್ಯೂತವನ್ನಾಡಿ ರಾಜ್ಯವನ್ನೆಲ್ಲ ಕಳೆದುಕೊಂಡು ದ್ರೌಪದಿಯನ್ನು ಕೌರವರ ಸೊತ್ತಾಗಿ ಮಾಡಿದನು. ದುಶ್ಶಾಸನನು ದ್ರೌಪದಿಯ ವಸ್ತ್ರಾಪಹರಣಕ್ಕೆ ಯತ್ನಿಸಲು ಶ್ರೀಕೃಷ್ಣನು ಆಕೆಯ ಮಾನವನ್ನು ಕಾಪಾಡಿದನು.

ಒಮ್ಮೆ ದುರ್ಯೋಧನನು ದೂರ್ವಾಸ ಮುನಿಯ ಸೇವೆಮಾಡಿ ಮೆಚ್ಚಿಸಿ ದ್ರೌಪದಿಯ ಭೋಜನಾನಂತರ ಪಾಂಡವರ ಆಶ್ರಮಕ್ಕೆ ಹೋಗುವಂತೆ ಕಳುಹಿಸಿದನು. ಅದರಂತೆ ದೂರ್ವಾಸರು ದ್ರೌಪದಿಯೆಡೆಗೆ ಬಂದು ಭಿಕ್ಷೆಯನ್ನು ಕೇಳಿದರು. ದ್ರೌಪದಿಯ ಭೋಜನವೂ ಮುಗಿದಿದ್ದಿತಾಗಿ ಆಕೆಯಲ್ಲಿದ್ದ ಅಕ್ಷಯಪಾತ್ರೆಯಿಂದ ಆಹಾರದ ಉತ್ಪತ್ತಿ ಆಗ ಸಾಧ್ಯವಿರಲಿಲ್ಲ. ಇಂತಹ ಸಂದಿಗ್ಧದ ಸಮಯದಲ್ಲಿ ದ್ರೌಪದಿ ದ್ವಾರಕಾನಿಲಯನನ್ನು ದೀನಳಾಗಿ ಸ್ಮರಿಸಲು ಆತ ತನ್ನ ಮಾಯೆಯಿಂದ ದೂರ್ವಾಸರಿಗೆ ಅಜೀರ್ಣ ಬಾಧೆ ಉಂಟಾಗಿಸಿದ. ಮಹಾಭಾರತದ ಈ ಪ್ರಸಂಗಗಳನ್ನು ತ್ಯಾಗರಾಜರು ಇಲ್ಲಿ ಪ್ರಸ್ತಾಪಿಸಿದ್ದಾರೆ.

**ರಾವಣ** : ರಾವಣನ ದುಷ್ಕೃತ್ಯಗಳಲ್ಲಿ ಪ್ರಧಾನವಾದುದೆಂದರೆ ಆತ ಸೀತೆಗಾಗಿ ಆಶಿಸಿದ್ದು. ಬಹುಶಃ ರಾವಣ ಹೀಗೆ ಮಾಡದಿದ್ದಲ್ಲಿ ರಾಮಾಯಣ ಕಥಾಪ್ರಸಂಗವೇ

ಇರುತ್ತಿರಲಿಲ್ಲವೇನೋ! ಶ್ರೀರಾಮನಿಗೆ ದುಷ್ಟಶಿಕ್ಷೆ ಮಾಡುವ ಅವಕಾಶವೂ ಒದಗು ತ್ತಿರಲಿಲ್ಲ. ಆದರೆ ರಾವಣನ ಈ ತಪ್ಪನ್ನು ತಿದ್ದುವಲ್ಲಿ ಶ್ರೀರಾಮನು ಚತುರೋಪಾಯ ಗಳನ್ನೂ ಅಳವಡಿಸಿದ. ಸಾಮ, ದಾನ, ಭೇದಗಳಿಗೆ ಬಗ್ಗದಿರಲು ಕಡೆಗೆ ರಾವಣನನ್ನು ರಾಮ ಸಂಹರಿಸಿದ. ಈ ಅಂಶವನ್ನು ತ್ಯಾಗರಾಜರು 'ಸರಸಸಾಮದಾನ' ಕೃತಿಯಲ್ಲಿ ಪ್ರಸ್ತಾಪಿಸುವ ಮೂಲಕ ರಾವಣನನ್ನು ಸ್ಮರಿಸಿದ್ದಾರೆ.

ರಾವಣ ಶಿವನ ಪರಮಭಕ್ತನಾಗಿದ್ದರೂ ಪರಸತಿಯನ್ನು ಅಪಹರಿಸುವಂಥ ಕೀಳು ಮಟ್ಟಕ್ಕೇಕೆ ಇಳಿದನೆಂಬ ಪ್ರಶ್ನೆಗೆ ತ್ಯಾಗರಾಜರು ಸೂಕ್ಷ್ಮವಾಗಿ ಉತ್ತರಿಸುತ್ತಾರೆ. 'ಪರಮ ಶಾಂಭವಾಗ್ರೇಸರುಂಡನುಚು ಪಲ್ಕು ರಾವಣುಡು' ಎನ್ನುವಲ್ಲಿ ರಾವಣನು ನಿಜವಾಗಿಯೂ ಶಿವಭಕ್ತನಾಗಿರದೆ ತಾನು ಶಿವಭಕ್ತನೆಂದು ಹೇಳಿಕೊಂಡನೆಂಬುದನ್ನು ಸೂಚ್ಯವಾಗಿ ಹೇಳುತ್ತಾರೆ. ಆತ ನಿಜಭಕ್ತನಾಗಿದ್ದಲ್ಲಿ ಹರಿಯಅವತಾರನಾದ ಶ್ರೀರಾಮನ ಸತಿಯನ್ನು ಆತ ಅಪಹರಿಸುತ್ತಲೇ ಇರಲಿಲ್ಲ. ರಾಮನ ಬೋಧನೆಯನ್ನು ಅರಿಯದೆ ಅಜ್ಞನಾದ ರಾವಣ ತನ್ನ ಹಟಮಾರಿತನದಿಂದ ರಾಮನಿಂದಲೇ ಕಡೆಗೆ ಸಾವನ್ನು ಅಪ್ಪಬೇಕಾಯಿತು.

ಇಲ್ಲಿ ತ್ಯಾಗರಾಜರಿಗೆ ರಾವಣನ ಬಗೆಗೆ ವಿಷಾದವೇ ಹೊರತು ಕ್ರೋಧವಿಲ್ಲ. 'ತೆಲಿಯಲೇಕಪೋಯೆ' ಎಂಬ ಅವರ ಮಾತಿನಲ್ಲಿ ರಾವಣ ದಿಟವನ್ನು ಅರಿಯಲಿಲ್ಲ ವಲ್ಲಾ ಎಂಬ ಖೇದವಿದೆಯೇ ಹೊರತು ವೈರವಿಲ್ಲ.

ಇನ್ನು, ರಾವಣನ ಮೂಲಬಲವನ್ನು ರಾಮನು ನಿರ್ಮೂಲಗೊಳಿಸಿದ ಅಂಶವು ತ್ಯಾಗರಾಜರ ಹಲವು ರಚನೆಗಳಲ್ಲಿ ವ್ಯಕ್ತಗೊಂಡಿವೆ. ಉದಾಹರಣೆಗೆ ಏಲತೆಲಿಯ ಲೇರೋ, ಶರಶರ ಸಮರೈಕಶೂರ, ಮುಂತಾದವು. ಮೂಲಬಲ ಎಂಬುದಕ್ಕೆ ಹದಿ ನಾಲ್ಕು ಸಾವಿರ ಕಂಚಿನ ರಥಗಳೇ ಮೊದಲಾದವೆಂಬ ವಿವರಣೆಯೂ ತ್ಯಾಗರಾಜರ ರಚನೆಯಲ್ಲೇ ಲಭ್ಯವಾಗುತ್ತದೆ. ರಾವಣನ ಮೂಲಬಲ ಎಂಬ ಪ್ರಯೋಗವನ್ನು ಪುರಂದರರಲ್ಲೂ ಕಾಣಬಹುದು (ಅಲ್ಲಿನೋಡಲು ರಾಮ).

**ವಿಭೀಷಣ** : ವಿಭೀಷಣನನ್ನು ಕುರಿತಂತೆ ತ್ಯಾಗರಾಜರ ಉಲ್ಲೇಖಗಳ ದೊಡ್ಡ ಪಟ್ಟಿ ಯೊಂದನ್ನೇ ನಾವು ನೀಡಬಹುದು. ವೈರಿ ಸಹೋದರನಾದ ವಿಭೀಷಣನನ್ನು ಶ್ರೀರಾಮನು ಲಂಕೆಯ ದೊರೆಯಾಗಿಸಿದುದು ವೈಷ್ಣವ ಗ್ರಂಥಗಳಲ್ಲಿ ಪ್ರಧಾನ ವಾದುದು. ಈ ಗ್ರಂಥಗಳು ಶರಣಾಗತಿಯನ್ನು ಬಹು ವಿಸ್ತಾರವಾಗಿ ವರ್ಣಿಸುತ್ತವೆ.

ವಿಭೀಷಣನು ರಾಮನ ಬದ್ಧವೈರಿಯಾದ ರಾವಣನ ಸಹೋದರ. ಆದರೆ ಅಣ್ಣ ತಮ್ಮಂದಿರ ಸ್ವಭಾವಗಳಲ್ಲಿ ಅಜಗಜಾಂತರ. ವಿಭೀಷಣನ ವಿನಯ ಸಂಪನ್ನತೆಗೆ ಮೆಚ್ಚಿ ಆತನನ್ನು ರಾಮ ರಕ್ಷಿಸುತ್ತಾನೆ.

ರಾವಣನ ಬಾಧೆಗಳನ್ನೂ, ನಿಷ್ಠುರವಾಕ್ಯಗಳನ್ನೂ ತಾಳಲಾರದೆ ಶರಣೆಂದ ವಿಭೀ ಷಣನನ್ನು ಕಾಪಾಡಲಿಲ್ಲವೆ ? ವಿಭೀಷಣನನ್ನು ಕನಿಕರದಿಂದ ಕಂಡಂತೆ ತಮ್ಮನ್ನೂ ನೋಡುವುದೆಂದಿಗೆ ಎಂದು ನಿರೀಕ್ಷಿಸುತ್ತಾರೆ, ತ್ಯಾಗರಾಜರು. ಇನ್ನೊಂದೆಡೆ ವಿಭೀ

ಷಣನು ರಾಮನ ದಯೆಗೊಳಗಾದರೂ, ತನ್ನೆಲ್ಲ ಅಪೇಕ್ಷೆಗಳನ್ನು ಆತ ಈಡೇರಿಸಿ ಕೊಳ್ಳಲಾಗಲಿಲ್ಲವೆಂಬ ಮೂಲಕವೂ ವಿಭೀಷಣನನ್ನು ಅವರು ನೆನೆದಿದ್ದಾರೆ.

ಒಕಮಾಟಕು ವಿಭೀಷಣುಡು ಓರ್ವಲೇಕ ಶರಣನಗ

(ಪರಿಯಾಚಕಮಾ)

ಗರ್ವಿಂಚಿನ ಆ ರಾವಣ ಬಾಧಲನೋರ್ವಲೇಕನು ವಿಭೀಷಣುಡು ನಿನ್ನು
ಸರ್ವಲೋಕ ಶರಣ್ಯಾ ವಂದನಮನ ನಿರ್ವಿಕಾರುಡೈ ನೀವು
ಸರ್ವದಾ ರಕ್ಷಿಂಚಿದನನುಚು . . . . . .

(ಎನ್ನಡೋ ರಕ್ಷಿಂಚಿತೇ)

ನಿನ್ನು ವಿಭೀಷಣುಡು ಶರಣನಗಾನೇ

(ರಾಮ ರಘುಕುಲಜಲನಿಧಿಸೋಮ)

ಮುನ್ನು ರಾವಣಬಾಧನೋರ್ವಕ ವಿಭೀಷಣುಡು ಮೊರಪೆಟ್ಟಗಾ

(ಮುನ್ನುರಾವಣ)

ರಾವಣುನಿ ಸೋದರುನಿ ಬ್ರೋವಲೇದಾ ?

(ರಾಮಲೋಭಮೇಲ)

ಮೇಲಿನ ತ್ಯಾಗರಾಜರ ಮಾತುಗಳು ವಿಭೀಷಣನು ರಾವಣನ ಬಾಧೆ ತಾಳಲಾರದೆ ಶರಣಾದುದನ್ನೂ ಆತನ ರಕ್ಷಣೆಯ ಸಂದರ್ಭವನ್ನೂ ತಿಳಿಸುತ್ತವೆ. ಇನ್ನು,

ಸುರಮುನಿ ಜನವೈರಿ ಸಹೋದರುಡನುಚು ಎಂಚಕ
ಲಂಕಾಧಿಪತಿಗ ಜೇಸಿನ . . . . . .

(ರಾಮಾ ರಘುಕುಲಜಲನಿಧಿಸೋಮ)

ನೀಸಮುಖಾನ ರವಿತನಯುಡು ನಿನ್ನು ಬಾಸಲುಬಲ್ಕಗ
ರೋಸಮುತೋ ಸಿಂಹಾಸನಾಧಿಪತಿ ಜೇಸಿನ

(ಮಾನಮುಲೇದಾ)

ಮೇಲಿನ ಎರಡು ಉಲ್ಲೇಖಗಳಲ್ಲಿ ವಿಭೀಷಣನಿಗೆ ಲಂಕಾಧಿಪತ್ಯ ನೀಡಿ ಕಾಪಾಡಿ ದುದೂ.

ಭಾಷತಪ್ಪಕ ವಿಭೀಷಣುನಿಕೊರಕು ಆದಿಶೇಷುಡಗು
ತಮ್ಮುನಿ ಪೋಷಿಂಚಮನಿ

(ಜೇಸಿನದೆಲ್ಲ)

ಎಂಬಲ್ಲಿ ವಿಭೀಷಣನನ್ನು ರಕ್ಷಿಸುವಂತೆ ತಮ್ಮನಾದ ಲಕ್ಷ್ಮಣನಿಗೆ ಆದೇಶಿಸಿದುದೂ ವ್ಯಕ್ತಗೊಂಡಿವೆ. ಇನ್ನೊಂದು ರಚನೆಯಲ್ಲಿ ವಿಭೀಷಣನಿಗೆ ಕೃಪೆದೋರಿದ ಶ್ರೀರಾಮನ ಕಣ್ಣುಗಳನ್ನು ಕಾಣುವುದೆಂದಿಗೋ ಎಂಬ ತವಕದ ಅಭಿವ್ಯಕ್ತಿಯೊಂದಿಗೆ ಮತ್ತೆ ವಿಭೀಷಣ ನನ್ನು ನೆನೆದಿದ್ದಾರೆ (ವಿನಯಮುನನು).

ಹೀಗೆ ಶ್ರೀರಾಮನು ವಿಭೀಷಣನೆಡೆಗೆ ಕೃಪಾಳುವಾಗಿದ್ದರೂ ಅವನ ಸಕಲ ಅಭೀಷ್ಟ

ಗಳನ್ನೂ ರಾಮ ನೆರವೇರಿಸುವುದಿಲ್ಲ. ರಾಮನಿಂದ ಬಯಸಿ ಪಡೆದ ರಂಗನಾಥನನ್ನು ತನ್ನ ಮನೆಗೆ ತೆಗೆದುಕೊಂಡು ಹೋಗಲು ವಿಭೀಷಣನಿಗೆ ಸಾಧ್ಯವಾಗಲಿಲ್ಲ (ಕಳಲ ನೇರ್ಚಿನ). ಈ ಅಂಶವನ್ನು ಪ್ರಸ್ತುತಪಡಿಸುವಾಗ ಮತ್ತೊಮ್ಮೆ ತ್ಯಾಗರಾಜರು ವಿಭೀಷಣನನ್ನು ಸ್ಮರಿಸುತ್ತಾರೆ.

ತ್ಯಾಗರಾಜರಿಗೆ ವಿಭೀಷಣನಲ್ಲಿ ವಿಶೇಷ ಆಸಕ್ತಿಯಿದ್ದಿರಬಹುದು. ಏಕೆಂದರೆ ಮೂಲತಃ ವಿಭೀಷಣ ರಾಕ್ಷಸ ಸೋದರ. ಕ್ಷುದ್ರ ಪರಿಸರದಲ್ಲಿದ್ದರೂ, ಈತ ಧರ್ಮ ಮಾರ್ಗದಲ್ಲೇ ನಡೆಯುತ್ತಿದ್ದವನು. ಅಪಹೃತಳಾಗಿದ್ದ ಸೀತೆಯನ್ನು ಹಿಂತಿರುಗಿಸುವಂತೆ, ಅಣ್ಣನೂ ರಾಜನೂ ಆಗಿದ್ದ ರಾವಣನಿಗೆ ಮಂತ್ರಿಯಾಗಿ, ತಮ್ಮನಾಗಿ ಬುದ್ಧಿ ಮಾತುಗಳನ್ನೀತ ಹೇಳುತ್ತಾನೆ. ಪರಸ್ತ್ರೀ ವ್ಯಾಮೋಹ ಮಹಾಪಾಪ. ಇದು ಸಲ್ಲದೆನ್ನುತ್ತಾನೆ. ಆದರೆ ದುಷ್ಟ ರಾವಣ ವಿಭೀಷಣನ ಮಾತುಗಳನ್ನು ತಿರಸ್ಕರಿಸುತ್ತಾನೆ. ಅಧರ್ಮ ಕಾರ್ಯಗಳಿಗೆ ಮುನ್ನುಗ್ಗುತ್ತಾನೆ. ಇದರಿಂದ ಬೇಸರಿಸಿ ವಿಭೀಷಣ ಆತನ ಸಂಗವನ್ನೇ ತ್ಯಜಿಸಿ ಧರ್ಮಿಷ್ಠನಾದ ಶ್ರೀರಾಮನಲ್ಲಿ ಬಂದು ಶರಣಾಗುತ್ತಾನೆ.[೪೦] ಈ ಹಿನ್ನೆಲೆ ಹೊಂದಿದ್ದ ವಿಭೀಷಣನ ಧರ್ಮಪ್ರಜ್ಞೆ ಹಾಗೂ ನೀತಿ ಮಾರ್ಗ ತ್ಯಾಗರಾಜರನ್ನು ವಿಶೇಷವಾಗಿ ಆಕರ್ಷಿಸಿದೆಯೆಂದರೆ ತಪ್ಪಾಗದು.

**ಕಾಕಾಸುರ** : ಶರಣಾಗತಿ ಸಿದ್ಧಾಂತದ ಹಿನ್ನೆಲೆಯಲ್ಲಿ ಕಾಕಾಸುರನದೊಂದು ಮುಖ್ಯವಾದ ಪ್ರಸಂಗ. ಪೌರಾಣಿಕವಾಗಿ ಕಾಕಾಸುರನು ಸೀತೆಯನ್ನು ಹಿಂಸಿಸಿ ಅವಮಾನಗೊಳಿಸುತ್ತಾನೆ. ಇದರಿಂದ ಕೋಪಗೊಂಡ ಶ್ರೀರಾಮ ತೃಣವೊಂದನ್ನು ಕಂಜಜಾಸ್ತ್ರವಾಗಿ (ಬ್ರಹ್ಮಾಸ್ತ್ರ) ಪರಿವರ್ತಿಸಿ ಕಾಕಾಸುರನ ಮೇಲೆ ಪ್ರಯೋಗಿಸುತ್ತಾನೆ. ಈ ಪ್ರಸಂಗ ತ್ಯಾಗರಾಜರಲ್ಲಿ ಹೀಗೆ ಅಡಕಗೊಂಡಿದೆ.

**ಕಾಕದೈತ್ಯುನೇಕ ಶರಮುನನೇಯ**
**ಕಂಜಜಾಸ್ತ್ರಮ್ಮೆ ಬರಗಲೇದಾ ?** **(ಶ್ರೀಕಾಂತ ನೀಯೆಡ)**

ಅನಂತರ ಕಾಕಾಸುರ ರಾಮನ ಅಸ್ತ್ರಕ್ಕೆ ತನ್ನ ಬಲಗಣ್ಣನ್ನು ಬಲಿನೀಡಿ ಆತನಲ್ಲಿ ಮೊರೆಹೋಗಿದ್ದಾನೆ. ಈ ಪ್ರಸಂಗ ರಾಮಾಯಣದಲ್ಲಿ ಕಾಣಬರುತ್ತದೆ.[೪೧]

**ಗುಹ** : ತ್ಯಾಗರಾಜರು ಶ್ರೀರಾಮನ ಹಿರಿಮೆಯನ್ನು ಹಾಡಿರುವುದನ್ನು ಈಗಾಗಲೇ ನೋಡಿದ್ದೇವೆ. ಪರಮಶ್ರೇಷ್ಠನಾದ ರಾಮನಿಗೆ ಪರಮಶ್ರೇಷ್ಠವಾದುದನ್ನೇ ಸಮರ್ಪಣೆ ಮಾಡಿದ ತೃಪ್ತಿ ಅವರಿಗಿದೆ. ಆದರೆ ಹರಿಕರುಣೆ ತಮ್ಮೆಡೆಗೆ ಹರಿಯಲಿಲ್ಲವೆಂಬ ವಿರಹದ ಘಟ್ಟವೊಂದರಲ್ಲಿ ದೀನರಾಗಿ ಹಾಡುವಾಗಷ್ಟೇ ಗುಹನನ್ನು ಅವರು ಪ್ರಸ್ತಾಪಿಸುವುದು. 'ಗುಹನಂತೆ ನಾನು ನಿನಗೆ ಪತ್ರತಲ್ಪವನ್ನಿತ್ತೇನೇನು?' ಎಂದವರು ರೋಷದಿಂದ ಪ್ರಶ್ನಿಸುತ್ತಾರೆ.

**ಧರಾತಲಮುನ ಗುಹುನಿವಲೆ ಪತ್ರತಲ್ಪ ಮೊನರ್ಚತಿನಾ ?** **(ಪರಾಕುನೀಕೇಲರಾ)**

ರಾಮಾಯಣ ಪ್ರಕಾರ ಶ್ರೀರಾಮನು ವನವಾಸ ಕೈಗೊಂಡಾಗ ಗುಹನನ್ನು ಸಂಧಿಸು

ತ್ತಾನೆ. ರಾಮಲಕ್ಷ್ಮಣರನ್ನು ಗಂಗಾನದಿಯನ್ನು ದಾಟಿಸಿದ ಬೇಡರ ದೊರೆ ಈತ. ತನ್ನ ಭಕ್ತಿ ಪ್ರೀತಿಗಳಿಂದ ರಾಮನನ್ನು ಸತ್ಕರಿಸುವಾಗ ಪತ್ರಶಯ್ಯೆಯನ್ನು ಒದಗಿಸುತ್ತಾನೆ.[೪೨]

**ಲವಕುಶರು** : ಕುಶಲವ ಜನಕನಾದ ರಾಮನಿಗೆ ತಮ್ಮಲ್ಲಿ ಅಭಿಮಾನವಿಲ್ಲವಾಯಿತೆ? ರಾಮನು ಸಂಗೀತಜ್ಞನೂ, ಸಂಗೀತಪ್ರಿಯನೂ ಹೌದು. ತಾವಾದರೋ ನಾದೋಪಾಸಕರು. ಕುಶಲವರು ರಾಮನಿಗೆ ಮಕ್ಕಳೂ, ಗಾಯಕರೂ ಆದ ಕಾರಣದಿಂದ ಅವರೆಡೆ ಶ್ರೀರಾಮನಿಗೆ ವಿಶೇಷ ಪ್ರೀತಿ. ಹೀಗೆಯೇ ತಾವೂ ರಾಮನನ್ನೇ ತಂದೆಯಾಗಿ ಭಾವಿಸಿದವರು ಹಾಗೂ ಗಾಯಕರು. ಆದ್ದರಿಂದ ಲವಕುಶರ ಬಗ್ಗೆ ತೋರುವಂತೆಯೇ ತಮ್ಮಲ್ಲೂ ಪ್ರೀತಿ ತಳೆಯಬೇಕೆಂದು ಪ್ರಾರ್ಥಿಸುವಾಗ ಲವಕುಶರನ್ನು ತ್ಯಾಗರಾಜರು ಪ್ರಸ್ತಾಪಿಸುತ್ತಾರೆ (ಮಾನಮುಲೇದು).

**ಗರುಡ** : ತ್ಯಾಗರಾಜರ ಮಾತಿನಲ್ಲೇ ಹೇಳುವುದಾದರೆ 'ವಿಷ್ಣುಚರಣ ಭಕ್ತರಲ್ಲಿ ಕೀರ್ತಿಪಡೆದ ಭಾಗ್ಯಶಾಲಿ ಗರುಡ'. ಹೀಗೆಂದೇ ಅವರು ಪ್ರಹ್ಲಾದ ಭಕ್ತಿವಿಜಯದಲ್ಲಿ ಆತನನ್ನು ಕೀರ್ತಿಸುತ್ತಾರೆ. ಅಲ್ಲದೆ ಆತನಂತೆ ದಾಸ್ಯ ಭಕ್ತಿಯನ್ನು ತಮಗೆ ಅನುಗ್ರಹಿಸುವಂತೆಯೂ ಪ್ರಾರ್ಥಿಸುತ್ತಾರೆ.

**(ಅ) ಕೃಷ್ಣ ಚರಣಭಕ್ತುಲಲೋ ಕೀರ್ತಿಗಲ್ಗು ಭಾಗ್ಯಶಾಲಿ**

**(ಆ) ಸುಪರ್ಣುನಿವಲೆ ಭಕ್ತಿನಿಮ್ಮು ಪದಿಮಾರುಲಕುನ್**[೪೩]

ಪುರಾಣ ಪ್ರಕಾರ ಗರುಡ, ಕಶ್ಯಪಮುನಿ ಮತ್ತು ವಿನತೆಯರ ಮಗ. ಈತನ ಸಾಮರ್ಥ್ಯವನ್ನು ಕಂಡು ವಿಷ್ಣುವು ಈತನಿಗೆ ಸುಪರ್ಣನೆಂದು ಹೆಸರಿಟ್ಟು ತನ್ನ ವಾಹನವನ್ನಾಗಿ ಮಾಡಿಕೊಳ್ಳುತ್ತಾನೆ.[೪೪]

**ಪ್ರಹ್ಲಾದ** : ತ್ಯಾಗರಾಜರಿಗೆ ಭಕ್ತಿ ಮತ್ತು ವೈರಾಗ್ಯಗಳಲ್ಲಿ ಪ್ರಹ್ಲಾದನೇ ಆದರ್ಶ. ಅವರು ತಮ್ಮನ್ನು ಪ್ರಹ್ಲಾದನ ಸ್ಥಾನದಲ್ಲೇ ಭಾವಿಸಿಕೊಳ್ಳುತ್ತಾರೆ. ರಾಜಕುಮಾರನಾಗಿ ಸಕಲ ಸಂಪದ್ಭೋಗಗಳನ್ನು ಅನುಭವಿಸಬಹುದಾಗಿದ್ದರೂ ಅವೆಲ್ಲವನ್ನೂ ತಿರಸ್ಕರಿಸಿ ಹರಿಯಲ್ಲೆ ತನ್ನ ಮನಸ್ಸನ್ನು ನಿಲ್ಲಿಸಿ, ಆತನ ಕೃಪೆಗೆ ಪಾತ್ರನಾದುದು ತ್ಯಾಗರಾಜರ ಮನಸ್ಸನ್ನು ಸೆಳೆದಿದೆ. ಹರಿ ತಾನಾಗಿ ನೀಡುವೆನೆಂದ ಯಾವುದೇ ಲೌಕಿಕ ವರಗಳನ್ನೂ ಸ್ವೀಕರಿಸದ ಪ್ರಹ್ಲಾದನ ಭಕ್ತಿ, ವಿಜಯ ಸಾಧಿಸಿದುದನ್ನು ಕುರಿತು ವಿಸ್ತಾರವಾದ ಗೀತ ನಾಟಕವೊಂದನ್ನೇ ಅವರು ರಚಿಸಿದ್ದಾರೆ.

ಭಾಗವತದಲ್ಲಿ ಪ್ರಹ್ಲಾದನು ಭಗವಂತನಿಗೆ ಹೀಗೆ ಹೇಳುತ್ತಾನೆ. 'ನನ್ನನ್ನು ವರಗಳಿಂದ ಪ್ರಲೋಭನೆಗೆ ಒಳಪಡಿಸಬೇಡ. ನಾನು ಮುಕ್ತಿಗೆಂದು ನಿನ್ನನ್ನು ಆಶ್ರಯಿಸಿದವನು. ಯಾರು ನಿನ್ನಿಂದ (ಲೌಕಿಕ) ವರಗಳನ್ನು ಬಯಸುವರೋ ಅವರು ನಿನ್ನ ಭೃತ್ಯರಲ್ಲ, ವ್ಯಾಪಾರಿಗಳು (ವಣಿಕರು)'.[೪೫] ತ್ಯಾಗರಾಜರ ರಚನೆಗಳಲ್ಲಿ ಕಾಣಬರುವಂತೆ ಪ್ರಹ್ಲಾದನ ಪ್ರಸ್ತಾಪವೆಂದರೆ,

**ಅಲನಾಡು ಕನಕಕಶಿಪು ನಿಂಡಾರು**

**ಚಲಮು ಜೇಸಿ ಸುತುನಿ ಸಕಲ**

**ಬಾಧಲ ಪೆಟ್ಟಗ ಮದಿನಿ ತಾಳಕ**
**ನಿಶ್ಚಲುಡೈನ ಪ್ರಹ್ಲಾದುಕೊರಕು ಕಂಬಮು**
**ಲೋಪಲ ನುಂಡಗಲೇದಾ ?** (ಎಂದುದಾಗಿನಾಡೋ)

**ಪ್ರಹ್ಲಾದುಡು ಜಾಲಿಚೇ ಶರಣನಗ ಹಿತಕರುಂಡೈ ಬ್ರೋಚಿತಿವೇ**
(ಪರಿಯಾಚಕಮಾ)

**ಸುರರಿಪು ತನಯುನಿಕೈ ನರಮೃಗಮೌ ಸೂಚನಲೇಮಯ್ಯಾ ?** (ಮರಿಮರಿನಿನ್ನೇ)

**ಶಾಂಭವುಡೌ ದಾನವ ಸುತುನಿ ಗಾಚಿನಾವು** (ಸಂದೇಹಮುಏಲ)

**ಮುನು ಹೇಮಕಶಿಪು ಬಾದ ಸಹಿಂಪಲೇಕ**
**ಮುರಹರೀಯೆನ ರಾಮಚಂದ್ರ**
**ಚನುವುತೋ ಪ್ರಹ್ಲಾದು ಸಂತಾಪಮುನು ದೀರ್ಚಿ**
**ಸೌಖ್ಯಮೊಸಗಿನ ರಾಮಚಂದ್ರ** (ಮುನ್ನುರಾವಣ)

**ಅಲನಾಡು ನಿರ್ಜರವೈರಿ ಬಾಲುನಿ ಜೂಚಿ ಬ್ರೋಚಿತಿವಿಗಾನಿ** (ದರಿದಾಪುಲೇಕ)

ಮೇಲಿನ ಈ ಸಾಲುಗಳಲ್ಲಿ ತ್ಯಾಗರಾಜರು ಪ್ರಹ್ಲಾದನ ಚಿರಪರಿಚಿತವಾದ ಕಥೆಯ ಅಂಶವನ್ನೇ ನುಡಿದಿರುವುದು.

ಪೌರಾಣಿಕವಾಗಿ ಪ್ರಹ್ಲಾದನ ತಂದೆ ಕನಕಕಶಿಪು ಹರಿದ್ವೇಷಿ. ಮಗ ಹರಿಯ ಪರಮಭಕ್ತ. ಹರಿಯನ್ನು ದ್ವೇಷಿಸುವಂತೆ ತಂದೆ ಮಗನಿಗೆ ಆದೇಶ ನೀಡುತ್ತಾನೆ. ಆದರೆ ಮಗ ಹರಿಧ್ಯಾನದಿಂದ ವಿಮುಖನಾಗುವುದಿಲ್ಲ. ಕೋಪಗೊಂಡ ಹೇಮಕಶಿಪು ಪ್ರಹ್ಲಾದನನ್ನು ಹಿಂಸಿಸಿ, ಆತನನ್ನು ಸತ್ವಪರೀಕ್ಷೆಗೆ ಒಳಪಡಿಸುತ್ತಾನೆ. ನಿಶ್ಚಲ ಭಕ್ತಿಯಿಂದ ಪ್ರಹ್ಲಾದ ಹರಿಯನ್ನು ಕರೆಯಲು ಕಂಬದಿಂದ ನರ-ಮೃಗ ರೂಪದಲ್ಲಿ ಬಂದು (ನಾರಸಿಂಹ), ನಿರಂತರ ಸುಖವನ್ನು ಪ್ರಹ್ಲಾದನಿಗೆ ನೀಡುತ್ತಾನೆ. ಪ್ರಹ್ಲಾದನ ಕಥೆ ಭಾಗವತದ ಸಪ್ತಮ ಸ್ಕಂದದಲ್ಲಿ ಬರುತ್ತದೆ.

ಅಂತರ್ಯದಿಂದಲೇ ಹರಿಯನ್ನು ನಂಬಿದವರಿಗೆ ಶಾಶ್ವತಸುಖವನ್ನು ಹರಿ ನೀಡುವ ನೆಂಬುದಕ್ಕೆ ಪ್ರಹ್ಲಾದನೇ ಸಾಕ್ಷಿಯೆಂದು ಮತ್ತೊಂದು ರಚನೆಯಲ್ಲೂ (ವರಾಲಂದು ಕೊಮ್ಮನಿ) ತ್ಯಾಗರಾಜರು ನುಡಿದಿದ್ದಾರೆ. ಹೀಗೆ ತ್ಯಾಗರಾಜರು ಪದೇಪದೇ ಪ್ರಹ್ಲಾದ ನನ್ನು ಸ್ಮರಿಸಿರುವುದು ಅವರಿಗೆ ಪ್ರಹ್ಲಾದನೆಡೆಗೆ ಇದ್ದ ಒಲವನ್ನು ತೋರುತ್ತದೆ.

**ಗಜೇಂದ್ರ** : ಭಾಗವತದ ಅಷ್ಟಮ ಸ್ಕಂದದಲ್ಲಿ ಬರುವ ಗಜೇಂದ್ರ ಮೋಕ್ಷದ ಪ್ರಸ್ತಾಪ ತ್ಯಾಗರಾಜರಲ್ಲಿ ಧಾರಾಳವಾಗಿ ಉಲ್ಲೇಖಗೊಂಡಿದೆ. ಪಾಂಡ್ಯದೇಶದ ಅರಸ ಇಂದ್ರದ್ಯುಮ್ನ ಅಗಸ್ತ್ಯ ಮಹರ್ಷಿಯ ಶಾಪದಿಂದ ಗಜೇಂದ್ರನಾಗಿರುತ್ತಾನೆ. ವಾಸ್ತವೆ ವಾಗಿ ಈತ ವಿಷ್ಣು ಭಕ್ತ. ತನ್ನಲ್ಲಿಗೆ ಬಂದ ಅಗಸ್ತ್ಯನನ್ನು ಗೌರವಿಸದಿದ್ದುದರಿಂದ ಆತನ ಶಾಪಕ್ಕೆ ಒಳಗಾಗಿರುತ್ತಾನೆ. ಗಜರೂಪದಲ್ಲಿ ಒಮ್ಮೆ ಈತ ಕೊಳವೊಂದರಲ್ಲಿ ನೀರು

ಕುಡಿಯುತ್ತಿದ್ದಾಗ ಮೊಸಳೆಯೊಂದು ಈತನ ಕಾಲ್ಗಳನ್ನು ಬಲವಾಗಿ ಹಿಡಿದು ಹಿಂಸಿಸುತ್ತದೆ. ಇಂದ್ರದ್ಯುಮ್ನ ಪೂರ್ವಜನ್ಮ ಸಂಸ್ಕಾರದಿಂದ ವಿಷ್ಣುಸ್ಮರಣೆ ಮಾಡಲು, ಹರಿ ಪ್ರತ್ಯಕ್ಷನಾಗಿ ಮೊಸಳೆಯನ್ನು ಕೊಂದು ಈತನನ್ನು ರಕ್ಷಿಸುತ್ತಾನೆ. ಗಾಂಧರ್ವ ಶ್ರೇಷ್ಠನಾಗಿದ್ದ 'ಹೂಹೂ' ದೇವಲ ಮುನಿಯ ಶಾಪದಿಂದ ಮೊಸಳೆಯಾಗಿರುತ್ತಾನೆ. ಗಜೇಂದ್ರಮೋಕ್ಷವಾದ ಕೂಡಲೇ ಗಾಂಧರ್ವನೂ ಶಾಪಮುಕ್ತನಾಗಿ ಸುಂದರ ರೂಪ ತಾಳುತ್ತಾನೆ. ಇದು ಭಾಗವತದ ಕಥೆ.[೬೬] ಹೀಗೆ ಇಂದ್ರದ್ಯುಮ್ನ ಮತ್ತು ಹೂಹೂಗಳಿಬ್ಬರೂ ಶಾಪಹೊಂದಿದ್ದು ನಂತರ ಶಾಪವಿಮುಕ್ತರಾಗುತ್ತಾರೆ.

ತ್ಯಾಗರಾಜರು ಶ್ರೀರಾಮನನ್ನು ಕರಿವರದ (ಆನೆಗೆ ವರ ನೀಡಿದ), ಕರಿನಿ ಗಾಚಿನ (ಆನೆಯನ್ನು ರಕ್ಷಿಸಿದ), ಪರಿಪಾಲಿತೇಭ (ಆನೆಯನ್ನು ಪರಿಪಾಲಿಸಿದ), ಮತ್ತವಾರಣಶರಣ (ಮದಿಸಿದ ಆನೆಯ ಶರಣಾಗತಿ ಪಡೆದ), ಗಜರಕ್ಷಕ ಮುಂತಾಗಿ ಸಂಬೋಧಿಸುವ ಮೂಲಕ ಗಜೇಂದ್ರ ಮೋಕ್ಷವನ್ನು ಸ್ಮರಿಸಿದರೆ, ಮತ್ತೆ ಕೆಲವು ರಚನೆಗಳಲ್ಲಿ ಕೆಲವು ಸಾಲುಗಳ ಮೂಲಕವೇ ಇದೇ ವೃತ್ತಾಂತವನ್ನು ಪ್ರತಿಪಾದಿಸುತ್ತಾರೆ.

**ಗಜೇಂದ್ರುನಿ ಸಂರಕ್ಷಿಂಚಿನ**

(ಗಜೇಂದ್ರನನ್ನು ಸಂರಕ್ಷಿಸಿದ)

(ಜಯಮಂಗಳಂ)

**ಕರಿರಾಜುನಿ ಗಾಚಿತಿವನಿ ಘನ ಸುರುಲೆಲ್ಲರು ಪೊಗಡ**

(ಕರಿರಾಜನನ್ನು ರಕ್ಷಿಸಿದೆಯೆಂದು ದೇವತೆಗಳೆಲ್ಲ ಸ್ತುತಿಸಲು)

(ಸಂದೇಹಮುಏಲ)

**ವಾರಣ ರಾಜುನು ಬ್ರೋವನು ವೇಗಮೆ ವಚ್ಚಿನದಿ ವಿನ್ನಾನುರಾ**

(ವಾರಣ ರಾಜನನ್ನು ರಕ್ಷಿಸಲು ಶೀಘ್ರವಾಗಿ ಬಂದುದನ್ನು ಕೇಳಿದ್ದೇನೆ)

(ಕ್ಷೀರಸಾಗರಶಯನ)

**ಕರಿಮೊರವಿನಿ ಸರಗುನ ಚನ ನೀಕು ಕಾರಣಮೇಮಿ ?**

(ಕರಿಮೊರೆಯನ್ನು ಕೇಳಿ ನೀನು ಹೊರಡಲು ಕಾರಣವೇನು ?)(ಮರಿಮರಿನಿನ್ನೇ)

**ಇಭರಾಜೇಂದ್ರುಡು ಯೆಕ್ಕುವೈನ ಲಂಚಮಿಚ್ಚಿನದೇಮಿರಾ ?**

(ಇಭರಾಜೇಂದ್ರನು ನಿನಗೇನಾದರೂ ವಿಶೇಷವಾದ ಲಂಚವಿತ್ತನೇ ?)

(ನಾಮೊರಲನುವಿನಿ)

**ಕರಿರಾಜು ತೆಲಿಯಲೇಕ ಬಲುಡೈನ ಮಕರಿಚೇತ ಘಾಸಿಚೆಂದಗ**
**ಅರಲೇಕ ನಿಜಮುನ ಆದಿಮೂಲಮನಗ**
**ವರದುಡು ವೇಗಮೆ ವಚ್ಚಿ ಬ್ರೋವಗಲೇದಾ ?**

(ಕರಿರಾಜನು ಬಲವಾದ ಮೊಸಳೆಯಿಂದ ಪೀಡಿತನಾಗಿ 'ಆದಿಮೂಲ' ಎನ್ನಲು, ವರದನೆ, ಕೂಡಲೇ ಬಂದು ಕಾಪಾಡಲಿಲ್ಲವೇ ?)

(ಈಮೇನುಗಲಿಗಿನಂದುಕು)

'ಈಮೇನು' ಕೃತಿಯಲ್ಲೇ ತ್ಯಾಗರಾಜರು ತಾಪಸಿಯ ಶಾಪದಿಂದ ಜಲೋರಗವಾಗಿದ್ದ ಜೀವಿಯೊಂದು ಶ್ರೀರಾಮನಾಮ ಶ್ರವಣದಿಂದ ರಕ್ಷಿಸಲ್ಪಟ್ಟುದನ್ನೂ ಹೇಳಿ ನಮ್ಮ ಗಮನವನ್ನು ಸೆಳೆಯುತ್ತಾರೆ.

**ತಾಪಸಿ ಶಾಪಮಿಡಗಾ ಜಲೋರಗ ರೂಪಮುಗೊನಿಯುಂಡಗಾ**
**ತಾಪಮು ಸೈರಿಂಚಕ ತಲ್ಲಡಿಲ್ಲಗ ಶರಭಾಪಧರುನಿ ನಾಮ**
**ಶ್ರವಣಮು ಬ್ರೋವಲೇದಾ ?**

**(ಈಮೇನು)**

ಜಲೋರಗದ ಪ್ರಸಂಗದಲ್ಲಿ ಅಭಿಪ್ರಾಯ ಭೇದಗಳು ಕಾಣಬರುತ್ತವೆ. ಅಪ್ಸರೆಯೊಬ್ಬಳು ಮೊಸಳೆಯಾಗಿ ತಾಪವನ್ನು ಅನುಭವಿಸುತ್ತಿರುವಾಗ ಆಂಜನೇಯನು ರಾಮನಾಮ ಪಠನೆಯ ಮೂಲಕ ಆಕೆಯನ್ನು ಶಾಪವಿಮುಕ್ತಳನ್ನಾಗಿಸಿದ ಎಂಬುದು ಒಂದು ವಿವರಣೆ.[೪೭] ಈ ವಿವರಣೆ ಮತ್ತು ಸಾಹಿತ್ಯವನ್ನು ಹೋಲಿಸಿದಾಗ ಅಪ್ಸರೆ ಹಾಗೂ ಹನುಮಂತರ ಪ್ರಸ್ತಾಪವಿಲ್ಲಿ ಕಾಣಬರುವುದಿಲ್ಲ.

ಎರಡನೆ ವಿವರಣೆಯ ಪ್ರಕಾರ ಮಹಾರಾಜನೊಬ್ಬ ಮುನಿಶಾಪದಿಂದ ಜಿಗಣೆಯಾಗಿದ್ದು ರಾಮನಾಮ ಶ್ರವಣದಿಂದ ವಿಮುಕ್ತನಾಗುತ್ತಾನೆ. ಇಲ್ಲಿ ಗಮನಸೆಳೆವ ಅಂಶವೆಂದರೆ ಶಾಪಗ್ರಸ್ತನಾಗಿದ್ದುದು ಮಹಾರಾಜ ಮತ್ತು ಆತ ಜಿಗಣೆಯ ರೂಪದಲ್ಲಿದ್ದುದು.[೪೮] ರಾಮನಾಮ ಶ್ರವಣ ಮಾಡಿಸಿದುದು ಈ ವಿವರಣೆಯ ಪ್ರಕಾರ ಆಂಜನೇಯನಲ್ಲ. ಈ ಕಾರ್ಯ ನಿರ್ವಹಿಸಿದವರಾರೆಂದು ಹೇಳುವುದಿಲ್ಲ.

ಇನ್ನು ಮೂರನೆಯ ವಿವರಣೆಯಂತೆ ಋಷಿಯಿಂದ ಶಾಪಗ್ರಸ್ತನಾದವನು ಒಬ್ಬ ದುಷ್ಟ. ಈತ ಜಂಗರೂಪದಲ್ಲಿದ್ದವನು.[೪೯] ಇಲ್ಲಿಯೂ ರಾಮನಾಮ ಶ್ರವಣ ಮಾಡಿಸಿದವರ ಬಗೆಗೆ ಸ್ಪಷ್ಟವಿಲ್ಲ.

ಹೀಗೆ ಶಾಪಗ್ರಸ್ತನನ್ನು ಒಂದೆಡೆ ಅಪ್ಸರೆಯೆಂದೂ, ಇನ್ನೊಂದೆಡೆ ಮಹಾರಾಜನೆಂದೂ, ಮತ್ತೊಂದೆಡೆ ದುಷ್ಟನೆಂದೂ ಹೇಳಲಾಗಿದೆ. ಆದರೆ ಭಾಗವತದ ಪ್ರಕಾರ ಜಲೋರಗವಾಗಿ (ಮೊಸಳೆಯಾಗಿ) ಇದ್ದವನು ಹೂಹೂ ಎಂಬ ಗಂಧರ್ವ. ಈತನಿಗೆ ಶಾಪ ನೀಡಿದ್ದವನು ದೇವಲಮುನಿ. ಭಾಗವತದಲ್ಲಿ ಗಜೇಂದ್ರ ಮೋಕ್ಷದ ನಂತರ ಮೊಸಳೆಯೂ ಶಾಪವಿಮುಕ್ತವಾದುದನ್ನು ಬಣ್ಣಿಸಿದ್ದರೆ ತ್ಯಾಗರಾಜರು ಮೊದಲ ಚರಣದಲ್ಲಿ ಜಲೋರಗದ ವಿಮುಕ್ತಿಯನ್ನು ಚಿತ್ತರಿಸಿ, ಅನಂತರ ಗಜೇಂದ್ರನ ಮೋಕ್ಷವನ್ನು ಹೇಳುತ್ತಾರೆ. ಕನಕದಾಸರ ರಚನೆಯೊಂದರಲ್ಲೂ (ಶ್ರೀನಾಥ ಪಾರ್ವತೀನಾಥ ಶರಣೆಂಬೆ ಎಂಬ ೫೩ ನುಡಿಗಳುಳ್ಳ ದೀರ್ಘ ಕೃತಿಯೊಂದರಲ್ಲಿ) ಗಜೇಂದ್ರ ಮೋಕ್ಷದ ನಂತರವೇ ಮಕರಿಯ ಶಾಪವಿಮೋಚನೆಯನ್ನು ಪ್ರಸ್ತುತಪಡಿಸಲಾಗಿದೆ ಎಂಬುದನ್ನಿಲ್ಲಿ ಸ್ಮರಿಸಬಹುದು.[೫೦]

**ವಾಲಿ ಸುಗ್ರೀವರು** : ತ್ಯಾಗರಾಜರು, ಸಹೋದರರಾದ ವಾಲಿ, ಸುಗ್ರೀವರ ವಿಷಯ

ವನ್ನು ಕೆಳಗಿನ ಸಾಲುಗಳಲ್ಲಿ ಹೀಗೆ ಮತ್ತೆಮತ್ತೆ ನೆನೆಯುತ್ತಾರೆ.

**ಬಾಧಲ ನೋರ್ವಜಾಲಕನು ಇನಜುಂಡು ನಿನು ರಾಮಚಂದ್ರ**
**ಕೊನಿಯಾಡ ಪರಿತಾಪಮುಜೂಚಿ ವಾನಿ ಮದಿಕೊರವ ದೀರ್ಚಿನ**
(ಬಾಧೆ ತಾಳಲಾರದೆ ನಿನ್ನನ್ನು ಸ್ತುತಿಸುತ್ತ ಬಂದ ಸುಗ್ರೀವನ
ಪರಿತಾಪವನ್ನು ಪರಿಹರಿಸಿದ)

(ಮುನ್ನುರಾವಣ)

**ನಾಡು ಪಾಲುಮಾಲಕ ರವಿಬಾಲುನಿ ಚೆಲಿಮಿನಿ**
(ಪಾಲುಮಾಲಿಕೆಯಿಲ್ಲದೆ ಸುಗ್ರೀವನ ಸ್ನೇಹಮಾಡಿದ)

(ಜೇಸಿನದೆಲ್ಲ)

**ವಾಲಿನೊಕ್ಕ ಕೋಲನೇಸಿ ರವಿ ಬಾ**
**ಲುನಿ ರಾಜುಗ ಗಾವಿಂಚಿ ಜೂಚಿ**
(ಒಂದೇ ಬಾಣದಲ್ಲಿ ವಾಲಿಯನ್ನು ವಧಿಸಿ ಸುಗ್ರೀವನಿಗೆ ಪಟ್ಟ ಕಟ್ಟಿದ)

(ಬ್ರೋಚೇವಾರವರೇ)

**ತರುಮರುಗುನ ಡಿಂಭುಡೈ**
(ವೃಕ್ಷದ ಮರೆಯಲ್ಲಿದ್ದು)

(ವಲ್ಲಗಾದನಕ)

**ಪಲುಮಾರು ಜಗಮುಲು ಕಲ್ಲಲನಿನ ರವಿಜುನಿ ಮಾಯವಲವೇಸಿ**
(ಜಗತ್ತೇ ಸುಳ್ಳೆಂದ ಸುಗ್ರೀವನಿಗೆ ಮಾಯೆಯ ಬಲೆಬೀಸಿ)

(ಮನಸಾ ಮನಸಾಮರ್ಥ್ಯ)

**ಮರಚಿಯುನ್ನ ವನಚರುನಿ ಬ್ರೋಚಿನ**
(ಮರೆತಿದ್ದ ಸುಗ್ರೀವನನ್ನು ರಕ್ಷಿಸಿದ)

(ಮರಿಮರಿ ನಿನ್ನೇ)

ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಬರುವ ವಾಲಿಸುಗ್ರೀವರ ವಿಷಯವನ್ನು ಮೇಲಿನ ಸಾಲುಗಳಲ್ಲಿ ಸ್ಮರಿಸುವಾಗ ತ್ಯಾಗರಾಜರು, ವಾಲಿಯ ಬಾಧೆಯನ್ನು ತಾಳ ಲಾರದೆ ಶ್ರೀರಾಮನಲ್ಲಿಗೆ ಬಂದು ಸುಗ್ರೀವನು ಶರಣಾದುದು, ಶ್ರೀರಾಮನು ಸುಗ್ರೀವನ ಸ್ನೇಹ ಮಾಡಿದುದು, ಅಲ್ಲದೆ ಸುಗ್ರೀವನ ತಾಪಕ್ಕೆ ಕಾರಣವನ್ನು ತಿಳಿದು ವಾಲಿಯನ್ನು ವಧಿಸಿ ಅವನಿಗೆ ಪಟ್ಟಕಟ್ಟಿದ್ದು, ಅನಂತರ ಸುಗ್ರೀವನು ತಾನು ರಾಮನಿಗೆ ನೀಡಿದ್ದ ಭಾಷೆಯನ್ನೇ ಮರೆತದ್ದು, ಈ ಅಂಶಗಳನ್ನು ಅಳವಡಿಸುತ್ತಾರೆ.

ಪೌರಾಣಿಕವಾಗಿ ಹಿರಿಯನಾದ ವಾಲಿಯು ಸುಗ್ರೀವನನ್ನು ರಾಜ್ಯ ಕಲಹದಿಂದ ಓಡಿಸುತ್ತಾನೆ. ಓಡುತ್ತಾ ಬಂದ ಸುಗ್ರೀವನು ಋಷ್ಯಮೂಕ ಪರ್ವತವನ್ನು ಸೇರುತ್ತಾನೆ. ಸೀತೆಯನ್ನು ಹುಡುಕುತ್ತಾ ಬಂದ ರಾಮನಿಗೆ ಈತನ ಸ್ನೇಹವಾಗುತ್ತದೆ. ಸುಗ್ರೀವನ ಸ್ಥಿತಿಯನ್ನರಿತ ರಾಮ, ವಾಲಿಯನ್ನು ವಧಿಸುವುದಾಗಿ ಪ್ರತಿಜ್ಞೆ ಮಾಡುತ್ತಾನೆ. ಮೊದಲು

ವಾಲಿ-ಸುಗ್ರೀವರಿಗೆ ಯುದ್ಧವಾಗುತ್ತದೆ. ವಾಲಿಯ ಕೈಮೇಲಾಗಿ ಸುಗ್ರೀವನು ಕ್ರಮೇಣ ಶಕ್ತಿಗುಂದುತ್ತಾ ಮರೆಯಲ್ಲಿದ್ದ ರಾಘವನೆಡೆಗೆ ನೋಡುತ್ತಾನೆ. ಸುಗ್ರೀವನು ಕಂಗೆಟ್ಟಿರುವುದನ್ನು ತಿಳಿದು ಅವನ ಸಹಾಯಕ್ಕಾಗಿ ಮರುಕ್ಷಣದಲ್ಲೇ ತನ್ನ ಬಾಣದಿಂದ ವಾಲಿಯನ್ನು ಕೊಲ್ಲುತ್ತಾನೆ, ಶ್ರೀರಾಮ. ಶ್ರೀರಾಮನ ಸಹಾಯಕ್ಕೆ ಪ್ರತಿಯಾಗಿ ಸುಗ್ರೀವನೂ ಶ್ರೀರಾಮನಿಗೆ ಸಹಾಯಹಸ್ತ ನೀಡುವುದಾಗಿ ಭಾಷೆ ನೀಡುತ್ತಾನೆ. ಆದರೆ ವಾಲಿವಧೆಯಾದ ನಂತರ ಪಟ್ಟಾಭಿಷಿಕ್ತನಾದ ಆತ ರಾಮನಿಗೆ ತಾನು ನೀಡಿದ್ದ ಭಾಷೆಯನ್ನು ಮರೆತು ಸುಖಲೋಲುಪನಾಗುತ್ತಾನೆ. ಅನಂತರ ಹನುಮಂತ, ಲಕ್ಷ್ಮಣರು ಸುಗ್ರೀವನನ್ನು ಎಚ್ಚರಿಸುತ್ತಾರೆ. ಸುಗ್ರೀವನು ತನ್ನ ಭಾಷೆಯನ್ನು ಉಳಿಸಿಕೊಳ್ಳುವಂತೆ ಸೀತಾನ್ವೇಷಣೆಯ ಕಾರ್ಯದಲ್ಲಿ ಸಹಕರಿಸುತ್ತಾನೆ.

ರಾಮಾಯಣದ ಈ ಪ್ರಸಂಗವು ತ್ಯಾಗರಾಜರಲ್ಲಿ ದೈನ್ಯ, ರೋಷ ಹಾಗೂ ದೈವ ಸಾಮರ್ಥ್ಯದ ಮುಂದೆ ಮನುಜರ ಸಾಮರ್ಥ್ಯ ನಿಲ್ಲದೆಂಬ ದೇವರ ಹಿರಿಮೆಯನ್ನುಳ್ಳ ರಚನೆಗಳಲ್ಲಿ ಮೂಡಿಬಂದಿವೆ.

**ಜಡಭರತ** : ಜಡಭರತನು ಮುಗ್ಧವಾದ ಜಿಂಕೆಯ ಮರಿಯನ್ನೆತ್ತಿಕೊಂಡು ಅದನ್ನು ಸಂರಕ್ಷಿಸಲಿಲ್ಲವೆ ಎಂದೆನ್ನುತ್ತಾ ತ್ಯಾಗರಾಜರು ಜಡಭರತನನ್ನು ಒಂದು ರಚನೆಯಲ್ಲಿ ಮಾತ್ರ ಸ್ಮರಿಸುತ್ತಾರೆ.

**ಜಡಭರತುಡು ಜಿಂಕ ಶಿಶುವುನೆತ್ತಿ**
**ಬಡಲಿಕ ದೀರ್ಚಗಲೇದಾ ?**

(**ಅನ್ಯಾಯಮು ಸೇಯಕುರಾ***)

ಜಡಭರತನೊಬ್ಬದೊರೆ. ತನ್ನ ಸರಹದ್ದಿನಲ್ಲಿ ಬರುವ ಪ್ರಜೆಗಳು, ಪ್ರಾಣಿಗಳು ಇವೆಲ್ಲವನ್ನೂ ರಕ್ಷಿಸುವುದು ಆತನ ಕರ್ತವ್ಯ. ಇದರಂತೆಯೇ ರಾಮನನ್ನು ರಾಜನಾಗಿಯೂ ತಮ್ಮನ್ನು ಮುಗ್ಧ ಜಿಂಕೆಯ ಮರಿಯಾಗಿಯೂ ಭಾವಿಸಿ ಶ್ರೀರಾಮನ ರಾಜ್ಯದಲ್ಲಿ ಮುಗ್ಧ ಜಿಂಕೆಯ ಮರಿಯಂತಿರುವವರನ್ನು ರಕ್ಷಿಸದಿದ್ದರೆ ಅದು ಅನ್ಯಾಯವಾದೀತೆಂಬಂತೆ ತ್ಯಾಗರಾಜರಿಲ್ಲಿ ನುಡಿಯುತ್ತಾರೆ.

ಪುರಾಣ ಪ್ರಕಾರ ಜಡಭರತ ನದೀತೀರದಲ್ಲಿದ್ದಾಗ ಪೂರ್ಣ ಗರ್ಭವತಿಯಾದ ಜಿಂಕೆಯೊಂದು ಸಿಂಹದ ಘರ್ಜನೆಗೆ ಹೆದರಿ ನದಿಗೆ ಹಾರುತ್ತದೆ. ನೀರಿನಲ್ಲಿ ಅದು ಮುಳುಗಿ ಸಾಯುವ ಮುನ್ನ ಮರಿಯೊಂದಕ್ಕೆ ಜನ್ಮವೀಯುತ್ತದೆ. ಆ ಮರಿಜಿಂಕೆಯನ್ನು

---

*ತ್ಯಾಗರಾಜರ ಸಹೋದರ ರಾಮನಾಥ ಮಧ್ಯವಯಸ್ಸಿನಲ್ಲಿ ಅನಾರೋಗ್ಯದಲ್ಲಿ ತೀವ್ರವಾಗಿ ಬಳಲುತ್ತಿದ್ದಾಗ ಆತನ ಆರೋಗ್ಯ ಸುಧಾರಿಸಿ ರಕ್ಷಿಸಬೇಕೆಂದು ತ್ಯಾಗರಾಜರು ರಾಮನಲ್ಲಿ ಪ್ರಾರ್ಥಿಸಿ ಈ ಕೃತಿಯನ್ನು ಹಾಡಿದ್ದಾರೆ ಎನ್ನುವುದುಂಟು. (ನೋಡಿ ತ್ಯಾಗರಾಜ ಕೀರ್ತನಲು ಸಂ. ೧ ಕಲ್ಲೂರಿ ವೀರಭದ್ರ ಶಾಸ್ತ್ರಿ. ಪು. ೨೫೩) ಇದನ್ನು ಪುಷ್ಟೀಕರಿಸುವಂತೆ ರಚನೆಯ ಸಾಹಿತ್ಯದಲ್ಲಿ 'ಮಧ್ಯವಯಸ್ಸಿನ ನನ್ನ ಅಣ್ಣನ ಬಾಧೆಯನ್ನು ಪರಿಹರಿಸಲಾರೆ ಎಂದೆನ್ನಬೇಡ'. ಎಂಬ ಅರ್ಥ ನೀಡುವ ಭಾಗವೂ ಅಳವಟ್ಟಿದೆ. ಇದರ ಹಿನ್ನೆಲೆ ಏನೇ ಇದ್ದರೂ ಕೃತಿಯಲ್ಲಿ ಜಡಭರತನ ಪ್ರಸ್ತಾಪವಿರುವುದಂತೂ ನಿಜ.

ಜಡಭರತನು ಪ್ರೀತಿಯಿಂದ ರಕ್ಷಿಸುತ್ತಾನೆ. ಭಾಗವತ[೫೧] ಮತ್ತು ಸ್ಕಾಂದ ಪುರಾಣ ಗಳಲ್ಲಿ ಜಡಭರತನ ಪ್ರಸ್ತಾಪ ಕಾಣಬರುತ್ತದೆ.

**ಧ್ರುವ** : ಮಲತಾಯಿ ಸುರುಚಿಯಾಡಿದ ಚುಚ್ಚು ಮಾತುಗಳಿಂದ ನೊಂದು ಶ್ರೀಹರಿ ಯನ್ನು ಧ್ಯಾನಿಸಿದವನು ಧ್ರುವ. ಹರಿದರ್ಶನ ನೀಡಿದಾಗ ಅಲ್ಪವರಗಳನ್ನು ಬೇಡಿದನಾ ದರೂ ಅಪಾರ ಕರುಣಾಕರನಾದ ಹರಿಯು ಅವನಿಗೆ ಸ್ಥಿರಸುಖವನ್ನೇ ನೀಡಿದ್ದಾನೆ. ಧ್ರುವನ ಕಥೆಯು ಭಾಗವತದ ಚತುರ್ಥ ಸ್ಕಂದದಲ್ಲಿನದು. ತ್ಯಾಗರಾಜರು ಕೆಳಗಿನ ಸಾಲುಗಳಲ್ಲಿ ಭಕ್ತಧ್ರುವನನ್ನು ಪ್ರಸ್ತಾಪಿಸಿದ್ದಾರೆ.

**ಸಾ ಪತ್ನಿ ಮಾತಯೌ ಸುರುಚಿಚೇ**
**ಕರ್ಣಶೂಲಮೈನ ಮಾಟ ವೀನುಲ**
**ಚುರುಕ್ಕನ ತಾಳಕ ಶ್ರೀಹರಿನಿ ಧ್ಯಾನಿಂಚಿ**
**ಸುಖಿಯಿಂಪಗಲೇದಾ ?**

**(ಕನಕನರುಚಿರಾ)**

**ಕರುಣತೋ ಧ್ರುವುನಿಕೆದುಟ ನಿಲ್ಚಿನ ಕಥ ವಿನ್ನಾನಯ್ಯ**

**(ಮರಿಮರಿ ನಿನ್ನೇ)**

**ಅವಿವೇಕಮುತೋ ತೆಲಿಸಿ ತೆಲಿಯಕನು**
**ಭವ ಸುಖಮುಲಕಾಸಿಂಚಿನ ಗಾನಿ**
**ಧ್ರುವಮೈನ ಫಲಮೊಸಗು ನೀಶಕ್ತಿಕಿ**
**ಧ್ರುವುಡು ಸಾಕ್ಷಿಗಾದಾ**

**(ವರಾಲಂದುಕೊಮ್ಮನಿ)**

ತಿಳಿದೋ ತಿಳಿಯದೆಯೋ ಅಲ್ಪ ವರಕ್ಕಾಗಿ ದೈವಧ್ಯಾನ ಮಾಡಿದವನಿಗೂ ಸ್ಥಿರ ಸ್ಥಾನವೇ ಪ್ರಾಪ್ತವಾದುದನ್ನು ಒತ್ತಿ ಹೇಳುವ ಈ ಪ್ರಸಂಗದ ಮೂಲಕ ಭಕ್ತಿಯ ಹಿರಿಮೆಯನ್ನು ಕೊಂಡಾಡುತ್ತಾರೆ. ಮಾನವ ಸಹಜವಾದ ಅಲ್ಪ ಬಯಕೆಗಳ ತೃಪ್ತಿಗಾಗಿ ಮಾಡುವ ಭಗವದ್ಧ್ಯಾನವೂ ಫಲಕಾರಿ ಎಂಬುದನ್ನು ಉದಾಹರಣೆಯ ಮೂಲಕ ಮನ ಗಾಣಿಸುತ್ತಾರೆ.

ಧ್ರುವ ಪೂರ್ವಜನ್ಮದಲ್ಲಿ ಬ್ರಾಹ್ಮಣ ಜಾತಿಯವನು. ರಾಜಮನೆತನದವರೊಂದಿಗೆ ಈತನಿಗೆ ವಿಶೇಷ ಸ್ನೇಹವಿದ್ದಿತು. ಅರಮನೆಯ ವೈಭವಗಳನ್ನು ಮತ್ತೆಮತ್ತೆ ನೋಡು ತ್ತಿದ್ದ ಈತನಿಗೆ ತಾನೂ ಅರಸನಾಗಬೇಕೆಂಬ ಪ್ರಬಲ ಆಸೆಯಿದ್ದಿತು. ಮರುಜನ್ಮದಲ್ಲಿ ಈತ ಕ್ಷತ್ರಿಯ ವಂಶದಲ್ಲಿ ಜನಿಸಿದ. ಈತನ ತಂದೆ ಉತ್ತಾನಪಾದನಿಗೆ ಇಬ್ಬರು ಪತ್ನಿ ಯರು. ಹಿರಿಯಳಾದ ಸುನೀತಿಯ ಮಗ ಧ್ರುವ. ಕಿರಿಯವಳು ಸುರುಚಿ. ಒಮ್ಮೆ, ತಂದೆಯ ತೊಡೆಯ ಮೇಲೆ ಕೂರುವ ಆಸೆಯನ್ನು ಧ್ರುವ ವ್ಯಕ್ತಪಡಿಸಿದಾಗ, ಸುರುಚಿ ಧ್ರುವನನ್ನು ಗದರಿಸಿ ಚುಚ್ಚುಮಾತುಗಳನ್ನಾಡುತ್ತಾಳೆ. ಇದರಿಂದ ನೊಂದ ಧ್ರುವ ನಾರದರಿಂದ ಮಂತ್ರೋಪದೇಶ ಪಡೆದು ಘೋರ ತಪಸ್ಸನ್ನು ಆಚರಿಸಿ ದೈವ ಕೃಪೆ

ಯಿಂದ ಚಿರಕಾಲ ರಾಜ್ಯವಾಳಿದುದಲ್ಲದೆ, ಧ್ರುವ ಮಂಡಲವೆಂಬ ಶಾಶ್ವತ ಸ್ಥಾನವನ್ನು ಹೊಂದಿದಂತೆ ತಿಳಿದುಬರುತ್ತದೆ.[೫೨]

**ಶಿಬಿ** : ದೈನ್ಯದಿಂದ ಬಂದ ಪಾರಿವಾಳವನ್ನು ಗಿಡುಗನಿಂದ ರಕ್ಷಿಸಿ ತನ್ನ ಶರೀರದ ಮಾಂಸವನ್ನೇ ಗಿಡುಗನಿಗೆ ಆಹಾರವಾಗಿ ನೀಡಿದ ದಾನಿ ಶಿಬಿ. ಈತ ಶ್ರೀರಾಮನ ವಂಶದ ಹಿರಿಯನೇ. ಮೊರೆಹೊಕ್ಕವರನ್ನು ಕಾಪಾಡುವುದೇ ಈತನ ಮುಖ್ಯವ್ರತ. ಪುರಾಣದ ಈ ಹಿನ್ನೆಲೆಯನ್ನು ಸ್ಮರಿಸುತ್ತಾ, ದೀನರಾದ ತಮ್ಮನ್ನು ರಕ್ಷಿಸುವಲ್ಲಿ ರಾಮನಿಗೇಕೆ ಈ ಲೋಭ ಎಂದು ತ್ಯಾಗರಾಜರು ಪ್ರಶ್ನಿಸುತ್ತಾರೆ. ರಾಮನ ಲೋಭವನ್ನು ಖಂಡಿಸುವಾಗ ಅದೇ ವಂಶದ ಶಿಬಿಯನ್ನು ಜ್ಞಾಪಿಸಿಕೊಳ್ಳುತ್ತಾರೆ.

ಡೇಗಕ್ಕೆ ಮೇನೊಸಂಗು ರಾಘವಾನ್ವಯಮುನ
ಬಾಗ ಜನ್ಮಿಂಚಿ ಶ್ರೀಕರ ತ್ಯಾಗರಾಜಂಟೇ

(ರಾಮ ಲೋಭಮೇಲ)

ಶಿಬಿಯ ಪ್ರಸ್ತಾಪ ಮಹಾಭಾರತ, ಭಾಗವತಗಳೆರಡರಲ್ಲೂ ಉಂಟು. ಒಮ್ಮೆ ಇಂದ್ರ, ಅಗ್ನಿಗಳು, ಗಿಡುಗ ಪಾರಿವಾಳಗಳ ರೂಪದಲ್ಲಿ ಬಂದು ಶಿಬಿಯನ್ನು ಪರೀಕ್ಷಿಸುತ್ತಾರೆ. ಪಾರಿವಾಳವು ಮೊದಲಿಗೆ ಬಂದು ಪ್ರಾಣರಕ್ಷಣೆಯನ್ನು ಶಿಬಿಯಲ್ಲಿ ಯಾಚಿಸುತ್ತದೆ. ಬೆನ್ನಟ್ಟಿಬಂದು ಗಿಡುಗ ತನ್ನ ಆಹಾರವನ್ನು ತನಗೆ ಒಪ್ಪಿಸುವಂತೆ ಶಿಬಿಯನ್ನು ಕೇಳುತ್ತದೆ. ಆಗ ರಾಜನು ಪಾರಿವಾಳವನ್ನು ರಕ್ಷಿಸುವ ಸಲುವಾಗಿ, ಪಾರಿವಾಳದ ತೂಕದಷ್ಟು ಮಾಂಸವನ್ನು ತನ್ನ ಶರೀರದಿಂದಲೇ ತೆಗೆದು ಗಿಡುಗನಿಗೆ ನೀಡುತ್ತಾನೆ. ಶರಣಾಗತ ರಕ್ಷಣೆಯ ಈತನ ವ್ರತಕ್ಕೆ ಮೆಚ್ಚಿ ಇಂದ್ರಾಗ್ನಿಗಳು ಅನೇಕ ವರಗಳನ್ನು ಶಿಬಿಗೆ ನೀಡುತ್ತಾರೆ.[೫೩]

**ಮುಚುಕುಂದ** : ಪ್ರತಿಯುಗದಲ್ಲೂ ದೇವರು ಅವತರಿಸಿ ಶರಣಾದವರನ್ನು ಪರೋಕ್ಷವಾಗಿ ಅನುಗ್ರಹಿಸಿದ್ದಾನೆ. ಇದೀಗ ತ್ಯಾಗರಾಜರನ್ನು ರಕ್ಷಿಸಲು ಸಾಧ್ಯವಿಲ್ಲ ಎಂದೆನ್ನದೆ ರಕ್ಷಿಸಬೇಕೆಂದು ಬೇಡುವಾಗ ಮುಚುಕುಂದನ ರಕ್ಷಣೆಯನ್ನು ತ್ಯಾಗರಾಜರು ಪ್ರತಿಪಾದಿಸುತ್ತಾರೆ.

ದಂಭುಡೈನ ಮುಚುಕುಂದುನಿ ಡಾಸಿ ಮರುಗುಚು

(ವಲ್ಲಗಾದನಕ)

ಶ್ರೀಕೃಷ್ಣನು ಕಾಲಯವನನೆಂಬ ರಾಕ್ಷಸನನ್ನು ಮುಚುಕುಂದನ ಮೂಲಕ ಸಂಹರಿಸುತ್ತಾನೆ. ಅದೇ ಕ್ಷಣದಲ್ಲಿ ಮುಚುಕುಂದನಿಗೆ ದಿವ್ಯದರ್ಶನ ನೀಡಿ ಅನುಗ್ರಹಿಸುತ್ತಾನೆ. ಮುಚುಕುಂದ ನಿದ್ರಿಸುತ್ತಿರುವಾಗ, ಆತನ ನಿದ್ರೆಗೆ ಭಂಗತರುವವರು ಆತನ ದೃಷ್ಟಿ ಮಾತ್ರದಿಂದಲೇ ಸುಟ್ಟು ಭಸ್ಮವಾಗುವಂತೆ ವರವೊಂದನ್ನು ಇಂದ್ರಾದಿ ದೇವತೆಗಳು ಮುಚುಕುಂದನಿಗೆ ನೀಡಿರುತ್ತಾರೆ. ಒಮ್ಮೆ ಕಾಲಯವನನೆಂಬ ರಾಕ್ಷಸ ಕೃಷ್ಣನನ್ನು ಕೊಲ್ಲಲು ಅಟ್ಟಿಸಿಕೊಂಡು ಬರುತ್ತಾನೆ. ಕೃಷ್ಣನಾದರೋ ಮುಚುಕುಂದನು ನಿದ್ರಿಸುತ್ತಿದ್ದ ಗುಹೆಯೊಳಗೆ ಓಡಿ ಬರುತ್ತಾನೆ. ಹಿಮ್ಮೆಟ್ಟಿಬಂದ ಕಾಲಯವನ ಗುಹೆಯೊಳಗೆ

ನುಗ್ಗಿ ಮಲಗಿದ್ದ ಮುಚುಕುಂದನನ್ನು ಒದೆಯುತ್ತಾನೆ. ನಿದ್ರೆಯಿಂದ ಎಚ್ಚೆತ್ತ ಮುಚುಕುಂದನ ದೃಷ್ಟಿಬಿದ್ದು ಕಾಲಯವನ ಬೂದಿಯಾಗುತ್ತಾನೆ. ಇದರಿಂದ ಕೃಷ್ಣನು ಸುಪ್ರೀತನಾಗಿ ಮುಚುಕುಂದನಿಗೆ ವಿಶ್ವರೂಪದರ್ಶನ ನೀಡುತ್ತಾನೆ.[೬೦] ವಿಷ್ಣುಪುರಾಣ, ಹರಿವಂಶ ಹಾಗೂ ಭಾಗವತಗಳಲ್ಲಿ ಮುಚುಕುಂದನ ಪ್ರಸ್ತಾಪವುಂಟು.

ನೃಸಿಂಹಾವತಾರದಲ್ಲಿ ಕಂಬದಿಂದ ಬಂದು ಪ್ರಹ್ಲಾದನನ್ನು, ರಾಮಾವತಾರದಲ್ಲಿ ಮರದ ಹಿಂದೆ ಅಡಗಿ ಸುಗ್ರೀವನನ್ನು, ಕೃಷ್ಣಾವತಾರದಲ್ಲಿ ಗುಹೆಯೊಳಗೆ ನುಗ್ಗಿ ಮುಚುಕುಂದನನ್ನು ಅನುಗ್ರಹಿಸಿದ್ದನ್ನು ತ್ಯಾಗರಾಜರು ಇಲ್ಲಿ ವರ್ಣಿಸಿದ್ದಾರೆ.

**ಬಲಿ** : ಸಕಲ ಸಂಪದ್ಭರಿತನಾದ ರಾಮನು ಬಲಿ ಚಕ್ರವರ್ತಿಯಲ್ಲಿ ಯಾಚಿಸಿದ ಅಂಶ ತ್ಯಾಗರಾಜರ 'ಸೀತಾನಾಯಕ' ಕೃತಿಯಲ್ಲಿದೆ.

'**ಕಾಚಿನ ಭಕ್ತುಲ ಜೂಚಿ ಯಾಬಲಿನೇ ಯಾಚಿಂಚ ವೆಡಲಿತಿವೋ ?**' ಭಕ್ತರೆಲ್ಲರೂ ಬಂದು ನಿನ್ನಲ್ಲೇ ಯಾಚಿಸುವುದನ್ನು ತಪ್ಪಿಸಿಕೊಳ್ಳುವ ಸಲುವಾಗಿ ನೀನೇ ಯಾಚಕನಾದೆಯೋ ಎಂದು ತ್ಯಾಗರಾಜರಿಲ್ಲಿ ದೇವರನ್ನು ಹಾಸ್ಯಮಾಡುತ್ತಾರೆ. ಈ ಮೂಲಕ ಬಲಿ ಚಕ್ರವರ್ತಿಯ ವೃತ್ತಾಂತವನ್ನೂ ಅವರು ಗಮನಿಸುತ್ತಾರೆ. ದಶಾವತಾರಗಳಲ್ಲಿ ಒಂದಾದ ವಾಮನಾವತಾರ ಬಲಿಚಕ್ರವರ್ತಿಯ ದಮನಕ್ಕಾಗಿಯೇ ಆದುದು. ಬಲಿಚಕ್ರವರ್ತಿಯು ವಿಶ್ವಜಿತ್ತೆಂಬ ಯಾಗಮಾಡಿ ಅಗ್ನಿದೇವನ ಮೂಲಕ ರಥಾಶ್ವಗಳನ್ನೂ, ತನ್ನ ಪಿತಾಮಹನಾದ ಪ್ರಹ್ಲಾದನಿಂದ ಆಯುಧಾದಿಗಳನ್ನೂ ಪಡೆದು ಇಂದ್ರದೇವನನ್ನು ಸೋಲಿಸಿ ಸ್ವರ್ಗ ರಾಜ್ಯವನ್ನು ವಶಪಡಿಸಿಕೊಳ್ಳುತ್ತಾನೆ. ಬಲಿಯ ಅಗಾಧ ಶಕ್ತಿಯನ್ನು ಕಂಡು ಇಂದ್ರನು ಮತ್ತಿತರ ದೇವತೆಗಳೊಡಗೂಡಿ ವಿಷ್ಣುವಿನಲ್ಲಿ ಮೊರೆಹೋಗಲಾಗಿ, ವಿಷ್ಣುವು ವಾಮನರೂಪದಲ್ಲಿ ಬಂದು ಬಲಿಯಿಂದ ಮೂರು ಹೆಜ್ಜೆಗಳ ದಾನ ಬೇಡಿ, ಅವನನ್ನು ಪಾತಾಳಕ್ಕೆ ತಳ್ಳುತ್ತಾನೆ. ಭಾಗವತದ ಅಷ್ಟಮ ಸ್ಕಂದದಲ್ಲಿರುವ ಬಲಿಚಕ್ರವರ್ತಿಯ ಈ ಕಥೆ ಚಿರಪರಿಚಿತವಾದುದು.[೬೧] ಮಹಾವಿಷ್ಣುವಿನಿಂದ ಪಾತಾಳಕ್ಕೆ ತಳ್ಳಲ್ಪಟ್ಟ ಬಲಿಯು ದೀಪಾವಳಿ ಹಬ್ಬದಲ್ಲಿ ಭೂಲೋಕಕ್ಕೆ ಬಂದು ಮೂರು ದಿನಗಳ ಕಾಲ ಭೂಲೋಕದ ಒಡೆತನವನ್ನು ನಡೆಸುವನೆಂಬುದು ನಂಬಿಕೆ. ಹೀಗೆ ಬಲಿಚಕ್ರವರ್ತಿಗೂ ದೀಪಾವಳಿಗೂ ಸಂಬಂಧವನ್ನು ಕಲ್ಪಿಸಲಾಗಿದೆ.[೬೨]

**ಬಲಾಬಲ ಮಂತ್ರವಿದ್ಯೆ** : ಬಲಾತಿಬಲಗಳನ್ನು ಪ್ರಸ್ತುತಪಡಿಸುವ ತ್ಯಾಗರಾಜರ ಏಕೈಕ ಕೃತಿ 'ಶ್ರೀಕಾಂತನೀಯೆಡ'. ಇಲ್ಲಿ ತ್ಯಾಗರಾಜರು ಹೀಗೆನ್ನುತ್ತಾರೆ.

**ಶ್ರೀಕಾಂತ ನೀಯೆಡ ಬಲಾತಿಬಲ ಚೆಲಗಂಗಲೇದಾ ?**

ಶ್ರೀರಾಮನು ಬಲಾತಿಬಲ ಮಂತ್ರವಿದ್ಯೆಯಿಂದ ಸಜ್ಜಾಗಿದ್ದರೂ ಸನ್ಮಾರ್ಗದಲ್ಲಿ ನಡೆಯದ ದ್ವಿಜರನ್ನು ನೋಡುತ್ತಾ ಸುಮ್ಮನಿರುವುದಾದರೂ ಹೇಗೆ ಎಂಬ ಸಾಮಾಜಿಕ ಕಳಕಳಿಯ ಹಿನ್ನೆಲೆಯಲ್ಲಿ ತ್ಯಾಗರಾಜರು ಬಲಾತಿಬಲಗಳನ್ನು ಪ್ರಸ್ತಾಪಿಸುತ್ತಾರೆ. ಕಾಕಾಸುರನ ಘಟನೆಯಂತಹ ಹಲವು ಕಾರ್ಯಗಳನ್ನು ಈ ಮಂತ್ರವಿದ್ಯೆ ನಿರ್ವಹಿಸಿದೆ. ಪೌರಾಣಿಕವಾಗಿ ಬಲಾತಿಬಲ ಮಂತ್ರವಿದ್ಯೆಯ ಪ್ರಸ್ತಾಪ ವಾಲ್ಮೀಕಿ ರಾಮಾಯಣ

ದಲ್ಲಿದೆ.[೫೭] ಇದನ್ನು ವಿಶ್ವಾಮಿತ್ರರು ರಾಮನಿಗೆ ಉಪದೇಶಿಸುತ್ತಾರೆ. ಈ ವಿದ್ಯೆ ಸರ್ವ ಜ್ಞಾನಕ್ಕೂ ಮಾತೃದೇವತೆ. ಇದನ್ನು ಜಪಿಸುತ್ತಿರುವುದರಿಂದ ಯಾವ ಬಾಧೆಗಳೂ ಇರುವುದಿಲ್ಲ. ಕೀರ್ತಿ, ಯಶಸ್ಸುಗಳನ್ನು ಉಂಟುಮಾಡುವ ಈ ವಿದ್ಯೆ ಬ್ರಹ್ಮನಿರ್ಮಿತವಾದುದು, ಮಹಾಪ್ರಭಾವಶಾಲಿಯಾದುದು.

**ಚಮರೀಮೃಗದ ವೃತ್ತಾಂತ** : ಸೀತಾರಾಮರು ಅರಣ್ಯವಾಸದಲ್ಲಿದ್ದಾಗ ಸುಂದರವಾದ ಚಮರೀಮೃಗವೊಂದು ಅಲ್ಲಿ ಓಡಾಡುತ್ತಿದ್ದಿತು. ಆ ಪ್ರಾಣಿಯ ಆಕರ್ಷಕವಾದ ಬಾಲವನ್ನು ನೋಡಿದ ಸೀತೆಯು, ಅದನ್ನು ಅಪೇಕ್ಷಿಸಿದಳು. ಸೀತೆಯ ಆಸೆಯನ್ನು ನೆರವೇರಿಸುವ ಸಲುವಾಗಿ ರಾಮನು ಚಮರಿಮೃಗದೆಡೆಗೆ ಬಾಣವೊಂದನ್ನು ಪ್ರಯೋಗಿಸಿದನು. ಚಮರಿಮೃಗಕ್ಕಾದರೋ ಅದರ ಬಾಲದಲ್ಲೇ ಸೊಬಗು. ಹೀಗಾಗಿ ಚಮರಿಯು ತನ್ನ ಬಾಲ ಕಳೆದುಕೊಳ್ಳುವುದಕ್ಕಿಂತ ರಾಮನ ಬಾಣಗಳಿಂದ ತನ್ನ ಪ್ರಾಣವನ್ನು ಕಳೆದುಕೊಳ್ಳುವುದೇ ಸೂಕ್ತವೆಂದು ತನ್ನ ಕತ್ತನ್ನೇ ಬಾಣಕ್ಕೆದುರಾಗಿ ನೀಡಿತು. ಇದನ್ನು ಕಂಡೊಡನೆ ಶ್ರೀರಾಮನು, ತನ್ನ ಸತಿಗಾಗಿಯಾದರೂ ಸರಿಯೇ, ಈ ಪ್ರಾಣಿಯನ್ನು ಕೊಲ್ಲುವುದು ಸರಿಯಲ್ಲವೆಂದು ಆಲೋಚಿಸಿದನು. ತನ್ನ ಮೊದಲ ಬಾಣವು ಹಿಂತಿರುಗುವಂತೆ ಮತ್ತೊಂದು ಬಾಣವನ್ನು ಆತ ಪ್ರಯೋಗಿಸಿದನು. ಹೀಗೆ ಚಮರೀಮೃಗದ ಮಾನ-ಪ್ರಾಣಗಳನ್ನು ರಕ್ಷಿಸಿದ ಕಥೆಯೊಂದು ವಾಲ್ಮೀಕೇತರ ರಾಮಯಣದಲ್ಲಿನದು. ತ್ಯಾಗರಾಜರು ಇದನ್ನು 'ವಾಚಾಮಗೋಚರಮೇ' ಎಂಬ ಕೈಕವಶಿ ರಾಗದ ಕೃತಿಯಲ್ಲಿ ಪ್ರಸ್ತಾಪಿಸಿದ್ದಾರೆ.[೫೮]

**ಮಾನವತಿ ಮದೆರಿಂಗಿ ಚಾ**
**ಮರಮೌಟಕಸ್ತ್ರಮು ಸೇಯ ಗನಿ**
**ಮಾನಂಬುಕೈ ಮಡದಾಚಗ**
**ಮಾಧವುಂಡು ಕನಿ ಕರಗಿ ವೇಗಮೇ**
**ದೀನಾರ್ತಿಭಂಜುನುಡೈ ಪ್ರಾಣ**
**ದಾನಂಬೊಸಗ ಮುನ್ನು ಚನಿನ**
**ಬಾಣಂಬು ನಟು ಚೆದರ ಸೇಯಲೇದಾ . . . . .**

**ಸಿಂಗರಿಮುನಿ ವೃತ್ತಾಂತ** : ತಿಲದಾನವು ಪಾಪ ಪರಿಹಾರ ಮಾಡುವುದೆಂಬುದು ಪ್ರಾಚೀನವಾದ ಒಂದು ನಂಬುಗೆ. ಯುದ್ಧಾನಂತರ ಶ್ರೀರಾಮನು ಸೀತಾಸಮೇತನಾಗಿ ಪಟ್ಟಾಭಿಷಿಕ್ತನಾಗುತ್ತಾನೆ. ಈ ಮುನ್ನ ಉಂಟಾಗಿದ್ದ ಸಾವು ನೋವುಗಳ ಪರಿಹಾರಾರ್ಥವಾಗಿ ಯೋಗ್ಯನಾದವನಿಗೆ ಎಳ್ಳುದಾನ ನೀಡುವುದೆಂದು ನಿರ್ಧಾರವಾಗುತ್ತದೆ. ಆದರೆ ಇಂತಹ ದಾನವನ್ನು ಸ್ವೀಕರಿಸಲು ಯಾರೂ ಮುಂದಾಗುವುದಿಲ್ಲ. ಆದ್ದರಿಂದ ವಸಿಷ್ಠಾದಿಗಳು ತಿಲದಾನದೊಂದಿಗೆ ಒಂದು ಬಂಗಾರದ ಗಟ್ಟಿಯನ್ನೂ ದಾನ ನೀಡುವುದಾಗಿ ಊರಲ್ಲೆಲ್ಲಾ ಸಾರುವಂತೆ ಯೋಜಿಸುತ್ತಾರೆ.

ಅಯೋಧ್ಯೆಯಲ್ಲೇ ಇದ್ದ ಸಿಂಗರಿಮುನಿ ಎಂಬಾತ ಕಡು ಬಡವ. ಈತ ಧ್ಯಾನಾದಿ ತಪಸ್ಸುಗಳಲ್ಲೇ ಜೀವಿತವನ್ನು ಕಳೆದ ವರ್ಚಸ್ವಿ. ಬಡತನದ ತೀವ್ರ ಬಾಧೆಯಿಂದಾಗಿ ಈತನ ಹೆಂಡತಿ, ರಾಜಭಟರು ಸಾರಿದ ತಿಲದಾನವನ್ನು ತೆಗೆದುಕೊಳ್ಳುವಂತೆ ಗಂಡನನ್ನು ಒತ್ತಾಯಿಸುತ್ತಾಳೆ. ಅದರಿಂದ ತಮ್ಮ ಕಷ್ಟಗಳು ಪರಿಹಾರವಾಗಿ ತಾವು ಸುಖವಾಗಿರಬಹುದೆಂದು ಉತ್ತೇಜಿಸುತ್ತಾಳೆ. ಆದರೆ ಸಿಂಗರಿಮುನಿಯು ಐಹಿಕ ಸುಖಕ್ಕಾಗಿ ತಾನು ಆರ್ಜಿಸಿದ್ದ ಆಧ್ಯಾತ್ಮ ಸಾಧನೆಯನ್ನು ಬಿಟ್ಟುಕೊಡಲು ಸಿದ್ಧನಾಗುವುದಿಲ್ಲ. ಈ ಬಗೆಗೆ ಪತಿಪತ್ನಿಯರಲ್ಲಿ ವಾದವಿವಾದವೇ ನಡೆದು ಕಡೆಗೆ ಸಿಂಗರಿಮುನಿಯು ದಾನ ಪಡೆಯಲು ಒಪ್ಪುತ್ತಾನೆ. ತಿಲದಾನ ಪಡೆದ ಕೂಡಲೇ, ಅದನ್ನು ನೀಡಿದ ಪರಬ್ರಹ್ಮ ಸ್ವರೂಪನಾದ ರಾಮನ ಮುಖದರ್ಶನ ಮಾಡಿ, ದಾನಪಡೆದ ಪಾಪವನ್ನು ಪರಿಹರಿಸಿಕೊಳ್ಳುವುದೆಂಬುದು ಸಿಂಗರಿಮುನಿಯ ಅಭಿಪ್ರಾಯವಾಗಿರುತ್ತದೆ. ಈ ಅಂಶವನ್ನು ವಸಿಷ್ಠರು ತಿಳಿದಿದ್ದು, ರಾಮನು ದಾನ ನೀಡಿದ ಕೂಡಲೇ ಮಧ್ಯೆ ತೆರೆಯೊಂದು ಬೀಳುವಂತೆ ಏರ್ಪಡಿಸಿರುತ್ತಾರೆ. ಹೀಗಾಗಿ ಸಿಂಗರಿಮುನಿಯು ರಾಮನನ್ನು ದಾನ ಸ್ವೀಕರಿಸಿದ ಆ ಕ್ಷಣದಲ್ಲಿ ನೋಡಲು ಸಾಧ್ಯವಾಗುವುದಿಲ್ಲ. ಆತನಿಗೆ ತನ್ನ ಯೋಜನೆಯು ನಿರರ್ಥಕವಾದುದರಿಂದ ದಾನ ಪಡೆದ ಆತ ಬಹಳ ದುಃಖಿವಾಗಿ ಅಳುತ್ತಾ ಮನೆ ಸೇರುತ್ತಾನೆ. ಈ ವೇಳೆಗಾಗಲೇ ಬಂಗಾರದ ಗಟ್ಟಿಯನ್ನು ಪಡೆದಿದ್ದ ಸಿಂಗರಿಮುನಿಯ ಹೆಂಡತಿಯು, ಸಿಂಗರಿಮುನಿಯನ್ನು ಸಂಭ್ರಮದಿಂದ ಬರಮಾಡಿಕೊಳ್ಳಲು ಸಿದ್ಧಳಾಗಿರುತ್ತಾಳೆ. ಆದರೆ ಸಿಂಗರಿಮುನಿಯು ದುಃಖಿತನಾಗಿ ಬಂದು, ನಡೆದ ವಿಷಯ ತಿಳಿಸುತ್ತಾನೆ. ಆಕೆಯೂ ಇದರಿಂದ ಶೋಕಗೊಂಡು ಕೆಲಕಾಲದ ನಂತರ ಗಂಡನಿಗೊಂದು ಸಲಹೆ ನೀಡುತ್ತಾಳೆ. ಅಂತೆಯೇ ಶ್ರೀರಾಮ ಪಟ್ಟಾಭಿಷೇಕದ ಕಡೆಯ ದಿನ ಮೆರವಣಿಗೆಯಲ್ಲಿ ಬರುವ ಶ್ರೀರಾಮನನ್ನು ದರ್ಶಿಸಿ, ಆತನ ಪಾದಗಳಿಗೆರಗಿ ತನ್ನ ಪಾಪವನ್ನು ಸಿಂಗರಿಮುನಿಯು ಪರಿಹರಿಸಿಕೊಳ್ಳುತ್ತಾನೆ.[೫೯]

ಈ ವೃತ್ತಾಂತವು ವಾಲ್ಮೀಕೇತರ ರಾಮಾಯಣದಲ್ಲಿರುವುದಾಗಲೀ ವಾಲ್ಮೀಕಿ ರಾಮಾಯಣದಲ್ಲಿ ಅಥವಾ ಅಧ್ಯಾತ್ಮ ರಾಮಾಯಣದಲ್ಲಿ ಕಾಣಬರುವುದಿಲ್ಲ. ಅದರಲ್ಲಿ ಶ್ರೀರಾಮನು ಪಟ್ಟಾಭಿಷೇಕದ ಸಮಯದಲ್ಲಿ ಅನೇಕ ವಿಧವಾದ ಬಳುವಳಿಗಳನ್ನು ಎಲ್ಲರಿಗೂ ನೀಡುವನಾದರೂ, ತಿಲದಾನದ ಪ್ರಸ್ತಾಪ ಅಲ್ಲಿ ಬರುವುದಿಲ್ಲವೆಂಬುದು ಗಮನಾರ್ಹ.[೬೦]

ಹೀಗೆ ಸಿಂಗರಿಮುನಿಯು ದಾನ ಪಡೆದರೂ ಅದನ್ನು ಅನುಭವಿಸಲಾಗಲಿಲ್ಲ ಎಂಬ ನಿದರ್ಶನದೊಂದಿಗೆ, ಯಾವುದು ಹೇಗೆ ನಡೆಯಬೇಕೆಂಬುದು ದೇವರಿಂದ ಪೂರ್ವ ನಿಯೋಜಿತವಾಗಿರುತ್ತದೋ ಅದು ಹಾಗೆಯೇ ನಡೆಯುವುದೆಂಬುದನ್ನು ಮನದಟ್ಟು ಮಾಡುತ್ತಾರೆ, ತ್ಯಾಗರಾಜರು.

**ಕಳಲನೇರ್ಚಿನ ಮುನು ಜೇಸಿನದಿ ಗಾಕಯೇಮಿ ? . . . .**

**ಕೋರಿ ನೂವುಲ ಕೊಂಡ ದೀಸಿ ಸಿಂಗರಿಮುನಿ**

**ಕೂರ್ಮಿ ಭುಜಿಂಚೆನಾ ?**

(ಕಳಲನೇರ್ಚಿನಾ)

ಎಂಬುದು ಅವರ ಮಾತು.

**ಉಡತ ಭಕ್ತಿ** : ಉಡತ ಭಕ್ತಿ ಎಂಬುದು ಅಳಿಲಿನ ಸೇವೆಗೆ ಸಂಬಂಧಿಸಿದುದು. ಸೇತುವೆ ನಿರ್ಮಾಣ ಕಾರ್ಯದಲ್ಲಿ ವಾನರರು ದೊಡ್ಡ ದೊಡ್ಡ ಬಂಡೆಗಳನ್ನು ತಂದು ಹಾಕಿದರೆ, ಅಳಿಲುಗಳು ತಮ್ಮ ಶಕ್ತ್ಯಾನುಸಾರ ಸ್ವಲ್ಪಸ್ವಲ್ಪವಾಗಿಯೇ ಮರಳನ್ನು ತಂದು ಹಾಕಿತಂತೆ. ಇದನ್ನು ನೋಡಿ ಶ್ರೀರಾಮನು ಅಳಿಲಸೇವೆಯಿಂದ ಸುಪ್ರೀತನಾಗಿ ಅದರ ಬೆನ್ನು ಸವರಿದಾಗ ಅಲ್ಲಿ ಮೂರು ಗೆರೆಗಳು ಮೂಡಿದಂತೆ ವೃತ್ತಾಂತವೊಂದುಂಟು. ಇದು ಆಳ್ವಾರರ ದಿವ್ಯ ಪ್ರಬಂಧಗಳಲ್ಲೂ, ತೆಲುಗಿನ ರಂಗನಾಥ ರಾಮಾಯಣದಲ್ಲೂ ಕಾಣಬರುತ್ತದೆ.[೮] ವಾಲ್ಮೀಕಿ ರಾಮಾಯಣದಲ್ಲಿಲ್ಲ. ಆದರೆ ತ್ಯಾಗರಾಜರು ಇದನ್ನು ನೆನೆದಿರುವುದು ಗಮನಾರ್ಹ.

**ಉಡತ ಭಕ್ತಿಗನಿ ಉಪ್ಪತಿಲ್ಲಗ ಲೇದಾ ?**

(ಎಂದುಕುನಿರ್ದಯ)

ಇಷ್ಟೇ ಅಲ್ಲದೆ ದೇವರ ವಿಶೇಷಣಗಳನ್ನು ಹೆಸರಿಸುವ ಮೂಲಕವೂ ತ್ಯಾಗರಾಜರು ಹಲವು ಪೌರಾಣಿಕ ದೃಷ್ಟಾಂತಗಳನ್ನು ಸೂಕ್ಷ್ಮವಾಗಿ ಪ್ರಸ್ತಾಪಿಸಿರುವುದುಂಟು. ಇದರ ಕೆಲವು ಉದಾಹರಣೆಗಳೆಂದರೆ,

**ಅಕ್ರೂರ ವರದಾಬ್ಜನಾಭ**

**(ಕ್ಷತ್ರಿಯನಾದ ಅಕ್ರೂರನಿಗೆ ದಿವ್ಯದರ್ಶನ ನೀಡಿದ ಕಮಲನಾಭ)**

(ಲಾಲಿಲಾಲಯ್ಯ)

**ಖರಶಿರೋಹರಣ**

**(ಖರನೆಂಬ ರಾಕ್ಷಸನನ್ನು ಕೊಂದವನು)**

(ಲಾಲಿಲಾಲಯ್ಯ)

**ಭೀಮಕರಾರ್ಚಿತ**

**(ಭೀಮನಿಂದ ಪೂಜಿಸಲ್ಪಟ್ಟವನು)**

(ನಿರವಧಿಸುಖದ)

**ಭೃಗುಸೂನು ಮದ ವಿದಾರ**

**(ಪರಶುರಾಮನ ಗರ್ವಭಂಗ ಮಾಡಿದವನು)**

(ರಘುವೀರ ರಣಧೀರ, ಶೋಭಾನೆ)

**ನತ ಸಂಕ್ರಂದನ**

**(ಇಂದ್ರನಿಂದ ಸ್ತುತಿಸಲ್ಪಟ್ಟವನು)**

(ನಿರವಧಿಸುಖದ)

ಮುಂತಾದವುಗಳು.

ಹೀಗೆ ತ್ಯಾಗರಾಜರ ಸಾಹಿತ್ಯದಲ್ಲಿ ಹೆಚ್ಚೆಹೆಚ್ಚೆಗೂ ಪೌರಾಣಿಕ ಅಂಶಗಳ ಪ್ರಸ್ತಾಪ ಕಾಣಬರುವುದು. ಅವರು ತಮ್ಮ ಭಕ್ತಿಸಿದ್ಧಾಂತದ ಪ್ರತಿಪಾದನೆಗೆ ಪುರಾಣಗಳನ್ನೇ ಅವಲಂಬಿಸಿದ್ದಾರೆಂದರೆ ತಪ್ಪಿಲ್ಲ. ಅವರ ಹಾಡುಗಳ ಈ ಅಧ್ಯಯನದಿಂದ ಸ್ಪಷ್ಟವಾಗುವ ಅಂಶವೆಂದರೆ, ತ್ಯಾಗರಾಜರು ವಿವಿಧ ರಾಮಾಯಣಗಳ ಪ್ರಸಂಗಗಳನ್ನು ಧಾರಾಳವಾಗಿಯೂ, ಮಹಾಭಾರತ, ಭಾಗವತಗಳ ವಿಷಯಗಳನ್ನು ಭಾಗಶಃವಾಗಿಯೂ ಅಲ್ಲದೆ, ಭಕ್ತಿಸಾಹಿತ್ಯವನ್ನು ಅಲ್ಲಲ್ಲಿಯೂ ಅಳವಡಿಸಿಕೊಂಡಿದ್ದಾರೆ ಎಂಬುದು. ಭಕ್ತಿ ಮತ್ತು ನೀತಿಪ್ರತಿಪಾದನೆಗೆ ಈ ಗ್ರಂಥಗಳು ಅವರಿಗೆ ಸ್ಫೂರ್ತಿಯ ನೆಲೆಯಾಗಿದ್ದಿತೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

## ಟಿಪ್ಪಣಿಗಳು

೧ ಬೃಹದಾರಣ್ಯಕೋಪನಿಷತ್ತು, ಸ್ವಾಮಿ ಆದಿದೇವಾನಂದ (ಅನು), ಶ್ರೀರಾಮಕೃಷ್ಣಾಶ್ರಮ, ಮೈಸೂರು, ೧೯೫೫, ೧-೪-೧೦.

೨ ನೋಡಿ, ಅಧ್ಯಾಯ ಭಗವಂತನ ಸ್ವರೂಪ.

೩ ತ್ಯಾಗರಾಜ ಕೀರ್ತನಲು ವಿಶೇಷ ವಿವರಣಮು ಸಂ.೨, ಕಲ್ಲೂರಿ ವೀರಭದ್ರಶಾಸ್ತ್ರಿ, ಸ್ವಧರ್ಮ ಸ್ವಾರಾಜ್ಯ ಸಂಘಮು, ಮದರಾಸು ೧೯೭೮, ಪುಟ ೬೨.

೪ ಶ್ರೀಮದ್ ವಾಲ್ಮೀಕಿ ರಾಮಾಯಣ, ಬಾಲಕಾಂಡ, ಅಧ್ಯಾಯ ೧, ಸರ್ಗ ೧ ಮತ್ತು ೨.

೫ ಅಧ್ಯಾತ್ಮ ರಾಮಾಯಣ (ಅನು), ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ, ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ, ೧೯೮೪, ಅಯೋಧ್ಯಾಕಾಂಡ, ಸರ್ಗ ೬.

೬ ತೈತ್ತರೀಯ ಉಪನಿಷತ್ ೧-೧೧-೨.

೭ ತ್ಯಾಗರಾಜ ಕೀರ್ತನಲು ವಿಶೇಷ ವಿವರಣಮು, ಸಂ. ೧, ಕಲ್ಲೂರಿ ವೀರಭದ್ರ ಶಾಸ್ತ್ರಿ, ಸ್ವಧರ್ಮ ಸ್ವಾರಾಜ್ಯ ಸಂಘಮು, ಮದರಾಸು, ೧೯೭೫, ಪುಟ ೧೯೨ ರಲ್ಲಿ ಉಲ್ಲೇಖಿಸಲ್ಪಟ್ಟಿದೆ.

೮ *ತಲ್ಲುಲವಲೆ ಜೂಚೆ* ಎಂಬ ಪಾಠಾಂತರವೂ *ತನ ಸುತುಲವಲೆ ಜೂಚೆ* ಎಂಬ ಪಾಠಾಂತರವೂ ಕಾಣಬರುತ್ತದೆ. ನೋಡಿ, ತ್ಯಾಗರಾಜ ಕೀರ್ತನಲು, ಸಂ. ೧, ಕಲ್ಲೂರಿ ವೀರಭದ್ರ ಶಾಸ್ತ್ರಿ, ಪುಟ ೧೨೨-೨೩ ಮತ್ತು *The Spiritual Heritage of Tyagaraja*, C. Ramanujachari and V. Raghavan, Sri Ramakrishna Math, Madras, 1966, ಪು. ೧೯೯. ಮೊದಲ ಪಾಠಾಂತರದಲ್ಲಿ ರಾಮನನ್ನು ಅಪೇಕ್ಷಿಸಿ ಬಂದ ಪುರಸ್ತ್ರೀಯರಲ್ಲಿ ಆತನು ಮಾತೃತ್ವವನ್ನು ಕಂಡನೆಂಬ ಅರ್ಥವಿದೆ. ಎರಡನೇ ಪಾಠಾಂತರದ ಪ್ರಕಾರ ಆ ಸ್ತ್ರೀಯರನ್ನು ತನ್ನ ಮಕ್ಕಳಂತೆ ಭಾವಿಸಿದನೆಂದು ಅರ್ಥವಾಗುತ್ತದೆ. ವಾಸ್ತವವಾಗಿ ಈ [illegible] ಸ್ವೀಕಾರಾರ್ಹವೇ ಸರಿ.

೯ ೪-೮.

೧೦ ಗೀತೆ ನೋಡಿ, ೪-೨೨, ೨೩.

೧೧ ೨-೬೬.

೧೨ ೭-೧೯.

೧೩ ೯-೨೬.

೧೪ ೯-೨೨.

೧೫ ನೋಡಿ, ಮೇಲಿನ ಉಲ್ಲೇಖ ೧೧.

೧೬ *Sri Ramanuja on the Gita*, S. S. Raghavachar, Sri Ramakrishna Ashrama, Mangalore, 1969, ಪುಟ ೪೮.

೧೭ ತ್ಯಾಗರಾಜರು ದಶಾವತಾರಗಳಲ್ಲಿ ಬುದ್ಧಾವತಾರವನ್ನು ಅಂಗೀಕರಿಸುವರಾದರೂ ಈ ಅವತಾರಕ್ಕೆ ಶಿವನ ತ್ರಿಪುರವಧೆಯೊಂದಿಗೆ ಸಂಬಂಧ ಕಲ್ಪಿಸಿದಂತಿಲ್ಲ. ಈ ರೀತಿಯ ಸಂಬಂಧ ಕಲ್ಪನೆಯನ್ನು ನಾವು ಅನ್ನಮಾಚಾರ್ಯರು, ಪುರಂದರರು ಹಾಗೂ ಕನಕದಾಸರಲ್ಲಿ ಕಾಣಬಹುದು. ನೋಡಿ, *Shri Annamacharya, A Philosophical Study,* Dr. H. L. Chandrasekhara, Vidyashankara Prakashana, Mysore 1990, P. 190 ಮತ್ತು ಶ್ರೀ ಕರ್ನಾಟಕ ಹರಿದಾಸ ಕೀರ್ತನ ತರಂಗಿಣಿ ಭಾಗ ೧-೨, ಶ್ರೀ ಪುರಂದರದಾಸರ ಕೃತಿಗಳು (ಸಂ.), ಸುಬೋಧ ಎಂ. ರಾಮರಾವ್, ಸುಬೋಧ ಪ್ರಕಟಣಾಲಯ, ಬೆಂಗಳೂರು, ೧೯೬೪, ಪುಟ ೨೧೨.

೧೮ ಬ್ರಹ್ಮಸೂತ್ರವನ್ನು ಕುರಿತು ರಾಮಾನುಜರು ಬರೆದಿರುವ ಭಾಷ್ಯಕ್ಕೆ ಶ್ರೀಭಾಷ್ಯವೆಂದು ಹೆಸರು. ಬ್ರಹ್ಮಸೂತ್ರವು ಬಾದರಾಯಣರಿಂದ ರಚಿತವಾದುದು. ಇದು ಇಡೀ ಉಪನಿಷತ್ತುಗಳ ಸಾರವನ್ನು ಸೂತ್ರಗಳ ರೂಪದಲ್ಲಿ ಮುಂದಿಡುತ್ತದೆ.

೧೯ ನೋಡಿ, ಅಧ್ಯಾಯ 'ಭಗವಂತನ ಸ್ವರೂಪ'

೨೦ *Hymns of Alwars,* J.S.M. Hooper, Oxford University Press, London, 1929, P. 24.

೨೧ ಅದೇ, ಪುಟ. ೫೮.

೨೨ ಅಧ್ಯಾತ್ಮ ರಾಮಾಯಣ, ಎಸ್. ಲಕ್ಷ್ಮೀನರಸಿಂಹಮೂರ್ತಿ, ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ, ೧೯೮೪, ಪುಟ ೫೮೭-೫೮೮.

೨೩ ಕ್ಷೇತ್ರ ವಿವರಣೆಗೆ ನೋಡಿ, *Immortal India,* Vol. I, J.H. Dave, Bharatiya Vidya Bhavan, 1970, ಅಧ್ಯಾಯ ೧.

೨೪ ತ್ಯಾಗರಾಜ ಕೀರ್ತನಲು, ಸಂ. ೨, ಕಲ್ಲೂರಿ ವೀರಭದ್ರ ಶಾಸ್ತ್ರಿ, ಪು. ೨೫೫.

೨೫ ಸಂಖ್ಯೆಗಳಿಂದ ಸ್ಫೂರ್ತಿ, ಎಸ್. ಜಿ. ನರಸಿಂಹಯ್ಯ, ಸ್ಟ್ಯಾಂಡರ್ಡ್ ಬುಕ್ ಡಿಪೋ, ಬೆಂಗಳೂರು,೧೯೮೩, ಪು. ೬೫.

೨೬ ವಿವರಕ್ಕಾಗಿ ನೋಡಿ, ಮೂರ್ತಿಶಿಲ್ಪ, ನೆಲೆ ಮತ್ತು ಹಿನ್ನೆಲೆ, ಎಸ್. ಕೆ. ರಾಮಚಂದ್ರರಾವ್, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು, ೧೯೭೫, ಅಧ್ಯಾಯ ೪.

೨೭ ತ್ಯಾಗರಾಜ ಕವಿತ್ವಮು, ವಿಮರ್ಶನಾತ್ಮಕ ಪರಿಶೀಲನಮು, ಎಸ್. ಶಮಂತಕಮಣಿ, ಮದರಾಸು ವಿಶ್ವವಿದ್ಯಾನಿಲಯ, ಮದರಾಸು, ೧೯೮೮, ಪು. ೬೯.

೨೮ ನೋಡಿ, ಸದ್ಗುರು ತ್ಯಾಗರಾಜರು, ವಿ. ಎಸ್. ಸಂಪತ್ಕುಮಾರಾಚಾರ್ಯ, ಗೀತಾ ಬುಕ್ ಹೌಸ್, ಮೈಸೂರು, ೧೯೮೭, ಪುಟ ೧೮೪ ; ಮತ್ತು ತ್ಯಾಗರಾಜು ಕವಿತ್ವಮು, ಎಸ್. ಶಮಂತಕಮಣಿ, ಮದರಾಸು ವಿಶ್ವವಿದ್ಯಾನಿಲಯ, ಮದರಾಸು, ೧೯೮೮, ಪುಟ ೭೪.

೨೯ ಸರ್ಗ ೭, ಶ್ಲೋಕ ೧-೪.

೩೦ ನೋಡಿ ವಾಲ್ಮೀಕಿ ರಾಮಾಯಣ, ಉತ್ತರಕಾಂಡ.

೩೧ ತ್ಯಾಗರಾಜ ಕೀರ್ತನಲು, ಸಂ. ೧, ಕಲ್ಲೂರಿ ವೀರಭದ್ರ ಶಾಸ್ತ್ರಿ, ಪು. ೩೯೪-೩೯೫.

೩೨ ನೋಡಿ ವಾಲ್ಮೀಕಿ ರಾಮಾಯಣ, ಬಾಲಕಾಂಡ, ಸರ್ಗ ೪೮, ಶ್ಲೋಕ ೨೯-೩೦.

೩೩ ನೋಡಿ, ಅಧ್ಯಾತ್ಮ ರಾಮಾಯಣ, ಬಾಲಕಾಂಡ, ಸರ್ಗ ೬, ಶ್ಲೋಕ ೧೩-೧೭.

೩೪ ಪುರಾಣ ಭಾರತ ಕೋಶ, ಯಜ್ಞನಾರಾಯಣ ಉಡುಪ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೪, ಪು. ೬೧೨.

೩೫ ಗೀತೆ ೯-೨೬.

೩೬ ವಾಲ್ಮೀಕಿ ರಾಮಾಯಣ, ಕಿಷ್ಕಿಂಧಾಕಾಂಡ ಮತ್ತು ಪುರಾಣನಾಮ ಚೂಡಾಮಣಿ, ಬೆನಗಲ್ ರಾಮರಾವ್ ಮತ್ತು ಪಾನ್ಯಂ ಸುಂದರಶಾಸ್ತ್ರಿ, ಮೈಸೂರು ವಿಶ್ವವಿದ್ಯಾನಿಲಯ, ೧೯೪೧, ಪು. ೬೭೨-೬೭೩.

೩೭ *Hindu Social Organisation*, Pandarinath H. Prabhu, Popular Prakashan, Bombay, 1961, ಪು. ೨೭೧.

೩೮ ವಾಲ್ಮೀಕಿ ರಾಮಾಯಣ, ಅರಣ್ಯಕಾಂಡ, ಸರ್ಗ ೧೮.

೩೯ ಅದೇ, ಅಯೋಧ್ಯಾಕಾಂಡ, ಸರ್ಗ ೭, ಶ್ಲೋಕ ೩೧-೩೬.

೪೦ ಅದೇ, ಯುದ್ಧಕಾಂಡ, ಸರ್ಗ ೬-೧೭.

೪೧ ಅದೇ, ಸುಂದರಕಾಂಡ, ಸರ್ಗ ೩೮.

೪೨ ಅದೇ, ಅಯೋಧ್ಯಾಕಾಂಡ, ಸರ್ಗ ೫೦.

೪೩ ಪ್ರಹ್ಲಾದ ಭಕ್ತಿ ವಿಜಯ ಪ್ರಥಮಾಂಕ, ಐದನೇ ಹಾಡು ಮತ್ತು ಚತುರ್ಥಾಂಕದಲ್ಲಿನ ಕಂದಪದ್ಯ.

೪೪ ಪುರಾಣ ಭಾರತ ಕೋಶ, ಯಜ್ಞನಾರಾಯಣ ಉಡುಪ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು,೧೯೯೪, ಪು. ೧೭೧.

೪೫ *Srimad Bhagavata* (Com.), Dr. V. Raghavan, Natesan & Co., ೧೯೩೭, ಪು. ೧೬೭.

೪೬ *Srimad Bhagavata* (Com.), V. Raghavan, ಪು. ೧೭೦-೧೭೭.

೪೭ *The Spiritual Heritage of Tyagaraja*, C. Ramanujachari & V. Raghavan - Text and Translation ಭಾಗದಲ್ಲಿ, ಪು. ೧೦೯.

೪೮ ತ್ಯಾಗರಾಜ ಕೀರ್ತನಲು, ಸಂ. ೧, ಕಲ್ಲೂರಿ ವೀರಭದ್ರಶಾಸ್ತ್ರಿ, ಸ್ವಧರ್ಮ ಸ್ವಾರಾಜ್ಯ ಸಂಘಮು, ಮದರಾಸು, ೧೯೭೫, ಪು. ೨೮೪.

೪೯ ತ್ಯಾಗರಾಜ ಕೀರ್ತನಲು, ಭಾಗ ೬, (ಸಂ.), ವಾಡ್ರೇವು ಪುರುಷೋತ್ತಂ, ತಿರುಮಲ ತಿರುಪತಿ ದೇವಸ್ಥಾನ, ೧೯೮೨, ಪು. ೫.

೫೦ ಹರಿದಾಸರ ಭಕ್ತಿ ಸ್ವರೂಪ, ಟಿ. ಎನ್. ನಾಗರತ್ನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೧೯೮೭, ಪು. ೨೧೩-೨೧೪ ರಲ್ಲಿ ಉಲ್ಲೇಖ.

೫೧ Srimad Bhagavata (Com.), V. Raghavan, ಪು . ೮೫-೮೬

೫೨ ಪುರಾಣ ಭಾರತಕೋಶ, ಯಜ್ಞನಾರಾಯಣ ಉಡುಪ, ಪು. ೩೨೩.

೫೩ ಪುರಾಣ ನಾಮ ಚೂಡಾಮಣಿ, ಬೆನಗಲ್ ರಾಮರಾವ್ ಮತ್ತು ಪಾನ್ಯಂ ಸುಂದರಶಾಸ್ತ್ರಿ, ಪು. ೫೮೪-೫೮೫.

೫೪ Pathway to God in Kannada Literature, R.D. Ranade, Karnatak University Dharwar and Bharatiya Vidya Bhavan, Bombay, ೧೯೬೦, ಪು. ೩೦೦-೩೦೧.

೫೫ *Srimad Bhagavata* (Com.), V. Raghavan, ಪು. ೧೯೫-೨೧೬; ಪುರಾಣನಾಮ ಚೂಡಾಮಣಿ, ಬೆನಗಲ್ ರಾಮರಾವ್ ಮತ್ತು ಪಾನ್ಯಂ ಸುಂದರಶಾಸ್ತ್ರಿ, ಪು. ೪೩೫-೪೩೬.

೫೬ ಹಿಂದೂ ಧರ್ಮದ ಪರಿಚಯ, ಎದುರ್ಕಳ ಶಂಕರ ನಾರಾಯಣ ಭಟ್, ಶ್ರೀರಾಮಕೃಷ್ಣ ಪ್ರಕಾಶನ, ಕೊಡಗು ಜಿಲ್ಲೆ (ಮೈಸೂರು ರಾಜ್ಯ), ೧೯೬೮, ಪು. ೪೯೪-೪೯೫.

೫೭ ವಾಲ್ಮೀಕಿ ರಾಮಾಯಣ, ಬಾಲಕಾಂಡ, ಸರ್ಗ ೨೨, ಶ್ಲೋಕ ೧೧-೨೦.

೫೮ *Great Composers - II*, Tyagaraja, P. Sambamurthy, p. 154-155.

೫೯ ಅದೇ, ಪು. ೧೫೫-೧೫೮.

೬೦ ನೋಡಿ, ವಾಲ್ಮೀಕಿ ರಾಮಾಯಣ, ಯುದ್ಧಕಾಂಡ, ಸರ್ಗ ೧೩೧, ಶ್ಲೋಕ ೫೯-೭೬, ಮತ್ತು ಅಧ್ಯಾತ್ಮ ರಾಮಾಯಣ ಯುದ್ಧಕಾಂಡ, ಸರ್ಗ ೧೬, ಶ್ಲೋಕ ೨-೩.

೬೧ ತ್ಯಾಗರಾಜು ಕವಿತ್ವಮು, ವಿಮರ್ಶನಾತ್ಮಕ ಪರಿಶೀಲನಮು, ಎಸ್. ಶಮಂತಕಮಣಿ, ತೆಲುಗು ವಿಶ್ವವಿದ್ಯಾನಿಲಯದ ಆರ್ಥಿಕ ಸಹಾಯದೊಂದಿಗೆ ಮುದ್ರಿತವಾದುದು, ೧೯೮೮, ಪು. ೭೦.

# ತ್ಯಾಗರಾಜರ ರಚನೆಗಳಲ್ಲಿ ಸಾಮಾಜಿಕ ಮತ್ತು ನೈತಿಕ ಅಂಶಗಳು

**ಸಾಮಾಜಿಕ ಅಂಶಗಳು** : 'Man is a gregarious Animal' ಎಂಬುದು ಅರಿಸ್ಟಾಟಲ್‌ನ ಉಕ್ತಿ ಅರ್ಥಾತ್ ಮನುಷ್ಯ ಗುಂಪಿನಲ್ಲಿ ಜೀವಿಸುವ ಸ್ವಭಾವವುಳ್ಳ ಜೀವಿ. ಅಸಂಖ್ಯ ಮಂದಿಯಿಂದ ಕೂಡಿದ ಗುಂಪೇ ಸಮಾಜ. ಕವಿಯಾಗಲೀ, ವಾಗ್ಗೇಯಕಾರನಾಗಲೀ, ಕಲಾವಿದನಾಗಲೀ ಇಂತಹ ಸಮಾಜದ ಒಂದು ಭಾಗವೇ ಆಗಿರುತ್ತಾನೆ. ಈತ ಸೃಷ್ಟಿಸುವ ಯಾವುದೇ ಕೃತಿಯೂ ಸಾಮಾಜಿಕ ಸಂದರ್ಭಗಳಲ್ಲಿ ಮೂಡಿಬರುವುದರಿಂದ ಅದರಲ್ಲಿ ಸಾಮಾಜಿಕತೆಯ ಸೋಂಕು ಇಲ್ಲದಿರುವುದು ಸಾಧ್ಯವಿಲ್ಲ. ಇಲ್ಲಿನ ಜನರ ರೀತಿ-ನೀತಿಗಳನ್ನು ಈತ ತನ್ನ ರಚನೆಗಳಲ್ಲಿ ಪ್ರಾಸಂಗಿಕವಾಗಿಯಾದರೂ ಪ್ರಸ್ತಾಪಿಸಿರುತ್ತಾನೆ. ಸಮಾಜವೊಂದು ಬೇರೆಬೇರೆ ಕಾಲಗಳಲ್ಲಿ, ಬೇರೆಬೇರೆ ಹಂತಗಳಲ್ಲಿ ವ್ಯತ್ಯಾಸ ಹೊಂದಬಹುದಾದರೂ ಸಾಮಾನ್ಯವಾದ ಕೆಲವು ಚಿಂತನೆ ಹಾಗೂ ಮೌಲ್ಯಗಳು ಯಥಾರೀತಿ ಉಳಿದುಕೊಳ್ಳುವುದುಂಟು. ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ತ್ಯಾಗರಾಜರ ರಚನೆಗಳಲ್ಲಿ ಕಾಣಬರುವ ಸಾಮಾಜಿಕ ಅಂಶಗಳನ್ನು ಅಧ್ಯಯನ ಮಾಡಬೇಕಾಗುತ್ತದೆ.

ಸಮಾಜವೊಂದರಲ್ಲಿ ನಿರ್ದಿಷ್ಟ ಸಂಸ್ಕೃತಿಯ ಚೌಕಟ್ಟಿಗೆ ಒಳಪಟ್ಟ ಜನರಿದ್ದರೂ ಅವರ ನಡುವೆಯೂ ವೈವಿಧ್ಯ ಕಾಣಬರುತ್ತದೆ. ಹೀಗೆ ತ್ಯಾಗರಾಜರು ನಿರೂಪಿಸುವ ಸಮಾಜದಲ್ಲೂ ದರಿದ್ರರು, ದುರಹಂಕಾರಿಗಳು, ನಿಕೃಷ್ಟ ಮತಾನುಸಾರಿಗಳು, ತಾರುಮಾರು ಕೆಲಸಗಳನ್ನು ಮಾಡುವವರು, ದಾರಿತಿಳಿಯದ ಅಜ್ಞರು, ವಿಕೃತ ಕೆಲಸಗಳಲ್ಲಿ ತೊಡಗಿದವರು ಹಾಗೂ ಸಂಸಾರಿಗಳು ಇದ್ದಾರೆ.

**ದಾರಿ ತೆಲಿಯಲೇರು ಕೊಂದರು**
**ದರಿದ್ರುಲೈನಾರು ಸುದುರಹಂ**
**ಕಾರುಲೈ ಪರಮ ನಿಕೃಷ್ಟ ಮತಾಚಾರುಲೈನಾರು**
**ಚಾರುಲೈನಾರು ಆದಿಗಾಕ ತಾರು**
**ಮಾರು ಪನುಲುಚೇಸೇರು ಸಂ**
**ಸಾರುಲೈನಾರು . . . . . . .**

**(ಸರ್ವಾಂತರ್ಯಾಮಿ ನೀವನೇ)**

ಇಷ್ಟಲ್ಲದೆ ಉಪಕರಿಸಿದರೆ ಪ್ರತಿಯಾಗಿ ಅಪಕರಿಸುವವರೂ, ಚಪಲಚಿತ್ತರಾದ ಡಾಂಭಿಕರೂ, ವಿದ್ಯಾಗರ್ವದಿಂದ ಅವಿದ್ಯಾವಶರಾಗಿ ವೇದಶಾಸ್ತ್ರ ಪುರಾಣ ವಿದ್ಯೆಗಳ

ಮೂಲಕ ಕೊನೆಯಿಲ್ಲದ ವಾದಗಳಲ್ಲಿ ಭ್ರಮಿಸುವವರೂ, ಸ್ವರ್ಗಾದಿ ಭೋಗಗಳಿಗಾಗಿ ಭುವಿಯಲ್ಲಿ ರಾಜಸರಾಗಿ ಯಾಗಾದಿಕರ್ಮಗಳನ್ನು ಆಚರಿಸುವವರೂ ಇದ್ದಾರೆ. ಈ ಮಂದಿಯ ಬಗೆಗೆ ತ್ಯಾಗರಾಜರಿಗೆ ತೀವ್ರ ಕಾಳಜಿಯಿದೆ. ವಿವೇಕರಹಿತರಾಗಿ, ಕಾಲ ಹರಣ ಮಾಡುವ ಇವರನ್ನು ಒಂದಲ್ಲ ಮತ್ತೊಂದು ವಿಧದಲ್ಲಿ ತಿದ್ದುವ, ಸನ್ಮಾರ್ಗಕ್ಕೆ ಒಯ್ಯುವ ಕಾರ್ಯವನ್ನು ಪರೋಕ್ಷವಾಗಿ ತ್ಯಾಗರಾಜರು ಮಾಡಿದ್ದಾರೆ. **ಅವರ ಸಾಮಾಜಿಕ ಕಳಕಳಿಯೆಲ್ಲವೂ ದೈವಿಕನೆಲೆಯಲ್ಲಿ ವ್ಯಕ್ತವಾಗುತ್ತಿತ್ತೆಂಬುದು ನಾವು ಗಮನಿಸಬೇಕಾದ ಅಂಶ. ಆದರೆ ಅವರು ತಾವೊಬ್ಬ ಸಮಾಜ ಸುಧಾರಕರೆಂದು ಎಲ್ಲೂ ಘೋಷಿಸಿ ಕೊಳ್ಳದಿರುವುದು ಅತ್ಯಂತ ಗಮನಾರ್ಹ.** ಲೋಕೋಪಕಾರದ ಈ ಕೆಲಸ ಸಮರ್ಥವಾಗಿ ಜರುಗಲು ಅವರು ದಾರಿಕಾಣದವರಿಗೆ ದಾರಿತೋರಿದ್ದಾರೆ, ದಾರಿತಪ್ಪಿದವರನ್ನು ಎಚ್ಚರಿಸಿದ್ದಾರೆ. ಜನಸಾಮಾನ್ಯರು ಮಾಡುವ ತಪ್ಪುಗಳನ್ನು ತಮ್ಮ ಮೇಲೆ ಆರೋಪಿಸಿ ಕೊಂಡು ನೈಚ್ಯಾನುಸಂಧಾನ ಮಾಡಿದ್ದಾರೆ. ಒಳ್ಳೆಯ ಮಾತುಗಳಿಂದ ಬೋಧಿಸಿದ್ದಾರೆ, ಟೀಕಿಸಿದ್ದಾರೆ, ವಿಡಂಬನೆ ಮಾಡಿದ್ದಾರೆ. ಸ್ವತಃ ಸರಳಜೀವನ ನಡೆಸಿ ಭಕ್ತಿ-ವಿರಕ್ತಿಗಳು ಕಲೆತಿರುವಂತೆ ಬಾಳಿತೋರಿದ್ದಾರೆ. ಸ್ವಾರ್ಥಿಯಾಗಿ ತಮ್ಮನ್ನು ಮಾತ್ರ ರಕ್ಷಿಸುವಂತೆ ಭಗವಂತನಲ್ಲಿ ಪ್ರಾರ್ಥಿಸದೆ 'ಬ್ರೋವುಮಿಕ ನಿಜದಾಸುಲಕು' ಎಂದು ನಿಜಭಕ್ತರೆಲ್ಲ ರನ್ನೂ ರಕ್ಷಿಸಬೇಕೆಂದು ಮನಸಾರ ಕೋರುತ್ತಾರೆ. ಹೀಗೆ ಅವರು ಭಕ್ತರಲ್ಲಿ ಭಕ್ತರಾಗಿ, ಭಾವುಕರಲ್ಲಿ ಭಾವುಕರಾಗಿ, ಸಮಾಜದ ಒಂದು ವ್ಯಕ್ತಿಯಾಗಿ ಭಕ್ತಿ ಅಡಿಪಾಯದ ಮೇಲೆ ಸಾಮಾಜಿಕರನ್ನು ಉದ್ಧರಿಸಲು ಯತ್ನಿಸಿದ್ದಾರೆ. ದೈವಿಕ ನೆಲೆಯಿಲ್ಲದೆ ಯಾವುದೇ ಸುಧಾರಣೆಯೂ ವ್ಯರ್ಥವೆಂಬ ನಿಲುವಿನಿಂದ ಅವರು ಪ್ರಸ್ತಾಪಿಸುವ ಸಾಮಾಜಿಕವಾದ ಯಾವುದೇ ಅಂಶವೂ ಕೊನೆಗೊಳ್ಳುವುದು ಮಾತ್ರ ಅಧ್ಯಾತ್ಮದಲ್ಲೇ ಆಗಿದೆ.

ತ್ಯಾಗರಾಜರ ರಚನೆಗಳಲ್ಲಿ ಕಾಣಬರುವ ಸಾಮಾಜಿಕ ಅಂಶಗಳನ್ನು ಹೀಗೆ ಗುರುತಿಸ ಬಹುದು.

ಅ. ಕುಟುಂಬ ಅಥವಾ ಸಂಸಾರ

ಆ. ಸ್ತ್ರೀ ಸ್ಥಾನ

ಇ. ಪದವಿ ಮತ್ತು ವಿದ್ಯಾಭ್ಯಾಸ

ಈ. ವರ್ಣ ಮತ್ತು ಆಶ್ರಮ ಭೇದಗಳು

ಉ. ರಾಜ್ಯಾಡಳಿತ ನೀತಿ

ಊ. ವಿವಾಹ-ಕನ್ಯಾಶುಲ್ಕ ಪದ್ಧತಿ-ನಾಮಕರಣ

ಋ. ಯಜ್ಞಯಾಗಾದಿ ಕಾರ್ಯಗಳು

ೠ. ಕ್ಷುದ್ರದೇವತಾಪೂಜೆ

ಎ. ಇನ್ನಿತರ ಆಚಾರ ವಿಚಾರಗಳು–ಆಹಾರಪಾನೀಯಗಳು, ಮನೋಲ್ಲಾಸ ಅಥವಾ ವಿನೋದಕ್ಕೆ ಬಳಸುತ್ತಿದ್ದ ಅಲಂಕರಣ ವಸ್ತುಗಳು ಹಾಗೂ ಆಟ ಗಳು, ಗೃಹೋಪಕರಣ ಸಾಮಗ್ರಿಗಳು ಮುಂತಾದವು.

**(ಅ) ಕುಟುಂಬ ಅಥವಾ ಸಂಸಾರ** : ಸಮಾಜದ ಪ್ರಾಥಮಿಕ ಬುನಾದಿ ಕುಟುಂಬ. ಕುಟುಂಬವಿಲ್ಲದೆ ಸಮಾಜವಿಲ್ಲ. ಭಾರತೀಯರಲ್ಲಿ ಕುಟುಂಬ ಮತ್ತು ಸಮಾಜದ ಪರಿಕಲ್ಪನೆ ಬಹು ವಿಶಾಲವಾದುದು. ಇಲ್ಲಿ ಸಮಾಜವು ಮಾನವರನ್ನಷ್ಟೆ ಅಲ್ಲ, ಮಾನವೇತರ ಜಂತುಗಳನ್ನೂ ಒಳಗೊಳ್ಳುತ್ತದೆ. ಸಮಾಜಶಾಸ್ತ್ರದ ಪ್ರಕಾರ ಮನುಷ್ಯನು ಸಮಾಜದಿಂದ ತಾನು ಪಡೆದುಕೊಂಡುದನ್ನು ಕೃತಜ್ಞತಾಪೂರ್ವಕವಾಗಿ ಸಮಾಜಕ್ಕೆ ಹಿಂತಿರುಗಿಸಬೇಕು. ಇಲ್ಲದಿದ್ದಲ್ಲಿ ಆತ ಋಣಮುಕ್ತನಾಗಲೀ, ಮೋಕ್ಷಾರ್ಹನಾಗಲೀ ಆಗಲಾರ. ಈ ದೃಷ್ಟಿಯಿಂದಲೇ ಸಂತರು ಸಮಾಜದಲ್ಲಿ ಪ್ರತಿಯೊಬ್ಬನ ಕರ್ತವ್ಯ ಗಳನ್ನು ಪ್ರಸ್ತಾಪಿಸುವುದು.

ತ್ಯಾಗರಾಜರು ಸಂಸಾರವನ್ನು ಅಶಾಶ್ವತವೆನ್ನುವರಾದರೂ ಮನೆಯೊಡೆಯ ಅಥವಾ ಗೃಹಸ್ಥನು ಋಣಮುಕ್ತನಾಗಲು ಹಾಗೂ ಅಧ್ಯಾತ್ಮದಲ್ಲಿ ಮೇಲೇರಲು ಕೆಲವು ಕರ್ತವ್ಯಗಳಲ್ಲಿ ತೊಡಗಲೇಬೇಕೆಂದು ಗೃಹಸ್ಥನಿಗೆ ಸೂಚಿಸುತ್ತಾರೆ. ಈ ಭಾವಗಳನ್ನು ನಿನ್ನೇನೆರನಮ್ಮಿನಾನು (ಆರಭಿ), ಎಂದುಕೋ ಬಾಗತೆಲಿಯದು (ಮೋಹನ), ಸಂಸಾರುಲ್ಲೈತೆಏಮಯ್ಯ (ಸಾವೇರಿ) ಕೃತಿಗಳಲ್ಲಿ ಕಾಣಬಹುದು. ಈ ಪ್ರಕಾರ,

ಅ. ಆತ ಧರ್ಮಸಮ್ಮತವಾಗಿ ಆರ್ಜಿಸಿ ಸತಿಸುತರನ್ನು ರಕ್ಷಿಸಬೇಕು

ಆ. ಹೀಗೆ ಆರ್ಜಿಸಿದುದರಲ್ಲೆ ಅತಿಥಿಯಜ್ಞವನ್ನೂ ಮಾಡಬೇಕು.

ಇ. ತನ್ನ ಹೆಂಡತಿ ಮಕ್ಕಳನ್ನು ದೇವರ ಪರಿಚಾರಕರನ್ನಾಗಿಸಬೇಕು.

ಆರ್ಜಿಸುವ ಮಾರ್ಗ ಮುಖ್ಯವಲ್ಲ, ಅನುಭವಿಸುವುದೇ ಮುಖ್ಯ ಎಂಬ ಚಾರುವಾಕರ ಮಾರ್ಗವನ್ನು[೧] ತ್ಯಾಗರಾಜರು ಒಪ್ಪುವುದಿಲ್ಲ. ಆರ್ಜನೆ-ಅನುಭವಿಸುವಿಕೆಗಳೆರಡರಲ್ಲೂ ಧರ್ಮಸಮ್ಮತಿ ಕಾಣಬೇಕೆಂಬುದು ಅವರ ಅಭಿಪ್ರಾಯ. ಆದ್ದರಿಂದಲೇ ತ್ಯಾಗರಾಜರು ಸತಿ-ಸುತರನ್ನು ರಕ್ಷಿಸುವಲ್ಲಿ ಅಗತ್ಯವಸ್ತುಗಳ ಆರ್ಜನೆ ನ್ಯಾಯವಾಗಿರಬೇಕೆನ್ನುತ್ತಾರೆ.

ನಮ್ಮ ಶಾಸ್ತ್ರಗ್ರಂಥಗಳು ಗೃಹಸ್ಥನಿಗೆ ವಿಧಿಸಲಾದ ಪಂಚಮಹಾಯಜ್ಞಗಳಲ್ಲಿ[೨]* ಒಂದಾದ ಅತಿಥಿಯಜ್ಞವನ್ನಿಲ್ಲಿ ತ್ಯಾಗರಾಜರು ಪ್ರಸ್ತಾಪಿಸಿದ್ದಾರೆ. ತಾನು ಸಂಪಾದಿಸಿದ್ದರಲ್ಲಿ ತಾನು ಮತ್ತು ತನ್ನ ಸಂಸಾರದ ಮಂದಿ ಮಾತ್ರ ಹಸಿವು ನೀಗಿಸಿಕೊಂಡರೆ ಸಾಲದು, ಬಂದ ಅತಿಥಿಗಳೊಂದಿಗೂ ಹಂಚಿ ತಿನ್ನಬೇಕೆಂಬ ನೈತಿಕ ಹಾಗೂ ಸಾಮಾಜಿಕ ಅಂಶಗಳೆರಡೂ ಈ ಮಾತಿನಲ್ಲಿ ಅಳವಟ್ಟಿದೆ.

ಮೇಲಿನ ಎರಡು ಅಭಿಪ್ರಾಯಗಳಿಗಿಂತ ಮಿಗಿಲಾಗಿ ಗೃಹಸ್ಥನ ಗುರುತರ ಹೊಣೆಯೆಂದರೆ, ತಾನು ಮಾತ್ರ ದೇವರ ಪರಿಚಾರಕನಾದರೆ ಸಾಲದು, ತನ್ನ ಪತ್ನಿ ಪುತ್ರರನ್ನೂ ಆತನ ಕಿಂಕರರಾಗಿಸಬೇಕೆಂಬ ಹೊಣೆಯನ್ನು ನೆನಪುಮಾಡುತ್ತಾರೆ.

ಇಲ್ಲಿ ನಾವು ಗಮನಿಸಬೇಕಾದ ಅಂಶವೆಂದರೆ, ತ್ಯಾಗರಾಜರ ಪ್ರಕಾರ ಒಬ್ಬನು

---

* ಪಂಚಮಹಾಯಜ್ಞಗಳು-ಬ್ರಹ್ಮಯಜ್ಞ ಪಿತೃಯಜ್ಞ ದೇವಯಜ್ಞ ಭೂತಯಜ್ಞ ಹಾಗೂ ಅತಿಥಿ ಯಜ್ಞ

ಸಂಸಾರಿಯಾಗಿ ಪತ್ನಿ ಪುತ್ರರೊಂದಿಗೆ ಕೂಡಿಬಾಳುವುದು ತಪ್ಪಿಲ್ಲ. ಸಂಸಾರಿಯಾದವನು ಕಾಷಾಯವಸ್ತ್ರ ಧರಿಸಿ ತನ್ನ ಕರ್ತವ್ಯವನ್ನು ಬಿಟ್ಟು ಓಡಬೇಕೆಂದೂ ಅವರು ಹೇಳುವುದಿಲ್ಲ. ಅದಕ್ಕೆ ಬದಲಾಗಿ ಸಂಸಾರದಲ್ಲಿದ್ದೂ ಸಾಧನೆ ಮಾಡಬಹುದೆಂಬ ಅರಿವನ್ನು ಮನದಟ್ಟು ಮಾಡಿದ್ದಾರೆ.

ಗೃಹಿಣಿ ಅಥವಾ ಯಜಮಾನಿ ಹೇಗಿರಬೇಕೆಂಬುದಕ್ಕೆ ಅವರಿಗೆ ಆದರ್ಶ ಸೀತಾಮಾತೆಯೇ. ಈಕೆ ತನ್ನ ಪತಿಯ ಸೇವೆ ಮಾಡುತ್ತಾ ಆತನ ಬೇಕು-ಬೇಡಗಳನ್ನು ಅರಿತು, ಆತನ ಕೀರ್ತಿಗೆ ಭಂಗತಾರದಂತಿರಬೇಕು. ಪತಿಯ ಘನತೆಯನ್ನು ಕಾಪಾಡುವಲ್ಲಿ ಜಾಗರೂಕಳಾಗಿರಬೇಕು. ತ್ಯಾಗರಾಜರು ಚಿತ್ರಿಸುವ ಸೀತಾಮಾತೆ ಒಂದೆಡೆ ಪತಿಗೆ ಬಂಗಾರದ ಬೀಸಣಿಗೆಯಿಂದ ಗಾಳಿಬೀಸಲು ಸಿದ್ಧಳಾಗಿದ್ದಾಳೆ. ಇನ್ನೊಂದೆಡೆ ಆಹಾರ ಮತ್ತು ತಾಂಬೂಲಗಳನ್ನು ನೀಡುತ್ತಾಳೆ. ಮತ್ತೊಂದೆಡೆ ದುಷ್ಟಸಂಹಾರ ಮಾಡುವ ಸಾಮರ್ಥ್ಯವನ್ನು ತಾನೇ ಹೊಂದಿದ್ದರೂ, ದುಷ್ಟರನ್ನು ಸಂಹರಿಸಿದ ಕೀರ್ತಿ ಪತಿಗೇ ಸಲ್ಲಲಿ ಎಂದು ತ್ಯಾಗಮಾಡಿದ್ದಾಳೆ.[೩]

**ಕನಕಮೌ ಸುರಟಿಬಟ್ಟಿ ಗಾಚಿನದಿ**
(ಬಂಗಾರದ ಬೀಸಣಿಗೆ ಹಿಡಿದು ಕಾದಿದ್ದಾಳೆ)

(**ಶ್ರೀರಾಮರಾಮರಾಮ ಶ್ರೀಮಾನಸಾಬ್ಧಿಸೋಮ**)

**ಭುಜಿಯಿಂಪ ಬೆಟ್ಟಸತಿ**
(ಉಣಬಡಿಸಲು ನೀಡುವ ಸತಿ)

(**ನೇಪೊಗಡಕುಂಟೇ**)

**ಜನಕಜಾ ಪವಿತ್ರಿತಮೌ ವೆನ್ನ ಪಾಲಾರಗಿಂಪವೇ**
(ಸೀತೆಯ ಕರಸ್ಪರ್ಶದಿಂದ ಪವಿತ್ರವಾದ ಹಾಲ್ಬೆಣ್ಣೆಗಳನ್ನು ಸ್ವೀಕರಿಸು)

(**ಆರಗಿಂಪವೇ**)

**ಕಮ್ಮನಿ ವಿಡೆಮೊಸಗುಯಾ ಜನಕಾತ್ಮಜ**
**(ಸಿಹಿಯಾದ ತಾಂಬೂಲ ನೀಡುವ ಸೀತಾಮಾತೆ)**

(**ಲಾಲಿಯೂಗವೇ**)

**ಪುಡಮಿತನಯಚೇತಿ ಮಂಚಿ ಮಡಪುಲನುಬು**
(ಸೀತಾಕರಸ್ಪರ್ಶದಿಂದ ಪವಿತ್ರವಾದುದೆಂದು)

(**ವಿಡಮು ಸೇಯವೇ**)

**ವಾನಿಮಾಟಲಕು ಕೋಪಗಿಂಚಿ ಕಂಟ ವಧಿಯಿಂಚಕನೆಯುಂಡಿ**
**ಶ್ರೀನಾಯಕ ಯಶಮುನೀಕೆ ಕಲ್ಗ ಜೇಯಲೇದಾ ?**

(ರಾವಣನ ಮಾತುಗಳಿಂದ ಕೋಪಗೊಂಡು ಆತನನ್ನು ವಧಿಸದೆ, ಆ ಯಶಸ್ಸು ನಿನಗೇ ಸಲ್ಲುವಂತೆ ಮಾಡಲಿಲ್ಲವೇ ?)

(**ಮಾಜಾನಕಿ**)

ಯಾಂತ್ರಿಕ ಬದುಕಿನ ಇಂದಿನ ದಿನಗಳಲ್ಲಿ ಸೀತಾಮಾತೆಯ ಆದರ್ಶದಂತೆ ಸ್ತ್ರೀಯರು ನಡೆದುಕೊಳ್ಳುವ ಸಾಧ್ಯಾಸಾಧ್ಯತೆಗಳ ಚರ್ಚೆ ಇಲ್ಲಿಯ ಉದ್ದೇಶವಲ್ಲ. ಆದರೆ ತ್ಯಾಗರಾಜರ ಭಾವನೆಯಲ್ಲಿದ್ದ ಆದರ್ಶ ಗೃಹಿಣಿಯ ಚಿತ್ರಣ ನೀಡುವುದಷ್ಟೇ ಇಲ್ಲಿನ ಗುರಿ.

ಇನ್ನು ಸೋದರರ ನಡುವೆ ಇರಬೇಕಾದ ಸಾಮರಸ್ಯಕ್ಕೆ ತ್ಯಾಗರಾಜರು ರಾಮ ಮತ್ತು ಆತನ ಸಹೋದರರನ್ನೇ ಮಾದರಿಯಾಗಿ ಭಾವಿಸುತ್ತಾರೆ. ಅವರ ಪ್ರಕಾರ ಹಿರಿಯನಾದ ರಾಮ, ಕಿರಿಯರಲ್ಲಿ ವಿಶ್ವಾಸ ಮತ್ತು ಪೂರ್ಣ ನಂಬಿಕೆಯನ್ನೂ, ಕಿರಿಯರಾದ, ಲಕ್ಷ್ಮಣಾದಿಗಳು ರಾಮನಲ್ಲಿ ಗೌರವವನ್ನೂ ತೋರುತ್ತಾರೆ.

**(ಆ) ಸ್ತ್ರೀ ಸ್ಥಾನ*** : 'ಸ್ತ್ರೀಯರ ಶರೀರ ನೋಡಿ ಮೋಸಹೋಗಬೇಡ'–ಎಂಬ ತ್ಯಾಗರಾಜರ ಕಟುವಾದ ಮಾತು ಅವರೊಬ್ಬ ಸ್ತ್ರೀದ್ವೇಷಿ ಇರಬಹುದೆಂಬ ಭಾವನೆಯನ್ನು ಓದುಗರಲ್ಲಿ ಮೂಡಿಸುತ್ತದೆ. ಆದರೆ ವಾಸ್ತವವಾಗಿ ಅವರು ಸ್ತ್ರೀಯರನ್ನು ಗೌರವಿಸುತ್ತಾರೆ. ಸ್ತ್ರೀಯರ ಬಗೆಗೆ ಕೀಳು ಮನೋಭಾವ ಅವರಲ್ಲಿ ಮನೆಮಾಡಿಕೊಂಡಿದ್ದಲ್ಲಿ ಅವರು ಸ್ವತಃ ಸ್ತ್ರೀ ಸ್ಥಾನದಲ್ಲಿ ನಿಂತು ನಾಯಿಕಾಭಾವದಿಂದ ರಾಮನನ್ನು (ಕೆಲವು ರಚನೆಗಳಲ್ಲಾದರೂ) ಹಾಡುತ್ತಿರಲಿಲ್ಲ. 'ಚನಿ ತೋಡಿತೇವೆ'ಯಂಥ ಕೆಲವು ರಚನೆಗಳಲ್ಲಿ ಅವರು ಸ್ಫೂರ್ತಿಯಲ್ಲಿ ಸ್ತ್ರೀಯಾಗಿ ಹಾಡಿದ್ದಾರೆ. ಭಕ್ತನು ಸ್ಫೂರ್ತಿಯಲ್ಲಿ ಸ್ತ್ರೀಯಾದಾಗ ಅಧ್ಯಾತ್ಮ ಪ್ರಗತಿ ಸುಲಭವೆಂದು ಆರಾಧಿಸಿದ ಹಲವು ಸಂತರ ಚಿಂತನೆ ತ್ಯಾಗರಾಜರಲ್ಲೂ ಕಾಣಬರುತ್ತದೆ.[†] ಹೀಗಾಗಿ ತ್ಯಾಗರಾಜರೇನೂ ಸ್ತ್ರೀದ್ವೇಷಿಯಲ್ಲವೆಂಬುದು ಸ್ಪಷ್ಟವಾಗುತ್ತದೆ. ಅವರ ಆದರ್ಶದೈವನಾದ ಶ್ರೀರಾಮನಂತೆಯೆ, ಪತ್ನಿಯನ್ನುಳಿದು ಇತರ ಸ್ತ್ರೀಯರನ್ನು ತಾಯಿ ಅಥವಾ ಸಹೋದರಿಯರಂತೆ ಕಾಣಬೇಕೆಂಬ ಬೋಧನೆ ಮತ್ತೆಮತ್ತೆ ಅವರಲ್ಲಿ ಕಾಣಬರುತ್ತದೆ. ಹೀಗಾಗಿ ತ್ಯಾಗರಾಜರ ದೃಷ್ಟಿಯಲ್ಲಿ ಸ್ತ್ರೀಯರು ಗೌರವಾರ್ಹರೇ ಸರಿ.

**(ಇ) ಪದವಿ ಮತ್ತು ವಿದ್ಯಾಭ್ಯಾಸ** : ಇಂದಿನ ಶೈಕ್ಷಣಿಕ ಹಿನ್ನೆಲೆಯಲ್ಲಿ ಪದವಿ ಎಂಬ ಶಬ್ದವು ಸಾಮಾನ್ಯವಾಗಿ ಬಳಕೆಯಾಗಿ, ಅದು ಜ್ಞಾನದ ದ್ಯೋತಕವೆಂದೂ, ಹೊಟ್ಟೆಯ ಪಾಡಿಗಾಗಿ ಗಳಿಸಬೇಕಾದ ಅರ್ಹತೆಯೆಂದೂ ತಿಳಿಯಲಾಗಿದೆ. ಆದರೆ ತ್ಯಾಗರಾಜರು ಹೇಳುವ ಪದವಿ ಇದಲ್ಲ. ಅವರು ಹೇಳುವ ವಿದ್ಯೆ—ವೇದಶಾಸ್ತ್ರ ಪುರಾಣಗಳನ್ನು ತಿಳಿಯುವುದು. ಅವರ ಪ್ರಕಾರ ಪದವಿಯು ಸತ್ಯವನ್ನು ಕುರಿತ ಜ್ಞಾನ, ಎಂದರೆ ಪಾರಮಾರ್ಥಿಕ ಜ್ಞಾನ. ಬ್ರಹ್ಮವಸ್ತುವನ್ನು ಅರಿತು, ಸಂಸಾರ ಬಂಧನದಿಂದ ಮುಕ್ತನಾಗುವುದೇ ಪದವಿ.[♥] ವೇದೋಪನಿಷತ್ತುಗಳನ್ನು ಅಧ್ಯಯನ ಮಾಡಿ, ಅದರ ಸತ್ವನಾದ

---

* ಸ್ತ್ರೀ ವಿಷಯವನ್ನು ನೈತಿಕಾಂಶ ಎಂಬ ಅಧ್ಯಾಯದಲ್ಲೂ ಪ್ರಸ್ತಾಪಿಸಲಾಗಿದೆಯಾದರೂ ಇಲ್ಲಿ ಸಾಮಾಜಿಕ ದೃಷ್ಟಿಕೋನದಿಂದಲೂ, ಅಲ್ಲಿ ನೈತಿಕ ದೃಷ್ಟಿಕೋನದಿಂದಲೂ ಈ ವಿಷಯವನ್ನು ಅಧ್ಯಯನ ಮಾಡಲಾಗಿದೆ.

† ಮಧುರಭಾವದಲ್ಲಿ ಇದನ್ನು ವಿವರಿಸಲಾಗಿದೆ.

ಬ್ರಹ್ಮನನ್ನು ಅರಿಯುವುದೇ, ಸದ್ಭಕ್ತಿ ಹೊಂದುವುದೇ, ನಿಜವಾದ ಪದವಿಯೆ ಹೊರತು ಲೌಕಿಕ ಲಾಭದಿಂದ ಕೂಡಿದುದಲ್ಲ. ಎಂದರೆ ದೈವಿಕ ಕೇಂದ್ರವನ್ನುಳ್ಳ ಶಿಕ್ಷಣವೇ ನೈಜ ಶಿಕ್ಷಣ ಎಂಬುದು ಭಾವ.

ತ್ಯಾಗರಾಜರು 'ಪದವಿ'ಯ ಬಗ್ಗೆ ಹೀಗೆ ಹೇಳುತ್ತಾರೆ. ವೇದಶಾಸ್ತ್ರ ಉಪನಿಷತ್ತುಗಳ ಸತ್ವ ತಿಳಿಯದೆ ಇರುವುದು ಪದವಿಯಲ್ಲ, ಧನದಾರ ಸುತಾಗಾರ ಸಂಪತ್ತಾಗಲೀ, ರಾಜರ ಸಂಗವಾಗಲೀ, ರಾಗಲೋಭಯುತವಾಗಿ ಮಾಡಿದ ಯಜ್ಞಾದಿಗಳಿಂದ ಭೋಗ ಪಡೆಯುವುದಾಗಲೀ, ಜಪತಪಾದಿ ಅಣಿಮಾದಿ ಸಿದ್ಧಿಗಳಿಂದ ಜಗತ್ತನ್ನೇ ಮೋಸ ಗೊಳಿಸುವುದಾಗಲೀ ಪದವಿಯಲ್ಲ. ಶ್ರೀರಾಮನಲ್ಲಿ ಸದ್ಭಕ್ತಿ ಹೊಂದಿ ಆತನ ತತ್ತ್ವ ವನ್ನು ತಿಳಿಯುವುದೇ ನಿಜವಾದ ಪದವಿ.

**ಪದವಿ ನೀ ಸದ್ಭಕ್ತಿಯು ಕಲ್ಗುಟೇ**
**ಚದಿವಿ ವೇದಶಾಸ್ತ್ರೋಪನಿಷತ್ತುಲ**
**ಸತ್ತ ತೆಲಿಯನಿದಿ ಒಕಪದವಾ**
**ಧನದಾರ ಸುತಾಗಾರ ಸಂಪದಲು**
**ಧರಣೀಶುಲ ಚೆಲಿಮೊಕ ಪದವಾ**
**ರಾಗಲೋಭಯುತ ಯಜ್ಞಾದುಲಚೇ**
**ಭೋಗಮುಲಬ್ಬುಟ ಯದಿ ಪದವಾ**
**ಜಪತಪಾದಿ ಯಣಿಮಾದಿ ಸಿದ್ಧುಲಚೇ***
**ಜಗಮುಲನೇಚುಟ ಯದಿ ಪದವಾ**
**ತ್ಯಾಗರಾಜನುತುಡೌ ಶ್ರೀರಾಮುನಿ**
**ತತ್ತ್ವಮು ತೆಲಿಯನಿದೊಕ ಪದವಾ**

ಆದರೆ ತ್ಯಾಗರಾಜರ ಕಾಲದಲ್ಲಿ ವೇದಶಾಸ್ತ್ರ ಪುರಾಣ ವಿದ್ಯೆಗಳನ್ನು ಓದಿದರೂ ಅದರ ಸತ್ವವರಿಯದೆ ಭೇದವಾದಗಳಲ್ಲಿ ತೊಡಗಿ ಭ್ರಮಿಸುವ ಮಂದಿಯೂ ಇದ್ದ ರೆಂಬುದು ಅವರ ಮಾತುಗಳಿಂದಲೇ ವ್ಯಕ್ತವಾಗುತ್ತದೆ.

**ವೇದಶಾಸ್ತ್ರ ಪುರಾಣ ವಿದ್ಯಲಚೇ ಭೇದ**
**ವಾದಮುಲು ತೀರಕ ಭ್ರಮಯುವಾರಲ ಜೂಚಿ**

(ನಿನ್ನೇ ನೆರನಮ್ಮಿನಾನುರಾ)

---

* ಅಣಿಮಾದಿ ಅಷ್ಟಸಿದ್ಧಿಗಳೆಂದರೆ–ಅಣಿಮಾ (ಸೂಕ್ಷ್ಮರೂಪವನ್ನು ಧರಿಸುವುದು), ಮಹಿಮಾ (ದೊಡ್ಡರೂಪವನ್ನು ಧರಿಸುವುದು), ಗರಿಮಾ (ಭಾರವಾಗುವುದು), ಲಘಿಮಾ (ಹಗುರವಾಗುವುದು), ಪ್ರಾಪ್ತಿ (ಅಸಾಧ್ಯವಾದುದನ್ನು ಪಡೆಯುವುದು), ಪ್ರಾಕಾಮ್ಯ (ನಿರ್ವಿಘ್ನವಾದ ಸಂಚಾರ ಶಕ್ತಿ), ಈಶತ್ವ (ಎಲ್ಲ ಕಡೆಯಲ್ಲೂ ಪ್ರಭಾವಬೀರುವುದು), ವಶತ್ವ (ಇಂದ್ರಿಯಗಳ ಸ್ವಾಧೀನತೆ).

ಉಲ್ಲೇಖ : ಪುರಾಣ ಭಾರತಕೋಶ, ಯಜ್ಞನಾರಾಯಣ ಉಡುಪ, ಪುಟ ೪೨.

**ಕಲಿ ಮಾನವುಲು ವೆರ್ರಿ ಚಲಮುನ**
**ತತ್ವಮು ತೆಲಿಯಲೇರು ಸುಮ್ಮೀ**

**(ಶ್ರೀರಾಮ ಜಯರಾಮ ಶ್ರಿತಜನರಿಪುಭೀಮ)**

ಒಟ್ಟಾರೆ ಸತತವೂ ಪರಮಾರ್ಥ ಮಾರ್ಗವನ್ನು ಚಿಂತಿಸದಿರುವವರು ಎಷ್ಟೇ ಕಲಿತರೂ, ಎಷ್ಟೇ ನೋಡಿದರೂ, ಎಂಥವರಾದರೂ ಕಾಂತದಾಸರೇ ಆಗಿರುತ್ತಾರೆಂಬುದು ತ್ಯಾಗರಾಜರ ಮಾತು.

**ಎಂತನೇರ್ಚಿನ ಎಂತಜೂಚಿನ**
**ಎಂತವಾರಲೈನ ಕಾಂತದಾಸುಲೇ**
**ಸಂತತಂಬು ಶ್ರೀಕಾಂತ ಸ್ವಾಂತ ಸಿ**
**ದ್ಧಾಂತಮೈನ ಮಾರ್ಗ ಚಿಂತಲೇನಿವಾರು** **(ಎಂತನೇರ್ಚಿನ)**

**(ಈ) ವರ್ಣ ಮತ್ತು ಆಶ್ರಮಭೇದಗಳು** : ವರ್ಣ ಎಂದರೆ ಸಮಾಜದ ನಿರ್ದಿಷ್ಟವಾದ ಒಂದು ವರ್ಗ. ಇದಕ್ಕೂ ಮನುಷ್ಯನ ಬಣ್ಣಕ್ಕೂ ಯಾವ ಸಂಬಂಧವೂ ಇಲ್ಲವೆಂಬುದನ್ನು ನಾವು ಗಮನದಲ್ಲಿಡಬೇಕು. ಧರ್ಮ ಎಂಬ ಪದಕ್ಕೆ ವಿವಿಧ ಅರ್ಥಗಳಿರುವುದಾದರೂ ಸಮಾಜದ ವಿವಿಧ ವರ್ಗಗಳಲ್ಲಿ ವ್ಯವಸ್ಥೆಯನ್ನು ಕಾಪಾಡುವ ಸೂಕ್ತ ಅರ್ಥದಲ್ಲೇ ನಾವು ಅದನ್ನು ಗ್ರಹಿಸಬೇಕು.[??] ಇಡೀ ವಿಶ್ವಕ್ಕೆ ಆಧಾರಭೂತವಾದುದೇ ಧರ್ಮ.[೭] ಹೀಗಾಗಿ ವರ್ಣಧರ್ಮ ಎಂದರೆ ಸಾಮಾಜಿಕ ಹಿನ್ನೆಲೆಯಲ್ಲಿ ಕಾರ್ಯ ವಿಭಜನಾತತ್ವಕ್ಕೆ ಅನುಗುಣವಾಗಿ ಮನುಷ್ಯನು ತನ್ನ ವರ್ಗಕ್ಕೆ ಅನುಸಾರವಾದ ಕರ್ತವ್ಯಗಳನ್ನು ನೆರವೇರಿಸುವುದೇ ವರ್ಣಧರ್ಮ. ಪ್ರಾಚೀನ ಭಾರತದಲ್ಲಿ ಮನುಷ್ಯರು ಸಮಾಜಕ್ಕೆ ಸಲ್ಲಿಸಬೇಕಾದ ಕರ್ತವ್ಯಗಳ ದೃಷ್ಟಿಯಿಂದ ಅವರನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂದು ನಾಲ್ಕು ಪಂಗಡಗಳಾಗಿ ವಿಭಾಗಿಸಲಾಗಿದ್ದಿತು. ಇವು ಗುಣಕರ್ಮಗಳಿಗೆ ಅನುಸಾರವಾಗಿ ವಿಭಜನೆಗೊಂಡಿದ್ದಿತು.[೭] ಗುಣವೆಂದರೆ ಸತ್ವ, ರಜಸ್ ಮತ್ತು ತಮಸ್ಸು. ಎಲ್ಲರೂ ಎಲ್ಲ ಅಗತ್ಯಗಳನ್ನೂ ಪೂರೈಸಲು ಅಸಮರ್ಥರಾದ್ದರಿಂದ ವರ್ಣಧರ್ಮವೆಂಬ ವರ್ಗೀಕರಣ ಅನಿವಾರ್ಯವಾಗಿದ್ದಿತು. ಇದರಿಂದ ಸಮಾಜ ವ್ಯವಸ್ಥಿತವಾಗಿರಲು ಸಾಧ್ಯವಾಗಿತ್ತು. ಇಲ್ಲಿ ಯಾವ ವರ್ಣವೂ ಮೇಲೂ ಅಲ್ಲ, ಯಾವ ವರ್ಣವೂ ಕೀಳೂ ಅಲ್ಲ. ಪ್ರತಿ ವರ್ಣದವನೂ ತನಗಿರುವ ಸಾಮಾಜಿಕ ಹೊಣೆಗಾರಿಕೆಯ ದೃಷ್ಟಿಯಿಂದ ಶ್ರೇಷ್ಠನೇ. ಸಮಾಜವೆಂಬ ಬೃಹತ್ ಶರೀರದ ದೃಢತೆಗೆ ಎಲ್ಲ ವರ್ಣದವರೂ ಪೂರ್ಣ ಸಹಕಾರ ನೀಡಿದಾಗ ಮಾತ್ರ ಆರೋಗ್ಯಕರ ಸಮಾಜವನ್ನು ಕಾಣಲು ಸಾಧ್ಯವಾಗುತ್ತಿತ್ತೆಂಬುದು ಸಮಾಜಶಾಸ್ತ್ರಜ್ಞರ ಅಭಿಮತ.

ಮೇಲೆ ತಿಳಿಸಿದ ಚತುರ್ವರ್ಣಗಳಲ್ಲಿ ಸಮಾಜದ ನೈತಿಕ ಸ್ಥಿರತೆಯ ಜವಾಬ್ದಾರಿ ಹೊತ್ತವರು ಬ್ರಾಹ್ಮಣರಾಗಿದ್ದರು. ಇವರೇ ದುಷ್ಕೃತ್ಯಗಳಲ್ಲಿ ತೊಡಗಿ, ಲೌಕಿಕ ಲಾಭದ ಹಿಂದೆ ಓಡುವುದನ್ನು ಕಂಡ ತ್ಯಾಗರಾಜರು ಖೇದಗೊಂಡು ಬ್ರಾಹ್ಮಣ ವರ್ಗವನ್ನು ಪುನಃಪುನಃ ಪ್ರಸ್ತಾಪಿಸುತ್ತಾರೆ. ದ್ವಿಜರನ್ನು ಕುರಿತ ತ್ಯಾಗರಾಜರ ವಿಷಾದದ ಹಿನ್ನೆಲೆ

ಯಲ್ಲಿ ದ್ವಿಜರ ಕರ್ತವ್ಯದ ಬಗ್ಗೆ ಸೂಚನೆಯೂ ಇದೆ.

ತ್ಯಾಗರಾಜರು ಹೀಗೆನ್ನುತ್ತಾರೆ :

**ಬ್ರಾಹ್ಮಣೀಕಮು ಬಾಯು ನೀಚುಲ ಬ್ರತುಕಾಯೆ***

(ಬ್ರಾಹ್ಮಣ್ಯವು ಮಾಯವಾಗಿ ನೀಚರ ಬದುಕಿನಂತಾಗಿದೆ)

(ಸರಸೀರುಹಾನನ ರಾಮ)

**ದ್ವಿಜುಲ್ಕೆ ದಾರಿನೆರುಗಲೇನಿ**

**ಚಿಂತನೀಕು ತೋಚದೇಮಿ** ?

(ದ್ವಿಜರಾಗಿದ್ದೂ ದಾರಿಕಾಣಲಾಗದೆ ಚಿಂತಿಸುತ್ತಿರುವುದು ನಿನಗೆ ತಿಳಿಯಲಿಲ್ಲವೇ)

**(ಶ್ರೀಕಾಂತ ನೀಯೆಡ)**

**ಆಜನ್ಮಮು ಗೊಲಿಚೇ ವಿಪ್ರುಲಕು ಆನಂದಮುಗಲದೋ** ?

(ಇಡೀ ಜನ್ಮವು ಧನಿಕರನ್ನಾಶ್ರಯಿಸುವ ಬ್ರಾಹ್ಮಣರಿಗೆ ನಿರಂತರ ಆನಂದ ಉಂಟೇ)

**(ಕಾಸಿಚ್ಚೇದೇ ಗೊಪ್ಪಾಯನುರಾ)**

**ಕಲುಗನಿ ನಿಜ ವಿಪ್ರಕುಲಮುನ ಜನ್ಮಿಂಚಿ**

**ನಿಲುವರಮಗು ಮುಕ್ತಿ ಫಲಮುನು ಚೇಕೊನ್ನ**

(ಅಲಭ್ಯವಾದ ವಿಪ್ರಕುಲದಲ್ಲಿ ಜನಿಸಿ ಮುಕ್ತಿ ಮಾರ್ಗವನ್ನು ಕೈಗೊಂಡಾತ)

**(ಅತಡೇ ಧನ್ಯುಡುರಾ)**

ದುರ್ಲಭವಾದ ವಿಪ್ರಕುಲ ಎಂದು ಒಮ್ಮೆ ತ್ಯಾಗರಾಜರು ವಿಪ್ರಕುಲದ ಹಿರಿಮೆ ಹೇಳಿದರೂ ಇಂತಹ ಕುಲಜನು ಯಾರೆಂದು ಮುಂದೆ ಸುಂದರವಾಗಿ ಸ್ಪಷ್ಟಪಡಿಸುತ್ತಾರೆ. **ಒಬ್ಬನ ಹಿರಿಮೆಗೆ ಭಕ್ತಿ ಕಾರಣವೇ ಹೊರತು ಬಲವಾಗಲೀ, ಕುಲವಾಗಲೀ ಮುಖ್ಯವಲ್ಲ.**

**ಬಲಮುಕುಲಮು ಏಲರಾಮ ಭಕ್ತಿಕಾರಣಮು**

(ಬಲಮುಕುಲಮು)

ಇಂತಹ ಭಕ್ತನು ಧನದಾಸೆಯಿಂದ ವೇಷ ಧರಿಸಿ ಮೋಸಹೋಗಲಾರ. ಕರ್ಮನಿಷ್ಠನಾಗಿ, ಧರ್ಮಶೀಲನಾಗಿ ಸುಖನೀಡುವ ರಾಮನಾಮದ ಮರ್ಮವನ್ನು ಅರಿತಿರುತ್ತಾನೆ. ಆ ಮೂಲಕ ಸರ್ವೋನ್ನತವಾದ ಸುಖವನ್ನು ಅನುಭವಿಸುತ್ತಾನೆ. ಇಂತಹ ಸುಖಕ್ಕೆ ಭಕ್ತಿಯೇ ಮೂಲ. ಆದರಿಂದ ಆತ ಧನ್ಯನಾಗಿರುತ್ತಾನೆ.

**ಕಾಸುವೀಸಮುಲಕೋಸಮುಯಾಸತೋ**

**ವೇಷಮು ಧರಿಯಿಂಚಿ ಮೋಸಮುಚೆಂದನಿ**

---

* ಈ ರಚನೆಗೆ ಹಿನ್ನೆಲೆಯೊಂದನ್ನು ಹೇಳುವುದುಂಟು. ತ್ಯಾಗರಾಜರು ಒಮ್ಮೆ ಬ್ರಾಹ್ಮಣ ಸಂತರ್ಪಣೆ ನಡೆಸಬೇಕೆಂದು ಉದ್ದೇಶಿಸಿದ್ದಾಗ, ಬ್ರಾಹ್ಮಣ ಧರ್ಮದ ಆಚರಣೆಯನ್ನು ರೂಢಿಯಲ್ಲಿ ಇರಿಸಿಕೊಂಡಿದ್ದ ಕೆಲವೇ ಮಂದಿ ಮಾತ್ರ ಸಂತರ್ಪಣೆಗೆ ಸಿಕ್ಕಿದ್ದರಂತೆ. ಇದರಿಂದ ವಿಷಾದಗೊಂಡ ಅವರು ಹೀಗೆ ಹಾಡಿದರಂತೆ. ನೋಡಿ : *The Spiritual Heritage of Tyagaraja*, p.99

**ಕರ್ಮನಿಷ್ಠುಡೈನ ಧರ್ಮಶೀಲುಡೈನ**
**ಶರ್ಮ ರಾಮನಾಮ ಮರ್ಮಮು ದೆಲಿಸಿನ**
**ಇನ್ನಿಪಾಟ್ಲಕು ಸರ್ವೋನ್ನತಮೌ ಸುಖ**
**ಮುನ್ನ ಯನುಭವಿಂಚುಕೊನ್ನ ವಾಡೆವಡೋ**

**(ಅತಡೇ ಧನ್ಯುಡರಾ)**

ಇಂತಹ ಧನ್ಯತೆ ಪಡೆಯಲು ದೇವರ ದೃಷ್ಟಿಯಲ್ಲಿ ಸರ್ವರೂ ಅರ್ಹರೇ. ನಾಮ ಸಂಕೀರ್ತನೆ ಯಾವುದೇ ಒಂದು ಕುಲದ ಸ್ವತ್ತಲ್ಲ. ತಾರತಮ್ಯ ಭಾವವಿಲ್ಲದೆ ಸರ್ವರೂ ಆಚರಿಸಬಹುದಾದ ಧಾರ್ಮಿಕ ಕ್ರಿಯೆಯಿದು. ಇದಕ್ಕೆ ಜಾತಿ, ಮತ, ಕುಲಗಳು ಮುಖ್ಯ ವಲ್ಲ, ಪ್ರೀತಿಯಿಂದ ನಾಮಸಾರವನ್ನು ತಿಳಿದು ಭಜಿಸುವುದಷ್ಟೇ ಮುಖ್ಯವೆಂಬ ಭಾವ ಕೆಳಗಿನ ಮಾತುಗಳಲ್ಲಿ ಅಡಗಿದೆ.

**ಜಾತಿಕೊಕರು ಕೂಡಿನಾರಮು ಪ್ರೀತಿ**
**ಚೇತ ದೆಲುಸುಕೊಂಟಿಮಿ ನಾಮಸಾರಮು**

**(ಶ್ರೀರಾಮದಾಸ ದಾಸೋಹಂ)**

**ಊರುವಾರು ವೀಧಿವಾರು ಒಕ್ಕಜಾತಿವಾರುಕಾರು**
**ದಾರಿನಿ ಚೇಬಟ್ಟಿ ಬ್ರೋವುಮು**

**(ದಂಡಮು ಪೆಟ್ಟೇನುರಾ)**

ಜಾತಿ ಮತ್ತು ಪ್ರಾದೇಶಿಕ ಭೇದಗಳು ದೇವರ ಮುಂದೆ ಕ್ಷುಲ್ಲಕ. ತ್ಯಾಗರಾಜರು ಒಂದೇ ಜಾತಿಯಿಲ್ಲದ ಊರಿನ ಮಂದಿಯನ್ನೆಲ್ಲಾ ಕೈಹಿಡಿದು ನಡೆಸೆಂದು ದೇವರಲ್ಲಿ ಪ್ರಾರ್ಥಿಸುವಾಗ, ಅವರು ಒಂದು ವರ್ಗದ ಪ್ರತಿನಿಧಿಯಾಗಿಲ್ಲ. ಜಾತಿಭೇದಗಳಿಲ್ಲದೆ ಇಡೀ ಮನುಕುಲದ ಪ್ರತಿನಿಧಿಯಾಗಿ ಮೊರೆಯಿಟ್ಟಿದ್ದಾರೆ. ಅವರಲ್ಲಿದ್ದ ಜಾತ್ಯಾತೀತತೆಗೆ ಇದೊಂದು ನಿದರ್ಶನ. ನಾರದರ ಭಕ್ತಿಸೂತ್ರವು 'ಭಕ್ತರಲ್ಲಿ ಜಾತಿ, ವಿದ್ಯೆ, ಕುಲ, ರೂಪ, ಧನ ಕ್ರಿಯಾದಿ ಭೇದಗಳಿಲ್ಲ' ಎನ್ನುತ್ತದೆ.[೮]

**ಆಶ್ರಮ ಭೇದಗಳು** : ಶಾಸ್ತ್ರಗ್ರಂಥಗಳ ಪ್ರಕಾರ ಆಶ್ರಮ ಭೇದಗಳು ನಾಲ್ಕು. ಅವು ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಹಾಗೂ ಸನ್ಯಾಸ. ಇವುಗಳಲ್ಲಿ ಪ್ರತಿಯೊಂದೂ ವಿಶಿಷ್ಟ ಲಕ್ಷಣವುಳ್ಳದ್ದಾಗಿದೆ. ಮೊದಲಿನ ಎರಡು, ಪ್ರವೃತ್ತಿ ಮಾರ್ಗಕ್ಕೆ ಪ್ರಾಧಾನ್ಯ ನೀಡಿದರೆ, ಕೊನೆಯ ಎರಡು ನಿವೃತ್ತಿ ಮಾರ್ಗಕ್ಕೆ ಒತ್ತನ್ನು ನೀಡುತ್ತವೆ. ಆದರೆ ತ್ಯಾಗ ರಾಜರ ಪ್ರಕಾರ ಮನುಷ್ಯ ಮುಕ್ತಿ ಪಡೆಯುವಲ್ಲಿ ಈ ಎಲ್ಲ ಘಟ್ಟಗಳಲ್ಲೂ ಕ್ರಮವಾಗಿ ಸಾಗಬೇಕಾದ್ದಿಲ್ಲ. ಸಂಸಾರಿಯಾಗಿದ್ದರೂ ಮೋಕ್ಷ ಪಡೆಯಬಹುದು. ಎಲ್ಲರಲ್ಲೂ, ಎಲ್ಲ ವೇಳೆಯಲ್ಲೂ ಎಲ್ಲವೂ 'ಹರಿಯೇ' ಎಂದು ಭಾವಿಸಿದವನಿಗೆ ಆಶ್ರಮ ಭೇದಗಳೇಕೆ ಎಂಬುದು ಅವರ ಪ್ರಶ್ನೆ.

**ಸಂಸಾರುಲೈತೇ ಏಮಯ್ಯ ? ಶಿಖಿ**
**ಪಿಂಛಾವತಂಸುಡೆದುಟ ನುಂಡಗ** **(ಸಂಸಾರುಲೈತೇ)**

**ಅನ್ನಿ ನೀವನುಚು ಎಂಚಿನವಾನಿಕಿ**
**ಆಶ್ರಮ ಭೇದಮುಲೇಲ ?** (ಮನಸು ಸ್ವಾಧೀನಮ್ಮೈನ)

ಹೀಗೆ ತ್ಯಾಗರಾಜರು ಆಶ್ರಮ ಭೇದಗಳನ್ನು ಸಮನ್ವಯಗೊಳಿಸುತ್ತಾರೆ. ಅವರ ಪ್ರಕಾರ ದೈವಿಕ ಕೇಂದ್ರವುಳ್ಳ ಯಾವುದೇ ಘಟ್ಟವೂ ಮುಕ್ತಿಮಾರ್ಗಕ್ಕೆ ಸೋಪಾನವೇ ಸರಿ.

(ಉ) **ರಾಜ್ಯಾಡಳಿತ ನೀತಿ** : ರಾಜಕೀಯವನ್ನು ಕುರಿತಂತೆ ತ್ಯಾಗರಾಜರ ನಿಲುವು ಏನೆಂದು ನಮಗೆ ನೇರವಾಗಿ ತಿಳಿಯದಿದ್ದರೂ ಶ್ರೀರಾಮನ ರಾಜ್ಯಾಡಳಿತ ನೀತಿಯನ್ನು ಅವರು ಬಲು ಮೆಚ್ಚಿಕೆಯಿಂದ ಹೀಗೆ ಅಭಿಪ್ರಾಯಪಡುತ್ತಾರೆ.

'ಸಾಕೇತನಗರವನ್ನು ಶ್ರೀರಾಮನಂತೆ ಆಳಿದವರುಂಟೇ ? ರಾಮರಾಜ್ಯದಲ್ಲಿ ಊರು ಮತ್ತು ದೇಶಜನರು ಹಾಗೂ ಮುನಿಗಳು ಸಹ ಸಂತೋಷದಿಂದ ಭಾವುಕರಾಗಿದ್ದಾರೆ. ಧರ್ಮಪಾಲಕನಾದ ರಾಮನ ಕಾಲದಲ್ಲಿ ಸಕಾಲಿಕ ಮಳೆಯಾಗಿ ಜನರು ಸಮೃದ್ಧಿಯಿಂದ ಇದ್ದಾರೆ. ಅವರು ವಿದ್ಯಾವಂತರೂ, ದೀರ್ಘಾಯುಷಿಗಳೂ ಆಗಿದ್ದಾರೆ. ದೇಶವು ಸುಭಿಕ್ಷವಾಗಿದೆ. ಜನ ಗರ್ವರಹಿತರಾಗಿದ್ದಾರೆ.'[೯]

**ಕಾರುಬಾರು ಸೇಯುವಾರು ಗಲರೇ ? ನೀವಲೆ ಸಾಕೇತನಗರಿನಿ**
**ಊರಿವಾರು ದೇಶಜನುಲು ವರಮುನುಲು**
**ಉಪ್ಪೊಂಗುಚುನು ಭಾವುಕುಲಯ್ಯೇ**
**ನೆಲಕು ಮೂಡುವಾನ ಅಖಿಲ ವಿದ್ಯಲ**
**ನೇರ್ಪು ಗಲಿಗಿ ದೀರ್ಘಾಯುವು ಗಲಿಗಿ**
**ಚಲಮು ಗರ್ವರಹಿತುಲು ಗಾಲೇದಾ ?** (ಕಾರುಬಾರು)

ರಾಮರಾಜ್ಯವು ಧರ್ಮನಿಷ್ಠೆಗೂ, ಸುಭಿಕ್ಷತೆಗೂ ಹೆಸರಾದುದು. ಇದನ್ನೇ ತ್ಯಾಗ ರಾಜರು ಮೇಲಿನ ರಚನೆಯಲ್ಲಿ ಮೆಚ್ಚುಗೆಯಿಂದ ಸಂಗ್ರಹ ರೂಪದಲ್ಲಿ ಹೇಳುವುದು.

ಶ್ರೀರಾಮನು ಶಿಷ್ಟರನ್ನು ರಕ್ಷಿಸಿ, ಲೋಕಕಂಟಕರಾದ ದುಷ್ಟರನ್ನು ಅದರಲ್ಲೂ ರಾವಣನನ್ನು ನಡೆಸಿಕೊಂಡ ರೀತಿಯನ್ನು ಮತ್ತೊಂದು ರಚನೆಯಲ್ಲಿ ತ್ಯಾಗರಾಜರು ಪ್ರಸ್ತಾಪಿಸಿರುವ ರೀತಿ ಹೀಗಿದೆ.

ಶಿವಭಕ್ತಾಗ್ರೇಸರನೆಂದು ಹೇಳುವ ರಾವಣನು ಶ್ರೀರಾಮನ ಚತುರೋಪಾಯ ಗಳನ್ನು ತಿಳಿಯಲಾಗಲಿಲ್ಲ. ರಾವಣನ ದುಷ್ಟತನವನ್ನು ಹೋಗಲಾಡಿಸುವಲ್ಲಿ ರಾಮ ಪ್ರಪ್ರಥಮವಾಗಿ ಹಿತನುಡಿಗಳನ್ನಾಡಿದ. ಎರಡನೇ ಘಟ್ಟದಲ್ಲಿ ತನ್ನಲ್ಲಿ ಶರಣಾದರೆ ಅಯೋಧ್ಯೆಯನ್ನೇ ನೀಡುವುದಾಗಿ ಹೇಳಿದ. ಮೂರನೇ ಘಟ್ಟದಲ್ಲಿ ಸಹೋದರರ ನಡುವೆ ಭೇದ ಮೂಡಿಸಿದ. ಏನೇ ಆದರೂ ತಲೆಬಾಗದ ರಾವಣನನ್ನು ಕಡೆಗೆ ವಧಿಸಿದ. ಹೀಗೆ ಸಾಮ, ದಾನ, ಭೇದ, ದಂಡವೆಂಬ ಚತುರೋಪಾಯಗಳನ್ನು ಅಳವಡಿಸಿದ ಶ್ರೀರಾಮನ ಕೌಶಲವನ್ನು ಅವರು ಮೆಚ್ಚುತ್ತಾರೆ.

**ಸರಸ ಸಾಮದಾನ ಭೇದ ದಂಡ ಚತುರ**
**ಸಾಟಿ ದೈವಮೆವ್ವರೇ . . . .**
**ಪರಮ ಶಾಂಭವಾಗ್ರೇಸರುಂಡನುಚು**
**ಬಲ್ಕು ರಾವಣುಡು ತೆಲಿಯಲೇಕ ಪೋಯೆ**
**ಹಿತಮುಮಾಟಲೆಂತೋ ಬಾಗ ಬಲ್ಕಿತಿವಿ**
**ಸತಮುಗಾನಯೋಧ್ಯಾನಿತ್ತು ನಂಟಿವಿ**[೧೦]
**ನತ ಸಹೋದರುನಿ ರಾಜುಜೇಸಿ, ರಾಕ**
**ಹತಮು ಜೇಸಿತಿವಿ . . . .** **(ಸರಸ ಸಾಮದಾನ ಭೇದದಂಡಚತುರ)**

ಹೀಗೆ ರಾಮನ ಆದರ್ಶದ ಮೂಲಕ ಧರ್ಮಪಾಲನ ರೀತಿಯನ್ನು ಸೂಚಿಸಿದ್ದಾರೆ. 'ರಾಜಾ ಪ್ರಕೃತಿ ರಂಜನಾತ್' ಎಂಬುದು ಕಾಳಿದಾಸನ ಹೇಳಿಕೆ.[೧೧] ಸರ್ವವಿಧದಲ್ಲೂ ಪ್ರಜೆಗಳನ್ನು ರಕ್ಷಿಸಬಲ್ಲವನೇ ರಾಜ. ಇಲ್ಲಿ 'ಸರ್ವವಿಧದಲ್ಲೂ' ಎಂಬ ಪದ ಮುಖ್ಯ ವಾದುದು. ತ್ಯಾಗರಾಜರ ಕಾಲಕ್ಕಾಗಲೇ ಮಹಾರಾಜರು ಪ್ರಜೆಗಳಿಗೆ ಅರ್ಥಪುಷ್ಟಿ (ಧನಸಹಾಯ)ಯನ್ನೊದಗಿಸುವುದೇ ತಾವು ನೀಡಬೇಕಾದ ರಕ್ಷಣೆಯೆಂದು ತಿಳಿದು, ತಾವು ನೀಡುವ ಬಿಡಿಗಾಸೇ ಬಹಳ ಹಿರಿದೆಂದು ಭಾವಿಸುತ್ತಿದ್ದಿರಬಹುದು. ಈ ದೃಷ್ಟಿಯಿಂದ ಪರಮಾರ್ಥವನ್ನೂ ಮರೆತಿದ್ದಿರಬಹುದು. ಇದು ಸರಿಯಲ್ಲ. ಬದಲಾಗಿ ರಾಜ್ಯಾಂಗಕ್ಷೇಮಕ್ಕಾಗಿ ನಾಲ್ಕೂ ವರ್ಣದವರ ರಕ್ಷಣೆ ಅಗತ್ಯ, ಇದರಲ್ಲೇ ತನ್ನ ಸುಖ ಅಡಗಿರುವುದೆಂಬ ಅರಿವು ಆತನಿಗಿರಬೇಕೆಂಬ ಧ್ವನಿಯಿಂದ ತ್ಯಾಗರಾಜರು ಹೀಗೆನ್ನು ತ್ತಾರೆ.

**ರಾಜ್ಯಾಂಗಮುಕೊರಕು ನಾಲ್ಗು ಜಾತುಲ ರಕ್ಷಣ ಪರಸುಖಮೊ**
**(ಕಾಸಿಚ್ಚೇದೇ)**

**(೮೩) ವಿವಾಹ—ಕನ್ಯಾಶುಲ್ಕ ಪದ್ಧತಿ** : ಜನಾಂಗವೊಂದರಲ್ಲಿ ಅನುಸರಿಸುವ ಸಂಪ್ರ ದಾಯಗಳು ಸಾಮಾನ್ಯವಾಗಿ ಪದ್ಧತಿ ಅಥವಾ ಆಚಾರ ಎನಿಸುತ್ತದೆ. ತ್ಯಾಗರಾಜರ ಕಾಲದಲ್ಲಿ ಇಂತಹ ಆಚಾರಗಳಲ್ಲಿ ಒಂದಾಗಿ ಇಂದಿನ ವರದಕ್ಷಿಣೆಗೆ ಬದಲಾಗಿ ಕನ್ಯಾ ಶುಲ್ಕ ಪದ್ಧತಿ ಇದ್ದಿತೆಂಬುದಕ್ಕೆ ಅವರ ಸಾಲುಗಳೇ ನಿದರ್ಶನವಾಗುತ್ತವೆ.

**ರೂಕಲೊಸಗಿ ಕೊನ್ನ ಸತಿ**
**(ಹಣಕೊಟ್ಟು ಕೊಂಡ ಸತಿ)**
**(ಗಾರವಿಂಪರಾದಾ)**

**ನೇ ಧನಮುನು ಕೊನಿನ ಭಾಮನು**
**(ನಾನು ಹಣಕೊಟ್ಟು ಖರೀದಿಸಿದ ಭಾಮೆಯನ್ನು)**
**(ನಿನ್ನನವಲಸಿನದೇಮಿ)**

ತ್ಯಾಗರಾಜರು ಕನ್ಯಾಶುಲ್ಕ ಪದ್ಧತಿಯಲ್ಲಿ ಭಾಗಿಯಾಗಿದ್ದರೋ ಇಲ್ಲವೋ ಎಂಬು

ದನ್ನು ನಿರ್ಧರಿಸುವುದು ಅಸಾಧ್ಯವಾದರೂ ಈ ಪದ್ಧತಿ ಅವರ ಕಾಲದಲ್ಲಿ ರೂಢಿಯಲ್ಲಿದ್ದಿತೆಂಬುದಂತೂ ಅವರ ಮೇಲಿನ ಸಾಲುಗಳಿಂದ ಸ್ಪಷ್ಟವಾಗುತ್ತದೆ. ತ್ಯಾಗರಾಜರು ಹೇಳಿರುವ ಈ ಮಾತುಗಳಿಂದ ಅವರು ಈ ಪದ್ಧತಿಯನ್ನು ಸಮರ್ಥಿಸುತ್ತಿದ್ದಾರೆಂದು ಅರ್ಥವಲ್ಲ, ಹಾಗೆಯೆ ಧಿಕ್ಕರಿಸುತ್ತಲೂ ಇಲ್ಲ. ವಾಸ್ತವಾಂಶವನ್ನು ಅವರು ಶ್ರುತಪಡಿಸಿದ್ದಾರೆ. ಆದರೆ ಶಾಸ್ತ್ರ ಪ್ರಕಾರ ಕನ್ಯಾಶುಲ್ಕವು ನಿಷಿದ್ಧ. ಸತಿ ಎಂದಿಗೂ ಕೊಳ್ಳಲ್ಪಡುವವಳಲ್ಲ ಎಂಬುದು ಮಹಾಭಾರತದ ಅಭಿಪ್ರಾಯ.[೧೨] ಕನ್ಯಾಶುಲ್ಕ ಪದ್ಧತಿಯ ಉಲ್ಲೇಖವನ್ನು ತ್ಯಾಗರಾಜರಿಗಿಂತ ಪೂರ್ವಜರಾದ ಅನ್ನಮಾಚಾರ್ಯರಲ್ಲೂ, ಪುರಂದರದಾಸರಲ್ಲೂ ಕಾಣಬಹುದು.[೧೩]

**ನಾಮಕರಣ** : ರಾಮನೆಂಬ ಪವಿತ್ರ ಹೆಸರಿನ ಹಿರಿಮೆಯನ್ನು ಕೊಂಡಾಡುವುದು ತ್ಯಾಗರಾಜರ ಉದ್ದೇಶವಾದರೂ ಆತನಿಗೆ ಆ ಹೆಸರನ್ನು ಇಟ್ಟು, ಬೆಳೆಸಿದವರಾರೆಂದು ಸಂತೋಷಾತಿರೇಕದಲ್ಲಿ ಅವರು ಪ್ರಶ್ನಿಸುತ್ತಾರೆ. ಈ ಮೂಲಕ ನಾಮಕರಣ ಪದ್ಧತಿಯ ಉಲ್ಲೇಖವಿಲ್ಲಿದೆ.

**ಪೇರಿಡಿ ನಿನು ಪೆಂಚಿನವಾರೆವರೆ ?**

**(ಪೇರಿಡಿ)**

ಇಷ್ಟಲ್ಲದೆ ಸುಪ್ರಭಾತ, ಶಯನ, ನೈವೇದ್ಯ, ರಕ್ಷೆಹಚ್ಚುವುದು*—ಇವೇ ಮೊದಲಾದ ಸಂಪ್ರದಾಯಗಳೂ ಪ್ರಯೋಗದಲ್ಲಿದ್ದುದು ಅವರ ರಚನೆಗಳಿಂದ ವೇದ್ಯವಾಗುತ್ತದೆ.

ಅತ್ತೆಮಾವಂದಿರಿಗೆ ಎದುರಾಡಿದ ಸೊಸೆಯರ ಪ್ರಸ್ತಾಪ, ಆತ್ಮಹತ್ಯೆಯೆಂಬ ಪದ ಪ್ರಯೋಗಗಳು ಅವರ ನೌಕಾಚರಿತ್ರೆ ಗೀತನಾಟಕದಲ್ಲಿ ಪ್ರಯೋಗಗೊಂಡಿವೆ.

**ಅತ್ತಮಾಮಲತೋ ನೀಕ್ಕೆ ಮೇಮೆದು**
**ರಾಡಿನದೆಲ್ಲ ಇಂದುಕಾ ?**

**(ಪೆರಗು ಪಾಲು ಭುಜಿಯಿಂಚಿ)**

**ಆತ್ಮಹತ್ಯಗಾನಿ ವೇರೇ ಲೇದು**

**(ಇಂದುಕೇಮಿ ಸೇತುಮಮ್ಮಾ)**

**(ಖ) ಯಜ್ಞಯಾಗಾದಿಕಾರ್ಯಗಳು** :

**ಯಜ್ಞೋದಾನಂ ತಪಶ್ಚೈವ ಪಾವನಾನಿ ಮನೀಕ್ಷಿಣಾಮ್**[೧೪]

**ಯಜ್ಞೋವೈ ವಿಷ್ಣುಃ**[೧೫]

**ಯಜ್ಞಥಾತ್ಕರ್ಮಣೋನ್ಯತ್ರ ಲೋಕೋಯಂ ಕರ್ಮಬಂಧನಃ**[೧೬]

ಮೇಲಿನ ಈ ಪ್ರಮಾಣ ವಚನಗಳು ಯಜ್ಞವನ್ನು ಸ್ತುತಿಸುತ್ತವೆ. ಇವು ಪವಿತ್ರ ಕರ್ಮಗಳೆಂದೂ ಸಾರುತ್ತವೆ. ಆದರೆ ವಿದ್ವಾಂಸರ ಪ್ರಕಾರ ಕ್ರಿ. ಶ. ಸುಮಾರು ಹತ್ತನೆಯ ಶತಮಾನದ ವೇಳೆಗಾಗಲೆ ಒಂದೆಡೆ ಶೈವ ಭಕ್ತಿಪಂಥದ ಉಗಮ, ಇನ್ನೊಂದೆಡೆ

---

* ಇವುಗಳನ್ನು ಅಧ್ಯಾಯ ಐದರಲ್ಲಿ ಅಧ್ಯಯನ ಮಾಡಲಾಗಿದೆ.

ಶಂಕರಾಚಾರ್ಯರ ಅದ್ವೈತ ಮೊದಲಾದವು ಹರಡಿದುದು—ಈ ಆಘಾತಗಳ ಫಲವಾಗಿ ಯಜ್ಞಯಾಗಗಳು ಹಿಂದೆ ಬಿದ್ದವು. ಆ ತರುವಾಯ ರಾಮಾನುಜಾಚಾರ್ಯರಿಂದಲೂ, ಮಧ್ವಾಚಾರ್ಯರಿಂದಲೂ ವೈಷ್ಣವ ಭಕ್ತಿ ಪ್ರವಾಹ ನಾಡಿನಲ್ಲೆಲ್ಲಾ ಹರಿದಾಗಲೂ ಯಜ್ಞಾಚರಣೆಗೆ ಪ್ರಾಶಸ್ತ್ಯ ಸಿಗಲಿಲ್ಲ. ಸಜೀವ ಪ್ರಾಣಿಗಳನ್ನು ಕೊಲ್ಲುವ ಬದಲು ಪಿಷ್ಟದಲ್ಲಿ ಮಾಡಿದ ಪ್ರಾಣಿಗಳನ್ನು ಬಲಿ ನೀಡುವುದು ಮೊದಲಾಯಿತು. ಕ್ರಮೇಣ ಇದೂ ಸಹ ಪಾಪಕರವೆಂಬ ಅಭಿಪ್ರಾಯ ಮೂಡಿತು. ಹೀಗಾಗಿ ಯಜ್ಞ ಯಾಗಾದಿಗಳು ಹಿಂದುಳಿದವು.[೧೭]

ಅಂತೆಯೇ ತ್ಯಾಗರಾಜರಂತಹ ಸಾತ್ವಿಕ ಪ್ರವೃತ್ತಿಯವರಿಗೆ ಈ ಕರ್ಮಗಳಲ್ಲಿ ಅನುಸರಿಸುತ್ತಿದ್ದ ಪ್ರಾಣಿವಧೆ ಸರ್ವಥಾ ಒಗ್ಗದ ಮಾತಾಗಿತ್ತು. ಹೀಗಾಗಿ ಅವರು ಯಜ್ಞವೆಂಬ ಧಾರ್ಮಿಕ ಆಚರಣೆಯನ್ನು ವೈಯುಕ್ತಿಕವಾಗಿಯೂ ಖಂಡಿಸುತ್ತಾರೆ.

ಜೀವಾತ್ಮ ಹಿಂಸೆಯಿಂದ ಒಡಗೂಡಿದ ಯಜ್ಞಾದಿಗಳೇ ಸುಖಕರವೆಂಬುವವರಿಗೆ ಸಮನಾದ ಅಜ್ಞಾನಿಗಳುಂಟೆ ? ಇಂಥವರು ಸುಜ್ಞಾನ ದರಿದ್ರ ಪರಂಪರೆಯ ಅಸುರೀ ಚಿತ್ತರು. ವಾಸನಾಸಕ್ತರಾಗಿ ಸರ್ಪವಿಷಸಮನಾದ ಬಹಿರ್‌ಚಕ್ಷುವಿನಿಂದ ಮಾತ್ರ ನೋಡಿ ಆಚರಿಸುವ ಈ ಮಂದಿ, ಸ್ವರ್ಗ ಭೋಗಾಭಿಲಾಷಿಗಳೂ, ಸ್ವಾರ್ಥಿಗಳೂ, ಆಗಿರುತ್ತಾರೆಂದೇ ತ್ಯಾಗರಾಜರು ಅಭಿಪ್ರಾಯ ಪಡುತ್ತಾರೆ.

**ಯಜ್ಞಾದುಲು ಸುಖಮನುವಾರಿಕಿ ಸಮು**
**ಲಜ್ಞಾನುಲು ಗಲರಾ ? ಓ ಮನಸಾ**
**ಸುಜ್ಞಾನ ದರಿದ್ರ ಪರಂಪರುಲ**
**ಸುರಚಿತ್ತುಲು ಜೀವಾತ್ಮ ಹಿಂಸಗಲ**
**ಬಹುಜನ್ಮಂಮುಲ ವಾಸನಯುತುಲ್ಕೆ**
**ಅಹಿ ವಿಷಸಮ ವಿಷಯಾಕೃಷ್ಟುಲ್ಕೆ**
**ಬಹಿರಾನನುಲ್ಕೆ ತ್ಯಾಗರಾಜು**
**ಭಜಿಯಿಂಚೇ ಶ್ರೀರಾಮುನಿ ದೆಲಿಯಕ**

ಕಾಮ್ಯ ಕರ್ಮಗಳಾಗಿ ಯಜ್ಞಾಚರಣೆ ನಡೆಸುವವರು ದೈವಭಕ್ತಿಯಿಂದ ದೂರವಿರುವರೆಂದು ಶಾಸ್ತ್ರಗ್ರಂಥಗಳೇ ಹೇಳುತ್ತವೆ.[೧೮] ಸ್ವರ್ಗಸುಖಕ್ಕಾಗಿ ಧರ್ಮಾಚರಣೆಗಳನ್ನು ಮಾಡಿ ಯಶಸ್ವಿಯಾದವರು ತಮ್ಮ ಪುಣ್ಯ ಕ್ಷೀಣಿಸುತ್ತಿದ್ದಂತೆ ಪುನಃ ಮರ್ತ್ಯಲೋಕಕ್ಕೆ ಬರುವರೆಂಬುದು ಮುಂಡಕೋಪನಿಷತ್ತು[೧೯] ಹಾಗೂ ಭಗವದ್ಗೀತೆಗಳ[೨೦] ಅಭಿಪ್ರಾಯವಾಗಿದೆ. ಇದನ್ನೇ ತ್ಯಾಗರಾಜರೂ 'ಕ್ಷೀಣಮ್ಮೆ' ಕೃತಿಯಲ್ಲಿ ಪ್ರತಿಧ್ವನಿಸಿದ್ದಾರೆ. ಹೀಗಾಗಿ ಶ್ರೀರಾಮನನ್ನು ಅರಿಯಲು ಆಚರಿಸುವ ಧಾರ್ಮಿಕ ಕರ್ಮಗಳೇ ಶ್ರೇಷ್ಠ. ತ್ಯಾಗರಾಜರಂತೂ ಶ್ರೀರಾಮತತ್ವವನ್ನು ತಿಳಿಯದೆ ಆಚರಿಸುವ ಯಜ್ಞಾದಿಗಳು ನಿಷ್ಪ್ರಯೋಜಕವೆಂದು ದೃಢವಾಗಿ ಸ್ಪಷ್ಟಪಡಿಸುತ್ತಾರೆ.

**(ಋ) ಕ್ಷುದ್ರದೇವತಾ ಪೂಜೆ** : ಸಮಾಜವೊಂದರ ನಂಬುಗೆಯಲ್ಲಿ ಕ್ಷುದ್ರಶಕ್ತಿ

ಅಥವಾ ಕ್ಷುದ್ರದೇವತೆಗಳ ಪಾತ್ರ ಹಿರಿದಾದುದು. ತ್ಯಾಗರಾಜರು ರಾಮನ ಔನ್ನತ್ಯವನ್ನು ಹಾಡುವ ಉದ್ದೇಶದಿಂದ ಮಾತ್ರವೇ ಕ್ಷುದ್ರ ದೇವತೆಗಳನ್ನು ಪ್ರಸ್ತಾಪಿಸುವುದು. ರಾಮನಿಗೂ ಈ ದೇವತೆಗಳಿಗೂ ಅಜಗಜಾಂತರವೆಂಬುದನ್ನು ಅವರು ಸೋದಾಹರಣ ಪೂರ್ವಕವಾಗಿ ತಿಳಿಸುತ್ತಾರೆ. ಅವರು ರಾಮನನ್ನು ಪ್ರಕಾಶಮಾನವಾದ ದೀಪ, ಪೂರ್ಣ ಪ್ರವಾಹದ ಕಾವೇರಿ ನದಿಯ ವೈಶಾಲ್ಯ, ಚಂದ್ರನ ಕಾಂತಿ, ಮನ್ಮಥನ ರೂಪ ಹಾಗೂ ಸರೋವರಗಳಿಗೆ ಹೋಲಿಸುತ್ತಾರೆ. ಅಂತೆಯೇ ಕ್ಷುದ್ರದೇವತೆಗಳನ್ನು ದೀವಟಿಗೆಯ ಬೆಳಕು, ನಕ್ಷತ್ರ, ಕಾವೇರಿ ನದಿಗಿರುವ ಕಾಲುವೆ, ಸಾಮಾನ್ಯ ಮನುಷ್ಯನ ರೂಪ ಹಾಗೂ ಸರಸ್ಸಿಗೆ ಹೋಲಿಸುತ್ತಾರೆ. ಸಜಾತೀಯವಾದ ಹಾಗೂ ಲೋಕಸಹಜವಾದ ಉದಾ ಹರಣೆಗಳನ್ನಿಲ್ಲಿ ತ್ಯಾಗರಾಜರು ನೀಡಿದ್ದಾರೆ.

ಪರಮ ವಿರಾಗಿಗಳಾದವರೂ ಸಮಾಜದ ಪ್ರಭಾವಕ್ಕೆ ಸ್ವಲ್ಪಮಟ್ಟಿಗಾದರೂ ಒಳ ಗಾಗಿರುತ್ತಾರೆಂಬುದಕ್ಕೆ ನಿದರ್ಶನವೋ ಎಂಬಂತೆ ತ್ಯಾಗರಾಜರಿಲ್ಲಿ ಲೋಕಸಹಜವಾದ ಉದಾಹರಣೆಯನ್ನು ನೀಡಿದ್ದಾರೆ. ತಂಜಾವೂರು ಮಂಡಲದಲ್ಲಿ 'ಕಾರು ಬಿಯ್ಯಮು' —ಎಂದರೆ ದಪ್ಪಗಿರುವ ಕೆಂಪನೆಯ ಅಕ್ಕಿ, ಹಾಗೆಯೇ 'ಜಿಲಕರ ಸಂಬಾರ' ಎಂದರೆ ಸಣ್ಣಗಿರುವ ಮೃದುವಾದ ಅಕ್ಕಿ[೨೧]— ಈ ಎರಡೂ ಅಕ್ಕಿಯೇ ಆದರೂ ಶ್ರೀರಾಮನನ್ನು ಹಿತವೆನಿಸುವ ಸಣ್ಣ ಅಕ್ಕಿಗೂ ಇತರ ದೇವತೆಗಳನ್ನು ದಪ್ಪ ಅಕ್ಕಿಗೂ ಹೋಲಿಸಿದ್ದಾರೆ. ದಿನನಿತ್ಯ ಬಳಸುವ ಅಕ್ಕಿಯನ್ನು ನೋಡಿದರೂ, ತ್ಯಾಗರಾಜರಿಗಿಲ್ಲಿ ರಾಮಸ್ಮೃತಿಯೇ ಮೂಡಿರುವುದು ಅವರ ಭಕ್ತಿ ತೀವ್ರತೆಗೆ ಸಾಕ್ಷಿಯಾಗಿದೆ. ಅಂತೆಯೇ ಪ್ರಾಂತೀಯ ಅಂಶಗಳ ಪ್ರಭಾವವೂ ತಿಳಿಯಬರುತ್ತದೆ.

**ಕಾರುವೇಲ್ಪುಲು ನೀಕು ಸರಿ**
**ಕಾರಕು ಜಿಲಕರ ಸಂಬಾಕಂತರಮ್ಮೆನಟ್ಟುಗಾನಿ**
**ದೀವಟಿಕಿ ದೀಪಮುರೀತಿ ಕಾವೇಟಿಕಿ ಕಾಲುವಲ ರೀತಿಗಾನಿ**
**ತಮ್ಮಿ ವೈರಿಕಿ ತಾರಕಲರೀತಿ**
**ಕಮ್ಮವಿಲ್ತುನಿಕಿ ಕಾಂತಿ ನರುಲ ರೀತಿಗಾನಿ**
**ಸಾಗರಾನಿಕಿ ಸರಸುರೀತಿ**
**ತ್ಯಾಗರಾಜನುತ ಧರಲೋ ರಾಮ ನೀಕು ಸರಿ**

(ಎ) **ಇನ್ನಿತರ ಆಚಾರ ವಿಚಾರಗಳು** : ಮನುಷ್ಯನ ಅಸ್ತಿತ್ವ ಮತ್ತು ಮನೋಲ್ಲಾಸ ಕ್ಕಾಗಿ ಬಳಸುವ ಹಲವು ವಸ್ತುಗಳ ಉಲ್ಲೇಖವೂ ತ್ಯಾಗರಾಜರ ರಚನೆಗಳಲ್ಲಿ ಕಂಡು ಬರುತ್ತವೆ. ಅವೆಂದರೆ,

(ಅ) ಆಹಾರಪಾನೀಯಗಳು : ಅಕ್ಕಿ (ಕಾರುವೇಲ್ಪುಲು), ಜೋಳ (ಪ್ರಹ್ಲಾದ ಭಕ್ತಿ ವಿಜಯದ ಸೀಸಪದ್ಯ), ನುಚ್ಚು (ತಪ್ಪಕನೇ, ರೂಕಲುಪದಿವೇಲುನ್ನ), ಅಂಬಲಿ (ನನ್ನು ಬ್ರೋವಕನು), ದಿವ್ಯಾನ್ನ ಷಡ್ರಸಯುತ ಭಕ್ಷಣ (ಆರಗಿಂಪವೇ, ರೂಕಲು ಪದಿ ವೇಲುನ್ನ), ಹುಗ್ಗಿ (ಪೊಂಗಲಿ - ಏಮನಿನೆರನಮ್ಮುಕೊಂದಮೋ), ಕಲ್ಲುಸಕ್ಕರೆ (ಇಂತ

ಸೌಖ್ಯಮನಿ, ಪಲುಕು ಕಂಡಚಕ್ಕರ), ಜೇನುತುಪ್ಪ (ಪೂಲಪಾನ್ಪು), ಸಕ್ಕರೆ ಬೆಣ್ಣೆಹಾಲು (ಪೂಲಪಾನ್ಪು), ಸೌತೇಹಣ್ಣು (ಪಾಹಿರಮಾರಮಣ), ನಾರಿಕೇಳ, ಹಲಸು, ಜಂಬೂಫಲ (ಶ್ರೀಗಣಪತಿನಿ), ದ್ರಾಕ್ಷಾರಸ (ಸೊಗಸುಗಾ), ಮೊಸರು, ನವನೀತಕ್ಷೀರ (ನಿಧಿಚಾಲ), ಮುಂತಾದವು.

(ಆ) ವೀಳ್ಯ ಜಗಿಯುವ ಪದ್ಧತಿ ಅಂದು ವಿಶೇಷವಾಗಿದ್ದಿರಬಹುದು. ತ್ಯಾಗರಾಜರು ಸುಗಂಧಿತ ವೀಳ್ಯದ ಚಿತ್ರಣವನ್ನು ಕೆಲವು ರಚನೆಗಳಲ್ಲಿ ಪ್ರಸ್ತಾಪಿಸುತ್ತಾರೆ. (ವಂದನಮು, ರಾಮರಾಮರಾಮರಾರಾ, ವಿಡಮುಸೇಯವೇ ಮುಂತಾದವು).

(ಇ) ಅಲಂಕರಣ ವಸ್ತುಗಳು : ಜರಿಸೀರೆ (ತುಳಸಮ್ಮ ಮಾಯಿಂಟಿ), ಪೀತಾಂಬರ (ಘುಮಘುಮಘುಮಯನಿ), ಪೇಟ (ತಲಪಾಗ–ನಾಡಾಡಿನ, ಭಕ್ತಿಬಿಚ್ಚ), ಬಣ್ಣದ ರವಿಕೆ (ಘುಮಘುಮಘುಮಯನಿ), ಜರಿ ಅಂಚಿನ ಶಾಲು (ಸರಿಗಂಚು ಶಾಲುವಟ–ಚೂತಾ ಮುರಾರೆ), ಬೈತಲೆಬೊಟ್ಟು (ರಾವಿರೇಕ–ಚೇತುಲಾರ), ಮಾಂಗಲ್ಯ (ರಾಮರಾಮ ರಾಮಚಂದ್ರ), ಕಾಡಿಗೆ (ವೇದವಾಕ್ಯಮನಿ), ಕೇಶಾಲಂಕಾರದಲ್ಲಿ ಕೊಂಡೆ (ಗಂಟು–ಚೇತುಲಾರ), ಉದ್ದವಾದ ಜಡೆ (ಕಬರೀಭಾರಿಣಿ–ಎಂದುಕೀಚಲಮು). ಅಲ್ಲದೆ ತಿಲಕ, ವಿಭೂತಿ, ಮುತ್ತಿನಹಾರ, ಕಂಕಣ, ಕನಕನೂಪುರಾದಿಗಳನ್ನು ಹಲವು ರಚನೆಗಳಲ್ಲಿ ಹೆಸರಿಸಲಾಗಿದೆ.

(ಈ) ಭೋಗವಸ್ತುಗಳು : ಗಂಧ, ಸಾಮ್ರಾಣಿ (ಘುಮಘುಮಘುಮಯನಿ), ಹಾಸಿಗೆ (ರಾಮಾಭಿರಾಮ), ಹಾಸಿಗೆ-ದಿಂಬು (ಪಾನ್ಪು, ದಿಂಡಿ–ಲಾಲಿಯೂಗವೇ), ಬೀಸಣಿಗೆ (ಘುಮಘುಮಘುಮಯನಿ, ಚೇತುಲಾರ, ರಾಮರಾಮರಾಮ ರಾಮರಾರಾ, ಶ್ರೀರಾಮ ರಾಮರಾಮು), ನವರತ್ನದ ಪಲ್ಲಕ್ಕಿ (ಮುಚ್ಚಟಬ್ರಹ್ಮಾದುಲಕು), ತೊಟ್ಟಿಲು (ರಾಮ ರಾಮ ರಾಮಲಾಲಿ), ಪನ್ನೀರು, ಹಂಸತೂಲಿಕಾತಲ್ಪ—ಮುಂತಾದವು.

(ಉ) ಆಟಗಳು : ಕಣ್ಣುಮುಚ್ಚಾಲೆ (ರಾಮರಾಮರಾಮಲಾಲಿ), ಅಳಗುಳಿಮಣೆ (ಓಮನಗುಂಟ–ವಿನನಾಸಗೊನಿ). ನಾಟಕ ಎಂಬ ಪದವನ್ನು ಅನೇಕ ಕಡೆ ಕಾಣ ಬಹುದು. 'ರಾಮಾ ನೀಯೆಡ' ಕೃತಿಯಲ್ಲಿ ತ್ಯಾಗರಾಜರು ಕಾಮಿನಿವೇಷಧಾರಿಗೆ ಸಾಧ್ವಿಯ ನಿಜವಾದ ನಡವಳಿಕೆ ತಿಳಿದಿರುವುದೇ ಎಂಬ ಮಾತನ್ನಾಡಿದ್ದಾರೆ. ಈ ಮಾತಿನ ಹಿನ್ನಲೆಯಲ್ಲಿ ಅಂದು ಪುರುಷರೇ ನಾಟಕಗಳಲ್ಲಿ ಸ್ತ್ರೀಪಾತ್ರವನ್ನು ವಹಿಸುತ್ತಿದ್ದರೆಂದು ನಾವು ಊಹಿಸಬಹುದು.

(ಊ) ಗೃಹಬಳಕೆಯ ವಸ್ತುಗಳು : ಲಾಂದರು (ಏಮಿಜೇಸಿತೇನೇಮಿ), ಒರಳು (ಅಪ್ಪರಾಮಭಕ್ತಿಯಂತೋ, ತಲಿಚಿನಂತನೇ), ಗುಂಡುಕಲ್ಲು (ಗುಂಡ್ರಾತಿ–ಪಾಹಿ ರಮಾರಮಣ).

(ಋ) ಆಯುಧಗಳು : ಬಿಲ್ಲು, ಬಾಣ, ಖಡ್ಗ, ಕಂಚುಕ, ಮೂಲಬಲ (ರಾಮಬಾಣ, ಬಂಟುರೀತಿ).

(ೠ) ನಾಣ್ಯ ಚಲಾವಣೆ : ರೂಕಲು (ತಪ್ಪಕನೇ ರೂಕಲುಪದಿವೇಲುನ್ನ), ಪೈಕ

(ಸುಂದರಿನೀದಿವ್ಯ ರೂಪಮು), ಧನಬಾಂಧ (ಮೇಲುಮೇಲು), ಕಾಸು (ನನ್ನುಬ್ರೋವ ಕನು), ನವನಿಧಿ ಮುಂತಾದವು.

ಹೀಗೆ ತ್ಯಾಗರಾಜರ ರಚನೆಗಳಲ್ಲಿ ಸಾಮಾಜಿಕ ಅಂಶಗಳನ್ನು ಕಾಣಬಹುದು.

**ನೈತಿಕ ಅಂಶಗಳು** : ಒಳಿತು-ಕೆಡಕುಗಳೆಂಬ ಕಲ್ಪನೆ ಇಂದಿನದಲ್ಲ. ಅವು ಸಾರ್ವಕಾಲಿಕ ವಾದುದು. ಆದರೆ ಸಾಮಾನ್ಯವಾಗಿ ಮಾನವ ತನಗುಂಟಾಗುವ ಲೌಕಿಕ ಲಾಭದ ದೃಷ್ಟಿಯಿಂದ ಮಾತ್ರ ಒಳಿತು-ಕೆಡಕುಗಳು ಯಾವುದೆಂಬುದನ್ನು ನಿರ್ಧರಿಸುವುದುಂಟು. ವ್ಯಕ್ತಿ ಮತ್ತು ಸಮಾಜಗಳಿಗೆ ಗಾಢವಾದ ನಂಟಿದ್ದು ವ್ಯಕ್ತಿಯ ಉದ್ಧಾರದ ಮೂಲಕವೇ ಸಮಾಜದ ಉದ್ಧಾರವೆಂದೂ ಆತ ಹೇಳಬಹುದು. ಆದರಿಲ್ಲಿ ಸ್ವಾರ್ಥವೇ ಮುಖ್ಯವಾಗಿ, ಪ್ರಾಪಂಚಿಕ ಹಿತದಲ್ಲಷ್ಟೇ ಅದು ನಿಲ್ಲುತ್ತದೆ. ಆದರೆ ಭಾರತೀಯರ ಗುರಿ ಪ್ರಾಪಂಚಿಕ ಹಿತವಷ್ಟೇ ಅಲ್ಲ, ಅದು ಪಾರಮಾರ್ಥಿಕ ದೃಷ್ಟಿಯನ್ನೂ ಉಳ್ಳದ್ದು. ಈ ಕಾರಣ ದಿಂದಲೇ ಮನುಷ್ಯ ತನ್ನ ಜೀವಿತಾವಧಿಯಲ್ಲಿ ಮಾಡಬೇಕಾದ ಮತ್ತು ಮಾಡಬಾರದ ಕೆಲವು ಕೆಲಸಗಳನ್ನು ಹಿರಿಯರು ಸೂಚಿಸಿರುವುದು. ಇವೇ ನೀತಿ ಮತ್ತು ಅನೀತಿ. ನಾವು ಮಾಡುವ ಯಾವುದೇ ಕೆಲಸಕ್ಕೂ 'ಏಕೆ ?' ಎಂಬ ಕಾರಣವನ್ನು ಕೇಳುತ್ತೇವೆ. ನೀತಿ ಯೇನೂ ಈ ನಿಯಮಕ್ಕೆ ಹೊರತಲ್ಲ. ಪಾಶ್ಚಾತ್ಯ ತಾತ್ವಿಕರ ನಿಲುವು ಈ ಬಗೆಗೆ ಏನೇ ಇದ್ದರೂ ಭಾರತೀಯರ ಪ್ರಕಾರ ಇದರ ಗುರಿ ಐಹಿಕವಲ್ಲ, ಆಮುಷ್ಮಿಕ. ಎಂದರೆ ನೀತಿಶಾಸ್ತ್ರವು ಅರ್ಥಪೂರ್ಣವಾಗುವುದು ಅಧ್ಯಾತ್ಮದ ಹಿನ್ನೆಲೆ ಮತ್ತು ಗುರಿಗಳನ್ನು ಹೊಂದಿದಾಗ ಮಾತ್ರ ಎಂಬುದನ್ನು ನಾವು ಮರೆಯುವಂತಿಲ್ಲ.

ಹಾಗಾದರೆ ನೈತಿಕ ಅಂಶಗಳಾವುವು ? ಎಂಬುದು ಮುಂದಿನ ಪ್ರಶ್ನೆ. ಬೃಹದಾರಣ್ಯಕ ಉಪನಿಷತ್ತಿನ ಕಥೆಯೊಂದರಲ್ಲಿ ಪ್ರಜಾಪತಿಯಾದ ದೇವರೇ, ದೇವತೆಗಳು, ರಾಕ್ಷಸರು, ಹಾಗೂ ಮನುಷ್ಯರಿಗೆ ಕ್ರಮವಾಗಿ ದಮ (ಇಂದ್ರಿಯ ನಿಗ್ರಹ), ದಯೆ, ದಾನಗಳನ್ನು ಬೋಧಿಸಿದಂತೆ ಪ್ರಸ್ತಾಪವಿದೆ.[೨೨] ಇವುಗಳೊಟ್ಟಿಗೇ ಬಾಹ್ಯಾಂತರಿಕ ಶುದ್ಧಿ, ನಿತ್ಯಾನಿತ್ಯ ವಸ್ತು ವಿವೇಕಗಳೂ ಮುಖ್ಯವಾಗಿವೆ. ಒಟ್ಟಿನಲ್ಲಿ ನೈತಿಕ ಪರಿಶುದ್ಧಿ ಇಲ್ಲದೆ ಅಧ್ಯಾತ್ಮ ವಿರಲಿ, ಲೌಕಿಕ ಸಾಧನೆಯೂ ಸಾಧ್ಯವಿಲ್ಲವೆಂಬ ಅಂಶವನ್ನು ಮನದಟ್ಟು ಮಾಡುವ ಸಲುವಾಗಿಯೇ ಎಲ್ಲ ಸಂತ-ಭಕ್ತರೂ ಈ ಅಂಶಗಳನ್ನು ತಮ್ಮ ಅನೇಕ ರಚನೆಗಳಲ್ಲಿ ಪ್ರಸ್ತಾಪಿಸುತ್ತಾರೆ. ಅವುಗಳಲ್ಲಿ ಕೆಲವು ಆತ್ಮಸಂಬೋಧನೆಯ ರೂಪದಲ್ಲಿದ್ದರೆ, ಇನ್ನು ಕೆಲವು ಪರಸಂಬೋಧನೆಯ ರೂಪದಲ್ಲೂ ಮತ್ತೆ ಕೆಲವು ಟೀಕೆಯ ರೂಪದಲ್ಲೂ ಹೊರಹೊಮ್ಮಿವೆ.

ವಾಸ್ತವವಾಗಿ ಮನುಷ್ಯನಿಗೆ ಪರಲೋಕದ ಭಯವನ್ನು ಮರೆಸಿ, ಪರಮಪದ ಹೊಂದುವ ಆಸೆಯನ್ನು ದೂರಮಾಡಿ, ಕ್ಷಣಿಕವಾದ ಬಯಕೆಗಳನ್ನು ಪೂರೈಸಿಕೊಳ್ಳಲು ಆತನನ್ನು ದುಷ್ಕೃತ್ಯಗಳಿಗೆ ಪ್ರೇರೇಪಿಸುವ ಬಂಧನದ ವಸ್ತುಗಳು ಎರಡು ರೀತಿಯವು.

(ಅ) ವಸ್ತು ನಿಷ್ಠವಾದವು, (ಆ) ವ್ಯಕ್ತಿನಿಷ್ಠವಾದವು–ಎಂದರೆ ವಸ್ತುನಿಷ್ಠವಾದ ಧನಕನಕಾದಿ ಸಂಸಾರ ಬಂಧನಗಳು ಹಾಗೂ ಆಂತರಿಕವಾದ ಕಾಮಕ್ರೋಧಾದಿ

ಅರಿಷಡ್ವರ್ಗಗಳು. ಮೂಲತಃ ವ್ಯಕ್ತಿನಿಷ್ಠ ಅಂಶಗಳಾದ ಆಂತರಿಕ ಬಂಧನಗಳಿಂದಲೇ ವ್ಯಕ್ತಿ, ವಸ್ತುನಿಷ್ಠ ಅಂಶಗಳಿಗೂ ಸೆರೆಸಿಕ್ಕುವುದು. ಹೀಗೆ ಬಂಧಿತರಾಗಿ ಕಳವಳಿಸುವ ಮಂದಿಯ ಬಗೆಗೆ ತ್ಯಾಗರಾಜರು ವಿಷಾದಿಸುತ್ತಾರೆ. ಅಂಥವರನ್ನು ಅಧ್ಯಾತ್ಮಿಕವಾಗಿ ಮೇಲೆತ್ತುವ ಸಲುವಾಗಿಯೇ ಅವರು ನಿತ್ಯಾನಿತ್ಯ ವಸ್ತುವಿವೇಕವನ್ನೂ ಮತ್ತು ಬಾಹ್ಯಾಂತರಿಕ ಶುದ್ಧಿಗಳ ಅಗತ್ಯವನ್ನೂ ಒತ್ತಿ ನುಡಿಯುತ್ತಾರೆ.

**ದಯೆ** : ಪತಂಜಲಿಗಳು ತಮ್ಮ ಯೋಗಸೂತ್ರದಲ್ಲಿ ಆಧ್ಯಾತ್ಮ ಸಾಧನೆಗೆಂದು ಹೇಳುವ ಅಷ್ಟಾಂಗಯೋಗಗಳಲ್ಲಿ ಮೊದಲ ಎರಡು ನಿಯಮಗಳು (ಯಮ, ನಿಯಮ). ಮುಖ್ಯವಾಗಿ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಹಾಗೂ ಬಾಹ್ಯಾಂತರಿಕ ಶುದ್ಧಿಗಳೆಂಬ ನೈತಿಕ ಬುನಾದಿಯನ್ನೇ ಹೇಳುವುದು.[೨೩] ದಯೆ ಮತ್ತು ಅಹಿಂಸೆಗಳು ಜೊತೆಯಾಗಿಯೇ ಇರುತ್ತವೆ. ಯಾವ ನಾಗರೀಕ ಧರ್ಮದಲ್ಲಿಯೇ ಆಗಲಿ, ಹಿಂಸೆಗೆ ಪ್ರೋತ್ಸಾಹ ಕಾಣಬರುವುದಿಲ್ಲ. ಎಲ್ಲ ಧರ್ಮಗಳ ಪ್ರಕಾರವೂ 'ಅಹಿಂಸೆ' ಪರಮೋಚ್ಚವಾದುದು. 'ಅಹಿಂಸಾ ಪರಮೋಧರ್ಮ' ಎಂಬ ಪ್ರಸಿದ್ಧೋಕ್ತಿಯನ್ನು ನಾವಿಲ್ಲಿ ಸ್ಮರಿಸಬಹುದು. ಭಕ್ತಿ ಭಂಡಾರಿ ಬಸವಣ್ಣನವರು 'ದಯೆಯಿಲ್ಲದ ಧರ್ಮವದಾವುದಯ್ಯ, ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲಿ, ದಯವೇ ಧರ್ಮದ ಮೂಲವಯ್ಯ' ಎಂಬ ಮಾತುಗಳ ಮೂಲಕ ದಯೆಯ ಪ್ರಾಧಾನ್ಯವನ್ನು ತಿಳಿಸುತ್ತಾರೆ. ಯೋಗಸೂತ್ರದ ಮೇಲಿರುವ ವ್ಯಾಸಭಾಷ್ಯದ ಮೇಲೆ ವಾಚಸ್ಪತಿ ಮಿಶ್ರರು ಪ್ರಸ್ತಾಪಿಸುತ್ತಾ 'ಅಹಿಂಸೆಯೇ' ಯಮದ ಆದಿ-ಅಂತ್ಯಗಳೆನ್ನುತ್ತಾರೆ. ಅಹಿಂಸೆ ಇಲ್ಲದೆ ಇತರ ನಿಯಮಗಳನ್ನು ಎಷ್ಟೇ ಕಟ್ಟುನಿಟ್ಟಾಗಿ ಪಾಲಿಸಿದರೂ ಅದು ವ್ಯರ್ಥವೆಂದು ವಾಚಸ್ಪತಿಗಳ ಮತ.[೨೪] ದಯೆಯು ಮಾನವರಲ್ಲಷ್ಟೇ ಅಲ್ಲ, ಸಕಲ ಪ್ರಾಣಿಗಳಲ್ಲೂ ಇರುವುದು ಅಗತ್ಯ. ಹೀಗೆಂದೇ ಪ್ರಾಣಿವಧೆಯನ್ನು ಒಳಗೊಂಡಿದ್ದ ಯಜ್ಞಾದಿಗಳನ್ನು ತ್ಯಾಗರಾಜರೂ ಖಂಡಿಸುವುದು. ದಯೆಯ ತಳಹದಿಯಿಂದ ಮಾತ್ರವೇ ವ್ಯಕ್ತಿ ಅಹಿಂಸಾ ಮಾರ್ಗದಲ್ಲಿ ನಡೆಯಲು ಸಾಧ್ಯ. ಆದ್ದರಿಂದ ನೈತಿಕಾಂಶಗಳಲ್ಲಿ ಪ್ರಪ್ರಥಮವಾದುದು 'ದಯೆ'. ದಯೆಯ ಮೂಲವುಳ್ಳ ಅಹಿಂಸೆಯು ಕಾಯಾ, ವಾಚಾ, ಮನಸಾ ಅನುಸರಿಸಿದಾಗ ಮಾತ್ರ ಅರ್ಥಪೂರ್ಣವಾಗುವುದು. ದೈಹಿಕವಾಗಿಯಾಗಲೀ, ಮಾತು ಮನಸುಗಳಿಂದಾಗಲೀ ಇತರರಿಗೆ ಕೆಡುಕನ್ನು ಉಂಟುಮಾಡಬಾರದೆಂಬುದೇ ಇದರ ಅರ್ಥ. ತ್ಯಾಗರಾಜರು ಈ ಅಂಶವನ್ನು ಹೇಳುವ ಬಗೆ ಹೀಗಿದೆ.

(ಅ) **ಕಾಯಾ** : ತ್ಯಾಗರಾಜರು 'ಹಿಂಸಾದುಲೆಲ್ಲ ರೋಸಿ' (ಸಂಸಾರುಲೈತೇ), 'ಸಂಸಾರಮುನ ಬ್ರೋವದಾರಿನಿ ಪರಹಿಂಸ ಜೇಯು ಕಿರಾತಕುಡು' (ಈಮೇನು) ಎನ್ನುವಲ್ಲಿ ಹಿಂಸೆಯನ್ನು ಖಂಡಿಸುತ್ತಾರೆ. ತ್ಯಾಗರಾಜರಿಲ್ಲಿ ಅಹಿಂಸಾಪರರಾದ ಮಂದಿ ಸಂಸಾರಿಗಳಾಗಿದ್ದರೂ, ಭಗವತ್ಕೃಪೆಗೆ ಪಾತ್ರರಾಗಬಹುದೆನ್ನುತ್ತಾರೆ. ಸಂಸಾರ ನಿರ್ವಹಣೆಗಾಗಿಯೇ ಪರಹಿಂಸೆ ಮಾಡುತ್ತಿದ್ದ ಕಿರಾತಕನೆಂದು ಅವರು ವಾಲ್ಮೀಕಿ ಪ್ರಸಂಗವನ್ನು ವಿಶದಪಡಿಸುವ ಮೂಲಕ ಹಿಂಸೆಯನ್ನು ಖಂಡಿಸುತ್ತಾರೆ (ಈಮೇನು). ತ್ಯಾಗ

ರಾಜರ ಪ್ರಕಾರ ಪರಹಿಂಸೆ ಮಾಡುವವರು ಕಿರಾತಕರೆ ಸರಿ.

ತ್ಯಾಗರಾಜರು, ತಮ್ಮ ಸೋದರ ಮತ್ತು ಸಾಮಾಜಿಕರಾದ ಇತರರಿಂದ ಬಾಧೆಗೊಳಗಾಗಿದ್ದರೆಂದು ಹೇಳುವುದುಂಟು. ತಮ್ಮನ್ನು ಇಂತಹ ಕಷ್ಟಕ್ಕೆ ಸಿಲುಕಿಸಿದ ಮಂದಿಗೆ ತಾವೂ ಪ್ರತಿಯಾಗಿ ಹಿಂಸಿಸಲಿಲ್ಲ. ಇವೆಲ್ಲವೂ ಹರಿಲೀಲೆಯೆಂದೇ ಭಾವಿಸಿ ಸಹನೆಯಿಂದಿದ್ದವರು. ಏಕೆಂದರೆ ಅವರಿಗೆ ಇತರರು ನೀಡಿದ ಹಿಂಸೆಗಳೆಲ್ಲವೂ ದೇವರಿಗೆ ಉಂಟಾದ ಹಿಂಸೆಗಳೇ ಎಂದು ದೇವರೇ ಅವರೊಂದಿಗೆ ಹೇಳಿದ್ದಾನೆ.

**ನಿನ್ನು ತಿಟ್ಟಿಕೊಟ್ಟಿ ಹಿಂಸಪೆಟ್ಟಿನದನ್ನಿಯು ನನ್ನನಲೇದಾ**
**ಎನ್ನರಾನಿ ನಿಂದಲ ತಾಳುಮನಿ ಮನ್ನಿಂಚಗಲೇದಾ**

**(ಆದಯ ಶ್ರೀರಘುವರ)**

ತ್ಯಾಗರಾಜರೇನೋ ಪರಮಾರ್ಥ ದೃಷ್ಟಿಯುಳ್ಳವರು. ಈ ಕಾರಣದಿಂದ ಅವರು ಇತರರು ನೀಡಿದ ಬಾಧೆಗಳನ್ನು ಸಹನೆಯಿಂದ ಅನುಭವಿಸಿದರೆನ್ನಬಹುದು. ಆದರೆ ಅವರು ಸಂಸಾರ ನಿರ್ವಹಣೆಗಾಗಿಯಾದರೂ ಪರಹಿಂಸೆ ತರವಲ್ಲ ಎಂದು ವಾಲ್ಮೀಕಿ ಪ್ರಸ್ತಾವದೊಂದಿಗೆ ಹೇಳಿರುವುದಿಲ್ಲಿ ಗಮನಾರ್ಹ. ಸ್ವಾರ್ಥಲೇಪದಿಂದ ಕೂಡಿ, ನೈತಿಕತೆ ಅಧೋಗತಿಗಿಳಿಯುತ್ತಿರುವ ಈ ಶತಮಾನಕ್ಕೂ ಅವರ ಈ ಮಾತುಗಳು ದಾರಿದೀಪವೇ ಸರಿ.

(ಆ) **ವಾಚಾ** : ಆದಿಕವಿ ವಾಲ್ಮೀಕಿಯು ರಾಮಾಯಣದಲ್ಲಿ ಆಂಜನೇಯನ ಮಾತುಗಳನ್ನು ಕುರಿತಂತೆ ಹೀಗೆನ್ನುತ್ತಾನೆ. 'ಮಧುರಂ ಅವಿತಥಂ ಜಗಾದ ವಾಕ್ಯಮ್'[೨೫] ಎಂದರೆ ಆ ಮಾತುಗಳಲ್ಲಿ ಮಾಧುರ್ಯವೂ, ಸತ್ಯವೂ ಇದ್ದಿತಂತೆ. ಇದರಂತೆಯೇ ಮನುಸ್ಮೃತಿಯು ವಾಕ್ ಹೇಗಿರಬೇಕೆಂಬುದನ್ನು ಹೀಗೆ ಸಾರುತ್ತದೆ.

**ಸತ್ಯಂಬ್ರೂಯಾತ್ ಪ್ರಿಯಂಬ್ರೂಯಾತ್ ನಬ್ರೂಯಾತ್ ಸತ್ಯಮಪ್ರಿಯಮ್ ।**
**ಪ್ರಿಯಂಚ ನಾನೃತಂ ಬ್ರೂಯಾತ್ ಏಷಧರ್ಮಃ ಸನಾತನಃ ॥**[೨೬]

ಪ್ರಿಯವಾದ, ಸತ್ಯವನ್ನೇ ನುಡಿಯಬೇಕು ಆದರೆ ಪ್ರಿಯವಾಗಲೆಂದು ಸುಳ್ಳನ್ನಾಡಬಾರದು. ಅಪ್ರಿಯವಾದ ಸತ್ಯವನ್ನು ನುಡಿಯಬಾರದು. ಇದೇ ಸನಾತನ ಧರ್ಮ ಎಂಬ ಭಾವವಿಲ್ಲಿದೆ.

ತ್ಯಾಗರಾಜರಿಗೆ ಶ್ರೀರಾಮನ ವಾಕ್‌ಲಹರಿಯೇ ಮಾತಿನ ರೀತಿಗೊಂದು ಆದರ್ಶ. ಅವರ ಶ್ರೀರಾಮ ಬಹುರೂಪಿ. ಆತ ಮಗನಾಗಿ, ಸೋದರನಾಗಿ, ಪತಿಯಾಗಿ, ತಂದೆಯಾಗಿ, ರಾಜನಾಗಿ, ದೇವರಾಗಿ ಇದ್ದವನು. ಆತ ಪರಿಜನರು, ಪುರಸ್ತ್ರೀಯರು, ರಾಜಾಧಿರಾಜರು, ಮುನಿಗಳು, ದೇವಾಧಿದೇವತೆಗಳು ಅಲ್ಲದೆ ರಾಕ್ಷಸರೂ ಕೂಡ ಮನಸೋಲುವಂತೆ ಆಡಿದ ಮಾತುಗಳ ಬಗೆಗೆ ಅದ್ಭುತಾಶ್ಚರ್ಯಗಳನ್ನು ಅವರು ವ್ಯಕ್ತಪಡಿಸುತ್ತಾರೆ (ಏಮನಿ ಮಾಟ್ಲಾಡಿತಿವೋ). ತ್ಯಾಗರಾಜರ ಪ್ರಕಾರ ಶ್ರೀರಾಮ ವಿವಿಧ ಸ್ವಭಾವದ ಮಂದಿಯೊಂದಿಗೆ, ಅವರವರಿಗೆ ಅನುಗುಣವಾಗಿ ವ್ಯವಹರಿಸಿ ಅವರೆಲ್ಲರನ್ನೂ ಸ್ವವಶ ಮಾಡಿಕೊಂಡಿದ್ದಾನೆ. ಆತನದು ಯುಕ್ತವಚನ (ಮಾಮವಸತತಂ). ಆತ

ಎರಡು ಮಾತನಾಡುವವನಲ್ಲ (ಏಟಿ ಯೋಚನಲು). ಆತನದು ಒಂದೇ ನಿಲುವು (ಒಕಮಾಟ). ಆತ ಸತ್ಯಸಂಧ, ಆಡಿದ ಮಾತಿಗೆ ತಪ್ಪದವನು ಎಂದೇ ಆಚಂದ್ರಾರ್ಕವಾಗಿ ಕೀರ್ತಿ ಪಡೆದಿದ್ದಾನೆ (ವಾಡೇರಾ ದೇವಮು). ಹಿರಿಯರಿಗೆ ಎದುರಾಡಿದವನಲ್ಲ. ಜನಕ ವಚನಸುಪರಿಪಾಲನಮುಜೇಸಿನ ವನಜಲೋಚನ (ಕರುಣಾಜಲಧಿ). ನಯ ಭಯವಾಗಿ ಮುದ್ದಾಗಿ ಆಡಿದ ಮಾತುಗಳು, ಶ್ರೀರಾಮನವು. ಆದ್ದರಿಂದಲೇ ತ್ಯಾಗರಾಜರು ಆತನನ್ನು ಸುಧಾಮಾಧುರ್ಯ ಭಾಷಣ, ಅತಿ ಮೃದುತರ ಸತ್ಯಭಾಷಣ ಮುಂತಾಗಿ ಸಂಬೋಧಿಸುವುದು.

ಈ ಹಿನ್ನೆಲೆಗಳೊಂದಿಗೆ ಯೋಚಿಸಿದಾಗ ಹಿತಮಿತವಾದ ಯುಕ್ತ ವಚನದ ಪ್ರಾಧಾನ್ಯ ಮನವರಿಕೆಯಾಗುತ್ತದೆ. ದಿನನಿತ್ಯದ ವ್ಯವಹಾರಕ್ಕೆ ಮಾತು ಅಗತ್ಯವೇನೋ ನಿಜ. ಆದರೆ ಅದು ಅತಿಯಾಗದೆ ದೇವರ ನಾಮಸ್ಮರಣೆಗಾಗಿ ಬಳಕೆಯಾಗಬೇಕೇ ವಿನಹ ಊರಿನ ಮಾತುಗಳನ್ನಾಡಲು ಅಲ್ಲ. ಇದನ್ನು ತ್ಯಾಗರಾಜರು ಹೀಗೆನ್ನುತ್ತಾ ಸೂಚನೆ ನೀಡುತ್ತಾರೆ.

**ಸಾರೆಕು ನಾಮಸ್ಮರಣ ಸೇಯಕ**
**ಊರಿಮಾಟಲೆಲ್ಲ ನೂರಕವದರೇ ॥**

(ಇಂದುಕಾ ಈ ತನುವುನು ಪೆಂಚಿನ)

ಮಾತು ಅತಿಯಾದಲ್ಲಿ ಆಗುವ ಪರಿಣಾಮ ಅಹಿತವಾದದ್ದು. ಕಾಡುಹರಟೆಯಿಂದ ಮೊದಲ್ಗೊಂಡ ಮಾತುಗಳು ಸ್ವಾರ್ಥಸಾಧನೆ, ಪರನಿಂದೆ, ಸುಳ್ಳು, ಚಾಡಿ, ನರಸ್ತುತಿ ಇತ್ಯಾದಿಗಳನ್ನೂ ಒಳಗೊಳ್ಳುತ್ತದೆ. ಅತಿಯಾದ ಮಾತಿನಿಂದಾಗುವ ಮೇಲಿನ ಅಂಶಗಳನ್ನು ತ್ಯಾಗರಾಜರು ಪ್ರಸ್ತುತಪಡಿಸುವ ರೀತಿಯಿದು.

**ಸ್ವಾರ್ಥಸಾಧನೆ** : ಈ ಭೂಮಿಯಲ್ಲಿ ಪತ್ನೀಪುತ್ರರನ್ನು ಸಲಹುವ ಸಲುವಾಗಿ ಶಿಲಾತ್ಮನಂತೆ ನುಡಿಯಲಾರೆ.

**ಕಲಿಲೋ ಮಾಟಲು ನೇರ್ಚುಕೊನಿ**
**ಕಾಂತಲನು ತನಯುಲ ಬ್ರೋಚುಟಕೈ**
**ಶಿಲಾತ್ಮುಡೈ ಬಲ್ಕನೇರನುರ**

(ನೆನರುಂಚಿನಾನು)

**ಪರನಿಂದೆ** : ಮಾತಿನ ಸಾರ್ಥಕ್ಯ ಪರನಿಂದೆ ಅಥವಾ ಚಾಡಿಮಾತುಗಳಿಂದ ಅಲ್ಲ. ವಾಕ್ಕುಗಳಲ್ಲಿ ಪರನಿಂದೆಗಳನ್ನು ಬಿಟ್ಟು ರಘುವೀರನನ್ನು ಭಜಿಸಬೇಕು. ಮಾತು ಭಜನೆಗಾಗಿಯೇ ಬಳಸಬೇಕೆಂಬ ಉದ್ದೇಶ ಇಲ್ಲಿ ಮತ್ತೊಮ್ಮೆ ಪರೋಕ್ಷವಾಗಿ ಮೂಡಿದೆ.

**ಪರನಿಂದಲ ಬಾಸಿ ಭಜರೇ ರಘುವೀರಂ**

(ಭಜರೇ ರಘುವೀರಂ)

**ಚಾಡಿಮಾತು** : ಚಾಡಿಮಾತುಗಳನ್ನು (ಪರನಿಂದೆ) ಕೇಳಿದರೂ ಅದನ್ನು ಇತರರೊಂದಿಗೆ ಹೇಳದಿರುವುದು ಸಂಸ್ಕೃತಿಯ ಲಕ್ಷಣ. ಇದು ತ್ಯಾಗರಾಜರ ಕೆಳಗಿನ

ಸಾಲಿನಲ್ಲಿ ಧ್ವನಿತವಾಗಿದೆ.

**ಚಾಡಿವಿನ್ನಮಾಟ ಮದಿನಿ ನಿಲ್ಚಲೇನಿ**
**ಸರಸುನಿ ವಿತಮೌನೇ**

(ಮನಸು ಸ್ವಾಧೀನಮ್ಮೈನ)

**ಸುಳ್ಳು ಮತ್ತು ನರಸ್ತುತಿ** : ಸತ್ಯಶಕ್ತಿಯನ್ನು ಸ್ಥಿರಪಡಿಸಿಕೊಳ್ಳಬೇಕಲ್ಲದೆ ಸುಳ್ಳಾಡ ಬಾರದು. ದೈವಕೃಪೆ ಹೊಂದಿದವನೆಂದಿಗೂ ಸುಳ್ಳನ್ನು ಹೇಳುವುದಿಲ್ಲ. ಇಲ್ಲದಿರುವ ಗುಣಗಳನ್ನು ಆರೋಪಿಸಿ ಮಾಡುವ ನರಸ್ತುತಿಯನ್ನಂತೂ ತ್ಯಾಗರಾಜರು ಹಲವಾರು ರಚನೆಗಳಲ್ಲಿ ಟೀಕಿಸುತ್ತಾರೆ. ಪ್ರೊದ್ದು ಪೊಯ್ಯೇನಿ; ಎವರುತೆಲಿಯಕ; ದುರ್ಮಾರ್ಗ ಚರಾಧಮುಲ; ನಿಧಿಚಾಲಾ ಸುಖಮಾ ಅವುಗಳಲ್ಲಿ ಕೆಲವು. ಲೌಕಿಕ ಲಾಭಕ್ಕಾಗಿ ಮಾನವಾಧಮರನ್ನು ಆಶ್ರಯಿಸುವುದು ಎಂದರೆ ಸ್ತುತಿ ಮಾಡುವುದು ಸರ್ವದಾ ಸರಿಯಲ್ಲ ಎಂಬುದೇ ತ್ಯಾಗರಾಜರ ಖಚಿತ ಅಭಿಪ್ರಾಯ.

ಒಟ್ಟಾರೆ ತ್ಯಾಗರಾಜರು ತಮ್ಮ ಬಾಯಿ ಎಂದಿಗೂ ಶ್ರೀರಾಮನಾಮವನ್ನೇ ಸ್ತುತಿಸುತ್ತಿರಲಿ ಎಂದು ಹೇಳಿಕೊಳ್ಳುವ ಮೂಲಕ ವಾಕ್ಕಿನ ಸಾರ್ಥಕತೆಯನ್ನು ಇತರರಿಗೂ ಮನದಟ್ಟು ಮಾಡಿದ್ದಾರೆ.

**ನೋರೆಪ್ಪುಡು ನೀ ಪೇರೆ ಪಲ್ಕನಿ**

(ನಾರಾಯಣಹರಿ)

(ಇ) **ಮನಸಾ** : ಸಂಸಾರಿಯಾಗಿದ್ದರೂ ಕ್ರೂರಯೋಚನೆಗಳನ್ನು ಮಾಡದಿರುವವರು ಪರಮಪದವಿಗೆ ಅರ್ಹರೇ ಎಂಬುದು ಕೆಳಗಿನ ಅವರ ಮಾತಿನಲ್ಲಿ ಸ್ಪಷ್ಟವಾಗಿದೆ.

**ಕ್ರೂರಪು ಯೋಚನಲ ದೂರುಜೇಸಿ**

(ಸಂಸಾರುಲೈತೇಯೇಮಯ್ಯ)

**ಲೋಭ ಮತ್ತು ದಾನ** : ಮನುಷ್ಯನಿಗೆ ತನ್ನ ದಿನನಿತ್ಯದ ಬದುಕಿಗೆ ಎಷ್ಟೋ ವಸ್ತುಗಳು ಅಗತ್ಯವಾಗಿರುತ್ತವೆ. ಅವುಗಳನ್ನು ಸಂಪಾದಿಸಿಕೊಂಡು ಜೀವಿಸಬೇಕಾದುದು ಅನಿವಾರ್ಯವೂ ಹೌದು. ಆದರೆ ಅಗತ್ಯಕ್ಕಿಂತ ಹೆಚ್ಚಾಗಿ ಸಂಪಾದಿಸುವುದರಿಂದ ಅವನಲ್ಲಿ ಆಸೆ ಹೆಚ್ಚಾಗಿ ಕೃಪಣತೆ ಉಂಟಾಗುತ್ತದೆ. ಇದೇ ಲೋಭ. ಲೋಭಿಯಾದ ಮನುಷ್ಯ ಅಪಾಮಾರ್ಗಗಳಿಂದಾದರೂ ಸರಿ ತನ್ನ ಶ್ರೀಮಂತಿಕೆಯನ್ನು ವೃದ್ಧಿಸಿಕೊಳ್ಳಬೇಕೆಂಬ ಒಂದೇ ಗುರಿಯಿಂದ ಪರಧನಾಸಕ್ತನಾಗುತ್ತಾನೆ. ಸುಳ್ಳು ಹೇಳಿ ಉದರ ನಿಮಿತ್ತದಿಂದ ಇತರರ ಹಣವನ್ನೂ ದೋಚುತ್ತಾನೆ. ಸಂಗ್ರಹಣೆ ಹೆಚ್ಚಾಗುತ್ತಿದ್ದಂತೆ ದೈವ ಧ್ಯಾನ ವನ್ನೂ ಮರೆತು ಹಣದ ಪೆಟ್ಟಿಗೆಯನ್ನೇ ನೋಡುತ್ತಿರಬೇಕೆಂಬ ವ್ಯಾಮೋಹ ಅವನಲ್ಲಿ ಉಂಟಾಗುತ್ತದೆ. ಇದನ್ನೇ ತ್ಯಾಗರಾಜರು ಕೆಳಗಿನ ಮಾತುಗಳಲ್ಲಿ ಪ್ರತಿಪಾದಿಸುತ್ತಾರೆ.

**ಕಲ್ಲಲಾಡಿ ಕಡುಪು ಪಲ್ಲಮು ನಿಂಪುಟ**
**ಕೆಲ್ಲವಾರಿ ಧನಮೆಲ್ಲ ಜೇರ್ಚುಕೊನಿ**

(ಎಂದುಕೋ ಬಾಗತೆಲಿಯದು)

**ಭೂತಲಮುನ ನೊಕರಿಚೇತಿ ಧನಮಪಹರಿಂಚು**
**ಘಾತಕುಲ ಪರಲೋಕ ಭೀತಿಯುಲೇನಿ**
**ಪಾತಕುಲ . . . . .**

(ನಿನ್ನೇ ನೆರನಮ್ಮಿನಾನು ನೀರಜಾಕ್ಷ)

ಎರಡನೆಯ ಉಲ್ಲೇಖದಲ್ಲಿ ಧನವನ್ನು ಅಪಹರಿಸುವ ಪಾತಕಿಗೆ ಪರಲೋಕ ಭೀತಿಯೂ ಇಲ್ಲವಾಗುತ್ತದೆ ಎನ್ನುತ್ತಾರೆ.

**ಧನಮುಲ ಪೆಟ್ಟಲ ತೋಡನು**
**ಪೆಟ್ಟಿ ಪೊಯ್ಯೇಮಟ್ಟು ಕನುಗೊನಿ**

(ಎಂದುಕೋ ಬಾಗತೆಲಿಯದು)

ತಾನು ಸಂಗ್ರಹಿಸಿದ ಹಣವನ್ನು ವ್ಯಾಮೋಹದಿಂದ ನೋಡುತ್ತಾ ಕುಳಿತಿರುವಲ್ಲೇ ಅವನ ಆಯುಷ್ಯ ಕಳೆದು ಹೋಗುವುದೆಂಬ ವಿಷಾದ ತ್ಯಾಗರಾಜರಿಗೆ. ಆದ್ದರಿಂದಲೇ ಅವರು ಅಗತ್ಯಕ್ಕಿಂತ ಹೆಚ್ಚಾಗಿ ಸಂಗ್ರಹಿಸಲು ಅಪೇಕ್ಷಿಸುವ ಮನುಷ್ಯನ ಮೂರ್ಖತನ ವನ್ನು ಹೀಗೆ ಖಂಡಿಸುತ್ತಾರೆ.

ಎಲೈ ಮನಸೇ, ಹತ್ತು ಸಾವಿರ ರೂಪಾಯಿಗಳಿದ್ದರೂ, ಶರೀರದ ಸ್ಥಿತಿಗೆ ಅಗತ್ಯ ವಾದುದು ಮುಷ್ಟಿ ಕೂಳು ಮಾತ್ರ. ಸಾವಿರ ವಸ್ತ್ರಗಳಿದ್ದರೂ ಒಮ್ಮೆ ಧರಿಸಲಾಗುವುದು ಒಂದು ವಸ್ತ್ರ ಮಾತ್ರ. ಒಬ್ಬನಿಗೆ ಇಡೀ ದೇಶವೇ ತನ್ನದಾಗಿದ್ದರೂ ಅವನು ಕಡೆಯಲ್ಲಿ ಆಕ್ರಮಿಸಲಾಗುವುದು ಮೂರು ಅಡಿಗಳಷ್ಟು ಸ್ಥಳ ಮಾತ್ರ. ನೂರಾರು ಭಕ್ಷಣಗಳು ಎದುರಲ್ಲೇ ಇದ್ದರೂ ತಿನ್ನಲಾಗುವುದು ಬಾಯಿ ಹಿಡಿಸುವಷ್ಟು ಮಾತ್ರ, ನದಿ ತುಂಬಿ ಹರಿಯುತ್ತಿದ್ದರೂ ಪಾತ್ರೆಯ ಗಾತ್ರದಷ್ಟು ಮಾತ್ರಾ ನೀರನ್ನು ತುಂಬಿಸಿಕೊಳ್ಳಲಾಗು ವುದು.

**ರೂಕಲು ಪದಿವೇಲುನ್ನ ಚೇರೆಡು**
**ನೂಕಲು ಗತಿಗಾನಿ ಓ ಮನಸಾ**
**ಕೋಕಲು ವೆಯ್ಯುನ್ನ ಕಟ್ಟು**
**ಕೊನುಟಕೊಕಟೇ ಗಾನಿ ಓ ಮನಸಾ**
**ಊರೇಲಿನ ತಾ ಪಂಡುಟ ಮೂಡು ಮೂರ ತಾವುಗಾನಿ**
**ನೂರು ಭಕ್ಷಣಮುಲಬ್ಬಿನ ನೋಟಿಕಂತಗಾನಿ**
**ಏರು ನಿಂಡಿ ಪಾರಿನ ಪಾತ್ರಕು ತಗು ನೀರು ವಚ್ಚುಗಾನಿ . . . . .**

(ರೂಕಲು ಪದಿವೇಲುನ್ನ)

ಈ ಸತ್ಯವನ್ನು ಅರಿತುಕೊಳ್ಳಬೇಕೆಂದೂ, ಲೋಭಿಯಾಗದೆ ರಾಮನನ್ನು ಸ್ಮರಿಸ ಬೇಕೆಂದೂ ತ್ಯಾಗರಾಜರು ಮನಸ್ಸಂಬೋಧನೆ ಮಾಡಿಕೊಳ್ಳುತ್ತಾರೆ.

**ಸಾರತರುನಿ ಹರಿನಿ ತ್ಯಾಗರಾಜ ಸನ್ನುತುನಿ ಮರವಕೇ ಓ ಮನಸಾ**

(ರೂಕಲು ಪದಿವೇಲುನ್ನ)

ಕೇವಲ ಶರೀರ ರಕ್ಷಣೆಗೆ ಅಗತ್ಯವಾದಷ್ಟು ಮಾತ್ರ ಸಂಗ್ರಹಿಸಿದ್ದರೆ ಮನಸ್ಸು ಯಾವ ಕಲ್ಮಷವನ್ನೂ ಹೊಂದುವುದಿಲ್ಲವೆಂದು ಭಗವದ್ಗೀತೆಯು ಉಲ್ಲೇಖಿಸುತ್ತದೆ.[೨೭]

ನ್ಯಾಯಮಾರ್ಗದಿಂದಲೇ ಧನಿಕನಾಗಿದ್ದವನು ಕೂಡ ತನ್ನಲ್ಲಿರುವ ಸಂಪತ್ತಿನ ಬಗೆಗೆ ಮೋಹ ಬೆಳೆಸಿಕೊಂಡು ಲೋಭಿಯಾಗಿರಬಾರದೆಂಬುದು ತ್ಯಾಗರಾಜರ ಕಿವಿಮಾತು. ಇಂಥವನೂ ತನ್ನಲ್ಲಿನ ಸಂಪತ್ತನ್ನು ಇತರರೊಂದಿಗೆ ಹಂಚಿಕೊಳ್ಳಬೇಕು. ಸತ್ಪಾತ್ರರಿಗೆ ದಾನ ಮಾಡಬೇಕು. ಹೀಗೆ ದಾನ ಮಾಡುವುದರಿಂದ ಪುಣ್ಯಾರ್ಜನೆ ಆಗುವುದೆಂಬುದನ್ನು ಪರೋಕ್ಷವಾಗಿ ಅವರು ನುಡಿಯುತ್ತಾರೆ. ಸಮಯೋಚಿತವಾಗಿ ದಾನಮಾಡದವನು ಅವರ ಪ್ರಕಾರ ಕುಮತಿಯೂ, ದೆವ್ವವೂ ಆಗುತ್ತಾನೆ.

**ಸಮಯಮುದೆಲಿಸಿ ಪುಣ್ಯಮುಲಾರ್ಜಿಂಚನಿ**
**ಕುಮತಿಯುಂಡಿಯೇಮಿ ಪೋಯಿಯೇಮಿ**
**ಧರಲೋನ ಧನಕೋಟ್ಲಕು ಯಜಮಾನುಡು**
**ದಯ್ಯಮೈತೇನೇಮಿ ಲೋಭೈತೇನೇಮಿ**

**(ಸಮಯಮುದೆಲಿಸಿ)**

**ಏಜನ್ಮಮುನ ಪಾತ್ರಮೆರಿಗಿ ದಾನಂಬೀಕ**

**(ಮೀವಲ್ಲ ಗುಣದೋಷಮೇಮಿ)**

ತ್ಯಾಗರಾಜರು ತನ್ನಲ್ಲಿ ಇರುವ ಸಂಪತ್ತನ್ನು ಸತ್ಪಾತ್ರರಿಗೆ ದಾನ ಮಾಡಬೇಕೆಂದು ಹೇಳುವಲ್ಲಿ ಒಂದು ಅನುಮಾನ ಉದ್ಭವವಾಗುತ್ತದೆ. ಅವರು ಒಂದೆಡೆ ಸಂಪತ್ತು ಅಶಾಶ್ವತವೆಂದೂ, ಮತ್ತೊಂದೆಡೆ ಇರುವ ಸಂಪತ್ತನ್ನು ದಾನಮಾಡಬೇಕೆಂದೂ ಹೇಳುತ್ತಾರೆ. ಸಂಪತ್ತು ತಾನಾಗಿಯೇ ನಷ್ಟವಾಗಲಿ. ಅದನ್ನು ನಾವೇಕೆ ದಾನಮಾಡಬೇಕು ಎಂಬುದು ಪ್ರಶ್ನೆ. ಆದರೆ ದಾನ ಮಾಡದೆ ಶೇಖರವಾಗಿದ್ದ ಸಂಪತ್ತು ಒಬ್ಬನಿಗೆ ಅದರ ಬಗ್ಗೆ ತೀವ್ರ ಆಸಕ್ತಿ ಉಂಟುಮಾಡುತ್ತದೆ. ಹಾಗೆಯೇ ಅದು ತಾನಾಗಿಯೇ ನಾಶವಾದಾಗ ತೀವ್ರ ದುಃಖದಲ್ಲಿ ತೊಳಲುವಂತಾಗುತ್ತದೆ. ಈ ಪರಿಸ್ಥಿತಿಯಿಂದ ಪಾರಾಗಲು ದಾನ ಉತ್ತಮ ಪರಿಹಾರ. ಇದು ಒಬ್ಬನಲ್ಲಿ ಮಾನಸಿಕ ಸಿದ್ಧತೆಯನ್ನೂ, ಸಾಮರ್ಥ್ಯವನ್ನೂ ಉಂಟುಮಾಡುತ್ತದೆ. ಆದ್ದರಿಂದಲೇ ಧನಿಕನು ದಾನಮಾಡಬೇಕೆಂದು ತ್ಯಾಗರಾಜರು ಹೇಳುವುದು.

ಮುಂದುವರಿದು ತ್ಯಾಗರಾಜರು ದಾನಿಯ ಮನೋಭಾವ ಹೇಗಿರಬೇಕೆಂಬುದನ್ನು ಪರೋಕ್ಷ ರೂಪದಲ್ಲಿ ವಿಶದಪಡಿಸುತ್ತಾರೆ. ತಾನು ನೀಡುವ ಹಣವೇ ಹಿರಿದೆಂಬ ಭಾವವಾಗಲೀ, ಅಥವಾ ಹೆಗ್ಗಳಿಕೆಯಾಗಲೀ ದಾನಿಗೆ ಇರಬಾರದೆಂದೂ ಈ ರೀತಿಯ ದಾನವು ದಾನಿಯನ್ನು ರಕ್ಷಿಸುವುದಿಲ್ಲವೆಂದೂ ನುಡಿಯುತ್ತಾರೆ.

**ಕಾಸಿಚ್ಚೇದೇ ಗೊಪ್ಪಾಯನುರಾ**
**ಕಲಿಲೋ ರಾಜುಲಕು**

**(ಕಾಸಿಚ್ಚೇದೇ ಗೊಪ್ಪಾಯನುರಾ)**

**ಮೆಪ್ಪುಲಕೈ ಬಹು ಧರ್ಮಮುಲು ಜೇಸಿತೇ**
**ಮಿಗುಲ ಬ್ರೋವ ತಗುನೇ**

**(ನೀಕೇ ದಯರಾಕ)**

ಹಾಗೆಯೇ ದಾನ ತೆಗೆದುಕೊಳ್ಳಲು ಹಲುಬುವ ಮನುಷ್ಯನಿಗೂ ಒಂದು ಜವಾಬ್ದಾರಿಯಿದೆ. ಇವನಿಗೆ ಕೈಗಳಿರುವುದು ದಾನ ಪಡೆಯುವ, ಅದರಲ್ಲೂ ದುರ್ದಾನಗಳಿಗೆ ಕೈಚಾಚಲು ಅಲ್ಲ (ಇಂದುಕಾ ಈತನುವುನು ಪೆಂಚಿನ). ಮನುಷ್ಯ ತಾನು ಬದುಕಿರುವವರೆಗೆ ಸುಖವಾಗಿರಬೇಕು ನಿಜ. ಆದರೆ ಅಂತಹ ಸುಖವನ್ನು ಅನುಭವಿಸಲು ಆತ ಯಾವ ಮಾರ್ಗವನ್ನಾದರೂ ಅನುಸರಿಸಬಹುದೆಂಬುದು ಇಲ್ಲಿನ ಅಭಿಪ್ರಾಯವಲ್ಲ. ಗುರಿ ಎಷ್ಟು ಪರಿಶುದ್ಧವಾಗಿರಬೇಕೋ ಸಾಧನವೂ ಅಷ್ಟೇ ಪರಿಶುದ್ಧವಾಗಿರಬೇಕು ಎಂಬ ತತ್ವಪ್ರತಿಪಾದನೆ ತ್ಯಾಗರಾಜರ ಮಾತಿನಲ್ಲಿದೆ. ಹೀಗಾಗಿ ಲೌಕಿಕರು ನೀಡುವ ದಾನಗಳನ್ನೇ ನಂಬಿಕೊಳ್ಳದೆ ಭಕ್ತಿಮಾರ್ಗದಿಂದ ನಡೆದು ಜಗತ್ತಿಗೇ ಶ್ರೇಷ್ಠ ದಾನಿಯಾದ ದೇವರಲ್ಲಿ ಮಾತ್ರ ಕೈಚಾಚಬೇಕೆಂಬುದು ತ್ಯಾಗರಾಜರ ಅಭಿಪ್ರಾಯ. ಪ್ರಾಪಂಚಿಕರು ನೀಡುವ ದಾನವು ತಾತ್ಕಾಲಿಕ ಸುಖ ನೀಡಬಹುದಷ್ಟೇ. ಧರ್ಮಾತ್ಮಕನಾದ ಭಗವಂತನಿಂದ ಪಡೆದ ದಾನ ನಿರಂತರ ಸುಖ ನೀಡುತ್ತದೆ. ಆದ್ದರಿಂದ ಬಡವ-ಬಲ್ಲಿದನೆಂಬ ಭೇದವಿಲ್ಲದೆ ಎಲ್ಲರೂ ಕೈಚಾಚಬೇಕಿರುವುದು ಭಗವಂತನಲ್ಲಿ ಮಾತ್ರ.

**ನಿತ್ಯಾನಿತ್ಯ ವಸ್ತು ವಿವೇಕ** : ನಿತ್ಯವೆಂಬುದು (ದೇವರು) ನಿರಂತರ ಅಥವ ಶಾಶ್ವತ. ಅನಿತ್ಯವೆಂಬುದು (ಪ್ರಾಪಂಚಿಕ) ತಾತ್ಕಾಲಿಕ ಅಥವಾ ಕ್ಷಣಿಕ. ಇದನ್ನು ವಿವೇಚಿಸುವುದೇ ನಿತ್ಯಾನಿತ್ಯವಸ್ತುವಿವೇಕ. ಇತರ ಎಲ್ಲ ಸಂತರಂತೆಯೇ ತ್ಯಾಗರಾಜರೂ ಲೌಕಿಕ ಸುಖಗಳು ಅನಿತ್ಯವೆಂದೂ, ಅಧ್ಯಾತ್ಮ ಸುಖವು ನಿತ್ಯವೆಂದೂ ನಿಧಿ-ಸನ್ನಿಧಿಗಳ ಹೋಲಿಕೆಯೊಂದಿಗೆ ಸ್ಪಷ್ಟಪಡಿಸುತ್ತಾರೆ. ನಿರಂತರ ಸುಖ ನಿಧಿಯಿಂದಲೋ ಅಥವ ರಾಮಸನ್ನಿಧಿಯಿಂದಲೋ ನಿಜವಾಗಿ ಹೇಳೆಂದು ಸ್ವಗತವಾಗಿ ಪ್ರಶ್ನಿಸಿಕೊಳ್ಳುತ್ತಾರೆ.

**ನಿಧಿ ಚಾಲಾ ಸುಖಮಾ ರಾಮುನಿ ಸ**
**ನ್ನಿಧಿ ಸೇವ ಸುಖಮಾ ? ನಿಜಮುಗ ಬಲ್ಕು ಮನಸಾ !**

**(ನಿಧಿಚಾಲಾ ಸುಖಮಾ)**

ಈ ಪ್ರಶ್ನೆಗೆ ಉತ್ತರ ತ್ಯಾಗರಾಜರಿಗೆ ಖಚಿತವಾಗಿ ತಿಳಿದಿದೆ. ಹೇಗೆಂದರೆ ದೇವರೇ ಅವರಿಗೆ ನಿತ್ಯಾನಿತ್ಯಗಳನ್ನು ಬೋಧಿಸಿದ್ದಾನೆ.

**ನಿತ್ಯಾನಿತ್ಯಮುಲನು ಬೋಧಿಂಚಿ**

**(ಪಟ್ಟಿವಿಡುವರಾದು)**

ಆದ್ದರಿಂದಲೇ ಅವರು, ತಾವು ತಿಳಿದಿರುವ ಸತ್ಯವನ್ನು ಇತರರಿಗೂ ತಿಳಿಸಲು ಸಮರ್ಥರಾಗಿರುವುದು. ಹನುಮಂತನನ್ನು ತನ್ನ ಬಳಿಯಿರಿಸಿಕೊಂಡಂತೆಯೇ, ತಮ್ಮನ್ನೂ ದೇವರು ಆತನ ಬಳಿಯಿರಿಸಿಕೊಳ್ಳಬೇಕೆಂದು ಅವರು ಬಿನ್ನವಿಸಿಕೊಳ್ಳುತ್ತಾರೆ (ಚೆಂತನೇ ಸದಾಯುಂಚುಕೋವಯ್ಯ). ಇದರಿಂದ ರಾಮ ಸನ್ನಿಧಿಯ ನಿತ್ಯ

ಸೌಖ್ಯದ ಅರಿವು ಅವರಿಗಾಗಿದೆ.

ಶ್ರೀರಾಮ ಸನ್ನಿಧಿಯ ಸವಿಯರಿತ ಅವರು ಪ್ರಾಪಂಚಿಕ ಸುಖವನ್ನು ಮಂಜುಗಡ್ಡೆ, ಕನಸು, ವಿಷ ಎಂಬ ಹೋಲಿಕೆಗಳಿಂದ ತಾತ್ಕಾಲಿಕವೆಂದೂ ಮನುಷ್ಯನನ್ನು ಅಧೋಗತಿಗಿಳಿಸುವುದೆಂದೂ ಸಾರುತ್ತಾರೆ.

**ಪ್ರಪಂಚ ಸುಖಮು ವಿಸಮನುಚು**

(ಭಜರೇ ರಘುವೀರಂ)

**ಅನ್ನಿ ಕಲ್ಲಲನುಚು**

(ನಿನ್ನೇ ನೆರನಮ್ಮಿನಾನುರಾ)

**ಪ್ರಪಂಚಮುನ ಗಲ ಸುಖಮು ಮಂಜುವಲೆ**

(ನಾದುಪೈ)

ಪ್ರಾಪಂಚಿಕ ಸುಖವನ್ನು ಅವರು ವಿಷ ಹಾಗೂ ಮಂಜಿಗೆ ಹೋಲಿಸಿರುವುದು ಔಚಿತ್ಯಪೂರ್ಣವಾಗಿದೆ. ಒಂದು ಅರ್ಥದಲ್ಲಿ ಅದು ವಿಷವರ್ತುಲವೇ ಸರಿ. ಮತ್ತೊಂದು ದೃಷ್ಟಿಯಿಂದ ಮಂಜಿನಂತೆ ನೋಡಲು ಸುಂದರವಾಗಿದ್ದು, ಗಟ್ಟಿಯಾಗಿದೆಯೆಂಬ ಭಾವವನ್ನು ಮೇಲ್ನೋಟದಲ್ಲಿ ತೋರಿದರೂ ಕ್ರಮೇಣ ಅದು ಕರಗುತ್ತಾ ಕಡೆಗೆ ಶೂನ್ಯವಾಗುತ್ತದೆ. ಆದ್ದರಿಂದಲೇ ತ್ಯಾಗರಾಜರು ಮುದ್ದಾಗಿ ತೋರುವ ಭವಸಾಗರ, ಮಂಜಿನಂತೆ ಕಾಣುವ ಸಂಪತ್ತು ಎನ್ನುವುದು.

**ಮುದ್ದುಗ ತೋಚು ಭವಸಾಗರಮುನ**

(ಪ್ರೊದ್ದು ಪೊಯ್ಯೇನಿ)

**ಮಂಜುವಲೆ ಪ್ರತಿಫಲಿಂಚೆ ಸಂಪದಲಂಚು**

(ಎಂದುಕೋ ಬಾಗತೆಲಿಯದು)

ಈ ಲೋಕದಲ್ಲಿ ತೋರಿಕೆಗೆ ಸುಖಸಾಧನಗಳೆಂದು ಭಾವ ಮೂಡಿಸುವ ಧನಾಶ್ವ ಸಂಪತ್ತುಗಳನ್ನು ತ್ಯಾಗರಾಜರು ನಂಬುವುದಿಲ್ಲ.

**ನಶ್ವರಮೈನ ಧನಾಶ್ವಮುಲನು ನೇ**
**ವಿಶ್ವಸಿಂಚ ಭೂಜೇಶ್ವರ ಹರಿಹರಿ**

(ನಾರಾಯಣ ಹರಿ)

ಪ್ರಾಪಂಚಿಕ ಸಂಪತ್ತನ್ನು ನಂಬುವುದೇ ಪಾಪಕರವೋ ಎಂಬಂತೆ ತ್ಯಾಗರಾಜರಿಲ್ಲಿ 'ಹರಿಹರಿ' ಎಂದು ಉದ್ಗರಿಸುತ್ತಾರೆ.

ಜಗತ್ತಿನಲ್ಲಿ ಮೂಲತಃ ಅನಿತ್ಯವಾದುದಾದರೂ ಬಹಳ ಹಿತವೆನಿಸುವ ವಸ್ತುವೆಂದರೆ ಸಂಸಾರವೊಂದೇ. ಇದು ತೋರಿಕೆಯಷ್ಟೆ, ದಿಟವಲ್ಲ. ಕ್ಷಣಿಕವಾದ ಸಂಸಾರ ಸುಖದಲ್ಲಿ ಮೈಮರೆತು ಮನುಷ್ಯನು ಅಧ್ಯಾತ್ಮಸಾಧನೆಗೆ ಕೈಹಚ್ಚುವುದಿಲ್ಲ. ಮೋಹಜಾಲಕ್ಕೆ ನೂಕುವ ಸಂಸಾರ ಸುಖಗಳಿಗೆ ಮೋಸಹೋಗಿ ಸತ್ಕಾರ್ಯಗಳನ್ನೂ, ಭಗವಧ್ಯಾನವನ್ನೂ ಮರೆಯುತ್ತಾನೆ. ಜೀವಿತದ ಕೆಲದಿನಗಳು ನಿದ್ದೆಯಲ್ಲಿ ವಿಷಯಬುದ್ಧಿಗಳ ಸಹವಾಸ

ದಲ್ಲಿ, ನರಸ್ತುತಿಯಲ್ಲಿ, ತ್ರಿತಾಪಗಳನ್ನು ಅನುಭವಿಸುವಲ್ಲಿ, ಕೋಣನಂತೆ ಕಂಡ ಕಂಡಲ್ಲಿ ಭುಜಿಸುವಲ್ಲಿ, ಕಾಡುಹರಟೆ ಹೊಡೆಯುವಲ್ಲಿ, ಅಸ್ಥಿರ ಧನಾದಿ ಸಂಪತ್ತು ಶೇಖರಣೆಯಲ್ಲಿ, ಅದು ಕಣ್ಮರೆಯಾದಾಗ ವ್ಯಥೆಪಡುವಲ್ಲಿ, ಪರರ ಏಳ್ಗೆಯಿಂದ ಅಸೂಯೆಪಡುವಲ್ಲಿ, ಕಾಮ್ಯಕರ್ಮಗಳಿಗಾಗಿ ಯಾಗಾದಿ ಕರ್ಮಗಳನ್ನು ಮಾಡುವೆ ನೆಂಬಲ್ಲಿ, ಅರುಳು-ಮರುಳಾದ ವೃದ್ಧಾಪ್ಯದಲ್ಲಿ ಕಳೆದುಹೋಗುತ್ತದೆ. ಇವುಗಳಲ್ಲಿ ಕೆಲವನ್ನು ಮನುಷ್ಯ ವಿವೇಚನೆಯಿಂದ ಹತೋಟಿಯಲ್ಲಿಟ್ಟುಕೊಳ್ಳಬಹುದಾದರೂ ಮತ್ತೆ ಕೆಲವು ಅನಿವಾರ್ಯವಾಗಿರುತ್ತದೆ. ಬಾಲ್ಯದಲ್ಲಿ ತಿಳಿವಳಿಕೆಯ ಕೊರತೆ, ವೃದ್ಧಾಪ್ಯ ದಲ್ಲಿ ಶಾರೀರಿಕ ಮಾನಸಿಕ ಅಶಕ್ತಿಗಳು ಯಾವುದೇ ಸತ್ಕಾರ್ಯವೆಸಗುವಲ್ಲಿ ಅಡಚಣೆ ಯಾಗುತ್ತವೆ. ಉಳಿದ ಮಧ್ಯಂತರದ ಕಾಲವಾದರೂ ನಿರಂತರ ಸುಖವನ್ನು ಒದಗಿಸುವ ಕಾರ್ಯಗಳಲ್ಲಿ ತೊಡಗಬೇಕೆಂಬುದರ ಬೋಧನೆಯನ್ನುಳ್ಳ ತ್ಯಾಗರಾಜರ ರಚನೆಯೊಂದು ಹೀಗಿದೆ.

ಪ್ರೊದ್ದು ಪೊಯ್ಯೇನಿ, ಶ್ರೀರಾಮುನಿ
ಪೂನಿ ಭಜಿಂಪವೇ ಮನಸಾ
ನಿದ್ದುರಚೇತ ಕೊನ್ನಾಳ್ಳು ವಿಷಯ ಬುದ್ಧುಲ ಚೇತ ಕೊನ್ನಾಳ್ಳು . . . .

ಪ್ರೊದ್ದುನ ಲೇಚಿ ತ್ರಿತಾಪಮುಲನು ನರುಲ
ಪೊಗಡಿ ಪೊಗಡಿ ಕೊನ್ನಾಳ್ಳು ಪಟ್ಟಿ
ಎದ್ದುರೀತಿ ಕನ್ನತಾವುನ ಭುಜಿಯಿಂಚಿ
ಏಮಿ ತೆಲಿಯಕ ಕೊನ್ನಾಳ್ಳು
ಮುದ್ದುಗ ತೋಚೇ ಭವಸಾಗರಮುನ
ಮುನಿಗಿ ತೇಲುಚು ಕೊನ್ನಾಳ್ಳು
ಪದ್ದುಮಾಲಿನ ಪಾಮರ ಜನುಲತೋ ವೆರ್ರಿ
ಪಲುಕುಲಾಡುಚು ಕೊನ್ನಾಳ್ಳು . . . . .

ಮುದಮುನ ಧನ ತನಯಾಗಾರಮುಲ ಜೂಚಿ
ಮುದಮುಚೇತ ಕೊನ್ನಾಳ್ಳು ಅಂದು
ಚೆದರಿನಯಂತ ಶೋಕಾರ್ಣವಗತುಡೈ
ಜಾಲಿ ಚೆಂದುಟಯು ಕೊನ್ನಾಳ್ಳು
ಎದಟಿ ಪಚ್ಚ ಜೂಚಿತಾಳಲೇಕತಾ
ನಿಲನು ತಿರುಗುಟಕೊನ್ನಾಳ್ಳು
ಮುದಿ ಮದಿತಪ್ಪಿನ ವೃದ್ಧತನಮುಚೇ
ಮುಂದು ವೆನುಕ ತೆಲಿಯಕನೆ ಕೊನ್ನಾಳ್ಳು

**ಯಾಗಾದಿ ಕರ್ಮಮುಲನು ಸೇಯವಲೆನನಿ**
**ಯಲಸಟಚೇತ ಕೊನ್ನಾಳ್ಳು ಅಂದು**
**ರಾಗ ಲೋಭಮುಲತೋ ಅಪರಾಧಮುಲಚೇಸಿ**
**ರಾಜಸಮುನ ಕೊನ್ನಾಳ್ಳು**
**ಬಾಗುಗ ನಾಮಕೀರ್ತನಮುಲು ಸೇಯುಟೇ**
**ಭಾಗ್ಯಮನಕ ಕೊನ್ನಾಳ್ಳು**
**ತ್ಯಾಗರಾಜನುತುಡ್ಯೆನ ಶ್ರೀರಾಮುನಿ**
**ತತ್ತ್ವಮು ತೆಲಿಯಕನೇ ಕೊನ್ನಾಳ್ಳು**

'ಸಂಸಾರ' ಎಂಬುದು ಮನುಷ್ಯ-ಮನುಷ್ಯರ ನಡುವಿನ ಸಂಬಂಧ ಮತ್ತು ಈ ಸಂಬಂಧಕ್ಕೆ ಕಾರಣವಾದ ದೇಹ, ಮನಸ್ಸು, ಇಂದ್ರಿಯ ಧನಾದಿ ಸಂಪತ್ತುಗಳೆಂಬ ಎಲ್ಲ ದೃಷ್ಟಿಯನ್ನೂ ಉಳ್ಳವಾಗುತ್ತದೆ. ತ್ಯಾಗರಾಜರು ಪ್ರಾಪಂಚಿಕ ಸುಖವನ್ನು ಅರ್ಥಾತ್ ಸಂಸಾರವನ್ನು ಖಂಡಿಸಿದ ಮಾತ್ರಕ್ಕೆ ಅದರಲ್ಲಿನ ಸುಖವನ್ನು ಅನುಭವಿಸಲೇ ಬಾರದೆನ್ನುವುದಿಲ್ಲ. ಬಯಕೆಯ ತೃಪ್ತಿ ಅಸಾಧುವೆಂದೇನೂ ತ್ಯಾಗರಾಜರ ಅಭಿಪ್ರಾಯ ವಲ್ಲ. ಮನುಷ್ಯ ಭೋಗಿಯಾಗುವುದರಲ್ಲಿ ತಪ್ಪೂ ಇಲ್ಲ. ಬದುಕು ಮತ್ತು ಅನುಭವ ಗಳು ನಾಣ್ಯವೊಂದರ ಎರಡು ಮುಖಗಳಂತೆ. ಇಲ್ಲಿ ಬದುಕನ್ನಾಗಲೀ ಅಥವಾ ಅನು ಭವವನ್ನಾಗಲೀ ತ್ಯಜಿಸಬೇಕಾದ್ದಿಲ್ಲ. ಹಾಗೆ ಮಾಡಲು ಸಾಧ್ಯವೂ ಇಲ್ಲ. ಆದರೆ ಇಲ್ಲಿ ತ್ಯಜಿಸಬೇಕಾದುದು ಪ್ರಾಪಂಚಿಕ ಆಸಕ್ತಿಯನ್ನು ಮಾತ್ರ. ಎಂದರೆ ಈ ಅನುಭವಗಳನ್ನು ಪಡೆಯುವಲ್ಲಿ ರಾಗದ್ವೇಷಗಳಿಗೆ ಒಳಗಾಗದೆ ಮನಸ್ಸನ್ನು ನಿತ್ಯನಾದ ಭಗವಂತನೆಡೆಗೇ ಹರಿಸಬೇಕೆಂಬುದು ಸಾರ.[೨೮] ಭೋಗಿಯಾದಾಗಲೂ ದೇವರಲ್ಲೇ ಮನಸ್ಸು ನಿಲ್ಲಿಸ ಬೇಕೆಂದು ತ್ಯಾಗರಾಜರು ಉಪದೇಶಿಸುವುದು.

**ಭೋಗಮುಲಂದುವೇಳ ಬುದ್ಧಿ ನೀಯೆಡನುಂಚೇ**

(ನಮ್ಮಿನವಾರಿನಿ)

**ಭೋಗಾನುಭವಮುಲಂದು ಬಾಗುಗ ಬುದ್ಧಿನೀಯಂದು**

**(ರಾಮಾ ನೀಪ್ಯೆತನಕು)**

ಈ ಪ್ರಕಾರ ವಿಷಯಾಭಿಲಾಷೆಯು (ಕಾಮವು) ಧರ್ಮಬಾಹಿರವಲ್ಲ. ಅದು ಧರ್ಮ ಬಾಹಿರವಾಗಿದ್ದಲ್ಲಿ ಹಿರಿಯರು ಚತುರ್ವಿಧ ಪುರುಷಾರ್ಥಗಳ ಚೌಕಟ್ಟಿನಲ್ಲಿ ಅದನ್ನು ಒಗ್ಗೂಡಿಸುತ್ತಿರಲಿಲ್ಲ. ವಾಸ್ತವವಾಗಿ ಮನುಷ್ಯನು ಪೂರ್ಣನಾಗುವುದು ಧರ್ಮ ಮತ್ತು ಮೋಕ್ಷಗಳೊಂದಿಗೆ ಅರ್ಥ, ಕಾಮಗಳನ್ನೂ ಪಡೆದಾಗ ಮಾತ್ರ. ಆದರೆ ಪಡೆದ ಪುರುಷಾರ್ಥಗಳು ಧರ್ಮದಿಂದ ನಿಯಂತ್ರಿತವಾಗಿರಬೇಕು.[೨೯] ಅವುಗಳಲ್ಲಿ ವಿಶೇಷ ಆಸಕ್ತಿ ಬೆಳೆಸಿಕೊಂಡು ಭಗವದ್ಧ್ಯಾನವನ್ನೇ ಮರೆಯಬಾರದು ಎಂಬ ಗೀತೆಯ ಅಭಿ ಪ್ರಾಯವನ್ನೇ ತ್ಯಾಗರಾಜರೂ ಅನುಮೋದಿಸುತ್ತಾರೆ.

ಒಟ್ಟಾರೆ ಅಂತಿಮವಾಗಿ, ಲೌಕಿಕವೆಂಬ ಅನಿತ್ಯವಾದ ಶೃಂಖಲೆಯಲ್ಲಿ ಸಿಲುಕದೆ

ಉಲೂಖಲ ಬದ್ಧನಿಗೆ (ಶ್ರೀಕೃಷ್ಣ) ನಿಜದಾಸರಾಗಬೇಕೆಂಬುದನ್ನೇ ತ್ಯಾಗರಾಜರು ಹೇಳುತ್ತಾ ನಿತ್ಯಾನಿತ್ಯ ವಸ್ತುವಿನಲ್ಲಿ ಜ್ಞಾನಬೋಧೆ ಮಾಡುತ್ತಾರೆ.

**ಸ್ತ್ರೀ ವ್ಯಾಮೋಹ** : ಸಾಧಾರಣವಾಗಿ ಪುರುಷರು ರಕ್ತಮಾಂಸಾದಿ ಮಾಲಿನ್ಯದಿಂದ ಕೂಡಿದ ಸ್ತ್ರೀ ಶರೀರದಿಂದ ಮೋಹಿತರಾಗುತ್ತಾರೆ. ಸ್ತ್ರೀಯರು ತಮ್ಮ ಹಾವಭಾವ ಮಾಯಾವಿಲಾಸದಿಂದ, ಕಣ್ಣೋಟವೆಂಬ ಬಾಣದಿಂದ ಪುರುಷನನ್ನು ಗೆದ್ದು ಎಷ್ಟೋ ಅಕೃತ್ಯಗಳಿಗೆ ಕಾರಣರಾಗುತ್ತಾರೆ. ಆದ್ದರಿಂದ 'ಎಲೈ ಮನಸ್ಸೇ, ಸ್ತ್ರೀಯರ ಶರೀರ ಕಂಡು ಮೋಸಹೋಗಬೇಡ'–ಇದು ಸ್ತ್ರೀಯರ ಅಪಾಯಕಾರೀ ಸ್ವಭಾವದ ಬಗೆಗೆ ತ್ಯಾಗ ರಾಜರು ಆಡುವ ತೀಕ್ಷ್ಣ ನುಡಿ.

**ಮೇನು ಜೂಚಿ ಮೋಸಪೋಕುಮೀ ಮನಸಾ**
**ಲೋನಿ ಜಾಡ ಲೀಲಾಗು ಗಾದಾ**
**ಹೀನಮ್ಮೈನ ಮಲಮೂತ್ರ ರಕ್ತಮುಲ**
**ಕಿರವಂಟು ಮಾಯಾಮಯಮ್ಮೈನ ಚಾನ**
**ಕನಲನೇಟಿ ಯಂಪಕೋಲ ಚೇತ ಗುಚ್ಚ**
**ಚನುಲನೆಡಿ ಗಿರುಲ ಶಿರಮುನುಂಚಿ**
**ಪನುಲ ಚೇತುರಟ . . . . . . .**

(ಮೇನುಜೂಚಿ)

ಮೇಲಿನ ಈ ಸಾಲುಗಳು ಪುರುಷನನ್ನು ಆಕರ್ಷಿಸುವಲ್ಲಿ ಸ್ತ್ರೀಗಿರುವ ಶಕ್ತಿಯನ್ನು ಮನದಟ್ಟು ಮಾಡುತ್ತದೆ. ಪುರುಷನ ಬದುಕನ್ನು ವ್ಯರ್ಥಗೊಳಿಸುವಲ್ಲಿ ಸ್ತ್ರೀಶಕ್ತಿ ಅದ್ಭುತವಾದುದು. ಅಧ್ಯಾತ್ಮ ಸಾಧನೆಗೆ ಹೊರಟವನನ್ನೂ ದಾರಿತಪ್ಪಿಸಿ ಪ್ರಾಪಂಚಿಕ ಸ್ಥಿತಿಯಲ್ಲೇ ಓಲಾಡುವಂತೆ ಮಾಡುವ ಮೋಹವಿದು. ಇಂತಹ ಮೋಹದಿಂದ ಪುರುಷನು ಔನ್ನತ್ಯಕ್ಕೆ ಏರುವ ಬದಲು ಅಧೋಗತಿಗೆ ಇಳಿಯುತ್ತಾನೆ. ಹೀಗೆಂದೇ ತ್ಯಾಗರಾಜರು ಸ್ತ್ರೀವ್ಯಾಮೋಹವನ್ನು ತುಚ್ಛೀಕರಿಸುತ್ತಾರೆ.

ತ್ಯಾಗರಾಜರಂತಹ ಅನುಭಾವಿಗಳ ಗುರಿ ಎಂದಿಗೂ ಅಧ್ಯಾತ್ಮವಾಗಿರುತ್ತದೆ. ಈ ಧ್ಯೇಯಸಾಧನೆಗೆ ಅಡ್ಡಿಬರುವ ಯಾವುದೇ ವಸ್ತುವನ್ನೂ ಅವರು ಮೊದಲ ಹಂತ ಗಳಲ್ಲೇ ಹೀಗಳೆಯುತ್ತಾರೆ. ಇದು ಸ್ತ್ರೀಯಾಗಿರಬಹುದು ಅಥವಾ ಪುರುಷನಾಗಿರ ಬಹುದು. ಅಥವಾ ಪ್ರಾಪಂಚಿಕರು ಪ್ರಿಯವೆಂದು ಭಾವಿಸುವ ಮತ್ತಾವುದೇ ಅಂಶವೂ ಆಗಿರಬಹುದು. ಇಲ್ಲಿ ಭಕ್ತರು ಸ್ತ್ರೀಯಾಗಿದ್ದರೆ ಆಕೆ ತನ್ನ ಸಾಧನೆಗೆ ಪುರುಷನೇ ಅಡ್ಡಿ ಯೆಂದು ಭಾವಿಸುತ್ತಾಳೆ. ಉದಾಹರಣೆಗೆ ಅಕ್ಕಮಹಾದೇವಿ, ಮೀರಾಬಾಯಿಯರು. ಭಕ್ತರು ಪುರುಷನಾಗಿದ್ದರೆ ಆತ ತನ್ನ ಸಾಧನೆಗೆ ಅಡ್ಡಿ ಸ್ತ್ರೀಯೆಂದು ಭಾವಿಸುತ್ತಾನೆ. ಈ ಭಾವವೇ ತ್ಯಾಗರಾಜರ ಮೇಲಿನ ಕೃತಿಯಲ್ಲಿರುವುದು.

ಭಕ್ತೆಯಾಗಲೀ ಅಥವಾ ಭಕ್ತನಾಗಲೀ ಮಾಡುವ ಈ ರೀತಿಯ ಖಂಡನೆ ತಾತ್ಕಾ ಲಿಕವೇ ಹೊರತು ಅದೇ ಅಂತಿಮವಲ್ಲ. ಇಲ್ಲಿ ಸಾಧನೆಯ ಹಂತದಲ್ಲಿರುವ ಭಕ್ತರು

ತಮ್ಮೊಳಗೇ ಇದ್ದಿರಬಹುದಾದ ಆಸೆ ಅಥವಾ ಚಿತ್ತಚಾಂಚಲ್ಯದಿಂದ ಕೀಳುಕಾಮಕ್ಕೆ ಒಳಗಾಗಬಾರದೆಂದೇ ತಾತ್ಕಾಲಿಕವಾಗಿ ಇಂತಹ ತಂತ್ರವನ್ನು ಅಳವಡಿಸಿಕೊಳ್ಳುತ್ತಾರೆ. ಇಲ್ಲಿ ಭಕ್ತ, ತನ್ನಲ್ಲಿನ ದೋಷವನ್ನು ತನ್ನ ಸನಿಹವಿರುವವರ ಮೇಲೆ ಆರೋಪಿಸುತ್ತಾನೆ. ಏಕೆಂದರೆ ಆತ್ಮನಿಗ್ರಹವೆಂಬುದು ಸುಲಭಸಾಧ್ಯವಲ್ಲ. ಯೋಗಕ್ಕೆ ಭಂಗತರುವ ಆಲೋಚನೆಗಳನ್ನು ತಡೆಯುವುದನ್ನೇ ಯೋಗಸೂತ್ರವು 'ಪ್ರತಿಪಕ್ಷಭಾವನ' ಎನ್ನುತ್ತದೆ.[೩೦]

ಸಾಧಕನು ತನ್ನ ಪಥದಲ್ಲಿ ಮುನ್ನಡೆದಂತೆ ಆತ್ಮನಿಗ್ರಹ ಸಾಧ್ಯವಾಗಿ ಸ್ತ್ರೀಗೆ ಪುರುಷನಾಗಲೀ, ಪುರುಷನಿಗೆ ಸ್ತ್ರೀಯಾಗಲೀ ಅಡ್ಡಿ ಎನಿಸುವುದಿಲ್ಲ. ಇದೇ ಪ್ರೀತಿಯಾಗಿ ಮಾರ್ಪಟ್ಟು ಸಾಧಕನು, ಕಾರ್ಲೈಲನು ಹೇಳುವಂತೆ "ಜಗತ್ತಿನ ಎಲ್ಲ ವಸ್ತುಗಳಲ್ಲೂ, ಸಂದುಗೊಂದುಗಳಲ್ಲೂ ದೇವರನ್ನೇ ಕಾಣುತ್ತಾನೆ."[೩೧] ಈ ದೃಷ್ಟಿಯಿಂದ ಮೇಲಿನ ಹೇಳಿಕೆಯನ್ನು ಅರ್ಥೈಸಿದರೆ ತ್ಯಾಗರಾಜರು ಸ್ತ್ರೀದ್ವೇಷಿಯಾಗಿರಲಿಲ್ಲವೆಂಬುದು ಮನದಟ್ಟಾಗುತ್ತದೆ.

ಆದರೆ ಕಾಮಿನಿಯ ಆಸೆಯಿಲ್ಲದ ಸಂಸಾರಿಯನ್ನು ಸ್ವಪ್ನದಲ್ಲಾದರೂ ಕಾಣಲು ಸಾಧ್ಯವೇ? ಅಂಗನೆಯ ಮುಂಗುರುಳನ್ನೂ ಅಲಂಕಾರಗಳನ್ನೂ ಕಂಡು (ಬಾಹ್ಯದಲ್ಲಲ್ಲದಿದ್ದರೂ) ಅಂತರಂಗದಲ್ಲಾದರೂ ಆಶಿಸದೆ ಬದುಕಲಾದರೂ ಸಾಧ್ಯವೇ ಎಂದು ತ್ಯಾಗರಾಜರು ಮತ್ತೊಂದೆಡೆ ಹೇಳುತ್ತಾರೆ.

**ತರುಣುಲಾಸಲೇನಿ ಸಂಸಾರುಲು**
**ಕಲನೈನ ಗಲರಾ ?** . . . . . .

**(ರಾಮರಾಮರಾಮ ನಾಪೈನೀದಯ)**

**ನಂಗನಾಚುಲ ಮಾನಗು ಯಂಗ ವಸ್ತ್ರಮುಲ ಬಾಗುಗ**
**ಮುಂಗುರುಲನು ಗನಿ ಯಂತರಂಗ ಮುನನು ಯಾಶಿಂಚಕ**

**(ತಪ್ಪಿಬ್ರತಿಕಿಪೋವ ತರಮಾ)**

ಇಲ್ಲಿ ಮುಖ್ಯವಾಗಿ ತ್ಯಾಗರಾಜರ ಉದ್ದೇಶ ಪರಸ್ತ್ರೀಯರಲ್ಲಿ ಆಸಕ್ತಿಗೊಳ್ಳಬಾರದೆಂಬುದಲ್ಲದೆ ಬೇರಲ್ಲ. ಅವರು ಹೀಗೆನ್ನಲು ಕಾರಣವುಂಟು. ಅವರ ಆರಾಧ್ಯದೇವರು ಏಕಪತ್ನೀವ್ರತಸ್ಥನೆಂದೇ ಪ್ರಖ್ಯಾತನು. ಆತನ ಕಾಂತಿಯುತ ಮುಖವನ್ನು ಕಂಡು ಪರಸ್ತ್ರೀಯರೆಲ್ಲ ಮೋಹಿಸಿ ಬರಲು, ಆತನು ಅವರೆಲ್ಲರಲ್ಲೂ ತಾಯ್ತನವನ್ನು ಕಂಡನೆಂಬುದು ತ್ಯಾಗರಾಜರ ಮಾತು.

**ಕಲಕಲಮನು ಮುಖ ಕಳಗನಿ ಪುರಭಾ**
**ಮಲು ವಲಚಗ ತಲ್ಲುಲವಲೆ* ಜೂಚೆ**

**(ನಾಥಾ ಬ್ರೋವವೆ)**

ಏಕ ಪತ್ನಿತ್ವವು ನೈತಿಕವಾಗಿಯಷ್ಟೇ ಅಲ್ಲ, ವ್ಯಾವಹಾರಿಕ ದೃಷ್ಟಿಕೋನದಿಂದಲೂ

---

* ತನಸುತಲವಲೆ ಎಂಬ ಪಾಠಭೇದವೂ ಉಂಟು. ಎಂದರೆ ಅವರೆಲ್ಲರನ್ನೂ ತನ್ನ ಮಕ್ಕಳಂತೆ ಭಾವಿಸಿದನೆಂಬುದು ಅರ್ಥ. ನೋಡಿ Spiritual Heritage of Tyagaraja, ಪುಟ ೧೯೯.

ಒಳ್ಳೆಯದು. ದ್ವಿಪತ್ನಿತ್ವದಲ್ಲಿ, ಎರಡು ರೀತಿಯ ಸಮಸ್ಯೆಗಳು ಎದುರಾಗುತ್ತವೆ. ಒಂದು, ಸತಿಯರೆನಿಸುವ ಆ ಇಬ್ಬರು ಸ್ತ್ರೀಯರ ನಡುವೆ ಸಾಮರಸ್ಯ ಕಾಪಾಡುವುದು ಪತಿಗೆ ಒದಗುವ ಮೊದಲ ಕಷ್ಟ. ಎರಡು, ತನಗೂ ಮತ್ತು ಪತ್ನಿಯರಿಗೂ ನಡುವೆ ಸಾಮರಸ್ಯ ಕಾಯ್ದುಕೊಳ್ಳುವುದು ಎರಡನೆಯ ಕಷ್ಟ. ಪುರಂದರರು ಬಲು ಸ್ವಾರಸ್ಯವಾಗಿ 'ಇಬ್ಬರು ಹೆಂಡಿರ ಸುಖವ' ಎಂಬ ರಚನೆಯಲ್ಲಿ ಈ ವಿಷಯವನ್ನು ಪ್ರಸ್ತಾಪಿಸಿ ವ್ಯಾವಹಾರಿಕ ದೃಷ್ಟಿಕೋನದಿಂದ ವಿಶ್ಲೇಷಿಸಿದ್ದಾರೆ. ಅವರು ಇದನ್ನು ಪುರುಷನ ದೃಷ್ಟಿಯಿಂದ ಮಾತ್ರ ಕಂಡಿದ್ದಾರಾಗಲೀ ಸ್ತ್ರೀ ದೃಷ್ಟಿಯಿಂದಲ್ಲ. ತ್ಯಾಗರಾಜರಾದರೋ ದ್ವಿಪತ್ನಿತ್ವ ಎಂಬ ಮಾತನ್ನೇ ಎತ್ತದೆ ಪತ್ನಿಯೊಬ್ಬಳನ್ನುಳಿದು ಇತರ ಎಲ್ಲ ಸ್ತ್ರೀಯರನ್ನೂ ಮಾತೃ ಅಥವ ಸಹೋದರಿಯರಂತೆ ಪರಿಗಣಿಸಬೇಕೆಂಬ ನೈತಿಕ ಅಂಶವನ್ನು ಶ್ರೀರಾಮನ ಆದರ್ಶದೊಂದಿಗೆ ಪದೇಪದೇ ನುಡಿಯುತ್ತಾರೆ. ಅದೇನೇ ಇರಲಿ, ಎಲ್ಲಿ ದ್ವಿಪತ್ನಿತ್ವ ಅಥವ ಬಹುಪತ್ನಿತ್ವವಿರುತ್ತದೋ ಅಲ್ಲಿ ಪುರುಷನಿಗೂ ಸುಖವಿಲ್ಲ. ಸ್ತ್ರೀಗೂ ಸುಖವಿಲ್ಲ. ಈ ಭಾವದಲ್ಲೇ ಪುರಂದರರೂ ತ್ಯಾಗರಾಜರೂ ಪರೋಕ್ಷವಾಗಿ ಏಕಪತ್ನಿತ್ವವನ್ನೇ ಅನುಮೋದಿಸುತ್ತಾರೆಂಬುದಿಲ್ಲಿ ಗಮನಾರ್ಹ.

ಈ ಆಧಾರದಲ್ಲೇ ಪರಸ್ತ್ರೀವ್ಯಾಮೋಹವನ್ನು ಅವರು ಅನೇಕ ಕೃತಿಗಳಲ್ಲಿ ಖಂಡಿಸುತ್ತಾರೆ. ಅವುಗಳಲ್ಲಿ ಕೆಲವೆಂದರೆ, 'ಸರಸೀರುಹಾನನ ರಾಮಯ್ಯ'; 'ಎಟುಲೈನ ಭಕ್ತಿ ವಚ್ಚುಟಕೇ'; 'ನಳಿನಲೋಚನ'; 'ಎವರು ತೆಲಿಯಕ'; 'ಎಂದುಕೋ ಬಾಗತೆಲಿಯದು'; 'ಎಂತನೇರ್ಚಿನ'.

'ಸ್ತ್ರೀಯರ ಹಿಂದೆ ನಾಯಿಮರಿಗಳಂತೆ ತಿರುಗುವ' ಎಂದು ತ್ಯಾಗರಾಜರು ಹೇಳುವ ಕಟುಮಾತುಗಳು ಕಿವಿಯನ್ನು ಇರಿಯುತ್ತದೆ (ಎಂದುಕೋ ಬಾಗತೆಲಿಯದು). ಪರಭಾಮೆಯರನ್ನು ಆಶಿಸಿ ಅವರೊಂದಿಗೆ ರಾತ್ರೀಹಗಲೂ ಸರಸವಾಡುವವರ ಅಸಾಧುತನವನ್ನು ಖಂಡಿಸುವ ಮೂಲಕ ಸ್ತ್ರೀವ್ಯಾಮೋಹ ಸಲ್ಲ ಎಂಬುದನ್ನು ಮನವರಿಕೆ ಮಾಡುತ್ತಾರೆ.

**ಬಾಹ್ಯಾಂತರಿಕ ಶುದ್ಧಿ** : ದೇಹ ಹಾಗೂ ಮನಸ್ಸು ಮತ್ತು ಇಂದ್ರಿಯಗಳ ಪರಿಶುದ್ಧಿಯೇ ಬಾಹ್ಯಾಂತರಿಕ ಶುದ್ಧಿ. ಅರ್ಥಾತ್ ಒಳಹೊರಗಿನ ಪ್ರಕೃತಿಯನ್ನು ಮೀರಿ ಮೇಲೇರಲು ಹೋರಾಡುವುದು. ದೇಹಶುದ್ಧಿಗಾಗಿ ಆಚರಿಸುವ ಧಾರ್ಮಿಕ ಕಾರ್ಯಗಳು ಸ್ನಾನ, ಉಪವಾಸ, ವನವಾಸ, ಮೌನ ಮೊದಲಾದ ಬಾಹ್ಯ ಕ್ರಿಯೆಗಳು. ಇವು ಒಬ್ಬನನ್ನು ಪರಿಶುದ್ಧಗೊಳಿಸುವುದಿಲ್ಲ. ಇಂತಹ ಬಾಹ್ಯ ಆಚರಣೆಗಳಿಂದ ಆತ ಶ್ಲಾಘನೀಯನಾಗಬಹುದು. ಆದರೆ ಇದರಿಂದ ಆತನಲ್ಲಿ ಅಧ್ಯಾತ್ಮ ವಿಕಾಸ ಉಂಟಾಗುವುದಿಲ್ಲ. ಇದನ್ನೇ ಡಾಂಭಿಕತೆಯೆಂದು ತ್ಯಾಗರಾಜರು ಹಲವಾರು ರಚನೆಗಳಲ್ಲಿ ಪ್ರಸ್ತಾಪಿಸಿರುವುದು. ಅವರು ಹೀಗೆನ್ನುತ್ತಾರೆ.

"ಕಾಗೆಮೀನುಗಳು ನೀರಿನಲ್ಲಿ ಮುಳುಗಿದರದು ಉದಯ ಸ್ನಾನವಾದೀತೇ? ಕೊಕ್ಕರೆಯಂತೆ ಕೇವಲ ಕಣ್ಮುಚ್ಚಿದರದು ಧ್ಯಾನವೇ? ಮೇಕೆಯಂತೆ ಕೇವಲ ಪತ್ರೆಗಳನ್ನು

ತಿನ್ನುವುದೇ ಉಪವಾಸವೇ? ಸಾಧುವೇಷಧರಿಸಿ ಗುಹೆಯಲ್ಲಿರುವ ಸಾಮಾನ್ಯರು ಮುನಿಗಳಾಗಬಲ್ಲರೇ? ಅರಣ್ಯದಲ್ಲಿರುವ ಕೋತಿಗಳದು ವನವಾಸವೇ? ಜಂಗಮರು ಮಾತನಾಡದಿದ್ದ ಮಾತ್ರಕ್ಕೆ ಮುನಿಗಳಾಗಲು ಸಾಧ್ಯವೇ? ವಸ್ತ್ರ ಧರಿಸದ ಬಾಲಕರೆಲ್ಲ ದಿಗಂಬರರೇ?"

ನೀಟಕಾಕಿ ಮೀನು ಮುನುಗ ನಿರತಮುದಯ ಸ್ನಾನಮಾ ?
ತೇಟಕನುಲು ಕೊಂಗಗೂರ್ಚ ದೇವದೇವ ಧ್ಯಾನಮಾ ?
ಪತ್ರಮುಲನು ಮೇಯುಮೇಕ ಬಲಮ್ಮೈನಯುಪಾಸಮಾ ?
ಚಿತ್ರ ಪಕ್ಷುಲೆಗಯ ಸೂರ್ಯಚಂದ್ರುಲಕು ಸಾಮ್ಯಮಾ ?
ಗುಹಲವೇಷ ಕೋಟುಲುಂಟೆ ಗುಣಮುಕಲ್ಗು ಮೌನುಲಾ ?
ಗಹನಮುನನು ಕೋತುಲುಂಟೆ ಘನಮೌ ವನವಾಸಮಾ ?
ಜಂಗಮುಲು ಬಲಕಕುಂಟೆ ಸಂಗತಿಗಾ ಮೌನುಲಾ ?
ಅಂಗಮು ಮುಯ್ಯನಿ ಬಾಲುಲು ಯಪುಡು ದಿಗಂಬರುಲಾ ?

(ಬಲಮುಕುಲಮು)

ಕೊಂಗವಂಟಿ ಧ್ಯಾನಮು ಜೇಸಿನ
ದನಕೋರಿಕ ಗೊನಸಾಗುನಾ ?

(ನಳಿನಲೋಚನ)

ಪಂಚೇಂದ್ರಿಯ ನಿಗ್ರಹವಾಗಲೀ ಮನಃಶುದ್ಧಿಯಾಗಲೀ ಇಲ್ಲದೆ ಆಚರಿಸುವ (ಭಕ್ತಿಹೀನ) ಬಾಹ್ಯಕ್ರಿಯೆಗಳಿಂದ ರಾಮನನ್ನು ಅರಿಯಲಾಗುವುದಿಲ್ಲ. ಕೇವಲ ಬಾಹ್ಯ ನಟನೆ ಮಾಡುವ ಮಂದಿಯಲ್ಲಿ ಬಾಹ್ಯ ಮತ್ತು ಆಂತರಿಕ ನಡೆನುಡಿಗಳ ಮಧ್ಯೆ ದೊಡ್ಡ ಕಂದಕವೇ ಇರುತ್ತದೆ. ಹೊರಗೆ ಅವರಾಚರಿಸುವ ಧಾರ್ಮಿಕ ಕ್ರಿಯೆಗಳಿಂದ ಜನಾನುರಾಗಿಗಳಾಗಬಲ್ಲರೇ ಹೊರತು ಅಂತರಂಗದಲ್ಲೇ ಇರುವ ಹರಿಯನ್ನು ಅವರು ಕಾಣುವುದಿಲ್ಲ. ಪ್ರಾತಃಸ್ನಾನ ಮಾಡಿ, ವಿಭೂತಿ ಹಚ್ಚಿಕೊಂಡು, ಬೆರಳೆಣಿಸಿ ಜಪಮಾಡಿ ಶ್ಲಾಘನೀಯರಾದವರ ಬಗೆಗೆ ತ್ಯಾಗರಾಜರು ಹೀಗೆನ್ನುತ್ತಾರೆ. ಇಂಥವರು ಭಕ್ತಿಮಾರ್ಗವನ್ನು ತಿಳಿದಿಲ್ಲ. ಎಲ್ಲೆಡೆ ಸುತ್ತಾಡುತ್ತಾ ನಾಮಸ್ಮರಣೆಯನ್ನು ಕನವರಿಸುವರೇ ಹೊರತು ನಿಜಭಕ್ತಿಯನ್ನು ಅರಿಯರೆನ್ನುತ್ತಾರೆ.

ತೆಲಿಯಲೇರು ರಾಮಾ ಭಕ್ತಿಮಾರ್ಗಮುನು
ಇಲನಂತಟ ದಿರುಗುಚುನು ಕಲುವರಿಂತುರೇ ಗಾನಿ
ವೇಗಲೇಚಿ ನೀಟ ಮುನಿಗಿ ಬೂತಿಬೂಸಿ
ವೇಳ್ಳನೆಂಚಿ ವೆಲಿಕಿ ಶ್ಲಾಘನೀಯುಲ್ಕೈ
ಬಾಗಪೈಕಮಾರ್ಜನಲೋಲುಲ್ಕೈರೇ ಗಾನಿ
ತ್ಯಾಗರಾಜ ವಿನುತುನಿ

(ತೆಲಿಯಲೇರು)

ಬಾಹ್ಯವಾಗಿ ಆಚರಿಸುವ ಧಾರ್ಮಿಕ ಕ್ರಿಯೆಗಳನ್ನು ತ್ಯಾಗರಾಜರು ಟೀಕಿಸುವಂತೆ ತೋರುವುದಾದರೂ ಇವೆಲ್ಲವೂ ನಿರರ್ಥಕ ಎಂಬುದು ಅವರ ಅಭಿಪ್ರಾಯವಲ್ಲ. ಭಕ್ತಿಗೆ ಈ ಎಲ್ಲವೂ ವಿರೋಧಿಗಳೇನಲ್ಲ. ಸಹಕಾರಿಯೆ ನಿಜ. ಆದರೆ ಭಕ್ತಿಹೀನವಾಗಿ ಮಾಡುವ ಆಡಂಬರದ ಆಚರಣೆಗಳು ಮಾತ್ರ ಖಂಡನೀಯ.

ಪಾತಂಜಲಿಗಳು, 'ಪತ್ಯಾಹಾರ'ವೆಂದೂ, ಶಂಕರರು 'ಉಪರತಿ' ಎಂದೂ ಕರೆಯುವ ಇಂದ್ರಿಯ ನಿಗ್ರಹವು ಅಧ್ಯಾತ್ಮ ಸಾಧನೆಗೆ ಮುಖ್ಯವಾದ ಮತ್ತೊಂದು ಅಂಶ. ಏಕೆಂದರೆ ಇಂದ್ರಿಯಗಳು ಅಪಾಯಕಾರಿಯಾದವು. ಆದ್ದರಿಂದ ಪಂಚೇಂದ್ರಿಯಗಳ ಅಪಾಯಕಾರೀ ಸ್ವಭಾವವನ್ನು ತ್ಯಾಗರಾಜರು ಮತ್ತೆಮತ್ತೆ ಉಲ್ಲೇಖಿಸುವುದುಂಟು. ಆದರೆ ತ್ಯಾಗರಾಜರ ಪ್ರಕಾರ ಇಂದ್ರಿಯಗಳು ಅಪಾಯಕಾರಿಯಷ್ಟೇ ಅಲ್ಲ, ದೇವರನ್ನು ಸಾಕ್ಷಾತ್ಕರಿಸಿಕೊಳ್ಳಬಹುದಾದ ಮಾಧ್ಯಮವೂ ಹೌದು. ತ್ಯಾಗರಾಜರು ಹೇಳುವಂತೆ ದೇವರು ಇಂದ್ರಿಯಗಳಿಗೂ ಲಭ್ಯನಾಗುತ್ತಾನೆ. ಆದ್ದರಿಂದ ಇಂದ್ರಿಯಗಳನ್ನು ಸಾರ್ಥಕ್ಯಗೊಳಿಸಿಕೊಳ್ಳುವ ರೀತಿಯನ್ನು ಅವರು ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಹೀಗೆ ಸಾರುತ್ತಾರೆ.

**ಕಣ್ಣು** : ಪನ್ನಗನನ್ನು ನೋಡಲಾಗದ ಕಣ್ಣಾಳಿದ್ದೂ ನಿರರ್ಥಕ. ಅಂತಹ ಕಣ್ಣುಗಳು ತೆರೆದಿದ್ದರೂ, ಮುಚ್ಚಿದ್ದರೂ ಪ್ರಯೋಜನವಿಲ್ಲ.

**ಪನ್ನಗ ಕನುಗೊನನಿ ಕನ್ನುಲೇಲೆ ? ಕಂಟಿಮಿನ್ನುಲೇಲೇ ?**

**(ಎನ್ನಗ ಮನಸುಕುರಾನಿ)**

**ಚೇರಡೇಸಿ ಗುಡ್ಡಿಕನ್ನುಲು ಬಾಗುಗ**
**ತೆರಚಿಯೇಮಿ ? ತೆರವಕುಂಡಿನ ಯೇಮಿ ?**

**(ಸಮಯಮುದೆಲಿಸಿ)**

**ಕಿವಿ** : ಹರಿಕಥೆಯನ್ನು ಕೇಳುವುದರಿಂದ ಘೋರ ಪಾಪಗಳೂ ನಾಶವಾಗುತ್ತವೆ. ಅಷ್ಟಲ್ಲದೆ ಹರಿಕಥೆಯ ಶ್ರವಣದಿಂದ ತ್ಯಾಗರಾಜರ ಆಂತರಿಕ ಹಸಿವೂ ಮಾಯವಾಗಿದೆ. ಹರಿಯ ನಾಮ-ರೂಪಗಳು ಹೃದಯದುಂಬಿವೆ. ಹೀಗೆ ತಮ್ಮ ಶ್ರವಣೇಂದ್ರಿಯ ಸಾರ್ಥಕಗೊಂಡಿರುವುದನ್ನವರು ಸ್ವಾನುಭಾವದಿಂದ ತೋರಿದ್ದಾರೆ (ಸ್ಮರಣೇ ಸುಖಮು).

**ನಾಸಿಕ** : ನಾಸಿಕದ ಕ್ರಿಯೆ ಉಸಿರಾಡುವುದು. ಉಸಿರಿನ ಮೂಲಕ ವಾಸನೆಯನ್ನು ಗ್ರಹಿಸುವುದು. ತ್ಯಾಗರಾಜರ ನಾಸಿಕವು ಸಹಜವಾದ ಈ ಕ್ರಿಯೆಯನ್ನು ನಿರ್ವಹಿಸುವಾಗ ಶ್ರೀರಾಮನೆಂಬ ಸುವಾಸನೆಯನ್ನೇ ಸವಿಯುತ್ತಿದೆ. ಎಂದರೆ ಅವರ ಉಚ್ಛ್ವಾಸ-ನಿಚ್ಛ್ವಾಸಗಳೂ ಶ್ರೀರಾಮನೇ ಆಗಿದ್ದಾನೆನ್ನುತ್ತಾರೆ (ನಾ ಜೀವಾಧಾರಮು).

**ರಸನ** : ನಾಲಗೆಯ ಮೇಲೆ ನಿಯಂತ್ರಣವಿಲ್ಲದೆ ಕಾಡುಹರಟೆ ಸುಖತರವಲ್ಲ. ನಾಲಿಗೆಯನ್ನು ಹರಟೆಗಾಗಿ ಬಳಸದೆ ನಾಮಜಪಕ್ಕೆ ಉಪಯೋಗಿಸಿಬೇಕೆಂಬ ಅಂಶವನ್ನು ತ್ಯಾಗರಾಜರು 'ನನ್ನ ಬಾಯಿ ಸದಾಕಾಲವೂ ನಿನ್ನ ನಾಮವನ್ನೇ ನುಡಿಯಲಿ'

ಎಂದು ಪ್ರಾರ್ಥಿಸುವ ಮೂಲಕ ಸೂಚಿಸುತ್ತಾರೆ. ಮಾರಕೋಟಿ ಲಾವಣ್ಯನನ್ನು ಮತ್ತೆ ಮತ್ತೆ ನೋಡುತ್ತಾ ಆತನೊಂದಿಗೆ ಮಾತನಾಡಬೇಕೆಂಬುದೂ ಅವರ ಮಹದಾಸೆ. ಈ ಮೂಲಕ ಕಣ್ಣು ಮತ್ತು ನಾಲಗೆಗಳು ಉಪಯೋಗವಾಗದ ತನ್ನ ನರಜನ್ಮವಾದರೂ ನಿರರ್ಥಕವೆಂದು ದುಃಖಿಸುವ ಮೂಲಕ ಈ ಅಂಗಗಳು ಉಪಯೋಗವಾಗಬೇಕಾದ ರೀತಿಯನ್ನು ಅರುಹುತ್ತಾರೆ.

**ಸ್ಪರ್ಶ** : ತ್ಯಾಗರಾಜರ ಪ್ರಕಾರ ಶ್ರೀಹರಿಯನ್ನು ಅಪ್ಪಿಕೊಳ್ಳಲಾಗದ ತಮ್ಮ ಜನ್ಮ ನಿಷ್ಪ್ರಯೋಜಕವೆನಿಸಿದೆ (ನೋಡಿ : ನಾರಾಯಣಹರಿ, ಏಟಿಜನ್ಮಮಿದಿಹಾ, ಎನ್ನಗಮನ ಸುಕುರಾನಿ—ಕೃತಿಗಳು).

**ಸಂಗೀತಲೋಲುನಿ ಪೊಂಗುಚುದನಿವಾರ ಕೌಗಿಲಿಂಚನಿ ತನ**

(ಏಟಿಜನ್ಮಮಿದಿಹಾ)

ಅಷ್ಟಲ್ಲದೆ ಪಂಚೇಂದ್ರಿಯಗಳ ಪಟ್ಟಿಯಲ್ಲಿರದ, ದೇಹಾಂಗಗಳಲ್ಲಿ ಒಂದಾದ ಕಾಲ್ಗಳೂ ದೈವಕ್ಷೇತ್ರ ಪರ್ಯಟನೆಗಾಗಿ ಬಳಕೆಯಾಗಬೇಕೇ ಹೊರತು ಭೂರಿಭೋಜನಕ್ಕೆ ಮುಂದಾಗಿ ಓಡುವ ಸಲುವಾಗಿ ಬಳಸಲಾಗದೆನ್ನುತ್ತಾರೆ, ತ್ಯಾಗರಾಜರು (ಇಂದುಕಾ ಈತನುವುನುಪೆಂಚಿನ).

ಹೀಗೆ ದೇಹಾಂಗಗಳ ಸದುಪಯೋಗವನ್ನು ವಿವರಿಸಿದ ತ್ಯಾಗರಾಜರು ದೇಹ ಮತ್ತು ಮನಸ್ಸಿನ ಶುದ್ಧಿಯನ್ನು ಒತ್ತಿ ನುಡಿಯುತ್ತಾರೆ. ಒಬ್ಬನು ದಿನಂಪ್ರತಿ ಪ್ರಾತಃಕಾಲದಲ್ಲೇ ಎದ್ದು ಸ್ನಾನಮಾಡಿ, ವಿಭೂತಿ ಧರಿಸಿ, ಜಪಮಾಲೆ ಹಿಡಿದು, ಇತರ ಮಂದಿಯ ದೃಷ್ಟಿಯಲ್ಲಿ ಶ್ಲಾಘನೀಯನಾಗಬಹುದು. ಧಾರ್ಮಿಕವಾಗಿ ಆತನು ಆಚರಿಸುವ ಈ ಎಲ್ಲ ಕಾರ್ಯಗಳೂ ಕಾಮಕ್ರೋಧಾದಿ ಅರಿಷಡ್ವರ್ಗಗಳಿಂದ ದೂರವಿದ್ದಾಗ ಮಾತ್ರ ಫಲಕಾರಿಯಾಗುವುದು. ಅರಿಷಡ್ವರ್ಗಗಳ ದಾಸನಾಗಿ ಯಾಂತ್ರಿಕವಾಗಿ ಆತ ಆಚರಿಸುವ ಧಾರ್ಮಿಕ ಕ್ರಿಯೆಗಳನ್ನು ತ್ಯಾಗರಾಜರು ಹಲವು ರಚನೆಗಳ ಮೂಲಕ ಖಂಡಿಸುತ್ತಾರೆ. ತನುವೊಂದೆಡೆ, ಮನಸ್ಸು ಇನ್ನೊಂದೆಡೆ, ಆಟಾಟೋಪದ ವೇಷಗಳಿಂದ ಕೂಡಿದವನು ಜನರನ್ನು ಮೋಸಗೊಳಿಸಬಲ್ಲನಾಗಲೀ ಆತನಿಗೆ ಜಯವಿಲ್ಲ ಎಂಬುದು ಅವರ ನುಡಿ.

**ತನುವೊಕಚೋ ಮನಸೊಕಚೋ**
**ತಗಿನ ವೇಷ ಮೊಕಚೋ ನಿಡಿ**
**ಜನುಲನೇಚು ವಾರಿಕಿ**
**ಜಯಮೌನೇ ?**

(ಕನುಗೊನಸೌಖ್ಯಮು)

ದೇಹ ಮನಸ್ಸುಗಳೆರಡೂ ಭಗವತ್ಪರವಾಗಿರಬೇಕೆಂಬುದೇ ಧ್ಯೇಯ. ಹಾಗಿಲ್ಲದೆ ಸಹಜವಾಗಿ ಚಂಚಲ ಸ್ವಭಾವವುಳ್ಳ ಚಿತ್ತವನ್ನು, ವಿಷಯವೆಂಬ ನಟವಿಟರಿಗೆ ಒಪ್ಪಿಸಿ ಬಾಹ್ಯಾಚರಣೆಗಳನ್ನು ನಿಷ್ಠೆಯಿಂದ ಮಾಡುವಂತೆ ತೋರಿದರೂ ಅವು ಆತನನ್ನು ರಕ್ಷಿಸುವುದಿಲ್ಲ. ಶ್ರೀರಾಮನ ಕೃಪೆ ಅಂತಹವನಿಗೆ ಉಂಟಾಗದು.

ಮನಸು ವಿಷಯ ನಟ-ವಿಟುಲ ಕೊಸಗಿತೇ
ಮಾ ರಾಮುನಿ ಕೃಪ ಕಲ್ಗುನೋ ?

(ಮನಸು ವಿಷಯ)

ಕಾಮಕ್ರೋಧುಡು ತಪಂಪೊನರ್ಚಿತೇ
ಗಾಚಿರಕ್ಷಿಂಚುನೆ

(ಮನಸುನಿಲ್ಪಶಕ್ತಿ)

ಶ್ರೀರಾಮಭಜನೆಯೇ ಪರಲೋಕಸಾಧನವೆನ್ನುವ ತ್ಯಾಗರಾಜರು ಲೋಭ ಮೋಹಾದಿ ಪಾಪಗಳ ಜೊತೆಗೂಡಿಸಿ ರಾಮಭಜನೆಯನ್ನು ಮಾಡಬೇಡವೆನ್ನುತ್ತಾರೆ.

ಸ್ಮರಲೋಭ ಮೋಹಾದಿ ಪಾಪುಲಚೆ
ಸ್ಮರಿಯಿಂಚಕೇ ಶ್ರೀರಾಮ ಭಜನ
ಪರಲೋಕ ಸಾಧನಮೇ . . . . . .

(ಪರಲೋಕ ಸಾಧನಮೇ)

'ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ' ಎಂಬ ಸೂಕ್ತಿಯು[೩೨] ಮನಸ್ಸಿನ ಪ್ರಾಧಾನ್ಯವನ್ನೇ ಅಲ್ಲದೆ, ಅದರ ನಿಗ್ರಹದಿಂದ ಉಂಟಾಗುವ ಸಿದ್ಧಿಗಳನ್ನೂ ತಿಳಿಸುತ್ತವೆ. ಸರ್ವಧರ್ಮಗಳೂ ಮನೋನಿಗ್ರಹ ಲಕ್ಷಣವನ್ನೇ ಆತ್ಯಂತಿಕವೆನ್ನುತ್ತವೆ. ಶ್ರೀ ಶಂಕರರು ವೇದಶಾಸ್ತ್ರಪ್ರೋಕ್ತವಾದ ಸರ್ವಕರ್ಮಗಳಿಗೂ ಚಿತ್ತಶುದ್ಧಿಯೇ ಫಲವೆಂದು ಸಾರುತ್ತಾರೆ. ಚಿತ್ತವನ್ನು ಶುದ್ಧಿಗೊಳಿಸುವುದೆಂದರೆ, ದುಷ್ಟ ವೃತ್ತಿಗಳೆಡೆ ಹರಿಯದಂತೆ ಮಾಡುವುದು. ಈ ದುಷ್ಟ ವೃತ್ತಿಗಳು ಮನುಷ್ಯನನ್ನು ಬಂಧಿಸಿ, ಸತ್ಯದರ್ಶನಕ್ಕೆ ಅಡಚಣೆಯಾಗಿ ನಿಲ್ಲುತ್ತವೆ, ಕನ್ನಡಿಯ ಮೇಲಿನ ಧೂಳಿನಂತೆ. ಧೂಳೆಂಬ ದುಷ್ಟವೃತ್ತಿಗಳನ್ನು ಸ್ವಚ್ಛಗೊಳಿಸಿದಾಗ ಮಾತ್ರ ತನ್ನಲ್ಲೇ ಅಂತರ್ಗತನಾಗಿರುವ ಪರಮಾತ್ಮನ ಪ್ರತಿಬಿಂಬವನ್ನು ಕಾಣಲು ಸಾಧ್ಯವಾಗುವುದು. ಇಲ್ಲದಿದ್ದಲ್ಲಿ ಪಾತ್ರೆಯೊಳಗೆ ಇರುವ ಹಾಲಿನ ರುಚಿಯನ್ನು ಪಾತ್ರೆಯು ತಿಳಿಯಲಾರದಂತೆ ಮನುಷ್ಯನೂ ಅಂತರಾತ್ಮನನ್ನು ತಿಳಿಯಲು ಅಶಕ್ತನಾಗುತ್ತಾನೆ.

ದುತ್ತಪಾಲರುಚಿ ತೆಲಿಯು ಸಾಮ್ಯಮೇ

(ಎಂತಮುದ್ದೋ)

ಮನಸ್ಸನ್ನು ಗೆದ್ದು ಸದ್ವಿಷಯಗಳೆಡೆ ಅದನ್ನು ಒಲಿಸುವ ಸಾಮರ್ಥ್ಯ ಮನುಷ್ಯನಿಗುಂಟು. ಇದು ಸತತ ಅಭ್ಯಾಸದಿಂದ ಲಭ್ಯವಾಗುವುದು.[೩೩] ಹಾಗಿಲ್ಲದೆ ಸ್ವಾಧೀನದಲ್ಲಿರಿಸಿಕೊಳ್ಳಬಹುದಾದ ಮನಸ್ಸನ್ನು ಅನಿಯಂತ್ರಿತವಾಗಿ ಹರಿಯಗೊಟ್ಟರೆ ಉಂಟಾಗುವ ಪರಿಸ್ಥಿತಿಯನ್ನು ತ್ಯಾಗರಾಜರು ಕೆಳಗಿನ ಸಾಮ್ಯಗಳೊಂದಿಗೆ ಪ್ರಸ್ತುತಪಡಿಸುತ್ತಾರೆ.

ತನ್ನ ಮನೆಯನ್ನು ಮತ್ತೊಬ್ಬರ ಸ್ವತ್ತಾಗಿಸಿ, ತಾನು ಆಚೆ ನಿಂತು ಎದುರ ಮನೆಗೆ ನುಗ್ಗುವ ನಾಯಿಗಳನ್ನು ಓಡಿಸುವಂತೆ ತೋರುತ್ತದೆ. ಇಲ್ಲಿ ಎದುರು ಮನೆಯವರಿಗೆ

ಸಹಾಯಹಸ್ತ ನೀಡುವುದು ದೋಷವಲ್ಲವಾದರೂ ತನ್ನ ಮನೆಯೊಳಗೇ ನಾಯಿಗಳು ನುಗ್ಗುವಂತೆ ಬಾಗಿಲು ತೆರೆದಿರುವುದು ಅವಿವೇಕವೆನಿಸುತ್ತದೆ. ಇದೇ ರೀತಿ ಒಬ್ಬಾಕೆ ತನ್ನಲ್ಲಿರುವ ಪಶುಗಳಿಗೆ ತೌಡು ಅಗತ್ಯವೆಂದು ಪಕ್ಕದ ಮನೆಯವನನ್ನು ಯಾಚಿಸಲು ಹೋದಾಗ ಮನೆಯಲ್ಲಿ ಸಿದ್ಧಪಡಿಸಿಟ್ಟಿದ್ದ ಅನ್ನದ ಪಾತ್ರೆಯನ್ನು ಕೋತಿಗಳು ಕೊಂಡೊಯ್ಯುವಂತೆ. ಇಂತಹ ಅವಿವೇಕಗಳನ್ನು ಉದಹರಿಸಿ ಮನಸ್ಸನ್ನು ನಟವಿಟರ ಸ್ವಾಧೀನಕ್ಕೆ ನೀಡಬಾರದೆಂದು ತ್ಯಾಗರಾಜರು ಎಚ್ಚರಿಸುತ್ತಾರೆ.

**ಮನಸು ವಿಷಯ ನಟವಿಟುಲಕೊಸಗಿತೇ**
**ಮಾ ರಾಮುನಿ ಕೃಪಗಲ್ಗುನೋ !**
**ತನ ತಲುಪು ತೀಸಿಪೆಟ್ಟಿ ಒಕರಿಂಟಿಕಿ**
**ತಾ ಗುಕ್ಕಲತೋಲು ರೀತಿಗಾದೋ**
**ತವಿಟಿಕಿ ರಂಡಾಕ ಬೋತೇ ಕೂಟಿ**
**ತಪಿಲ ಕೋತಿ ಕೊಂಪೋಯಿನಟುಗಾದೋ**

(ಮನಸು ವಿಷಯ)

ಮನಸ್ಸಿನ ಹತೋಟಿಯುಳ್ಳ ಮಹಾತ್ಮನಿಗೆ ಮಂತ್ರತಂತ್ರಗಳು ಅವಶ್ಯವಿಲ್ಲ. ಆಜನ್ಮವೂ ದುರ್ವಿಷಯರಹಿತನಾಗಿ ಎಲ್ಲವೂ ದೇವರೇ ಎಂದು ಭಾವಿಸುವ ಸ್ಥಿತಪ್ರಜ್ಞನಿಗೆ ಆಗುಹೋಗುಗಳ ಚಿಂತನೆಯಿಲ್ಲ (ಮನಸುಸ್ವಾಧೀನಮೈನ).

**ವೈರಾಗ್ಯ** : ಇಡೀ ಪ್ರಪಂಚವೇ ಮಾಯೆಯೆಂದು ಅರಿತವನಿಗೆ ಲೌಕಿಕ ಆಸೆಗಳಾವುವೂ ಇರುವುದಿಲ್ಲ. ಆತ ನಿತ್ಯಾನಿತ್ಯವಸ್ತುವಿವೇಕವುಳ್ಳವನಾಗಿ ಪ್ರಾಪಂಚಿಕ ವಿಷಯಗಳೆಡೆಗೆ ವಿರಾಗಿಯಾಗಿರುತ್ತಾನೆ. ಮೋಕ್ಷಸಾಧನೆಗೆ ವೈರಾಗ್ಯಕ್ಕಿಂತ ಮಿಗಿಲಾದ ಸೋಪಾನ ಇನ್ನೊಂದಿಲ್ಲ. ಇದನ್ನೇ ತ್ಯಾಗರಾಜರು ಕಾರ್ಯತಃ ಮನುಕುಲಕ್ಕೆ ತೋರಿದ್ದಾರೆ. ಅವರೇ ಹೇಳಿಕೊಳ್ಳುವಂತೆ ಅವರಿಗೆ ಇಹಪರಗಳಲ್ಲಿನ ಭೋಗಭಾಗ್ಯಗಳೆಡೆಗೆ ಆಸೆಯಿಲ್ಲ. ಅವರ ಆಸೆಯೆಲ್ಲ ದೇವರೆಡೆಗಲ್ಲದೆ ಬೇರೆಯಲ್ಲ.

**ಕೋರಿಕ ಲಿಲಲೋ ದಿವಿಲೋ**
**ಕೊಂಚಮೈನ ಲೇನಿ ನಾ ಮನಸು**

(ವದ್ದನೇವಾರು)

**ಆತ್ಮಕ್ಕೆಯೊಕಟ್ಟೆನ ಆಸಿಂಚಲೇದು ಪರಮಾತ್ಮಾ . . . . .**
**ನೀಕಾಸಿಂಚಿತಿಗಾನಿ ನಿಮಿಷಮು ಮಾನ . . . . .**

(ಓರಾಮ ಓರಾಮ ಓಂಕಾರಧಾಮ)

ಶಂಕರರು ತಮ್ಮ ಸಾಧನ ಚತುಷ್ಟಯದಲ್ಲಿ ವಿಶದಪಡಿಸುವಂತೆ, ತ್ಯಾಗರಾಜರು ಇಹಾಮುತ್ರಫಲಭೋಗ ವಿರಾಗರಾಗಿದ್ದಾರೆ. ಹೀಗೆ ಅವರು **ತ್ಯಾಗ-ರಾಜ** ರೇ ಸರಿ.

ಹೀಗೆ ನೈತಿಕ ಪರಿಪೂರ್ಣತೆಯನ್ನು ಪಡೆದವನು ತ್ಯಾಗರಾಜರು ಅಭಿಪ್ರಾಯಪಡುವಂತೆ ಸುಳ್ಳಾಡುವುದಿಲ್ಲ, ಅಲ್ಪದೇವತೆಗಳನ್ನೂ ಕೂಡ ಬೇಡುವುದಿಲ್ಲ, ರಾಜಾಶ್ರಯ

ವನ್ನು ಅಪೇಕ್ಷಿಸುವುದಿಲ್ಲ. ಸೂರ್ಯದೇವನನ್ನು* ಉಪಾಸಿಸದೆ ಇರುವುದಿಲ್ಲ, ಮದ್ಯ ಮಾಂಸಗಳನ್ನು ಮುಟ್ಟುವುದಿಲ್ಲ, ಪರಹಿಂಸೆ ಮಾಡುವುದಿಲ್ಲ, ವಂಚಿಸುವುದಿಲ್ಲ, ಚಂಚಲಚಿತ್ತನಾಗಿ ಸೌಖ್ಯವನ್ನು ದೂರಮಾಡುವುದಿಲ್ಲ.

**ಅನೃತಂಬಾಡಡು ಅಲ್ಪುಲ ವೇಡಡು**
**ಸುನೃಪುಲ ಗೊಲುವಡು ಸೂರ್ಯುನಿ ಮರವಡು**
**ಮಾಂಸಮು ಮುಟ್ಟಡು ಮಧುವುನು ತ್ರಾಗಡು**
**ಪರಹಿಂಸಲ ಜೇಯಡು ಯೆರುಕನು ಮರವಡು**
**ವಂಚನ ಸೇಯಡು ವರುಲತೋ ಬೊಂಕಡು**
**ಚಂಚಲ ಚಿತ್ತುಡೈ ಸೌಖ್ಯಮು ವಿಡುವಡು**

**(ಕರುಣಯೇಲಾಗಂಟೆ)**

ಇಂತಹ ಮಹಾತ್ಮನು ದೇವರ ಇನ್ನೊಂದು ರೂಪವೇ ಆಗಿರುತ್ತಾನೆಂಬ ಮಹತ್ತರ ಹೇಳಿಕೆಯೊಂದಿಗೆ ಮನುಷ್ಯ ನೀತಿವಂತನಾಗಿರುವಲ್ಲಿನ ಹಿರಿಮೆಯನ್ನು ತ್ಯಾಗರಾಜರು ಸಾರುತ್ತಾರೆ.

## ಟಿಪ್ಪಣಿಗಳು

೧ *Essentials of Indian Philosophy*, M. Hiriyanna, George Allen and Unwin Ltd., London, 1949, p.58.

೨ *Hindu Social Organisation*, Pandharinath H. Prabhu, Popular Prakashan, Bombay, 1961, P. 212-213.

೩ ವಾಲ್ಮೀಕಿ ರಾಮಾಯಣ, ಸುಂದರಕಾಂಡ, ಸರ್ಗ ೨೨, ಶ್ಲೋಕ ೨೦.

೪ ಪರಂದೃಷ್ಟ್ವಾ ನಿವರ್ತತೇ - ಗೀತೆ, ೨-೫೯ಕ್ಕೆ ಹೋಲಿಸಿ.

೫ *Hindu Social Organisation*, Pandharinath H. Prabhu, P. 284.

೬ ಧಾರಣಾತ್‌ಧರ್ಮಂ ಇತಿಆಹುಹು ಎಂದು ಹೇಳಲ್ಪಡುತ್ತದೆ. ಉಲ್ಲೇಖ *Indian Conception of Values*, M. Hiriyanna, Kavyalaya, Mysore, ೧೯೭೫, P.೧೫೩.

೭ ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ, ಗೀತೆ ೪ -೧೩.

೮ ೫-೭೨.

೯ ನೋಡಿ. ವಾಲ್ಮೀಕಿ ರಾಮಾಯಣ, ಯುದ್ಧಕಾಂಡ, ೧೩೧ನೇ ಸರ್ಗ, ಶ್ಲೋಕ ೧೦೧, ೧೦೨, ೧೦೩ ಮತ್ತು ೧೦೫.

೧೦ ಅಯೋಧ್ಯೆಯನ್ನು ನೀಡುವುದು ವಾಲ್ಮೀಕೇತರ ರಾಮಾಯಣದ ಪ್ರಸ್ತಾಪ. ನೋಡಿ, ತ್ಯಾಗ ರಾಜ ಕವಿತ್ವಮು, ಎಸ್. ಶಮಂತಕಮಣಿ, ಪು. ೭೧.

---

* ಬೆಳಕಿನ ಅಥವಾ ಜ್ಞಾನದ ಸಂಕೇತವಾಗಿಯೂ ಇರುವುದರಿಂದ ನಿಜಜ್ಞಾನವನ್ನು ಅರಿಯದೆ ಇರುವುದಿಲ್ಲವೆಂದೂ ಅರ್ಥೈಸಬಹುದು.

೧೧ ತ್ಯಾಗರಾಜ ಕೀರ್ತನಲು - ವಿಶೇಷ ವಿವರಣಮು, ಪ್ರಥಮ ಸಂಪುಟಮು, ಕಲ್ಲೂರಿ ವೀರಭದ್ರ ಶಾಸ್ತ್ರಿ, ಸ್ವಧರ್ಮ ಸ್ವಾರಾಜ್ಯ ಸಂಘಮು, ಮದರಾಸು, ೧೯೭೫, ಪುಟ ೩೭೬.

೧೨ ನೃಪ ಧರ್ಮಃ ಸನಾತನಃ ಮಹಾಭಾರತ ಅನುಶಾಸನ ಪರ್ವ ೪೫-೨೧ ; ಅಲ್ಪೋವಾ ಬಹುವಾ ರಾಜನ್ ವಿಕ್ರಯ; ತಾವತ್ ಏವಸಹ - ಮಹಾಭಾರತ ಅನುಶಾಸನ ಪರ್ವ, ೪೫-೨೦ ; ಕನ್ಯಾಶುಲ್ಕವನ್ನು ಕುರಿತ ವಿವರಣೆಗೆ ನೋಡಿ *Hindu Social Organisation*, P.H. Prabhu, P. 178-179.

೧೩ ಪುರಂದರದಾಸರು ಮತ್ತು ಅನ್ನಮಾಚಾರ್ಯರ ಕೀರ್ತನೆಗಳ ಸಾಂಸ್ಕೃತಿಕ ಅಧ್ಯಯನ - ಅಕ್ಕ ಮಹಾದೇವಿ - ತಿರುಮಲ-ತಿರುಪತಿ ದೇವಸ್ಥಾನದ ಧನಸಹಾಯದ ಪ್ರಕಟಣೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೯, ಪುಟ ೫೫.

೧೪ ಗೀತೆ ೧೮-೫.

೧೫ ತ್ಯಾಗರಾಜ ಕೀರ್ತನಲು, ವಿಶೇಷ ವಿವರಣಮು, ದ್ವಿತೀಯ ಸಂಪುಟಮು, ಕಲ್ಲೂರಿ ವೀರಭದ್ರ ಶಾಸ್ತ್ರಿ, ಸ್ವಧರ್ಮ ಸ್ವಾರಾಜ್ಯ ಸಂಘಮು, ಮದರಾಸು ೧೯೭೮, ಪುಟ ೧೦೩.

೧೬ ಗೀತೆ ೩-೯.

೧೭ ವಚನ ಧರ್ಮಸಾರ. ಎಂ.ಆರ್. ಶ್ರೀನಿವಾಸಮೂರ್ತಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೫೬, ಪುಟ ೧೭೭.

೧೮ ನೋಡಿ ಗೀತೆ. ಅಧ್ಯಾಯ ೨, ಶ್ಲೋಕ ೪೨-೪೪.

೧೯ ೧-೨-೯.

೨೦ ಗೀತೆ. ಅಧ್ಯಾಯ ೯, ಶ್ಲೋಕ ೨೦-೨೧.

೨೧ ತ್ಯಾಗರಾಜ ಕೀರ್ತನಲು, ಕಲ್ಲೂರಿ ವೀರಭದ್ರಶಾಸ್ತ್ರಿ, ಸಂಪುಟ ೧, ಪುಟ ೩೭೭.

೨೨ ಸ್ವಾಮಿ ಆದಿದೇವಾನಂದ (ಅನು), ಶ್ರೀರಾಮಕೃಷ್ಣಾಶ್ರಮ, ಮೈಸೂರು, ೧೯೫೯, ೫-೨.

೨೩ ಅಧ್ಯಾಯ ೨, ಸೂತ್ರ ೨೯-೩೦.

೨೪ ನೋಡಿ. ವಾಚಸ್ಪತಿ ಮಿಶ್ರರ ತತ್ವವೈಶಾರದಿ ವ್ಯಾಖ್ಯಾನ.

೨೫ ಸುಂದರಕಾಂಡ, ಸರ್ಗ ೩೦, ಶ್ಲೋಕ ೪೪.

೨೬ ಮನುಸ್ಮೃತಿ ೪-೧೩೮.

೨೭ ಶಾರೀರಂ ಕೇವಲಂ ಕರ್ಮ ಕುರ್ವನ್ ನ ಆಪ್ನೋತಿ ಕಿಲ್ಬಿಷಮ್, ೪-೨೧.

೨೮ ಹೋಲಿಸಿ. ಭಗವದ್ಗೀತೆ ೨-೬೪.

೨೯ ಗೀತೆಯು ಹೀಗೆ ಹೇಳುತ್ತದೆ. ಧರ್ಮ ವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ. ಎಂದರೆ ಭೂತಗಳಲ್ಲಿರುವ ಧರ್ಮ ವಿರುದ್ಧವಲ್ಲದ ಕಾಮವು ನಾನಾಗಿದ್ದೇನೆ.

೩೦ ೨-೩೩. ವಿತರ್ಕ ಬಾಧನೇ ಪ್ರತಿಪಕ್ಷಭಾವನಮ್ ।
ಎಂದರೆ ಯೋಗಕ್ಕೆ ಭಂಗ ತರುವ ಆಲೋಚನೆಗಳನ್ನು ತಡೆಯುವುದಕ್ಕಾಗಿ ಅದಕ್ಕೆ ವಿರುದ್ಧ ವಾಗಿರುವ ಭಾವನೆಗಳನ್ನು ತರಬೇಕು.

೩೧ *Shri Annamacharya–A Philosophical Study*, Dr. H. L. Chandrasekhara, Vidyashankara Prakashana, Mysore, ೧೯೯೦ P. ೯೩ರಲ್ಲಿ ಉಲ್ಲೇಖ.

೩೨ ತ್ಯಾಗರಾಜ ಕೀರ್ತನಲು, ದ್ವಿತೀಯ ಸಂಪುಟಮು, ೧೯೭೮, ಪು. ೭೫.

೩೩ ಅಭ್ಯಾಸ ವೈರಾಗ್ಯಾಭ್ಯಾಂ ತನ್ನಿರೋಧಃ ಎಂಬುದು ಯೋಗಸೂತ್ರದ ಉಕ್ತಿ (೧-೧೨). ಎಂದರೆ ಮನಸ್ಸಿನ ವೃತ್ತಿ ಅಥವಾ ತರಂಗಗಳನ್ನು ಅಭ್ಯಾಸ ಮತ್ತು ವೈರಾಗ್ಯಗಳಿಂದ ನಿರೋಧಿಸಬಹುದೆಂದು ಅರ್ಥ.

೧೭

# ತ್ಯಾಗರಾಜರು–ಹರಿಭಕ್ತರು–ವಚನಕಾರರು

ಈ ಅಧ್ಯಾಯದಲ್ಲಿ ತ್ಯಾಗರಾಜರು ಮತ್ತು ಇತರ ಅನುಭಾವಿಗಳಲ್ಲಿ ಕಾಣಬರುವ ಕೆಲವು ಹೋಲಿಕೆಗಳನ್ನು ಗುರುತಿಸಲಾಗಿದೆ. ಈ ಅನುಭಾವಿಗಳ ಪರಿಸರದ ಹಿನ್ನೆಲೆಯಲ್ಲಿ ಹಲವು ವ್ಯತ್ಯಾಸಗಳಿದ್ದರೂ ಭಕ್ತಿಯೆಂಬ ಅಡಿಪಾಯ ಏಕರೀತಿಯದು. ಈ ಕಾರಣದಿಂದ ಇವರ ಆಲೋಚನೆ ಹಾಗೂ ಅಭಿವ್ಯಕ್ತಿಯಲ್ಲಿ ಸಾಮ್ಯ ಕಾಣಬರುತ್ತದೆ. ಇವರೆಲ್ಲ ಸಮಕಾಲೀನರಲ್ಲದಿದ್ದರೂ ಆಲೋಚನಾ ರೀತಿ, ವಾಕ್ಸರಣಿಯಲ್ಲಿ ಸಾಮ್ಯ ಕಾಣಬರುವುದೊಂದು ವಿಶೇಷ. ಹೀಗಾಗಿ ಇಲ್ಲಿ ಇವರ ರಚನೆಗಳ ನಿರ್ದಿಷ್ಟ ಸಾಹಿತ್ಯ ಭಾಗವನ್ನು ಮಾತ್ರ ಆಯ್ದುಕೊಂಡು ಸಾಮ್ಯವನ್ನು ಗುರುತಿಸಲಾಗಿದೆ.

ಸಾಮಾನ್ಯವಾಗಿ 'ಹರಿದಾಸರು'–ಎಂದರೆ ದಾಸಕೂಟಕ್ಕೆ ಸೇರಿದ ವ್ಯಾಸಾದಿ ದಾಸ ವರೇಣ್ಯರೆಂದು ಅರ್ಥೈಸುವ ವಾಡಿಕೆಯುಂಟು. ಆದರೆ ಪ್ರಸ್ತುತ ಅಧ್ಯಾಯದಲ್ಲಿ ದಾಸಕೂಟದವರೇ ಅಲ್ಲದೆ ಇತರ ಕೆಲವು ಭಕ್ತರನ್ನೂ ಒಳಗೊಂಡಂತೆ ಶ್ರೀಹರಿಯ ದಾಸರೆಂದು ಪರಿಗಣಿಸಲಾಗಿದೆ.

ಯಾವುದೇ ಸಿದ್ಧಾಂತವಾಗಲೀ, ವೇದಾಂತವಾಗಲೀ, ನಿರ್ಮೋಹ, ನಿರಹಂಕಾರ, ನಿಷ್ಕಾಮಕರ್ಮಗಳ ಬುನಾದಿಯೊಂದಿಗೆ ಭಗವದ್ ಸಾಕ್ಷಾತ್ಕಾರವನ್ನೇ ಗುರಿಯಾಗಿ ಹೇಳುತ್ತದೆ. ಇದರ ಸಾಧನೆಗೆ ಶ್ರದ್ಧೆ, ನಂಬಿಕೆ, ಏಕಾಗ್ರತೆ, ಸತ್ಸಹವಾಸ, ಕಾಲದ ಸದ್ವಿನಿಯೋಗಗಳು ಅಗತ್ಯ. ಈ ನಿಟ್ಟಿನಲ್ಲಿ ಸರಿಯಾದ ಅರಿವನ್ನುಂಟುಮಾಡುವ ಯೋಗ್ಯ ಮಾರ್ಗದರ್ಶಿಯೂ ಅಗತ್ಯ. ಇವುಗಳ ಪೂರೈಕೆಗೂ ಮುನ್ನ ಮನುಷ್ಯನಿಗೆ ಮನೋನಿಗ್ರಹ, ಪ್ರಾಪಂಚಿಕ ವಸ್ತು ವಿಷಯಗಳಲ್ಲಿ ಅನಾಸಕ್ತಿ ಮುಂತಾದವು ಪೂರ್ವಸಿದ್ಧತೆಗಳಾಗುತ್ತವೆ. ಈ ಅಂಶಗಳನ್ನು ಹಿನ್ನೆಲೆಯಾಗಿರಿಸಿಕೊಂಡು ಸಂತರು ಹೇಳಿರುವ ಮಾತುಗಳಲ್ಲಿ ಸಾಮ್ಯ ಕಾಣುವ ಪ್ರಯತ್ನ ಇಲ್ಲಿದೆ.

**೧. ದೇವರೊಬ್ಬನೇ** : ಪುರುಷೋತ್ತಮನಾದ ಜಗದ್ರಕ್ಷಕನೊಬ್ಬನೇ. ಈತ ಭಕ್ತರಿಗೆ ಸುಲಭನಾಗುವ ಉದ್ದೇಶದಿಂದ ಮಾತ್ರ ಹಲವು ರೂಪಗಳನ್ನು ತಾಳುತ್ತಾನೆ. ಭಕ್ತರು ಇವನನ್ನು ಯಾವುದೇ ಹೆಸರಿನಿಂದ ಅಥವಾ ರೂಪದಿಂದ ಆರಾಧಿಸಿದರೂ, ಪ್ರೀತಿಯಿಂದ ಮಾಡಿದ ಪೂಜೆಗಳನ್ನು ಆತ ಸ್ವೀಕರಿಸುತ್ತಾನೆ. ಶಿವನೂ, ನಾಲ್ಕು ಮುಖವುಳ್ಳ ಬ್ರಹ್ಮನೂ, ರಾಮನೂ ಈ ಎಲ್ಲವೂ ಪರಬ್ರಹ್ಮನ ವಿವಿಧ ರೂಪಗಳೇ ಸರಿ. ಆದ್ದರಿಂದ ದೈವಭೇದ ಸರಿಯಲ್ಲ. ಪದ್ಮಪುರಾಣದ ಪ್ರಕಾರ ದೈವಭೇದ ಮಾಡುವುದು ಪಾಪಕರವೇ ಸರಿ. ದೇವರೊಬ್ಬನೇ ಎಂಬ ಸಾರವುಳ್ಳ ಹಲವು ಉಲ್ಲೇಖಗಳು ಹೀಗಿವೆ.

ತ್ಯಾಗರಾಜರು :

**ಉಂಡೇದಿ ರಾಮುಡೊಕಡು ಊರಕ ಚೆಡಿಪೋಕು ಮನಸಾ**

(ಎಲೈ ಮನಸ್ಸೇ ಹಾಳಾಗಬೇಡ, ಅಸ್ತಿತ್ವದಲ್ಲಿರುವವನು ರಾಮನೊಬ್ಬನೇ)

**(ಉಂಡೇದಿ ರಾಮುಡೊಕಡು)**

**ದೈವ ಭೇದಮುಲೇಕ**

(ದೈವ ಬೇಧವಿಲ್ಲದೆ)

**(ಸುಖಿಯೆವ್ವರೋ)**

**ಪುರಾಣ ಪುರುಷುಡಗು ರಾಮುನಿಕಿ ಆ ಪುರಾರಿಕಿನಿ ನೀಕು ರಾಜಧರೀ**

**ಮಚ್ಚರಾನ ವೇರೆಂಚರಾದು**

(ಪುರಾಣ ಪುರುಷನಾದ ರಾಮನಿಗೂ, ಪುರಾರಿಗೂ ಹಾಗೂ ರಾಜಧರಿಯಾದ ನಿನಗೂ ಭೇದ ಮಾಡಬಾರದು)

**(ಕರುಣಜೂಡವಮ್ಮ)**

ನಮ್ಮಾಳ್ವಾರರು :

**ಮುನಿಯೇ ನಾನ್ಮುಹನೇ ಮುಕ್ಕಣ್ಣಪ್ಪ**

**(ತಿರುವಾಯ್‌ಮೊಳಿ)**

ಬಸವಣ್ಣನವರು :

**ಇಬ್ಬರು ಮೂವರು ದೇವರೆಂದು ಉಬ್ಬಿ ಮಾತಾಡಬೇಡ.**

**ದೇವರೊಬ್ಬನೇ ಕಾಣಿರೋ**[೧]

**(ಇಬ್ಬರುಮೂವರು)**

**ದೇವನೊಬ್ಬ ನಾಮಹಲವು**[೨] **(ದೇವನೊಬ್ಬ)**

ಮುಪ್ಪಿನ ಷಡಕ್ಷರಿ :

**ಆವರವರ ದರುಶನಕೆ ಆವರವರ ವೇಷದಲಿ**

**ಆವರವರಿಗೆಲ್ಲ ಗುರು ನೀನೊಬ್ಬನೇ**[೩]

ಮಹಾಂತ ಶಿವಯೋಗಿಗಳು :

**ಹರಿಯ ಭಕ್ತರಿಗೆ ಹರಿ ಹರನ ಭಕ್ತರಿಗೆ ಹರ**

**ನರರೇನು ಭಾವಿಸುವರದರಂತೆ ತೋರುವನು**[೪]

ಶ್ರೀಪಾದರಾಯರು :

**ಬಿಡಿಬಿಡಿ ಸಂದೇಹ ಪೊಡವಿ ಮನುಜರೆಲ್ಲ**

**ಒಡೆಯನೊಬ್ಬನೆ ಜಗಕೆ ರಂಗವಿಠಲ**[೫] **(ಬಿಡಿಬಿಡಿ)**

ಪುರಂದರದಾಸರು :

**ನಮ್ಮದೇವ ನಿಮ್ಮದೇವ ತಮ್ಮದೇವ ನೆನಬೇಡಿ**
**ಬೊಮ್ಮನ ಪಡೆದ ದೇವರೊಬ್ಬನೇ ಕಾಣಿರೋ**[೬]

(ನಮ್ಮದೇವ)

ಅನ್ನಮಯ್ಯ :

**ಎಂತಮಾತ್ರಮುನ ಎವ್ವರು ದಲಚಿನ**
**ಅಂತಮಾತ್ರಮೇ ನೀವು**
(ಯಾರ್ಯಾರು ಹೇಗೆ ಸ್ಮರಿಸಿದರೆ ಅದರಂತೆ ಇರುವವನು)

**ಕೊಲುತುರು ಮಿಮು ಶೈವುಲು ಶಿವುಡನಿಯು**
**ವೈಷ್ಣವುಲು ವಿಷ್ಣುವನಿಯು**[೭]
(ಶೈವರು ನಿಮ್ಮನ್ನು ಶಿವನೆಂದೂ ವೈಷ್ಣವರು ವಿಷ್ಣುವೆಂದೂ ಪರಿಗಣಿಸುತ್ತಾರೆ)

(ಎಂತಮಾತ್ರಮುನ)

ಭದ್ರಾಚಲ ರಾಮದಾಸರು :

**ಎನ್ನಿಜನ್ಮಮುಲ ಎರುಕತೋ ಜೂಚಿನ**
**ಏಕೋ ನಾರಾಯಣುಡನ್ನ**
**ಅನ್ನಿ ರೂಪಮುನ್ನ ಉನ್ನ ಪರಾತ್ಪರು**[೮] .
(ಎಷ್ಟು ಜನುಮಗಳ ಜ್ಞಾನದಿಂದ ನೋಡಿದರೂ ನಾರಾಯಣನೊಬ್ಬನೇ. ಆತನೇ ವಿವಿಧ ರೂಪಗಳಲ್ಲಿರುವ ಪರಾತ್ಪರ)

(ತಾರಕಮಂತ್ರಮು)

ಪೊಯ್ಗೈಯ್ ಆಳ್ವಾರರು :

**ಅವರವರ್ ತಾಮ್ ತಾಮ್ ಅರಿಂದವಾರೆತ್ತಿ**
**ಇವರಿವರೆಂಬೆರುಮಾನ್ ಎನ್ರು**[೯]

**೨. ಶರಣಾಗತಿಯ ಮೂಲಕ ಜೀವ ದೇವ ಸಂಬಂಧ** : ನಂಬಿದವರ ಕೈಬಿಡದ ಕೃಪಾಕರ ದೇವರೆಂದು ದೃಢವಾಗಿ ನಂಬಿ ಒಮ್ಮೆಲೇ ಆತನಲ್ಲಿ ಶರಣಾದ ಭಕ್ತರು ದೇವರೊಂದಿಗೆ ವಿವಿಧ ರೀತಿಯ ಸಂಬಂಧ ಕಲ್ಪಿಸಿಕೊಳ್ಳುತ್ತಾರೆ. ದೇವರು ಈ ಭಕ್ತರಿಗೆ ತಂದೆ, ತಾಯಿ, ಸಹೋದರ, ಒಡೆಯ ಎಲ್ಲವೂ ಆಗಿರುವುದುಂಟು. ಹೀಗೆ ನಿಕಟ ಸಂಬಂಧಿ ತಮಗೆ ದೇವರೇ ಇರುವಾಗ ಈ ಭಕ್ತರು ತಾವೇನೂ ಅನಾಥರಲ್ಲ, ದೇವರಿಗೇ ಇಂತಹ ಸಂಬಂಧಿಕರು ಇಲ್ಲದಿರುವ ಕಾರಣ ಆತನೇ ನಿರ್ಗತಿಕನೆನ್ನುತ್ತಾ ತಮ್ಮ ಸಿರಿವಂತಿಕೆಯನ್ನು ಹೆಮ್ಮೆಯಿಂದ ಹಾಡಿರುವುದುಂಟು. ಈ ಭಕ್ತರಿಗೆ ದೇವರೊಬ್ಬನೇ ಅಲ್ಲದೇ ಹಿರಿಯ ಭಕ್ತರೆಲ್ಲರೂ ಬಾಂಧವರೇ ಆಗಿರುವುದುಂಟು.

ತ್ಯಾಗರಾಜರು :

**ಅನಾಥುಡನು ಗಾನು**

**ಅನಾಥುಡವು ನೀವನಿ ನಿಗಮಜ್ಞುಲ ಸನಾತನುಲ ಮಾಟವಿನ್ನಾನು**

(ನಾನು ಅನಾಥನಲ್ಲ, ನೀನೇ ಅನಾಥನೆಂದು ನಿಗಮಜ್ಞರಾದ ಸನಾತನರ ಮಾತುಗಳನ್ನು ಕೇಳಿದ್ದೇನೆ)

**(ಅನಾಥುಡನುಗಾನು)**

**ಸೀತಮ್ಮ ಮಾಯಮ್ಮ ಶ್ರೀರಾಮುಡು ಮಾಕುತಂಡ್ರಿ**

(ಸೀತಮ್ಮ ನಮ್ಮ ತಾಯಿ, ಶ್ರೀರಾಮನು ನಮ್ಮ ತಂದೆ)

**(ಸೀತಮ್ಮಮಾಯಮ್ಮ)**

**ಭಾಗವತಾಗ್ರೇಸರುಲೆವ್ವರೋ ವಾರೆಲ್ಲರು ವರ ತ್ಯಾಗರಾಜುನಿಕಿ**
**ಪರಮಬಾಂಧವುಲು**

(ಯಾರು ಭಾಗವತಾಗ್ರೇಸರರೋ ಅವರೆಲ್ಲರೂ ತ್ಯಾಗರಾಜನಿಗೆ ಪರಮಬಂಧು ಗಳು)

**(ಸೀತಮ್ಮಮಾಯಮ್ಮ)**

ತ್ಯಾಗರಾಜರಿಗೆ ಶ್ರೀರಾಮನು ಒಂದೆಡೆ ತಂದೆಯಾದರೆ ಇನ್ನೊಂದೆಡೆ ಸಹೋದರನೂ, ಮತ್ತೊಂದೆಡೆ ಪತಿಯೂ ಆಗಿದ್ದಾನೆ. 'ನಾಯನ್ನ' ಎಂದೇ ಅವರು ಸಂಬೋಧಿಸಿದ್ದಾರೆ (ಮರಕತಮಣಿವರ್ಣ). ಅವರ ಸೌಮಂಗಲ್ಯದ ಕುರುಹು ಆತನೇ ಎಂದು ಅವರು ಹೀಗೆನ್ನುತ್ತಾರೆ. 'ಪಂಕಜನಯನನೇ, ನನ್ನ ಕುಂಕುಮ ನೀನೇ' (ಶ್ರೀರಾಮ ಜಯರಾಮ).

ಶಂಕರಾಚಾರ್ಯರು :

**ಮಾತಾಮೇ ಪಾರ್ವತೀದೇವೀ ಪಿತಾದೇವೋ ಮಹೇಶ್ವರಃ ।**

**ಬಾಂಧವಾಃ ಶಿವಭಕ್ತಾಶ್ಚ . . . . . . . . . . ।** ೧೦

(ಪಾರ್ವತೀದೇವಿ ನನ್ನ ತಾಯಿ, ಮಹೇಶ್ವರನು ನನ್ನ ತಂದೆ, ಶಿವಭಕ್ತರು ನನ್ನ ಬಂಧುಗಳು)

**(ನಿತ್ಯಾನಂದಕರಿ)**

ಬಸವಣ್ಣನವರು :

**ತಂದೆ ನೀನು ತಾಯಿ ನೀನು ಬಂಧು ನೀನು ಬಳಗ ನೀನು**

**ಎನಗೆ ನೀನಲ್ಲದೆ ಮತ್ತಾರೂ ಇಲ್ಲವಯ್ಯ**[೧೧]

**(ತಂದೆ ನೀನು)**

ವ್ಯಾಸರಾಯರು :

ತಂದೆಯಾಗಿ ತಾಯಿಯಾಗಿ ಇಂದಿರೇಶನೆ ಎನಗೆ
ಬಂಧುವಾಗಿ ಬಳಗವಾಗಿ ಗುರುವಾಗಿ ದೈವವಾಗಿ[೧೨]

(ತಂದೆಯಾಗಿ)

ತಂದೆ ನೀ ತಂದೆ, ಜನುಮಜನುಮಕೆ ತಂದೆ[೧೩]

(ತಂದೆ ನೀ ತಂದೆ)

ಕನಕದಾಸರು :

ಹರಿಯದಾಸರು ಎನ್ನ ಬಂಧುಗಳಾದರು[೧೪]

ಪುರಂದರರು :

ತಂದೆ ನೀನೇ ಕೃಷ್ಣ ತಾಯಿ ಇಂದಿರೆ ದೇವಿ
ಪೊಂದಿಧ ಅಣ್ಣನು ವನಜಸಂಭವನು
ಇಂದುಮುಖಿ ಸರಸ್ವತೀ ದೇವಿಯು ಅತ್ತಿಗೆಯು
ಎಂದೆಂದಿಗೂ ವಾಯುದೇವರೇ ಗುರುವು
ಹರಿದಾಸರೆಂಬುವರೆ ಇಷ್ಟಬಾಂಧವರು . . . .[೧೫]

(ಸಂಸಾರವೆಂಬಂಥ ಭಾಗ್ಯವಿರಲಿ)

ನಿನ್ನಂಥ ಸ್ವಾಮಿ ಎನಗುಂಟು ನಿನಗಿಲ್ಲ
ನಿನ್ನಂಥ ತಂದೆ ಎನಗುಂಟು ನಿನಗಿಲ್ಲ
ನೀನೇ ಪರದೇಶಿ ನಾನೇ ಸ್ವದೇಶಿ
ನಿನ್ನಂಥ ದೊರೆಯು ಎನಗುಂಟು ನಿನಗಿಲ್ಲ
ನಿನ್ನರಸಿ ಲಕುಮಿ ಎನ್ನತಾಯಿ
ನಿನ್ನ ತಾಯತೋರೋ . . . .[೧೬]

(ನಿನ್ನಂಥಾಸ್ವಾಮಿ)

**೩. ದೇವರ ದಯೆ** : ದೈವಬಲವಿಲ್ಲದಿದ್ದರೆ, ಮಾನವನ ಯಾವುದೇ ಕಾರ್ಯವೂ ಕೈಗೂಡದೆಂದು ಸಮರ್ಥಿಸುವ ಭಕ್ತರು ಹರಿದಯೆಯ ಅಗತ್ಯವನ್ನೂ ಔನ್ನತ್ಯವನ್ನೂ ಹೀಗೆ ಹಾಡಿದ್ದಾರೆ.

ತ್ಯಾಗರಾಜರು :

ನೀದಯ ರಾವಲೆಗಾಕ ನೇನೆಂತವಾಡನು ?
(ನಿನಗೇ ದಯೆ ಬರಬೇಕಲ್ಲದೆ ನಾನೆಷ್ಟರವನು?)

(ನೀದಯರಾವಲೆ)

ಮನಸಾ ಮನ ಸಾಮರ್ಥ್ಯಮೇಮಿ ?
(ಎಲೈ ಮನಸ್ಸೇ ನಮ್ಮ ಸಾಮರ್ಥ್ಯವೇನು ನಡೆದೀತು?)

(ಮನಸಾ)

**ಗ್ರಹಬಲಮೇಮಿ ಶ್ರೀರಾಮಾನುಗ್ರಹ ಬಲಮೇ ಬಲಮು**
(ಶ್ರೀರಾಮನ ಅನುಗ್ರಹದ ಬಲವೇ ಗ್ರಹಬಲಗಳಿಗಿಂತ ಶ್ರೇಷ್ಠ)

(ಗ್ರಹಬಲಮೇಮಿ)

ಪುರಂದರರು :

**ಬಂದದ್ದೆಲ್ಲ ಬರಲಿ ಗೋವಿಂದನ ದಯ ನಮಗಿರಲಿ**[೧೭]

**ಸಕಲ ಗ್ರಹಬಲ ನೀನೇ ಸರಸಿಜಾಕ್ಷ**[೧೮]

**ಹರಿ ನಿನ್ನೊಲುಮೆಯು ಆಗುವ ತನಕ ಅರಿತು ಸುಮ್ಮನಿರುವುದೆ ಲೇಸು**[೧೯]

ಬಸವಣ್ಣನವರು :

**ನೀನೊಲಿದರೆ ಕೊರಡು ಕೊನರುವುದಯ್ಯ**[೨೦]

ಅಕ್ಕಮಹಾದೇವಿ :

**ಶಿವನೊಲಿದಲ್ಲದೆ ಕೈಗೂಡದು**[೨೧]

**ಅಯ್ಯ ನಿನ್ನ ಒಲಿಸಲೆನ್ನಳವಲ್ಲ, ನೀ ಒಲಿವುದೆ ಸುಖವಯ್ಯ**[೨೨]

ಇಲ್ಲಿ ದಯೆ, ಗ್ರಹಬಲ, ಒಲುಮೆ ಇವೆಲ್ಲವೂ ಪರ್ಯಾಯಾತ್ಮಕ ಪದಗಳಾಗಿವೆ.

**೪. ಭಗವನ್ನಾಮ** : ಭಕ್ತರು ಭಗವಂತನ ನಾಮವನ್ನು ರುಚಿಕರವಾದ ತಿನಿಸಿಗೆ ಹೋಲಿಸಿರುವುದೊಂದು ಸ್ವಾರಸ್ಯ. ಬೇರೆಬೇರೆ ಭಕ್ತರು ಶ್ರೀಹರಿ ನಾಮವನ್ನು ಬೇರೆ ಬೇರೆ ಆಹಾರ ವಸ್ತುವಿಗೆ ಹೋಲಿಸಿರುವುದನ್ನು ನೋಡಿದಾಗ, ಬಹುಶಃ ಆಯಾ ಭಕ್ತರು ಅವರಿಗೆ ಪ್ರಿಯವೆನಿಸುವ ವಸ್ತುವಿನೊಂದಿಗೇ ಭಗವನ್ನಾಮವನ್ನು ಹೋಲಿಸಿರಬಹುದೆಂದು ಊಹಿಸಬಹುದು.

ತ್ಯಾಗರಾಜರು :

**ವರ ರಾಮನಾಮಮನೆ ಕಂಡಚಕ್ಕರ**
(ಶ್ರೇಷ್ಠವಾದ ರಾಮನಾಮವೆಂಬ ಕಲ್ಲುಸಕ್ಕರೆ)

**(ಇಂತ ಸೌಖ್ಯಮನಿ)**

ತ್ಯಾಗರಾಜರು ರಾಮನಾಮವನ್ನೇ ಅಲ್ಲದೆ ರಾಮನ ಮಾತುಗಳೂ ಕಲ್ಲುಸಕ್ಕರೆಯನ್ನೇ ಹೋಲುತ್ತದೆನ್ನುತ್ತಾರೆ (ಪಲುಕು ಕಂಡಚಕ್ಕರ). ಅಂತೆಯೇ ರಾಮನ ಸಹೋದರರ ಮಾತು ಜೇನಿಗೆ ಸಮನಾಗಿದೆ (ರಾಮ ನೀಸಮಾನಮೆವರು).

ಪುರಂದರರು :

**ಕೃಷ್ಣ ನಾಮವೆಂಬ ಕಲ್ಲುಸಕ್ಕರೆ**

ಪುರಂದರರ ಪ್ರಕಾರ ಕೃಷ್ಣನಾಮವೆಂಬ ಕಲ್ಲುಸಕ್ಕರೆಯನ್ನು ಶ್ರಮವಹಿಸಿ ಸಂತೆಯಿಂದ ತರಬೇಕಿಲ್ಲ. ಸತತವೂ ಭಕ್ತರ ನಾಲಿಗೆಯನ್ನು ಸಿಹಿಮಾಡುವುದು ಈ ನಾಮ.[೨೩]

ಭದ್ರಾಚಲ ರಾಮದಾಸರು :

**ಕದಳೀ ಕರ್ಜೂರಾದಿ ಫಲಮುಲ ಕಧಿಕಮೌ ಕಮ್ಮನಿ ನೀ ನಾಮ ।**
**ಪನಸ ಜಂಬೂದ್ರಾಕ್ಷ ಫಲ ರಸಮುಲಕಂಟೇ ಅಧಿಕಮೌ ನೀ ನಾಮ ॥** [೨೪]

(ಕದಳೀ, ಖರ್ಜೂರ, ಫಲಗಳಿಗಿಂತಲೂ ಸಿಹಿಯಾದ, ಹಲಸು, ಜಂಬೂ, ದ್ರಾಕ್ಷಾ ಫಲಗಳ ರಸಕ್ಕಿಂತ ಮಿಗಿಲಾದುದು ನಿನ್ನ ನಾಮ)

**(ಓರಾಮ ನೀನಾಮ ಮೇಮಿ ರುಚಿರಾ)**

ಮುಂದುವರಿದ ಭಕ್ತರು ಭಗವನ್ನಾಮದ ಹಿರಿಮೆ ಗರಿಮೆಗಳನ್ನು ಒತ್ತಿ ನುಡಿಯುತ್ತಾರೆ. ದೇವರ ನಾಮವು ಘೋರ ಪಾತಕಗಳನ್ನು ನಿರ್ಮೂಲಗೊಳಿಸುತ್ತದೆ. ಭವಾಬ್ಧಿಯನ್ನು ದಾಟಿಸುತ್ತದೆ. ಆದ್ದರಿಂದ ಕೆಲವು ಭಕ್ತರು ಸಕಲಮಂತ್ರ ರಾಜನಾದ ನಾಮವೇ ಸಕಲ ಪುರಾಣಗಳ ರಸವೆನ್ನುತ್ತಾ ದೇವರನ್ನು ಧ್ಯಾನಿಸಿ ಸಾಯುಜ್ಯ ಹೊಂದುವುದಕ್ಕಿಂತ ಆತನ ನಾಮಫಲಗಳನ್ನು ಪಡೆಯುವುದೇ ಶ್ರೇಷ್ಠವೆನ್ನುತ್ತಾರೆ. ಕೆಲವೆಡೆ ದೇವರೇ ಗೌಣವಾಗಿ ಅವನ ನಾಮವೇ ಪ್ರಧಾನವಾಗಿರುವುದೂ ಉಂಟು. ಇವರು ಹರಿಯ ಹಂಗೇ ಬೇಡ, ಆತನ ನಾಮದ ಬಲವೊಂದಿದ್ದರೆ ಸಾಕೆನ್ನುತ್ತಾರೆ. ನಾಮಬಲದಿಂದಲೇ ಯಮನನ್ನೂ ಗೆಲ್ಲಬಹುದೆಂಬ ಅಂಶವನ್ನು ಭಕ್ತರು ಬಲು ಸ್ವಾರಸ್ಯವಾಗಿ ಹೇಳಿರುವುದುಂಟು.

ತ್ಯಾಗರಾಜರು :

**ಮೇಲುಮೇಲು ರಾಮನಾಮ ಸುಖಮೀ ಧರಲೋ**

(ಈ ಧರೆಯಲ್ಲಿ ರಾಮನಾಮ ಸುಖವೇ ಮಿಗಿಲಾದುದು)

**(ಮೇಲು ಮೇಲು)**

**ಹರಿಯನು ರೆಂಡಕ್ಷರಮುಲು ಹರಿಯಿಂತುನು ಪಾಪಮು**

(ಹರಿ ಎಂಬ ಎರಡು ಅಕ್ಷರಗಳು ಪಾಪಗಳನ್ನು ನಿರ್ಮೂಲಗೊಳಿಸುತ್ತದೆ)

**(ಹರಿಯನುವಾರಿಕಿ)**

**ಘೋರ ಪಾತಕಮುಲ ಗೊಬ್ಬುನಯಣಚು**

(ಘೋರ ಪಾಪಗಳನ್ನೂ ಶೀಘ್ರವಾಗಿ ನಾಶಗೊಳಿಸುವ)

**(ಪೇರಿಡಿ)**

**ಪಟ್ಟುಕ ದಾಟ ನೀ ಪೇರು ತೆಪ್ಪಂಟಿ**

(ಭವಾಬ್ಧಿ ದಾಟಲು ಭಗವನ್ನಾಮವೇ ತೆಪ್ಪವಂತೆ)

**(ಶ್ರೀರಾಮದಾಸದಾಸೋಹಂ)**

**ಚಿಂತಿಸ್ತುನ್ನಾಡೇ ಯಮುಡು**
**ಸಂತತಮು ಸುಜನುಲೆಲ್ಲ ಸದ್ಭಜನ ಜೇಯುಟ ಜೂಚಿ**
**ದಾರಿ ತೆಲಿಯಲೇಕ ತಿರಿಗೇವಾರಲ್ಕೆನ ಚಾಲುನಂಟೇ**
**ಸಾರಮನಿ ತ್ಯಾಗರಾಜ ಸಂಕೀರ್ತನಮು ಪಾಡೇರನುಚು**

(ಸಜ್ಜನರೆಲ್ಲ ಸದಾಕಾಲ ಸದ್ಭಜನೆ ಮಾಡುತ್ತಿರುವುದನ್ನು ನೋಡಿ ಯಮನು ಚಿಂತೆಗೊಳಗಾಗಿದ್ದಾನೆ. ಮುಕ್ತಿಮಾರ್ಗ ತಿಳಿಯದವರಾದರೂ ತನ್ನ ಲೋಕಕ್ಕೆ ಬರಲೆಂದು ನಿರೀಕ್ಷಿಸಿದರೆ ಅವರೂ ಸಹ ಸಂಕೀರ್ತನೆಯ ಮೂಲಕ ತನ್ನ ಲೋಕಕ್ಕೆ ಬರುವುದನ್ನು ತಪ್ಪಿಸಿಕೊಂಡಿದ್ದಾರೆಂಬುದೇ ಯಮನ ಚಿಂತೆಗೆ ಕಾರಣವಾಗಿದೆ)

(ಚಿಂತಿಸ್ತುನ್ನಾಡೇ)

ಪುರಂದರರು :

ರಾಮ ಎಂಬುವ ಎರಡು ಅಕ್ಷರದ ಮಹಿಮೆಯನು
ಪಾಮರರು ತಾವೇನು ಬಲ್ಲರಯ್ಯ
'ರಾ' ಎಂದ ಮಾತ್ರದೊಳು ರಕ್ತಮಾಂಸದೊಳಿದ್ದ
ಆಯಸ್ತಿಗತವಾದ ಅತಿಪಾಪವನ್ನು
ಮಾಯವನು ಮಾಡಿ ಮಹರಾಯ ಮುಕ್ತಿಯಕೊಡುವ . . . . . .
ಮತ್ತೆ 'ಮ' ಎಂದೆನಲು ಹೊರಬಿದ್ದ ಪಾಪಗಳು
ಒತ್ತಿ ಒಳಪೋಗದಂತೆ ಕವಾಟವಾಗಿ . . . . . . . [೨೫]

(ರಾಮ ಎಂಬುವ)

ಇಲ್ಲಿ ಪುರಂದರರು 'ರಾಮ' ಶಬ್ದವು ಘೋರ ಪಾಪಗಳನ್ನು ಹೋಗಲಾಡಿಸುವುದೇ ಅಲ್ಲದೆ ಮುಕ್ತಿಯನ್ನೂ ನೀಡುವುದೆಂಬುದನ್ನು ಪರೋಕ್ಷವಾಗಿ ಹೇಳಿದ್ದಾರೆ.

ಹರಿಯೆಂದು ಮನದಲಿ ಮರೆದೊಮ್ಮೆ ನೆನೆದರೆ
ದುರಿತ ಪರ್ವತಗಳ ಖಂಡಿಪುದು ವಜ್ರದಂತೆ[೨೬]

(ಹರಿಯೆಂದು)

ನಾಮಕೀರ್ತನೆ ಅನುದಿನ ಮಾಳ್ಪಗೆ ನರಕ ಭಯಗಳುಂಟೆ ?[೨೭]

(ನಾಮಕೀರ್ತನೆ)

ನೀನ್ಯಾಕೋ ನಿನ್ನ ಹಂಗ್ಯಾಕೋ ರಂಗ ನಿನ್ನ ನಾಮದ
ಬಲವೊಂದಿದ್ದರೆ ಸಾಕೋ[೨೮]

(ನೀನ್ಯಾಕೋ)

ವರದ ಗೋಪಾಲ ವಿಠಲರು :

ರಾಮನಾಮ ಭಜಿಸಿದವಗೆ ಉಂಟೆ ಭವದ ಬಂಧನ . . . . . . [೨೯]

(ರಾಮನಾಮ)

ಅನ್ನಮಯ್ಯ :

ಜಟ್ಟಿಮಿಮ್ಮು ಧ್ಯಾನಿಂಚಿ ಸಾಯುಜ್ಯಮಂದುಟಕಂಟೇ
ಅಟ್ಟೇ ನೀ ನಾಮಫಲ ಮಂದುಟ ಎಕ್ಕುಡು . . . . . [೩೦]

(ನಿನ್ನನ್ನು ಧ್ಯಾನಿಸಿ ಸಾಯುಜ್ಯ ಹೊಂದುವುದಕ್ಕಿಂತ ನಿನ್ನ ನಾಮಫಲ ಹೊಂದುವುದೇ ಶ್ರೇಷ್ಠ)

(ಕೈವಲ್ಯಮುನಕಂಟೆ)

**ಸಕಲವೇದ ಶಾಸ್ತ್ರಮುಲ ಸಾರಮಿದಿ ಸಕಲ ಮಂತ್ರ ರಾಜಂಬುನಿದಿ**
**ಸಕಲ ಪುರಾಣ ರಸಮುಲ ಮಧುರಮಿದಿ . . . .**[೩೧]

(ಸಕಲ ವೇದಶಾಸ್ತ್ರಗಳ ಸಾರವೂ, ಸಕಲ ಮಂತ್ರಗಳಿಗೆ ರಾಜನೂ, ಸಕಲ ಪುರಾಣ ಸಾರಗಳ ಮಾಧುರ್ಯವೂ ಆಗಿದೆ)

(ಸಕಲಸಂಗ್ರಹಮು)

ಭದ್ರಾಚಲ ರಾಮದಾಸರು :

**ಸೀತಾರಾಮ ನಾಮಮುಲೇ ಮಾ ಜಿಹ್ವಯಂದು**
**ಯಮದೂತಲ ಪಾರದ್ರೋಲು ದೊಡ್ಡಮಂದು**[೩೨]

(ಯಮದೂತರನ್ನೋಡಿಸಲು ನಮ್ಮ ನಾಲಗೆಯಲ್ಲಿರುವ ಸಿದ್ಧೌಷಧ ಸೀತಾರಾಮ ನಾಮವೇ)

(ಕೋದಂಡರಾಮುಲು ಮಮುಗನ್ನವಾರು)

**ಕಾಲುನಿ ದೂತಲ ಪಾಲಿಟಿ ಮೃತ್ಯುವುಯನಿ . . . . .** [೩೩]

(ಯಮನ ದೂತರ ಪಾಲಿಗೆ ಮೃತ್ಯುವೆಂದು . . . . . . .)

(ತಾರಕಮಂತ್ರಮು)

ಹೀಗೆ ಬಹುಮಂದಿಯ ಪ್ರಕಾರ ದೇವರ 'ನಾಮ'ವು ಭವಬಂಧನ ಕಳಚುವುದಷ್ಟೇ ಅಲ್ಲ, ಪಾಪ ಪರಿಹಾರ ಮಾಡಿ ನರಕವಾಸವನ್ನು ತಪ್ಪಿಸುತ್ತದೆ. ಅರ್ಥಾತ್ ಸದ್ಗತಿ ನೀಡುತ್ತದೆ.

ಭಾಗವತರು ನಾಮಸಂಕೀರ್ತನೆಯನ್ನು ಹೇಗೆ ಮಾಡಬೇಕೆಂಬುದನ್ನು ತಿಳಿಸುವಲ್ಲಿನ ಕೆಲವು ಹೋಲಿಕೆಗಳು ಹೀಗಿವೆ. ಭಾಗವತರು ಹಿಮ್ಮೆಟ್ಟದೇ, ನಟಿಸುತ್ತಾ ಹರಿ ಸಂಕೀರ್ತನೆ ಮಾಡುವ ಚಿತ್ರಣವು ಕೆಳಗಿನ ಸಾಲುಗಳಲ್ಲಿವೆ.

ತ್ಯಾಗರಾಜರು :

**ವೆನುಕದೀಕ ತನಮನಸುರಂಜಿಲ್ಲಗ**
**ಘನಮ್ಮೆನನಾಮಕೀರ್ತನಪರುಡೈ . . . .**
**. . . . . . . . . . . . . . . . . . . .**
**ದಯಾಂಬುಧಿ ಸನ್ನಿಧಾನಂಬುನ ನಟಿಯಿಂಚು**

(ಹಿಂದುಮುಂದು ನೋಡದೆ ತನ್ನ ಮನಬಂದಂತೆ ಸಂತೋಷದಿಂದ ದೇವರ ಸನ್ನಿಧಾನದಲ್ಲಿ ನಟಿಸುತ್ತಾ ನಾಮಕೀರ್ತನಪರನಾದ)

**(ಅತಡೇ ಧನ್ಯುಡುರಾ)**

ವ್ಯಾಸರಾಯರು :

**ಗೆಜ್ಜೆಯ ಕಾಲಲಿಕಟ್ಟಿ ಲಜ್ಜೆಬಿಟ್ಟು ಹರಿನಾಮಗರ್ಜನೆ ಮಾಡುತ್ತಾ . . .**[೩೩.೧]

ಮೇಲಿನ ಈ ಉಲ್ಲೇಖಗಳಲ್ಲಿ ಸಂಕೋಚಪಡದೆ (ವೆನುಕದೀಕ; ಲಜ್ಜೆಬಿಟ್ಟು), ನಟಿಸುತ್ತಾ (ನಟಿಯಿಂಚು; ಗೆಜ್ಜೆಯ ಕಾಲಲಿಕಟ್ಟಿ), ನಾಮಕೀರ್ತನ ಪರನಾಗುವುದು (ನಾಮಕೀರ್ತನ ಪರುಡೈ; ಹರಿನಾಮ ಗರ್ಜನೆ ಮಾಡುತ್ತಾ), ಎಂಬಲ್ಲಿ ಸಾಮ್ಯ ಕಾಣ ಬರುತ್ತದೆ.

**೫. ಗುರುವಿನ ಪ್ರಾಧಾನ್ಯ ಮತ್ತು ಭಕ್ತರ ಮಧ್ಯವರ್ತಿತ್ವ** : ಭಕ್ತನಿಗೆ ದೈವಕೃಪೆ ಪ್ರಾಪ್ತ ವಾಗುವಲ್ಲಿ ಗುರುಕೃಪೆಯೂ ಅಗತ್ಯವೆಂಬುದು ಅನುಭಾವಿಗಳ ಮತ. ಏಕೆಂದರೆ ಗುರು ಸ್ವಾನುಭವದಿಂದ ಸರಿದಾರಿ ತೋರುವನೆಂಬುದು ನಂಬುಗೆ. ಹೀಗಾಗಿ ಗುರುವನ್ನು ಮಧ್ಯವರ್ತಿಯಾಗಿ ಎಣಿಸಲಾಗಿದೆ. ಅಷ್ಟಲ್ಲದೆ ಹಿರಿಯ ಭಕ್ತರೂ ಇಲ್ಲಿ ಮಧ್ಯವರ್ತಿ ಕೆಲಸ ನಿರ್ವಹಿಸಿ ದೇವರ ಬಳಿ ಸೂಕ್ತ ಸಮಯದಲ್ಲಿ ನಿಜ ಭಕ್ತನ ಬಗೆಗೆ ಶಿಫಾರಸು ಮಾಡುತ್ತಾರೆಂದೇ ಎಲ್ಲ ಅನುಭಾವಿಗಳೂ ನಂಬುತ್ತಾರೆ. ಕೆಲವು ಭಕ್ತರಂತೂ ದೇವ ರಲ್ಲಿ ತಮ್ಮ ವಿಷಯ ನಿವೇದಿಸಬಹುದಾದ ವೇಳೆಯನ್ನೂ ಹಿರಿಯ ಭಕ್ತರಿಗೆ ತಿಳಿಸಿರುವು ದೊಂದು ಸ್ವಾರಸ್ಯದ ಸಂಗತಿ.

ತ್ಯಾಗರಾಜರು :

**ಗುರುಲೇಕ ಏಟುವಂಟಿ ಗುಣಿಕಿ ತೆಲಿಯಗಬೋದು**

(ಗುರುವಿಲ್ಲದೆ ನಿಜಜ್ಞಾನ ತಿಳಿಯಲಾಗದು)

(ಗುರುಲೇಕ)

ಬಸವಣ್ಣನವರು :

**ಶಿವಪಥ ವರಿವೊಡೆ ಗುರುಪಥ ಮೊದಲು**[೩೪]

(ಮಡಕೆಯ ಮಾಡುವರೆ)

**ಗುರೂಪದೇಶ ಮಂತ್ರವೈದ್ಯ**[೩೫]

(ಗುರೂಪದೇಶ)

ಪುರಂದರರು :

**ಗುರುವಿನ ಗುಲಾಮನಾಗುವ ತನಕ**
**ದೊರೆಯದಣ್ಣ ಮುಕುತಿ**[೩೬]

(ಗುರುವಿನ ಗುಲಾಮ)

ಹರಿಯ ಅಂತರಂಗಭಕ್ತರ ಮಧ್ಯವರ್ತಿತ್ವ ಇತರ ಭಕ್ತರಿಗೆ ಆಸರೆ. ಅಂತರಂಗ ಭಕ್ತರ ಮಾತನ್ನು ಹರಿಯು ವಿಶೇಷವಾಗಿ ಮಾನ್ಯ ಮಾಡುವನೆಂಬ ನಂಬಿಕೆಯೇ ಇದಕ್ಕೆ ಕಾರಣ. ಆದ್ದರಿಂದಲೇ ಭಕ್ತರು ಇವರಲ್ಲಿ ಮೊರೆಹೊಕ್ಕು ತಮ್ಮ ವಿಷಯಕ್ಕೆ ಶಿಫಾರಸ್ಸು ಮಾಡುವಂತೆ ಕೋರುತ್ತಾರೆ.

ಪ್ರಸ್ತುತ ತ್ಯಾಗರಾಜರು ಒಂದು ರಚನೆಯಲ್ಲಿ 'ಈ ರೀತಿ ಮಧ್ಯಸ್ತಿಕೆ ವಹಿಸಬಲ್ಲ

ಸಿದ್ಧರು ಅಥವಾ ಹಿರಿಯರು ಯಾರೂ ಇಲ್ಲವೇ ?' ಎಂದು ದುಃಖಿಸಿದರೆ (ಎವರ್ನೈನ ಲೇರಾ), ಮತ್ತೊಂದು ರಚನೆಯಲ್ಲಿ ಸೀತೆ, ಭರತ, ಲಕ್ಷ್ಮಣರೆಲ್ಲ ತಮ್ಮ ಬಗೆಗೆ ಶಿಫಾರಸು ಮಾಡಿದ್ದರೂ ಶ್ರೀಹರಿ ತನ್ನಲ್ಲಿರುವ ಕೃಪಾಗುಣವನ್ನು ಬಚ್ಚಿಟ್ಟುಕೊಂಡಿದ್ದಾನೆಂದು ನಿಂದಿಸುತ್ತಾರೆ.

**ದಾಚುಕೋವಲೆನಾ** ? . . . . .
**ಜನಕಜ ನಾಮಾಟ ಸಮಯಮನಿ ಪಲ್ಕಿನ, . . . .**
**ಭರತುಡೆಂತೋ ನನ್ನು ಭಕ್ತುಡನಿ ಪಲ್ಕಿತೇ, . . . .**
**ಸೌಮಿತ್ರಿ ತ್ಯಾಗರಾಜುನಿ ಮಾಟ ಬಲ್ಕಿತೇ . . . . .**

(ದಾಚುಕೋವಲೆನಾ)

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶ, ರಾಮನ ಅಂತರಂಗ ಭಕ್ತರಾದ ಸೀತೆ, ಲಕ್ಷ್ಮಣ, ಭರತರು ಶಿಫಾರಸು ಮಾಡಿದ್ದಾರೆಂಬುದು. ಮತ್ತೊಂದು ಕೃತಿಯಲ್ಲಿ ತ್ಯಾಗರಾಜರು 'ಕೌಸಲ್ಯ, ಅಹಲ್ಯೆ, ಸೀತೆ, ಶಬರಿ, ಸ್ವಯಂಪ್ರಭೆ —ಇವರಲ್ಲಿ ಯಾರಾದರೂ ತಮ್ಮ ಮೇಲೆ ಚಾಡಿ ಮಾತುಗಳನ್ನು ರಾಮನೊಂದಿಗೆ ಹೇಳಿರಬಹುದೇ' ಎಂದು ಚಿಂತಿಸುತ್ತಾರೆ. ಇಲ್ಲಿ ಭಕ್ತರ ಮಾತಿಗೆ ದೇವರು ಕಿವಿಗೊಡುವನೆಂಬ ಅವರ ನಂಬುಗೆ ಸ್ಪಷ್ಟವಾಗುತ್ತದೆ (ಎಂದುಕೀಚಲಮು).

ಹೀಗೆ ಸಂಧಾನ ನಡೆಸುವಲ್ಲಿ ಭದ್ರಾಚಲ ರಾಮದಾಸರು ಸೀತಾಮಾತೆಗೇ ಪ್ರಾಧಾನ್ಯ ನೀಡಿರುವುದು ಕೆಳಗಿನ ಸಾಹಿತ್ಯದಿಂದ ಖಚಿತವಾಗುತ್ತದೆ.

**ರಾಮಚಂದ್ರುಲು ನಾಪೈ ಚಲಮುಚೇಸಿನಾರು, ಸೀತಮ್ಮ ಚೆಪ್ಪವಮ್ಮ**[೩೭]

(ರಾಮಚಂದ್ರನು ನನ್ನೆಡೆಗೆ ಛಲಗೊಂಡಿದ್ದಾನೆ, ಸೀತಾಮಾತೆಯೇ ನೀನಾದರೂ ಹೇಳು)

(ರಾಮಚಂದ್ರುಲುನಾಪೈ)

**ಜನಕತನಯ ನಾದು ಮನವಿಗ್ಗೈಕೊನಿ**
**ಜಗಜ್ಜನಕುನಿತೋ ದೆಲ್ಪವೇ**[೩೮]

(ಜನಕನ ಪುತ್ರಿಯೇ, ನನ್ನ ಮನವಿಯನ್ನು ಸ್ವೀಕರಿಸಿ ಜಗಜ್ಜನಕನಲ್ಲಿ ತಿಳಿಸು)

(ಜನಕತನಯ)

**ನನ್ನು ಬ್ರೋವಮನಿ ಚೆಪ್ಪವೇ ಸೀತಮ್ಮತಲ್ಲಿ . . . .**
**ಚಕ್ಕಗ ಮರುಕೇಳಿ ಸೊಕ್ಕಿಯುಂಡಗ ವೇಳ**[೩೯]

(ಸೀತಾಮಾತೆಯೇ, ಶ್ರೀರಾಮನು ನಿನ್ನೊಂದಿಗೆ ಸಂತೋಷಿಸುತ್ತಿರುವ ಸಮಯದಲ್ಲಿ,ನನ್ನನ್ನು ಕಾಪಾಡುವಂತೆ ಹೇಳು)

(ನನ್ನುಬ್ರೋವಮನಿ)

ಮೇಲಿನ ಉದಾಹರಣೆಯಲ್ಲಿ ರಾಮದಾಸರು ತಮ್ಮ ವಿಷಯವಾಗಿ ಶಿಫಾರಸು ಮಾಡಲು ಸೂಕ್ತ ಸಮಯವೊಂದನ್ನು ಸೂಚಿಸಿದ್ದಾರೆ. ತ್ಯಾಗರಾಜರ ಬಗೆಗೆ ಸೀತಾ

ಮಾತೆ ಶಿಫಾರಸು ಮಾಡಿರುವುದೂ ಸಹ ಇಂತಹುದೇ ಸಮಯದಲ್ಲಿ ಎಂಬುದು ಇಲ್ಲಿ ಗಮನಾರ್ಹ.

**ಕನಿಕರಮು ಕಾಂತಪೈಕಲಿಗಿ ಮುದ್ದಿಡುವೇಳ**
**ಜನಕಜ ನಾಮಾಟ ಸಮಯಮನಿ ಬಲ್ಕಿತೇ**

(ಶ್ರೀರಾಮನು ಕನಿಕರದಿಂದ ಕಾಂತೆಗೆ ಮುದ್ದಿಡುವ ಸಮಯದಲ್ಲಿ ಆಕೆ ಇದೇ ಸೂಕ್ತ ಸಮಯವೆಂದು ತ್ಯಾಗರಾಜರ ವಿಷಯ ಹೇಳಿದುದಾಗಿ ತ್ಯಾಗರಾಜರಿಲ್ಲಿ ಭಾವಿಸುತ್ತಾರೆ)

**(ದಾಚುಕೋವಲೆನಾ)**

**೬. ನಿಂದಾಸ್ತುತಿ** : ಭಕ್ತಿಜೀವನದ ಒಂದು ಹಂತದಲ್ಲಿ ಅನುಭಾವಿಗಳು ದೈವವನ್ನು ನಿಂದಿಸಿರುವುದು ಕಾಣಬರುತ್ತದೆ. ಇದಕ್ಕೆ ಕಾರಣ, ತಾವೆಷ್ಟೇ ನಿಷ್ಠೆಯಿಂದ ದೇವರನ್ನು ಆರಾಧಿಸಿದ್ದರೂ ದೇವರು ತಮ್ಮನ್ನು ಅನುಗ್ರಹಿಸಿಲ್ಲವೆಂಬುದು. ಕೋಪಗೊಂಡ ಅವರು ಈ ಹಿಂದೆ ದೇವರಿಂದ ರಕ್ಷಿಸಲ್ಪಟ್ಟವರು ದೇವರಿಗೆ ಯಾವ ಸಂಬಂಧ ? ಅಥವಾ ಅವರೆಲ್ಲ ಧನಿಕರಾಗಿದ್ದು ದೇವರಿಗೆ ಲಂಚವನ್ನೇನಾದರೂ ಕೊಟ್ಟಿದ್ದರೋ ಎಂದು ರೋಷದಿಂದ ಹಂಗಿಸುತ್ತಾರೆ.

ತ್ಯಾಗರಾಜರು :

**ನಾಟಿ ಭಕ್ತುಲು ನೀಕೇಪಾಟಿ ವಾವುಲೋ** ?
(ಹಿಂದಿನ ಭಕ್ತರು ನಿನಗಾವ ಸಂಬಂಧ)

**(ರಾಮರಾಮರಾಮರಾಮ)**

**ಇಭರಾಜು ನೀಕು ಏಮ್ಮೈನ ಇಚ್ಚೆನಾ ? ತೆಲುಪು**
(ಕರಿರಾಜ ನಿನಗೇನಾದರೂ ಕೊಟ್ಟಿದ್ದನೇ ? ತಿಳಿಸು)

**(ಪರಾಮುಖಮೇಲರಾ)**

**ಕರಿಧನಮುಲು ಕಲಿಗಿತೇ ಕರುಣಿಂಚಿ ಬ್ರೋತುವೇಮೋ** ?
(ಆನೆ, ಧನಾದಿಗಳನ್ನೆಲ್ಲ ನಾನು ಹೊಂದಿದರೆ ಕರುಣಿಸಿಕಾಪಾಡುವೆಯೇನೋ ?)

**(ದರಿದಾಪುಲೇಕ)**

ಅನ್ನಮಯ್ಯ :

**ನೇಮು ನೀ ಕನ್ನುಲಮಾ** ?[೪೦]
(ನಾವು ನಿನಗೆ ಅನ್ಯರೇ)

**(ನೇಮು ನೀಕನ್ನುಲಮಾ)**

ಇದೇ ರಚನೆಯಲ್ಲಿ ವಿಭೀಷಣ, ಧ್ರುವ, ಶಬರಿ, ಅಹಲ್ಯೆಯೇ ಮುಂತಾದ ಭಕ್ತರು ನಿನಗೆ ಸಂಬಂಧಿಕರೇ ಎಂಬ ನಿಂದೆಯೂ ಇದೆ.

ಪುರಂದರರು :

**ಅಜಾಮಿಳನು ಅಣ್ಣನೋ ವಿಭೀಷಣನು ತಮ್ಮನೋ**
**ನಿಜದಿ ರುಕ್ಮಾಂಗದ ನಿನ್ನ ಮೊಮ್ಮಗನೋ ?**
**ಅವರೆಲ್ಲ ಹಿತರೇನೋ ನಾ ನಿನಗೆ ಅನ್ಯನೋ ?**[೪೦]

**(ಯಾಕೆ ನಿರ್ದಯನಾದೆಯೊ)**

**೭. ಭಕ್ತನ ಮುದ್ರೆ** : ತ್ಯಾಗರಾಜರು ರೋಮಾಂಚವೆಂಬ ಘನಕಂಚುಕ, ರಾಮಭಕ್ತನೆಂಬ ಮುದ್ರೆಯುಳ್ಳ ಬಿಲ್ಲೆ, ರಾಮನಾಮವೆಂಬ ಖಡ್ಗಗಳನ್ನು ಪ್ರಸ್ತಾಪಿಸುತ್ತಾರೆ. ಕನಕದಾಸರು ಹರಿಯ ಶ್ರೀಮುದ್ರೆ ತಮಗೆ ಆಭರಣವಾಯಿತೆನ್ನುತ್ತಾರೆ. ಒಂದು ವ್ಯತ್ಯಾಸವೆಂದರೆ ಕನಕರ ಹಾಡು ಧನ್ಯತೆಯನ್ನು ಬಿಂಬಿಸಿ, ಮುದ್ರೆ ಆಭರಣವಾಗಿ ತೋರಿದರೆ, ತ್ಯಾಗರಾಜರಿಗೆ ಮುದ್ರೆಯು ದಾಸಯೋಧನ ಆಯುಧಗಳಾಗಿವೆ. ಇದ ರಂತೆಯೇ ಅನ್ನಮಯ್ಯ ಮುದ್ರಾಧಾರಣೆಯನ್ನು ಸ್ನಾನಕ್ಕೆ ಹೋಲಿಸುತ್ತಾ ಅದು ತನುವನ್ನು ಶುದ್ಧಗೊಳಿಸುವುದೆನ್ನುತ್ತಾರೆ.

ತ್ಯಾಗರಾಜರು :

**ರೋಮಾಂಚಮನೆ ಘನ ಕಂಚುಕಮು (ವರ)**
**ರಾಮಭಕ್ತುಡನೇ ಮುದ್ರಬಿಳ್ಳಯು**
**ರಾಮನಾಮಮನೇ ವರಖಡ್ಗ**

**(ಬಂಟುರೀತಿ)**

ಕನಕದಾಸರು :

**ಹರಿಯ ಶ್ರೀಮುದ್ರೆ ಎನಗಾಭರಣವಾಯಿತು**[೪೨]

**(ಬದುಕಿದೆನೋ)**

ಅನ್ನಮಯ್ಯ :

**ಇರುವಂಕಲ ನೀಯೇಚಿನ ಮುದ್ರಲು**
**ಧರಿಯಿಂಚುಟೇ ನಾ ಸ್ನಾನಮು**[೪೩]

(ಇಕ್ಕೆಲಗಳಲ್ಲೂ ಅತಿಶಯವಾದ ನಿನ್ನ ಮುದ್ರೆಗಳನ್ನು ಧರಿಸುವುದೇ ನನಗೆ ಸ್ನಾನ)

**(ನದುಲೊಲ್ಲವು ನಾ ಸ್ನಾನಮು)**

**ಮೊನಸಿ ಮುದ್ರಲು ಭುಜಮುಲ ನುಂಡಿತೇ ಚಾಲು**
**ತನುವೆಂತ ಹೇಯಮ್ಮೈನಾ ದಾನಿಕೇಮಿ**[೪೪]
**(ದೇಹವೆಷ್ಟು ಹೊಲಸಾದರೇನು ? ಭುಜಗಳಲ್ಲಿ ಮುದ್ರೆಯಿದ್ದರೆ ಸಾಕು)**

**(ಪರುಸಮೊಕ್ಕಟೇಗದಾ ?)**

**೮. ಶ್ರೀಹರಿಪಾದ** : ಭಗವತ್ಪಾದಗಳ ಔನ್ನತ್ಯದಿಂದ ಮನಸೋತ ಭಕ್ತರು ವಿಶೇಷ ವಾಗಿ ಪಾದಸ್ಮರಣೆ ಮಾಡಿದ್ದಾರೆ. ಇದರ ಕೆಲವು ಮಾದರಿಗಳೆಂದರೆ,

ತ್ಯಾಗರಾಜರು :

**ಶ್ರೀರಾಮಪಾದಮಾ ನೀಕೃಪಚಾಲುನೇ . . . . .**
**ವಾರಿಜಭವ ಸನಕಸನಂದನ ವಾಸವಾದುಲೆಲ್ಲ ಪೂಜಿಂಚೇ**
**ದಾರಿನಿ ಶಿಲಯೈ ತಾಪಮು ತಾಳಕ ವಾರಮು ಕನ್ನೀರುರಾಲ್ಚಗ**
**ಶೂರ ಅಹಲ್ಯನು ಜೂಚಿ ಬ್ರೋಚಿತಿವಿ . . . . .**

(ಬ್ರಹ್ಮ ಸನಕಸನಂದನಾದಿಗಳೆಲ್ಲ ಪೂಜಿಸುವ ಶ್ರೀರಾಮನ ಪಾದಗಳೇ, ನಿನ್ನ ಕೃಪೆಯೇ ಸಾಕು. ಮಾರ್ಗ ಮಧ್ಯೆ ಶಿಲೆಯಾಗಿ ಕಣ್ಣೀರಿಡುತ್ತಿದ್ದ ಅಹಲ್ಯೆಯನ್ನು ಅದು ರಕ್ಷಿಸಿದೆ)

(ಶ್ರೀರಾಮಪಾದಮಾ)

ಅನ್ನಮಯ್ಯ :

**ಬ್ರಹ್ಮಗಡಿಗಿನ ಪಾದಮು ಬ್ರಹ್ಮಮು ತಾನೀ ಪಾದಮು**
**ಕಾಮಿನಿ ಪಾಪಮು ಗಡಿಗಿನ ಪಾದಮು**[೪೫]

(ಬ್ರಹ್ಮನಿಂದ ತೊಳೆಯಲ್ಪಟ್ಟ ಪರಬ್ರಹ್ಮವಾದ ಈ ಪಾದವು ಕಾಮಿನಿಯ ಪಾಪವನ್ನು ತೊಳೆದಿದೆ)

(ಬ್ರಹ್ಮಗಡಿಗಿನಪಾದಮು)

**ಈ ಪಾದಮೇ ಕದಾ ಇಲ ಎಲ್ಲ ಗೊಲಿಚಿನದಿ**[೪೬]

(ಈ ಪಾದವೇ ಅಲ್ಲವೆ (ವಾಮನ ರೂಪದಲ್ಲಿ) ಇಡೀ ಭೂಮಿಯನ್ನು ಅಳೆದುದು?)

(ಈ ಪಾದಮೇಕದಾ)

ವಾದಿರಾಜರು :

**ಅಜನು ತೊಳೆದು ಅರ್ಚಿಸುವ ಶ್ರೀಪಾದಕ್ಕೆ ಎಚ್ಚರಿಕೆಚ್ಚರಿಕೆ**
**. . . . . . . . . . . . . . . . . . . . . . . . . . .**
**ಶಿಲೆಯ ಸ್ತ್ರೀ ಮಾಡಿದ ಶೃಂಗಾರ ಪಾದಕ್ಕೆ ಎಚ್ಚರಿಕೆಚ್ಚರಿಕೆ**[೪೭]

(ಅಜನುತೊಳೆದು)

ತ್ಯಾಗರಾಜರು ಅನ್ನಮಯ್ಯ ಹಾಗೂ ವಾದಿರಾಜರ ಮೇಲಿನ ಸಾಲುಗಳಲ್ಲಿ ಶ್ರೀಹರಿ ಪಾದಗಳು ಬ್ರಹ್ಮನಿಂದ ಪೂಜಿಸಲ್ಪಟ್ಟುವೆಂದು, ಹೇಳುತ್ತಾ ಅಹಲ್ಯ ಶಾಪವಿಮೋಚನೆಯನ್ನು ಉಲ್ಲೇಖಿಸುವುದು ಗಮನಾರ್ಹ.

**೯. ಸತ್ಸಂಗ** : 'ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ'—ಎಂಬುದು ಪ್ರಸಿದ್ಧೋಕ್ತಿ. ಸಾಧು, ಸಜ್ಜನರು, ಉತ್ತಮರು ಎಂಬೆಲ್ಲವೂ ಶ್ರೇಷ್ಠಭಕ್ತರೆಂಬುದಕ್ಕೆ ಪರ್ಯಾಯ ಪದಗಳೇ. ಎಲ್ಲ ಭಕ್ತರೂ ತಮಗಿಂತ ಮೇಲ್ಮಟ್ಟದಲ್ಲಿದ್ದ ಹಿರಿಯ ಭಕ್ತರ ಸಂಗಕ್ಕಾಗಿ, ಅವರ ಸೇವೆಗಾಗಿ ಹಂಬಲಿಸಿರುವುದು ಕಾಣಬರುತ್ತದೆ. ಅಂತಹ ಹಿರಿಯ ಭಕ್ತರನ್ನು ಪೂಜಿಸುವುದು, ಪಾದ ದರುಶನ ಮಾಡುವುದು, ಸ್ನಾನಾದಿ ಸತ್ಕಾರ್ಯಗಳೆಂದೇ ಭಾವಿಸಿದ್ದಾರೆ. ಅವರ ಸೂಳ್ನುಡಿಗಳು ವೇದವಾಕ್ಯಕ್ಕೆ ಸಮನಾದವು. ಕೆಲವೊಮ್ಮೆ

ಭಕ್ತರಿಗೆ ಪರಮ ಭಾಗವತರ ಸಂಗಕ್ಕಿಂತ ಮಿಗಿಲಾದುದು ಯಾವುದೂ ಇಲ್ಲ. ಆದ್ದರಿಂದ ಅವರು ಬ್ರಹ್ಮಪದವಿ, ವಿಷ್ಣುಪದವಿ, ರುದ್ರಪದವಿಗಳನ್ನಾಗಲೀ ಅಥವಾ ಇನ್ನಾವುದೇ ಪದವಿಯಾಗಲೀ ಅಥವಾ ಲೌಕಿಕ ವಸ್ತುವಾಗಲೀ ಬೇಡವೆನ್ನುತ್ತಾರೆ. ಸತ್ಸಂಗದ ಅಗತ್ಯ ಮತ್ತು ಔನ್ನತ್ಯಗಳನ್ನು ಭಕ್ತರು ಹೀಗೆ ಹಾಡಿದ್ದಾರೆ.

ತ್ಯಾಗರಾಜರು :

**ಭಕ್ತುಲ ಜತಗೂಡಿನವಾರಿದಿ,**
**ನಿರ್ಮಲ ಮತುಲ ಸಂತೋಷಮೆಂಚಿನವಾರಿದಿ**
**ಸುಧಾಪೂರ ಚಿತ್ತುಲ ಸೇವಕೋರಿನವಾರಿದಿ**
**ಸುಜನುಲ ಪೂಜಿಂಚಿನವಾರಿದಿ**
**ಇಂತಭಾಗ್ಯಮನಿ ನಿರ್ಣಯಿಂಪತರಮಾ ?**

(ಶುದ್ಧಚಿತ್ತರಾದ, ಅಮೃತ ಹೃದಯರಾದ, ಸುಜನರ ಜತೆಗೂಡಿದವರ, ಅವರ ಸಂತೋಷವನ್ನು ತಿಳಿದ, ಸ್ವಇಚ್ಛೆಯಿಂದ ಅವರನ್ನು ಪೂಜಿಸಿದವರ ಭಾಗ್ಯ ಇಷ್ಟೆಂದು ನಿರ್ಣಯಿಸಲು ಸಾಧ್ಯವೇ ?)

(ಇಂತಭಾಗ್ಯಮನಿ)

ಶಂಕರರು :

**ಸತ್ಸಂಗತ್ವೇ ನಿಸ್ಸಂಗತ್ವ**[೪೮]

(ಸತ್ಸಂಗದಿಂದ ನಿಸ್ಸಂಗವುಂಟಾಗುತ್ತದೆ. ಇಲ್ಲಿ ನಿಸ್ಸಂಗವೆಂದರೆ ಕ್ಷಣಿಕ ಪ್ರಪಂಚಕ್ಕೆ ಅಂಟಿಕೊಳ್ಳದಂತಿರುವುದು)

**(ಭಜಗೋವಿಂದಂ)**

ವಿಜಯದಾಸರು :

**ದುರುಳರ ಸಂಗವ ದೂರ ಓಡಿಸೋ**[೪೯]

**(ದಾಸದಾಸದಾಸರ)**

ಪುರಂದರರು :

**ಸಾಧು ಸಜ್ಜನರೊಳಗಿರುವುದೇ ಹಬ್ಬ**
**ಇರಬೇಕು ಹರಿದಾಸ ಸಂಗ**[೫೦]

**(ಸಾಧುಸಜ್ಜನ)**

ಪ್ರಸನ್ನವೆಂಕಟರಾಯರು :

**ಸಂಗವಾಗಲಿ ಸಾಧುಸಂಗವಾಗಲಿ**[೫೧]

**(ಸಂಗವಾಗಲಿ)**

ಜಗನ್ನಾಥದಾಸರು :

**ರಂಗ ನಿನ್ನ ಕೊಂಡಾಡುವ ಮಂಗಳಾತ್ಮರ ಸಂಗಸುಖವಿತ್ತು ಕಾಯೋ**[೫೨]

(ರಂಗ ನಿನ್ನ)

ದೇವರ ದಾಸಿಮಯ್ಯ :

**ನಿಮ್ಮ ಶರಣರ ಸೂಳ್ನುಡಿಯ ಒಂದರೆಘಳಿಗೆ ಇತ್ತಡೆ**
**ನಿನ್ನನಿತ್ತೆ ಕಾಣಾ, ರಾಮನಾಥಾ**[೫೩]

(ಕರಿಯನಿತ್ತೊಡೆ)

ಬಸವಣ್ಣನವರು :

**ಬ್ರಹ್ಮ ಪದವಿಯನೊಲ್ಲೆ ವಿಷ್ಣು ಪದವಿಯನೊಲ್ಲೆ**
**ರುದ್ರ ಪದವಿಯನೊಲ್ಲೆ, ಮತ್ತಾವ ಪದವಿಯನೊಲ್ಲೆನಯ್ಯ !**
**ಕೂಡಲ ಸಂಗಮದೇವಾ ನಿಮ್ಮ ಸದ್ಭಕ್ತರ ಪಾದವನರಿದಿಪ್ಪ**
**ಮಹಾಪದವಿಯನೆ ಕರುಣಿಸಯ್ಯ**[೫೪]

(ಬ್ರಹ್ಮಪದವಿಯನೊಲ್ಲೆ)

**ಆದ್ಯರ ವಚನ ಪರುಷಕಂಡಯ್ಯ**[೫೫]

(ಆದ್ಯರವಚನ)

ಅಕ್ಕಮಹಾದೇವಿ :

**ಅಯ್ಯ ನಿಮ್ಮ ಅನುಭಾವಿಗಳ ಸಂಗದಿಂದ ಎನ್ನ ತನು ಶುದ್ಧವಾಯಿತು**
**ಅಯ್ಯ ನಿಮ್ಮ ಅನುಭಾವಿಗಳ ಸಂಗದಿಂದ ಎನ್ನ ಮನ ಶುದ್ಧವಾಯಿತು**
**ಅಯ್ಯ ನಿಮ್ಮ ಅನುಭಾವಿಗಳು ಬರೆದೊರೆದು ಆಗುಮಾಡಿದ ಕಾರಣ**
**ಚನ್ನಮಲ್ಲಿಕಾರ್ಜುನ ನಿಮಗಾನು ತೊಡಿಗೆಯಾದೆನು**[೫೬]

(ಅಯ್ಯ)

ಅನ್ನಮಯ್ಯ :

**ಪರಮಭಾಗವತ ಪಾದಾಂಬುಜಮುಲ ದರುಶನಮೇ ನಾ ಸ್ನಾನಮು**[೫೭]
(ಪರಮಭಾಗವತರ ಪಾದಾಬ್ಜಗಳ ದರ್ಶನವೇ ನನ್ನ ಸ್ನಾನ)

(ನದುಲೊಲ್ಲವುನಾಸ್ನಾನಮು)

**ಇನ್ನಿ ಜನ್ಮಮುಲೇಟಿಕಿ ಹರಿದಾಸುಲುನ್ನವೂರ ದಾನುಂಡಿನಚಾಲು . . . .**
**ಈ ವಿಭುದಾಸುಲ ಹಿತುಲ ಪಾದಧೂಳಿ ಪಾವನಮ್ಮೆಸೋಕಿ ಬ್ರತಿಕಿನಚಾಲು**[೫೮]
(ಇಷ್ಟು ಜನುಮಗಳೇಕೆ ? ಹರಿದಾಸರಿದ್ದ ಊರಿನಲ್ಲಿ ತಾನಿದ್ದರೆ ಸಾಕು.
ಈ ಹರಿದಾಸರಿಗೆ ಹಿತರಾದವರ ಪಾದಧೂಳಿ ಮೈಸೋಕಿ ಬದುಕಿದರೂ ಸಾಕು)

(ಇನ್ನಿ ಜನ್ಮಮು)

**೧೦. ದೈವ ಸಾಕ್ಷಾತ್ಕಾರ** : ದೈವ ಸಾಕ್ಷಾತ್ಕಾರವಾಗಿ, ಆ ಕ್ಷಣದಲ್ಲಿ ಭಕ್ತರು ತಾವು ಕಂಡು ಆನಂದಿಸಿದ ದೇವರ ವರ್ಣನೆಯನ್ನು ಬಹುತೇಕ ಭಕ್ತರು ಮಾಡುತ್ತಾರೆ.

ತ್ಯಾಗರಾಜರು :

**ಕನುಗೊಂಟಿನಿ ಶ್ರೀರಾಮುನಿ ನೇಡು**
(ಶ್ರೀರಾಮನನ್ನು ಇಂದು ಕಂಡೆನು) (ಕನುಗೊಂಟಿನಿ)

**ಗಿರಿಪೈ ನೆಲಕೊನ್ನ ರಾಮುನಿ ಗುರಿತಪ್ಪಕ ಕಂಟಿ**

(ಬೆಟ್ಟದ ಮೇಲೆ ನೆಲೆಸಿರುವ ರಾಮನನ್ನು ನಿಜವಾಗಿ ದರ್ಶಿಸಿದೆ)

**(ಗಿರಿಪೈ)**

ಅನ್ನಮಯ್ಯ :

**ಇಪ್ಪುಡಿಟು ಕಲಗಂಟಿ ಎಲ್ಲ ಲೋಕಮುಲಕು**
**ನಪ್ಪುಡಗು ತಿರುವೆಂಕಟಾದ್ರೀಶುಕಂಟಿ**[೫೯]

(ಎಲ್ಲ ಲೋಕಗಳಿಗೂ ತಂದೆಯಾದ ತಿರುವೆಂಕಟಾಧೀಶನನ್ನು ಇದೀಗ ಕಂಡೆ)

**(ಇಪ್ಪುಡಿಟು ಕಲಗಂಟಿ)**

ಭದ್ರಾಚಲ ರಾಮದಾಸರು :

**ಕಂಟಿ ಮಾ ರಾಮುಲನು ಕನುಗೊಂಟಿನೇನು**
**ಕಂಟಿ ನೇಡು ಭಕ್ತಗಣಮುಲಬ್ರೋಚು ಮಾ**
**ಯಿಂಟಿ ವೇಲುಪು ಭದ್ರಗಿರಿನುನ್ನವಾನಿ ||**[೬೦]

(ಭಕ್ತ ಸಮೂಹವನ್ನು ಕಾಪಾಡುವ, ನಮ್ಮ ಮನೆದೇವರಾದ, ಭದ್ರಗಿರಿಯಲ್ಲಿರುವ ರಾಮನನ್ನು ಇಂದು ದರ್ಶಿಸಿದೆ)

**(ಕಂಟಿ ಮಾ ರಾಮುಲನು)**

**ದರಿಶನಮಾಯೆನು ಶ್ರೀರಾಮುಲವಾರಿ**[೬೧]

(ಶ್ರೀರಾಮನ ದರ್ಶನವಾಯಿತು)

**(ದರಿಶನಮಾಯೆನು)**

ಪುರಂದರರು :

**ಕಂಡೆ ಕಂಡೆ ಕಂಡೆನಯ್ಯ ಕಂಗಳ ದಣಿಯುವ ತನಕ**[೬೨]

**(ಕಂಡೆ ಕಂಡೆ)**

ಸುರಪುರದ ಆನಂದದಾಸರು :

**ಕಂಡು ಧನ್ಯನಾದೆ ಶ್ರೀ ಉಡುಪಿ ಕೃಷ್ಣನ ಕಣ್ಣಾರೆ ನಾ**[೬೩]

**(ಕಂಡು ಧನ್ಯನಾದೆ)**

**೧೧. ಜೀವನದ ಸದುಪಯೋಗ** : ಭಕ್ತಿಸಾಧನೆಯ ದೃಷ್ಟಿಯಿಂದ ನೋಡಿದಾಗ ಮನುಷ್ಯನ ಜೀವಿತಾವಧಿಯು ಅತ್ಯಲ್ಪಕಾಲದ್ದು. ಏಕೆಂದರೆ ಬದುಕಿನ ಮೂಲ ಅಗತ್ಯಗಳನ್ನೆಲ್ಲ ಪೂರೈಸಿಕೊಳ್ಳಲು ಹೋರಾಡುವಲ್ಲಿ ಹಾಗೂ ಪ್ರತಿದಿನ ವಿಶ್ರಾಂತಿ ತೆಗೆದುಕೊಳ್ಳುವಲ್ಲೇ ಜೀವಿತದ ಬಹುಕಾಲ ಕಳೆದುಹೋಗುತ್ತದೆ. ಇನ್ನು ಭಕ್ತಿ ಸಾಧನೆ ಮಾಡಲು ಉಳಿಯುವ ಸಮಯವಂತೂ ಬಹಳ ಕಡಿಮೆ. ಆದ್ದರಿಂದ ಜೀವನದ ಸಾರ್ಥಕತೆಯನ್ನು ಕಾಣಬೇಕಾದರೆ, ಜೀವಿತಾವಧಿಯನ್ನು ಸದುಪಯೋಗಪಡಿಸಿಕೊಳ್ಳಬೇಕು. ಬದುಕಿನಲ್ಲಿ ದಿನಗಳು ಹೇಗೆ ಕಳೆದುಹೋಗುತ್ತದೆಂಬುದನ್ನು ಸಂತರು ಪ್ರಸ್ತಾಪಿ

ಸುತ್ತಾ ಹೊತ್ತುಗಳೆಯದೆ ಭಗವತ್ಪರವಾಗಿ ಬದುಕಬೇಕೆಂದು ಬೋಧಿಸುತ್ತಾರೆ. ಅಂತೆಯೇ ದೇಹದ ಅಂಗಗಳ ಸಾರ್ಥಕ ಹೇಗೆ ಎಂಬುದನ್ನೂ ಅವರು ಮನದಟ್ಟು ಮಾಡುತ್ತಾರೆ.

ತ್ಯಾಗರಾಜರು 'ಪ್ರೊದ್ದು ಪೊಯ್ಯನೆ' ಕೃತಿಯಲ್ಲಿ ಹೀಗೆ ಹೇಳುತ್ತಾರೆ. 'ಬದುಕಿನ ಕೆಲವುಕಾಲ ನಿದ್ರೆಯಲ್ಲಿ, ವಿಷಯಸುಖಗಳಲ್ಲಿ, ಸಂಪತ್ತು ಕೈಜಾರಿದ ದುಃಖದಲ್ಲಿ, ಕಾಡುಹರಟೆಯಲ್ಲಿ, ನರಸ್ತುತಿಯಲ್ಲಿ ಹಾಗೂ ವೃದ್ಧಾಪ್ಯದಲ್ಲಿ ಕಳೆದುಹೋಗುತ್ತದೆ. ಅಷ್ಟಲ್ಲದೆ ಕಾಮ್ಯಫಲಗಳಿಗಾಗಿ ಯಜ್ಞಾದಿಗಳನ್ನು ಆಚರಿಸುವಲ್ಲಿಯೂ ಕೆಲವು ಕಾಲ ಕೈತಪ್ಪಿಹೋಗುತ್ತದೆ. ಆದ್ದರಿಂದ ಶ್ರೀರಾಮನನ್ನು ಮನಸಾರ ಭಜಿಸು' ಎನ್ನುತ್ತಾರೆ.

ಆಚಾರ್ಯ ಶಂಕರರು ಚರ್ಪಟ ಪಂಜರಿಕಾ ಶ್ಲೋಕದಲ್ಲಿ 'ಬಾಲ್ಯವು ಕ್ರೀಡಾಸಕ್ತಿಯಲ್ಲಿ, ತಾರುಣ್ಯವು ತರುಣೀ ಆಸಕ್ತಿಯಲ್ಲಿ, ವೃದ್ಧಾಪ್ಯವು ಚಿಂತೆಯಲ್ಲಿ ಕಳೆದು ಹೋಗುತ್ತದೆ'. ಆದ್ದರಿಂದ 'ಎಲೈ ಮೂಢಮತಿಯೇ, ಗೋವಿಂದನನ್ನು ಭಜಿಸು' ಎಂದಿದ್ದಾರೆ.

ತ್ಯಾಗರಾಜರು ಹಾಗೂ ಶಂಕರರು ಸ್ವಸಂಬೋಧನಾ ರೂಪದಲ್ಲಿ ಮೇಲಿನಂತೆ ಹೇಳಿದರೆ ರಾಮದಾಸರು ಈ ಜೀವಕ್ಕೆ ಸುಖವೆಲ್ಲೂ ಇಲ್ಲವಲ್ಲ ಎಂದು ವಿಷಾದಿಸುವಂತೆ ಇದೇ ಅಂಶವನ್ನು ತಿಳಿಸುತ್ತಾರೆ.

> **ಪೆರುಗುಚು ಬಾಲ್ಯಾವಸ್ಥಲ ಕೊನ್ನಿದಿನಮುಲು**
> **ಪರುಗುಲಾಡುಚುಂಟಿಗಾ ಕೊನ್ನಾಳ್ಳು**
> **ಲೇ ತರುಣುಲತೋ ಕೂಡಿ ಮದಮತ್ಸರಂಬುಲು**
> **ತನ್ನೆರುಗಲೇನೈತಿಗದಾ ಕೊನ್ನಾಳ್ಳು**
> **ತರುವಾತ ದಾರಪುತ್ರಾದಿ ಮೋಹಮುಲತಗಿಲಿ ವರ್ತಿಂಪಗದಾ . . . .**[೬೪]

(ಬಾಲ್ಯಾವಸ್ಥೆಯಲ್ಲಿ ಬೆಳೆಯುತ್ತಾ ಕೆಲದಿನ, ಸುತ್ತಾಡುತ್ತಾ ಕೆಲದಿನ, ಯುವತಿಯರೊಡಗೂಡಿ ಕೆಲದಿನ, ಮದಮತ್ಸರಗಳಿಂದ ತನ್ನನ್ನು ಅರಿಯಲಾಗದೆ ಕೆಲದಿನ, ಮತ್ತೆ ಹೆಂಡತಿ ಮಕ್ಕಳ ಮೋಹದಲ್ಲಿ ಮುಳುಗಿ ವರ್ತಿಸಲಿಲ್ಲವೇ)

(ಅಯ್ಯಯ್ಯೋ)

ಒಟ್ಟಾರೆ ಈ ಎಲ್ಲ ಭಕ್ತರ ಪ್ರಕಾರ ವ್ಯರ್ಥವಾಗಿ ಕಳೆದುಹೋಗುವ ಜೀವಿತದ ದಿನಗಳ ನಡುವೆ ಭಗವದ್ಭಜನೆ ಮಾಡಬೇಕೆಂಬುದು ಅಲ್ಲದೆ ಮಾನವ ಜನ್ಮದ ಸದುಪಯೋಗವೆಂದರೆ, ದೇಹಾಂಗಗಳನ್ನು ಭಗವತ್ಪರವಾಗಿಸುವುದು. ಅಲಭ್ಯವಾದ ಮಾನವ ಜನುಮದಲ್ಲಿ ಕಣ್ಣು, ಕೈ, ಕಾಲು, ನಾಲಿಗೆ ಮೊದಲಾದ ಅವಯವಗಳು ಸದಾಕಾಲವೂ ಭಗವಂತನ ಕಾರ್ಯಗಳಲ್ಲಿ ತೊಡಗಬೇಕೆಂಬುದು ಎಲ್ಲ ಭಕ್ತರು ಹೇಳುವ ಕಿವಿಮಾತು. ಇದನ್ನು ಅವರು ಪ್ರತಿಪಾದಿಸುವ ರೀತಿ ಹೀಗೆ.

ತ್ಯಾಗರಾಜರು :

ನೋರೆಪ್ಪುಡು ನೀ ಪೇರೇ ಪಲ್ಕನಿ
(ಬಾಯಿ ಸದಾಕಾಲವೂ ನಿನ್ನ ನಾಮವನ್ನೇ ಪಠಿಸಲಿ)

(ನಾರಾಯಣಹರಿ)

ನಾಚೂಪುಲು ಮೀ ನಾಜೂಕುತನಮುನೇ ಜೂಡನಿ
(ನನ್ನ ನೋಟವು ನಿಮ್ಮ ನಾಜೂಕುತನವನ್ನೇ ನೋಡಲಿ)

(ನಾರಾಯಣಹರಿ)

ವಿರುಲಚೇ ಪೂಜಿಂಚನಿ ಕರಮುಲೇಲೆ ?
(ಹೂಗಳಿಂದ ಪೂಜಿಸದ ಕರಗಳೇಕೆ ?)

(ಎನ್ನಗ ಮನಸುಕು ರಾನಿ)

ಅಲ್ಲದೆ ತ್ಯಾಗರಾಜರು 'ಎನ್ನಗ ಮನಸುಕು ರಾನಿ' ಎಂಬ ರಚನೆಯಲ್ಲಿ ಶ್ರೀಹರಿಯನ್ನು ನೋಡದ ಕಣ್ಣಗಳೇಕೆ ? ಶ್ರೀಹರಿಯನ್ನು ಅಪ್ಪಿಕೊಳ್ಳದ ಈ ದೇಹವೇಕೆ ? ಶ್ರೀಹರಿ ಪೂಜೆಮಾಡದ ಕರಗಳೇಕೆ ? ಶ್ರೀಹರಿಯನ್ನು ಹೊಗಳದ ನಾಲಿಗೆ ಏಕೆ ? ಎಂದೆನ್ನುತ್ತಾ ಶರೀರದ ವಿವಿಧ ಅವಯವಗಳ ಪ್ರಯೋಜನವನ್ನು ಪುನಃಪುನಃ ಸ್ಪಷ್ಟಪಡಿಸಿದ್ದಾರೆ. ಪುರಂದರರು ಕ್ರಿಮಿ ಕೀಟವಾಗಿ, ಪ್ರಾಣಿಯಾಗಿರುವಾಗ ಹರಿಸ್ಮರಣೆ ಸಾಧ್ಯವಿಲ್ಲೆಂದೂ, ನರನಾಗಿರುವಾಗ ಹರಿನಾಮಸ್ಮರಣೆ ಮಾಡಬೇಕೆಂದೂ ನುಡಿಯುತ್ತಾರೆ.

ಕ್ರಿಮಿಕೀಟನಾಗಿ ಹುಟ್ಟಿದಂದು ಹರಿಶರಣೆನಲುಂಟೆ ?
ಹರಿಹರಿಣನಾಗಿ ಹುಟ್ಟಿದಂದು ಹರಿಶರಣೆನಲುಂಟೆ ?
ಕತ್ತೆ ಕರಡಿಯಾಗಿ ಹುಟ್ಟಿದಂದು ಹರಿಶರಣೆನಲುಂಟೆ ?
ಹಂದಿ ಶುನಕನಾಗಿ ಹುಟ್ಟಿದಂದು ಹರಿಶರಣೆನಲುಂಟೆ ?
ಮರೆತೀಯೇ ಮಾನವ ನಿನ್ನ ಹಿಂದಿನ ಭವಗಳ
ನೊಂದು ಮನುಷದೇಹ ಬಂದಿತೋ ನಿನಗೀಗ
ಬೇಗ ನೆನೆಯೆಲೋ ಪುರಂದರ ವಿಠಲನ

ನರನಾದ ಮೇಲೆ ಹರಿನಾಮ ಜಿಹ್ವೆಯೊಳಿರಬೇಕು[೬೫]

(ನರನಾದ ಮೇಲೆ)

ಹರಿಯನು ನೆನೆಯದ ನರಜನ್ಮವೇಕೆ ?
ಹರಿಯ ಕೊಂಡಾಡದ ನಾಲಿಗೆ ಏಕೆ ?[೬೬]

(ಹರಿಯನು ನೆನೆಯದ)

ಕಣ್ಣುಕೈಕಾಲ್‌ಕಿವಿ ನಾಲಿಗೆ ಇರಲಿಕ್ಕೆ
ಮಣ್ಣುಮುಕ್ಕಿ ಮರುಳಾಗುವರೆ ?

**ಹೆಣ್ಣು ಮಣ್ಣಿಗಾಗಿ ಹರಿಯ ನಾಮಾಮೃತ**
**ಉಣ್ಣದೆ ಉಪವಾಸ ಇರುವರೆ ?**[೬೭]

(ಮಾನವಜನ್ಮ ದೊಡ್ಡದು)

**ಹರಿಕಥಾ ಶ್ರವಣ ಮಾಡೋ . . . .**[೬೮]

(ಹರಿಕಥಾಶ್ರವಣ)

ಅನ್ನಮಯ್ಯ :

**ನಾಲುಕಪ್ಪೆ ಶ್ರೀಹರಿನಾಮಮಿಟ್ಟೇ ವುಂಡಗಾನು**
**ಜೋಲಿತೋ ಮರಚಿನ ನೀಚುಡೇ ವೆರ್ರಿವಾಡು**[೬೯]

(ನಾಲಿಗೆಯ ಮೇಲೆ ಶ್ರೀಹರಿನಾಮವಿರಲು ಅದನ್ನು ಮರೆತ ನೀಚನೇ ಹುಚ್ಚ)

(ವೆರ್ರಿವಾಡು ವೆರ್ರಿವಾಡು)

ಶ್ರೀಹರಿ ನಾಮವನ್ನು ಮರೆತಾತನೇ ಹುಚ್ಚನೆಂದಿದ್ದಾರೆ ಅನ್ನಮಯ್ಯ. ಮತ್ತೊಂದು ರಚನೆಯಲ್ಲಿ ಅವರು ವೆಂಕಟೇಶ್ವರನನ್ನು ಸ್ತುತಿಸದ ನಾಲಿಗೆಯನ್ನು ಕಿರುನಾಲಿಗೆಗೆ ಹೋಲಿಸುತ್ತಾರೆ. ಕಿರುನಾಲಿಗೆ ಹೆಸರಿಗಷ್ಟೇ ನಾಲಿಗೆಯಾಗಿದೆ. ಇದು ನಾಲಿಗೆ ನಿರ್ವಹಿಸುವ ಯಾವುದೇ ಕಾರ್ಯವನ್ನೂ ನಿರ್ವಹಿಸಲಾಗದು. ಅವರ ಪ್ರಕಾರ ಗಾಳಿ ಮಾತುಗಳನ್ನು ಕೇಳುವಲ್ಲಿ ತೊಡಗಿರುವ ಕಿವಿಗಳು ರಾಟೆಕಿವಿಗಳು. ಇಂಥ ಕಿವಿಗಳನ್ನು ಹೊಂದಿದಾತ ಕಿವಿಯಿದ್ದರೂ ಕಿವುಡ. ದೇವರ ಸಾಕಾರ ರೂಪ ನೋಡದ ಕಣ್ಣುಗಳು ವ್ಯರ್ಥ ಕಣ್ಣುಗಳು. ದೇವರ ಸನ್ನಿಧಿಗೆ ನಡೆಯದ ಕಾಲ್ಗಳು ಮರದ ಕಾಲುಗಳು. ಅರ್ಚಿಸದ ಕೈಗಳು ಬೆಂಡು ಕೈಗಳಾಗಿವೆ.

**ನಿನ್ನು ಜೂಡನಿ ಕನ್ನುಲು ನೀಚುವಲ ಕನ್ನುಲು**
**ಚಿನ್ನಿ ನೀ ಕಥಲು ವಿನನಿಚೆವುಲು ರಾಟ್ನಪುಚೆವುಲು**
**ವುನ್ನತಿ ನೀ ಕಡಕು ರಾಕುನ್ನ ಕಾಳ್ಳು ಮರಗಾಳ್ಳು**
**ಸನ್ನುತಿ ಜೇಯನಿ ಜಿಹ್ವ ಸರಿ ಸುಪಜಿಹ್ವ**[೭೦]

(ಅಟುಗಾನ ಮೋಸಪೋಕ)

ಇದೇ ರೀತಿ ಪೋತನರು ಹೀಗೆನ್ನುತ್ತಾರೆ. 'ದೈವ ಸಮರ್ಪಿತವಾಗದ ಶರೀರ ಕೇವಲ ಗಾಳಿಯಿಂದ ತುಂಬಿದ ಚರ್ಮದ ಚೀಲ. ವೈಕುಂಠವನ್ನು ಸ್ತುತಿಸದ ಬಾಯಿ ಶಬ್ದ ಮಾಡದ ಡೋಲು, ಅರ್ಚಿಸದ ಕೈಗಳು ಮರದ ಕೊಂಬೆಗಳು, ದರ್ಶಿಸದ ಕಣ್ಣುಗಳು ಕೇವಲ ಎರಡು ರಂಧ್ರಗಳು. ದೈವಸ್ಮರಣೆ ಮಾಡದ ಜನ್ಮ ನೀರ ಮೇಲಿನ ಗುಳ್ಳೆಯಂತೆ. ಆದ್ದರಿಂದ ವಿಷ್ಣು ಭಕ್ತಿ ಇಲ್ಲದ ಪಂಡಿತ ಎರಡು ಕಾಲಿನ ಮೃಗವಷ್ಟೆ.'

**ಕಂಜಾಕ್ಷುನಕು ಗಾನಿ ಕಾಯಂಬು ಕಾಯಮೇ**
**ಪವನ ಕುಂಭಿತ ಚರ್ಮ ಭಸ್ತ್ರಿಗಾಕ**
**ವೈಕುಂಠ ಪೊಗಡನಿ ವಕ್ತ್ರಂಬು ವಕ್ತ್ರಮೇ**
**ಢಮಢಮ ಧ್ವನಿತೋಡ ಢಕ್ಕಗಾಕ**

**ಹರಿಪೂಜನಮುಲೇನಿ ಹಸ್ತಂಬು ಹಸ್ತಮೇ**
**ತರುಶಾಖನಿರ್ಮಿತ ದರ್ವಿ ಗಾಕ**
**ಕಮಲೇಶು ಜೂಡನಿ ಕನ್ನುಲು ಕನ್ನುಲೇ**
**ತನುಕುಡ್ಯಜಾಲ ರಂಧ್ರಮುಲುಗಾಕ**
**ಚಕ್ರಚಿಂತಲೇನಿ ಜನ್ಮಂಬು ಜನ್ಮಮೇ**
**ತರಳ ಸಲಿಲ ಬುದ್ಬುದಂಬು ಗಾಕ**
**ವಿಷ್ಣು ಭಕ್ತಿ ಲೇನಿ ವಿಬುಧುಂಡು ವಿಬುಧುಡೇ**
**ಪಾದಯುಗಮುತೋಡಿ ಪಶುವುಗಾಕ**[೧]

ಕುಲಶೇಖರ ಆಳ್ವಾರರು :

ಕೇಶವನನ್ನು ಕೀರ್ತಿಸುವಂತೆ ನಾಲಗೆಗೆ, ಮುರರಿಪುವನ್ನು ಭಜಿಸುವಂತೆ ಮನಸ್ಸಿಗೆ, ಶ್ರೀಧರನನ್ನು ಅರ್ಚಿಸುವಂತೆ ಕರಗಳಿಗೆ, ಅಚ್ಯುತನ ಕಥೆಯನ್ನು ಕೇಳುವಂತೆ ಕಿವಿಗಳಿಗೆ, ಕೃಷ್ಣನನ್ನು ಕಾಣುವಂತೆ ಕಣ್ಣುಗಳಿಗೆ, ಹರಿಯ ಆಲಯಕ್ಕೆ ಹೋಗುವಂತೆ ಕಾಲ್ಗಳಿಗೆ, ಮುಕುಂದನ ಪಾದತುಲಸಿಯನ್ನು ಆಘ್ರಾಣಿಸುವಂತೆ ಮೂಗಿಗೆ, ಅಧೋಕ್ಷಜನಿಗೆ ನಮಸ್ಕರಿಸುವಂತೆ ತಲೆಗೆ ಆಜ್ಞಾಪಿಸುತ್ತಾರೆ.

**ಜಿಹ್ವೇ ಕೀರ್ತಯ ಕೇಶವಂ ಮುರರಿಪುಂ ಚೇತೋ ಭಜ ಶ್ರೀಧರಂ**
**ಪಾಣಿದ್ವಂದ್ವ ಸಮರ್ಚಯಾಚ್ಯುತಕಥಾಃ ಶೋತ್ರದ್ವಯ ತ್ವಂ ಶೃಣು**
**ಕೃಷ್ಣಂ ಲೋಕಯ ಲೋಚನದ್ವಯ ಹರೇರ್ಗಚ್ಛಾಂಘ್ರಿಯುಗ್ಮಾಲಯಂ**
**ಜಿಘ್ರ ಘ್ರಾಣ ಮುಕುಂದಪಾದ ತುಲಸೀಂ ಮೂರ್ಧನ್ನಮಾಧೋಕ್ಷಜಂ**[೨]

ಭಕ್ತರೆಂದೂ ಸಮಕಾಲೀನ ದೃಷ್ಟಿಯಿಂದಷ್ಟೇ ಉಪದೇಶಿಸಿದ್ದಾರೆನ್ನಲಾಗದು. ಅವರ ಕೃತಿಗಳ ಸಮಗ್ರ ಅಧ್ಯಯನ ಮಾಡಿದಾಗ ಅವು ಸಾರ್ವಕಾಲಿಕವಾದ ಹಿತೋಪದೇಶಗಳನ್ನು ಒಳಗೊಂಡಿವೆಯೆಂಬುದರ ಅರಿವು ನಮಗುಂಟಾಗಲು ಸಾಧ್ಯವಾದೀತು. ಪ್ರಸ್ತುತ ತ್ಯಾಗರಾಜಾದಿಗಳೆಲ್ಲರೂ ದೇಹಾಂಗಗಳಿಗೆ ಸೂಕ್ತವಾದ ಕ್ರಿಯೆ ಯಾವುದೆಂದು ಸೂಚಿಸಿರುವುದೇನೋ ಸರಿ. ಆದರೆ ಯಾಂತ್ರಿಕ ಜೀವನದ ಇಂದಿನ ಯುಗದಲ್ಲಿ ಇದರ ಸಾಧನೆ ಎಷ್ಟರಮಟ್ಟಿಗೆ ಸಾಧ್ಯವಾದೀತು ಎಂದು ಒಮ್ಮೆ ಚಿಂತೆಯಾಗಬಹುದು. ದೂರಾಲೋಚನೆಯುಳ್ಳ ನಮ್ಮ ಭಕ್ತರು ಇದಕ್ಕೂ ಒಂದು ಉಪಾಯವನ್ನು ಸೂಚಿಸದೆ ಇಲ್ಲ. ಅಧ್ಯಾತ್ಮ ಜೀವನ ನಡೆಸಬೇಕೆಂದು ಮಾನಸಿಕವಾಗಿ ಇಷ್ಟವಿದ್ದರೂ ವಿವಿಧ ರೀತಿಯ ಕಾರ್ಯ ಒತ್ತಡದಿಂದಾಗಿ ಕುಳಿತು ಭಗವನ್ನಾಮಸ್ಮರಣೆ ಮಾಡಲು ಅಸಮರ್ಥರಾದ ಇಂದಿನ ಮಂದಿಗೂ ಅವರು ಮಾರ್ಗವೊಂದನ್ನು ತೋರುತ್ತಾರೆ. ಈ ಪ್ರಕಾರ ದೈವಧ್ಯಾನವನ್ನು ಕಡ್ಡಾಯವಾಗಿ ಕುಳಿತೇ ಮಾಡಬೇಕಾದ್ದಿಲ್ಲ. ದೈವಧ್ಯಾನಕ್ಕೆ ನಿಶ್ಚಿತ ವೇಳೆಯ ಅಗತ್ಯವಿಲ್ಲ. ಮನುಷ್ಯ ಯಾವುದೇ ಕೆಲಸ ಮಾಡುವಾಗಲೂ, ಕಡೆಗೆ ಭೋಗಿಸುವಾಗಲೂ ತನ್ನ ಮನಸ್ಸನ್ನು ದೈವದೆಡೆ ಹರಿಸಿ ನಾಮಸ್ಮರಣೆ ಮಾಡಬಹುದೆಂಬುದು ಅವರ ನುಡಿ. ತ್ಯಾಗರಾಜರಾದರೋ ಕಾರ್ಯತಃ ಇದನ್ನು ನಿರೂಪಿಸಿರುವುದಕ್ಕೆ

ಅವರ ಸಾಹಿತ್ಯದಲ್ಲೇ ಉಲ್ಲೇಖವುಂಟು. ಅವರು ಭೋಗದ ವೇಳೆಯಲ್ಲೂ ತಮ್ಮ ಬುದ್ಧಿಯನ್ನು ರಾಮನೆಡೆಗೇ ಹರಿಸಿ ನಂಬಿದ್ದರಿಂದ ತಮ್ಮನ್ನು ಮೋಸಗೊಳಿಸುವುದು ತರವಲ್ಲ ಎಂಬಂತೆ ಈ ಮೂಲಕ ದೇವರೊಂದಿಗೆ ಹಕ್ಕು ಸಾಧನೆಯನ್ನು ಮಾಡಿರುವುದೂ ಕಾಣಬರುತ್ತದೆ. ಅವರು ಹೀಗೆ ಹೇಳುತ್ತಾರೆ.

ಭೋಗಮುಲಂದು ವೇಳ ಬುದ್ಧಿ ನೀಯಡನುಂಚಿ . . . .
. . . . . ನಿನ್ನು
ನಮ್ಮಿನವಾರಿನಿ ಮರಚೇದಿ ನ್ಯಾಯಮಾ ?

(ಭೋಗವನ್ನು ಅನುಭವಿಸುವಾಗಲೂ ಬುದ್ಧಿಯನ್ನು ನಿನ್ನಲ್ಲೇ ಇರಿಸುವ, ನಿನ್ನನ್ನು ನಂಬಿದವರನ್ನು ಮರೆಯುವುದು ನ್ಯಾಯವೇ)

(ನಮ್ಮಿನವಾರಿನಿ)

ಭೋಗಾನುಭವಮುಲಂದು ಬಾಗುಗ ಬುದ್ಧಿ ನೀಯಂದು
ತ್ಯಾಗರಾಜುನಿ ಹೃದಯಮಂದು . . . . . . .

(ಭೋಗಾನುಭವದಲ್ಲಿರುವಾಗಲೂ ತ್ಯಾಗರಾಜನ ಬುದ್ಧಿಯು ನಿನ್ನಲ್ಲೇ)

(ರಾಮಾನೀಪೈ)

ಪುರಂದರರು ಇನ್ನೂ ಸ್ಪಷ್ಟವಾಗಿ, ದಿನ ಬೆಳಗಿನಿಂದ ರಾತ್ರಿಯವರೆಗೆ ಮಾಡುವ ಪರಿಪರಿಯ ಕೆಲಸಗಳನ್ನೂ ಜ್ಞಾಪಿಸಿಕೊಂಡು ಪಟ್ಟಿಮಾಡುತ್ತಾ, ಆ ಕೆಲಸಗಳ ನಡುವೆ ಹರಿಸ್ಮರಣೆಯೂ ಒಂದು ಕೆಲಸವೆಂಬಂತೆ ಮಾಡಬಹುದೆಂದು ನುಡಿಯುತ್ತಾರೆ. ಬೆಳಗ್ಗೆ ಏಳುವಾಗ, ಮನೆಯಲ್ಲೇ ಅಡ್ಡಾಡುವಾಗ, ಸ್ನಾನಪಾನಾದಿಗಳ ಸಮಯದಲ್ಲಿ, ಭುಜಿಸುವಾಗ, ತಾಂಬೂಲ ಮೆಲುವಾಗ, ಮಲಗುವಾಗ, ಮಗುವನ್ನು ಮುದ್ದಿಸುವಾಗ, ಸತಿಯೊಂದಿಗೆ ಸರಸವಾಡುವಾಗ, ಕಡೆಗೆ ಹರಟೆ ಹೊಡೆಯುವಾಗಲೂ ಕೃಷ್ಣನಾಮ ಸ್ಮರಣೆ ಮಾಡಬಹುದೆಂಬ ಉಪಾಯವೊಂದನ್ನು ಜನಸಾಮಾನ್ಯರಿಗೆ ತಿಳಿಸುತ್ತಾರೆ (ಕೃಷ್ಣಾ ಎನಬಾರದೆ).[೭೩]

ಈ ಸಂದರ್ಭದಲ್ಲಿ ಒಂದು ಅಂಶ ಅತ್ಯಂತ ಗಮನಾರ್ಹ. ದಿನಂಪ್ರತಿ ಮಾಡುವ ವಿವಿಧ ಕೆಲಸಗಳ ನಡುವೆ ನಾಮಸ್ಮರಣೆ ಮಾಡಬೇಕೆಂದಿರುವುದೇನೋ ಸರಿ. ಆದರೆ ಇಂತಹ ಕೆಲಸಗಳಲ್ಲಿ ತೊಡಗಿರುವಾಗಲೂ ಮನುಷ್ಯ ಶುದ್ಧಚಿತ್ತನಾಗಿರಬೇಕಾದುದು ಅತ್ಯಗತ್ಯ. ಹೀಗೆ ಚಿತ್ತಶುದ್ಧಿಯೊಂದಿಗೆ ಮಾಡಿದ ದೈವಸ್ಮರಣೆಯನ್ನು ಭಕ್ತರು ಮೆಚ್ಚುವರೇ ಹೊರತು ಆಟಾಟೋಪದ ಡಾಂಭಿಕತೆಯನ್ನಲ್ಲ. ಡಾಂಭಿಕತೆಯನ್ನು ಅವರು ವಾಸ್ತವವಾಗಿ ಹೀಯಾಳಿಸುತ್ತಾರೆ. ಹೊರಲೋಕಕ್ಕೆ ಸಂಭಾವಿತರಂತೆ, ಜ್ಞಾನಿಗಳಂತೆ, ಭಕ್ತರಂತೆ ಕಾಣುವ ಕಪಟಿಗಳು ಸಮಾಜಕ್ಕೆ ಹಿತರಲ್ಲ. ಅವರ ನಡೆ-ನುಡಿಗಳ ನಡುವೆ ದೊಡ್ಡ ಕಂದಕವೇ ಇರುತ್ತದೆ. ತೋರಿಕೆಗಾಗಿ ಆಚರಿಸುವ ಭಕ್ತಿಯ ಖಂಡನೆ ವಿವಿಧ ಭಕ್ತರಿಂದ ಹೀಗೆ ಅಭಿವ್ಯಕ್ತಗೊಂಡಿದೆ.

ತ್ಯಾಗರಾಜರು :

**ತೆಲಿಯಲೇರು ರಾಮ ಭಕ್ತಿಮಾರ್ಗಮುನು**
**ಇಲನಂತಟ ತಿರುಗುಚುನು**
**ಕಲುವರಿಂತುರೇ ಗಾನಿ**
**ವೇಗಲೇಚಿ ನೀಟ ಮುನಿಗಿ ಬೂದಿ ಬೂಸಿ**
**ವೇಳ್ಳನೆಂಚಿ ವೆಲಿಕಿ ಶ್ಲಾಘನೀಯುಲೈ**
**ಬಾಗಪೈಕ ಮಾರ್ಜನ ಲೋಲುರೈರೇಗಾನಿ . . . . .** **(ತೆಲಿಯಲೇರು)**

(ಕಪಟಿಗಳು ಎಲ್ಲೆಲ್ಲೂ ತಿರುಗುತ್ತಾ ಕನವರಿಸುವರೇ ಹೊರತು ರಾಮಭಕ್ತಿ ಮಾರ್ಗ ವನ್ನುತಿಳಿಯಲಿಲ್ಲ. ಇಂತಹ ಮಂದಿ ಪ್ರಾತಃಕಾಲದಲ್ಲಿ ಎದ್ದು ನೀರಲ್ಲಿ ಮುಳುಗಿ ಮೈಗೆಲ್ಲ ಬೂದಿ ಲೇಪಿಸಿಕೊಂಡು ಬೆರಳೆಣಿಸುತ್ತಾ ಮೇಲ್ನೋಟಕ್ಕೆ ಶ್ಲಾಘನೀಯರಾಗಿ ಹಣ ಸಂಪಾದನೆಯಲ್ಲಿ ಆಸಕ್ತರಾದರೇ ಹೊರತು ರಾಮಭಕ್ತಿ ಮಾರ್ಗವನ್ನು ತಿಳಿಯ ಲಿಲ್ಲ)

ಪುರಂದರರು :

**ತನುವ ನೀರೊಳಗದ್ದಿ ಫಲವೇನು**
**ಮನದಲ್ಲಿ ದೃಢಭಕುತಿ ಇಲ್ಲದ ಮನುಜನು**[೭೪]
**(ತನುವ ನೀರೊಳಗದ್ದಿ)**

ಉದರ ವೈರಾಗ್ಯವಿದು[೭೫] ರಚನೆಯಲ್ಲಿ ಉದಯಕಾಲದಲ್ಲಿ ನದೀಸ್ನಾನ, ಜಪಮಣಿ ಕೈಲಿಹಿಡಿದು ಮಂತ್ರಪಠನೆ ಮಾಡುತ್ತಿದ್ದರೂ ಮನದೊಳಗೆ ಅರಿಷಡ್ವರ್ಗಗಳಿಂದ ಕೂಡಿ ಪರಸ್ತ್ರೀಯರನ್ನು ಸ್ಮರಿಸುವ ಢಾಂಬಿಕ ಕ್ರಿಯೆಯ ಖಂಡನೆಯಿದೆ.

ಚನ್ನಬಸವ :

**ಕೇಶ ಕಾಶಾಯಾಂಬರವ ನಿಕ್ಕಿದೊಡೇನು ?**
**ವಿಭೂತಿ ರುದ್ರಾಕ್ಷಿ ಧರಿಸಿದೊಡೇನು ?**
**ಸಾಕಾರದಲ್ಲಿ ಸನ್ಮತನಲ್ಲ, ನಿರಾಕಾರದಲ್ಲಿ ನಿರುತನಲ್ಲ**
**ಪರಮಾರ್ಥದಲ್ಲಿ ಪರಿಣಾಮಿಯಲ್ಲ**[೭೬]

ಸಿದ್ಧರಾಮ :

**ವೇಷವ ಧರಿಸಿ ಫಲವೇನಯ್ಯ, ವೇಷದಂತಾಚರಣೆ ಇಲ್ಲದನ್ನಕ್ಕ**[೭೭]

ಇದೇ ನಿಟ್ಟಿನಲ್ಲಿ ಕಥಕರು ಹೇಳುವ ಪ್ರಾಚೀನ ಶ್ಲೋಕವೊಂದನ್ನೂ ಗಮನಿಸ ಬಹುದು.

**ಮೀನಃ ಸ್ನಾನಪರಃ ಫಣೀ ಪವನಭುಕ್ ಮೇಷಾಸ್ತು ಪರ್ಣಾಶನಃ**
**ನೀರಾಶೀ ಖಲು ಪಾವಕಃ ಪ್ರತಿದಿನಂ ಶೇತೇ ಬಿಲೇ ಮೂಷಿಕಃ**
**ಭಸ್ಮೋದ್ಧೂಲನ ತತ್ಪರೋಪಿ ಚ ಖರಃ ಧ್ಯಾನೇನ ಯುಕ್ತೋ ಬಕಃ**
**ಇತ್ಯೇವಂ ನ ಹಿ ಯಾಂತಿ ಮೋಕ್ಷ ಪದವೀಂ ಶ್ರೀಕೃಷ್ಣಭಕ್ತಿಂ ವಿನಾ**[೭೮]

ಶ್ರೀಕೃಷ್ಣ ಭಕ್ತಿ ಇಲ್ಲದೆ ಕೇವಲ ನೀರಿನಲ್ಲಿ ಮುಳುಗುವುದು, ಉಪವಾಸವಿರುವುದು, ಕಣ್ಮುಚ್ಚುವುದು, ಮುಂತಾದುವಷ್ಟೇ ಮೋಕ್ಷಕ್ಕೆ ಅಗತ್ಯ ಕ್ರಿಯೆಗಳೆನ್ನುವುದಾದರೆ, ಇವುಗಳನ್ನೇ ಮತ್ತೆಮತ್ತೆ ಆಚರಿಸುವ ಮೀನು, ಹಾವು, ಬಕ, ಮೇಕೆ ಮೊದಲಾದ ಪ್ರಾಣಿಗಳೂ ಮೋಕ್ಷ ಪಡೆಯಬೇಕಷ್ಟೇ. ಇದೇ ಭಾವವು ತ್ಯಾಗರಾಜರ 'ಬಲಮುಕುಲಮು' ರಚನೆಯಲ್ಲಿ ಪ್ರತಿಧ್ವನಿಸಿದೆ.

**ನೀಟಕಾಕಿ ಮೀನುಮುನುಗ ನಿರತಮುದಯ ಸ್ನಾನಮಾ ?**
**ತೇಟಕನುಲು ಕೊಂಗಗೂರ್ಚ ದೇವದೇವಧ್ಯಾನಮಾ ?**
**ಪತ್ರಮುಲನು ಮೇಯು ಮೇಕ ಬಲಮ್ಮೈನಯುಪಾಸಮಾ ?**

ಮುಂದುವರೆದಂತೆ ಈ ರಚನೆಯಲ್ಲಿ 'ವೇಷ ಧರಿಸಿ ಗುಹೆಯಲ್ಲಿರುವವರು ನಿಜವಾದ ಮುನಿಗಳೇ? ಮಾತನಾಡದ ಜಂಗಮರು ಮುನಿಗಳಾಗಲು ಸಾಧ್ಯವೇ? ವಿವಸ್ತ್ರರಾದ ಮಕ್ಕಳು ದಿಗಂಬರರೆನಿಸುವರೆ?' ಎಂದು ಪ್ರಶ್ನಿಸುತ್ತಾ ಡಾಂಭಿಕತೆಯನ್ನು ಖಂಡಿಸಲಾಗಿದೆ.

**೧೨. ಇಂದ್ರಿಯ ಹಾಗೂ ಮನೋನಿಗ್ರಹ** : ಮನಸ್ಸು ಸಹಜವಾಗಿ ಚಾಂಚಲ್ಯಯುತವಾದುದು. ಏಕಕಾಲದಲ್ಲೇ ಹತ್ತು ದಿಕ್ಕಿಗೂ ಓಡಿ ಮಾಡಬಾರದ ಯೋಚನೆಯನ್ನೂ, ಕೆಲಸವನ್ನೂ ಮಾಡಲು ನಮ್ಮನ್ನು ಪ್ರೇರೇಪಿಸುತ್ತದೆ. ಕ್ಷಣಿಕವಾಗಿ ಸುಖನೀಡುವ ವಸ್ತು ವಿಷಯಗಳೆಡೆಗೆ ನಮ್ಮನ್ನು ಒಯ್ಯುತ್ತದೆ. ಇದು ಅಪಾಯಕಾರಿಯಾದುದು. ಆದರೆ ಅದೇ ಮನಸ್ಸು ಸದ್ವಿಷಯಗಳೆಡೆಗೆ ಹರಿಸುವುದು ಕಷ್ಟಕರವಾದರೂ ದುಸ್ಸಾಧ್ಯವಲ್ಲ. ಆದರೆ ಇದಕ್ಕೆ ಸಹನೆ ಹಾಗೂ ನಿರಂತರ ಅಭ್ಯಾಸ ಅಗತ್ಯ. ಮನೋನಿಗ್ರಹದಿಂದ ಇಂದ್ರಿಯನಿಗ್ರಹವೂ ಲಭ್ಯವಾಗುತ್ತದೆ. ನಿಗ್ರಹಶಕ್ತಿ ಹೊಂದಿದವರಿಗೆ ಮಂತ್ರತಂತ್ರಗಳು ಅನವಶ್ಯಕ. ಮಂತ್ರತಂತ್ರಗಳನ್ನು ಅವರು ಆಶ್ರಯಿಸಬೇಕಾಗಿಲ್ಲ. ಬಾಹ್ಯವಾದ ಪೂಜಾಸಾಮಗ್ರಿಗಳ ಅಗತ್ಯ ಅವರಿಗಿಲ್ಲ. ಸ್ಥಿರಚಿತ್ತದಿಂದ ಮುಕ್ತಿ ಹೊಂದಲು ಸಾಧ್ಯ. ಅದಕ್ಕೆಂದೇ ವ್ಯಾಸರಾಯರು 'ಎನ್ನ ಮನ ಕಂಡಕಂಡೆಡೆ ಎರಗುತಿದೆ. ನಿನ್ನಲಿ ನಿಲಿಸೋ' ಎಂದು ಬೇಡುತ್ತಾರೆ. ಇಂದ್ರಿಯ ವ್ಯಾಪಾರಗಳಿಂದ ಪುಷ್ಟವಾದ ಮನಸ್ಸು ವಿಷಯ ಭೋಗಗಳಿಗೆ ಬಹು ಸುಲಭವಾಗಿ ಆಕರ್ಷಣೆ ಹೊಂದುತ್ತದೆ. ಅದನ್ನು ನಿಗ್ರಹಿಸಿ ವೈರಾಗ್ಯ ಸಾಧಿಸಬೇಕೆಂಬುದು ಅನುಭಾವಿಗಳೆಲ್ಲರ ಬೋಧನೆ. ಈ ವಿಷಯಕ್ಕೆ ಸಂಬಂಧಿಸಿದಂತೆ ತ್ಯಾಗರಾಜಾದಿಗಳ ಉಕ್ತಿಗಳು ಹೀಗಿವೆ.

ತ್ಯಾಗರಾಜರು :

**ಮನಸು ನಿಲ್ಪ ಶಕ್ತಿಲೇಕಪೋತೆ**
**ಮಧುರ ಘಂಟ ವಿರುಲ ಪೂಜೇಮಿ ಸೇಯನು ?**

[ಮನಸ್ಸನ್ನು (ಹರಿಯಲ್ಲಿ) ನೆಲೆಗೊಳಿಸಲಾಗದಿದ್ದರೆ ಹೂವು, ಘಂಟಾನಾದಗಳಿಂದೇನು ಪೂಜಿಸಬಲ್ಲ?]

(ಮನಸುನಿಲ್ಪ)

**ಮನಸು ಸ್ವಾಧೀನಮೈನ ಆ ಘನುನಿಕಿ**
**ಮರಿ ಮಂತ್ರತಂತ್ರಮೇಲ ?**

(ಮನಸ್ಸನ್ನು ಸ್ವಾಧೀನದಲ್ಲಿರಿಸಿಕೊಂಡ ಮಹಾತ್ಮನಿಗೆ ಮಂತ್ರತಂತ್ರಗಳೇತಕ್ಕೆ)

**(ಮನಸುಸ್ವಾಧೀನ)**

ತ್ಯಾಗರಾಜರ ಈ ಉಲ್ಲೇಖಗಳಿಂದ ಖಚಿತವಾಗುವ ಅಭಿಪ್ರಾಯವೆಂದರೆ, ಮನಸ್ಸಿನ ಹತೋಟಿ ಹೊಂದಿದವರಿಗೆ ಬಾಹ್ಯ ಪರಿಕರಗಳ ಅವಶ್ಯವಿಲ್ಲ ಎಂಬುದಷ್ಟೆ. ಪುರಂದರಾದಿ ಭಕ್ತರು ಈ ಬಗೆಗೆ ಹೀಗೆನ್ನುತ್ತಾರೆ.

**ಮನವೇ ಚಂಚಲಮತಿಯ ಬಿಡು[೭೯]**
**ಮನವ ನಿಲಿಸುವುದು ಬಲು ಕಷ್ಟ[೮೦]**

ಸ್ನಾನ, ಮೌನ, ಧ್ಯಾನ, ಜಪತಪಾದಿಗನ್ನು ಮಾಡಬಹುದು. ತೋರಿಕೆಗೆ ವೈರಾಗ್ಯ ಶಿಖಾಮಣಿಯಂತಿದ್ದು ಕಾಶಿಗೆ ಹೋಗಿ ಬರಬಹುದು. ಆದರೆ ಮನಸ್ಸನ್ನು ಹತೋಟಿಯಲ್ಲಿಡುವುದು ಕಷ್ಟವೆಂಬುದನ್ನು ಪುರಂದರರು ತಮ್ಮ ರಚನೆಯಲ್ಲಿ ವಿಶದಪಡಿಸುತ್ತಾರೆ.

ಅನ್ನಮಯ್ಯ :

**ತನಕೇಡ ಚದುವುಲು ತನಕೇದ ಶಾಸ್ತ್ರಾಲು**
**ಮನಸು ಚಂಚಲಬುದ್ಧಿ ಮಾನೀನಾ[೮೧]**

(ಮನಸ್ಸು ಚಾಂಚಲ್ಯ ಬಿಡದಿದ್ದರೆ ತನಗೇಕೆ ಶಾಸ್ತ್ರಾದಿ ವ್ಯಾಸಂಗಗಳು)

**(ತನಕೇಡ ಚದುವುಲು)**

ಸಿದ್ಧಲಿಂಗೇಶ್ವರ :

**ಮನವಿದು ಒಮ್ಮೆ ಪ್ರಪಂಚದತ್ತ ಹರಿಯುವುದು**
**ಒಮ್ಮೆ ಪರಮಾರ್ಥದತ್ತ ತಿರುಗುವುದು**
**ಒಂದ ಹಿಡಿಸಿ ಒಂದ ಬಿಡಿಸುವುದು.**

. . . . . . . . . .

**ಈ ಮನದ ಮರುಳುತನವ ಬಿಡಿಸಿ**
**ನಿಮ್ಮ ಪಾದದಲ್ಲಿರಿಸೆನ್ನ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ[೮೨]**

ಅಲ್ಲಮಪ್ರಭು :

**ಮಠವೇಕೋ ಪರ್ವತವೇಕೋ ಜನವೇಕೋ ನಿರ್ಜನವೇಕೋ**
**ಚಿತ್ತ ಸಮಾಧಾನವುಳ್ಳ ಶರಣರಿಗೆ[೮೩]**

**೧೩. ಪ್ರಲೋಭನೆ ಮತ್ತು ವೈರಾಗ್ಯ** : ಭಕ್ತಿ ಸಾಧನೆಯ ಮಧ್ಯೆ ಒದಗುವ ಅಡಚಣೆಗಳಲ್ಲಿ ಪ್ರಲೋಭನೆಯೂ ಒಂದು. ಇಲ್ಲಿ ಭಕ್ತನು ದೇವರಿಂದಲೇ ಒಂದು ರೀತಿಯಲ್ಲಿ ಪರೀಕ್ಷಿಸಲ್ಪಡುತ್ತಾನೆ. ಭಕ್ತನ ಭಕ್ತಿತೀವ್ರತೆಯನ್ನು ಒರೆಹಚ್ಚುವುದು ಇದರ ಉದ್ದೇಶ. ಭಕ್ತನಿಗೆ ಅನೇಕ ವಿಧದ ವರಗಳನ್ನು ನೀಡುವುದಾಗಿ ದೇವರು

ಆಮಿಷಗಳನ್ನೊಡ್ಡುತ್ತಾನೆ. ಆದರೆ ನಿಜಭಕ್ತನು ಲೌಕಿಕ ಸುಖಕ್ಕಾಗಿ ಆತ ನೀಡುವೆನೆನ್ನುವ ಯಾವುದೇ ವರಗಳನ್ನೂ ನಿರಾಕರಿಸುತ್ತಾನೆ. ಆತನ ದಯೆ, ಕೈಂಕರ್ಯ ಹಾಗೂ ಆತನ ಅಂತರಂಗಭಕ್ತರ ಸೇವೆಗಳಷ್ಟನ್ನೇ ಬೇಡುತ್ತಾನೆ.

ನಿಜಭಕ್ತರ ದೃಷ್ಟಿಯಲ್ಲಿ ರಾಜಾಶ್ರಯ ಅಥವಾ ಧನಿಕರ ಆಶ್ರಯವಂತೂ ಅಸಹನೀಯ. ಈ ಜಗತ್ತಿನಲ್ಲಿ ದೇವರೇ ನಿರಂತರದಾತನಾಗಿರುವಾಗ ಶ್ರೀಮಂತರು ಅಥವ ರಾಜರನ್ನು ಬೇಡುವುದು ಅಥವ ಅವರ ಪೋಷಣೆ ಪಡೆಯುವುದಂತೂ ಸರ್ವಥಾ ಸರಿಯಲ್ಲ. ಭಕ್ತರು ಈ ಅಂಶಗಳತ್ತ ದೃಷ್ಟಿಹಾಯಿಸಿದಾಗ ತ್ಯಾಗರಾಜರಿಗೂ ಶ್ರೀಹರಿ ವರಗಳನ್ನು ಪಡೆದುಕೊಳ್ಳುವಂತೆ ಪ್ರಲೋಭಿಸಿದ್ದಾನೆಂದೂ, ಇದಕ್ಕೆ ಉತ್ತರವಾಗಿ ತ್ಯಾಗರಾಜರು 'ನನ್ನನ್ನು ಹೀಗೆ ವಂಚಿಸಬಹುದೇ ?' ಎಂದು ನೊಂದು ನುಡಿಯುತ್ತಾರೆ. ಸ್ಥಿರ ಭಕ್ತಿಯುಳ್ಳವರು ಅಲ್ಪಫಲಗಳಿಗೆ ಆಶಿಸಬಾರದೆಂದು ಉಪದೇಶಿಸಿದ ದೇವರು, ತಿಳಿದೋ ತಿಳಿಯದೆಯೋ ಅಲ್ಪಫಲಕ್ಕಾಗಿ ಆಶಿಸಿದ ಧ್ರುವನಿಗೂ ಸ್ಥಿರಸುಖವನ್ನೇ ಪ್ರಸಾದಿಸಿದುದನ್ನು ಉಲ್ಲೇಖಿಸಿ, ಇಂತಹ ಅಸಾಮಾನ್ಯ ಕೃಪಾಮಯನಾದ ದೇವರು ತಮಗೆ ವರ ನೀಡುವೆನೆನ್ನುತ್ತಾ ವಂಚಿಸುವುದು ಸರಿಯಲ್ಲವೆಂದು ವಿನೀತರಾಗಿಯೇ ನುಡಿಯುತ್ತಾರೆ.

ವರಾಲಂದುಕೊಮ್ಮನಿ ನಾಯಂದು
ವಂಚನ ಸೇಯ ನ್ಯಾಯಮಾ ?
ಅವಿವೇಕಮುತೋ ತೆಲಿಸಿ ತೆಲಿಯಕನು
ಭವ ಸುಖಮುಲ ಕಾಸಿಂಚಿನ ಗಾನಿ
ಧ್ರುವಮ್ಮೆನ ನೀ ಶಕ್ತಿ . . . .
. . . . . . . . . . . ನನು

(ವರಾಲಂದುಕೊಮ್ಮನಿ)

ತ್ಯಾಗರಾಜರು ತಮ್ಮ ಅಧ್ಯಾತ್ಮ ಸಾಧನೆಯ ಗುರಿ ಏನೆಂಬುದನ್ನು ಕರಾರುವಾಕ್ಕಾಗಿ ಪುನಃಪುನಃ ನುಡಿಯುತ್ತಾರೆ. ಧನಕನಕಾದಿ ಸಂಪತ್ತಿಗಾಗಲೀ, ಹಯ-ಗಜಾದಿಗಳಿಗಾಗಲೀ ದೇವರನ್ನು ಅವರು ಪ್ರಾರ್ಥಿಸಲಿಲ್ಲ. ದೇವರನ್ನೇ ಹೊಂದುವ ಸಲುವಾಗಿಯಷ್ಟೇ ಅವರ ಪ್ರಾರ್ಥನೆ.

**ಆತ್ಮಾರ್ಥಮೈಯೊಕಟ್ಕೆನ ಆಸಿಂಚಲೇರು ಪರಮಾತ್ಮ . . . . . .**
(ಆತ್ಮಾರ್ಥಕ್ಕಾಗಿ ಒಂದನ್ನಾದರೂ ಆಸೆಪಡಲಿಲ್ಲ, ಪರಮಾತ್ಮನೇ)

**ನೀಕಾಸಿಂಚಿತಿಗಾನಿ . . . . . . . .**
(ನಿನ್ನನ್ನೇ ಹೊಂದಲು ಆಶಿಸಿದೆನಾಗಲೀ . . . . . .)

(ಓರಾಮ ಓರಾಮ ಓಂಕಾರಧಾಮ)

ನೀಕಾಸಿಂಚಿತಿ . . . . . . .
(ನಿನಗಾಗಿಯೇ ಆಸೆಪಟ್ಟೆನು)

(ಎವರುರಾ ನಿನುವಿನಾಗತಿ)

ಧನ ಗಜಾಶ್ವಮುಲು ತನಕು ದಯಸೇಯು
ಮನಿ ನೇ ನಿನ್ನಡಿಗಿನಾನಾ ಇಂಕ ನೇ
ಕನಕಮಿಮ್ಮನಿನಾನಾ . . . . .
(ಧನಕನಕ, ಗಜ, ಅಶ್ವಗಳನ್ನು ದಯಪಾಲಿಸಬೇಕೆಂದು
ನಿನ್ನನ್ನು ಕೇಳಿದ್ದೇನೆಯೇ ?)

(ಇನ್ನಾಳ್ಳು ದಯರಾಕುನ್ನ)*

ತ್ಯಾಗರಾಜರ ಪಾಲಿಗೆ ಧನಧಾನ್ಯ ದೈವನೂ ಧರ್ಮಾತ್ಮಕನೂ ದೇವರೇ ಆಗಿದ್ದಾನೆ.
ಧರ್ಮಾತ್ಮಕ ಧನಧಾನ್ಯ ದೈವಮು ನೀವೈಯುಂಡಗ

(ದುರ್ಮಾರ್ಗಚರಾಧಮುಲ)

ಆದ್ದರಿಂದ ತ್ಯಾಗರಾಜರು ಮದಿಸಿದ ಇತರ ಶ್ರೀಮಂತರನ್ನು ಯಾಚಿಸುವುದಿಲ್ಲ.

- ಧನಮದಮುನನುಂಡು ಜನುಲನು ನೇನು ಯಾ
ಚನ ಸೇಯಗಲೇನುರಾ . . . . . . . . . .

(ಕರುಣಾ ಜಲಧೀ ದಾಶರಥೀ)

ವಚನಕಾರರಾದ ದೇವರ ದಾಸಿಮಯ್ಯ ಕರಿ-ಸಿರಿಗಳನ್ನಾಗಲೀ ಅಥವಾ ಬೇರಾವುದೇ ರಾಜ್ಯವನ್ನೇ ದೇವರು ನೀಡಿದರೂ ಒಲ್ಲೆನೆನ್ನುತ್ತಾನೆ. ಅಂತೆಯೇ ಬಸವಣ್ಣನವರು ಬ್ರಹ್ಮಪದವಿಯನ್ನಾಗಲೀ, ವಿಷ್ಣುಪದವಿಯನ್ನಾಗಲೀ, ರುದ್ರಪದವಿಯನ್ನಾಗಲೀ ಅಥವಾ ಮತ್ತಾವ ಪದವಿಯನ್ನೇ ಆಗಲೀ ದೇವರಿಂದ ಪಡೆಯಲು ಇಚ್ಛಿಸುವುದಿಲ್ಲ. ಅವುಗಳನ್ನೆಲ್ಲಾ ಈ ಭಕ್ತರು ನಿರಾಕರಿಸುತ್ತಾರೆ.

ದೇವರ ದಾಸಿಮಯ್ಯ :

ಕರಿಯನಿತ್ತೊಡೆ ಒಲ್ಲೆ ಸಿರಿಯನಿತ್ತೊಡೆ ಒಲ್ಲೆ
ಹಿರಿದಪ್ಪ ರಾಜ್ಯವನಿತ್ತೊಡೆ ಒಲ್ಲೆ[೬೪]

---

* ಇದೇ ಅಭಿಪ್ರಾಯವನ್ನೇ ತ್ಯಾಗರಾಜರು ಪ್ರಹ್ಲಾದನಿಂದಲೂ ನುಡಿಸಿದ್ದಾರೆ. 'ವಾಜಿ ಗಜಾಂದೋಳಿಕಮುಲು ನೀಕು ವರಮ್ಮೈನ ಮಣಿಭೂಷಣಮುಲು ರಾಜಿಗ ನೊಸಗಕ ರವ ತಾಳ ಲೇನು.'(ಆನೆ, ಕುದುರೆ, ಪಲ್ಲಕ್ಕಿ ಹಾಗೂ ಶ್ರೇಷ್ಠ ಆಭರಣಗಳನ್ನು ಪ್ರೀತಿಯಿಂದ ನಿನಗೆ ನೀಡದೆ ಇರಲಾರೆ) ಎಂದು ಹೇಳಿದ ಹರಿಗೆ ಪ್ರಹ್ಲಾದ 'ವದ್ದನುಂಡೇದೇ ಬಹುಮೇಲು ವಾರಿಜಾಕ್ಷ' (ನೀನು ನೀಡುವೆನೆನ್ನುವ ವರಗಳನ್ನು ನಿರಾಕರಿಸುವುದೇ ಬಹುಸೂಕ್ತ) ಎಂದು ಉತ್ತರಿಸುತ್ತಾನೆ. ನೋಡಿ, ಪ್ರಹ್ಲಾದ ಭಕ್ತಿವಿಜಯ ನಾಟಕದ ಚತುರ್ಥಾಂಕ.

ಬಸವಣ್ಣನವರು :

**ಬ್ರಹ್ಮ ಪದವಿಯನೊಲ್ಲೆ ವಿಷ್ಣು ಪದವಿಯನೊಲ್ಲೆ**
**ರುದ್ರ ಪದವಿಯನೊಲ್ಲೆ ನಾನು ಮತ್ತಾವ ಪದವಿಯನೊಲ್ಲೆನಯ್ಯಾ**

ಭದ್ರಾಚಲ ರಾಮದಾಸರು :

**ಬ್ರೋಚಿನ ಮರಿ ವಿಡಜೂಚಿನ ನೀಕೃಪ**
**ಗಾಚಿಯುಂದು ಗಾನಿ**
**ತೋಚಿ ತೋಚಕನು ತೊಡರಿ ಕರಂಬುಲ**
**ಚಾಚಿ ಪರುಲ ನೇ ಯಾಚನ ಸೇಯನು**[೮೫]

(ಕಾಪಾಡಿದರೂ, ಕೈಬಿಡುವ ಯೋಚನೆ ಮಾಡಿದರೂ ದೇವರ ಕೃಪೆಯೇ ರಾಮ ದಾಸರನ್ನು ರಕ್ಷಿಸುವುದು. ಆದ್ದರಿಂದ ತಿಳಿದೋ ತಿಳಿಯದೆಯೋ ಅವರು ಕರಗಳೊಡ್ಡಿ ಪರರನ್ನು ಯಾಚಿಸುವುದಿಲ್ಲ)

(ನೀ ಸಂಕಲ್ಪಂ)

**ನರಹರಿ ನಮ್ಮಕ ನರುಲನು ನಮ್ಮಿತೇ**
**ನರಜನ್ಮ ಮೀಡೇರುನಾ ?**[೮೬]
(ನರಹರಿಯನ್ನು ನಂಬದೆ ನರರನ್ನು ನಂಬಿದರೆ ಆಸೆ ನೆರವೇರುವುದೇ?)

(ನರಹರಿ ನಮ್ಮಕ)

ಅನ್ನಮಯ್ಯ :

ರಾಜರಾದವರು ಹರಿಭಕ್ತರಿಗೆ ನೀಡಲಿರುವ ವಸ್ತುವಾಹನಾದಿಗಳ ಬಗೆಗೆ ಅನ್ನ ಮಯ್ಯ ಹೀಗೆನ್ನುತ್ತಾರೆ. 'ಹರಿಭಕ್ತರಾದ ನಾವು ಹುಟ್ಟುಭೋಗಿಗಳು. ನಮಗೆ ವೆಂಕಟೇಶ್ವರನೇ ಧನಕನಕ ವಸ್ತು ವಾಹನಾದಿಗಳೆಲ್ಲವನ್ನೂ ನೀಡಿ ರಕ್ಷಿಸುವಾಗ, ಈ ಭೂಮಿಯ ಮೇಲೆ ಅಲ್ಪಕಾಲವಿದ್ದು ನಶಿಸುವ ರಾಜರು ನಮಗೆ ಏನನ್ನಾದರೂ ಕೊಡಬೇಕೆ ?

**ಪುಟ್ಟು ಭೋಗುಲಮು ನೇಮು ಭುವಿ ಹರಿದಾಸುಲಮು**
**ನಟ್ಟನಡಿಮಿ ದೊರಲು ನಾಕಿಯ್ಯವಲೆನಾ**
. . . . . . . . . . . . . . . . . . . . .
. . . . . . . . . . . . **ಶ್ರೀ ವೆಂಕಟೇಶುಡು**
**ಯೆಸಗಿ ಯಾತಡೇ ಮಮ್ಮುನೇಲಿ ಯಿನ್ನಿಯುನಿಚ್ಚೆ**
**ವೊಸಗಿನ ಮಾ ಸೊಮ್ಮುಲು ವೊರುಲಿಯ್ಯವಲೆನಾ**[೮೭]

(ಪುಟ್ಟುಭೋಗುಲಮು)

ಮತ್ತೊಂದು ರಚನೆಯಲ್ಲಿ ಅವರು ಹೀಗೆನ್ನುತ್ತಾರೆ. 'ಜ್ಞಾನಿಗಳು ಮತ್ತು ಶರಣಾಗತರ ಪ್ರಕಾರ ಎಲ್ಲಕ್ಕೂ ಹರಿಯೇ ಕಾರಣ. ಆದರೆ ಚಿಲ್ಲರೆ ಮನುಷ್ಯರ ಪ್ರಕಾರ ಜೀವಿಯೇ ಕಾರಣ'. ಹೀಗೆನ್ನುವಲ್ಲಿ ದೇವರ ಆಶ್ರಯ ಮತ್ತು ಧನಿಕರ ಆಶ್ರಯಗಳಲ್ಲಿನ ವ್ಯತ್ಯಾಸದ ಸೂಚನೆಯೂ ಅಡಗಿದೆ.

**ಅನ್ನಿಟಿಕಿ ಕಾರಣಮು ಹರಿಯೆ ಪ್ರಪನ್ನುಲಕು . . . .**
**ದೇವುಡು ಕಾರಣಮು ತೆಲಿಸಿನವಾರಿಕೆಲ್ಲಾ**
**ಜೀವುಡು ಗಾರಣಮು ಚಿಲ್ಲರ ಮನುಜುಲಕು**[೮೮]

**(ಅನ್ನಿಟಿಕಿ ಕಾರಣಮು)**

**೧೪. ಸಾಂಪ್ರದಾಯಿಕ ಆಚರಣೆಗಳು** : ಇವುಗಳಲ್ಲಿ ತ್ಯಾಗರಾಜರು ಮತ್ತು ಪುರಂದರರಲ್ಲಿ ಕಾಣಬರುವ ಕೆಲವು ಸಾಮ್ಯಗಳನ್ನು ಮಾತ್ರ ಈ ಕೆಳಗೆ ಗುರುತಿಸಲಾಗಿದೆ. ಇಂತಹ ರಚನೆಗಳು ವಚನ ಸಾಹಿತ್ಯದಲ್ಲಿ ಅಪರೂಪವಾಗಿದ್ದಿರಬಹುದು.

| | **ತ್ಯಾಗರಾಜರು** | **ಪುರಂದರರು** |
|---|---|---|
| ಸುಪ್ರಭಾತ | ಮೇಲುಕೋವಯ್ಯ | ಏಳಯ್ಯ ಬೆಳಗಾಯಿತು |
| ಲಾಲಿ | ಲಾಲಿಯೂಗವೇ | ಪವಡಿಸು ಪರಮಾತ್ಮನೇ |
| ನೈವೇದ್ಯ | ಆರಗಿಂಪವೇ | ಆರೋಗಣೆ ಮಾಡೇಳಯ್ಯ |
| ತಾಂಬೂಲ | ವಿಡಮು ಸೇಯವೇ | ತಾಂಬೂಲವಕೊಳ್ಳೋ |
| ಆರತಿ | ಪತಿಕಿ ಹಾರತೀರೇ | ಧೂಪಾರತಿಯ ನೋಡುವಬನ್ನಿ |
| ಶೋಭಾನೆ | ಶೋಭಾನೆ ಶೋಭಾನೆ | ಶೋಭಾನ ಶೋಭಾನವೇ |
| | ವದನದ್ಯುತಿಜಿತಸೋಮ | ಭೂದೇವಿಯರಸ ವೆಂಕಟರಾಯನಿಗೆ |
| ಮಂಗಳ | ಜಯಮಂಗಳಂ ನಿತ್ಯಶುಭಮಂಗಳಂ | ಜಯಮಂಗಳಂ ನಿತ್ಯಶುಭಮಂಗಳಂ |

**೧೫. ವಾಕ್ ಸರಣಿಯಲ್ಲಿನ ಕೆಲವು ಸಾಮ್ಯಗಳು** :

| **ತ್ಯಾಗರಾಜರು** | **ಇತರರು** |
|---|---|
| ಗಿರಿರಾಜಸುತಾ ತನಯ | ಗಿರಿರಾಜಸುತಾ ಸೂನು (ನಾರಾಯಣತೀರ್ಥರು)[೮೯] |
| ವಿನತಾಸುತವಾಹನ | ವಿನತಾಸುತ ಘನವಾಹನ (ನಾರಾಯಣತೀರ್ಥರು)[೯೦] |
| ಆನಂದಮಾನಂದ ಮಾಯೆನು | ಆನಂದಮಾನಂದ ಮಾಯೆನು (ಭದ್ರಾಚಲ ರಾಮದಾಸರು)[೯೧] |
| ಓ ಜಗನ್ನಾಥಾಯನಿ ಪಿಲ ಚಿತೆ ಓಯನಿ ರಾರಾದಾ | ಓ ರಘುವೀರಾಯನಿ ನೇ ಪಿಲಚಿನ ಓಹೋ ಏನರಾದಾ (ಭದ್ರಾಚಲ ರಾಮದಾಸರು)[೯೨] |
| ನಮ್ಮಿನವಾರಿನಿ ಮರಚೇದಿ ನ್ಯಾಯಮಾ ? | ನಮ್ಮಿನವಾರಿನಿ ಮೋಸಮುಜೇಯುಟ ನ್ಯಾಯ ಮುಗಾದುರಾನಾತಂಡ್ರಿ (ಭದ್ರಾಚಲ ರಾಮದಾಸರು)[೯೩] |
| ಮಾನಸ ಸಂಚರರೇ | ಮಾನಸ ಸಂಚರರೇ (ಸದಾಶಿವ ಬ್ರಹ್ಮೇಂದ್ರ)[೯೪] |
| ವರಶಿಖಿವಾಹನ ವಾರಿಜಲೋಚನ | ವರಶಿಖಿವಾಹನಂ ವಾರಿಜಲೋಚನಾಂ (ಮುತ್ತುಸ್ವಾಮಿ ದೀಕ್ಷಿತರು)[೯೫] |
| ತತ್ತ್ವಮೆರುಗತರಮಾ | ತತ್ತ್ವಮೆರುಗತರಮಾ (ಅನ್ನಮಯ್ಯ)[೯೬] |

ಇವೇ ಅಲ್ಲದೆ ತ್ಯಾಗರಾಜರ ರಚನೆಗಳ ಮಧ್ಯೆ ಕಾಣಬರುವ 'ವಾರಿಧಿ ಮದಿ ಗರ್ವಿಂಚಿ', 'ರಾಮನಾಮಮು ಸೇಯಸಿಗ್ಗಾ ಕಾರಾದೇಮಿ ಬಲ್ಕವು' ಉಲ್ಲೇಖಗಳನ್ನು ಹೋಲುವಂತೆ 'ಅಂಬುಧಿ ಗರ್ವ ನಿಗ್ರಹಂ'(ಮುತ್ತುಸ್ವಾಮಿ ದೀಕ್ಷಿತರ ಸೌಂದರರಾಜಂ ಎಂಬ ಬೃಂದಾವನ ಸಾರಂಗ ರಾಗದ ಕೃತಿ). 'ನಾರಾಯಣ ಎನರಾದಾ ಮೀನಾಲಿಕಪ್ಪೆ ಮುಲ್ಲು ನಾಟಿಯುನ್ನದಾ?' (ಭದ್ರಾಚಲ ರಾಮದಾಸರ, ಇದೇ ಪದಗಳಿಂದಾರಂಭ ವಾಗುವ ನಾದನಾಮಕ್ರಿಯ ರಾಗದ ಕೃತಿ) ಮೊದಲಾದ ಸಾಮ್ಯಗಳೂ ಉಂಟು. ಅಂತಹವುಗಳಲ್ಲಿ ಇವು ಒಂದೆರಡು ಮಾದರಿಗಳಷ್ಟೆ.

ಹೀಗೆ ಮೇಲೆ ನೀಡಿರುವ ಉದಾಹರಣೆಗಳಲ್ಲಿ ಭಾವಸಾಮ್ಯ ಕಾಣಬರುತ್ತದೆ. ಅಲ್ಲದೆ ರಚನೆಗಳ ಆರಂಭವೇ ಏಕರೀತಿಯಲ್ಲೂ ಮತ್ತೆ ಕೆಲವು ರಚನೆಗಳ ಮಧ್ಯ ದಲ್ಲೂ ಸಾಮ್ಯ ಹೊಂದಿದೆ. ಇನ್ನು ಕೆಲವೆಡೆ ಸಮುದ್ರಗರ್ವಭಂಗದಂತಹ ನಿರ್ದಿಷ್ಟ ಪ್ರಸಂಗಕ್ಕೆ ಸಂಬಂಧಿಸಿದಂತೆಯೂ ಸಾಮ್ಯವಿರಬಹುದು. ಒಟ್ಟಾರೆ ಯಾವುದೇ ಕಾಲ ಅಥವಾ ಸ್ಥಳದಲ್ಲಿದ್ದರೂ ಭಕ್ತರೆಲ್ಲ ಒಂದೇ ಜಾತಿ. ಅವರ ಚಿಂತನಾಲಹರಿಗೆ ಒಂದೇ ಗುರಿ. ಅವರು ಆರಾಧಿಸುವ ದೈವ ರೂಪಗಳಲ್ಲಿ, ಮತ್ತು ಭಾವಗಳ ಅಭಿವ್ಯಕ್ತಿಗಾಗಿ ಅವರು ಆಯ್ದುಕೊಂಡ ಭಾಷೆಯಲ್ಲಿ ವ್ಯತ್ಯಾಸವಿರಬಹುದು. ಆದರೆ ದೇವರಿಗಾಗಿ ಯಷ್ಟೇ ಅವರ ತೀವ್ರ ಹಂಬಲ. ಅದಕ್ಕಾಗಿ ಭಕ್ತಿ ಮಾರ್ಗಾನುಸರಣೆ ಒಂದೇ ರೀತಿ ಯದು ಎಂಬುದು ನಿರ್ವಿವಾದ. ಹೀಗಾಗಿ ದೇವರನ್ನು ಸಾಗರಕ್ಕೂ ಭಕ್ತರನ್ನು ನದಿ ಗಳಿಗೂ ಹೋಲಿಸಬಹುದು. ನದಿಗಳೆಲ್ಲವೂ ಕಡೆಗೆ ಸಾಗರವನ್ನೇ ಸೇರುವುದಲ್ಲವೇ ?

## ಟಿಪ್ಪಣಿಗಳು

೧ ಬಸವಣ್ಣನವರ ವಚನಗಳು, ಎಸ್. ವ್ಹಿ. ಕಲ್ಮಠ, ಬಿ. ಜಿ. ಸಂಕೇಶ್ವರ ಪಬ್ಲಿಷರ, ಗದಗ, ೧೯೬೫, ಪು. ೧೬೬.

೨ ಅದೇ, ಪು. ೧೮೬.

೩ ವಚನಧರ್ಮಸಾರ, ಎಂ. ಆರ್. ಶ್ರೀನಿವಾಸಮೂರ್ತಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೫೬, ಪು. ೨೧೬.

೪ ಅದೇ, ಪು. ೨೧೭.

೫ ಹರಿದಾಸರ ಭಕ್ತಿ ಸ್ವರೂಪ, ಟಿ. ಎನ್. ನಾಗರತ್ನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾ ನಿಲಯ, ಮೈಸೂರು, ೧೯೮೬, ಉಲ್ಲೇಖ ಪು. ೧೫೯.

೬ ಪುರಂದರ ಸಾಹಿತ್ಯ ದರ್ಶನ, ಸಂಪುಟ ೨, ಅಧ್ಯಾತ್ಮ ದರ್ಶನ, ಸಾ.ಕೃ. ರಾಮಚಂದ್ರ ರಾವ್(ಸಂ), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫, ಪದಸಂಖ್ಯೆ ೭೪, ಪು.೧೯೯.

೭ ಅಧ್ಯಾತ್ಮ ಸಂಕೀರ್ತನಲು, ಸಂ. ೭, ರಾಳ್ಳಪಲ್ಲಿ ಅನಂತಕೃಷ್ಣಶರ್ಮ ಮತ್ತು ಉದಯಗಿರಿ ಶ್ರೀನಿವಾಸಾಚಾರ್ಯರಿಂದ ಪರಿಶೋಧಿತವಾದುದು. ತಿರುಮಲ ತಿರುಪತಿ ಮುದ್ರಶಾಲೆ, ೧೯೫೧, ಸಂಕೀರ್ತನ ಸಂಖ್ಯೆ ೧೫೯, ಪು. ೧೦೬-೧೦೭.

೮ ರಾಮದಾಸು ಕೀರ್ತನಲು (ಸಂ.) ಮಂಚಾಳ ಜಗನ್ನಾಥರಾವು, ಆಂಧ್ರಪ್ರದೇಶ್ ಸಂಗೀತ ನಾಟಕ ಅಕಾಡೆಮಿ, ೧೯೭೫, ಪು. ೯.

೯ ತಿರುಪತಿ ತಿಮ್ಮಪ್ಪ, ಎಸ್.ಕೆ. ರಾಮಚಂದ್ರರಾವ್, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು, ೧೯೮೦, ಪು. ೩೦ ರಲ್ಲಿರುವ ಉಲ್ಲೇಖ.

೧೦ ಸ್ತವಕುಸುಮಾಂಜಲಿ, ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು, ೧೯೮೮, ಅನ್ನಪೂರ್ಣಾ ಸ್ತೋತ್ರಮ್, ಪು. ೨೪೦.

೧೧ ಬಸವಣ್ಣನವರ ವಚನಗಳು, ಎಸ್. ವ್ಹಿ.ಕಲ್ಮಠ, ಪು. ೧೪೭.

೧೨ ಹರಿದಾಸ ಕೀರ್ತನ ಸುಧಾಸಾಗರ, ತೃತೀಯ ತರಂಗ, ಎನ್. ಚೆನ್ನಕೇಶವಯ್ಯ, ೧೯೭೪, ಪು.೧೭೨.

೧೩ ಅದೇ, ಪು. ೨೦೦.

೧೪ ಕನಕ ಸಾಹಿತ್ಯದಲ್ಲಿ ಭಕ್ತಿ ಸ್ವರೂಪ ಲೇಖನದಲ್ಲಿನ ಉಲ್ಲೇಖ - ವಸಂತ ಕುಷ್ಟಗಿ - ಕನಕ ಸಾಹಿತ್ಯ ದರ್ಶನ, ಸಂ. ೧, (ಸಂ.), ದೇ. ಜವರೇಗೌಡ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೦, ಪು. ೭೮೪.

೧೫ ಪುರಂದರ ಸಾಹಿತ್ಯ ದರ್ಶನ, ಸಂಪುಟ ೩, ಸಮಾಜ ದರ್ಶನ, ಸಾ. ಕೃ. ರಾಮಚಂದ್ರರಾವ್ (ಸಂ.), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫, ಪದಸಂಖ್ಯೆ ೫೦, ಪು.೧೧೭.

೧೬ ಪುರಂದರ ಸಾಹಿತ್ಯ ದರ್ಶನ, ಸಂಪುಟ ೪, ಕೀರ್ತನ ದರ್ಶನ, ಸಾ. ಕೃ. ರಾಮಚಂದ್ರ ರಾವ್ (ಸಂ.), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫, ಭಾಗ ಮೂರರಲ್ಲಿ ೧೨೭ನೇ ಉಗಾಭೋಗ.

೧೭ ಪು.ಸಾ. ದರ್ಶನ, ಸಂ. ೨, ಸಾ. ಕೃ. ರಾಮಚಂದ್ರರಾವ್ (ಸಂ.), ಪದಸಂಖ್ಯೆ ೨೨೦, ಪು. ೪೨೫.

೧೮ ಅದೇ, ಪದಸಂಖ್ಯೆ ೮೧, ಪು. ೨೧೫.

೧೯ ಅದೇ, ಪದಸಂಖ್ಯೆ ೧೭೫, ಪು. ೩೬೮.

೨೦ ಬಸವಣ್ಣನವರ ವಚನಗಳು, ಎಸ್. ವ್ಹಿ. ಕಲ್ಮಠ, ಪು. ೨೨.

೨೧ ಅಕ್ಕನ ವಚನಗಳು (ಸಂ.), ಎಲ್. ಬಸವರಾಜು, ಗೀತಾ ಬುಕ್ ಹೌಸ್, ಮೈಸೂರು, ೧೯೭೨, ಪು. ೧೧೦.

೨೨ ಅದೇ, ಪು. ೫೯.

೨೩ ಪು. ಸಾ. ದರ್ಶನ, ಸಂ. ೩, ಸಾ. ಕೃ. ರಾಮಚಂದ್ರರಾವ್ (ಸಂ.), ಪದಸಂಖ್ಯೆ ೧೯೪, ಪು. ೩೧೩.

೨೪ ರಾಮದಾಸು ಕೀರ್ತನಲು (ಸಂ.), ಮಂಚಾಳ ಜಗನ್ನಾಥರಾವು, ಪು. ೩೯೦-೩೯೧.

೨೫ ಪು. ಸಾ. ದರ್ಶನ, ಸಂ. ೧, ಜೀವನ ದರ್ಶನ, ಸಾ. ಕೃ. ರಾಮಚಂದ್ರರಾವ್ (ಸಂ.), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫, ಪದಸಂಖ್ಯೆ ೮೩, ಪು. ೨೪೧.

೨೬ ಅದೇ, ಪದಸಂಖ್ಯೆ ೧೫೫, ಪು. ೪೦೦.

೨೭ ಅದೇ, ಸಂಪುಟ ೩, ಪದಸಂಖ್ಯೆ ೧೫೭, ಪು. ೨೬೭.

೨೮ ಅದೇ, ಪದಸಂಖ್ಯೆ ೧೧, ಪು. ೫೫.

೨೯ ಹರಿದಾಸ ಕೀರ್ತನ ಸುಧಾಸಾಗರ, ತೃತೀಯ ತರಂಗ, ಎನ್. ಚೆನ್ನಕೇಶವಯ್ಯ, ಪು. ೧೨೨.

೩೦ ಅಧ್ಯಾತ್ಮ ಸಂಕೀರ್ತನಲು, ಸಂ. ೭, ರಾಳ್ಳಪಲ್ಲಿ ಅನಂತಕೃಷ್ಣಶರ್ಮ ಮತ್ತು ಉದಯಗಿರಿ ಶ್ರೀನಿವಾಸಚಾರ್ಯ, ಸಂಕೀರ್ತನ ಸಂಖ್ಯೆ ೨೪೯, ಪು. ೧೬೬-೧೬೭.

೩೧ ಅಧ್ಯಾತ್ಮ ಸಂಕೀರ್ತನಲು, ರಾಳ್ಳಪಲ್ಲಿ ಅನಂತಕೃಷ್ಣಶರ್ಮ, ತಿರುಮಲ ತಿರುಪತಿ ದೇವಸ್ಥಾನ, ೧೯೫೫, ಪು. ೩೦೮.

೩೨ ರಾಮದಾಸು ಕೀರ್ತನಲು (ಸಂ.), ಮಂಚಾಳ ಜಗನ್ನಥರಾವು, ಪು. ೬.

೩೩ ಅದೇ, ಪು. ೮.

೩೩.೧ ಪುರಂದರ ಸಾಹಿತ್ಯದರ್ಶನ, ಸಂ. ೩, ಸಮಾಜದರ್ಶನ, ಪ್ರೊ. ಸಾ. ಕೃ. ರಾಮಚಂದ್ರರಾವ್, (ಸಂ.) ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫, ಪು. ೧೬ರಲ್ಲಿ ಉಲ್ಲೇಖ.

೩೪ ಬಸವಣ್ಣನವರ ವಚನಗಳು, ಎಸ್. ವ್ಹಿ. ಕಲ್ಮಠ, ಪು. ೨೩.

೩೫ ಅದೇ, ಪು. ೧೯೯.

೩೬ ಪು. ಸಾ. ದರ್ಶನ, ಸಂ. ೨, ಸಾ. ಕೃ. ರಾಮಚಂದ್ರರಾವ್, ಪದಸಂಖ್ಯೆ ೯, ಪು. ೬೮.

೩೭ ರಾಮದಾಸು ಸಂಕೀರ್ತನಲು (ಸಂ.), ಮಂಚಾಳ ಜಗನ್ನಾಥರಾವು, ಪು. ೧೫.

೩೮ ಅದೇ, ಪು. ೪೫೧.

೩೯ ಅದೇ, ಪು. ೪೦೬.

೪೦ ಅಧ್ಯಾತ್ಮ ಸಂಕೀರ್ತನಲು, ಸಂಪುಟ ೨, ವಿ. ವಿಜಯರಾಘವಾಚಾರ್ಯ ಮತ್ತು ಜಿ. ಆದಿ ನಾರಾಯಣ ನಾಯ್ಡು, ಸಂಕೀರ್ತನ ಸಂಖ್ಯೆ ೨೫, ಪು. ೧೬.

೪೧ ಪು. ಸಾ. ದರ್ಶನ, ಸಂ. ೨, ಸಾ.ಕೃ. ರಾಮಚಂದ್ರರಾವ್ (ಸಂ.), ಪದಸಂಖ್ಯೆ ೧೧೭, ಪು. ೨೭೪.

೪೨ ವಸಂತ ಕುಷ್ಟಗಿಯವರ ಲೇಖನದಲ್ಲಿ ಉಲ್ಲೇಖ. ಕನಕ ಸಾಹಿತ್ಯ ದರ್ಶನ, ಸಂ. ೧, (ಸಂ.), ದೇ. ಜವರೇಗೌಡ, ಪು. ೭೮೪.

೪೩ ತಾಳ್ಳಪಾಕ ಸಾಹಿತ್ಯಮು, ಅಧ್ಯಾತ್ಮ ಸಂಕೀರ್ತನಲು, ಸಂಪುಟಮು ೧, ಪರಿಷ್ಕೃತ ಗೌರಿಪೆದ್ದಿ ರಾಮಸುಬ್ಬಶರ್ಮ, ಪಿ.ವಿ.ಆರ್.ಕೆ. ಪ್ರಸಾದ್ ಪ್ರಕಟಣೆ, ೧೯೮೦, ಕೀರ್ತನ ಸಂಖ್ಯೆ ೫೧, ಪು. ೩೪.

೪೪ ಅಧ್ಯಾತ್ಮ ಸಂಕೀರ್ತನಲು, ಸಂ. ೨, ಸಂ. ೧೧, ರಾಳ್ಳಪಲ್ಲಿ ಅನಂತಕೃಷ್ಣಶರ್ಮ, ಸಂಕೀರ್ತನ ಸಂಖ್ಯೆ ೧೫೯, ಪು. ೩೨೩-೩೨೪.

೪೫ ಶ್ರೀತಾಳ್ಳ ಪಾಕ ಅನ್ನಮಾಚಾರ್ಯುಲ ಜೀವಿತಚರಿತ್ರಮು, ವೇಟೂರಿ ಪ್ರಭಾಕರಶಾಸ್ತ್ರಿ, ತಿರುಮಲ ತಿರುಪತಿ ದೇವಸ್ಥಾನ, ೧೯೬೬, ಪು. ೧೨.

೪೬ ತಾಳ್ಳಪಾಕ ಸಾಹಿತ್ಯಮು, ಅಧ್ಯಾತ್ಮ ಸಂಕೀರ್ತನಲು, ಸಂಪುಟಮು ೧, ಗೌರಿಪೆದ್ದಿ ರಾಮ ಸುಬ್ಬಶರ್ಮ, ಸಂಕೀರ್ತನ ಸಂಖ್ಯೆ ೬೬, ಪು. ೪೪.

೪೭ ಹರಿದಾಸರ ಭಕ್ತಿ ಸ್ವರೂಪ, ಟಿ. ಎನ್. ನಾಗರತ್ನ, ಪು. ೧೨೭.

೪೮ ಶಂಕರಾಚಾರ್ಯ ವಿರಚಿತ ಚರ್ಪಟ ಪಂಜರಿಕಾ ಸ್ತೋತ್ರಮ್, ಸ್ತವಕುಸುಮಾಂಜಲಿ, ಶ್ರೀರಾಮ

ಕೃಷ್ಣಾಶ್ರಮ, ಮೈಸೂರು, ೧೯೮೮, ಪು. ೯೦.

೪೯ ಹರಿದಾಸ ಕೀರ್ತನ ಸುಧಾಸಾಗರ, ತೃತೀಯ ತರಂಗ, ಎನ್. ಚೆನ್ನಕೇಶವಯ್ಯ, ಪು. ೩೫.

೫೦ ಪು.ಸಾ. ದರ್ಶನ, ಸಂ. ೩, ಸಾ.ಕೃ. ರಾಮಚಂದ್ರರಾವ್, (ಸಂ.), ಪದಸಂಖ್ಯೆ ೨೧೧, ಪು. ೩೩೩.

೫೧ ಹರಿದಾಸ ಕೀರ್ತನ ಸುಧಾಸಾಗರ, ತೃತೀಯ ತರಂಗ, ಎನ್. ಚೆನ್ನಕೇಶವಯ್ಯ, ಪು. ೯೨.

೫೨ ಅದೇ, ಪು. ೭೫.

೫೩ ವಚನ ಧರ್ಮಸಾರ, ಎಂ. ಆರ್. ಶೀನಿವಾಸಮೂರ್ತಿ, ಪು. ೧೭.

೫೪ ಬಸವಣ್ಣನವರ ವಚನಗಳು, ಎಸ್.ಷಿ. ಕಲ್ಮಠ, ಪು. ೧೦೯.

೫೫ ಅದೇ, ಪು. ೫೩.

೫೬ ಅಕ್ಕನ ವಚನಗಳು, (ಸಂ.)೨, ಎಲ್. ಬಸವರಾಜು, ಪು. ೧೦೯.

೫೭ ತಾಳ್ಳಪಾಕ ಸಾಹಿತ್ಯಮು, ಅಧ್ಯಾತ್ಮ ಸಂಕೀರ್ತನಲು, ಸಂಪುಟಮು ೧, ಗೌರಿಪೆದ್ದಿ ರಾಮ ಸುಬ್ಬಶರ್ಮ, ಸಂಕೀರ್ತನ ಸಂಖ್ಯೆ ೫೧, ಪು. ೩೪.

೫೮ ಅದೇ, ಸಂಕೀರ್ತನ ಸಂಖ್ಯೆ ೩೬೭, ಪು. ೨೪೫-೨೪೬.

೫೯ ಶ್ರೀ ತಾಳ್ಳಪಾಕ ಅನ್ನಮಾಚಾರ್ಯುಲ ಜೀವಿತ ಚರಿತ್ರಮು, ವೇಟೂರಿ ಪ್ರಭಾಕರಶಾಸ್ತ್ರಿ, ಪು. ೪.

೬೦ ರಾಮದಾಸು ಕೀರ್ತನಲು, (ಸಂ.), ಮಂಚಾಳ ಜಗನ್ನಾಥರಾವ್, ಪು. ೪೬.

೬೧ ಅದೇ, ಪು. ೪೩.

೬೨ ಪು. ಸಾ. ದರ್ಶನ, ಸಂ. ೧, ಸಾ.ಕೃ. ರಾಮಚಂದ್ರರಾವ್ (ಸಂ.), ಪದಸಂಖ್ಯೆ ೧೪೬, ಪು. ೩೭೪.

೬೩ ಹರಿದಾಸ ಕೀರ್ತನ ಸುಧಾಸಾಗರ, ತೃತೀಯ ತರಂಗ, ಎನ್. ಚೆನ್ನಕೇಶವಯ್ಯ, ಪು. ೧೪೧.

೬೪ ರಾಮದಾಸು ಕೀರ್ತನಲು, (ಸಂ.), ಮಂಚಾಳ ಜಗನ್ನಾಥರಾವ್, ಪು. ೪೬೭.

೬೫ ಪು.ಸಾ. ದರ್ಶನ, ಸಂ. ೩, ಸಾ.ಕೃ. ರಾಮಚಂದ್ರರಾವ್, (ಸಂ.), ಪದಸಂಖ್ಯೆ ೨೫, ಪು. ೭೯.

೬೬ ಅದೇ, ಪದಸಂಖ್ಯೆ ೪೪, ಪು. ೧೦೩.

೬೭ ಅದೇ, ಪದಸಂಖ್ಯೆ ೨೧, ಪು. ೭೫.

೬೮ ಅದೇ, ಪದಸಂಖ್ಯೆ ೩೩, ಪು. ೯೧.

೬೯ ತಾಳ್ಳಪಾಕ ಸಾಹಿತ್ಯಮು, ಅಧ್ಯಾತ್ಮ ಸಂಕೀರ್ತನಲು, ಸಂಪುಟಮು ೧, ಗೌರಿಪೆದ್ದಿ ರಾಮಸುಬ್ಬ ಶರ್ಮ, ಕೀರ್ತನ ಸಂಖ್ಯೆ ೪೧೩, ಪು. ೨೭೭.

೭೦ ಅಧ್ಯಾತ್ಮ ಸಂಕೀರ್ತನಲು, ಸಂ. ೭, ರಾಳ್ಳಪಲ್ಲಿ ಅನಂತಕೃಷ್ಣಶರ್ಮ ಮತ್ತು ಉದಯಗಿರಿ ಶ್ರೀನಿವಾಸಾಚಾರ್ಯ, ಸಂಕೀರ್ತನ ಸಂಖ್ಯೆ ೨೧೬, ಪು. ೧೪೫.

೭೧ ಬಮ್ಮೆರ ಪೋತನಾಮಾತ್ಯ ಪ್ರಣೀತ ಶ್ರೀಮದಾಂಧ್ರ ಭಾಗವತಮು, ಸಪ್ತಮಸ್ಕಂದ, ತೇವ ಪ್ಪೆರುಮಾಳ್ಳಯ್ಯ ನವರಿಂದ ಬರೆಯಲ್ಪಟ್ಟ ಪಾಠಾಂತರಗಳೊಂದಿಗೆ ರಾಮಾನುಜಯ್ಯನವ ರಿಂದ ಪರಿಶೋಧಿತವಾದುದು, ಎ. ಕಣ್ಣನ್ ಸೆಟ್ಟಿ ಅಂಡ್ ಕಂಪೆನಿ, ಮದರಾಸು, ೧೯೨೮, ಪು. ೫೪೩, ಅಲ್ಲದೆ ಉಲ್ಲೇಖ *Great Composers II* Tyagaraja, P. Sambamurthy, ೧೯೫೫, ಪು. ೬೬.

೭೨ ಮುಕುಂದಮಾಲಾ (ಸಂ.), ಜಿ.ಪಿ. ರಾಜರತ್ನಂ, ವಿದೇಹ, ಮಲ್ಲೇಶ್ವರಂ, ಬೆಂಗಳೂರು, ೧೯೬೮, ಶ್ಲೋಕ ೧೬, ಪು. ೨೧.

೭೩ ಪು.ಸಾ. ದರ್ಶನ, ಸಂ. ೩, ಸಾ.ಕೃ. ರಾಮಚಂದ್ರರಾವ್, (ಸಂ.), ಪದಸಂಖ್ಯೆ ೧೭, ಪು. ೬೪-೬೫.

೭೪ ಅದೇ, ಪದಸಂಖ್ಯೆ ೧೫೫, ಪು. ೨೬೫.

೭೫ ಅದೇ, ಸಂ. ೧, ಸಾ. ಕೃ. ರಾಮಚಂದ್ರರಾವ್, (ಸಂ.), ಪದಸಂಖ್ಯೆ ೨೯, ಪು. ೧೨೯.

೭೬ ವಚನ ಧರ್ಮಸಾರ, ಎಂ. ಆರ್. ಶ್ರೀನಿವಾಸಮೂರ್ತಿ, ಪು. ೬೩.

೭೭ ಅದೇ, ಪು. ೨೫೭.

೭೮ *The Spiritual Heritage of Tyagaraja*, C. Ramanujachari & Dr. V. Raghavan, Sri Ramakrishna Math, Madras, 1966, Introductory Thesis, ಪು. ೯೫.

೭೯ ಪು. ಸಾ. ದರ್ಶನ, ಸಂ. ೩, ಸಾ. ಕೃ. ರಾಮಚಂದ್ರರಾವ್, (ಸಂ.), ಪದಸಂಖ್ಯೆ ೧೧೬, ಪು. ೪೨೦.

೮೦ ಅದೇ, ಪದಸಂಖ್ಯೆ ೨೩೫, ಪು. ೪೪೨.

೮೧ ತಾಳ್ಳಪಾಕ ಸಾಹಿತ್ಯಮು, ಅಧ್ಯಾತ್ಮ ಸಂಕೀರ್ತನಲು, ಸಂಪುಟಮು ೧, ಗೌರಿಪೆದ್ದಿ ರಾಮಸುಬ್ಬ ಶರ್ಮ, ಸಂಕೀರ್ತನ ಸಂಖ್ಯೆ ೧೯೮, ಪು. ೧೩೨.

೮೨ ವಚನ ಧರ್ಮಸಾರ, ಎಂ. ಆರ್. ಶ್ರೀನಿವಾಸಮೂರ್ತಿ, ಪು. ೪೨.

೮೩ ಅದೇ, ಪು. ೧೫೮.

೮೪ ಅದೇ, ಪು. ೧೭.

೮೫ ರಾಮದಾಸು ಕೀರ್ತನಲು (ಸಂ.), ಮಂಚಾಳ ಜಗನ್ನಾಥರಾವು, ಪು. ೩೯೪.

೮೬ ಅದೇ, ಪು. ೨೭೧.

೮೭ ಅನ್ನಮಾಚಾರ್ಯುಲ ಸಂಕೀರ್ತನಲು, ಕಾಮಿಶೆಟ್ಟಿ ಶ್ರೀನಿವಾಸುಲುಶೆಟ್ಟಿ, ತಿರುಮಲ ತಿರುಪತಿ ದೇವಸ್ಥಾನ, ೧೯೭೮, ಕೀರ್ತನ ಸಂಖ್ಯೆ ೧೬, ಪು. ೧೬.

೮೮ ತಾಳ್ಳಪಾಕ ಸಾಹಿತ್ಯಮು, ಅಧ್ಯಾತ್ಮ ಸಂಕೀರ್ತನಲು, ಸಂಪುಟಮು ೧, ಗೌರಿಪೆದ್ದಿ ರಾಮಸುಬ್ಬ ಶರ್ಮ, ಸಂಕೀರ್ತನ ಸಂಖ್ಯೆ ೪೭೦, ಪು. ೩೧೫.

೮೯ ನಾರಾಯಣತೀರ್ಥರ ಕೃಷ್ಣಲೀಲಾತರಂಗಿಣಿಯ ಆರಂಭದಲ್ಲಿರುವ ಮಂಗಳ ಶ್ಲೋಕ.

೯೦ ಅದೇ, ಪ್ರಥಮ ತರಂಗ, ಹದಿನಾಲ್ಕನೇ ರಚನೆ.

೯೧ ರಾಮದಾಸು ಕೀರ್ತನಲು, (ಸಂ.), ಮಂಚಾಳ ಜಗನ್ನಾಥರಾವು, ಪು. ೩೮೪.

೯೨ ಅದೇ, ಪು. ೧೯೧.

೯೩ ಅದೇ, ಪು. ೧೦೯.

೯೪ ಉಲ್ಲೇಖ. *The Spriritual Heritage of Tyagaraja*, C. Ramanujachari & Dr. V. Raghavan, Introductory Thesis, ಪು. ೭ರಲ್ಲಿನ ಅಡಿಟಿಪ್ಪಣಿ.

೯೫ ಅದೇ, ಪು. ೨೮.

೯೬ ಅನ್ನಮಾಚಾರ್ಯುಲವಾರಿ ಅಧ್ಯಾತ್ಮ ಶೃಂಗಾರ ಸಂಕೀರ್ತನಲು, ಸಂಪುಟ ೨, ತಿ. ತಿ. ದೇವಸ್ಥಾನ, ತಿರುಪತಿ, ೧೯೮೦, ಪು. ೧೧೧.

# ಪರಿಸಮಾಪ್ತಿ

ಶ್ರೀ ತ್ಯಾಗರಾಜರ ಸಂಗೀತ ಮತ್ತು ಭಕ್ತಿಗಳನ್ನು ಕುರಿತು ಸಂಕ್ಷಿಪ್ತವಾಗಿ ಹೇಳಬೇಕೆಂದರೆ, ಸಾಮಾನ್ಯ ಭಾಷೆಗೆ ಅಥವಾ ತರ್ಕಕ್ಕೆ ನಿಲುಕದ ನಾದರೂಪಿಯಾದ ಭಗವಂತನನ್ನು ಸಂಗೀತ ಮಾಧ್ಯಮದ ಮೂಲಕ ಸಾಕ್ಷಾತ್ಕರಿಸಿಕೊಳ್ಳಬಹುದೆಂಬುದನ್ನು ಸ್ವಾನುಭವಪೂರ್ವಕವಾಗಿ ಜನಸಾಮಾನ್ಯರಿಗೂ ತ್ಯಾಗರಾಜರು ಅರ್ಥೈಸಿದ್ದಾರೆ. ಸಂಪ್ರದಾಯ ಬದ್ಧವಾಗಿ, ನಿಯಮಿತವಾಗಿ ಭಗವದ್‌ವಸ್ತುವುಳ್ಳ ಸಂಗೀತವನ್ನು ಅಭ್ಯಸಿಸಬೇಕಾದ ಕ್ರಮವನ್ನು ತಿಳಿಸಿದವರು ತ್ಯಾಗರಾಜರು. ಇವರ ರಚನೆಗಳಲ್ಲಿ ಕೃತಿ-ಕೀರ್ತನೆ ಹಾಗೂ ಗೀತನಾಟಕಗಳೆಂದು ವಿಧಗಳುಂಟು. ಇವುಗಳಲ್ಲಿ ಕೃತಿ ಕೀರ್ತನೆಗಳ ವಸ್ತು ಬಹುತೇಕ ಭಗವಂತನೇ ಆದ್ದರಿಂದ ಇವುಗಳೆಲ್ಲವನ್ನೂ ಪರ್ಯಾಯವಾಗಿ 'ಕೀರ್ತನೆ' ಗಳೆಂದು ಗುರುತಿಸಿದರೂ ತಪ್ಪಿಲ್ಲ. ಇವುಗಳಲ್ಲಿ ಭಗವಂತನ ನಾಮಸಂಕೀರ್ತನೆಯನ್ನೇ ಪ್ರಧಾನವಾಗಿ ಒಳಗೊಂಡು, ಆನುಷಂಗಿಕವಾಗಿ ಇತರ ವಿಷಯಗಳನ್ನೂ ಅಳವಡಿಸಿಕೊಂಡ್ಡ ಸರಳ ಸಂಗೀತ ಹೊಂದಿದ ರಚನೆಗಳು ದಿವ್ಯನಾಮಗಳೆಂದೂ, ಉತ್ಸವಗಳ ಸಂದರ್ಭಕ್ಕಾಗಿ ರಚಿತಗೊಂಡ ಇದೇ ಮಾದರಿಯ ಸರಳ ರಚನೆಗಳನ್ನು ಉತ್ಸವಸಂಪ್ರದಾಯ ರಚನೆಗಳೆಂದೂ ಗುರುತಿಸಬಹುದು. ದಿವ್ಯನಾಮರಚನೆಗಳಿಗೆ ಹೋಲಿಸಿದಾಗ ಉತ್ಸವ ಸಂಪ್ರದಾಯ ರಚನೆಗಳನ್ನು ಗುರುತಿಸುವುದು ಸುಲಭ. ಈ ಮಾದರಿಯ ರಚನೆಗಳು ದೈನಂದಿನ ಪೂಜೆಯಲ್ಲೂ, ಆಲಯಾರ್ಚನೆಗಳಲ್ಲೂ, ಒಂಟಿಯಾಗಿಯೂ ಸಾಮೂಹಿಕವಾಗಿಯೂ ಬಳಸಲು ಅನುಕೂಲವಾದವು.

ತ್ಯಾಗರಾಜರ ರಚನೆಗಳನ್ನು ಹಲವು ವಿಧದಲ್ಲಿ ವಿಭಾಗಿಸಬಹುದಾದರೂ ಸರಳವಾದವು, ಮಧ್ಯಮವಾದವು ಹಾಗೂ ಕ್ಲಿಷ್ಟವಾದವು ಎಂದು ರಚನೆಗಳ ರಚನಾರೂಪದ ಆಧಾರದ ಮೇಲೆ ವಿಂಗಡಿಸುವುದು ಸೂಕ್ತವಾಗುತ್ತದೆ. ಸರಳವಾದವು ಎಲ್ಲರೂ ಹಾಡಬಹುದು. ಮಧ್ಯಮವಾದವು ಸಂಗೀತದಲ್ಲಿ ಸ್ವಲ್ಪಮಟ್ಟಿನ ಪರಿಶ್ರಮವಿರುವವರು ಹಾಡಬಹುದಾದರೆ, ಕ್ಲಿಷ್ಟವಾದವುಗಳ ಪ್ರಯೋಗಕ್ಕೆ ವಿಶೇಷ ತರಬೇತಿಯೇ ಅತ್ಯಗತ್ಯವಾಗುತ್ತವೆ. ಒಟ್ಟಾರೆ ಇಂತಹ ಸುಮಾರು ೭೦೦ ರಚನೆಗಳು ತ್ಯಾಗರಾಜಾಂಕಿತದಲ್ಲಿ ಲಭ್ಯವಿವೆ. ಇವುಗಳಲ್ಲಿ ಅಲಂಕಾರಿಕ ಅಂಶಗಳನ್ನೂ ಕಾಣುತ್ತೇವೆ.

ತ್ಯಾಗರಾಜರ ರಚನೆಗಳಲ್ಲಿ ಕೃತಿಗುಚ್ಛಗಳೂ, ಕ್ಷೇತ್ರಕೃತಿಗಳೂ ಒಳಗೊಂಡಿವೆ. ಅವರ ಘನರಾಗ ಪಂಚರತ್ನ ರಚನೆಗಳು ಬಹು ಜನಪ್ರಿಯವಾದವು. ಇವು ತಾನವರ್ಣಗಳ ರೂಪದಲ್ಲಿದ್ದು, ಮುಖ್ಯವಾಗಿ ಶಿಷ್ಯರ ಕೋರಿಕೆಯ ಮೇರೆಗೆ ಈ ಕೃತಿಗುಚ್ಛವನ್ನು ರಚಿಸಿದರೆಂಬುದು ಪ್ರತೀತಿ. ಇವುಗಳನ್ನು ಎರಡು ಅರ್ಥದಲ್ಲಿ 'ಘನ' ಗಳೆಂದು ನಾವು ಕರೆಯಬಹುದು. ಒಂದು—ಅವುಗಳ ರಾಗಗಳ ದೃಷ್ಟಿಯಿಂದ ಅವು ಘನವಾದವು.

ಎರಡು—ದೀರ್ಘತೆಯ ದೃಷ್ಟಿಯಿಂದಲೂ ಅವು ಘನವಾದವೇ. ಸಾಮಾನ್ಯವಾಗಿ ಸಮುದಾಯ ಕೃತಿಗಳೆಂದರೆ ಆ ಕೃತಿಗಳ ವಸ್ತುವು ಒಂದೇ ಆಗಿರುವುದು. ಆದರೆ ಘನ ರಾಗಪಂಚರತ್ನಗಳ ವೈಶಿಷ್ಟ್ಯವೆಂದರೆ ಅವುಗಳಲ್ಲಿ ವಸ್ತುವೈವಿಧ್ಯ ಮತ್ತು ರಾಗವೈವಿಧ್ಯ ಗಳು ಕಾಣಬರುತ್ತದೆ. ಅವುಗಳ ಪ್ರಯೋಗದಲ್ಲೂ ವ್ಯತ್ಯಾಸವಿರುವುದು ಗಮನಾರ್ಹ (ಎಡುಪು ಹಾಗೂ ಚರಣಗಳ ನಂತರ ಪಲ್ಲವಿ ಅಥವಾ ಚರಣದಾರಂಭವನ್ನೇ ಪುನರಾ ವರ್ತಿಸುವುದು). ಇವಲ್ಲದೆ ತ್ಯಾಗರಾಜರು ತಾವು ಸಂದರ್ಶಿಸಿದ ಕ್ಷೇತ್ರದ ದೇವ-ದೇವಿ ಯರನ್ನೂ ಕುರಿತು ಹಾಡಿದ್ದಾರೆ. ಇಷ್ಟಲ್ಲದೆ ನಾರದ ಕೃತಿಗುಚ್ಛ, ತುಳಸೀಕೃತಿಗುಚ್ಛ ಗಳೂ ತ್ಯಾಗರಾಜರ ರಚನಭಂಡಾರದಲ್ಲಿವೆ. ಈ ಸಂದರ್ಭದಲ್ಲಿ ಧನುಷ್ಕೋಟಿಯನ್ನು ಕುರಿತು ಅವರು ಮಾಡಿರುವ ಪ್ರಸ್ತಾಪವು ಗಮನಾರ್ಹವಾದುದು. ತ್ಯಾಗರಾಜರು ಕ್ಷೇತ್ರಾಟನೆಯನ್ನು ಕೆಲವೆಡೆ ಸಮರ್ಥಿಸುವರಾದರೂ ಇಲ್ಲಿ ಧನುಷ್ಕೋಟಿ ಶಬ್ದವನ್ನು ಅವರು ಸಾಂಕೇತಿಕವಾಗಿ ಬಳಸುತ್ತಾರೆ. ಸರ್ವತೀರ್ಥಗಳೂ, ಸರ್ವದೇವತೆಗಳೂ ಶ್ರೀರಾಮನಲ್ಲೇ ನೆಲೆಸಿರುವಾಗ ಇತರ ತೀರ್ಥಗಳ ಅಥವಾ ದೇವತೆಗಳ ಅಗತ್ಯವಿಲ್ಲ ವೆಂಬುದು ಅವರ ಇಂಗಿತ. ಇದೇ ರೀತಿಯ ಸಾಂಕೇತಿಕ ನಿರೂಪಣೆಯನ್ನು ಅವರು ಬಳಸಿರುವ 'ಅಯೋಧ್ಯೆ' ಶಬ್ದದಲ್ಲೂ ನಾವು ಕಾಣಬಹುದು. ಅಯೋಧ್ಯೆ ಎಂಬ ಶಬ್ದದ ವಾಕ್ಯಾರ್ಥ ಶತ್ರುಗಳಿಗೆ ಭೇದಿಸಲು ಅಸಾಧ್ಯವಾದ ನಗರ ಎಂಬುದು. ಆದರೆ ತ್ಯಾಗರಾಜರು ಇದಕ್ಕೆ ಇನ್ನೂ ಆಳವಾದ ಅರ್ಥವನ್ನು ನೀಡುತ್ತಾರೆ. ಅವರ ಪ್ರಕಾರ ಅಯೋಧ್ಯೆ ಎಂಬುದು ಶತ್ರುಗಳಿಗೆ ಅಭೇದ್ಯವಾದ ನಗರವಷ್ಟೇ ಅಲ್ಲ. 'ಅದು ಹುಟ್ಟು ಸಾವುಗಳಿಲ್ಲದ ನೆಲೆ'. ಈ ನೆಲೆಯೂ ಬಾಹ್ಯದಲ್ಲಿ, ಬೇರೆಲ್ಲೋ ಇಲ್ಲ. ನಮ್ಮೊಳಗೇ, ನಮ್ಮ ಹೃದಯಾಕಾಶದಲ್ಲೇ ಇದೆ. ಇಲ್ಲಿ ಮೆರೆಯುವ ಆತ್ಮಾರಾಮನನ್ನು ಕಾಣದೆ ಬೇರೆಲ್ಲೋ ಆತನನ್ನು ಅರಸುವುದು ವ್ಯರ್ಥ ಎಂಬುದು ತ್ಯಾಗರಾಜರ ಇಂಗಿತ. ಎಲ್ಲ ತೀರ್ಥಯಾತ್ರೆಗಳ ಗುರಿಯೂ ಆತ್ಮಜ್ಞಾನವೇ ಎಂಬುದನ್ನು ಅವರು ನಮಗಿಲ್ಲಿ ಮನ ಗಾಣಿಸುತ್ತಿದ್ದಾರೆ. ವಾಸ್ತವವಾಗಿ ನಮ್ಮ ತೀರ್ಥಯಾತ್ರೆಯ ಪ್ರಕ್ರಿಯೆಯು ಅಂತರ್ಯ ದಿಂದ ಬಾಹ್ಯಕ್ಕಲ್ಲ; ಬಾಹ್ಯದಿಂದ ಅಂತರ್ಯಕ್ಕೆ ನಾವು ಬರಬೇಕೆಂಬುದನ್ನು ತ್ಯಾಗರಾಜರು 'ಪೂರ್ಣುನಿ ಆತ್ಮಾರಾಮುನಿ ಗೂಡಿಯಾಡ' ಎಂಬ ಸಾಲಿನಿಂದ ವ್ಯಕ್ತಪಡಿಸಿದ್ದಾರೆ. ತ್ಯಾಗರಾಜರ ಕ್ಷೇತ್ರಕೃತಿಗಳ ಸಾಲಿನಲ್ಲಿ ಅವರು ಸ್ವಕ್ಷೇತ್ರವಾದ ಚೋಳಸೀಮೆಯ ಕಾವೇರಿಯ ಬಗೆಗೆ ದೇಶಪ್ರೇಮದೊಂದಿಗೆ ನುಡಿಯುವುದು ಮತ್ತೊಂದು ವಿಶಿಷ್ಟ ಸಂಗತಿ.

ತ್ಯಾಗರಾಜರ ಸಂಗೀತದ ಬಗೆಗಿನ ವೈಶಿಷ್ಟ್ಯವೆಂದರೆ, ಅವರು ಇತರ ವಾಗ್ಗೇಯ ಕಾರರಾರೂ ಬಳಸದಿರುವಷ್ಟು ಸಂಖ್ಯೆಯ ರಾಗಗಳನ್ನು ಬಳಸಿರುವುದು. ಇವುಗಳಲ್ಲಿ ಪೂರ್ವಜರಿಂದ ಹೇಳಲ್ಪಟ್ಟ ರಾಗಗಳೂ, ಸ್ವಕಲ್ಪಿತ ರಾಗಗಳೂ ಒಳಗೊಂಡಿವೆ. ಈ ಸಂದರ್ಭದಲ್ಲಿ ಖರಹರಪ್ರಿಯ ಮತ್ತು ಶ್ರೀರಾಗಗಳನ್ನು ಉಲ್ಲೇಖಿಸಿದರೆ ತಪ್ಪಿಲ್ಲ. ಖರಹರಪ್ರಿಯದಲ್ಲಿ ತ್ಯಾಗರಾಜರು ಅಧಿಕ ರಚನೆಗಳನ್ನೂ ಅದರಲ್ಲಿ ಜನ್ಯವಾದ

ಹಲವು ರಾಗಗಳನ್ನೂ ಪ್ರಯೋಗಿಸಿದ್ದಾರಾದರೂ ಈ ರಾಗ ಇವರ ಸಮಕಾಲೀನರಾದ ಶ್ಯಾಮಶಾಸ್ತ್ರಿಗಳಲ್ಲಾಗಲೀ, ಮುತ್ತುಸ್ವಾಮಿ ದೀಕ್ಷಿತರಲ್ಲಾಗಲೀ ಬಳಕೆಯಿಲ್ಲ (ಇದೇ ರೂಪದಲ್ಲಿ). ಅಂತೆಯೇ ಶ್ರೀರಾಗದಲ್ಲಿ ದೈವತ ಪ್ರಯೋಗ ತ್ಯಾಗರಾಜರಲ್ಲಿ ಕಾಣ ಬರದು. ಅವರು ತಮ್ಮ ಜೀವಿತಾಂತ್ಯದಲ್ಲಿ ಹಾಡಿದ 'ಮನೋಹರಿ' ರಾಗವು ಕೂಡ ಖರಹರಪ್ರಿಯ ಜನ್ಯವೆಂಬುದಿಲ್ಲಿ ಗಮನಾರ್ಹ. ಈ ಮೂಲಕ ತ್ಯಾಗರಾಜರು ಶಾಸ್ತ್ರೀ ಯತೆಯನ್ನೂ ಅನುಸರಿಸುತ್ತಾ, ನೂತನವಾದುದನ್ನೂ ಅಳವಡಿಸುತ್ತಾ ಕ್ರಾಂತದರ್ಶಿ ಗಳಾಗಿದ್ದಾರೆ. ಸೃಜನಶೀಲತೆ ಎಂಬುದು–ಅದು ಯಾವುದೇ ಕ್ಷೇತ್ರದಲ್ಲಾಗಲೀ– ಪ್ರತಿಭಾವಂತನ ಲಕ್ಷಣ ಎಂಬುದಕ್ಕೆ ತ್ಯಾಗರಾಜರು ಒಂದು ಮಹಾನಿದರ್ಶನ. ಲಕ್ಷಣ ಕಾರರಾಗಿ ಹಲವು ರಾಗಗಳನ್ನು ಸೃಷ್ಟಿಸಿದರೆ, ಲಕ್ಷ್ಯಕಾರರಾಗಿ ಅವುಗಳಲ್ಲಿ ರಚನೆ ಗಳನ್ನೂ ಸೃಷ್ಟಿಸಿ ರಾಗಕ್ಕೆ ಮೂರ್ತ ರೂಪವನ್ನು ನೀಡಿದ್ದಾರೆ. ಅವರು ಪ್ರಯೋಗಿಸಿರುವ ರಾಗ ಸಮೂಹದಲ್ಲಿ ಜನಪದಧಾಟಿಯೂ ಪಾಶ್ಚಾತ್ಯಧಾಟಿಯೂ ಕಾಣಬರುತ್ತವೆ. ತಾಳ ಪ್ರಯೋಗದ ವಿಷಯವನ್ನು ಹೇಳಬೇಕೆಂದರೆ, ಅವರು ಅತಿ ಸರಳ ತಾಳಗಳನ್ನೇ ಹೆಚ್ಚಾಗಿ ಬಳಸಿದ್ದಾರೆ. ಆದಿತಾಳ ವಿಪುಲವಾಗಿಯೂ ರೂಪಕ ಮತ್ತು ಛಾಪುತಾಳಗಳು ಸ್ವಲ್ಪ ಕಡಿಮೆಯೂ ಬಳಕೆಯಿವೆ. ಅತಿ ವಿರಳವಾಗಿ ತ್ರಿಶ್ರ ನಡೆಯ ಅಳವಡಿಕೆ ಕಾಣ ಬರುತ್ತದೆ. ಅಂತೆಯೇ ರಚನೆಗಳ ಎಡುಪಿನಲ್ಲೂ (ಅತೀತ, ಅನಾಗತ) ವಿಶಿಷ್ಟತೆ ಕಾಣ ಬರುತ್ತದೆ. ತಾಳರಹಿತವಾಗಿ ಅವರ ಸಾಹಿತ್ಯವನ್ನು ಓದಿದಾಗಲೂ ಅದರಲ್ಲಿ ಲಯದ ವೈಶಿಷ್ಟ್ಯ ಎದ್ದುಕಾಣುತ್ತದೆ. ದೇಶಾದಿ ಮತ್ತು ಮಧ್ಯಾದಿ ತಾಳಗಳನ್ನು ತ್ರಿಮೂರ್ತಿ ಗಳಲ್ಲಿ ತ್ಯಾಗರಾಜರ ವಿನಹ ಇತರರು ಬಳಸಿದಂತೆ ಕಾಣಬರದು. ಒಟ್ಟಾರೆ ಅವರಲ್ಲಿ ಲಯ ಮತ್ತು ತಾಳಗಳ ಅಳವಡಿಕೆ, ರಾಗಭಾವ ಹಾಗೂ ಸಾಹಿತ್ಯಭಾವಗಳನ್ನು ಪುಷ್ಟೀ ಕರಿಸುವುದೇ ಹೊರತು ಧಕ್ಕೆ ತರುವಂತಿಲ್ಲ.

ತ್ಯಾಗರಾಜರು ಕೀರ್ತನೆಗಳನ್ನು ರಚಿಸುವುದರಲ್ಲಷ್ಟೇ ಕುಶಲರಲ್ಲ. ಅವರೊಬ್ಬ ಗೀತನಾಟಕ ಕೋವಿದರೂ ಹೌದು. ಈ ನಿಟ್ಟಿನಲ್ಲಿ ಅವರನ್ನು 'ಗೀತನಾಟಕ ಮಾರ್ಗ ದರ್ಶಿ' ಎಂದು ಸಂಬೋಧಿಸಿರುವುದೂ ಉಂಟು. ಪೂರ್ಣವಾಗಿ ಉಪಲಬ್ಧವಿರುವ ಅವರ ಎರಡು ಗೀತನಾಟಕಗಳಲ್ಲಿ, ಒಂದು ಶಾಂತಭಾವ ಪ್ರಧಾನವಾಗಿದ್ದರೆ ಮತ್ತೊಂದು ಶೃಂಗಾರಮಿಳಿತ ಭಕ್ತಿ ಪ್ರಧಾನವಾಗಿದೆ. ಎರಡು ನಾಟಕಗಳಲ್ಲೂ ಮಹಾ ಕಾವ್ಯಗಳ ಬಹುತೇಕ ಲಕ್ಷಣಗಳಿವೆ. ವಿವಿಧ ಛಂದಸ್ಸಿನ ಪದ್ಯಗಳು, ವಚನಗಳೊಂದಿಗೆ ಹಾಡುಗಳೂ ಇವೆ. ಈ ಪೈಕಿ ಪ್ರಹ್ಲಾದ ಭಕ್ತಿವಿಜಯ ನಾಟಕದ ರಚನೆಗಳು ಬಹು ಮಟ್ಟಿಗೆ ಬಿಡಿಕೃತಿಗಳಷ್ಟೇ ರಾಗಮಾಧುರ್ಯ ಹೊಂದಿದೆಯಲ್ಲದೆ ಇಲ್ಲಿನ ಕೆಲವು ರಚನೆ ಗಳು ಸಂಗೀತ ಕಚೇರಿಗಳಲ್ಲಿ ಪದೇಪದೇ ಕೇಳಿಬರುತ್ತವೆ. ಕೆಲವು ಕಚೇರಿಗಳಂತೂ ಈ ನಾಟಕದಲ್ಲಿನ ಗಣಪತಿಸ್ತುತಿಯಾದ 'ಶ್ರೀಗಣಪತಿನಿ' ರಚನೆಯಿಂದ ಆರಂಭಗೊಂಡರೆ ಎಲ್ಲ ಕಚೇರಿಗಳೂ 'ನೀನಾಮರೂಪಮುಲಕು' ಮಂಗಳದಿಂದ ಅಂತ್ಯಗೊಳ್ಳುತ್ತದೆ. ಇನ್ನು, ನೌಕಾಚರಿತ್ರೆಯಲ್ಲಿನ ಸಂಗೀತವು ಪ್ರಹ್ಲಾದ ಭಕ್ತಿವಿಜಯ ನಾಟಕದಲ್ಲಿ

ಅಳವಟ್ಟ ಸಂಗೀತಕ್ಕಿಂತಲೂ ಬಹುಮಟ್ಟಿಗೆ ಸರಳ. ದಿವ್ಯನಾಮ ರಚನೆಗಳಲ್ಲಿರುವಂತೆ ಸಂಗೀತ ಅಳವಟ್ಟಿರುವ ಕಾರಣ ಇವು ಕಚೇರಿಗಳಲ್ಲಿ ಅಷ್ಟಾಗಿ ಪ್ರಯೋಗಗೊಳ್ಳುವುದಿಲ್ಲ. ಸೌರಾಷ್ಟ್ರ, ಯದುಕುಲಕಾಂಬೋಜಿ, ಮೋಹನ ಮುಂತಾದ ಕೆಲವು ರಾಗಗಳು ಎರಡು ನಾಟಕಗಳಲ್ಲೂ ಕಾಣಬರುತ್ತವೆ.

ತ್ಯಾಗರಾಜರು ಭಕ್ತಿಗೆ ವಿಷಯವಾದ ತಮ್ಮ ದೇವರನ್ನು 'ಶ್ರೀರಾಮ'ನೆಂದು ಸಂಬೋಧಿಸುತ್ತಾರೆ. ಅವರ ದೃಷ್ಟಿಯಲ್ಲಿ ದೇವರು ಸಗುಣನೂ ಹೌದು, ನಿರ್ಗುಣನೂ ಹೌದು. ನಿರ್ಗುಣನಾದ ಭಗವಂತನು ತನ್ನ ಭಕ್ತರ ಭಕ್ತಿಗೆ ಅನುಗುಣವಾಗಿ ಆಕಾರಗುಣಗಳನ್ನು ತಳೆಯುತ್ತಾನೆ. ಸಗುಣನಾದ ಆತನು ಪರನೂ ಹೌದು, ಸುಲಭನೂ ಹೌದು. ದೇವರು ಪರನೆಂದಾಗ ಆತನು ಸರ್ವಜ್ಞ, ಸರ್ವವ್ಯಾಪಿ ಮತ್ತು ಸರ್ವಶಕ್ತನೆಂದರ್ಥ. ಎಲ್ಲವನ್ನೂ ತಿಳಿದವನಾಗಿ, ಎಲ್ಲೆಡೆಯೂ ಅಂತರ್ಯಾಮಿಯಾಗಿರುವ ಆತನ ಸರ್ವಶಕ್ತಿತ್ವವು ಸೃಷ್ಟಿ, ಸ್ಥಿತಿ ಮತ್ತು ಲಯಕಾರ್ಯಗಳಲ್ಲಿ ವ್ಯಕ್ತಗೊಳ್ಳುತ್ತದೆ. ಆತನು ಸರ್ವಶಕ್ತನೆಂದರೆ ಮನುಷ್ಯ ಕಷ್ಟವನ್ನೇಕೆ ಅನುಭವಿಸಬೇಕು ಎಂಬ ಪ್ರಶ್ನೆ ಉದ್ಭವಿಸುತ್ತದೆ. ಆದರೆ ದೇವರಿಲ್ಲಿ ಮನುಷ್ಯನಿಗೆ ಇಚ್ಛಾಸ್ವಾತಂತ್ರವನ್ನು ನೀಡಿ ಅದನ್ನು ಜೀವಿಯು ತನಗಿಷ್ಟ ಬಂದಂತೆ ಉಪಯೋಗಿಸಲು ಅವಕಾಶ ನೀಡಿರುತ್ತಾನೆ. ಹೀಗಾಗಿ ಸುಖ-ದುಃಖ ಪರಿಣಾಮಗಳನ್ನು ಎದುರಿಸುವವನು ಜೀವಿಯೇ. ಆದ್ದರಿಂದ ಜಗತ್ತಿನಲ್ಲಿರುವ ಕೆಡುಕಿಗೆ ದೇವರು ಕಾರಣನಲ್ಲ. ಆ ಜಗತ್ತಿನಲ್ಲಿರುವ ಮನುಷ್ಯನೇ ಕಾರಣ. ದೇವರು ಮನುಷ್ಯನ ಕರ್ಮಫಲಗಳ ವಿತರಕನಷ್ಟೆ.

ದೇವರು ಸರ್ವಶಕ್ತನಷ್ಟೇ ಅಲ್ಲ, ಭಕ್ತಸುಲಭನೂ ಹೌದು. ಆತನ ಈ ಸೌಲಭ್ಯ ದಯೆಯ ಮೂಲಕ ವ್ಯಕ್ತವಾಗುತ್ತದೆ. ದೇವರ ದಯೆಯೆಂಬ ಅನುಗ್ರಹ ಬಲದ ಮುಂದೆ ಮಿಕ್ಕೆಲ್ಲವೂ ನಿಶ್ಯಕ್ತವೇ ಸರಿ. ಈ ದಯೆಗೆ ಮಿತಿಯೆಂಬುದಿಲ್ಲ. ಅದು ಸಾರ್ವತ್ರಿಕ, ಸಾರ್ವಕಾಲಿಕ ಹಾಗೂ ನಿರ್ಹೇತುಕವಾದುದು. ಪರತ್ವ, ಸೌಲಭ್ಯಗಳೆರಡೂ ಈಶ್ವರನಲ್ಲಿ ಬೇರ್ಪಡಿಸಲಾಗದಂತೆ ಕ್ರಿಯಾಶೀಲವಾಗುತ್ತದೆ. ದೇವರು ಮನುಷ್ಯನ ಕಷ್ಟಕೋಟಲೆಗಳನ್ನು ನಿವಾರಿಸುವವನಷ್ಟೇ ಅಲ್ಲ, ಅವನಿಗೆ ಒಳಿತನ್ನೂ ಅದು ಲೌಕಿಕವಿರಲಿ ಅಥವಾ ಅಧ್ಯಾತ್ಮಿಕವಿರಲಿ—ಉಂಟು ಮಾಡುವವನು.

ತ್ಯಾಗರಾಜರ ಪ್ರಕಾರ ದೇವರ ದಿವ್ಯಮಂಗಳ ವಿಗ್ರಹದ ಸೌಂದರ್ಯ ವರ್ಣನಾತೀತವಾದುದು. ಇದನ್ನು ಬಣ್ಣಿಸುವಲ್ಲಿ ಅವರು ಬಳಸುವ ಶಬ್ದಗಳು ವೈವಿಧ್ಯಪೂರ್ಣವಾದುದು. ದೇವರ ಈ ಸೌಂದರ್ಯದಲ್ಲಿ ಎರಡು ಲಕ್ಷಣಗಳುಂಟು. ಅದು ಮಾನವನ ಇಂದ್ರಿಯಗಳಿಗೆ ಹಿತಕಾರಿಯೂ ಹೌದು ಮತ್ತು ಅವನನ್ನು ಅಧ್ಯಾತ್ಮಿಕ ಉನ್ನತಿಗೇರಿಸುವಂತಹುದೂ ಹೌದು. ತ್ಯಾಗರಾಜರು ಶ್ರೀರಾಮನನ್ನು ಆಪಾದಮಸ್ತಕವಾಗಿ, ಮನೋಜ್ಞವಾಗಿ ಚಿತ್ರಿಸುತ್ತಾರೆ.

ಇಂತಹ ಭಗವಂತನನ್ನು ಸೇರುವ ಅತ್ಯುತ್ತಮ ಮಾರ್ಗ ತ್ಯಾಗರಾಜರ ಪ್ರಕಾರ 'ಭಕ್ತಿಯೇ'. ಅವರು ಅಲ್ಲಲ್ಲಿ ಕರ್ಮಯೋಗ, ಜ್ಞಾನಯೋಗ ಮತ್ತು ರಾಜಯೋಗಗಳನ್ನು

ಉಲ್ಲೇಖಿಸುವರಾದರೂ, ಸಾಧನೆಯಲ್ಲಿ ಪ್ರಾಧಾನ್ಯ ನೀಡುವುದು ಭಕ್ತಿಯೋಗ ಮತ್ತು ಭಕ್ತಿಯೊಡಗೂಡಿದ ನಾದಯೋಗಕ್ಕೆ ಮಾತ್ರ. ಅವರ ಪ್ರಕಾರ ಭಕ್ತಿ ಪ್ರಪತ್ತಿಗಳು ರಾಜ ಮಾರ್ಗಗಳು. ಒಂದೆಡೆ ಅವರ ಭಕ್ತಿಯು ಪ್ರಹ್ಲಾದ ಹೇಳುವ ನವವಿಧರೂಪತಾಳಿದರೆ ಮತ್ತೊಂದೆಡೆ ಅದು ಶಾಂತ, ವಾತ್ಸಲ್ಯ, ಶೃಂಗಾರ ಭಾವಗಳ ರೂಪವನ್ನು ತಳೆಯು ತ್ತದೆ. ದೇವರನ್ನು ಸೇರಬೇಕೆಂಬ ತೀವ್ರ ಹಂಬಲ ಹಾಗೂ ವಿರಹಾಗ್ನಿಯ ತುಡಿತಗಳಿಗೆ ಅವರ ರಚನೆಗಳಲ್ಲಿ ಕೊರತೆಯಿಲ್ಲ. ವಾಸ್ತವವಾಗಿ ಬೇರೆಯಾವುದೇ ವಾಗ್ಗೇಯಕಾರನಿ ಗಿಂತಲೂ ತ್ಯಾಗರಾಜರಲ್ಲಿ ಕಾಣಬರುವ ವಿರಹದ ಬೇಗೆ ತೀವ್ರತರವಾದುದು. ಅಂದ ಮಾತ್ರಕ್ಕೆ ಅವರು ತಮ್ಮ ಜೀವಿತಾವಧಿಯನ್ನೆಲ್ಲ ವಿರಹದಲ್ಲೇ ಕಳೆದರೆಂದು ಅರ್ಥ ವಲ್ಲ. ತಮ್ಮ ಭಕ್ತಿಯ ಪರಾಕಾಷ್ಠೆಯಿಂದ ದೈವವನ್ನು ಹಲವು ಬಾರಿ ದರ್ಶಿಸಿ ಧನ್ಯತೆ ಯನ್ನು ಕಂಡುಕೊಂಡು ಕಡೆಗೆ ಜೀವನ್ಮುಕ್ತರಾದವರು. ಇಂತಹ ಮುಕ್ತಿ ಸಾಧನೆಯಲ್ಲಿ ತ್ಯಾಗರಾಜರು ಸತ್ಸಂಗ ಹಾಗೂ ಗುರುಹಿರಿಯರ ಪಾತ್ರವನ್ನು ಮತ್ತೆ ಮತ್ತೆ ಕೊಂಡಾ ಡುತ್ತಾರೆ.

ಭಕ್ತಿ ಸಾಧನೆಗೆ ನೈತಿಕ ಮೌಲ್ಯವು ಮಹತ್ತರವಾದುದೆಂದು ತ್ಯಾಗರಾಜರು ತೋರಿಸಿ ಕೊಟ್ಟಿದ್ದಾರೆ. ಅಹಿಂಸೆ, ಸತ್ಯ, ಅಸ್ತೇಯ (ಕಳ್ಳತನ ಮಾಡದಿರುವುದು) ಬ್ರಹ್ಮಚರ್ಯ ಮತ್ತು ಅಪರಿಗ್ರಹಗಳಿಗೆ ಅವರು ಪ್ರಾಧಾನ್ಯ ನೀಡಿರುವುದಷ್ಟೇ ಅಲ್ಲ, ಮನುಷ್ಯನು ಸ್ವಾರ್ಥಸಾಧನೆ, ಪರನಿಂದೆ, ಚಾಡಿಮಾತು, ನರಸ್ತುತಿ ಹಾಗೂ ಲೋಭಗಳಿಂದ ದೂರ ವಿರಬೇಕೆಂಬುದನ್ನೂ ಸೋದಾಹರಣೆಯ ಮೂಲಕ ತೋರಿಸಿಕೊಟ್ಟಿದ್ದಾರೆ. ಶಂಕರರು ತಮ್ಮ ವಿವೇಕ ಚೂಡಾಮಣಿಯಲ್ಲಿ ನಿರ್ದಿಷ್ಟಗೊಳಿಸಿದ ಸಾಧನಚತುಷ್ಟಯ ಹಾಗೂ ವೈರಾಗ್ಯದ ಉಲ್ಲೇಖಗಳಿಗೆ ಅವರ ರಚನೆಗಳಲ್ಲಿ ಕೊರತೆಯಿಲ್ಲ. ಅಲ್ಲದೆ ಅವರು ತಮ್ಮ ವೈಯುಕ್ತಿಕ, ಅಧ್ಯಾತ್ಮಿಕ ಸುಖದಲ್ಲಷ್ಟೇ ತೃಪ್ತರಾಗಿರಲಿಲ್ಲ. ಅವರಿಗೆ ಸಾಮಾಜಿಕ ಕಳಕಳಿಯೂ ಇದ್ದಿತು. ಲೋಕದ ನೈತಿಕ ಅಧಃಪತನದ ಬಗ್ಗೆ ಅವರಲ್ಲಿ ತೀವ್ರ ವಿಷಾದ ವಿತ್ತು. ತ್ಯಾಗರಾಜರ ರಚನೆಗಳ ಕೇಂದ್ರಬಿಂದು ಭಕ್ತಿಯೇ ಆಗಿದ್ದರೂ ಆನುಷಂಗಿಕ ವಾಗಿ ಅವುಗಳಲ್ಲಿ ಸಾಮಾಜಿಕ ಅಂಶಗಳೂ ಅಧಿಕವಾಗಿಯೇ ಕಾಣಬರುತ್ತದೆ. ಅವರ ರಚನೆಗಳಲ್ಲಿ ಆದರ್ಶ ಕುಟುಂಬದ, ಆದರ್ಶ ಸ್ತ್ರೀಯ, ಆದರ್ಶ ಶಿಕ್ಷಣದ , ಆದರ್ಶ ಯಜಮಾನನ ಹಾಗೂ ಆದರ್ಶ ರಾಜ್ಯಪಾಲಕನ ಉಲ್ಲೇಖಗಳೂ ಕಾಣಬರುತ್ತವೆ. ಇಹ ದಲ್ಲಿದ್ದೇ ಪರವನ್ನು ಸಾಧಿಸಬಹುದೆಂಬ ಭರವಸೆಯು ಅವರ ರಚನೆಗಳಲ್ಲಿವೆ. ಅವರ ಕಾಲದಲ್ಲಿ ಕನ್ಯಾಶುಲ್ಕ ಪದ್ಧತಿ ಇದ್ದಿತೆಂಬುದಕ್ಕೆ ಒಂದೆರಡು ಆಧಾರಗಳು ಕಾಣಬರು ತ್ತವೆ. ಅಲಂಕರಣ ವಸ್ತುಗಳ, ವಿನೋದದ ಆಟಗಳ ಪ್ರಸ್ತಾಪವೂ ಅವುಗಳಲ್ಲಿವೆ. ಕ್ಷುದ್ರದೇವತಾ ಪೂಜೆ, ಸ್ವರ್ಗಸುಖಕ್ಕಾಗಿ ಯಜ್ಞಾದಿ ಕಾರ್ಯಗಳಲ್ಲಿ ತೊಡಗುವುದರ ಖಂಡನೆ ಅದರಲ್ಲಿದೆ. ತ್ಯಾಗರಾಜರ ಪ್ರಕಾರ ಮನುಷ್ಯನ ಗುರಿ ನೈತಿಕವಾಗಿ ಪರಿಪೂರ್ಣ ನಾಗಿ ಭಕ್ತಿಯ ಮೂಲಕ ನಿರಂತರ ಬ್ರಹ್ಮಾನಂದ ಹೊಂದುವುದಲ್ಲದೆ ಸ್ವರ್ಗಸುಖ ವಷ್ಟೇ ಅಲ್ಲ.

ತ್ಯಾಗರಾಜರು ತಮ್ಮ ತಾತ್ವಿಕ ನಿಲುವಿಗೆ ಉಪನಿಷತ್ತುಗಳಲ್ಲದೆ ಆಗಮ ಹಾಗೂ ಪುರಾಣ ನಿದರ್ಶನಗಳನ್ನೂ ಅವಲಂಬಿಸುತ್ತಾರೆ. ಅವರ ಪ್ರಕಾರ ದೇವರು ಆಗಮ ನಿಗಮ ಸಂಚಾರಿ. ರಾಮಾಯಣದ ವಿಷಯದಲ್ಲಿ ಹೇಳಬೇಕೆಂದರೆ ಅವರು ವಾಲ್ಮೀಕಿ ರಾಮಾಯಣವನ್ನಷ್ಟೇ ಅಲ್ಲ, ಅಧ್ಯಾತ್ಮ, ಆನಂದ, ಅದ್ಭುತ ಇತ್ಯಾದಿ ವಿವಿಧ ರಾಮಾಯಣಗಳ ಪ್ರಸಂಗಗಳನ್ನೂ ಅಳವಡಿಸಿರುವುದುಂಟು. ವಾಸ್ತವವಾಗಿ ಶ್ರೀರಾಮನೇ ಅವರ ಕೃತಿಗಳ ಕೇಂದ್ರಬಿಂದುವಾದರೂ ಇತರ ದೇವತೆಗಳಲ್ಲೂ ಕೆಲವೊಮ್ಮೆ ಶ್ರೀ ರಾಮನನ್ನೇ ಕಂಡಿದ್ದಾರೆ. ಮತ್ತೆ ಕೆಲವೊಮ್ಮೆ ಇತರ ದೇವತೆಗಳೆಲ್ಲಕ್ಕಿಂತ ಅವರ ಶ್ರೀರಾಮನು ಅತ್ಯುತ್ಕೃಷ್ಟನಾಗಿದ್ದಾನೆ. ಅಲ್ಲದೆ ಅವರು ದೇವತೆಗಳ ನಡುವೆ ವಿವಿಧ ರೀತಿಯ ಸಂಬಂಧಗಳನ್ನು ಕಲ್ಪಿಸುತ್ತಾರೆ. ತ್ಯಾಗರಾಜರ ರಚನೆಗಳಲ್ಲಿ ಮಹಾಭಾರತದ ಕೆಲವು ಪ್ರಸಂಗಗಳ ಮತ್ತು ಗೀತಾವಾಕ್ಯಗಳ ಉಲ್ಲೇಖಕ್ಕೂ ಕೊರತೆಯಿಲ್ಲ. ಹೀಗೆ ತ್ಯಾಗರಾಜರು ಪೌರಾಣಿಕ ಪ್ರಸಂಗಗಳನ್ನು ರಚನೆಗಳಲ್ಲಿ ಅಳವಡಿಸಲು ಕಾರಣ ಅವು ಮನುಷ್ಯನ ಜೀವನಕ್ಕೆ ಮಾರ್ಗಸೂಚಿಯಾಗಿವೆ ಎಂಬುದು.

ಹೀಗೆ ತ್ಯಾಗರಾಜರು, ವಚನಕಾರರು ಮತ್ತು ಹರಿದಾಸರಂತೆ ಅನುಭಾವದ ಲೋಕಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದವರು. ನಾದಲೋಕದಲ್ಲಿ ಒಂದು ರೀತಿಯ ಕ್ರಾಂತಿಕಾರಿ ಬದಲಾವಣೆಯನ್ನು ತಂದವರು. ತಮ್ಮ ಮುಂದಿನ ಪೀಳಿಗೆಯನ್ನು ಪ್ರಭಾವಿಸಿದವರು, ತಮ್ಮದೇ ಆದ ಛಾಪನ್ನು ಒತ್ತಿ ಅಮರಸ್ಥಾನ ಪಡೆದವರು. ಅಂತೆಯೇ ಭಕ್ತಿಸಾಧನೆಯನ್ನು ಸ್ವತಃ ತೋರಿ ಇತರರಿಗೂ ಮಾರ್ಗದರ್ಶಕರಾದವರು. ಅವರ ನುಡಿಮುತ್ತುಗಳು ಸಾರ್ವಕಾಲಿಕ ಮೌಲ್ಯವುಳ್ಳದ್ದಾಗಿವೆ, ಅವುಗಳನ್ನು ಸರ್ವರೂ ಅಂಗೀಕರಿಸಬಹುದಾಗಿವೆ.

ಹೀಗಾಗಿ ತ್ಯಾಗರಾಜರೊಬ್ಬ ಯೋಗಿ ಮಹೋನ್ನತರು, ಅದ್ಭುತ ಅನುಭಾವಿಗಳು, ಅಪ್ರತಿಮ ನಾದಯೋಗಿಗಳು, ಕ್ರಾಂತದರ್ಶಿಗಳು, ದೇಶಪ್ರೇಮಿಗಳು ಹಾಗೂ ಸಮಾಜ ಸುಧಾರಕರು. ತಮ್ಮ ದೀರ್ಘ ಬದುಕಿನಲ್ಲಿ ಅವರು ಮಾಡಿದ ಸಾಧನೆಗಳು ಸಾಧಾರಣ ಮನುಷ್ಯನ ಕಲ್ಪನೆಗೆ ಮೀರಿದುದು. ಆದ್ದರಿಂದ ಇಷ್ಟೆಲ್ಲ ಅಧ್ಯಯನವಾದ ನಂತರ **'ತ್ಯಾಗರಾಜರನ್ನು ಸಮಗ್ರವಾಗಿ ಅಧ್ಯಯನ ಮಾಡಲಾಯಿತೇ' ಎಂದು ಪ್ರಶ್ನಿಸಿದರೆ, ಅದಕ್ಕೆ 'ಇಲ್ಲ' ಎಂಬುದೇ ಉತ್ತರ.** ಏಕೆಂದರೆ ಬಹುಮುಖ ಪ್ರತಿಭೆಯ ಅವರ ಅಧ್ಯಯನ ಮಾಡುತ್ತಾ ಹೋದಂತೆಲ್ಲಾ ಅವರು ಹೊಸ ಹೊಸ ಆಯಾಮಗಳನ್ನು ಹೊರಹೊಮ್ಮಿಸುತ್ತಲೇ ಬರುತ್ತಾರೆ. ಅದು ತಾತ್ವಿಕವಿರಬಹುದು, ಸಾಮಾಜಿಕವಿರಬಹುದು, ನೈತಿಕವಿರಬಹುದು, ಅಧ್ಯಾತ್ಮಿಕವಿರಬಹುದು ಅಥವಾ ಕಲಾತ್ಮಕವಿರಬಹುದು. ಹೀಗಾಗಿ ಅವರ ಅಧ್ಯಯನವು ಎಂದೆಂದಿಗೂ ಅಪೂರ್ಣವೇ ಆಗಿ ಸಂಶೋಧನೆಗೆ ಅವರೊಂದು ಚಿರಂತನ ವಸ್ತುವಾಗುತ್ತಾರೆ. **ಅವರನ್ನು ಪೂರ್ಣವಾಗಿ ಅರಿತುಕೊಳ್ಳಬೇಕಾದರೆ ಮತ್ತೊಬ್ಬ ತ್ಯಾಗರಾಜರೇ ಹುಟ್ಟಿಬರಬೇಕು.** ಆದರೂ

ಯಾವುದೇ ಅಧ್ಯಯನವೂ ಒಂದು ಹಂತದಲ್ಲಿ ಮುಗಿಯಲೇಬೇಕಲ್ಲವೇ ? ಆ ನಿಟ್ಟಿನಿಂದ '**ತ್ಯಾಗರಾಜರ ಕೃತಿಗಳಲ್ಲಿ ಸಂಗೀತ ಮತ್ತು ಭಕ್ತಿ**' ಎಂಬ ಈ ಮಹಾಪ್ರಬಂಧವನ್ನು ಅವರದೇ ಆದ ಕೆಳಗಿನ ಸಾಲುಗಳೊಂದಿಗೆ ಪೂರ್ಣಗೊಳಿಸಲಾಗಿದೆ.

**ಮೋಕ್ಷಮುಗಲದಾ ಭುವಿಲೋ ಜೀವನ್ಮುಕ್ತುಲುಗಾನಿ ವಾರಲಕು**
**ಸಾಕ್ಷಾತ್ಕಾರ ನೀ ಸದ್ಭಕ್ತಿ ಸಂಗೀತಜ್ಞಾನ ವಿಹೀನುಲಕು**
**ಮೋಕ್ಷಮುಗಲದಾ ?**

# ಸಹಾಯಕ ಸಾಹಿತ್ಯ


**ತೆಲುಗು :**

೧ ಆಚಾರ್ಯಮೋರಿ ನಾಗಭೂಷಣಂ (ಸಂ.), ಸುಬ್ಬರಾಮ ದೀಕ್ಷಿತರು ಸಂಗೀತ ಸಂಪ್ರದಾಯ ಪ್ರದರ್ಶಿನಿ, ಆಂಧ್ರ ಪ್ರದೇಶ ನಾಟಕ ಅಕಾಡೆಮಿ, ೧೯೭೩.

೨ ಯಸ್. ಆರ್. ಜಾನಕಿರಾಮನ್, ಸಂಗೀತಶಾಸ್ತ್ರಸಾರಮು, ರೆಂಡವ ಭಾಗಮು, ತೆಲುಗು ವಿಶ್ವವಿದ್ಯಾನಿಲಯ ಆರ್ಥಿಕ ಸಹಾಯಮುತೋ ಮುದ್ರಿತಂ, ೧೯೮೯.

೩ ಎನ್. ಸಿ. ಪಾರ್ಥಸಾರಥಿ, ದ್ವಾರಕಾ ಪಾರ್ಥಸಾರಥಿ, ತ್ಯಾಗರಾಜ ಕೀರ್ತನಲು Part I, ಬಾಲಸರಸ್ವತಿ ಬುಕ್ ಡಿಪೋ, ಮದ್ರಾಸು, ೧೯೮೦.

೪ ಮಂಚಾಳ ಜಗನ್ನಾಥರಾವು, (ಸಂ), ರಾಮದಾಸು ಕೀರ್ತನಲು, ಆಂಧ್ರ ಪ್ರದೇಶ, ಸಂಗೀತ ನಾಟಕ ಅಕಾಡಮಿ, ೧೯೭೫.

೫ ರಾಮಾನುಜಯ್ಯರವರಿಂದ ಪರಿಶೋಧಿತವಾದ ಶ್ರೀಮದಾಂಧ್ರ ಮಹಾ ಭಾಗವತಮು, ಎ. ಕಣ್ಣನ್ ಸೆಟ್ಟಿ ಅಂಡ್ ಕಂಪನಿ, ೧೯೨೮.

೬ ಶ್ರೀ ವೋಲೇಟಿ ವೆಂಕಟೇಶ್ವರ್ಲು (ಸ್ವರಕಲ್ಪನ), ತ್ಯಾಗರಾಜ ದಿವ್ಯನಾಮ ಸಂಕೀರ್ತನಲು, ಉತ್ಸವ ಸಂಪ್ರದಾಯಕೀರ್ತನಲು, ಆಂಧ್ರ ಪ್ರದೇಶ್ ಸಂಗೀತನಾಟಕ ಅಕಾಡೆಮಿ, ೧೯೭೯.

೭ ಡಾ. ಎಸ್. ಶಮಂತಕಮಣಿ, ತ್ಯಾಗರಾಜುಕವಿತ್ವಮು ವಿಮರ್ಶನಾತ್ಮಕ ಪರಿಶೀಲನಮು,೧೯೮೮.

೮ ಕೆ.ವಿ. ಶ್ರೀನಿವಾಸ ಅಯ್ಯಂಗಾರ್, ಶ್ರೀ ತ್ಯಾಗರಾಜಸ್ವಾಮಿ ಕೀರ್ತನಲು.

೯ ಕೆ. ಶ್ರೀನಿವಾಸಯ್ಯಂಗಾರ್, ಗಾನಭಾಸ್ಕರಮು, ಎಂ. ಆದಿ ಅಂಡ್ ಕಂಪನಿ, ೧೯೩೪.

೧೦ Prof. P. Sambamoorthy, *Tyagaraja's Prahlada Bhaktivijayam and Nowkacharitam*, 1965.

**ಕನ್ನಡ :**

೧೧ ಡಾ. ಅಕ್ಕಮಹಾದೇವಿ, ಪುರಂದರದಾಸರ ಮತ್ತು ಅನ್ನಮಾಚಾರ್ಯರ ಕೀರ್ತನೆಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೯, ತಿರುಮಲ ತಿರುಪತಿ ದೇವಸ್ಥಾನದವರ ಧನ ಸಹಾಯ ದಿಂದ ಪ್ರಕಟಣೆ.

೧೨ ಎದುರ್ಕಳ ಕೆ. ಶಂಕರನಾರಾಯಣ ಭಟ್, ಹಿಂದೂಧರ್ಮದ ಪರಿಚಯ, ಶ್ರೀರಾಮಕೃಷ್ಣ ಪ್ರಕಾಶನ, ಕೊಡಗು, ೧೯೬೮

೧೩ ಎಸ್. ಪ್ಸಿ. ಕಲ್ಮಠ, ಬಸವಣ್ಣನವರ ವಚನಗಳು, ಬಿ. ಜಿ. ಸಂಕೇಶ್ವರ ಪಬ್ಲಿಷರ್, ಗದಗ, ೧೯೬೫.

೧೪ ಶ್ರೀ ಹುಲಗೂರು ಕೃಷ್ಣಾಚಾರ್ಯರು, ಕರ್ನಾಟಕ ಸಂಗೀತವೂ ದಾಸ ಕೂಟವೂ ಅರ್ಥಾತ್ ಭಾರತೀಯ ಆರ್ಯ ಸಂಗೀತದ ಇತಿಹಾಸವು, ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ, ೧೯೫೧.

೧೫ ಎಸ್. ಕೃಷ್ಣಮೂರ್ತಿ, ಸಂಗೀತ ಸರಿತಾ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೭

೧೬ ಅನುವಾದ, ಎಲ್. ಗುಂಡಪ್ಪ, ಪೆರಿಯ ಪುರಾಣ, ಬೆಂಗಳೂರು ವಿಶ್ವವಿದ್ಯಾ ಲಯ, ಬೆಂಗಳೂರು, ೧೯೭೪.

೧೭ ಡಾ. ದೇ.ಜವರೇಗೌಡ (ಸಂ), ಕನಕಸಾಹಿತ್ಯ ದರ್ಶನ, ಸಂಪುಟ ೧, ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೦.

೧೮ ಎಸ್. ಜಿ. ನರಸಿಂಹಯ್ಯ, ಸಂಖ್ಯೆಗಳಿಂದ ಸ್ಫೂರ್ತಿ, ಸ್ಟ್ಯಾಂಡರ್ಡ್ ಬುಕ್ ಡಿಪೊ, ಅವಿನ್ಯೂ ರೋಡ್, ಬೆಂಗಳೂರು, ೧೯೮೩.

೧೯ ಟಿ. ಎನ್. ನಾಗರತ್ನ, ಹರಿದಾಸರ ಭಕ್ತಿಸ್ವರೂಪ, ಪ್ರಸಾರಾಂಗ, ಮೈ. ವಿ. ವಿ. ನಿಲಯ, ಮೈಸೂರು, ೧೯೮೬.

೨೦ ಡಾ. ಎಲ್. ಬಸವರಾಜು, (ಸಂ.) ಅಕ್ಕನ ವಚನಗಳು, ಗೀತಾ ಬುಕ್ ಹೌಸ್, ಮೈಸೂರು, ೧೯೭೨.

೨೦ಎ ಎನ್. ಎಸ್. ಮೂರ್ತಿ, ಶ್ರೀ ತ್ಯಾಗರಾಜಸ್ವಾಮಿ ಕೃತಿಗಳ ಹಲವು ಮುಖ ಗಳು, ತಿ. ತಿ. ದೇವಸ್ಥಾನಗಳು, ತಿರುಪತಿ.

೨೧ ಬೆನಗಲ್ ರಾಮರಾವ್, ಪಾನ್ಯಂ ಸುಂದರ ಶಾಸ್ತ್ರಿ, ಪುರಾಣನಾಮ ಚೂಡಾ ಮಣಿ, ಪ್ರಧಾನ ಸಂಪಾದಕ, ಬಿ. ಎಂ. ಶ್ರೀಕಂಠಯ್ಯ, ಮೈಸೂರು ವಿಶ್ವವಿದ್ಯಾ ನಿಲಯ, ಮೈಸೂರು, ೧೯೫೯.

೨೨ ಯಜ್ಞನಾರಾಯಣ ಉಡುಪ, ಪುರಾಣಭಾರತ ಕೋಶ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೪.

೨೩ ಪ್ರೊ. ಎಸ್. ಕೆ. ರಾಮಚಂದ್ರರಾವ್, ತಿರುಪತಿ ತಿಮ್ಮಪ್ಪ, ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೮೦.

೨೪ ಎಸ್. ಕೆ. ರಾಮಚಂದ್ರರಾವ್, ಮೂರ್ತಿಶಿಲ್ಪ ನೆಲೆ-ಹಿನ್ನಲೆ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು, ೧೯೭೫.

೨೫ ಸಾ. ಕೃ. ರಾಮಚಂದ್ರರಾವ್ (ಸಂ), ಪುರಂದರ ಸಾಹಿತ್ಯದರ್ಶನ, ಸಂಪುಟ

೧-೪. , ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫.

೨೬ ವಿದ್ವಾನ್ ಎನ್. ರಂಗನಾಥಶರ್ಮ, ಶ್ರೀಮದ್ ವಾಲ್ಮೀಕಿ ರಾಮಾಯಣಂ, ಆರು ಕಾಂಡಗಳು, ರಾಮಾಯಣ ಪ್ರಕಾಶನ ಸಮಿತಿ, ಬೆಂಗಳೂರು.

೨೭ ವಿ. ರಾಮರತ್ನಂ ಮತ್ತು ಆರ್. ಎನ್. ದೊರೆಸ್ವಾಮಿ, ಶ್ರೀ ತ್ಯಾಗರಾಜರ ನೌಕಾಚರಿತ್ರೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೧೯೬೯.

೨೮ ರಾಳ್ಳಪಲ್ಲಿ ಅನಂತಕೃಷ್ಣಶರ್ಮಾ, ಗಾನಕಲೆ, ಕಾವ್ಯಾಲಯ, ಮೈಸೂರು, ೧೯೭೩.

೨೯ ಜಿ. ಪಿ. ರಾಜರತ್ನಂ, (ಸಂ), ಶ್ರಿ ಕುಲಶೇಖರ ಆಳ್ವಾರ್, ಮುಕುಂದಮಾಲಾ, ವಿದೇಹ, ಮಲ್ಲೇಶ್ವರಂ, ಬೆಂಗಳೂರು, ೧೯೬೭.

೩೦ ಎಚ್. ಎನ್. ಲಕ್ಷ್ಮೀನರಸಿಂಹಮೂರ್ತಿ, ಅಧ್ಯಾತ್ಮ ರಾಮಾಯಣ, ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೇನರಸೀಪುರ, ೧೯೮೪.

೩೧ ಟಿ. ಕೆ. ವೇಣುಗೋಪಾಲದಾಸರು, ಶ್ರೀ ಪುರಂದರದಾಸರು, ಗುರುರಾಜ ಪ್ರಕಾಶನ, ಬೆಂಗಳೂರು,೧೯೮೫.

೩೨ ಡಾ. ಜಿ. ಶ್ರೀನಿವಾಸನ್, ಸೌಂದರ್ಯ ಮೀಮಾಂಸೆ, ಡಿ. ವಿ. ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು, ೧೯೭೩.

೩೩ ಎಂ. ಆರ್. ಶ್ರೀನಿವಾಸಮೂರ್ತಿ, ವಚನಧರ್ಮಸಾರ, ಮೈಸೂರು ವಿಶ್ವ ವಿದ್ಯಾನಿಲಯ, ಮೈಸೂರು, ೧೯೫೬.

೩೪ ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರು, ಶ್ರೀ ವಿಷ್ಣು ಸಹಸ್ರನಾಮ ಸ್ತೋತ್ರಮ್ (ಶ್ರೀ ಶಾಂಕರ ಭಾಷ್ಯ ಸಮೇತ), ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೇನರಸೀಪುರ, ೧೯೭೪.

೩೫ ಪ್ರೊ. ಡಾ. ರಾ. ಸತ್ಯನಾರಾಯಣ, ಕರ್ನಾಟಕದ ಕಲೆಗಳು, ಸಂಪುಟ ಎರಡು, ಸಂಗೀತ (ಭಾಗ ೧) (ಸಂ) ವಿದ್ಯಾಲಂಕಾರ, ಪ್ರೊ. ಎಸ್. ಕೆ. ರಾಮಚಂದ್ರ ರಾವ್, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೩.

೩೬ ಡಾ. ರಾ. ಸತ್ಯನಾರಾಯಣ, ಕರ್ನಾಟಕ ಸಂಗೀತವಾಹಿನಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೧೯೮೦.

೩೭ ಸುಭೋಧ ಎಂ. ರಾಮರಾವ್ (ಸಂ), ಶ್ರೀ ಕರ್ನಾಟಕ ಹರಿದಾಸ ಕೀರ್ತನ ತರಂಗಿಣಿ, ಸುಬೋಧ ಪ್ರಕಟಣಾಲಯ, ಬೆಂಗಳೂರು, ೧೯೬೪.

೩೮ ಸೋಮನಾಥಾನಂದ, ನಾರದಭಕ್ತಿಸೂತ್ರ, ಶ್ರೀರಾಮಕೃಷ್ಣ ಆಶ್ರಮ, ಮೈಸೂರು, ೧೯೮೪.

೩೯ ವಿ. ಸೀತಾರಾಮಯ್ಯ, (ಅನು) ಪಿ. ಸಾಂಬಮೂರ್ತಿ, ತ್ಯಾಗರಾಜ, ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯ, ೧೯೯೦.

೪೦ ಡಾ. ವಿ. ಎಸ್. ಸಂಪತ್ಕುಮಾರಾಚಾರ್ಯ, ಶ್ರೀ ತ್ಯಾಗರಾಜ ಕೃತಿಮಂಜರಿ ಸಂ.

೧ ಮತ್ತು ೨, ಗೀತಾ ಬುಕ್ ಹೌಸ್, ಮೈಸೂರು, ೧೯೯೨-೯೩.

೪೧ ಡಾ. ವಿ. ಎಸ್. ಸಂಪತ್ಕುಮಾರಾಚಾರ್ಯ, ಸದ್ಗುರು ತ್ಯಾಗರಾಜರು, ಗೀತಾ ಬುಕ್ ಹೌಸ್, ಮೈಸೂರು, ೧೯೮೭.

೪೨ ಸ್ವಾಮಿ ನಿರ್ವೇದಾನಂದ, ಮಿಂಚುನೋಟಕೆ ಹಿಂದೂಧರ್ಮ (ಅನು) ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು, ೧೯೭೨.

೪೩ ಸ್ವಾಮಿ ಆದಿದೇವಾನಂದ (ಅನು), ಬೃಹದಾರಣ್ಯಕೋಪನಿಷತ್, ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು, ೧೯೫೯.

೪೪ ಸ್ವಾಮಿ ಆದಿದೇವಾನಂದ (ಅನು), ವಿವೇಕಚೂಡಾಮಣಿ, ಶ್ರೀರಾಮಕೃಷ್ಣ ಆಶ್ರಮ, ಮೈಸೂರು,೧೯೬೬.

೪೫ ಸ್ವಾಮಿ ವಿವೇಕಾನಂದ, ರಾಜಯೋಗ, ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು ೧೯೫೫.

೪೬ ಸ್ವಾಮಿ ಆದಿದೇವಾನಂದ, (ಅನು) ಛಾಂದೋಗ್ಯೋಪನಿಷತ್, ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು, ೧೯೬೧.

**English :**

೪೭ Alladi Mahadeva Sastry Tr, *The Bhagavad Gita, with the Commentary of Sri Shankaracharya*, Samata Books, Madras 1981.

೪೮ N. S. Anantarangachar, *The Philosophy of Sadhana in Visistadwaita*, 1967.

೪೯ Dr. S. Bhagyalakshmi, *Lakshnagrandhas in music*, C.B.H Publications, 1991.

೫೦ Dr. S. R. Bhat, *The Philosophy of Pancharatra*, Ganesh & Co., Madras - 1968.

೫೧ Bosanquet Bernard, *A History of Aesthetic*, George Allen and Anwin Ltd., London 1956.

೫೨ Dr. H.L. Chandrasekhara, *Sri Annamacharya - A Philosophical study*, Vidyashankara prakashana, Mysore - 1990.

೫೩ J. H. Dave, *Immortal India*, Bharatiya Vidya Bhavan, Bombay 1970

೫೪ Dr. S. A. K. Durga, *The Opera in South India*, B. R. Publishing Corporation, Delhi, 1979.

೫೫ Editors. M. Hariharan, Gowri Kuppuswamy, *An Anthology of*

*Indian Music*, Sundeep prakashan, Delhi - 1989.

೫೬ M. Hiriyanna, *Essentials of Indian Phylosophy*, George allen and Unwin Ltd., London, 1949.

೫೭ J. S. M. Hooper, *Hymns of the Alvars*, The Heritage of India Series, 1929.

೫೮ William J. Jackson, *Tyagaraja and The renewal of Tradition* Translations and reflections, Motilal Banarasidas Publishers Delhi 1994.

೫೯ Jnanananda Bharati, Tr. *Panchadashi of Sri Vidyaranya.*

೬೦ S. Y. Krishnaswamy, *Thyagaraja Saint and Singer*, Orient Longmans, New Delhi, 1968.

೬೧ Pandharinath H. Prabhu, *Hindu Social Organization,* Popular Prakashan, Bombay 1961.

೬೨ K. C. Pandey, *Comparative Aesthetics,* Chowkhamba Sanskrit series, Varanasi 1959 Vol I, Vol II 1956.

೬೩ V. Raghavan, *Tyagaraja,* Sahitya Akademi, 1989.

೬೪ Prof. S. S. Raghavachar, *Sri Ramanuja on the Geeta*, Sri Ramakrishna Ashrama, Mangalore - 1969.

೬೫ C. Ramanujachari (Tr) and Dr.V.Raghavan (Introductory Thesis) *The Spiritual Heritage of Tyagaraja*, Sri Ramakrishna Math, Madras, 1966.

೬೬ R. D. Randade, *Pathway to God in Kannada literature,* Karnataka University, Dharwar and Bharatiya Vidya Bhavan Bombay 1960.

೬೭ M. S. Ramaswamy Aiyar, *Thiagaraja A Great Musician Saint,* Asian Educational Services, New Delhi 1986.

೬೮ Prof. P. Sambamurthy, *Tyagaraja*, NBT India New Delhi, 1967.

೬೯ P. Sambhamoorthy, *Great Composers II. Tyagaraja*, 1970.

೭೦ Dr. S. Seetha, Tanjore as a seat of music, University of Madras 1981.

೭೧ *Sayings of Sri Ramakrishna*, Sri Ramakrishna Math, Madras - 1971.

೭೨ Swami Gambhirananda, Tr, *Eight upanishads* Vol I & II with the commentary of Sri shankaracharya, V Edition (no year) - same

book Vol II, VII edition, Jan 1989.

೭೩ Swami Prabhavananda, *Narada's Way of Divine Love*, Sri Ramakrishna Math, Madras 1972.

೭೪ Swamy Vireshwarananda, *Brahmasutra Bhashya*, Advaitashrama, Mayavati, Almora, Himalaya.

೭೫ T. V. Subba Rao, *Studies in Indian Music*, Asia Publishing House, Delhi - 1962.

**Miscellaneous :**

೭೬ N. S. Anantharangacharya, *Sharanagati Gadyam*, ಸುದರ್ಶನಸೂರಿ ವ್ಯಾಖ್ಯಾನ ಸಹಿತ, Bangalore, 1879.

೭೭ Discussions of the Twentyfive Conferences of the Experts Committee of the Music Academy, Madras.

೭೮ S. Lakshminarasimha Sastry, *A Glimpse into the heart of Sadguru Tyagaraja Swamy*, Kalluri Ramamurthy Sastrulu, Guntur.

೭೯ Thyagaraja Bi-centenary Volume, The Journal of the Music Academy, 1968.



ಡಾ || ತುಮಕೂರು ನರಸಿಂಹಶಾಸ್ತ್ರಿ ಪದ್ಮ—ಮೈಸೂರಿನಲ್ಲಿ ಜನನ (೧೯೪೯). ಮೈಸೂರು ವಿಶ್ವವಿದ್ಯಾನಿಲಯದ ಸಂಗೀತ ಮತ್ತು ನೃತ್ಯ ಕಾಲೇಜಿನಲ್ಲಿ (ಇಂದಿನ ಲಲಿತಕಲೆಗಳ ಮಹಿಳಾ ಕಾಲೇಜು) ಪ್ರಖ್ಯಾತ ಸಂಗೀತ ವಿದ್ವಾಂಸರಾದ ಪ್ರೊ. ವಿ. ರಾಮರತ್ನಂ ನೇತೃತ್ವದಲ್ಲಿ ಸಂಗೀತ ಅಭ್ಯಾಸ. ಪ್ರಥಮದರ್ಜೆ ಪ್ರಥಮಶ್ರೇಣಿ ಬಿ.ಮ್ಯೂಸಿಕ್ ಪದವಿ (೧೯೭೦). ರ್‍ಯಾಂಕ್ ಪಡೆದಿದ್ದಕ್ಕಾಗಿ ರಾಜ್ಯ ಸರ್ಕಾರ ಪ್ರಶಸ್ತಿ. ಎಂ.ಮ್ಯೂಸಿಕ್ ಸ್ನಾತಕೋತ್ತರ ಪದವಿ ಪರೀಕ್ಷೆಯಲ್ಲಿ ಪ್ರಥಮದರ್ಜೆ ಪ್ರಥಮಶ್ರೇಣಿ—ವಿಶ್ವವಿದ್ಯಾನಿಲಯದ ಚಿನ್ನದ ಪದಕ (೧೯೭೧). ಕರ್ನಾಟಕ ಶಾಸ್ತ್ರೀಯ ಸಂಗೀತ ಸೀನಿಯರ್ ಪರೀಕ್ಷೆಯಲ್ಲಿ ತೃತೀಯ ರ್‍ಯಾಂಕ್ (೧೯೭೩) ಮೈಸೂರು ವಿಶ್ವವಿದ್ಯಾನಿಲಯ ಬಿ.ಎಡ್ ಪದವಿ (೧೯೭೪) ಪ್ರೊ. ಬಿ. ಎಸ್. ವಿಜಯರಾಘವನ್ ಅವರ ಮಾರ್ಗದರ್ಶನದಲ್ಲಿ 'ಶ್ರೀ ತ್ಯಾಗರಾಜರ ಕೃತಿಗಳಲ್ಲಿ ಸಂಗೀತ ಮತ್ತು ಭಕ್ತಿ—ಒಂದು ಅಧ್ಯಯನ' ಮಹಾಪ್ರಬಂಧಕ್ಕೆ ಮೈಸೂರು ವಿಶ್ವವಿದ್ಯಾನಿಲಯದ ಪಿಎಚ್.ಡಿ. ಪದವಿ (೧೯೯೬) ಮೈಸೂರು ವಿಶ್ವವಿದ್ಯಾನಿಲಯ ಲಲಿತಕಲೆಗಳ ಮಹಿಳಾ ಕಾಲೇಜಿನಲ್ಲಿ ಇಪ್ಪತ್ತನಾಲ್ಕು ವರ್ಷಗಳ ಸತತ ಬೋಧನಾನುಭವ. ಮೈಸೂರು ಆಕಾಶವಾಣಿ ಕಲಾವಿದರು ಆಗಿರುವ ಡಾ || ಟಿ. ಎನ್. ಪದ್ಮ ಅವರು ಮೈಸೂರು ಮತ್ತು ಬೆಂಗಳೂರಿನ ಪ್ರಮುಖ ಸಾರ್ವಜನಿಕ ಸಂಘಸಂಸ್ಥೆಗಳಲ್ಲಿ ಅನೇಕ ಪ್ರಾತ್ಯಕ್ಷಿಕೆ, ಗಾಯನ, ಉಪನ್ಯಾಸಗಳನ್ನು ನೀಡಿದ್ದಾರೆ. ಸಂಗೀತದ ವಿಷಯಗಳಿಗೆ ಸಂಬಂದಿಸಿದಂತೆ ಹಲವಾರು ಲೇಖನಗಳನ್ನು ಬರೆದಿದ್ದಾರೆ.

> ಕನ್ನಡದಲ್ಲಿ ತ್ಯಾಗರಾಜರ ಜೀವನ, ಕಲೆ, ಸಾಧನೆಗಳ ಬಗೆಗೆ ಇಷ್ಟು ವಿಸ್ತಾರವಾದ ಅಧ್ಯಯನ ಇದುವರೆಗೆ ಆಗಿಲ್ಲವೆಂದರೆ ಅತಿಶಯೋಕ್ತಿಯೆನಿಸಲಾರದು.
>
> ಬಿ. ಪಿ. ಕೆ. ಶಾಸ್ತ್ರಿ

ಸುವಿದ್ಯಾ ಪ್ರಕಾಶನ : : ಬೆಂಗಳೂರು ೫೬೦ ೦೧೯